# RIG-VEDA SAMHITA

# ಋಗ್ವೇದಸಂಹಿತಾ

ಭಾಗ—೬

ಪ್ರಥಮಾಷ್ಟಕದಲ್ಲಿ ೫ನೇ ಅಧ್ಯಾಯವು

ಅನುವಾದಕ:

ಆಸ್ಥಾನ ಮಹಾವಿದ್ವಾನ್

ಹೆಚ್. ಪಿ. ವೆಂಕಟರಾವ್.

ಶ್ರೀ ಶಾರದಾ ಪ್ರೆಸ್,

ಮೈಸೂರು.



ಋಗ್ವೇದಸಂಹಿತಾ
ಭಾಗ—೫
ಪ್ರಥಮಾಷ್ಟಕದಲ್ಲಿ ಐದನೆಯ ಅಧ್ಯಾಯವು
ಪ್ರಥಮ ಮಂಡಲದ ಸೂಕ್ತಗಳು ೬೨—೮೦

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ ೬

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದಸಂಹಿತಾ

(ಕರ್ನಾಟಕಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ ೬

ಪ್ರಥಮಾಷ್ಟಕದಲ್ಲಿ ಐದನೆಯ ಅಧ್ಯಾಯವು.

ಪ್ರಥಮ ಮಂಡಲದ ಸೂಕ್ತಗಳು ೬೨ ೮೦



*Translated with Exhaustive Critical Notes*
*by*

**Asthana Mahavidwan**

**H. P. VENKATA RAO**

*Editor*



*Printed at*

SREE SHARADA PRESS

MYSORE

1949

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,**
**ಜಿ ಸಿ.ಬಿ , ಜಿ.ಸಿ.ಎಸ್.ಐ. ರವರು.**

## ಸಂಕೇತಾಕ್ಷರಗಳ ವಿವರಣೆಯು

ಅಥ. ಸಂ —ಅಥರ್ವವೇದಸಂಹಿತಾ
ಆಪ. ಸೂ.-- ಆಪಸ್ತಂಬಶ್ರೌತಸೂತ್ರ
ಆಪ ಧ ಸೂ --ಆಪಸ್ತಂಬಧರ್ಮಸೂತ್ರ
ಆಪ. ಪ ಸೂ—ಆಪಸ್ತಂಬಪರಿಭಾಷಾಸೂತ್ರ
ಆ ಸೂ. ಅಥವಾ ಆ.—ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ ಸಂ.—ಋಗ್ವೇದಸಂಹಿತಾ
ಐ ಆ —ಐತರೇಯಾರಣ್ಯಕ
ಐ. ಉ —ಐತರೇಯೋಪನಿಷತ್
ಐ ಬ್ರಾ.—ಐತರೇಯಬ್ರಾಹ್ಮಣ
ಛಾ ಉ.—ಛಾಂದೋಗ್ಯೋಪನಿಷತ್
ಜೈ ಸೂ —ಜೈಮಿನೀಯ ಪೂರ್ವಮೀಮಾಂಸಾಸೂತ್ರ
ಜೈ ನ್ಯಾ ವಿ —ಜೈಮಿನಿಯ ನ್ಯಾಯಮಾಲಾವಿಸ್ತರ
ತಾ ಬ್ರಾ —ತಾಂಡ್ಯಮಹಾಬ್ರಾಹ್ಮಣ
ತೈ. ಆ —ತೈತ್ತಿರೀಯ ಆರಣ್ಯಕ
ತೈ ಬ್ರಾ —ತೈತ್ತಿರೀಯಬ್ರಾಹ್ಮಣ
ತೈ ಸಂ —ತೈತ್ತಿರೀಯ ಸಂಹಿತಾ
ನಿ —ನಿರುಕ್ತ, ನಿಘಂಟು
ಪಾ ಸೂ —ಪಾಣಿನೀಯ ಸೂತ್ರ
ಪಾ ಶಿ.—ಪಾಣಿನೀಯ ಶಿಕ್ಷಾ
ಫಿ ಅಥವಾ ಫಿ ಸೂ —ಫಿಟ್ ಸೂತ್ರ
ಬ್ರ ಸೂ —ಬ್ರಹ್ಮಸೂತ್ರ
ಮ ಭಾ —ಮಹಾಭಾರತ
ಮ. ಸ್ಮೃ.—ಮನುಸ್ಮೃತಿ
ಮೈ ಸಂ —ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯಸ್ಮೃತಿ
ವಾ ಸಂ.—ವಾಜಸನೇಯಸಂಹಿತಾ
ವಾ. ಪು.—ವಾಯುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದಸಂಹಿತಾ ಇತ್ಯಾದಿ.

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

ಅಧ್ಯಕ್ಷರು .

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಿಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

---

Translator & Editor

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್**

---

**ಸಹಾಯಕ ವಿದ್ವನ್ಮಂಡಲಿ**

1 **ಬ್ರ॥ ಶ್ರೀ॥ ಜಿ ವಿಷ್ಣುಮೂರ್ತಿಭಟ್ಟರು,** ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು

2 **ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು,** ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,

3 **ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು,** ಋಗ್ವೇದ ಘನಪಾಠಿಗಳು

4 **ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು,** ಶ್ರೌತ ವಿದ್ವಾನ್

5 **ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು,** ಮೀಮಾಂಸಾದರ್ಶನ ಪಂಡಿತರು

6. **ಬ್ರ॥ ಶ್ರೀ॥ G. N ಚಕ್ರವರ್ತಿ M A**
Professor of Sanskrit. St. Philomina's College, Mysore

7. **ಬ್ರ॥ ಶ್ರೀ॥ ವೆಂಕಟರಮಣಾಚಾರ್, M A , B. T ,** ಸಾಹಿತ್ಯವಿದ್ವಾನ್

8 **ಬ್ರ॥ ಶ್ರೀ॥ S ರಂಗನಾಥನ್,** ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ

9 **ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್,** ಸಾಹಿತ್ಯ ವಿದ್ವಾನ್.
Govt Oriental Research Institute, Mysore

10. **ಬ್ರ॥ ಶ್ರೀ॥ S ಸೀತಾರಾಮಶಾಸ್ತ್ರಿಗಳು,** ರಿಟೈರ್ಡ್ ಪಂಡಿತರು
Govt Oriental Research Institute, Mysore



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**

ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು

# ಮುನ್ನುಡಿ

ಋಗ್ವೇದದಲ್ಲಿರುವ ಸೂಕ್ತಗಳನ್ನು ಅಥವಾ ಋಕ್ಕುಗಳನ್ನು ಯಜ್ಞಾದಿಕರ್ಮಾನುಷ್ಠಾನಗಳಲ್ಲಿಯೂ ಗೃಹ್ಯಸೂತ್ರೋಕ್ತವಾದ ವಿವಾಹಾದಿ ಕರ್ಮಗಳಲ್ಲಿಯೂ ಪಠಿಸುವಾಗ ಅವುಗಳಿಗೆ ಋಷಿದೇವತಾಛಂದಸ್ಸುಗಳನ್ನೂ ವಿನಿಯೋಗವನ್ನೂ ಹೇಳಿ ಅನಂತರ ಆಯಾ ಮಂತ್ರಗಳನ್ನು ಪಠಿಸುವುದು ಆರ್ಷೇಯದಿಂದ ನಡೆದುಬಂದಿರುವ ಪದ್ಧತಿಯಾಗಿದೆ. ಸೂಕ್ತದ ಋಷಿಗಳೆಂದರೆ ಆ ಸೂಕ್ತದ ದ್ರಷ್ಟೃಗಳೆಂದು ವೈದಿಕರು ಹೇಳುವರು. ಆಯಾ ಋಷಿಗಳೇ ಆಯಾ ಸೂಕ್ತಗಳನ್ನು ರಚಿಸಿದ ಗ್ರಂಥಕರ್ತರೆಂದು ಪಾಶ್ಚಾತ್ಯಪಂಡಿತರು ಹೇಳುವರು. ಸಾಧಾರಣವಾಗಿ ಅನೇಕ ಋಕ್ಕುಗಳಿಂದ ಕೂಡಿರುವ ಒಂದು ಸೂಕ್ತಕ್ಕೆ ಒಬ್ಬನೇ ಋಷಿಯು. ಕೆಲವು ಸಂದರ್ಭಗಳಲ್ಲಿ ಒಂದೇ ಸೂಕ್ತದಲ್ಲಿರುವ ಬೇರೆ ಬೇರೆ ಋಕ್ಕುಗಳಿಗೆ ಬೇರೆ ಬೇರೆ ಋಷಿಗಳಿರುವರು. ಅದರಂತೆಯೇ ಒಬ್ಬ ಋಷಿಯ ಹೆಸರಿನಲ್ಲಿಯೇ ಅನೇಕ ಸೂಕ್ತಗಳೂ ಇರುವವು.

ದೇವತೆಗಳ ವಿಷಯವಾಗಿ ಹೇಳುವುದಾದರೆ ಇದೇ ಕ್ರಮವೇ ಅನ್ವಯಿಸುವುದು. ಎಂದರೆ ಒಂದು ಸೂಕ್ತಕ್ಕೆ ಸಾಧಾರಣವಾಗಿ ಒಂದೇ ದೇವತೆಯು. ಅಥವಾ ಒಂದೇ ಸೂಕ್ತದಲ್ಲಿ ಬೇರೆ ಬೇರೆ ಋಕ್ಕುಗಳಿಗೆ ಬೇರೆ ಬೇರೆ ದೇವತೆಗಳೂ ಒಂದೇ ದೇವತಾಕವಾದ ಅನೇಕ ಸೂಕ್ತಗಳೂ ಇರುವವು. ದೇವತೆಗಳಲ್ಲಿ ಅಗ್ನಿ, ಇಂದ್ರ, ಅಶ್ವಿನೀ ದೇವತೆಗಳು, ಉಷಸ್ಸು, ಆದಿತ್ಯ, ಮರುದ್ದೇವತೆಗಳು, ಸವಿತೃ, ವಿಶ್ವೇದೇವತೆಗಳು, ಪವಮಾನಸೋಮ, ದ್ಯಾವಾಪೃಥಿವೀ ಎಂಬುವರು ಮುಖ್ಯರಾದವರು. ಇವರಲ್ಲದೆ ರುದ್ರ, ವಿಷ್ಣು, ಪೂಷಾ, ಬೃಹಸ್ಪತಿ, ಪ್ರಜಾಪತಿ ಮೊದಲಾದ ಇತರ ದೇವತೆಗಳೂ ಇರುವರು. ಈ ದೇವತೆಗಳಲ್ಲದೆ ಅಚೇತನವಸ್ತುಗಳೆಂದು ಹೇಳಲ್ಪಡುವ ಆಪಃ (ನೀರು), ರಾತ್ರಿ, ಗ್ರಾವಾಣಃ (ಸೋಮರಸವನ್ನು ಜಜ್ಜುವ ಕಲ್ಲುಗಳು) ಓಷಧಿ, ಯೂಪಸ್ತಂಭ, ಜ್ಞಾನ, ನದಿಗಳು, ದಾನಸ್ತುತಿ, ಧನುಸ್ಸು, ಜ್ಯಾ, ಇಷುಧಿ, ರಥ ಮೊದಲಾದವುಗಳೂ ಕೆಲವು ಋಕ್ಕುಗಳಿಗೆ ದೇವತೆಗಳೆಂದು ಭಾವಿಸಲ್ಪಟ್ಟಿರುವುದು. ಅಚೇತನವಸ್ತುಗಳು ದೇವತೆಗಳಾಗುವುದು ಹೇಗೆ ಎಂದರೆ ಈ ವಿಷಯದಲ್ಲಿ ಭಾಷ್ಯಕಾರರು ಭಾಷ್ಯಭೂಮಿಕೆಯಲ್ಲಿ ಹೇಳಿರುವಂತೆ

> **ಅಚೇತನೇಽರ್ಥಬಂಧನಾದಿತಿ। ಓಷಧೇ ತ್ರಾಯಸ್ವೈನಂ, ಶೃಣೋತ ಗ್ರಾವಾಣ ಇತ್ಯಾದಾವಚೇತನೇ ದ್ರವ್ಯೇ ಚೇತನೋಚಿತರಕ್ಷಣಶ್ರವಣಾದ್ಯರ್ಥಂ ಬಧ್ನಾತಿ। ಸ ಚಾಯುಕ್ತಃ। ನನ್ವಭಿಮಾನಿವ್ಯಪದೇಶ ಇತಿ ವೈಯಾಸಿಕಶಾಸ್ತ್ರೇ ಸೂತ್ರಿತತ್ವಾದೋಷಧ್ಯಾದ್ಯಭಿಮಾನಿಚೇತನದೇವತಾತ್ರ ವಿವಕ್ಷ್ಯತಾಂ॥**

ಎಂದರೆ ಓಷಧಿ, ಗ್ರಾವಾ ಮೊದಲಾದ ಅಚೇತನವಸ್ತುಗಳನ್ನು ಕುರಿತು ಹೇಳುವ ಋಕ್ಕುಗಳಲ್ಲಿ ಆ ಅಚೇತನ ವಸ್ತುಗಳನ್ನೇ ಸಂಬೋಧನೆಮಾಡಿರುವುದಿಲ್ಲ. ಅವುಗಳ ಅಭಿಮಾನಿದೇವತೆಗಳನ್ನು ಪ್ರಶಂಸಿಸಲಾಗಿರುವುದು. ಉದಾಹರಣೆ—ಓಷಧಿಯನ್ನು ಸಂಬೋಧನೆಮಾಡುವಾಗ ಅಚೇತನಗಳಾದ ಸಸ್ಯಾದಿಗಳನ್ನಲ್ಲ, ಅವುಗಳಿಗೆ ಅಭಿಮಾನಿ ದೇವತೆಯಾದ ಸೋಮನನ್ನು. **ಸೋಮ ಓಷಧೀನಾಮಧಿಪತಿಃ** ಎಂದು ಶ್ರುತಿವಾಕ್ಯವಿರುವುದು. ಇದರಂತೆ ಇತರ

ವಸ್ತುಗಳ ವಿಷಯದಲ್ಲಿಯೂ ಊಹಿಸಿಕೊಳ್ಳಬೇಕು ಎಂದು ವಿವರಿಸಿರುವರು. ಇದರಂತೆ ಅಗ್ನಿ ಮರುತ್ತುಗಳು ಮೊದಲಾದ ದೇವತೆಗಳ ವಿಷಯದಲ್ಲಿಯೂ ಅವುಗಳು ಅಚೇತನಗಳೆಂದು ಕೆಲವರು ಆಕ್ಷೇಪಣೆಮಾಡುವರು. ಈ ಆಕ್ಷೇಪಣೆಗೂ ಸಹ ಮೇಲಿನ ವಿವರಣೆಯೇ, ಅನ್ವಯಿಸುವುದಲ್ಲದೆ, ಸಕಲದೇವತೆಗಳಿಗೂ ಅಧಿಪತಿಯಾದ ಒಬ್ಬ ಮುಖ್ಯ ದೇವತೆಯ ಅಂಶಗಳೇ ಈ ರೀತಿ ಅಗ್ನ್ಯಾದಿರೂಪಗಳಿಂದ ಪ್ರಕಟವಾಗಿರುವವು ಎಂದು ವೇದಾಂತವಾದಿಗಳು ಹೇಳುವುದೂ ಗಮನಾರ್ಹವಾಗಿರುವುದು. ಈ ವಿಷಯದಲ್ಲಿ ಯಾಸ್ಕರು—

> **ಅಗ್ನಿಃ ಪೃಥಿವೀಸ್ಥಾನೋ ವಾಯುರ್ವೇಂದ್ರೋ ವಾಂತರಿಕ್ಷಸ್ಥಾನಃ ಸೂರ್ಯೋ ದ್ಯುಸ್ಥಾನಃ । ತಾಸಾಂ ಮಹಾಭಾಗ್ಯಾದೇಕೈಕಸ್ಯಾ ಅಪಿ ಬಹೂನಿ ನಾಮಧೇಯಾನಿ ಭವಂತಿ । ಅಪಿ ವಾ ಕರ್ಮಪೃಥಕ್ತ್ವಾದ್ಯಥಾ ಹೋತಾಧ್ವರ್ಯುರ್ಬ್ರಹ್ಮೋದ್ಗಾತೇತ್ಯಪ್ಯೇಕಸ್ಯ ಸತಃ । ಅಪಿ ವಾ ಪೃಥಗೇವ ಸ್ಯುಃ ಪೃಥಗ್ಘಿ ಸ್ತುತಯೋ ಭವಂತಿ ॥** (ನಿ. ೭-೫)

ಎಂದು ಹೇಳಿರುವರು. ಮುಖ್ಯಾಭಿಪ್ರಾಯವೇನೆಂದರೆ ಅಗ್ನೀಂದ್ರಾದಿತ್ಯದೇವತೆಗಳು ಬೇರೆ ಬೇರೆ ದೇವತೆಗಳಾಗಿ, ಅಗ್ನಿಯು ಪೃಥಿವಿಯಲ್ಲಿಯೂ ವಾಯು ಅಥವಾ ಇಂದ್ರನು ಅಂತರಿಕ್ಷದಲ್ಲಿಯೂ ಆದಿತ್ಯ ಅಥವಾ ಸೂರ್ಯನು ಸ್ವರ್ಗದಲ್ಲಿಯೂ ಬೇರೆ ಬೇರೆ ದೇವತೆಗಳೆಂದು ಸ್ತುತಿಸಲ್ಪಟ್ಟಿದ್ದರೂ ಯಜ್ಞಕರ್ಮದಲ್ಲಿ ಹೋತೃ, ಅಧ್ವರ್ಯು, ಬ್ರಹ್ಮ, ಉದ್ಗಾತೃ ಎಂಬ ಋತ್ವಿಕ್ಕುಗಳು ಯಜ್ಞದ ಅಂಗಗಳಾಗಿಯೇ ಇರುವಂತೆ ಅಗ್ನ್ಯಾದಿದೇವತೆಗಳು ಒಬ್ಬ ಮುಖ್ಯ ದೇವತೆಯ (ಪರಮಾತ್ಮನ) ಅಂಶ ಅಥವಾ ಅಂಗಗಳಾಗಿಯೇ ಇರುವರು ಅವರವರ ಗುಣಗಳಿಗನುಸಾರವಾಗಿ ಸ್ತೋತ್ರಮಾಡುವವರು ಅವರನ್ನು ಪ್ರತ್ಯೇಕದೇವತೆಗಳೆಂದು ಭಾವಿಸಿ ಸ್ತೋತ್ರಮಾಡುವರು ಇತ್ಯಾದಿ—

> Yaska, in the Daivata-kanada of his Nirukta asserts that there are. in the Veda three divinities Agni on the earth, Vayu or Indra, in the sky; and Surya (Sun) in heaven, of each of whom there are many appellations expressive of his greatness and of the variety of his functions. All the Deities are but parts of one Atman or Soul, subservient to the diversification of his praises through the immensity and variety of his attributes The Anukramanika goes further, and affirms that the reis but one Deity, the great soul, quoting in support of this doctrine, a passage which applies only to the Sun (ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ಋ ಸಂ. ೧-೧೧೫-೧) who is there called " the soul of all that moves or immovable.

Thus we see that in invoking the different phenomena of nature, the Vedic Rishis had evidently in view the Supreme Energy

underlying them all. It is not the rain or lightning that is worshipped, but the Deity or the Divine power that rules them and this Divine Power is designated by the Vedic Rishis as Parjanya

The fire that we see before us and which is so useful to the people is not the Deity who is invoked by the Rishis—but the Divine Power which is designated by them as Agni " who bursts forth from the wood (ಅರಣಿಗಳಿಂದ) when the fire is churned with a stick." It is thus clear that the Vedic Rishis did not merely worship the natural phenomena but the Energy under-lying them all which they denominated by various names, such as, Surya, Agni, Indra &c To them either Indra only or Agni or Surya, or all of them, together with the other Powers of Nature, did not complete the conception of God Nor was any of them regarded by them as the Supreme Ruler of the Universe Omniscient and Omnipotent They represented merely the various Energies of the All-Powerful Providence manifested to humanity through diverse natural phenomena. ದೇವತೆಗಳ ವಿಷಯದಲ್ಲಿ ಋಷಿಗಳ ಆಶಯವೇನಿದ್ದಿತೆಂಬುವುದು ಇದರಿಂದ ಸ್ಪಷ್ಟವಾಗುವುದು.

ಛಂದಸ್ಸಿನ ವಿಷಯವಾಗಿ ನಾವು ಹಿಂದೆಯೇ ಹೇಳಿದೇವೆ. ಗದ್ಯರೂಪವಾದ ವಾಕ್ಯಗಳಿಂದ ಸ್ತುತಿಸುವುದಕ್ಕಿಂತ ಛಂದೋಬದ್ಧವಾಗಿರುವ ಋಕ್ಕುಗಳಿಂದಲೂ ಮಂತ್ರಗಳಿಂದಲೂ ದೇವತೆಗಳನ್ನು ಸ್ತುತಿಸುವುದು ಮತ್ತು ಅವರ ಗುಣಗಾನಮಾಡುವುದು ಹೆಚ್ಚು ಆಹ್ಲಾದಕರವಾಗಿರುವುದಲ್ಲದೆ ಮನಸ್ಸಿನಲ್ಲಿರುವ ಭಕ್ತಿರಸವನ್ನೂ, ಸ್ಪಷ್ಟವಾದ ಅಭಿಪ್ರಾಯವನ್ನೂ, ವಿಶದವಾಗಿ ವ್ಯಕ್ತಪಡಿಸಲು ಸಾಧನವಾಗಿರುವುದು. ವಿಧವಿಧವಾದ ಛಂದಸ್ಸುಗಳಿಂದ ಸ್ತೋತ್ರ ಮಾಡುವಾಗ ಋಷಿಗಳು ತಮ್ಮ ಪ್ರೌಢತ್ವವನ್ನೂ ವಿಷಯನಿರೂಪಣೆಯಲ್ಲಿ ತಮಗಿದ್ದ ಶಕ್ತಿಸಾಮರ್ಥ್ಯಗಳನ್ನೂ, ಸಮಯೋಚಿತವಾದ ದೃಷ್ಟಾಂತಗಳನ್ನೂ ಬಹು ಚೆನ್ನಾಗಿ ವ್ಯಕ್ತಪಡಿಸಿರುವರು

ವಿನಿಯೋಗದ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಬಯಸುವೆವು ಆಯಾ ದೇವತೆಯನ್ನು ಸ್ತೋತ್ರಮಾಡುವಾಗ ಆಯಾ ದೇವತೆಗೆ ಸಂಬಂಧಪಟ್ಟ ಋಕ್ಕುಗಳನ್ನು ಪಠಿಸುವುದೇ ವಿನಿಯೋಗವೆನಿಸುವುದು. ಈ ವಿನಿಯೋಗಕ್ರಮದಲ್ಲಿ ಒಂದು ಕ್ರಮಬದ್ಧವಾದ ರೀತಿ ಇರುವುದು ಉದಾಹರಣೆಗಾಗಿ-ಯಜ್ಞದಲ್ಲಿ ಅಗ್ನಿಯನ್ನು ಉದ್ದೇಶಿಸಿ ಹೋಮಮಾಡುವಾಗ ಅಗ್ನಿಯ ಗುಣಗಳನ್ನು ವರ್ಣಿಸುವ ಮಂತ್ರಗಳನ್ನು ಮೊದಲು ಪಠಿಸುವರು

ಈ ವಿಧವಾದ ಮಂತ್ರಗಳಿಗೆ ನಿವಿತ್ ಅಥವಾ ನಿವಿದ್ಧಾನವೆಂದು ಹೇಳುವರು. ಬಳಿಕ ಆಹ್ವಾನಮಾಡುವಾಗ ಅಗ್ನಿ ದೇವತಾಕವಾದ ಒಂದು ಋಕ್ಕನ್ನು ಪಠಿಸುವರು. ಇದಕ್ಕೆ ಪುರೋಽನುವಾಕ್ಯಾಮಂತ್ರವೆಂದು ಹೆಸರು. ಈ ಪುರೋಽನುವಾಕ್ಯಾಮಂತ್ರದಿಂದ ದೇವತೆಯನ್ನು ಆಹ್ವಾನಮಾಡಿ ಅನಂತರ ಅದೇ ದೇವತಾಕವಾದ ಮತ್ತೊಂದು ಋಕ್ಕಿನಿಂದ ಆಹ್ವಾನಮಾಡಿರುವ ದೇವತೆಯನ್ನುದ್ದೇಶಿಸಿ ಹೋಮಮಾಡುವ ಮಂತ್ರಕ್ಕೆ (ಋಕ್ಕಿಗೆ) ಯಾಜ್ಯಾಮಂತ್ರವೆಂದು ಹೆಸರು. ಈ ರೀತಿ ಮೊದಲು **ನಿವಿತ್** ಮಂತ್ರ ಬಳಿಕ **ಪುರೋಽನುವಾಕ್ಯಾ**, ಅನಂತರ **ಯಾಜ್ಯಾ** ಎಂದು ಮೂರು ವಿಧವಾದ ಮಂತ್ರಗಳನ್ನು ಒಂದಾಗುತ್ತಲೊಂದು ಪಠಿಸುವರು ನಿವಿತ್ ಮಂತ್ರವು ಒಂದೇ ಋಕ್ಕಾಗಿರಬೇಕೆಂಬ ನಿಯಮವಿಲ್ಲ. ಇವು ಸಾಧಾರಣವಾಗಿ ಅದರಲ್ಲಿಯೂ ಅಗ್ನಿಯ ವಿಷಯದಲ್ಲಿ ಹನ್ನೆರಡು ಮಂತ್ರಗಳಿರುವವು ಯಾಜ್ಯಾಪುರೋಽನುವಾಕ್ಯಾ ಮಂತ್ರಗಳು ಮಾತ್ರ ಒಂದೊಂದು ಋಕ್ಕಾಗಿರಬೇಕು ಬೇರೆ ಬೇರೆ ದೇವತೆಗಳಿಗೆ ಬೇರೆ ಬೇರೆ ಯಾಜ್ಯಾಪುರೋಽನುವಾಕ್ಯಾಮಂತ್ರಗಳಿರುವವು. ಈ ವಿಧವಾದ ಮಂತ್ರಗಳಲ್ಲದ ಪ್ರಾತರನುವಾಕಮಂತ್ರಗಳೆಂದು ಯಜ್ಞದಲ್ಲಿ ಸೋಮಾಭಿಷವದ ಹಿಂದಿನ ದಿನ ಅಪರರಾತ್ರಿಯಾದ ಮೇಲೆ ಉಷಃಕಾಲಕ್ಕೆ ಮುಂಚಿತವಾಗಿ ಕೆಲವು ಮಂತ್ರಗಳನ್ನು ಪಠಿಸುವರು. ಈ ಮಂತ್ರಗಳಲ್ಲಿ ಗಾಯತ್ರ್ಯಾದಿ ಸಪ್ತಛಂದಸ್ಸುಗಳ ಸೂಕ್ತಗಳಿರಬೇಕು ಅವು ಆಯಾ ದೇವತಾಕವಾಗಿಯೂ ಇರಬೇಕು. ಇವುಗಳನ್ನು ಕ್ಲೃಪ್ತಸಂಖ್ಯೆಯ ಪ್ರಕಾರ ಪಠಿಸಬೇಕಾಗಿರುವುದು ಇಂತಹ ಮಂತ್ರಪಠನಕ್ಕೆ ಪ್ರಾತರನುವಾಕ ಮಂತ್ರವೆಂದು ಹೆಸರು ಇವುಗಳಲ್ಲಿ ಆಗ್ನೇಯಕ್ರತು, ಆಶ್ವಿನಕ್ರತು ಉಷಸ್ಯಕ್ರತು ಎಂಬ ಪ್ರಭೇದಗಳಿರುವವು ಮತ್ತು ಹೋತೃವು ಪಠಿಸಬೇಕಾದ ಮಂತ್ರಗಳಿಗೆ ಶಸ್ತ್ರ ಅಥವಾ ಉಕ್ಥಮಂತ್ರಗಳೆಂದು ಹೇಳುವರು ಇವುಗಳಲ್ಲಿ ಆಜ್ಯಶಸ್ತ್ರ, ಪ್ರಉಗಶಸ್ತ್ರ, ಮರುತ್ವತೀಯಶಸ್ತ್ರ, ವೈಶ್ವದೇವಶಸ್ತ್ರ, ಅಗ್ನಿಮಾರುತಶಸ್ತ್ರ, ನಿಷ್ಕೇವಲ್ಯಶಸ್ತ್ರಗಳೆಂಬ ಪ್ರಭೇದಗಳಿರುವವು ಸಾಮವೇದ ಮಂತ್ರಗಳನ್ನು ಉದ್ಗಾತೃವೆಂಬ ಋತ್ವಿಜನು ಗಾನಮಾಡುವನು ಈ ಮಂತ್ರಗಳಿಗೆ ಸ್ತೋತ್ರಗಳೆಂದು ಹೆಸರು. ಇವುಗಳಲ್ಲಿ ಬಹಿಷ್ಪವಮಾನಸ್ತೋತ್ರ, ಆಜ್ಯಸ್ತೋತ್ರ, ಮಾಧ್ಯಂದಿನಪವಮಾನಸ್ತೋತ್ರ, ಆರ್ಭವಸ್ತೋತ್ರ, ಅಗ್ನಿಷ್ಟೋಮಸಾಮ, ಪೃಷ್ಠಸ್ತೋತ್ರಗಳೆಂಬ ಪ್ರಭೇದಗಳಿವೆ ಇವುಗಳಿಗೆಲ್ಲಾ ಬೇರೆ ಬೇರೆ ನಿರ್ದಿಷ್ಟವಾದ ಮಂತ್ರಗಳಿವೆ ಆಯಾ ಸಂದರ್ಭಗಳಲ್ಲಿ ಅವುಗಳನ್ನು ಪಠಿಸಬೇಕು. ಅದರಂತೆಯೇ ಬೇರೆ ಬೇರೆ ಯಜ್ಞಗಳಲ್ಲಿ ಆಯಾ ಸಂದರ್ಭಾನುಸಾರ ಆಯಾ ದೇವತಾಕವಾದ ಮಂತ್ರಗಳನ್ನು ಪಠಿಸಬೇಕು. ಇತ್ಯಾದಿ ಕ್ರಮವು ಋಗ್ವೇದಸಂಬಂಧವಾದ ಮಂತ್ರಗಳಿಗೆ ಆಶ್ವಲಾಯನಮಹರ್ಷಿಗಳಿಂದ ಆಶ್ವಲಾಯನಶ್ರೌತಸೂತ್ರದಲ್ಲಿ ಕ್ರಮವಾಗಿ ಹೇಳಲ್ಪಟ್ಟಿರುವುದು ಹೋತೃವೆಂಬ ಋತ್ವಿಜನು ಇವುಗಳನ್ನು ಪಠಿಸಬೇಕು ಅಧ್ವರ್ಯುವು ಪಠಿಸಬೇಕಾದ ಯಜುರ್ವೇದಮಂತ್ರಗಳನ್ನೂ ಅವುಗಳ ವಿನಿಯೋಗವನ್ನೂ ಆಪಸ್ತಂಬ ಮೊದಲಾದ ಋಷಿಗಳು ತಮ್ಮ ತಮ್ಮ ಶ್ರೌತಸೂತ್ರಗಳಲ್ಲಿ ವಿವರಿಸಿರುವರು ಇವುಗಳನ್ನು ಯಜುರ್ವೇದಾಧ್ಯಾಯಿಗಳಾದ ಅಧ್ವರ್ಯುವೆಂಬ ಋತ್ವಿಜರು ಆಯಾ ಸಂದರ್ಭಗಳಲ್ಲಿ ಪಠಿಸಿ ಯಜ್ಞಕರ್ಮವನ್ನು ನೆರವೇರಿಸುವರು ಇದರಂತೆಯೇ ಸಾಮವೇದಿಗಳು ತಮ್ಮ ಶ್ರೌತಸೂತ್ರಗಳಲ್ಲಿ ಹೇಳಿರುವ ಮಂತ್ರಗಳನ್ನು ಸಾಮಗಾನರೀತಿಯಿಂದ ಗಾನಮಾಡುವರು ಇವೆಲ್ಲವೂ ಶ್ರೌತಕರ್ಮಗಳಲ್ಲಿ ಉಪಯೋಗಿಸುವ ಮಂತ್ರಗಳ ವಿನಿಯೋಗವು

ಗೃಹ್ಯಕರ್ಮಗಳಲ್ಲಿ ಎಂದರೆ ವಿವಾಹಾದಿಕರ್ಮಗಳಲ್ಲಿ ಆಯಾ ಶಾಖಾಧ್ಯಾಯಿಗಳು ತಮ್ಮ ಸ್ವಶಾಖೆಯ ಗೃಹ್ಯಸೂತ್ರಗಳಲ್ಲಿ ಹೇಳಿರುವ ವಿಧಿಯಂತೆ ಆಯಾ ಕರ್ಮಗಳಿಗೆ ಉಪಯುಕ್ತವಾದ ಮಂತ್ರಗಳನ್ನು ಆಯಾ ಸಂದರ್ಭಗಳಲ್ಲಿ ಪಠಿಸಬೇಕು ಇವು ಗೃಹ್ಯಕರ್ಮಗಳಲ್ಲಿ ಉಪಯೋಗಿಸುವ ಮಂತ್ರಗಳು

ಇವುಗಳಲ್ಲದ ಕಾಮ್ಯಕರ್ಮಗಳಲ್ಲಿಯೂ, ಆಭಿಚಾರಿಕಕರ್ಮಗಳಲ್ಲಿಯೂ. ದೇವಪೂಜಾದಿಗಳಲ್ಲಿಯೂ ಸಂದರ್ಭಾನುಸಾರವಾಗಿ ಆಯಾ ದೇವತಾಕವಾದ ಮಂತ್ರಗಳನ್ನು ಪಠಿಸಬೇಕು. ಈ ವಿಧವಾಗ ಕರ್ಮಗಳಿಗೆಲ್ಲಾ ನಿರ್ದಿಷ್ಟವಾದ ಯಾವ ಸೂತ್ರಗಳೂ ರಚಿತವಾಗಿಲ್ಲ ಮಂತ್ರಗಳ ಅರ್ಥಾನುಸಾರವಾಗಿ ಅವುಗಳನ್ನು ಆಯಾ ಕರ್ಮಗಳಿಗೆ ತಕ್ಕಂತೆ ವಿನಿಯೋಗಿಸಬೇಕು

ಶ್ರೌತಕರ್ಮಗಳಾದ ಯಜ್ಞಯಾಗಾದಿಗಳಲ್ಲಿ ಉಪಯೋಗಿಸುವ ಮಂತ್ರಗಳು ಆಯಾ ದೇವತಾಕವಾಗಿರುವುದಲ್ಲದೆ ಅವುಗಳ ಅರ್ಥವು ಕರ್ಮಾನುಸಾರವಾಗಿರುವುದು. ಗೃಹ್ಯಕರ್ಮಗಳಲ್ಲಿಯೂ ಇದೇ ರೀತಿಯಾಗಿರುವುದಾದರೂ ಕೆಲವು ಪ್ರಾಚೀನಗಳಲ್ಲದ ಕರ್ಮಾನುಷ್ಠಾನಗಳಲ್ಲಿಯೂ, ದೇವತೋಪಾಸನೆಗಳಲ್ಲಿಯೂ ಸರಿಯಾದ ಮಂತ್ರಗಳು ಇಲ್ಲದಿರುವುದರಿಂದ ಅರ್ಥವು ಬೇರೆಯಾಗಿದ್ದರೂ ಶಬ್ದಮಾತ್ರವಿದ್ದರೆ ಸಾಕೆಂದು ಅಂತಹ ಮಂತ್ರಗಳನ್ನು ಉಪಯೋಗಿಸುವುದು ರೂಢಿಗೆ ಬಂದಿರುವುದು. ಉದಾಹರಣೆಗಾಗಿ-ಪ್ರಾಚೀನಕಾಲದಲ್ಲಿ ನವಗ್ರಹಪೂಜೆ ಹೋಮ ಮುಂತಾದವುಗಳು ಇರಲಿಲ್ಲವೆಂದು ಹೇಳಬಹುದು ಏಕೆಂದರೆ ನವಗ್ರಹಗಳಲ್ಲಿ ಸೂರ್ಯ, ಚಂದ್ರ ಬೃಹಸ್ಪತಿ ಎಂಬ ಹೆಸರುಗಳಲ್ಲದೆ ಇತರ ಗ್ರಹದೇವತೆಗಳು ಋಗ್ವೇದದಲ್ಲಿ ಪ್ರತಿಪಾದ್ಯರಾಗಿರುವುದಿಲ್ಲ ಎಂದರೆ ಅಂಗಾರಕ, ಬುಧ ಶುಕ್ರ, ಶನೈಶ್ಚರ, ರಾಹು, ಕೇತು ಎಂಬ ದೇವತೆಗಳು ವೇದದಲ್ಲಿಲ್ಲ. ಅವುಗಳಿಗೆ ಉಪಯೋಗಿಸುವ ಮಂತ್ರಗಳು ಆಯಾ ದೇವತೆಯ ಈಗಿನ ಹೆಸರನ್ನು ಮಾತ್ರ ಒಳಗೊಂಡಿರುವುದೇ ಹೊರತು ಅರ್ಥವು ಬೇರೆ ವಿಧವಾಗಿರುವುದು. ಉದಾಹರಣೆಗೆ, ಕೇತುಗ್ರಹಕ್ಕೆ **ಕೇತುಂ ಕೃಣ್ವನ್ನ ಕೇತವೇ ಪೇಶೋಮರ್ಯಾ ಅಪೇಶಸೇ । ಸಮುಷದ್ಭಿರಜಾಯಥಾಃ ॥** ಎಂಬ ಋಕ್ಕಿನಲ್ಲಿ ಕೇತು ಶಬ್ದವು ಪಠಿತವಾಗಿದ್ದರೂ ಅಲ್ಲಿ ಕೇತುಶಬ್ದಕ್ಕೆ ಕರ್ಮ ಅಥವಾ ಪ್ರಜ್ಞಾ ಎಂಬರ್ಥವಿರುವುದೇ ಹೊರತು ಕೇತುವೆಂಬ ಗ್ರಹವಲ್ಲ, ಇತರ ಗ್ರಹಗಳಿಗೂ ಈ ವಿಧಿಯೇ ಅನ್ವಯಿಸುವುದು. ಆಧುನಿಕ ಎಂದರೆ ಪ್ರಾಚೀನವಲ್ಲದ (ವೇದಕಾಲವಲ್ಲದ) ಕಾಲದಲ್ಲಿ ಬಳಕೆಯಲ್ಲಿ ಬಂದಿರುವ ರಾಮ, ಕೃಷ್ಣ ಮೊದಲಾದ ದೇವರುಗಳ ವಿಷಯದಲ್ಲಿಯೂ ವೇದದಲ್ಲಿ ಯಾವ ಮಂತ್ರಗಳೂ ಇಲ್ಲದ್ದರಿಂದ ಸಮಯೋಚಿತವಾದ ಯಾವ ಮಂತ್ರವನ್ನಾದರೂ ಹೇಳಬಹುದೆಂಬ ಪದ್ಧತಿಯು ರೂಢಿಗೆ ಬಂದಿರಬಹುದು ಬರಬರುತ್ತ ಮಂತ್ರಗಳ ಅರ್ಥಕ್ಕೆ ಪ್ರಾಧಾನ್ಯತೆಯನ್ನು ಅಷ್ಟಾಗಿ ಗಮನಿಸದೆ ಶಬ್ದಗಳಿಗೆ ಮಾತ್ರ ಪ್ರಾಧಾನ್ಯತೆಯನ್ನು ಹೇಳಿ ಮಂತ್ರಗಳೆಂದರೆ ಅರ್ಥವು ಹೇಗಬೇಕಾದರೂ ಇರಲಿ, ಸ್ವರವರ್ಣಗಳ ವ್ಯತ್ಯಾಸವಿಲ್ಲದೆ ವಿಧಿಪ್ರಕಾರ ಉಚ್ಚಾರಣೆಮಾತ್ರವಿದ್ದರೆ ಸಾಕೆಂಬ ಪದ್ಧತಿಯು ರೂಢಿಯಲ್ಲಿ ಬಂದಿದೆ. ಆದನ್ನನುಸರಿಸಿ ಬಹುಭಾಗ ಮಂತ್ರಗಳ ವಿನಿಯೋಗವು ಅವುಗಳ ಅರ್ಥಕ್ಕೆ ಅನುಸಾರವಾಗಿಲ್ಲ ಕೆಲವು ಸಂದರ್ಭಗಳಲ್ಲಿ ವಿನಿಯೋಗವು ಲೈಂಗಿಕವೆಂದು ಹೇಳಿರುವುದು. ಅಲ್ಲಿ ಲಿಂಗೋಕ್ತದೇವತೆಗಳು ಎಂದರೆ ಆ ಋಕ್ಕಿನಲ್ಲಿ ಹೇಳಿರುವ ದೇವತೆಗಳೆಂದು ತಿಳಿಯಬೇಕು ಉದಾಹರಣೆಗೆ—

**ಯಾ ಗುಂಗೂರ್ಯಾಸಿನೀವಾಲೀ ಯಾ ರಾಕಾ ಯಾ ಸರಸ್ವತೀ ।**
**ಇಂದ್ರಾಣೀಮಹ್ವ ಊತಯೇ ವರುಣಾನೀಂ ಸ್ವಸ್ತಯೇ ॥**

(ಋ ಸಂ ೨-೩೨-೮)

ಎಂಬ ಋಕ್ಕಿಗೆ **ಲಿಂಗೋಕ್ತದೇವತಾಃ** ಎಂದು ದೇವತೆಗಳಿರುವರು ಇಲ್ಲಿ ಲಿಂಗೋಕ್ತವೆಂದರೆ ಈ ಋಕ್ಕಿನಲ್ಲಿ ಹೇಳಿರುವ ಗುಂಗೂ, ಸಿನೀವಾಲೀ, ರಾಕಾ, ಸರಸ್ವತೀ, ಇಂದ್ರಾಣೀ, ವರುಣಾನೀ ಎಂಬ ಸ್ತ್ರೀದೇವತೆಗಳು, ಎಂದರ್ಥವು ಲಿಂಗೋಕ್ತವೆಂದರೆ ಮಂತ್ರೋಕ್ತವೆಂದು ಸಾಮಾನ್ಯಾರ್ಥವು.

ಅತಿ ಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ, ಕರ್ನಾಟಕಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ.** ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಮಾಡುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ ಗಾಯತ್ರೀ ಎಂಬ ಮಂತ್ರನಾಮಾಂಕಿತರಾದ) ರಾಜಕುಮಾರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕಫಲಗಳಾದ, ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ

ಮೈಸೂರು
ವಿರೋಧಿನಾಮ ಸಂ|| ಪುಷ್ಯ ಶುದ್ಧ ಏಕಾದಶೀ ಶುಕ್ರವಾರ
30—12—1949

ಅನುವಾದಕ
**ಹೆಚ್ ಪಿ. ವೆಂಕಟರಾವ್**
ಆಸ್ಥಾನ ಮಹಾವಿದ್ವಾನ್

॥ ಶ್ರೀಃ ॥

# ವಿಷಯಾನುಕ್ರಮಣಿಕೆ



## ಪ್ರಥಮಾಷ್ಟಕದಲ್ಲಿ ಐದನೆಯ ಅಧ್ಯಾಯವು
## ಪ್ರಥಮಮಂಡಲದ ಸೂಕ್ತಗಳು ೬೨—೮೦

ಪುಟಸಂಖ್ಯೆ

ಪುಟಸಂಖ್ಯೆ



॥ **ವಿಷಯಾನುಕ್ರಮಣಿಕೆ ಸಮಾಪ್ತವು** ॥



॥ ಶ್ರೀಃ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

ಭಾಗ—೬

## ॥ ಪ್ರಥಮಾಷ್ಟಕೇ ಪಂಚಮೋಽಧ್ಯಾಯಃ ॥

### ಮೊದಲನೆಯ ಅಷ್ಟಕದಲ್ಲಿ ಐದನೆಯ ಅಧ್ಯಾಯವು

## ಅರವತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

ಅಥ ಪಂಚಮಾಧ್ಯಾಯ ಆರಭ್ಯತೇ । ಪ್ರಥಮೇ ಮಂಡಲ ಏಕಾದಶೇಽನುವಾಕೇ ಚತ್ವಾರಿ ಸೂಕ್ತಾನಿ ಗತಾನಿ । ಪ್ರ ಮನ್ಮಹ ಇತ್ಯೇತತ್ತ್ರಯೋದಶರ್ಚಂ ಸೂಕ್ತಂ । ಅತ್ರಾನುಕ್ರಮ್ಯತೇ । ಪ್ರ ಸಪ್ತೋನೇತಿ । ಅನಿರುಕ್ತಾ ಸಂಖ್ಯಾ ವಿಂಶತಿಃ । ಅನು ೧೨-೪ । ಇತ್ಯುಕ್ತತ್ವಾತ್ತತ್ರ ಸಪ್ತೋನೇತ್ಯುಕ್ತೇ

**ತ್ರಯೋದಶೇತ್ಯುಕ್ತಂ ಭವತಿ । ಋಷಿಶ್ಚಾನ್ಯಸ್ಮಾದಿತಿ ಪರಿಭಾಷಯಾ ನೋಧಾ ಋಷಿಃ ! ಅನಾದೇಶಪರಿಭಾಷಯಾ ತ್ರಿಷ್ಟುಪ್ ಛಂದಃ । ಇಂದ್ರೋ ದೇವತಾ ॥ ಗತಃ ಸಾಮಾನ್ಯವಿನಿಯೋಗಃ । ವಿಶೇಷವಿನಿಯೋಗಸ್ತು ಲಿಂಗಾದವಗಂತವ್ಯಃ ॥**

ಅನುವಾದವು— ಪ್ರಥಮ ಮಂಡಲದ ಹನ್ನೊಂದನೆಯ ಅನುವಾಕದಲ್ಲಿ ಏಳು ಸೂಕ್ತಗಳಿರುವವು ಅವುಗಳಲ್ಲಿ ಇದುವರೆಗೆ ನಾಲ್ಕು ಸೂಕ್ತಗಳು ಮುಗಿದಿರುವವು ಈಗ **ಪ್ರ ಮನ್ಮಹೇ** ಎಂಬುವುದು ಐದನೆಯ ಸೂಕ್ತವು ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಪ್ರ ಸಪ್ತೋನೇತಿ । ಅನಿರುಕ್ತಾ ಸಂಖ್ಯಾ ವಿಂಶತಿಃ । ಅನು. ೧೨–೪** । ಎಂದು ಹೇಳಿರುವುದರಿಂದ ಇಪ್ಪತ್ತು ಋಕ್ಕುಗಳಲ್ಲಿ ಏಳು ಋಕ್ಕುಗಳಿಲ್ಲವೆಂದು ಹೇಳಿರುವ ಕಾರಣ ಈ ಸೂಕ್ತಕ್ಕೆ ಹದಿಮೂರು ಋಕ್ಕುಗಳಿರುವವು ಎಂದು ಹೇಳಿದಂತಾಯಿತು ಈ ಸೂಕ್ತಕ್ಕೆ ನೋಧಾ ಗೌತಮನೆಂಬುವನು ಋಷಿಯು, ತ್ರಿಷ್ಟುಪ್ ಛಂದಸ್ಸು, ಇಂದ್ರನೇ ದೇವತೆಯು ವಿನಿಯೋಗವು ಸಾಮಾನ್ಯವಾಗಿ ಲೈಂಗಿಕವು ಎಂದರೆ ಅರ್ಥಾನುಸಾರ ಇದರ ವಿನಿಯೋಗವಿರುವುದು

॥ ಓಂ ॥

॥ ಮಂಡಲ—೧ ॥ ಅನುವಾಕ—೧೧ ॥ ಸೂಕ್ತ—೬೨ ॥

॥ ಅಷ್ಟಕ—೧ ॥ ಅಧ್ಯಾಯ—೫ ॥ ವರ್ಗ—೧, ೨, ೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೩ ॥

॥ ಋಷಿಃ—ನೋಧಾ ಗೌತಮಃ ॥

ದೇವತಾ—ಇಂದ್ರಃ ॥

ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಪ್ರ ಮನ್ಮಹೇ ಶವಸಾನಾಯ ಶೂಷಮಾಂಗೂಷಂ ಗಿರ್ವಣಸೇ ಅಂಗಿರಸ್ವತ್ ।

ಸುವೃಕ್ತಿಭಿಃ ಸ್ತುವತ ಋಗ್ಮಿಯಾಯಾರ್ಚಾಮಾರ್ಕಂ ನರೇ ವಿಶ್ರುತಾಯ ॥ ೧ ॥

॥ ಪದಪಾಠಃ ॥

ಪ್ರ । ಮನ್ಮಹೇ । ಶವಸಾನಾಯ । ಶೂಷಂ । ಆಂಗೂಷಂ । ಗಿರ್ವಣಸೇ ।
ಅಂಗಿರಸ್ವತ್ ।

ಸುವೃಕ್ತಿಽಭಿಃ । ಸ್ತುವತೇ । ಋಗ್ಮಿಯಾಯ । ಅರ್ಚಾಮ । ಅರ್ಕಂ । ನರೇ ।
ವಿಽಶ್ರುತಾಯ ॥ ೧ ॥

ಸಾಯಣಭಾಷ್ಯಂ ॥

ಶವಸಾನಾಯ । ಶವ ಇತಿ ಬಲನಾಮ । ತದಿವಾಚರತೇ । ಯಥಾ ಬಲಂ ಶತ್ರೂನ್ಹಂತಿ ತಥಾ ಶತ್ರೂಣಾಂ ಹಂತ್ರೇತ್ಯರ್ಥಃ । ಗಿರ್ವಣಸೇ । ಗೀರ್ಭಿಃ ಸ್ತುತಿಲಕ್ಷಣೈರ್ವಚೋಭಿಃ ಸಂಭಜನೀಯಾಯ । ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯಂತಿ । ನಿ. ೬-೧೪ । ಇತಿ ಯಾಸ್ಕಃ । ಏವಂಭೂತಾಯೇಂದ್ರಾಯ । ಶೂಷಮಿತಿ ಸುಖನಾಮ । ಶೂಷಂ ಸುಖಹೇತುಭೂತಂ । ಆಂಗೂಷಃ ಸ್ತೋಮ ಆಘೋಷಃ । ನಿ. ೫-೧೧ । ಇತಿ ಯಾಸ್ಕಃ । ಆಂಗೂಷಂ ಸ್ತೋತ್ರಮಂಗಿರಸ್ವತ್ ಅಂಗಿರಸ ಇವ ಪ್ರ ಮನ್ಮಹೇ । ವಯಂ ಸ್ತೋತಾರಃ ಪ್ರಕರ್ಷೇಣಾವಗಚ್ಛಾಮಃ । ಅವಗತ್ಯ ಚ ಸುವೃಕ್ತಿಭಿಃ ಸುಷ್ಠ್ವಾವರ್ಜಕೈಃ ಸ್ತುತ್ಯಾಭಿಮುಖೀಕರಣಸಮರ್ಥೈಃ ಸ್ತೋತ್ರೈಃ ಸ್ತುವತೇ ಸ್ತೋತ್ರಂ ಕುರ್ವತೇ ಋಷಯೇ ಯ ಇಂದ್ರ ಋಗ್ಮಿಯೋಽರ್ಚನೀಯೋ ಭವತಿ । ಯದ್ವಾ । ಕರ್ಮಣಿ ಕರ್ತೃಪ್ರತ್ಯಯಃ । ಋಷಿಣಾ ಸ್ತೂಯಮಾನಾಯೇತ್ಯರ್ಥಃ । ನರೇ ಸರ್ವೇಷಾಂ ನೇತ್ರೇ । ಯದ್ವಾ । ನರೇ ಯಜಮಾನೇ । ವಿಶ್ರುತಾಯ ಯಷ್ಟವ್ಯತಯಾ ವಿಶೇಷೇಣ ಪ್ರಖ್ಯಾತಾಯ । ಏವಂಭೂತಾಯ ತಸ್ಮಾ ಅರ್ಕಂ ಮಂತ್ರರೂಪಂ ಸ್ತೋತ್ರಂ । ಅರ್ಕೋ ಮಂತ್ರೋ ಭವತಿ ಯದೇನೇನಾರ್ಚಂತಿ । ನಿ. ೫-೪ । ಇತಿ ಯಾಸ್ಕಃ । ಅರ್ಚಾಮ । ಪೂಜಯಾಮ । ಉಚ್ಚಾರಯಾಮೇತ್ಯರ್ಥಃ ॥ ಮನ್ಮಹೇ । ಮನು ಅವಬೋಧನೇ । ತನಾದಿತ್ವಾದುಪ್ರತ್ಯಯಃ । ಲೋಪಶ್ಚಾಸ್ಯಾನ್ಯತರಸ್ಯಾಂ ಮ್ವೋಃ । ಪಾ. ೬-೪-೧೦೭ । ಇತಿ ಮಕಾರಾದೌ ಪ್ರತ್ಯಯ ಉಕಾರಲೋಪಃ । ಶವಸಾನಾಯ । ಶವ ಇವಾಚರತಿ ಶವಸ್ಯತೇ । ಅಸ್ಮಾಲ್ಲಟಃ ಶಾನಚ್ । ಬಹುಲಂ ಛಂದಸೀತಿ ಶಪೋ ಲುಕ್ । ಶಾನಚಶ್ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದತೋಲೋಪಯಲೋಪೌ । ಚಿತ ಇತ್ಯಂತೋದಾತ್ತತ್ವಂ । ನನು ಕ್ಯಚೋ ಚಿತ್ತ್ವಾತ್ತಸ್ಯಾನುದಾತ್ತೇದಿತಿ ಶಾನಚೋಽನುದಾತ್ತೇನ ಭವಿತವ್ಯಂ । ಏವಂ ತರ್ಹಿ ತಾಚ್ಛೀಲಿಕಶ್ಚಾನಶ್ । ತಸ್ಯ ಸಾರ್ವಧಾತುಕತ್ವೇಽಪಿ ಲಸಾರ್ವಧಾತುಕತ್ವಾಭಾವಾಚ್ಚಿತಃ ಸ್ವರ ಏವ ಶಿಷ್ಯತೇ । ಶೂಷಂ । ಶೂಷ ಪ್ರಸವೇ । ಪಚಾದ್ಯಚ್ । ಆಂಗೂಷಂ । ಆಙ್ಪೂರ್ವಾದ್ಘುಷೇಃ ಪಚಾದ್ಯಚಿ ಘೋ ಇತ್ಯಸ್ಯ ಗೂಆದೇಶಃ ಪೃಷೋದರಾದಿತ್ವಾತ್ । ಆಙೋ ಙಕಾರಸ್ಯೇತ್ಸಂಜ್ಞಾಭಾವಶ್ಛಾಂದಸಃ । ಚಿತ್ಸ್ವರೇಣೋತ್ತರಪದಸ್ಯಾಂತೋದಾತ್ತತ್ವೇ ಕೃದುತ್ತರಪದಪ್ರಕೃತಿಸ್ವರತ್ವಂ । ಘುಷಿ ನಾ ಥಾಥಾದಿನೋ-

ತ್ತರಪದಾಂತೋದಾತ್ತತ್ವಂ । ಗಿರ್ವಣಸೇ । ಗೄ ಶಬ್ದೇ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಋೂತ ಇದ್ಧಾತೋರಿತೀತ್ವಂ । ಗೀರ್ಭಿರ್ವನ್ಯತೇ ಸಂಭಜ್ಯತ ಇತಿ ಗಿರ್ವಣಾಃ । ಔಣಾದಿಕಃ ಕರ್ಮಣ್ಯಸುನ್ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ಛಲಿ ಚೇತಿ ದೀರ್ಘಾಭಾವಃ । ಗತಿಕಾರಕಯೋರಪಿ ಪೂರ್ವಪದ-ಪ್ರಕೃತಿಸ್ವರತ್ವಂ ಚೇತಿ ವಚನಾತ್ಪೂರ್ವಪದಪ್ರಕೃತಿಸ್ವರತ್ವಂ । ಅಂಗಿರಸ್ವತ್ । ತೇನ ತುಲ್ಯಮಿತಿ ವತಿಃ । ನಭೋಽಂಗಿರೋ ಮನುಷಾಂ ವತ್ಯುಪಸಂಖ್ಯಾನಂ । ಪಾ. ೧ ೪-೧೮-೩ । ಇತಿ ಭಸಂಜ್ಞಾಯಾಂ ರುತ್ವಾ-ದ್ಯಭಾವಃ । ಪ್ರತ್ಯಯಸ್ವರಃ । ಸುವೃಕ್ತಿಭಿಃ । ವೃಜೀ ವರ್ಜನೇ । ಭಾವೇ ಕ್ತಿನ್ । ತಿತುತ್ರೇತೀಟ್ಪ್ರತಿ-ಷೇಧಃ । ಶೋಭನಮಾವರ್ಜನಂ ಯೇಷಾಂ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ನನು ಕ್ತಿನಂತಸ್ಯೋತ್ತರಪದಸ್ಯಾದ್ಯುದಾತ್ತತ್ವಾದಾದ್ಯುದಾತ್ತಂ ದ್ವ್ಯಚ್ಛಂದಸೀತಿ ವಚನಾಮುತ್ತರಪದಾದ್ಯುದಾ-ತ್ತತ್ವಂ ಪ್ರಾಪ್ನೋತಿ । ಏವಂ ತರ್ಹಿ ತತ್ಪುರುಷೋಽಸ್ತು । ಶೋಭನಮಾವರ್ಜಿತೋ ಭವತ್ಯೇಭಿರಿತಿ ಸುವೃಕ್ತಯಃ ಸ್ತೋತ್ರಾಣಿ । ಕರಣೇ ಕ್ತಿನ್ । ತಾದೌ ಚ ನಿತೀತಿ ಗತೇಃ ಪ್ರಕೃತಿಸ್ವರತ್ವೇ ಪ್ರಾಪ್ತೇ ಮನ್ಕ್ತಿನ್ನಿತ್ಯಾದಿನಾ ಕಾರಕಾದುತ್ತರಸ್ಯ ಕ್ತಿನೋ ವಿಹಿತಮುತ್ತರಪದಾಂತೋದಾತ್ತತ್ವಮಕಾರಕಾದಪಿ ವ್ಯತ್ಯಯೇನ ಭವತಿ । ಸ್ತುವತೇ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಋಗ್ಮಿಯಾಯ । ಏಕಾಚೋ ನಿತ್ಯಂ ಮಯಟಮಿಚ್ಛಂತಿ । ಕಾ. ೪-೩-೧೪೪ । ಇತಿ ಋಕ್ಶಬ್ದಾದ್ವಿಕಾರಾರ್ಥೇ ಮಯಟ್ । ಸ್ವಾದಿಷ್ವ-ಸರ್ವನಾಮಸ್ಥಾನೇ । ಪಾ. ೧-೪-೧೭ । ಇತಿ ಪದಸಂಜ್ಞಾಯಾಂ ಕುತ್ವಜಶ್ತ್ವೇ । ವ್ಯತ್ಯಯೇನೇತ್ವಂ । ಯದ್ವಾ । ಋಚ ಸ್ತುತಾವಿತ್ಯಸ್ಮಾದ್ಭಾವೇ ಮಕ್ । ಬಹುಲವಚನಾತ್ಕುತ್ವಂ ಜಶ್ತ್ವಂ ಚ । ಋಗ್ಮಂ ಸ್ತುತಿಮರ್ಹತೀತಿ ಋಗ್ಮಿಯಃ । ಅರ್ಹಾರ್ಥೇ ಘಚ್ । ಚಿತ ಇತ್ಯಂತೋದಾತ್ತತ್ವಂ । ಅರ್ಕಾಮ । ಅರ್ಚ ಪೂಜಾಯಾಂ । ಭೌವಾದಿಕಃ । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರಃ ಶಿಷ್ಯತೇ । ಅರ್ಕಂ । ಅರ್ಚ್ಯತೇಽನೇನೇತ್ಯರ್ಕಃ । ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣೇತಿ ಘಪ್ರತ್ಯಯಃ । ಚಜೋಃ ಕು ಘಿಣ್ಯತೋರಿತಿ ಕುತ್ವಂ । ನರೇ । ನೃಶಬ್ದಾಚ್ಚತುರ್ಥ್ಯೇಕವಚನೇ ಗುಣಶ್ಛಾಂದಸಃ । ವಿಶ್ರುತಾಯ । ಶ್ರು ಶ್ರವಣೇ । ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಶವಸಾನಾಯ**—ಬಲವಂತೆ ಆಚರಿಸುವ (ಬಲದಿಂದ ಶತ್ರುನಾಶ ಮಾಡಲು ಸಮರ್ಥನಾದ) । **ಗಿರ್ವಣಸೇ**—(ಸ್ತೋತ್ರರೂಪವಾದ) ವಾಕ್ಕುಗಳಿಂದ ಸ್ತುತ್ಯನಾದ (ಇಂದ್ರನಿಗೆ) । **ಶೂಷಂ**—ಸುಖಹೇತುವಾದ । **ಆಂಗೂಷಂ**—ಸ್ತೋತ್ರವನ್ನು । **ಅಂಗಿರಸ್ವತ್**—ಅಂಗಿರಸ ಋಷಿಗಳಂತೆ । **ಪ್ರ ಮನ್ಮಹೇ**—ಚೆನ್ನಾಗಿ ತಿಳಿದುಕೊಳ್ಳೋಣ (ಮಾಡೋಣ) । **ಸುವೃಕ್ತಿಭಿಃ**—ಚೆನ್ನಾಗಿ ಅಭಿಮುಖೀಕರಣ ಮಾಡಿಕೊಳ್ಳಬಲ್ಲ ಸ್ತೋತ್ರಗಳಿಂದ । **ಸ್ತುವತೇ**—ಸ್ತುತಿಸುವವನಿಗೆ (ಸ್ತುತಿಸುವವನಾದ) । **ಋಗ್ಮಿಯಾಯ**—ಅರ್ಚನೀಯನಾದ (ಸ್ತುತ್ಯನಾದ) । **ನರೇ**—ಎಲ್ಲರಿಗೂ ನೇತೃವಾದ । **ವಿಶ್ರುತಾಯ**—ಯಜ್ಞದಲ್ಲಿ ಪೂಜಿಸಲ್ಪಡತಕ್ಕವನೆಂದು

ಪ್ರಸಿದ್ಧನಾದ (ಇಂದ್ರನಿಗೆ) । **ಅರ್ಕಂ**— ಮಂತ್ರರೂಪವಾದ ಸ್ತೋತ್ರವನ್ನು । **ಅರ್ಚಾಮ**— ಪೂಜಿಸೋಣ (ಉಚ್ಚರಿಸೋಣ).

॥ ಭಾವಾರ್ಥ ॥

ತನ್ನ ಬಲದಿಂದ ಶತ್ರುನಾಶಕನೂ, ಸ್ತೋತ್ರಗಳಿಂದ ಸ್ತುತ್ಯನೂ ಆದ ಇಂದ್ರನಿಗೆ ಸುಖವನ್ನುಂಟುಮಾಡುವ ಸ್ತೋತ್ರಗಳನ್ನು ಚೆನ್ನಾಗಿ ತಿಳಿದುಕೊಂಡು ಮಾಡೋಣ. ಅವನನ್ನು ಸುಲಭವಾಗಿ ಪ್ರಸನ್ನೀಕರಿಸಿಕೊಳ್ಳುವ ಮಂತ್ರಗಳಿಂದ ಸ್ತುತಿಸುವವರಿಂದ ಸುಲಭವಾಗಿ ಸ್ತುತ್ಯನೂ, ಎಲ್ಲರಿಗೂ ಮುಖಂಡನೂ ಯಜ್ಞದಲ್ಲಿ ಪೂಜಿಸಲ್ಪಡತಕ್ಕವನೆಂದು ಪ್ರಸಿದ್ಧನೂ ಆದ ಇಂದ್ರನನ್ನು ಮಂತ್ರಗಳಿಂದ ಸ್ತುತಿಸೋಣ

English Translation

We meditate, like Angiras, an acceptable prayer to that powerful and praise-deserving Indra, who is to be adored by his worshippers with prayers of efficacy to bring him to the ceremoney, let us recite a prayer to the celebrated leader (Indra) of all

॥ ವಿಶೇಷವಿಷಯಗಳು ॥

**ಮನ್ಮಹೇ—ಮನು ಅವಬೋಧನೇ ।** ತಿಳಿದುಕೊಳ್ಳೋಣ ಎಂದರೆ ಚೆನ್ನಾಗಿ ತಿಳಿದುಕೊಂಡು ಮಾಡೋಣ ಎಂದಭಿಪ್ರಾಯವು

**ಶವಸಾನಾಯ**—ಶವಃ ಎಂದರೆ ಬಲವು (ನಿ ೩-೯) ಶವಸಾನ ಎಂದರ ಬಲದಂತೆ ಆಚರಿಸುವವನು, ಬಲಪ್ರಯೋಗದಿಂದ ಶತ್ರುಗಳನ್ನು ಗೆಲ್ಲುವವನು ಎಂದಭಿಪ್ರಾಯವು

**ಶೂಷಂ**—ಶಿಂಬಾತಾ, ಶತರಾ ಮೊದಲಾದ ಇಪ್ಪತ್ತು ಸುಖನಾಮಗಳ ಮಧ್ಯದಲ್ಲಿ ಶೂಷಂ ಎಂಬ ಶಬ್ದವು ಪಠಿತವಾಗಿರುವುದರಿಂದ ಶೂಷಂ ಎಂದರೆ ಸುಖವು ಅಥವಾ ಸುಖಕರವಾದ (ನಿ ೩-೧೩).

**ಆಂಗೂಷಂ—ಆಂಗೂಷಃ ಸ್ತೋಮ ಆಘೋಷಃ** (ನಿ. ೫-೧೧) ಆಂಗೂಷವೆಂದರೆ ಸ್ತೋತ್ರವು.

**ಗಿರ್ವಣಸೇ— ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯಂತಿ** (ನಿ. ೬-೧೪) ಸ್ತುತಿಗಳಿಂದ ಹೊಂದಲ್ಪಡುವವನು ಎಂದರೆ ಸ್ತೋತ್ರಮಾಡಲ್ಪಡಲರ್ಹನು, ಸ್ತುತ್ಯನು.

**ಅಂಗಿರಸ್ವತ್**—ಅಂಗಿರಾಃ ಎಂಬ ಋಷಿಯು ಬಹಳ ಪ್ರಸಿದ್ಧನು. ಮತ್ತು ಅನೇಕ ಋಷಿಗಳಿಗೆ ಮೂಲ ಪುರುಷನು ಇವನ ಹೆಸರು ಋಗ್ವೇದದಲ್ಲಿ ಅನೇಕಕಡೆ ಪ್ರಸ್ತಾಪಿಸಲ್ಪಟ್ಟಿರುವುದು ಈ ಅಂಗಿರಾಋಷಿಯ ವಿಷಯವಾಗಿ ನಾವು ಋ. ಸಂ ಭಾಗ ೩ ಪೇಜು 520-522, ಭಾಗ ೪ ಪೇಜು 552 ರಲ್ಲಿ ಬರೆದಿರುವುದನ್ನು ನೋಡಿ.

**ಸುವೃಕ್ತಿಭಿಃ—ವೃಜೀ ವರ್ಜನೇ । ಶೋಭನಮಾವರ್ಜಿತೋ ಭವತ್ಯೇಭಿರಿತಿ ಸುವೃಕ್ತಯಃ ಸ್ತೋತ್ರಾಣಿ ತೈಃ ।** ಉತ್ತಮವಾದ ವಾಕ್ಯಗಳುಳ್ಳ ಸ್ತೋತ್ರಗಳಿಂದ.

**ಋಗ್ಮಿಯಾಯ— ಋಚ ಸ್ತುತೌ । ಋಗ್ಮಂ ಸ್ತುತಿಮರ್ಹತೀತಿ ಋಗ್ಮಿಯಃ ।** ಋಕ್ಕುಗಳಿಂದ ಅಥವಾ ಮಂತ್ರಗಳಿಂದ ಸ್ತುತಿಸಲ್ಪಡಲು ಯೋಗ್ಯನಾದ

**ಅರ್ಚಾಮ**— ಪೂಜಿಸೋಣ ಎಂದರೆ ಸ್ತೋತ್ರಗಳನ್ನು ಪಠಿಸೋಣ

**ಅರ್ಕಂ— ಅರ್ಚ್ಯತೇಽನೇನೇತ್ಯರ್ಕಃ ।** ಇದರಿಂದ (ಮಂತ್ರದಿಂದ) ಪೂಜಿಸಲ್ಪಡುವ ಅಥವಾ ಸ್ತುತಿಸಲ್ಪಡುವುದರಿಂದ ಅರ್ಕಂ ಎಂದರೆ ಮಂತ್ರವು.

**ನರೇ**- ನೃಶಬ್ದದ ಚತುರ್ಥೀ ಏಕವಚನವು ನಾಯಕನಾದ, ಜನರ ಮುಖಂಡನಾದ (ಇಂದ್ರನಿಗಾಗಿ)

**ವಿಶ್ರುತಾಯ—ಶ್ರು ಶ್ರವಣೇ । ಯಷ್ಟೃವ್ಯತಯಾ ವಿಶೇಷೇಣ ಪ್ರಖ್ಯಾತಾಯ ।** ಯಜ್ಞಾದಿಗಳಿಂದ ಆರಾಧಿಸಲ್ಪಡುವ ವಿಷಯದಲ್ಲಿ ಪ್ರಸಿದ್ಧನಾದ (ಇಂದ್ರನಿಗಾಗಿ)

॥ ವ್ಯಾಕರಣಪ್ರಕ್ರಿಯಾ ॥

**ಮನ್ಮಹೇ**—ಮನು ಅವಬೋಧನೇ ಧಾತು. ತನಾದಿ ಉತ್ತಮಪುರುಷ ಬಹುವಚನದ ಮಹಿಙ್‌ಗೆ **ಟಿತ ಆತ್ಮನೇಪದಾನಾಂ**—ಸೂತ್ರದಿಂದ ಏತ್ವ **ತನಾದಿಕೃಞ್ಭ್ಯ ಉಃ** ಎಂಬುದರಿಂದ ಉ ವಿಕರಣ ಮನ್+ ಉ+ಮಹೇ ಎಂದಿರುವಾಗ **'ಲೋಪಶ್ಚಾಸ್ಯಾನ್ಯತರಸ್ಯಾಂ ಮ್ವೋಃ'** (ಪಾ ಸೂ ೬ ೪-೧೦೭) ಎಂಬುದರಿಂದ ಅಸಂಯೋಗಪೂರ್ವಕವಾಗಿ ಮಕಾರಾದಿ ಪ್ರತ್ಯಯ ಪರದಲ್ಲಿರುವುದರಿಂದ ಉಕಾರಕ್ಕೆ ಲೋಪ ಮನ್ಮಹೇ ಎಂದು ರೂಪವಾಗುತ್ತದ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದ

**ಶವಸಾನಾಯ—**ಶವ ಇವ ಆಚರತಿ ಶವಸ್ಯತೇ ಉಪಮಾನಾದಾಚಾರೇ ಎಂಬುದರಿಂದ ಉಪಮಾನಾತ್ ಎಂದು ಅನುವೃತ್ತವಾಗುವಾಗ **'ಕರ್ತುಃ ಕ್ಯಙ್ ಸಲೋಪಶ್ಚ'** (ಪಾ. ಸೂ ೩-೧-೧೧) ಎಂಬುದರಿಂದ ಕ್ಯಙ್ ಶವಸ್ಯ ಎಂಬ ಕ್ಯಙಂತದ ಮೇಲೆ ಲಡರ್ಥದಲ್ಲಿ ಶಾನಚ್ **ಬಹುಲಂ ಛಂದಸಿ** ಎಂಬುದರಿಂದ **ಕರ್ತರಿ ಶಪ್** ಸೂತ್ರದಿಂದ ಪ್ರಾಪ್ತವಾದ ಶಪ್ಪಿಗೆ ಲುಕ್. ಶವಸ್ಯ+ಆನ ಎಂದಿರುವಾಗ **ಛಂದಸ್ಯುಭಯಥಾ** ಎಂಬುದರಿಂದ ಶಾನಚ್ ಶಿತ್ತಾದರೂ ಆರ್ಧಧಾತುಕಸಂಜ್ಞೆಯನ್ನು ಹೊಂದುವುದರಿಂದ **ಅತೋ ಲೋಪಃ** ಎಂಬುದರಿಂದ ಕ್ಯಙ್‌ನ ಅಕಾರಕ್ಕೆ ಲೋಪ. **ಯಸ್ಯ ಹಲಃ** ಸೂತ್ರದಿಂದ ಯಕಾರಲೋಪ ಶವಸಾನ ಶಬ್ದನಾಗುತ್ತದೆ ಚತುರ್ಥೀ ಏಕವಚನರೂಪ **ಚಿತಃ** ಎಂಬುದರಿಂದ ಶಾನಚ್ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದ ಇಲ್ಲಿ ಕ್ಯಙ್ ಙಿತ್ತಾದುದರಿಂದ ಅದರ ಪರದಲ್ಲಿ ಲಸಾರ್ವಧಾತುಕವಾದ ಶಾನಚ್ ಬಂದುದರಿಂದ **ತಾಸ್ಯನುದಾತ್ತೇತ್** ಸೂತ್ರದಿಂದ ಶಾನಚ್ ಅನುದಾತ್ತವಾಗಬೇಕಾಗುತ್ತದೆ. ಹೀಗಿರುವಾಗ ಅಂತೋದಾತ್ತಸ್ವರವು ಹೇಗೆ ಬರುತ್ತದೆ? ಎಂದರೆ ಆಗ ತಚ್ಛೀಲಾರ್ಥದಲ್ಲಿ ಬರುವ ಚಾನಶನ್ನು ಇಲ್ಲಿ ಹೇಳಬೇಕು ಚಾನಶ್ ಶಿತ್ತಾದುದರಿಂದ **ತಿಙ್ ಶಿತ್ ಸಾರ್ವಧಾತುಕಮ್** ಎಂಬುದರಿಂದ ಸಾರ್ವಧಾತುಕ ಸಂಜ್ಞೆಯನ್ನು ಹೊಂದಿದರೂ ಲಸ್ಥಾನದಲ್ಲಿ ವಿಧಿಸಲ್ಪಡದಿರುವುದರಿಂದ ಲಸಾರ್ವಧಾತುಕಕ್ಕೆ, **ತಾಸ್ಯನುದಾತ್ತೇತ್** ಸೂತ್ರದಲ್ಲಿ ಅನುದಾತ್ತಸ್ವರವನ್ನು ಹೇಳಿರುವುದರಿಂದ **ಚಿತಃ** ಎಂಬುದರಿಂದ ಇಲ್ಲಿ ಅಂತೋದಾತ ಸ್ವರ ಬರಲು ಯಾವ ಅಭ್ಯಂತರವೂ ಇಲ್ಲ

**ಶೂಷಂ**—ಶೂಷ ಪ್ರಸವೇ ಧಾತು ಪಚಾದಿಯಲ್ಲಿ ಸೇರಿರುವುದರಿಂದ **' ನಂದಿಗ್ರಹ ಪಚಾದಿಭ್ಯಃ '** (ಪಾ ಸೂ. ೩-೧-೧೩೪) ಎಂಬುದರಿಂದ ಅಚ್ ಲಘೂಪಧೆ ಇಲ್ಲದಿರುವುದರಿಂದ ಗುಣ ಬರುವುದಿಲ್ಲ ಇಲ್ಲಿಯೂ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದ

**ಆಂಗೂಷಂ**—ಆಙ್ ಉಪಸರ್ಗ ಘುಷಿರ್ ವಿಶಬ್ದನೇ ಧಾತು ಪಚಾದಿಯಲ್ಲಿರುವುದರಿಂದ ಹಿಂದಿನ ಸೂತ್ರದಿಂದ ಅಚ್ **ಪುಗಂತಲಘೂಪಧಸ್ಯ ಚ** ಎಂಬುದರಿಂದ ಗುಣ ಇದು ಪೃಷೋದರಾದಿಯಲ್ಲಿ ಸೇರಿರುವುದರಿಂದ ಆಙ್‌ಘೋಷ ಎಂಬಲ್ಲಿರುವ ಘೋ ಎಂಬ ದಕ್ಕೆ ಗೂ ಎಂಬಾದೇಶವು **ಪೃಷೋದರಾದೀನಿ ಯಥೋಪದಿಷ್ಟಮ್** ಎಂಬುದರಿಂದ ಸಿದ್ಧವಾಗುತ್ತದೆ **' ಹಲಂತ್ಯಮ್ '** (ಪಾ ಸೂ ೧-೩-೩) ಸೂತ್ರದಿಂದ ಆಙ್‌ನ ಙಕಾರಕ್ಕ ಇತ್ ಸಂಜ್ಞೆಯು ಪ್ರಾಪ್ತವಾದರೂ ಇಲ್ಲಿ ಛಾಂದಸವಾಗಿ ಬರುವುದಿಲ್ಲ. ಅಜಂತವಾದುದರಿಂದ ಚಿತ್ಸ್ವರದಿಂದ ಘೋಷ ಎಂಬ ಉತ್ತರ ಪದವು ಅಂತೋದಾತ್ತವಾಗುವಾಗ ಆಙ ಎಂಬ ಗತಿಯೊಡನೆ ಸಮಾಸವಾದುದರಿಂದ **ಗತಿಕಾರಕೋಪಪದಾತ್‌ಕೃತ್** ಸೂತ್ರದಿಂದ ಕೃದುತ್ತರಪದಪ್ರಕೃತಿ ಸ್ವರವೇ ಉಳಿಯುತ್ತದ ಅಥವಾ ಘುಷ ಧಾತುವಿಗೆ ಘಞ್ ಮಾಡಿದಾಗಲೂ ಘೋಷ ಎಂದು ರೂಪವಾಗುತ್ತೆ ಆಗ **ಥಾಥಘಞ್‌ಕ್ತಾಜ** (ಪಾ ಸೂ ೬-೨-೧೪೪) ಎಂಬುದರಿಂದ ಅಂತೋದಾತ್ತಸ್ವರ ಬರತ್ತದ

**ಗಿರ್ವಣಸೇ**— ಗೄ ಶಬ್ದೇ ಧಾತು. **ಸಂಪದಾದಿಭ್ಯಃ ಕ್ವಿಪ್** (ವಾ ೨೨೩೩) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ **ಋತಇದ್ಧಾತೋಃ** (ಪಾ ಸೂ ೭-೧-೧೦೦) ಎಂಬುದರಿಂದ ಧಾತುವಿಗೆ ಇತ್ವ ಋಕಾರದ ಸ್ಥಾನಕ್ಕೆ ಬರುವುದರಿಂದ **ಉರಣ್‌ರಪರಃ** ಎಂಬುದರಿಂದ ರಪರವಾಗಿ ಬರುವುದರಿಂದ ಇರ್ ಎಂದು ಬರುತ್ತದೆ. ಗಿರ್ ಶಬ್ದವಾಗುತ್ತದ ಗೀರ್ಭಿರ್ವನ್ಯತೇ ಸಂಭಜ್ಯತೇ ಇತಿ ಗಿರ್ವಣಾ ವನ ಸಂಭಕ್ತೌ ಧಾತು ಕರ್ಮಾರ್ಥದಲ್ಲಿ ಔಣಾದಿಕವಾದ ಅಸುನ್ ಗಿರ್ವಣಸ್ ಶಬ್ದವಾಗುತ್ತದ ಯದ್ಯಪಿ **ಹಲಿಚ**— (ಪಾ ಸೂ ೮-೨-೭೭) ಸೂತ್ರದಿಂದ ರೇಫಾಂತದ ಇಕ್ಕಿಗೆ ದೀರ್ಘವು ಪ್ರಾಪ್ತವಾಗುತ್ತದ ಆದರೆ **ಸಂಜ್ಞಾಪೂರ್ವಕೋ ವಿಧಿರನಿತ್ಯಃ** (ಪರಿ ೯೩) ಎಂಬ ವಚನದಿಂದ ಇಲ್ಲಿ ಅನಿತ್ಯಾಶ್ರಯಣದಿಂದ ದೀರ್ಘ ಬರುವುದಿಲ್ಲ **ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚ** (ಉ ಸೂ ೪-೬೭೬) ಎಂಬ ವಚನದಿಂದ ಪೂರ್ವಪದ ಪ್ರಕೃತಿಸ್ವರವು ಬರುತ್ತದ

**ಅಂಗಿರಸ್ವತ್**—ಅಂಗಿರಸಃ ಇವ ಅಂಗಿರಸ್ವತ್ **ತೇನ ತುಲ್ಯಂ ಕ್ರಿಯಾಚೇದ್ವತಿಃ** (ಪಾ ಸೂ ೫-೧-೧೧೫) ಎಂಬುದರಿಂದ ಪ್ರತಿಪ್ರತ್ಯಯ. ಅಂಗಿರಸ್+ವತ್ ಎಂದಿರುವಾಗ ರುತ್ವವು ಪ್ರಾಪ್ತವಾದರೆ **ನಭೋಂಗಿರೋಮನುಷಾಂ ವತ್ಯುಪಸಂಖ್ಯಾನಮ್** (ಪಾ ಸೂ ೧-೪-೧೮ ೩) ಎಂಬುದರಿಂದ ಭಸಂಜ್ಞೆಯು ವಿಶೇಷವಾಗಿ ಬರುವುದರಿಂದ ಪದಾಂತತ್ವ ಇಲ್ಲದಿರುವುದರಿಂದ ರುತ್ವಾದಿಗಳು ಬರುವುದಿಲ್ಲ ಅಂಗಿರಸ್ವತ್ ಎಂದು ರೂಪವಾಗುತ್ತದೆ ಪ್ರತ್ಯಯದ ಆದ್ಯುದಾತ್ತಸ್ವರದಿಂದ ವಕಾರೋತ್ತರಾಕಾರವು ಉದಾತ್ತವಾಗುತ್ತದ

**ಸುವೃಕ್ತಿಭಿಃ** -- ವೃಜೀ ವರ್ಜನೇ ಧಾತು ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ **ತಿತುತ್ರತಥಸಿ**— (ಪಾ ಸೂ ೭-೨-೯) ಎಂಬುದರಿಂದ ಅದಕ್ಕೆ ಇಣ್ನಿಷೇಧ **ಚೋಃಕುಃ** ಎಂಬುದರಿಂದ ಧಾತುವಿನ ಜಕಾರಕ್ಕೆ ಕುತ್ವದಿಂದ ಚಕಾರಾದೇಶ ಪ್ರತ್ಯಯಕಿತ್ತಾದುದರಿಂದ ಲಘೂಪಧಗುಣನಿಷೇಧ ವೃಕ್ತಿ ಶಬ್ದವಾಗುತ್ತದ

ಶೋಭನಂ ವ್ಯಕ್ತಿಃ ಆವರ್ಜನಂ ಯೇಷಾಂ ತೇ ಸುವೃಕ್ತಯಃ ತೈಃ ಬಹುವ್ರೀಹಿಸಮಾಸ. ನಞ್ಸುಭ್ಯಾಂ (ಪಾ ಸೂ ೬-೨-೧೭೨) ಸೂತ್ರದಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ ಇಲ್ಲಿ ವ್ಯಕ್ತಿ ಎಂಬುದು ಕ್ತಿನ್ನಂತವಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುವರಿಂದ ಆದ್ಯುದಾತ್ತವಾದಾಗ ಸಮಾಸವಾದ ಮೇಲೆ **ಆದ್ಯುದಾತ್ತಂ ದ್ವ್ಯಚ್‌ಛಂದಸಿ** (ಪಾ ಸೂ ೬-೨-೧೧೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರವೇ ಪ್ರಾಪ್ತವಾಗುವಾಗ **ನಞ್‌ಸುಭ್ಯಾಂ** ಸೂತ್ರಕ್ಕೆ ಪ್ರವೃತ್ತಿ ಹೇಗೆ? ಎಂದು ಪ್ರಶ್ನೆ ಬರುತ್ತದೆ ಹಾಗಾದರೆ ಇಲ್ಲಿ ತತ್ಪುರುಷ ಸಮಾಸವೇ ಮಾಡುತ್ತೇವೆ ಶೋಭನಮಾವರ್ಜಿತೋ ಭವತ್ಯೇಭಿರಿತಿ ಸುವೃಕ್ತಯಃ ಸ್ತೋತ್ರಾಣಿ. ಕರಣಾರ್ಥದಲ್ಲಿ ಪೂರ್ವೋಕ್ತವಾದ ಧಾತುವಿಗೆ ಕ್ತಿನ್. ಸುವೃಕ್ತಿಶಬ್ದ ಇಲ್ಲಿಯೂ **ತಾದೌಚ ನಿತಿ** (ಪಾ. ಸೂ. ೬-೨-೫೦) ಎಂಬುದರಿಂದ ನಿತ್ತಾದ ತಾದಿ ಪ್ರತ್ಯಯಾಂತವು ಉತ್ತರಪದವಾಗಿರುವುದರಿಂದ ಗತಿಗೆ ಪ್ರಕೃತಿಸ್ವರವು ಪ್ರಾಪ್ತವಾದರೆ **ಮನ್‌ಕ್ತಿನ್‌ವ್ಯಾ-** (ಪಾ. ಸೂ ೬-೨-೧೫೧) **ಎಂಬ ಸೂತ್ರದಲ್ಲಿ** ಕಾರಕದ ಪರದಲ್ಲಿರುವ ಕ್ತಿನ್ನಂತವಾದ ಉತ್ತರಪದಕ್ಕೆ ಅಂತೋದಾತ್ತವನ್ನು ವಿಧಿಸಿದರೂ **ವ್ಯತ್ಯಯೋ ಬಹುಲಂ** ಎಂಬುದರಿಂದ ವ್ಯತ್ಯಯದಿಂದ ಅದೇ ಸೂತ್ರದಿಂದ ಕಾರಕವಲ್ಲದಿರುವ ಪೂರ್ವಪದದ ಪರದಲ್ಲಿರುವ ಕ್ತಿನ್ನಂತೋತ್ತರಪದಕ್ಕೆ ಅಂತೋದಾತ್ತಸ್ವರವು ಬರುತ್ತದೆ

**ಸ್ತುವತೇ**— ಷ್ಟುಞ್ ಸ್ತುತೌ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ **ಅಚಿಶ್ನುಧಾತುಭ್ರುವಾಂ**— ಸೂತ್ರದಿಂದ ಉಕಾರಕ್ಕೆ ಉವಙಾದೇಶ. ಸ್ತುವತ್ ಶಬ್ದದ ಚತುರ್ಥೀ ಏಕವಚನರೂಪ **ಶತುರನುಮೋನದ್ಯಜಾದೀ**— (ಪಾ. ಸೂ ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಋಗ್ಮಿಯಾಯ— ಏಕಾಚೋ ನಿತ್ಯಂ ಮಯಟಮಿಚ್ಛಂತಿ** (ಕಾ ४ ३-೧೧४) ಎಂಬುದರಿಂದ ಏಕಾಚುಳ್ಳ ಋಕ್‌ಶಬ್ದದ ಮೇಲೆ ವಿಕಾರಾರ್ಥನಲ್ಲಿ ಮಯಟ್ ಋಚ್+ಮಯ ಎಂದಿರುವಾಗ **ಸ್ವಾದಿಷ್ವಸರ್ವನಾಮಸ್ಥಾನೇ** (ಪಾ ಸೂ ೧-೪-೧೭) ಸೂತ್ರದಿಂದ ಪೂರ್ವಕ್ಕೆ ಪದಸಂಜ್ಞಾ ಬರುತ್ತದೆ **ಚೋಃಕು.** ಎಂಬುದರಿಂದ ಚಕಾರಕ್ಕೆ ಕುತ್ವದಿಂದ ಕಕಾರಾದೇಶ. **ಝಲಾಂ ಜಶೋಂತೇ** ಎಂಬುದರಿಂದ ಅದಕ್ಕೆ ಜಸ್ತ್ವದಿಂದ ಗಕಾರ. ವ್ಯತ್ಯಯದಿಂದ ಮಯಟ್ಟಿನ ಅಕಾರಕ್ಕೆ ಇಕಾರಾದೇಶ ಋಗ್ಮಿಯ ಎಂದು ಶಬ್ದವಾಗುತ್ತದೆ ಚತುರ್ಥೀ ಏಕವಚನದ ರೂಪ ಅಥವಾ ಋಚ ಸ್ತುತೌ ಧಾತು ಇದಕ್ಕೆ ಭಾವಾರ್ಥದಲ್ಲಿ ಮಕ್ **ಉಣಾದಯೋಬಹುಲಂ** ಎಂಬಲ್ಲಿ ಬಹುವಚನದಿಂದ ಚಕಾರಕ್ಕೆ ಎಂದಿನಂತೆ ಕುತ್ವ, ಜಸ್ತ್ವ. ಋಗ್ಮಂ ಸ್ತುತಿಂ ಅರ್ಹತಿ ಇತಿ ಋಗ್ಮಿಯಃ. ಅರ್ಹ ಎಂಬರ್ಥದಲ್ಲಿ ಘಚ್ ಪ್ರತ್ಯಯ **ಆಯನೇಯಿ**— ಸೂತ್ರದಿಂದ ಅದಕ್ಕೆ ಇಯಾದೇಶ ಋಗ್ಮಿಯ ಎಂದು ಹಿಂದಿನಂತೆಯೇ ರೂಪವಾಗುತ್ತದೆ **ಚಿತಃ** ಎಂಬುದರಿಂದ ಚಿತ್ ಪ್ರತ್ಯಯಾಂತವಾದುದರಿಂದ ಅಂತೋದಾತ್ತಸ್ವರ ಬರುತ್ತದೆ

**ಅರ್ಚಾಮ** -ಅರ್ಚ ಪೂಜಾಯಾಂ ಧಾತು ಭ್ವಾದಿ **ಲೋಟೋ ಲಙ್ವತ್** ಎಂದು ಅತಿದೇಶಮಾಡಿರುವುದರಿಂದ **ಲೋಟಿನ** ಮಸ್ಸಿನ ಸಕಾರಕ್ಕೆ **ನಿತ್ಯಂ ಙಿತಃ** ಎಂಬುದರಿಂದ ಲೋಪ. ಶಪ್ ವಿಕರಣ ಪ್ರತ್ಯಯಕ್ಕೆ ಆಡಾಗಮ ಅರ್ಚಾಮ ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತವಾಗುತ್ತದೆ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುವಿನ ಅಂತೋದಾತ್ತಸ್ವರವು ಉಳಿಯುತ್ತದೆ

**ಅರ್ಕಮ್**— ಅರ್ಚ್ಯತೇ ಅನೇನ ಇತಿ ಅರ್ಕಃ **ಪುಂಸಿಸಂಜ್ಞಾಯಾಂ ಘಃ ಪ್ರಾಯೇಣ** ( ಪಾ ಸೂ ೩-೩-೧೧೮ ) ಎಂಬುದರಿಂದ ಸಂಜ್ಞಾ ತೋರುವುದರಿಂದ ಘ ಪ್ರತ್ಯಯು. ಅ ಉಳಿಯುತ್ತದೆ **ಚಜೋಃಕುಘಿಣ್ಯತೋಃ** (ಪಾ ಸೂ ೭-೩-೫೨) ಎಂಬುದರಿಂದ ಘಿತ್ತಾದ ಪ್ರತ್ಯಯು ಪರದಲ್ಲಿರುವುದರಿಂದ ಧಾತುವಿನ ಚಕಾರಕ್ಕೆ ಕುತ್ವದಿಂದ ತಕಾರಾದೇಶ ಅರ್ಕ ಎಂದು ರೂಪವಾಗುತ್ತದೆ ದ್ವಿತೀಯೈಕವಚನರೂಪ

**ನರೇ**-- ನೃ+ಏ ಎಂದು ಚತುರ್ಥೀ ಏಕವಚನಪರದಲ್ಲಿರುವಾಗ ಛಾಂದಸವಾಗಿ ಗುಣ ಬರುತ್ತದೆ. ರಪರವಾಗಿ ಬರುವುದರಿಂದ ನರೇ ಎಂದು ರೂಪವಾಗುತ್ತದೆ

**ವಿಶ್ರುತಾಯ**— ಶ್ರು ಶ್ರವಣೇ ಧಾತು ಕರ್ಮಾರ್ಥದಲ್ಲಿ ಕ್ತ ಪ್ರತ್ಯಯು ಕಿತ್ತಾದುದರಿಂದ ಗುಣ ಬರುವುದಿಲ್ಲ **ಗತಿರನಂತರಃ** (ಪಾ. ಸೂ ೬-೨-೪೯) ಎಂಬುದರಿಂದ ವಿ ಎಂಬ ಗತಿಯೊಡನೆ ಸಮಾಸವಾದಾಗ ಗತಿಗೆ ಪ್ರಕೃತಿಸ್ವರ ಬರುತ್ತದ ॥ ೧ ।



॥ ಸಂಹಿತಾಪಾಠಃ ॥

ಪ್ರ ವೋ ಮಹೇ ಮಹಿ ನಮೋ ಭರಧ್ವಮಾಂಗೂಷ್ಯಂ

ಶವಸಾನಾಯ ಸಾಮ ।

ಯೇನಾ ನಃ ಪೂರ್ವೇ ಪಿತರಃ ಪದಜ್ಞಾ ಅರ್ಚಂತೋ ಅಂಗಿರಸೋ

ಗಾ ಅವಿಂದನ್ ॥ ೨ ॥

॥ ಪದಪಾಠಃ ॥

**ಪ್ರ । ವಃ । ಮಹೇ । ಮಹಿ । ನಮಃ । ಭರಧ್ವಂ । ಆಂಗೂಷ್ಯಂ । ಶವಸಾನಾಯ ।**

**ಸಾಮ ॥**

ಯೇನ । ನಃ । ಪೂರ್ವೇ । ಪಿತರಃ । ಪದಽಜ್ಞಾಃ । ಅರ್ಚಂತಃ । ಅಂಗಿರಸಃ ।
ಗಾಃ । ಅವಿಂದನ್ ॥ ೨ ॥

॥ ಸಾಯಣಭಾಷ್ಯಂ ॥

ಹೇ ಋತ್ವಿಜೋ ವೋ ಯೂಯಂ ಮಹೇ ಮಹತೇ ಶವಸಾನಾಯ ಬಲಮಿವಾಚರತೇ । ಅತಿಬಲಾಯೇತ್ಯರ್ಥಃ ಉತ್ತರವಾಕ್ಯೇ ಯಚ್ಛಬ್ದಶ್ರುತೇಸ್ತಚ್ಛಬ್ದಾಧ್ಯಾಹಾರಃ । ಏವಂಭೂತಾಯ ತಸ್ಮಾ ಇಂದ್ರಾಯ ಮಹಿ ಮಹತ್ಪ್ರೌಢಂ ನಮಃ ಸ್ತೋತ್ರಂ ಪ್ರ ಭರಧ್ವಂ । ಪ್ರಕರ್ಷೇಣ ಸಂಪಾದಯತ । ಕಿಂ ತತ್ಸ್ತೋತ್ರಮಿತ್ಯಾಹ । ಆಂಗೂಷ್ಯಂ ಸಾಮ ಆಘೋಷಯೋಗ್ಯಂ ರಥಂತರಾದಿ ಸಾಮ । ತನ್ನಿಷ್ಪಾದ್ಯತಾಮಿತ್ಯರ್ಥಃ । ಅಭಿ ತ್ವಾ ಶೂರೇತ್ಯಾದಿಷ್ವೃಕ್ಷು ಯದ್ಗಾನಂ ತಸ್ಯ ಸಾಮೇತ್ಯಾಖ್ಯಾ । ತಥಾ ಚೋಕ್ತಂ । ಗೀತಿಷು ಸಾಮಾಖ್ಯೇತಿ । ಯೇನೇಂದ್ರೇಣ ನೋಽಸ್ಮಾಕಂ ಪಿತರಃ ಪಿತೃವಿಶೇಷಾಃ ಪೂರ್ವೇ ಪೂರ್ವಪುರುಷಾ ಅಂಗಿರಸಃ ಪಣಿನಾಮ್ನಾಸುರೇಣಾಪಹೃತಾನಾಂ ಗವಾಂ ಪದಜ್ಞಾ ಮಾರ್ಗಜ್ಞಾಃ ಸಂತೋಽತ ಏವಾರ್ಚಂತಸ್ತಂ ಪೂಜಯಂತೋ ಗಾ ಅವಿಂದನ್ । ಅಲಭಂತ ॥ ವಃ ಪ್ರಥಮಾರ್ಥೇ ದ್ವಿತೀಯಾ । ಪದಜ್ಞಾಃ ಪದಾನಿ ಜಾನಂತೀತಿ । ಆತೋಽನುಪಸರ್ಗೇ ಕ ಇತಿ ಕಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಅವಿಂದನ್ । ವಿದ್ಲೃ ಲಾಭೇ । ಶೇ ಮುಚಾದೀನಾಮಿತಿ ನುಮಾಗಮಃ ॥

॥ ಪ್ರತಿಪದಾರ್ಥ ॥

**ಯೇನ**—ಯಾವ ಇಂದ್ರನಿಂದ । **ನಃ**- ನಮ್ಮ । **ಪೂರ್ವೇ**—ಪೂರ್ವಿಕರಾದ । **ಪಿತರಃ** ಪಿತೃಗಳಾದ । **ಅಂಗಿರಸಃ**—ಅಂಗಿರಸರೆಂಬುವರು । **ಪದಜ್ಞಾಃ**—(ಪಣಿನಾಮಕ ರಾಕ್ಷಸನಿಂದ ಅಪಹೃತವಾದ ಗೋವುಗಳ) ಮಾರ್ಗವನ್ನು ತಿಳಿದವರಾಗಿ । **ಅರ್ಚಂತಃ**—(ಆ ಇಂದ್ರನನ್ನು) ಪೂಜಿಸುವವರಾಗಿ । **ಗಾಃ**--ಆ ಗೋವುಗಳನ್ನು **ಅವಿಂದನ್**—ಪುನಃ ಪಡೆದರೋ । (**ತಸ್ಮೈ**—ಅಂತಹ) । **ಮಹೇ**--ಮಹಾತ್ಮನಾದ । **ಶವಸಾನಾಯ**—ಬಲದಂತೆ ಆಚರಿಸುವ (ಬಲಿಷ್ಠನಾದ) ಇಂದ್ರನಿಗೆ । **ಆಂಗೂಷ್ಯಂ ಸಾಮ**— ಘೋಷಿಸಲು ಯೋಗ್ಯವಾದ (ರಥಂತರಾದಿ) ಸಾಮರೂಪವಾದ । **ಮಹಿ**—ಪ್ರೌಢವಾದ । **ನಮಃ**—ಸ್ತೋತ್ರವನ್ನು । **ವಃ**—ನೀವು । **ಪ್ರ ಭರಧ್ವಂ**—ಸಂಪಾದಿಸಿರಿ

॥ ಭಾವಾರ್ಥ ॥

ಈ ಇಂದ್ರನಿಂದಲೇ ನಮ್ಮ ಪೂರ್ವಿಕರಾದ ಅಂಗಿರಸರೆಂಬ ಪಿತೃಗಳು ಪಣಿನಾಮಕ ರಾಕ್ಷಸನಿಂದ ಅಪಹೃತವಾದ ಗೋವುಗಳ ಮಾರ್ಗವನ್ನು ತಿಳಿದು, ಅವುಗಳನ್ನು ಹಿಂದಕ್ಕೆ ಪಡೆದರು. ಅಂತಹ ಮಹಾತ್ಮನಾದ ಬಲಿಷ್ಠನಾದ, ಇಂದ್ರನನ್ನು ಗಟ್ಟಿಯಾಗಿ ಘೋಷಿಸಬಹುದಾದ ರಥಂತರಾದಿ ಸಾಮಗಳಿಂದ ಸ್ತುತಿಸಿರಿ

## English Translation

Do you, priests, offer to the vast and most powerful Indra, a great hymn, fit to be chanted aloud, for through him our forefathers, the Angirasas, adoring him, and knowing the footmarks, recovered (the stolen) cattle

॥ ವಿಶೇಷವಿಷಯಗಳು ॥

**ಮಹೇ- ಮಹತೇ ।** ಹೆಚ್ಚಾದ

**ಮಹಿ – ಮಹತ್ ।** ಶ್ರೇಷ್ಠವಾದ, ಉತ್ತಮವಾದ

**ನಮಃ-** ಸ್ತೋತ್ರವನ್ನು ಅಥವಾ ನಮಸ್ಕಾರವನ್ನು

**ಆಂಗೂಷ್ಯಂ—ಆಘೋಷಯೋಗ್ಯಂ ರಥಂತರಾದಿ ಸಾಮ ।** ಘಟ್ಟಿಯಾಗಿ ಗಾನಮಾಡಲು ಯೋಗ್ಯವಾದ ರಥಂತರಾದಿ ಸಾಮಗಾನವನ್ನು

**ಪೂರ್ವೇ ಪಿತರಃ** ನಮ್ಮ ಪೂರ್ವಿಕರಾದ ಪಿತೃಗಳು, ಹಿರಿಯರು, ನಮಗಿಂತಲೂ ಹಿಂದಿನವರಾದ ನಮ್ಮ ವಂಶಜರು

**ಪದಜ್ಞಾಃ—ಪದಾನಿ ಜಾನಂತೀತಿ ಪದಜ್ಞಾಃ ಮಾರ್ಗಜ್ಞಾಃ ।** ಪಣಿ ಎಂಬ ಅಸುರನು ದೇವತೆಗಳ ಗೋವುಗಳನ್ನು ಅಪಹರಿಸಿ ಯಾರಿಗೂ ತಿಳಿಯದಂತೆ ಒಂದು ಗುಹೆಯಲ್ಲಿ ಬಚ್ಚಿಟ್ಟಿದ್ದನು. ಅದನ್ನು ಇಂದ್ರನು ಕಂಡುಹಿಡಿದು ಆ ದೈತ್ಯನನ್ನು ನಿಗ್ರಹಿಸಿ ಗೋವುಗಳನ್ನು ಹಿಂದಕ್ಕೆ ತಂದನೆಂದು ಪೂರ್ವೇತಿಹಾಸವಿರುವುದು ಇಲ್ಲಿ ಪದಜ್ಞಾಃ ಎಂದರೆ ಗೋವುಗಳನ್ನು ಬಚ್ಚಿಟ್ಟಿದ್ದ ಗುಹೆಯ ಮಾರ್ಗವನ್ನು ತಿಳಿದವರೆಂದಭಿಪ್ರಾಯವು ಪಣಿ ಎಂಬ ಅಸುರನ ವಿಷಯದಲ್ಲಿ ನಾವು ಬರೆದಿರುವ ವಿಶೇಷ ಸಂಗತಿಯನ್ನು ಋ. ಸಂ. ಭಾಗ ೩ ಪೇಜು 630 ನೋಡಿ

**ಅಂಗಿರಸಃ—** ಅಂಗಿರಾ ಋಷಿಯ ಪುತ್ರರು ಅಥವಾ ಅಂಗಿರಾ ಋಷಿಯ ವಂಶೋತ್ಪನ್ನರು

॥ ವ್ಯಾಕರಣಪ್ರಕ್ರಿಯಾ ॥

**ವಃ—** ವಿವಕ್ಷಾತಃ ಕಾರಕಾಣಿ ಎಂದುದರಿಂದ ಪ್ರಥಮಾರ್ಥದಲ್ಲಿ ದ್ವಿತೀಯಾ **ಬಹುವಚನಸ್ಯ ವಸ್ನಸೌ** (ಪಾ. ಸೂ ೮-೧-೨೧) ಎಂಬುದರಿಂದ ದ್ವಿತೀಯಾಂತವಾದ ಯುಷ್ಮಚ್ಛಬ್ದಕ್ಕೆ ವಸ್ ಆದೇಶ **ಅನುದಾತ್ತಂ-ಸರ್ವಮಪಾದಾದೌ** ಎಂಬುದರಿಂದ ಇದು ಅನುದಾತ್ತವಾಗಿ ಬರುತ್ತದೆ

**ಆಙ್ಗೂಷ್ಯಮ್—** ಹಿಂದಿನ ಮಂತ್ರದಲ್ಲಿ ಹೇಳಿದ ಪ್ರಕ್ರಿಯೆ **ಋಹಲೋರ್ಣ್ಯತ್** ಎಂಬುದರಿಂದ ಣ್ಯತ್

**ಪದಜ್ಞಾಃ—** ಪದಾನಿ ಜಾನಂತಿ ಇತಿ ಪದಜ್ಞಾಃ ಜ್ಞಾ ಅವಬೋಧನೇ ಧಾತು **ಆತೋಽನುಪಸರ್ಗೇ ಕಃ** (ಪಾ ಸೂ ೩-೨-೩) ಎಂಬುದರಿಂದ ಅನುಪಸರ್ಗ ಉಪಪದವಾಗಿರುವುದರಿಂದ ಕಪ್ರತ್ಯಯ **ಆತೋಲೋಪ ಇಟಿಚ**

ಎಂಬುದರಿಂದ ಕಿತ್ತಾದ ಪ್ರತ್ಯಯ ಪರದಲ್ಲಿರುವುದರಿಂದ ಧಾತುವಿನ ಆಕಾರಕ್ಕೆ ಲೋಪ ಪದಜ್ಞಾಃ ಪ್ರಥಮಾ ಬಹುವಚನರೂಪ. **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ

**ಅರ್ಚತಃ**—ಅರ್ಚ ಪೂಜಾಯಾಂ ಧಾತು ಲಡರ್ಥದಲ್ಲಿ ಶತೃಪ್ರತ್ಯಯ. ಪ್ರಥಮಾ ಬಹುವಚನದಲ್ಲಿ **ಉಗಿದಚಾಂ** ಸೂತ್ರದಿಂದ ನುಮಾಗಮ ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ ಬಂದರೆ ಅರ್ಚತಃ ಎಂದು ರೂಪವಾಗುತ್ತದೆ.

**ಅವಿಂದನ್**— ವಿದ್ಲೃ ಲಾಭೇ ಧಾತು ತುದಾದಿ ಲಙ್ ಪ್ರಥಮಪುರುಷ ಬಹುವಚನದ ಝಿಗೆ **ಝೋಂತಃ** ಎಂಬುದರಿಂದ ಅಂತಾದೇಶ **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ **ತುದಾದಿಭ್ಯಃಶಃ** ಎಂಬುದರಿಂದ ಶವಿಕರಣ ಶಪರದಲ್ಲಿರುವಾಗ **ಶೇಮುಚಾದೀನಾಂ** (ಪಾ ಸೂ ೭-೧-೫೯) ಎಂಬುದರಿಂದ ಇದು ಮುಚಾದಿಯಲ್ಲಿ ಸೇರಿರುವುದರಿಂದ ನುಮಾಗಮ ಬರುತ್ತದೆ ಅದಕ್ಕೆ **ನಶ್ಚಾಪದಾಂತಸ್ಯಝಲಿ** ಎಂಬುದರಿಂದ ಅನುಸ್ವಾರ **ಅನುಸ್ವಾರಸ್ಯಯಯಿ ಪರಸವರ್ಣಃ** ಎಂಬುದರಿಂದ ಅದಕ್ಕೆ ಪರಸವರ್ಣದಿಂದ ನಕಾರಾದೇಶ. ಪ್ರತ್ಯಯದ ತಕಾರಕ್ಕೆ **ಸಂಯೋಗಾಂತಸ್ಯಲೋಪಃ** ಎಂಬುದರಿಂದ ಲೋಪ ಅಂಗಕ್ಕೆ ಲಙ್ ನಿಮಿತ್ತಕವಾಗಿ ಅಡಾಗಮ ಅವಿನ್ದನ್ ಎಂದು ರೂಪವಾಗುತ್ತದೆ ಯೇನ ಎಂದು ಹಿಂದೆ ಯಚ್ಛಬ್ದದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಅಡುದಾತ್ತಃ ಎಂದುದರಿಂದ ಅವಿಂದನ್ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.



॥ ಸಂಹಿತಾಪಾಠಃ ॥

ಇಂದ್ರಸ್ಯಾಂಗಿರಸಾಂ ಚೇಷ್ಟೌ ವಿದತ್ಸರಮಾ ತನಯಾಯ
ಧಾಸಿಂ ।
ಬೃಹಸ್ಪತಿರ್ಭಿನದದ್ರಿಂ ವಿದದ್ಗಾಃ ಸಮುಸ್ರಿಯಾಭಿರ್ವಾವಶಂತ
ನರಃ ॥ ೩ ॥

॥ ಪದಪಾಠಃ ॥

ಇಂದ್ರಸ್ಯ । ಅಂಗಿರಸಾಂ । ಚ । ಇಷ್ಟೌ । ವಿದತ್ । ಸರಮಾ । ತನಯಾಯ । ಧಾಸಿಂ ॥

ಬೃಹಸ್ಪತಿಃ । ಭಿನತ್ । ಅದ್ರಿಂ । ವಿದತ್ । ಗಾಃ । ಸಂ । ಉಸ್ರಿಯಾಭಿಃ । ವಾವಶಂತ । ನರಃ ॥ ೩ ॥

॥ ಸಾಯಣಭಾಷ್ಯಂ ॥

ಅತ್ರೇದಮಾಖ್ಯಾನಂ । ಸರಮಾ ನಾಮ ದೇವಶುನೀ । ಪಣಿಭಿರ್ಗೋಷ್ವಪಹೃತಾಸು ತದನ್ವೇಷಣಾಯ ತಾಂ ಸರಮಾಮಿಂದ್ರಃ ಪ್ರಾಹೈಷೀತ್ । ಯಥಾ ಲೋಕೇ ವ್ಯಾಧೋ ವನಾಂತರ್ಗತಮೃಗಾನ್ವೇಷಣಾಯ ಶ್ವಾನಂ ವಿಸೃಜತಿ ತದ್ವತ್ । ಸಾ ಚ ಸರಮೈವಮುವಾಚ । ಹೇ ಇಂದ್ರ ಅಸ್ಮದೀಯಾಯ ಶಿಶವೇ ತದ್ಗೋಸಂಬಂಧಿ ಕ್ಷೀರಾದ್ಯನ್ನಂ ಯದಿ ಪ್ರಯಚ್ಛಸಿ ತರ್ಹಿ ಗಮಿಷ್ಯಾಮೀತಿ । ಸ ತಥೇತ್ಯಬ್ರವೀತ್ । ತಥಾ ಚ ಶಾಟ್ಯಾಯನಕಂ । ಅನ್ನಾದಿನೀಂ ತೇ ಸರಮೇ ಪ್ರಜಾಂ ಕರೋಮಿ ಯಾ ನೋ ಗಾ ಅನ್ವವಿಂದ ಇತಿ । ತತೋ ಗತ್ವಾ ಗವಾಂ ಸ್ಥಾನಮಜ್ಞಾಸೀತ್ । ಜ್ಞಾತ್ವಾ ಚಾಸ್ಮೈ ನ್ಯವೇದಯತ್ । ತಥಾ ನಿವೇದಿತಾಸು ಗೋಷು ತಮಸುರಂ ಹತ್ವಾ ತಾ ಗಾಃ ಸ ಇಂದ್ರೋಽಲಭತೇತಿ । ಅಯಮರ್ಥೋಽಸ್ಯಾಂ ಪ್ರತಿಪಾದ್ಯತೇ ॥ ಇಂದ್ರಸ್ಯಾಂಗಿರಸಾಮೃಷೀಣಾಂ ಚೇಷ್ಟೌ ಪ್ರೇಷಣೇ ಸತಿ ಸರಮಾ ದೇವಶುನೀ ತನಯಾಯ ಸ್ವಪುತ್ರಾಯ ಧಾಸಿಮನ್ನಂ ವಿದತ್ । ಅವಿಂದತ್ । ಧಾಸಿರಿತ್ಯನ್ನನಾಮ । ಧಾಸಿರಿರೇತಿ ತನ್ನಾಮಸು ಪಾಠಾತ್ । ತಯಾ ಗೋಷು ನಿವೇದಿತಾಸು ಬೃಹಸ್ಪತಿರ್ಬೃಹತಾಂ ದೇವಾನಾಮಧಿಪತಿರಿಂದ್ರೋಽದ್ರಿಮುತ್ತಾರಮಸುರಂ ಭಿನತ್ । ಅವಧೀತ್ । ಕೇನಾಪಹೃತಾ ಗಾ ವಿದತ್ । ಅಲಭತ । ತತೋ ನರೋ ನೇತಾರೋ ದೇವಾ ಉಸ್ರಿಯಾಭಿರ್ಗೋಭಿಃ ಸಹ । ಉಸ್ರಿಯೇತಿ ಗೋನಾಮ । ಸಂ ವಾವಶಂತ । ಭೃಶಂ ಹರ್ಷಶಬ್ದಮಕುರ್ವನ್ । ಯದ್ವಾ ಗೋಭಿಃ ಸಾಧನಭೂತಾಭಿಸ್ತದೀಯಂ ಕ್ಷೀರಾದಿಕಮಕಾಮಯಂತ । ಸಮಗಚ್ಛಂತೇತ್ಯರ್ಥಃ ॥ ಇಷ್ಟೌ । ಇಷ ಗತಾವಿತ್ಯಸ್ಮಾದ್ಭಾವೇ ಕ್ತಿನಿ ಮಂತ್ರೇ ವೃಷೇತ್ಯಾದಿನಾ ಕ್ತಿನ ಉದಾತ್ತತ್ವಂ । ವಿದತ್ । ವಿದ್ಲೃ ಲಾಭೇ । ಲುಙಿ ಲೃದಿತ್ವಾದಙ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಅಙ ಏವ ಸ್ವರಃ ಶಿಷ್ಯತೇ । ಪಾದಾದಿತ್ವಾನ್ನಿಘಾತಾಭಾವಃ । ಸರಮಾ । ಸರಮಾ ಸರಣಾತ್ । ನಿ ೧೧-೨೪। ಇತಿ ಯಾಸ್ಕಃ । ಸರ್ತೇರೌಣಾದಿಕೋಽಮಪ್ರತ್ಯಯಃ । ಧಾಸಿಂ । ಧೇಟ್ ಪಾನೇ । ಧೀಯತೇ ಪೀಯತ ಇತಿ ಧಾಸಿಃ । ಔಣಾದಿಕಃ ಸಿಪ್ರತ್ಯಯಃ । ಯದ್ವಾ । ದಧಾತೇಃ ಪೋಷಣಾರ್ಥಾತ್ ಸಿಪ್ರತ್ಯಯಃ । ಬೃಹಸ್ಪತಿಃ । ತದ್ಬೃಹತೋಃ ಕರಪತ್ಯೋಶ್ಚೋರದೇವತಯೋಃ ಸುಟ್

**ತಲೋಪಶ್ಚ । ಪಾ. ೬-೧-೧೫೭ । ಇತಿ ಸುಡಾಗಮಸ್ತಲೋಪಶ್ಚ । ಬೃಹಚ್ಛಬ್ದೋಽಂತೋದಾತ್ತಃ । ತಸ್ಯ ಕೇಚಿದಾದ್ಯುದಾತ್ತತ್ವಂ ವರ್ಣಯಂತೀತ್ಯುಕ್ತಂ । ಪತಿಶಬ್ದೋ ಡತಿಪ್ರತ್ಯಯಾಂತ ಆದ್ಯುದಾತ್ತಃ । ಅತ ಉಭೇ ವನಸ್ಪತ್ಯಾದಿಷ್ವಿತಿ ಪೂರ್ವೋತ್ತರಪದಯೋರ್ಯುಗಪತ್ಪ್ರಕೃತಿಸ್ವರತ್ವಂ । ಉಸ್ರಿಯಾಭಿಃ । ನಿವಸತ್ಯಸ್ಯಾಂ ಕ್ಷೀರಾದಿಕಮಿತ್ಯುಸ್ರಾ ಗೌಃ । ವಸ ನಿವಾಸ ಇತ್ಯಸ್ಮಾತ್ ಸ್ಫಾಯಿತಂಚೀತ್ಯಾದಿನಾಧಿಕರಣೇ ರಕ್ । ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ । ಉಸ್ರಾಶಬ್ದಾತ್ಸ್ವಾರ್ಥೇ ಪೃಷೋದರಾದಿತ್ವೇನ ಘಪ್ರತ್ಯಯ ಇತಿ ನಿಘಂಟುಭಾಷ್ಯಂ । ಘಸ್ಯೇಯಾದೇಶಃ । ಪ್ರತ್ಯಯಸ್ವರಃ । ವಾವಶಂತ । ವಾಶೃ ಶಬ್ದೇ । ಅಸ್ಮಾದ್ಯಙಂತಾಲ್ಲಙಿ ಝಸ್ಯಾಂತಾದೇಶೇ ಸತಿ ತಸ್ಯ ಛಂದಸ್ಯುಭಯಥೇತ್ಯಾರ್ಧಧಾತುಕತ್ವಾದತೋಲೋಪಯಲೋಪೌ । ವ್ಯತ್ಯಯೇನ ಧಾತೋರ್ಹ್ರಸ್ವತ್ವಂ । ಯದ್ವಾ । ವಶ ಕಾಂತಾವಿತ್ಯಸ್ಮಾದ್ಯಙಿ ನ ವಶಃ । ಪಾ. ೬-೧-೨೦ । ಇತಿ ಸಂಪ್ರಸಾರಣೇ ಪ್ರತಿಷಿದ್ಧೇ ಪೂರ್ವವತ್ಪ್ರಕ್ರಿಯಾ ॥**

॥ ಸಂಹಿತಾರ್ಥ ॥

**ಇಂದ್ರಸ್ಯ**—ಇಂದ್ರನ । **ಅಂಗಿರಸಾಂ ಚ** ಮತ್ತು ಅಂಗಿರಸ ಋಷಿಗಳಿಂದ । **ಪ್ರೇಷಣೇ** –ಪ್ರೇಷಣವಾಗಲು (ಕಳುಹಿಸಲ್ಪಡಲು) । **ಸರಮಾ**--ಸರಮಾ ಎಂಬ ದೇವತೆಗಳ ನಾಯಿಯು । **ತನಯಾಯ**- ತನ್ನ ಶಿಶುವಿಗೆ । **ಧಾಸಿಂ**--ಅನ್ನವನ್ನು (ಹಾಲನ್ನು) । **ವಿದತ್** ಪಡೆಯಿತು (ಗೋವುಗಳು ಇಲ್ಲಿವೆ ಎಂದು ತಿಳಿಯಲು) । **ಬೃಹಸ್ಪತಿಃ**—ಇಂದ್ರನು । **ಅದ್ರಿಂ** ಗೋವುಗಳ ಭಕ್ಷಕನನ್ನು (ಅಸುರನನ್ನು) । **ಭಿನತ್**—ವಧಿಸಿದನು । **ಗಾಃ**—ಗೋವುಗಳನ್ನು । **ವಿದತ್**—(ಪುನಃ) ಪಡೆದನು । **ನರಃ**—ಮುಖಂಡರುಗಳಾದ ದೇವತೆಗಳು । **ಉಸ್ರಿಯಾಭಿಃ**—ಗೋವುಗಳಿಂದ (ಕೂಡಿ) । **ಸಂ ವಾವಶಂತ**—ಹೆಚ್ಚಾಗಿ ಸಂತೋಷಧ್ವನಿ ಮಾಡಿದರು ಅಥವಾ ಹೆಚ್ಚಾಗಿ ಕ್ಷೀರಾದಿಗಳನ್ನು ಪಡೆದರು

॥ ಭಾವಾರ್ಥ ॥

ಹಿಂದೆ ಹೇಳಿದಂತೆ ಪಣಿನಾಮಕ ದೈತ್ಯರು ಕದ್ದುಕೊಂಡು ಹೋಗಿದ್ದ ಗೋವುಗಳನ್ನು ಇಂದ್ರ ಮತ್ತು ಅಂಗಿರಸರುಗಳಿಂದ ಪ್ರೇಷಿತಳಾಗಿ, ದೇವತೆಗಳ ನಾಯಿಯಾದ ಸರಮೆಯು ಹುಡುಕಿ, ಪ್ರತಿಫಲವಾಗಿ ತನ್ನ ಶಿಶುವಿಗೆ ಗೋಕ್ಷೀರವನ್ನು ಪಡೆಯಿತು ಗೋವುಗಳು ಇದ್ದ ಸ್ಥಳವನ್ನು ತಿಳಿದು ಇಂದ್ರನು ರಾಕ್ಷಸರನ್ನು ಕೊಂದು ಗೋವುಗಳನ್ನು ಹಿಂದಕ್ಕೆ ತಂದನು. ಆಗ ದೇವತೆಗಳು ಗೋವುಗಳೊಡನೆ ಕೂಡಿಕೊಂಡು ಗಟ್ಟಿಯಾಗಿ ಹರ್ಷಧ್ವನಿಗೈದಿದರು ಮತ್ತು ಆ ಗೋವುಗಳಿಂದ ಕ್ಷೀರಾದಿಗಳನ್ನು ಯಥೇಚ್ಛವಾಗಿ ಪಡೆದರು

## English Translation

When the search was made at the command of Indra and the Angirasas, Sarama secured food (milk) for her young, then Brihaspati slew the devourers (or broke the mountain) and rescued the cows and the gods (when they got the cattle back) proclaimed their joy aloud.

॥ ವಿಶೇಷವಿಷಯಗಳು ॥

ಭಾಷ್ಯಕಾರರು ಇಲ್ಲಿ ಒಂದು ಉಪಾಖ್ಯಾನವನ್ನು ಹೇಳಿರುವರು—ಸರಮಾ ಎಂಬುದು ದೇವತೆಗಳ ಬಳಿ ಇರುವ ಹೆಣ್ಣು ನಾಯಿಯು ಪಣಿನಾಮಕ ದೈತ್ಯರು ದೇವತೆಗಳ ಗೋವುಗಳನ್ನು ಅಪಹರಿಸಿ ಗುಹೆಯಲ್ಲಿ ಬಚ್ಚಿಟ್ಟಿದ್ದಾಗ ಆ ಗೋವುಗಳನ್ನು ಹುಡುಕುವುದಕ್ಕಾಗಿ ಇಂದ್ರನು ಈ ಸರಮಾ ಎಂಬ ದೇವಶುನಿಯನ್ನು ಕಳುಹಿಸಿದನು ಲೋಕವ್ಯವಹಾರದಲ್ಲಿ ಬೇಟೆಗಾರನು ಮೃಗಗಳನ್ನು ಹುಡುಕುವುದಕ್ಕಾಗಿ ತನ್ನ ಬಳಿ ಇರುವ ಬೇಟೆ ನಾಯಿಯನ್ನು ಕಳುಹಿಸುವಂತೆ ಇಂದ್ರನೂ ಸಹ ಗವಾನ್ವೇಷಣಕ್ಕಾಗಿ ಈ ದೇವಶುನಿಯನ್ನು ಹೋಗೆನಲು ಆಗ ಅದು ಇಂದ್ರನನ್ನು ಕುರಿತು ಇಂತೆಂದಿತು—ಎಲೈ ಇಂದ್ರನೇ, ನೀನು ನನ್ನ ಮರಿಗಾಗಿ ಕ್ಷೀರಾದ್ಯಾಹಾರವನ್ನು ಕೊಡುವುದಾದರೆ ನಾನು ಹೋಗಿ ಗೋವುಗಳನ್ನು ಹುಡುಕಿ ತರುವೆನೆಂದಿತು (ಶಾಟ್ಯಾಯನ ಶಾಖೆಯವರು ಹೇಳುವಂತೆ **ಅನ್ನಾದಿನೀಂ ತೇ ಸರಮೇ ಪ್ರಜಾಂ ಕರೋಮಿ ಯಾ ನೋ ಗಾ ಅನ್ವವಿಂದ**—ಎಲೈ ಸರಮೆಯೇ ನಿನ್ನ ಮರಿಗೆ ಆಹಾರವನ್ನು ಒದಗಿಸಿ ಕೊಡುವೆನು ನೀನು ಹೋಗಿ ಗೋವುಗಳನ್ನು ಹುಡುಕಿಕೊಂಡು ಬಾ ಎಂದು ಹೇಳಲು) ಇಂದ್ರನು ಹಾಗೆಯೇ ಆಗಲೆಂದು ಹೇಳಲು ಆ ಶುನಿಯು ಹೊರಟು ಹುಡುಕುತ್ತಾ ಪಣಿಗಳು ಗೋವನ್ನು ಬಚ್ಚಿಟ್ಟಿದ್ದ ಪ್ರದೇಶವನ್ನು ಕಂಡುಹಿಡಿದು ಅದನ್ನು ಇಂದ್ರನಿಗೆ ತಿಳಿಸಿತು ಇಂದ್ರನು ಅದನ್ನು ತಿಳಿದು ಆ ಅಸುರನನ್ನು ಸಂಹರಿಸಿ ದೇವತೆಗಳ ಗೋವುಗಳು ಬಿಡಿಸಿ ಹಿಂದಕ್ಕೆ ತಂದನು. ಈ ಅಭಿಪ್ರಾಯವೇ ಈ ಋಕ್ಕಿನಲ್ಲಿ ಪ್ರತಿಪಾದಿತವಾಗಿರುವುದು ಎಂದು

ಸರಮಾ ಎಂಬುವುದು ದೇವತೆಗಳ ಎಂದರೆ ಇಂದ್ರನ ಶುನಿಯು ಇದಕ್ಕೆ ಎರಡು ಮರಿಗಳಿದ್ದವೆಂದೂ ಅವು ಮೃತ್ಯುದೇವತೆಯಾದ ಯಮನ ಬಳಿ ಇದ್ದವೆಂದೂ ಅವುಗಳಿಗೆ ತಾಯಿಯ ಹೆಸರನ್ನನುಸರಿಸಿ ಸಾರಮೇಯೌ ಎಂಬ ಹೆಸರಿದ್ದಿತೆಂದೂ ತಿಳಿದು ಒರುವುದು

**ಅತಿ ದ್ರವ ಸಾರಮೇಯೌ ಶ್ವಾನೌ ಚತುರಕ್ಷೌ ಶಬಲೌ ಸಾಧುನಾ ಪಥಾ ।**

(ಋ ಸಂ ೧೦-೧೪-೧೦)

**ಯೌ ತೇ ಶ್ವಾನೌ ಯಮರಕ್ಷಿತಾರೌ ಚತುರಕ್ಷೌ ಪಥಿರಕ್ಷೀ ನೃಚಕ್ಷಸೌ ॥**

(ಋ ಸಂ ೧೦-೧೪-೧೧)

ಈ ಋಕ್ಕುಗಳಲ್ಲಿ ಸರಮಾ ಎಂಬ ದೇವಶುನಿಯ ಎರಡು ಮರಿಗಳಾದ ಸಾರಮೇಯೌ ಎಂಬ ನಾಯಿಗಳ ವಿಷಯವೂ ಅವುಗಳಿಗೆ ನಾಲ್ಕು ಕಣ್ಣುಗಳಿದ್ದ ವಿಷಯವೂ ತಿಳಿದುಬರುವುದು ಮೇಲೆ ಹೇಳಿದ ಸರಮಾ ಎಂಬ ದೇವಶುನಿಯು ಪಣಿಗಳ ಬಳಿಗೆ ಹೋಗಿ ಅವರೊಡನೆ ಸಂಧಾನಮಾಡಿದ ವಿಷಯವು ಋಗ್ವೇದದ ೧೦ ನೆಯ ಮಂಡಲದ ೧೦೮ ನೆಯ ಸೂಕ್ತದಲ್ಲಿ ಈ ರೀತಿ ವರ್ಣಿತವಾಗಿರುವುದು—

**ಕಿಮಿಚ್ಛಂತೀ ಸರಮಾ ಪ್ರೇದಮಾನಡ್ದೂರೇ ಹ್ಯಧ್ವಾ ಜಗುರಿಃ ಪರಾಚೈಃ ।**
**ಕಾಸ್ಮೇಹಿತಿಃ ಕಾ ಪರಿತಕ್ಮ್ಯಾಸೀತ್ಕಥಂ ರಸಾಯಾ ಅತರಃ ಪಯಾಂಸಿ ॥**
**ಇಂದ್ರಸ್ಯ ದೂತೀರಿಷಿತಾ ಚರಾಮಿ ಮಹ ಇಚ್ಛಂತೀ ಪಣಯೋ ನಿಧೀನ್ ವಃ ।**
**ಅತಿಷ್ಕದೋ ಭಿಯಸಾ ತನ್ನ ಆವತ್ತಥಾ ರಸಾಯಾ ಅತರಂ ಪಯಾಂಸಿ ॥**

ಕೀದೃಙ್ಙಿಂದ್ರಃ ಸರಮೇ ಕಾ ದೃಶೀಕಾ ಯಸ್ಯೇದಂ ದೂತೀರಸರಃ ಪರಾಕಾತ್ ।
ಆ ಚ ಗಚ್ಛಾನ್ಮಿತ್ರಮೇನಾ ದಧಾಮಾಥಾ ಗವಾಂ ಗೋಪತಿರ್ನೋ ಭವಾಮಿ ॥
ನಾಹಂ ತಂ ವೇದ ದಭ್ಯಂ ದಭತ್ಸ ಯಸ್ಯೇದಂ ದೂತೀರಸರಂ ಪರಾಕಾತ್ ।
ನ ತಂ ಗೂಹಂತಿ ಸ್ರವತೋ ಗಭೀರಾ ಹತಾ ಇಂದ್ರೇಣ ಪಣಯಃ ಶಯಧ್ವೇ ॥
ಇಮಾ ಗಾವಃ ಸರಮೇ ಯಾ ಐಚ್ಛಃ ಪರಿ ದಿವೋ ಅನ್ತಾನ್ ಸುಭಗೇ ಪತಂತೀ ।
ಕಸ್ತ ಏನಾ ಅವ ಸೃಜಾದಯುಧ್ವ್ಯುತಾಸ್ಮಾಕಮಾಯುಧಾ ಸಂತಿ ತಿಗ್ಮಾ ॥
ಅಸೇನ್ಯಾವಃ ಪಣಯೋ ವಚಾಂಸ್ಯನಿಷವ್ಯಾಸ್ತನ್ವಃ ಸಂತು ಪಾಪೀಃ ।
ಅಧೃಷ್ಟೋ ವ ಏತವಾ ಅಸ್ತು ಪನ್ಥಾ ಬೃಹಸ್ಪತಿರ್ವ ಉಭಯಾ ನ ಮೃಳಾತ್ ॥
ಅಯಂ ನಿಧಿಃ ಸರಮೇ ಅದ್ರಿಬುಧ್ನೋ ಗೋಭಿರಶ್ವೇಭಿರ್ವಸುಭಿರ್ನ್ಯೃಷ್ಟಃ ।
ರಕ್ಷಂತಿ ತಂ ಪಣಯೋ ಯೇ ಸುಗೋಪಾ ರೇಕು ಪದಮಲಕಮಾ ಜಗಂಥ ॥
ಏಹ ಗಮನ್ನೃಷಯಃ ಸೋಮಶಿತಾ ಅಯಾಸ್ಯೋ ಅಂಗಿರಸೋ ನವಗ್ವಾಃ ।
ತ ಏತಮೂರ್ವಂ ವಿಭಜಂತ ಗೋನಾಮಥೈತದ್ವಚಃ ಪಣಯೋ ವಮನ್ನಿತ್ ॥
ಏವಾ ಚ ತ್ವಂ ಸರಮ ಆಜಗಂಥ ಪ್ರಬಾಧಿತಾ ಸಹಸಾ ದೈವ್ಯೇನ ।
ಸ್ವಸಾರಂ ತ್ವಾ ಕೃಣವೈ ಮಾ ಪುನರ್ಗಾ ಅಪ ತೇ ಗವಾಂ ಸಭಗೇ ಭಜಾಮ ॥
ನಾಹಂ ವೇದ ಭ್ರಾತೃತ್ವಂ ನೋ ಸ್ವಸೃತ್ವಮಿಂದ್ರೋ ವಿದುರಂಗಿರಸಶ್ಚ ಘೋರಾಃ ।
ಗೋಕಾಮಾ ಮೇ ಅಚ್ಛದಯನ್ ಯದಾಯಮಪಾತ ಇತ ಪಣಯೋ ವರೀಯಃ ॥
ದೂರಮಿತ ಪಣಯೋ ವರೀಯ ಉದ್ಗಾವೋ ಯಂತು ಮಿನತೀರೃತೇನ ।
ಬೃಹಸ್ಪತಿರ್ಯಾ ಅವಿಂದನ್ನಿಗೂಳ್ಹಾಃ ಸೋಮೋ ಗ್ರಾವಾಣ ಋಷಯಶ್ಚ ವಿಪ್ರಾಃ ॥

(ಋ ಸಂ ೧೦ ೧೦೮–೧ ರಿಂದ ೧೧)

ಇದರ ಅನುವಾದವನ್ನು ಕೆಳಗೆ ಕೊಟ್ಟಿರುತ್ತೇವೆ ಇದು ಪಣಿಗಳಿಗೂ ಸರಮೆಗೂ ನಡೆದ ಸಂಭಾಷಣೆಯ ರೂಪದಲ್ಲಿರುವುದು. ಹಿಂದೆ ಬೃಹಸ್ಪತಿಯ ಗೋವುಗಳನ್ನು ವಲನ ಅನುಯಾಯಿಗಳಾದ ಪಣಿಗಳೆಂಬುವರು ಅಪಹರಿಸಿ ಒಂದು ರಹಸ್ಯ ಸ್ಥಳದಲ್ಲಿ ಬಚ್ಚಿಟ್ಟಿದ್ದರು ಆಗ ಬೃಹಸ್ಪತಿಯ ಕೋರಿಕೆಯಂತೆ ಇಂದ್ರನು ಆ ಗೋವುಗಳನ್ನು ಹುಡುಕುವುದಕ್ಕಾಗಿ ದೇವಶುನಿಯಾದ ಸರಮೆಯನ್ನು ಕಳುಹಿಸಿದನು ಆ ಸರಮೆಯು ಗೋವುಗಳನ್ನು ಹುಡುಕುತ್ತಾ ಬಹುದೂರ ಸಂಚರಿಸಿ ದಾರಿಯಲ್ಲಿ ಅಡ್ಡಲಾಗಿ ಸಿಕ್ಕಿದ ರಸಾ ಎಂಬ ಒಂದು ದೊಡ್ಡ ನದಿಯನ್ನು ದಾಟಿ ಪಣಿಗಳ ಸಮೀಪಕ್ಕೆ ಬಂದಿತು ಆಗ ಪಣಿಗಳು ಸರಮೆಯು ಬಂದ ಉದ್ದೇಶವನ್ನು ತಿಳಿದು ಅದರೊಡನೆ ಸ್ನೇಹ ಮಾಡಿಕೊಳ್ಳುವ ಭಾವನೆಯಿಂದ ಇಂತು ಸಂಭಾಷಣೆಯನ್ನು ನಡೆಸಿದರು –

**ಪಣಿಗಳು**—ಎಲೈ ಸರಮೆಯೇ, ನೀನು ಬಹುದೂರದಿಂದ ಬಹುಕಷ್ಟಪಟ್ಟು ಇಲ್ಲಿಗೆ ಬಂದಿರುವಂತೆ ಕಾಣುತ್ತೆ. ನೀನು ಇಲ್ಲಿಗೆ ಬಂದ ಉದ್ದೇಶವೇನು ? ಇಲ್ಲಿಗೆ ಹೇಗೆ ಬಂದೆ ? ರಸಾ ಎಂಬ ನದಿಯನ್ನು ಹೇಗೆ ದಾಟಿದ ?

**ಸರಮೋ**—ಎಲೈ ಪಣಿಗಳೇ ಕೇಳಿರಿ ನಾನು ಇಂದ್ರನಿಂದ ನಿಯಮಿತಳಾಗಿ ಅವನ ದೂತಿಯಂತೆ ಇಲ್ಲಿಗೆ ಬಂದಿರುವೆನು. ನೀವು ಬಚ್ಚಿಟ್ಟಿರುವ ಧನಗಳನ್ನು ಇಂದ್ರನು ಅಪೇಕ್ಷಿಸುವನು ರಸಾನದಿಯು ಹೆದರಿ ನನಗೆ ದಾಟುವುದಕ್ಕೆ ಸಹಾಯಮಾಡಿತು ಆದುದರಿಂದ ನಾನು ಆ ನದಿಯನ್ನು ದಾಟಿ ಬಂದನು

**ಪಣಿಗಳು**--ಎಲೈ ಸರಮೆಯೇ, ಒಳ್ಳೇದು ಇಂದ್ರನು ನಿನ್ನನ್ನು ದೂತಿಯನ್ನಾಗಿ ಕಳುಹಿಸಿರುವನೆಂದು ಹೇಳಿದೆಯಷ್ಟೆ ಆ ಇಂದ್ರನು ನೋಡುವುದಕ್ಕೆ ಹೇಗಿರುವನು? (ಪಣಿಗಳು ತಮ್ಮತಮ್ಮಲ್ಲಿ ಹೀಗೆ ಮಾತನಾಡಿಕೊಳ್ಳುವರು) ಸರಮೆಯು ಬಂದರೆ ಬರಲಿ. ಅದರೊಡನೆ ಸ್ನೇಹವನ್ನೇ ಮಾಡಿಕೊಳ್ಳೋಣ ಮತ್ತು ನಮ್ಮ ಗೋವುಗಳಿಗೆ ಅದೇ ಯಜಮಾನತಿಯಾಗಿರಲಿ

**ಸರಮೋ**—ನೀವು ಭಾವಿಸಿರುವಂತೆ ಆ ಇಂದ್ರನನ್ನು ಜಯಿಸಲು ಸಾಧ್ಯವಿಲ್ಲ ನನ್ನನ್ನು ಕಳುಹಿಸಿದ ಆ ಇಂದ್ರನು ಶತ್ರುಗಳನ್ನು ಜಯಿಸುವನೇ ಹೊರತು ಅವನನ್ನು ಇತರರು ಜಯಿಸಲು ಸಾಧ್ಯವಿಲ್ಲ ಆಳವಾದ ನದಿಗಳು ಸಹ ಅವನನ್ನು ತಡೆಯಲಾರವು ಅವನಿಂದ ನೀವು ಸಂಹೃತರಾಗಿ ವ್ಯುತ್ಯಶಯ್ಯೆಯಲ್ಲಿ ಮಲಗಬೇಕಾಗುವುದು

**ಪಣಿಗಳು**--ಎಲೈ ಸರಮೆಯೇ, ಇಗೋ ಈ ಗೋವುಗಳಿಗಾಗಿಯೇ ಅಲ್ಲವೇ ನೀನು ಅಂತರಿಕ್ಷಮಾರ್ಗದಿಂದ ಬಹುದೂರ ಬಂದು ಅವುಗಳನ್ನು ಅಪೇಕ್ಷಿಸುತ್ತಿರುವುದು? ಆದರೆ ಆ ಗೋವುಗಳನ್ನು ಯುದ್ಧಮಾಡದ ನಿನಗೆ ಸುಮ್ಮನೆ ಒಪ್ಪಿಸುವವರಾರು? ನಮ್ಮ ಆಯುಧಗಳು ಬಹು ಹರಿತವಾಗಿವೆ

**ಸರಮೋ** –ನಿಮ್ಮ ಮಾತುಗಳಿಂದ ಏನು ಪ್ರಯೋಜನ? ಆ ಮಾತಿನಲ್ಲಿ ಸ್ವನ್ಯದ ಬಲವಿರುವುದೇ, ನಿಮ್ಮ ಪಾಪಪೂರಿತವಾದ ಶರೀರಗಳಿಗೆ ಬಿಲ್ಲುಬಾಣಗಳಿಗೆ ಇರುವ ಶಕ್ತಿ ಇರುವುದೇ? ನೀವು ಅನುಸರಿಸುವ ಮಾರ್ಗವು ಬಹು ಕಷ್ಟಕರವಾದುದು (ಗೋವುಗಳ ಪಾಲೀಕನಾದ) ಬೃಹಸ್ಪತಿಯು ನಿಮಗೆ ದಯವನ್ನು ತೋರಿಸುವುದಿಲ್ಲ, ನಿಮ್ಮ ಮಾತಿಗೆ ಬೆಲೆಯನ್ನು ಕೊಡುವುದಿಲ್ಲ

**ಪಣಿಗಳು**—ಎಲೈ ಸರಮೇ, ಈ ಪಶುಧನವು, ಎಂದರೆ ಹಸುಗಳು ಕುದುರೆಗಳು, ದ್ರವ್ಯ ಮುಂತಾದವುಗಳನ್ನು ನಾವು ಪರ್ವತಗಳಲ್ಲಿ ಸಂಗ್ರಹಿಸಿ ತಂದಿರುವೆವು ಪಣಿಗಳಾದ ನಾವು ಅವುಗಳನ್ನು ಬಹು ಜಾಗರೂಕತೆಯಿಂದ ಕಾಪಾಡುತ್ತಿರುವೆವು. ಇಂತಹ ದುರ್ಗಮವಾದ ಸ್ಥಳಕ್ಕೆ ನೀನು ಏಕಾಂಗಿಯಾಗಿ ಬಂದಿರುವುದು ವ್ಯರ್ಥವು

**ಸರಮೋ**—ಎಲೈ ಪಣಿಗಳೇ ಕೇಳಿ ಋಷಿಗಳೂ, ಅಂಗಿರಸ್ಸುಗಳೂ ಸೋಮಪಾನದಿಂದ ಶಕ್ತಿಸಾಮರ್ಥ್ಯಗಳನ್ನು ಪಡೆದು ಅಯಾಸ್ಯನ ನಾಯಕತ್ವದಲ್ಲಿ ಇಲ್ಲಿಗೆ ಬಂದು ಈ ಗೋವುಗಳನ್ನು ಬಲಾತ್ಕಾರದಿಂದ ವಶಪಡಿಸಿಕೊಂಡು ತಮ್ಮಲ್ಲಿ ಹಂಚಿಕೊಳ್ಳುವರು. ನೀವು ಆಡುತ್ತಿರುವ ಮಾತು ವ್ಯರ್ಥವೆಂಬುದು ನಿಮಗೆ ಆಗ ಗೊತ್ತಾಗುವುದು

**ಪಣಿಗಳು**—ಎಲೈ ಸರಮೇ, ನಿನಗೆ ದೇವತೆಗಳ ಬೆಂಬಲವಿರುವಂತೆ ಕಾಣುವುದು ಆದುದರಿಂದ ನಾವು ನಿನ್ನನ್ನು ನಮ್ಮ ಸಹೋದರಿಯಂತೆ ಭಾವಿಸುವೆವು ನೀನು ಇಂದ್ರನ ಬಳಿಗೆ ಹಿಂದಕ್ಕೆ ಹೋಗಬೇಡ. ಇಲ್ಲಿಯೇ ಇರು ಈ ಗೋವುಗಳಲ್ಲಿ ನಿನಗೂ ಒಂದು ಪಾಲನ್ನು ಕೊಡುವೆವು

**ಸರಮೇ**—ನೀವು ನೀಡುವ ಸ್ನೇಹಭಾವವೂ ಸಹೋದರಿತ್ವವೂ ನನಗೆ ಬೇಡ. ಇಂದ್ರನೂ, ಭಯಂಕರರಾದ ಅಂಗಿರಸ್ಸುಗಳೂ ನನ್ನ ಸ್ವಭಾವವನ್ನು ತಿಳಿದಿರುವರು ಗೋವುಗಳನ್ನು ಹುಡುಕುತ್ತಾ ನಾನು ಇಲ್ಲಿಗೆ ಬರುವಾಗ ಅವರು ಗೂಢಮಾರ್ಗದಿಂದ ನಿಮ್ಮ ವಾಸಸ್ಥಾನವನ್ನು ಅರಿತಿರುವರು ಆದುದರಿಂದ ಎಲೈ ಪಣಿಗಳೇ, ನೀವು ದೂರ ಓಡಿಹೋಗಿ ಬದುಕಿಕೊಳ್ಳಿರಿ

ಸಾವಕಾಶ ಮಾಡಬೇಡಿ. ದೂರದಲ್ಲಿರುವ ಸುರಕ್ಷಿತವಾದ ಪ್ರದೇಶಕ್ಕೆ ಹೋಗಿ ಗುಹೆಯಲ್ಲಿಟ್ಟಿರುವ ಗೋವುಗಳು ಕ್ರಮವಾಗಿ ಈಚೆಗೆ ಬರಲಿ ಬೃಹಸ್ಪತಿ, ಸೋಮ ಮತ್ತು ಬುದ್ಧಿವಂತರಾದ ಋಷಿಗಳು ಈ ರಹಸ್ಯ ಸ್ಥಳವನ್ನು ಕಂಡುಹಿಡಿದು ಗೋವುಗಳಿರುವ ಗುಹೆಯ ಬಾಗಿಲನ್ನು ಒಡೆದು ಒಳಗೆ ನುಗ್ಗುವರು

ಈ ಸಂಭಾಷಣೆಯಲ್ಲಿ ಒಂದು ಋಕ್ಕನ್ನು ಪಣಿಗಳೂ ಅದಕ್ಕೆ ಪ್ರತ್ಯುತ್ತರವಾಗಿ ಮತ್ತೊಂದು ಋಕ್ಕನ್ನು ಸರಮೆಯೂ ಹೇಳಿರುವರು ಈ ಪಣಿಗಳು ಗೋವುಗಳನ್ನು ಅಪಹರಿಸಿದ ವಿಷಯಗಳು ಋಗ್ವೇದದಲ್ಲಿ ಅನೇಕ ಕಡೆ ಸೂಚಿತವಾಗಿರುವುದು

ಋಗ್ವೇದದಲ್ಲಿ ಪಣಿಶಬ್ದಕ್ಕೆ ವ್ಯಾಪಾರಾದಿಗಳನ್ನು ಮಾಡುವ ಧನಿಕನೆಂಬ ಅರ್ಥವಿದ್ದರೂ ಅವನು ಯಜ್ಞಾದಿಗಳನ್ನು ಮಾಡದ ಮತ್ತು ದಕ್ಷಿಣಾದಾನಾದಿಗಳನ್ನು ಕೊಡದಿರುವ ಮನುಷ್ಯನೆಂದೂ ಅರ್ಥವಿರುವುದರಿಂದ ಅವನನ್ನು ನಿಕೃಷ್ಟಭಾವನೆಯಿಂದ ನೋಡುವುದಲ್ಲದೆ ಅವನು ಗೌರವಾರ್ಹನಲ್ಲದವನೆಂದೂ ನೀಚಮನುಷ್ಯನೆಂದೂ ಋಷಿಗಳು ಭಾವಿಸಿದ್ದಂತೆ ತೋರುವುದು ಕೆಲವು ಕಡೆ ಪಣಿ ಎಂಬುವನು ಒಬ್ಬ ಪ್ರತ್ಯೇಕ ವ್ಯಕ್ತಿಯಾಗಿ ಕಂಡುಬರುವುದಾದರೂ ಈ ಶಬ್ದದ ಬಹುವಚನ ಪ್ರಯೋಗವು ವಿಶೇಷವಾಗಿರುವುದರಿಂದ ಪಣಯಃ ಎಂಬ ಶಬ್ದವು ಒಂದು ವರ್ಗದ ಜನರನ್ನು ಸೂಚಿಸುವುದಾಗಿರುವುದೆಂದು ತಿಳಿಯಬೇಕು ಈ ಪಣಿಗಳೆಂಬುವರು ಈ ದೇಶದ ಪೂರ್ವನಿವಾಸಿಗಳೆಂದೂ ಇವರು ವ್ಯಾಪಾರಾದಿಗಳಲ್ಲಿ ತೊಡಗಿದ್ದರೆಂದೂ ಆದರೂ ಇವರಲ್ಲಿ ಪ್ರಾಮಾಣಿಕತೆ ಇರಲಿಲ್ಲವಾದ್ದರಿಂದ ಇವರನ್ನು ಅಸುರರ ಗುಂಪಿಗೆ ಸೇರಿದವರೆಂದು ಜನರು ಹೇಳುತ್ತಿದ್ದರೆಂದೂ ಕೆಲವರ ಅಭಿಮತವು. ಇವರು ಯಜ್ಞಾದಿಗಳನ್ನು ಮಾಡದ ಯಾವ ಸತ್ಕರ್ಮಾನುಷ್ಠಾನದಲ್ಲಿಯೂ ಆಸಕ್ತಿ ಇಲ್ಲದೆ ನ್ಯಾಯ ಅಥವಾ ಅನ್ಯಾಯಮಾರ್ಗದಿಂದ ಕೇವಲ ದ್ರವ್ಯ ಸಂಪಾದನೆಯೇ ಮುಖ್ಯವೆಂದು ಪರಿಗಣಿಸಿ ಅದರಂತೆ ನಡೆಯುತ್ತಿದ್ದುದರಿಂದ ಇವರನ್ನು ಆರ್ಯರು ದಸ್ಯುಗಳೆಂತಲೂ ನೀಚವೃತ್ತಿಯ ಮನುಷ್ಯರೆಂತಲೂ ಭಾವಿಸಿ ಆ ವಿಧವಾದ ಅಭಿಪ್ರಾಯವನ್ನು ಮಂತ್ರಾದಿಗಳಲ್ಲಿ ಹೊರಗೆಡವಿದ್ದಾರೆ ಪಣಿಗಳ ವಿಷಯವಾಗಿ ಋಗ್ವೇದದಲ್ಲಿ ಅನೇಕ ಋಕ್ಕುಗಳಿರುವವು ಅವುಗಳಲ್ಲಿ--

**ಪಣಯಃ**—ಎಂಬ ಶಬ್ದವು, ಋ ಸಂ ೧-೧೨೪-೧೦, ೧-೧೫೧-೯, ೪-೫೧-೩, ೬-೨೦-೪, ೧೦-೧೦೮-೭ ೧೦-೧೦೮-೮, ೧೦-೧೦೮-೨, ೧೦-೧೦೮-೪, ೧೦-೧೦೮-೬, ೧೦-೧೦೮-೧೦, ೧೦-೧೦೮-೧೧ ಎಂಬ ಋಕ್ಕುಗಳಲ್ಲಿಯೂ

**ಪಣಿಃ**— ಋ ಸಂ. ೧-೩೩-೩, ೧-೧೮೦-೭, ೫-೬೧-೮,

**ಪಣಿನಾ**— ಋ ಸಂ. ೪-೨೫-೭.

**ಪಣಿನಾಽಇವ**— ಋ ಸಂ. ೧-೩೨-೧೧,

**ಪಣಿಽಭಿಃ**— ಋ ಸಂ ೪-೫೮-೪,

**ಪಣಿಭ್ಯಃ**— ಋ ಸಂ ೯-೨೨-೭,

**ಪಣಿಂ**— ಋ ಸಂ ೧-೯೩-೪, ೬-೪೪-೨೨, ೬-೫೧-೧೪, ೬-೬೧-೧, ೮-೪೫-೧೪, ೮-೭೫-೭, ೧೦-೬೭-೬, ೧೦-೧೫೬-೩,

**ಪಣೀನ್**— ಋ ಸಂ. ೧-೧೮೪-೨, ೬-೩೩-೨, ೬-೫೯-—, ೭-೬-೩, ೭-೧೯-೧, ೮-೨೬-೧೦, ೮-೬೪-೨, ೮-೬೬-೧೦, ೧೦-೬೦-೬

**ಪಣೀನಾಂ**— ಋ ಸಂ ೮-೨೪-೬, ೬-೪೫-೩೧, ೬-೫೩ ೫, ೬-೫೩-೭, ೭-೯-೨, ೯-೩-೨,

**ಪಣೇಃ**— ಋ ಸಂ ೧-೮೩-೪, ೧-೧೮೨-೩, ೩-೫೮-೨, ೫-೩೪-೭, ೬-೧೩-೩, ೬-೫೩-೩, ೬-೫೩-೬, ೧೦-೯೨-೩,

**ಪಣೌ**— ಋ ಸಂ ೮-೯೭-೨

ಎಂಬ ಸೂಕ್ತಗಳಲ್ಲಿ ಪಠಿತವಾಗಿವೆ ಈ ಪಣಿಗಳೆಂಬುವರು ವಲನೆಂಬ ಅಸುರನ ಸೈನಿಕರೆಂದು ಹೇಳುವ ರೂಢಿಯಿದೆ ಇವರು ಗೋವುಗಳನ್ನು ಕದ್ದು ಗುಹೆಗಳಲ್ಲಿ ಬಚ್ಚಿಟ್ಟಿದ್ದರೆಂಬ ವಿಷಯವು ಅನೇಕ ಋಕ್ಕುಗಳಲ್ಲಿ ಪ್ರಸ್ತಾಪಿಸಲ್ಪಟ್ಟಿರುವುದು ಈ ವಿಷಯವಾಗಿ ನಾವು ಹಿಂದೆ ಬರೆದಿರುವುದನ್ನು ಋಗ್ವೇದ ಸಂಹಿತಾ ಭಾಗ ೨, ಪೇಜು ೨೨೮, ೪೬೫-೪೬೬ ಗಳನ್ನು ನೋಡಿ

॥ ವ್ಯಾಕರಣಪ್ರಕ್ರಿಯಾ ॥

**ಇಷ್ಟೌ**—ಇಷ ಗತೌ ಧಾತು **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಕಿತ್ತಾದುದರಿಂದ ಲಘೂಪಧಗುಣನಿಷೇಧ **ಷ್ಟುನಾಷ್ಟುಃ** ಎಂಬುದರಿಂದ ತಿಯ ತಕಾರಕ್ಕೆ ಷ್ಟುತ್ವದಿಂದ ಟಕಾರ ಇಷ್ಟಿ ಶಬ್ದದ ಸಪ್ತಮ್ಯೇಕವಚನರೂಪ ಆದ್ಯುದಾತ್ತವು ಪ್ರಾಪ್ತವಾದರೆ **ಮಂತ್ರೇ ವೃಷೇಷಪಚ** (ಪಾ. ಸೂ ೩-೩-೯೬) ಎಂಬುದರಿಂದ ಕ್ತಿನ್‌ಪ್ರತ್ಯಯವು ಉದಾತ್ತವಾಗುತ್ತದೆ.

**ವಿದತ್**—ವಿದ್ಲೃ ಲಾಭೇ ಧಾತು ಲುಙ್ ಪ್ರಥಮಪುರುಷ ಏಕವಚನದ ತಿಪ್ಪಿನ ಇಕಾರಕ್ಕೆ **ಇತಶ್ಚ** ಎಂಬುದರಿಂದ ಲೋಪ. ಲೃದಿತ್ತಾದುದರಿಂದ **ಪುಷಾದಿದ್ಯುತಾ—**ಎಂಬುದರಿಂದ ಚ್ಲಿಗೆ ಅಙ್ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ ವಿದತ್ ಎಂದು ರೂಪವಾಗುತ್ತದೆ ಅಙಿನಸ್ವರವೇ ಸತಿಶಿಷ್ಟವಾದುದರಿಂದ ಉಳಿಯುತ್ತದೆ **ಅಪಾದಾದೌ** ಎಂಬುದರಿಂದ ಇದು ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ

**ಸರಮಾ**— ಸರಮಾ ಸರಣಾತ್ (ನಿರು ೧೧-೨೪) ಎಂದು ಯಾಸ್ಕರು ನಿರ್ವಚನಮಾಡಿರುತ್ತಾರೆ. (ಹೋಗುವುದು ಎಂದರ್ಥ) ಸೃ ಗತೌ ಧಾತು ಇದಕ್ಕೆ ಔಣಾದಿಕ ಅಮ ಪ್ರತ್ಯಯ. ಅಮ ಪರದಲ್ಲಿರುವಾಗ ಧಾತುವಿಗೆ ತನ್ನಿಮಿತ್ತವಾಗಿ ಗುಣ ಸ್ತ್ರೀತ್ವದಲ್ಲಿ ಅದಂತನಿಮಿತ್ತತವಾಗಿ ಟಾಪ್ ಸರಮಾ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ

**ಧಾಸಿಮ್**—ಧೇಟ್ ಪಾನೇ ಧಾತು. ಧೀಯತೇ ಪೀಯತೇ ಇತಿ ಧಾಸಿಃ ಔಣಾದಿಕವಾದ ಸಿಪ್ರತ್ಯಯ. ಸಿಪರದಲ್ಲಿರುವಾಗ **ಆದೇ ಚ ಉಪದೇಶೇಽಶಿತಿ** (ಪಾ ಸೂ ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ ಧಾಸಿ ಎಂದಾಗುತ್ತದೆ. ದ್ವಿತೀಯಾ ಏಕವಚನರೂಪ ಪ್ರತ್ಯಯಸ್ವರ. ಅಥವಾ ಡುಧಾಞ್ ಧಾರಣಪೋಷಣಯೋಃ ಧಾತು. ಪೋಷಣಾರ್ಥದಲ್ಲಿ ಈ ಧಾತುವಿಗೆ ಸಿಪ್ರತ್ಯಯ ಹಿಂದಿನಂತೇ ರೂಪಸಿದ್ಧಿ

**ಬೃಹಸ್ಪತಿಃ** -**ತದ್ಬೃಹತೋಃ ಕರಪತ್ಯೋಶ್ಚೋರದೇವತಯೋಃ ಸುಟ್ ತಲೋಪಶ್ಚ** (ಪಾ ಸೂ ೬-೧-೧೫೭ ಗ) ಎಂಬುದರಿಂದ ದೇವತಾರೂಪ ಅರ್ಥತೋರುವುದರಿಂದ ಸುಡಾಗಮ ಬೃಹತಿನ ತಕಾರಕ್ಕೆ ಲೋಪ ಬೃಹಸ್ಪತಿ ಎಂದು ರೂಪವಾಗುತ್ತದೆ ಬೃಹತ್ ಎಂಬುದು ಅಂತೋದಾತ್ತವಾದ ಪದ. ಇದಕ್ಕೆ ಕೆಲವರು ಆದ್ಯುದಾತ್ತವನ್ನೂ ಹೇಳುತ್ತಾರೆ ಎಂದು ಹಿಂದೆ ಹೇಳಿರುತ್ತೇವೆ. ಪತಿಶಬ್ದವು ಡತಿಪ್ರತ್ಯಯಾಂತವಾದುದರಿಂದ ಆದ್ಯುದಾತ್ತ ಹೀಗಿರುವಾಗ ಸಮಾಸದಲ್ಲಿ **ಉಭೇವನಸ್ಪತ್ಯಾದಿಷು** (ಪಾ ಸೂ ೬-೧-೧೪೦) ಎಂಬುದರಿಂದ ಪೂರ್ವೋತ್ತರ ಪದಗಳಿಗೆ ಏಕಕಾಲದಲ್ಲಿ ಪ್ರಕೃತಿಸ್ವರ ಬರುತ್ತದೆ.

**ಉಸ್ರಿಯಾಭಿಃ**—ನಿವಸತಿ ಅಸ್ಯಾಂ ಕ್ಷೀರಾದಿಕಮಿತಿ ಉಸ್ರಾ ಗೌಃ, ವಸ ನಿವಾಸೇ ಧಾತು **ಸ್ಫಾಯಿತಞ್ಚಿವಂಚಿಶಕಿ** (ಉ ಸೂ ೪೧-೧೭೦) ಎಂಬುದರಿಂದ ಅಧಿಕರಣಾರ್ಥದಲ್ಲಿ ರಕ್ ಕಿತ್ತಾದುದರಿಂದ **ವಚಿಸ್ವಪಿಯಜಾದೀನಾಂ ಕಿತಿ** (ಪಾ ಸೂ ೬-೧-೧೫) ಎಂಬುದರಿಂದ ಸಂಪ್ರಸಾರಣ **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಉಸ್ರ ಎಂದಾಗುತ್ತದೆ **ಉಸ್ರಾ ಶಬ್ದಾತ್ ಸ್ವಾರ್ಥೇ ಪೃಷೋದರಾದಿತ್ವೇನ ಘಪ್ರತ್ಯಯಃ** ಎಂಬ ನಿಘಂಟುಭಾಷ್ಯದಿಂದ ಘಪ್ರತ್ಯಯ **ಆಯನೇಯಿ** ಸೂತ್ರದಿಂದ ಅದಕ್ಕೆ ಇಯಾದೇಶ ಉಸ್ರಿಯಾ ಎಂದು ರೂಪವಾಗುತ್ತದೆ ತೃತೀಯಾ ಬಹುವಚನಾಂತರೂಪ ಪ್ರತ್ಯಯಸ್ವರದಿಂದ ಸ್ರಿ ಎಂಬಲ್ಲಿರುವ ಇಕಾರವು ಉದಾತ್ತವಾಗುತ್ತದೆ

**ವಾವಶಂತೆ**—ವಾಶೃ ಶಬ್ದೇ ಧಾತು ಭೃಶಾರ್ಥದಲ್ಲಿ **ಧಾತೋರೇಕಾಚೋ ಹಲಾದೇಃ** ಸೂತ್ರದಿಂದ ಯಙ್ **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ **ಹ್ರಸ್ವ** ಎಂಬುದರಿಂದ ಹ್ರಸ್ವ **ದೀರ್ಘೋಽಕಿತಃ** ಎಂಬುದರಿಂದ ಪುನಃ ಅಭ್ಯಾಸಕ್ಕೆ ದೀರ್ಘ. ವ್ಯತ್ಯಯದಿಂದ ಧಾತುವಿನ ಉಪಧೆಗೆ ಹ್ರಸ್ವ ಲಙ್ ಪ್ರಥಮಪುರುಷ ಬಹುವಚನಕ್ಕೆ **ಝೋಽಂತಃ** ಎಂಬುದರಿಂದ ಅಂತಾದೇಶ **ಕರ್ತರಿ ಶಪ್** ಎಂಬುದರಿಂದ ಶಪ್ **ಛಂದಸ್ಯುಭಯಥಾ** ಎಂಬುದರಿಂದ ಶಪ್ಪಿಗೆ ಆರ್ಧಧಾತುಕಸಂಜ್ಞೆ ಬರುವುದರಿಂದ **ಅತೋಲೋಪಃ** ಎಂಬುದರಿಂದ ಯಙನ ಅಕಾರಕ್ಕೆ **ಲೋಪ** **ಯಸ್ಯ ಹಲ** ಎಂಬುದರಿಂದ ಯಲೋಪ ವಾವಶಂತ ಎಂದಾಗುತ್ತದೆ ಅಥವಾ ವಶ ಕಾಂತೌ ಧಾತು. ಹಿಂದಿನಂತೆ ಭೃಶಾರ್ಥದಲ್ಲಿ ಯಙ್ ಙಿತ್ತಾದುದರಿಂದ ಸಂಪ್ರಸಾರಣವು ಪ್ರಾಪ್ತವಾದರೆ

**ನವತಃ** (ಪಾ. ಸೂ. ೬-೧-೨೦) ಎಂಬುದರಿಂದ ಅದಕ್ಕೆ ಪ್ರತಿಷೇಧ ಬರುತ್ತದೆ ಹಿಂದಿನಂತೇ ಪ್ರಕ್ರಿಯಾ. ಅತಿಜಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ॥ ೩ ॥



॥ ಸಂಹಿತಾಪಾಠಃ ॥

ಸ ಸುಷ್ಟುಭಾ ಸ ಸ್ತುಭಾ ಸಪ್ತ ವಿಪ್ರೈಃ ಸ್ವರೇಣಾದ್ರಿಂ ಸ್ವರ್ಯೋ೩ ನವಗ್ವೈಃ ।
ಸರಣ್ಯುಭಿಃ ಫಲಿಗಮಿಂದ್ರ ಶಕ್ರ ವಲಂ ರವೇಣ ದರಯೋ ದಶಗ್ವೈಃ ॥ ೪ ॥

॥ ಪದಪಾಠಃ ॥

ಸಃ । ಸುಽಸ್ತುಭಾ । ಸಃ । ಸ್ತುಭಾ । ಸಪ್ತ । ವಿಪ್ರೈಃ । ಸ್ವರೇಣ । ಅದ್ರಿಂ । ಸ್ವರ್ಯಃ । ನವಽಗ್ವೈಃ ॥
ಸರಣ್ಯುಽಭಿಃ । ಫಲಿಽಗಂ । ಇಂದ್ರ । ಶಕ್ರ । ವಲಂ । ರವೇಣ । ದರಯಃ । ದಶಽಗ್ವೈಃ ॥ ೪ ॥

॥ ಸಾಯಣಭಾಷ್ಯಂ ॥

ಅಂಗಿರಸೋ ದ್ವಿವಿಧಾಃ । ಸತ್ರಯಾಗಮನುತಿಷ್ಠಂತೋ ಯೇ ನವಭಿರ್ಮಾಸೈಃ ಸಮಾಪ್ಯ ಗತಾಸ್ತೇ ನವಗ್ವಾಃ ॥ ನವಗ್ವಾ ನವನೀತಗತಯ ಇತಿ ಯಾಸ್ಕೋ ವ್ಯಾಚಖ್ಯೌ । ನಿ. ೧೧-೧೯ । ಯೇ ತು ದಶಭಿರ್ಮಾಸೈಃ ಸಮಾಪ್ಯ ಜಗ್ಮುಸ್ತೇ ದಶಗ್ವಾಃ । ತಾದೃಶೈರುಭಯವಿಧೈರ್ವಿಪ್ರೈರ್ಮೇಧಾವಿಭಿಃ

ಸರಣ್ಯುಭಿಃ ಸರಣಂ ಶೋಭನಾಂ ಗತಿಮಿಚ್ಛದ್ಭಿಃ ಸಪ್ತ ಸಪ್ತಸಂಖ್ಯಾಕೈಃ । ಸಪ್ತ ಹ್ಯತ್ರ ಮೇಧಾತಿಥಿಪ್ರಭೃತಯೋಽಂಗಿರಸೋ ದೃಶ್ಯಂತೇ । ಏವಂಭೂತೈರಂಗಿರೋಭಿಃ ಸುಷ್ಟುಭಾ ಶೋಭನಸ್ತೋಭಯುಕ್ತೇನ ಸ್ವರೇಣೋದಾತ್ತಾದಿಶ್ರವ್ಯಸ್ವರೋಪೇತೇನ । ಯದ್ವಾ । ಮಂದ್ರಮಧ್ಯಮಾದಿಸ್ವರೇಣ ಸ್ತುಭಾ ಸ್ತೋತ್ರೇಣ ಸ್ವರ್ಯೈಃ ಸುಷ್ಠು ಪ್ರಾಪ್ಯೈಃ । ಯದ್ವಾ । ಶಬ್ದನೀಯಃ । ಸ್ತುತ್ಯ ಇತ್ಯರ್ಥಃ । ಹೇ ಶಕ್ರ ಶಕ್ತಿಮನ್ನಿಂದ್ರ ಏವಂಭೂತಃ ಸ ತ್ವಮದ್ರಿಮಾದರಣೀಯಂ । ವಜ್ರೇಣ ಛೇತ್ತವ್ಯಮಿತ್ಯರ್ಥಃ । ಫಲಿಗಂ । ಪ್ರತಿಫಲಂ ಪ್ರತಿಬಿಂಬಂ । ತದಸ್ಮಿನ್ನಸ್ತೀತಿ ಫಲಿ ಸ್ವಚ್ಛಮುದಕಂ । ತದ್ಗಚ್ಛತ್ಯಾಧಾರತ್ವೇನೇತಿ ಫಲಿಗಃ । ಯದ್ವಾ । ವ್ರೀಹ್ಯಾದಿ ಫಲಂ । ತದಸ್ತ್ಯಸ್ಮಿನ್ಸತಿ ಭವತೀತಿ ಫಲಿ ವೃಷ್ಟಿಜಲಂ । ತದ್ಗಚ್ಛತೀತಿ ಫಲಿಗಃ । ಏವಂಭೂತಂ ವಲಂ ಮೇಘಂ ರವೇಣಾತ್ಮೀಯೇನ ಶಬ್ದೇನ ದರಯಃ । ಅಭಾಯಯಃ । ತ್ವದೀಯಶಬ್ದಶ್ರವಣಮಾತ್ರೇಣ ಮೇಘೋ ಬಿಭೇತೀತ್ಯರ್ಥಃ । ಯದ್ವಾ । ಅದ್ರಿಃ ಪರ್ವತಃ । ಆದ್ರಿಯತೇಽಸ್ಮಿನ್ಪಟಲಾದಿಕಮಿತಿ । ಫಲಿಗೋ ಮೇಘಃ । ಫಲಿಗ ಉಪಲ ಇತಿ ತನ್ನಾಮಸು ಪಾಠಾತ್ । ವಲೋಽಸುರಃ । ದೇವಾ ವೈ ವಲೇ ಗಾಃ ಪರ್ಯಪಶ್ಯನ್ । ಐ. ಬ್ರಾ. ೬-೨೪ । ಇತ್ಯಾದಾವಸುರೇ ಪ್ರಯುಕ್ತತ್ವಾತ್ । ಏತೇ ತ್ರಯೋಽಪಿ ತ್ವದೀಯಶಬ್ದಶ್ರವಣಮಾತ್ರೇಣಾಬಿಭಯುರಿತ್ಯರ್ಥಃ ॥ ಸ ಇತ್ಯೇಕಃ ಪಾದಪೂರಣಃ । ಸುಷ್ಟುಭಾ । ಸ್ತೋಭತಿಃ ಸ್ತುತಿಕರ್ಮಾ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಶೋಭನಃ ಸ್ತುಪ್ ಸ್ತೋಭೋ ಯಸ್ಯ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಉಪಸರ್ಗಾತ್ಸುನೋತೀತಿ ಷತ್ವಂ । ಸ್ತುಭಾ । ಕರಣಭೂತಸ್ಯಾಪಿ ಸ್ತೋತ್ರಸ್ಯ ಸ್ವವ್ಯಾಪಾರೇ ಕರ್ತೃತ್ವಾತ್ ಸ್ತೋಭತಿ ಸ್ತೌತೀತಿ ಕ್ವಿಪ್ಚೇತಿ ಕರ್ತರಿ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಸಪ್ತ । ಸುಪಾಂ ಸುಲುಗಿತಿ ಭಿಸೋ ಲುಕ್ । ಸ್ವರ್ಯೈಃ । ಸ್ವೃ ಶಬ್ದೋಪತಾಪಯೋಃ । ಋಹಲೋರ್ಣ್ಯದಿತಿ ಣ್ಯತ್ । ವೃದ್ಧ್ಯಭಾವಶ್ಛಾಂದಸಃ । ತಿತ್ಸ್ವರಿತ ಇತಿ ಸ್ವರಿತತ್ವಂ । ನವಗ್ವೈಃ । ನವಶಬ್ದ ಉಪಪದೇ ಗಮೇರ್ಭಾವೇ ಕ್ವಿಪಿ ಗಮಃ ಕ್ವಾವಿತ್ಯನುನಾಸಿಕಲೋಪ ಊ ಚ ಗಮಾದೀನಾಮಿತಿ ವಕ್ತವ್ಯಂ । ಪಾ ೬-೪-೪೦-೨ । ಇತ್ಯೂಕಾರಾಂತಾದೇಶಃ । ನವಭಿರ್ಗರ್ಗಮನಂ ಯೇಷಾಂ ತೇ ನವಗ್ವಾಃ । ಅಕಾರೋಪಜನಶ್ಛಾಂದಸಃ । ಯದ್ವಾ । ಗಮೇರ್ಭಾವೇ ಡ್ವಪ್ರತ್ಯಯಃ । ಪೂರ್ವವದ್ಬಹುವ್ರೀಹಿಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಸರಣ್ಯುಭಿಃ । ಸರಣಮಾತ್ಮನ ಇಚ್ಛಂತಃ ಸರಣ್ಯವಃ । ಕ್ಯಚ್ಯಂತ್ಯಲೋಪಶ್ಛಾಂದಸಃ । ಕ್ಯಾಚ್ಛಂದಸೀತ್ಯುಃ । ಫಲಿಗಂ । ಫಲ್ಯುದಕಂ ಗಚ್ಛತೀತಿ ಫಲಿಗಃ । ಡೋಽನ್ಯತ್ರಾಪಿ ದೃಶ್ಯತೇ । ಪಾ. ೩-೨-೪೮ । ಇತಿ ಗಮೇರ್ಡಃ । ವಲಂ । ವೃಣೋತೀತಿ ವಲಃ । ಪಚಾದ್ಯಚ್ । ಕಪಿಲಕಾದಿತ್ವಾಲ್ಲತ್ವಂ । ಪಾ ೮-೨-೧೮ । ದರಯಃ । ದೄ ವಿದಾರಣೇ । ವೃದ್ಧೌ ಕೃತಾಯಾಂ ದೄ ಭಯ ಇತಿ ಘಟಾದಿಷು ಪಾಠಾನ್ಮಿತ್ತ್ವೇ ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ ॥

॥ ಪ್ರತಿಪದಾರ್ಥ ॥

**ಸಃ**—ಇಂದ್ರನು । **ನವಗ್ವೈಃ**—ಒಂಭತ್ತು ತಿಂಗಳುಗಳಲ್ಲಿ ಸತ್ರಯಾಗವನ್ನು ಮುಗಿಸಿದ । **ದಶಗ್ವೈಃ**—ಹತ್ತು ತಿಂಗಳುಗಳಲ್ಲಿ ಸತ್ರಯಾಗವನ್ನು ಮುಗಿಸಿದ । **ಸರಣ್ಯುಭಿಃ**—ಸದ್ಗತಿಯನ್ನಪೇಕ್ಷಿಸುವ । **ಸಪ್ತ**—ಏಳು

ಜನ । **ವಿಪ್ರೈಃ**—ಮೇಧಾವಿಗಳಾದ (ಅಂಗಿರಸರುಗಳಿಂದ) । **ಸುಷ್ಟುಭಾ** -ಒಳ್ಳೆಯ ಸ್ತೋತ್ರರೂಪವಾದ । **ಸ್ವರೇಣ** -ಉದಾತ್ತಾದಿ ಸ್ವರಗಳು ಅಥವಾ ಮಂದ್ರಾದಿ ಸ್ವರಗಳಿಂದ ಯುಕ್ತವಾದ । **ಸ್ತುಭಾ**—ಸ್ತುತಿ ವಾಕ್ಯಗಳಿಂದ । **ಸ್ವರ್ಯಃ**—ಪ್ರಾಪ್ಯನು । **ಶಕ್ರ**—ಶಕ್ತಿಯು ತನಾದ । **ಇಂದ್ರ**—ಇಂದ್ರನೇ । **ಸಃ**—ಅಂತಹ ನೀನು । **ಅದ್ರಿಂ**—ಆದರಣೀಯವಾದ (ವಜ್ರದಿಂದ ಭೇದಿಸಲ್ಪಡಬೇಕಾದ) । **ಫಲಿಗಂ**—ಪ್ರತಿಬಿಂಬವನ್ನು ಕೊಡುವಷ್ಟು ಸ್ವಚ್ಛವಾದ ನೀರಿಗೆ ಆಶ್ರಯವಾದ ಅಥವಾ ವ್ರೀಹ್ಯಾದಿ ಫಲಕೊಡುವ ವೃಷ್ಟಿಜಲವುಳ್ಳ । **ವಲಂ**—ಮೇಘವನ್ನು । ಅಥವಾ, [**ಅದ್ರಿಃ**—ವಜ್ರದಿಂದ ಭೇದಿಸಲ್ಪಡುವ ಪರ್ವತವನ್ನು । **ಫಲಿಗಂ**—ವೃಷ್ಟಿ ಜಲಕ್ಕೆ ಆಧಾರವಾದ **ವಲಂ** –ವಲನಾಮಕ ರಾಕ್ಷಸನನ್ನು] । **ರವೇಣ**—(ನಿನ್ನ ಸಂಬಂಧವಾದ) ಶಬ್ದದಿಂದ । **ದರಯಃ**—ಭೀತನನ್ನಾಗಿ ಮಾಡಿದೆ, ಛೇದಿಸಿದೆ ॥

॥ ಭಾವಾರ್ಥ ॥

ಸತ್ರಯಾಗವನ್ನು ಒಂಭತ್ತು ಅಥವಾ ಹತ್ತು ತಿಂಗಳುಗಳಲ್ಲಿ ಮುಗಿಸಿದ ಏಳು ಜನ ಮೇಧಾವಿಗಳಾದ ಅಂಗಿರಸರು ನಿನ್ನನ್ನು ಉದಾತ್ತಾದಿ ಶ್ರಾವ್ಯವಾದ ಸ್ವರಯುಕ್ತವಾಗಿ ಅಥವಾ ಮಂದ್ರಮಧ್ಯಮಾದಿ ಸ್ವರಯುಕ್ತವಾಗಿ ಸ್ತುತಿಸಿ ನಿನ್ನನ್ನು ಹೊಂದಿದರು ಒಲಿಸ್ಥನಾದ ನಿನ್ನ ಶಬ್ದಮಾತ್ರದಿಂದಲೇ ಮೇಘ, ಪರ್ವತ ಮತ್ತು ವಲಾಸುರ, ಈ ಮೂವರೂ ಭೀತರಾಗುತ್ತಾರೆ

## English Translation

O powerful Indra you are to be gratified with a laudatory and well-accented hymn by the seven priests when engaged for nine months or for ten, and desirous of safe protection, you have terrified by your voice the divisible and fructifying cloud

॥ ವಿಶೇಷವಿಷಯಗಳು ॥

**ಸುಷ್ಟುಭಾ—ಸ್ತೋಭತಿಃ ಸ್ತುತಿಕರ್ಮಾ । ಶೋಭನಃ ಸ್ತೋಭೋ ಯಸ್ಯ ।** ಉತ್ತಮವಾದ ಸ್ತೋತ್ರಗಳಿಂದ ಯುಕ್ತವಾದ

**ಸ್ತುಭಾ**—ಸ್ತೋತ್ರದಿಂದ

**ಸಪ್ತ ವಿಪ್ರೈಃ**—ಮೇಧಾತಿಥಿ ಮೊದಲಾದ ಏಳು ಜನ ಅಂಗಿರಾಋಷಿಯ ವಂಶಸ್ಥರಿಂದ; ಸ್ಕಂದಸ್ವಾಮಿಯು ಈ ಶಬ್ದಗಳಿಗೆ— **ಸಪ್ತರ್ಷಯೋ ಭರದ್ವಾಜಃ ಕಶ್ಯಪೋ ಗೌತಮೋಽತ್ರಿಃ । ವಿಶ್ವಾಮಿತ್ರೋ ಜಮದಗ್ನಿರ್ವಸಿಷ್ಠಃ ಸಪ್ತಮಃ ಸ್ಮೃತಃ ॥** ಭರದ್ವಾಜ, ಕಶ್ಯಪ, ಗೌತಮ, ಅತ್ರಿ, ವಿಶ್ವಾಮಿತ್ರ, ಜಮದಗ್ನಿ, ವಸಿಷ್ಠ, ಎಂಬ ಪ್ರಸಿದ್ಧರಾದ ಸಪ್ತರ್ಷಿಗಳೆಂದು ಅರ್ಥವಿವರಣೆ ಮಾಡಿರುವರು. ವಿಪ್ರೈಃ ಎಂದರೆ ಮೇಧಾವಿಗಳಾದ ಎಂದರ್ಥವು.

**ಸ್ವರೇಣ—ಸ್ವರೇಣೋದಾತ್ತಾದಿಶ್ರವ್ಯಸ್ವರೋಪೇತೇನ ಅಥವಾ ಮಂದ್ರಮಧ್ಯಮಾದಿಸ್ವರೋಪೇತೇನ** ಎಂದರೆ ಋಗ್ವೇದಸ್ವರಗಳಾದ ಉದಾತ್ತ, ಅನುದಾತ್ತ, ಸ್ವರಿತ, ಪ್ರಚಯಗಳೆಂಬ ನಾಲ್ಕು ವಿಧವಾದ ಸ್ವರಗಳಿಂದ ಅಥವಾ ಮಂದ್ರ ಮಧ್ಯಮ ಮೊದಲಾದ ಸಪ್ತಸ್ವರಗಳಿಂದ ಯುಕ್ತವಾದ ಎಂಬು ಭಾಷ್ಯಕಾರರ ವಿವರಣೆಯು. ಸ್ಕಂದಸ್ವಾಮಿಯು—**ಸ್ವರತಿ ವೇನತೀತ್ಯರ್ಚತಿ ಕರ್ಮಸು ಪಾಠಾತ್ ಸ್ವರಶಬ್ದ ಇಹ ಸ್ತೋತ್ರವಚನಃ । ಅನ್ಯೇನ ಚ ಸ್ತೋತ್ರಾ ಜನೇನ ಸ್ತುತ್ಯಃ ।** ಎಂದರೆ ಸ್ವರತಿ ಧಾತುವಿಗೆ ಪೂಜಿಸು, ಸ್ತೋತ್ರ ಮಾಡು ಎಂದರ್ಥವು. ಸ್ವರ್ಯಃ ಎಂದರೆ ಇತರ ಜನರಿಂದ ಸ್ತುತಿಸಲ್ಪಡುವವನು ಎಂಬರ್ಥವನ್ನು ಹೇಳಿದ್ದಾರೆ.

**ಅದ್ರಿಂ**—ಪರ್ವತವನ್ನು ಅಥವಾ ಮೇಘವನ್ನು (ನಿ. ೨-೨೧)

**ಸ್ವರ್ಯಃ—ಸ್ವೃ ಶಬ್ದೋಪತಾಪಯೋಃ । ಸುಷ್ಟು ಪ್ರಾಪ್ಯಃ । ಯದ್ವಾ ಶಬ್ದನೀಯಃ ಸ್ತುತ್ಯ ಇತ್ಯರ್ಥಃ ।** ಹೊಂದಲ್ಪಡುವವನು ಅಥವಾ ಸ್ತುತಿಸಲ್ಪಡುವವನು

**ನವಗ್ವೈಃ, ದಶಗ್ವೈಃ—ನವಭಿರ್ಮಾಸೈರ್ಗಚ್ಛಂತೀತಿ ನವಗ್ವಾಃ । ದಶಭಿರ್ಮಾಸೈರ್ಗಚ್ಛಂತೀತಿ ದಶಗ್ವಾಃ । ಅಂಗಿರಸಾಂ ಸತ್ರಮಾಸೀನಾನಾಂ ಮಧ್ಯೇ ಯೇ ನವಭಿರ್ಮಾಸೈರವಾಪ್ತಫಲಾ ಉತ್ಥಿತಾ ಸ್ತೇಷಾಂ ನವಗ್ವಾ ಇತಿ ಸಂಜ್ಞಾ । ದಶಭಿರ್ಮಾಸೈರ್ದಶಗ್ವಾ ಇತಿ ಚ ॥** ಅಂಗಿರಾಋಷಿಯ ವಂಶದಲ್ಲಿ ಕೆಲವರು ಸಂವತ್ಸರಕಾಲಮಾಡುವ ಸತ್ರಯಾಗದಲ್ಲಿ ಒಂಭತ್ತು ತಿಂಗಳಲ್ಲಿಯೇ ಯಜ್ಞಾನುಷ್ಠಾನದಿಂದ ಸಿದ್ಧಿಯನ್ನು ಪಡೆದಿರುವರು ಅವರನ್ನು **ಅಂಗಿರಸ್ತಮಾ ನವಗ್ವಾಃ** ಒಂಭತ್ತು ತಿಂಗಳಲ್ಲಿಯೇ ಇಷ್ಟಸಿದ್ಧಿಯನ್ನು ಪಡೆದ ಅಂಗಿರಾಋಷಿವಂಶಸ್ಥರಲ್ಲಿ ಶ್ರೇಷ್ಠರಾದವರು ಎಂದೂ ಹತ್ತು ತಿಂಗಳಲ್ಲಿ ಇಷ್ಟಸಿದ್ಧಿಯನ್ನು ಪಡೆದ ಅಂಗಿರಾ ಋಷಿವಂಶಸ್ಥರನ್ನು **ದಶಗ್ವಾಃ** ಎಂದೂ ಹೇಳುವ ರೂಢಿ ಇದೆ ಈ ವಿಷಯದಲ್ಲಿ ಪಾಶ್ಚಾತ್ಯ ಪಂಡಿತರು ಈ ಶಬ್ದದ ಅರ್ಥವಿವರಣೆ ಮಾಡುವಾಗ—The term Navagva is applied to a man generally an Angiras, in the highest degree (Angirastama-ಅಂಗಿರಸ್ತಮ) who appears as a mystic race of olden times coupled with, and conceived probably as related to the Angirases they are often associated with the Dasagvas (ದಶಗ್ವ) ಈ ಶಬ್ದ ಪ್ರಯೋಗವು ಋಗ್ವೇದದ ಅನೇಕ ಸೂಕ್ತಗಳಲ್ಲಿರುವುವು ಕೆಲವು ಉದಾಹರಣೆಗಳನ್ನು ಕೊಡುವೆವು

**ಯೇನಾ ನವಗ್ವೇ ದಧ್ಯಙ್ಙಪೋರ್ಣುತೇ ಯೇನ ವಿಪ್ರಾಸ ಆಪಿರೇ ।**

(ಋ ಸಂ ೯-೧೦೮-೪)

**ನವಗ್ವೋ ನು ದಶಗ್ವೋ ಅಂಗಿರಸ್ತಮಃ ಸಚಾ ದೇವೇಷು ಮಂಹತೇ**

(ಋ ಸಂ ೧೦-೬೨-೬)

**ಸಖಾ ಹ ಯತ್ರ ಸಖಿಭಿರ್ನವಗ್ವೈರಭಿಜ್ಞ್ವಾ ಸತ್ವಭಿರ್ಗಾ ಅನುಗ್ಮನ್ ।**

(ಋ. ಸಂ. ೩-೩೯-೫)

**ಅಂಗಿರಸೋ ನಃ ಪಿತರೋ ನವಗ್ವಾ ಅಥರ್ವಾಣೋ ಭೃಗವಃ ಸೋಮ್ಯಾಸಃ ।**

(ಋ ಸಂ ೧೦-೧೪-೬)

**ಯೇನಾ ನವಗ್ವೇ ಅಂಗಿರೇ ದಶಗ್ವೇ ಸಪ್ತಾಸ್ಯೇ ರೇವತೀ ರೇವದೂಷ ॥**

(ಋ. ಸಂ ४-೫೧ ४)

ಇತ್ಯಾದಿ ಅನೇಕ ಋಗ್ವೇದದ ಸೂಕ್ತಗಳಲ್ಲಿಯೂ, ಅಥರ್ವೇದ ಸಂ ೧೯-೧-೫೬, ೧೮-೩-೨೦ ಮೊದಲಾದ ಮಂತ್ರಗಳಲ್ಲಿಯೂ ಈ ಶಬ್ದಗಳ ಪ್ರಯೋಗವಿದೆ. ಇವುಗಳಲ್ಲಿ ಎರಡನೆಯ ಉದಾಹರಣೆಯಲ್ಲಿ ಹೇಳಿರುವ ನವಗ್ವ ಮತ್ತು ದಶಗ್ವ ಎಂಬ ಪ್ರಖ್ಯಾತಿ ನಾಮವನ್ನು ನಡೆದ ಅಂಗಿರಋಷಿವಂಶದಲ್ಲಿ ಶ್ರೇಷ್ಠನಾದವನು ದೇವತಗಳಿಂದಲೂ ಗೌರವಿಸಲ್ಪಡುತ್ತಾನೆ ಎಂಬುದು ಗಮನಾರ್ಹವಾಗಿದೆ

**ಸರಣ್ಯುಭಿಃ--ಸರಣಂ ಶೋಭನಾಗತಿಮಿಚ್ಛದ್ಭಿಃ**--ಉತ್ತಮವಾದ ಗಮನಯುಕ್ತರಾದ.

**ಫಲಿಗಂ—ಪ್ರತಿಫಲಂ ಪ್ರತಿಬಿಂಬಂ । ತದಸ್ಮಿನ್ನಸ್ತೀತಿ ಫಲಿ ಸ್ವಚ್ಛಮುದಕಂ । ತದ್ಗಚ್ಛತ್ಯಾ-ಧಾರತ್ವೇನೇತಿ ಫಲಿಗಂ । ಯದ್ವಾ ವ್ರೀಹ್ಯಾದಿಫಲಂ । ತದಸ್ತ್ಯಸ್ಮಿನ್ಸತಿ ಭವತೀತಿ ಫಲಿ ವೃಷ್ಟಿಜಲಂ । ತದ್ಗಚ್ಛತೀತಿ ಫಲಿಗಃ ಮೇಘಃ ॥** ಪ್ರತಿಫಲ ಅಥವಾ ಪ್ರತಿಬಿಂಬವು ಇದರಲ್ಲಿ ಕಾಣಿಸುವುದರಿಂದ ಇದಕ್ಕೆ ಫಲಿ ಎಂದರೆ ನೀರು ಎಂದು ಹೆಸರು ಅಂತಹ ಸ್ವಚ್ಛವಾದ ನೀರನ್ನು ದೊರೆಯುವಂತೆ ಮಾಡುವ ಮೇಘವು. ಅಥವಾ ಫಲನೆಂದರೆ ವ್ರೀಹ್ಯಾದಿಧಾನ್ಯರೂಪವಾದ ಫಲವು ಅವುಗಳನ್ನು ಉಂಟುಮಾಡುವ ಜಲಕ್ಕೆ ಫಲಿ ಎಂದು ಹೆಸರು ಅಂತಹ ಜಲವನ್ನು ವೃಷ್ಟಿರೂಪದಲ್ಲಿ ಸುರಿಯುವ ಮೇಘಕ್ಕೆ ಫಲಿಗು ಎಂದು ಹೆಸರು

**ವಲಂ** ವಲಂ ಎಂದರ ವಲ ಎಂಬ ಅಸುರನನ್ನು ಅಥವಾ ಮೇಘವನ್ನು ಎಂವರ್ಥವು

**ರವೇಣ ದರಯಃ- ಮಹತಾ ಶಬ್ದೇನೈವ ವಿದಾರಿತವಾನಸಿ ।** ಘಟ್ಟಿಯಾದ ಶಬ್ದಮಾತ್ರದಿಂದಲೇ ಸೀಳುವೆ ಎಂದರೆ ವಜ್ರಾಯುಧದಿಂದ ಉಂಟಾಗುವ ಶಬ್ದದಿಂದಲೇ ಪರ್ವತವನ್ನ ಅಥವಾ ಮೇಘವನ್ನೂ ಸೀಳಿ ಮೇಘವು ಮಳೆಯನ್ನು ಸುರಿಯುವಂತೆ ಮಾಡುವೆ ಎಂದಭಿಪ್ರಾಯವು

॥ ವ್ಯಾಕರಣಪ್ರಕ್ರಿಯಾ ॥

**ಸಃ**—ಇಲ್ಲಿ ಬಂದು ಸ ಎಂಬುದು ಪಾದಪೂರಣೆಗೋಸ್ಕರ ಗ್ರಹೀತವಾಗಿದ

**ಸುಷ್ಟುಭಾ**--ಸ್ತೋಭತಿಃ ಸ್ತುತಿಕರ್ಮಾ **ಸಂಪದಾದಿಭ್ಯಃ ಕ್ವಿಪ್** (ವಾ ೨೨೩೩) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್ ಸ್ತುಪ್ ಎಂದಾಗುತ್ತದೆ ಶೋಭನಃ ಸ್ತುಪ್ ಸ್ತೋಭೋ ಯಸ್ಯ ಸುಷ್ಟುಪ್ **ನಞ್ ಸುಭ್ಯಾಂ** ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ ಸು ಸ್ತುಪ್ ಎಂದಿರುವಾಗ **ಉಪಸರ್ಗಾತ್ ಸುನೋತಿ** (ಪಾ ಸೂ ೮-೩-೬೫) ಎಂಬುದರಿಂದ ಧಾತುವಿಗೆ ಷತ್ವ. ತೃತೀಯಾ ಏಕವಚನರೂಪ

**ಸ್ತುಭಾ**— ಯದ್ಯಪಿ ಸ್ತೋತ್ರವು ಕರಣವಾಗಿರುತ್ತದೆ ಆದರೂ ಸ್ವವ್ಯಾಪಾರದಲ್ಲಿ ಕರ್ತೃವಾದುದರಿಂದ, ಸ್ತೋಭತಿ ಸ್ತೌತಿ (ಇತಿ) ಎಂಬರ್ಥದಲ್ಲಿ **ಕ್ವಿಪ್ ಚ** ಎಂಬುದರಿಂದ ಕರ್ತ್ರರ್ಥದಲ್ಲಿ ಕ್ವಿಪ್ ತೃತೀಯಾ ಏಕವಚನದಲ್ಲಿ ಸ್ತುಭಾ ಎಂದು ರೂಪವಾಗುತ್ತದೆ. **ಸಾವೇಕಾಚಃ ತೃತೀಯಾದಿಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದ.

**ಸಪ್ತ**—ಸಪ್ತ + ಭಿಸ್ ಎಂದಿರುವಾಗ **ಸುಪಾಂಸುಲುಕ್** ಎಂಬುದರಿಂದ ಭಿಸಿಗೆ ಲುಕ್

**ಸ್ವರ್ಯಃ**—ಸ್ವೃ ಶಬ್ದೋಪತಾಪಯೋಃ ಧಾತು **ಋಹಲೋರ್ಣ್ಯತ್** ಎಂಬುದರಿಂದ ಣ್ಯತ್ ಣಿತ್ತಾದುದರಿಂದ **ಅಚೋಞ್ಣಿತಿ** ಎಂಬುದರಿಂದ ವೃದ್ಧಿಯು ಛಾಂದಸವಾಗಿ ಬರುವುದಿಲ್ಲ ಗುಣ ಬಂದರೆ ಸ್ವರ್ಯ ಎಂದು ರೂಪವಾಗುತ್ತದೆ **ತಿತ್ಸ್ವರಿತಮ್** ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ನವಗ್ವೈಃ**—ನವ ಶಬ್ದವು ಉಪಪದವಾಗಿರುವಾಗ ಗಮ್ ಧಾತುವಿಗೆ ಭಾವಾರ್ಥದಲ್ಲಿ ಕ್ವಿಪ್ **ಗಮಃ ಕ್ವೌ** (ಪಾ ಸೂ ೬-೪-೪೦) ಎಂಬುದರಿಂದ ಗಮಿನ ಅನುನಾಸಿಕವಾದ ಮಕಾರಕ್ಕೆ ಲೋಪ. ನವಗ ಎಂದಿರುವಾಗ **ಊಚ ಗಮಾದೀನಾಮಿತಿ ವಕ್ತವ್ಯಮ್** (ಪಾ. ಸೂ. ೬-೪-೪೦-೨) ಎಂಬುದರಿಂದ ಊಕಾರವು ಅಂತಾದೇಶವಾಗಿ ಬರುತ್ತದೆ. ನವಭಿಃ ಗೂಃ=ಗಮನಂ ಯೇಷಾಂ ತೇ ನವಗ್ವಾಃ ಇಲ್ಲಿ ಅಕಾರವು ಛಾಂದಸವಾಗಿ ಬರುತ್ತದ. ಅಥವಾ ಗಮ್ ಧಾತುವಿಗೆ ಭಾವಾರ್ಥದಲ್ಲಿ ಡ್ವಪ್ರತ್ಯಯ ಡಿತ್ತಾದುದರಿಂದ ಟಿಲೋಪ ಗ್ವ ಎಂದು ಸ್ವರಸವಾಗಿ ರೂಪವಾಗುತ್ತದೆ ಹಿಂದಿನಂತೆಯೇ ಬಹುವ್ರೀಹಿಸಮಾಸ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ

**ಸರಣ್ಯುಭಿಃ**—ಸರಣಂ ಆತ್ಮನಃ ಇಚ್ಛಂತಃ ಸರಣ್ಯವಃ **ಸುಪ ಆತ್ಮನಃ ಕ್ಯಚ್** ಎಂಬುದರಿಂದ ಸರಣ ಶಬ್ದದ ಮೇಲೆ ಕ್ಯಚ್ ಕ್ಯಚ್‌ಪರದಲ್ಲಿರುವಾಗ ಛಾಂದಸವಾಗಿ ಅಂತ್ಯಲೋಪ ಸರಣ್ಯ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ **ಕ್ಯಾಚ್ಛಂದಸಿ** ಎಂಬುದರಿಂದ ಕ್ಯಜಂತದ ಮೇಲೆ ಉಪ್ರತ್ಯಯ **ಅತೋ ಲೋಪಃ** ಎಂಬುದರಿಂದ ಅಕಾರಲೋಪ ಸರಣ್ಯು ಶಬ್ದವಾಗುತ್ತದೆ ಪ್ರತ್ಯಯಸ್ವರದಿಂದ ಅಂತೋದಾತ್ತ ಸರಣ್ಯುಭಿಃ ತೃತೀಯಾ ಬಹುವಚನಾಂತರೂಪ.

**ಫಲಿಗಮ್**—ಫಲಿ ಉದಕಂ ಗಚ್ಛತಿ ಇತಿ ಫಲಿಗಃ ಗಮ್ಲೃ ಗತೌ ಧಾತು **ಡೋಽನ್ಯತ್ರಾಪಿ ದೃಶ್ಯತೇ** (ಪಾ ಸೂ. ೩-೨-೪೮) ಎಂಬುದರಿಂದ ಇದಕ್ಕೆ ಡಪ್ರತ್ಯಯ ಡಿತ್ತಾದುದರಿಂದ ಭಸಂಜ್ಞಾ ಇಲ್ಲದಿದ್ದರೂ ಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ,

**ವಲಮ್**—ವೃಣೋತೀತಿ ವಲಃ. ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯಃ** ಎಂಬುದರಿಂದ ಅಚ್ ಪ್ರತ್ಯಯ. ಕಾಪಿಲಾದಿಯಲ್ಲಿ ಸೇರಿರುವುದರಿಂದ **ಕಾಪಿಲಕಾದಿತ್ವಾತ್ ಲತ್ವಂ** (ಪಾ ವ. ೮-೨-೧೮) ಎಂಬ ವಚನದಿಂದ ಲತ್ವ ವಲ ಎಂದು ರೂಪವಾಗುತ್ತದೆ

**ದರಯುಃ**—ದೄ ವಿದಾರಣೇ ಧಾತು, ಣಿಚ್ ಮಾಡಿದಾಗ **ಅಚೋಞ್ಣಿತಿ** ಎಂಬುದರಿಂದ ವೃದ್ಧಿ ಘಟಾದಿಯಲ್ಲಿ ಇದೇ ಧಾತುವು ಅರ್ಥಾಂತರದಲ್ಲಿ ದೄ ಭಯೇ ಎಂದು ಪಠಿತವಾದುದರಿಂದ ಮಿತ್‌ಸಂಜ್ಞಾ ಬರುತ್ತದೆ ಆದುದರಿಂದ **ಮಿತಾಂ ಹ್ರಸ್ವಃ** ಎಂಬುದರಿಂದ ಹ್ರಸ್ವಬರುತ್ತದೆ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಗೃಣಾನೋ ಅಂಗಿರೋಭಿರ್ದಸ್ಮ ವಿ ವರುಷಸಾ ಸೂರ್ಯೇಣ ಗೋಭಿರಂಧಃ ।
ವಿ ಭೂಮ್ಯಾ ಅಪ್ರಥಯ ಇಂದ್ರ ಸಾನು ದಿವೋ ರಜ ಉಪರಮಸ್ತಭಾಯಃ ॥ ೫ ॥

॥ ಪದಪಾಠಃ ॥

ಗೃಣಾನಃ । ಅಂಗಿರಃಽಭಿಃ । ದಸ್ಮ । ವಿ । ವಃ । ಉಷಸಾ । ಸೂರ್ಯೇಣ । ಗೋಭಿಃ । ಅಂಧಃ ॥
ವಿ । ಭೂಮ್ಯಾಃ । ಅಪ್ರಥಯಃ । ಇಂದ್ರ । ಸಾನು । ದಿವಃ । ರಜಃ । ಉಪರಂ । ಅಸ್ತಭಾಯಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ದಸ್ಮ ದರ್ಶನೀಯ ಶತ್ರೂಣಾಮುಪಕ್ಷಯಿತರ್ವೇಂದ್ರ ತ್ವಮಂಗಿರೋಭಿರೃಷಿಭಿರ್ಗೃಣಾನಃ ಸ್ತೂಯಮಾನಃ ಸನ್ ಉಷಸಾ ಸೂರ್ಯೇಣ ಚ ಸಹ ಗೋಭಿಃ ಕಿರಣೈರಂಧೋಽಂಧಕಾರಂ ವಿ ವಃ । ವ್ಯವೃಣೋಃ । ವ್ಯನಾಶಯ ಇತ್ಯರ್ಥಃ । ತಥಾ ಹೇ ಇಂದ್ರ ತ್ವಂ ಭೂಮ್ಯಾಃ ಪೃಥಿವ್ಯಾಃ ಸಾನು ಸಮುಚ್ಛ್ರಿತಪ್ರದೇಶಂ ವ್ಯಪ್ರಥಯಃ । ವಿಶೇಷೇಣ ವಿಸ್ತೀರ್ಣಮಕರೋಃ । ವಿಷಮಾಮಿಮಾಂ ಸಮೀಕೃತವಾನಿತ್ಯರ್ಥಃ । ತಥಾ ದಿವೋಽಂತರಿಕ್ಷಸ್ಯ ರಜೋ ರಜಸೋ ಲೋಕಸ್ಯೋಪರಮುಪ್ತಂ ಮೂಲಪ್ರದೇಶಮಸ್ತಭಾಯಃ । ಅಸ್ತಭ್ನಾಃ । ಯಥಾಂತರಿಕ್ಷಲೋಕಸ್ಯ ಮೂಲಂ ದೃಢಂ ಭವತಿ ತಥಾಕಾರ್ಷೀರಿತ್ಯರ್ಥಃ ॥ ಗೃಣಾನಃ । ಕರ್ಮಣಿ ಲಟಃ ಶಾನಚಿ ಯಕಿ ಪ್ರಾಪ್ತೇ ವ್ಯತ್ಯಯೇನ ಶ್ನಾ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ । ಚಿತ್ಸ್ವರೇಣಾಂತೋದಾತ್ತತ್ವಂ । ದಸ್ಮ । ದಸು ಉಪಕ್ಷಯೇ । ಇಷಿಯುಧೀಂಧಿದಸೀತ್ಯಾದಿನಾ ಮಕ್ । ವಃ । ವೃಞ್ ವರಣೇ । ಲುಙಿ ಸಿಪಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ । ಗುಣೇ ಹಲ್ಙ್ಯಾಬ್ಭ್ಯಃ ಇತಿ ಸಲೋಪಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಅಂಧಃ ।

ತಮೋಽಸ್ಯಂಧ ಉಚ್ಯತೇ ನಾಸ್ಮಿನ್ಧ್ಯಾನಂ ಭವತಿ । ನಿ. ೫-೧ । ಇತಿ ಯಾಸ್ಕಃ । ರಜಃ । ಲೋಕಾ ರಾಜಾಂಸ್ಯುಚ್ಯಂತ ಇತ್ಯುಕ್ತತ್ವಾದ್ರಜಃಶಬ್ದೋ ಲೋಕವಚನಃ । ಸುಪಾಂ ಸುಲುಗಿತಿ ಷಷ್ಠ್ಯಾ ಲುಕ್ । ಅಸ್ತಭಾಯಃ । ಲಜಾ ಸ್ತಂಭುಸ್ತುಂಭ್ವಿತ್ಯಾದಿನಾ । ಪಾ. ೩-೧-೮೨ । ಶ್ನಾಪ್ರತ್ಯಯಃ । ಛಂದಸಿ ಶಾಯಜಪಿ । ಪಾ. ೩-೧-೮೪ । ಇತ್ಯಹಾವಪಿ ವ್ಯತ್ಯಯೇನ ಶ್ನಾಪ್ರತ್ಯಯಸ್ಯ ಶಾಯಜಾದೇಶಃ । ಅನಿದಿತಾಮಿತಿ ನಲೋಪಃ ಅಡಾಗಮಃ ॥

॥ ಪ್ರತಿಪದಾರ್ಥ ॥

**ದಸ್ಮ**—ದರ್ಶನೀಯನೇ (ಸುಂದರನಾದ ಇಂದ್ರನೇ) ಅಥವಾ ಶತ್ರುನಾಶಕನೇ (ನೀನು) । **ಅಂಗಿರೋಭಿಃ**—ಅಂಗಿರಸರುಗಳಿಂದ । **ಗೃಣಾನಃ**—ಸ್ತುತಿಸಲ್ಪಟ್ಟವನಾಗಿ । **ಉಷಸಾ**—ಉಷಸ್ಸಿನಿಂದಲೂ । **ಸೂರ್ಯೇಣ**—ಸೂರ್ಯನಿಂದಲೂ (ಕೂಡಿ) । **ಗೋಭಿಃ**—ಕಿರಣಗಳಿಂದ । **ಅಂಧಃ**—ಅಂಧಕಾರವನ್ನು । **ವಿವಃ**—ತೆರೆದೆ (ನಾಶಮಾಡಿದೆ) । **ಇಂದ್ರ**—ಎಲೈ ಇಂದ್ರನೇ । **ಭೂಮ್ಯಾಃ**—ಭೂಮಿಯ । **ಸಾನು**—ಎತ್ತರವಾದ ಪ್ರದೇಶಗಳನ್ನು । **ವಿ ಅಪ್ರಥಯಃ**—ವಿಸ್ತೀರ್ಣವನ್ನಾಗಿ ಮಾಡಿದ (ಸಮಮಾಡಿದ) । (**ತಥಾ**—ಹಾಗೆಯೇ) । **ದಿವಃ ರಜಃ**—ಅಂತರಿಕ್ಷಲೋಕದ । **ಉಪರಾಃ**—ಮೂಲಪ್ರದೇಶವನ್ನು । **ಅಸ್ತಭಾಯಃ**—ದೃಢಪಡಿಸಿದೆ ॥

॥ ಭಾವಾರ್ಥ ॥

ಸುಂದರಾಕೃತಿಯುಳ್ಳ, ಶತ್ರುನಾಶಕನಾದ ಇಂದ್ರನೇ, ನೀನು ಅಂಗಿರಸರಿಂದ ಸ್ತುತನಾಗಿ, ಉಷಸ್ಸು, ಸೂರ್ಯ, ಇವರುಗಳಿಂದ ಯುಕ್ತನಾಗಿ ಅಂಧಕಾರವನ್ನು ನಾಶಮಾಡಿದ. ಭೂಮಿಯ ಎತ್ತರವಾದ ಪ್ರದೇಶಗಳನ್ನು ಸಮಮಾಡಿದೆ ಮತ್ತು ಅಂತರಿಕ್ಷಲೋಕದ ಮೂಲವನ್ನು ದೃಢಪಡಿಸಿದೆ.

English Translation

Destroyer of foes, praised by the Angirasas you have scattered the darkness with the dawn, and with the rays of the Sun ; you have strengthened the foundations of the firmament beneath the heaven

॥ ವಿಶೇಷವಿಷಯಗಳು ॥

ಅತ್ರೇದಮುಕ್ತಂ ಭವತಿ—ಹೇ ಇಂದ್ರ ಯತ್ತ್ವಂ ಸೂರ್ಯಾದಿತೇಜಸಾಮಾವರಕಂ ವೃತ್ರಂ ಹತ್ವಾ ತತ್ಕಿರಣರೂಪಾ ಗಾ ಮೋಚಿತವಾನಸಿ ತಥಾ ಯತ್ತ್ವಂ ಪೃಥಿವೀಂ ಸೃಷ್ಟ್ವಾ ತಸ್ಯಾಸ್ತಲಂ ವಿಸ್ತೀರ್ಣಂ ಕೃತವಾನಸಿ, ಅಂತರಿಕ್ಷಸ್ಯೋಪರಿ ಚ ದ್ಯುಲೋಕಂ ಸೃಷ್ಟ್ವಾ ಧಾರಯಸಿ ತತ್ಸರ್ವಮಸ್ಮಾಕಂ ಪಿತೃಭಿಃ ಅಂಗಿರೋಭಿಃ ಸ್ತುತಃ ಸನ್ನೇವ ಕೃತವಾನಸಿ ನಾನ್ಯಥಾ । ಅತಃ ಕಾರಣಾತ್ ತೇಷಾಮೇವಾಂಗಿರಸಾಂ ಪುತ್ರಾ ವಯಂ ತ್ವಾಂ ಸ್ತೋತುಮರ್ಹಾಮಃ ತ್ವಂ ಚ ನಃ ಸ್ತೋತ್ರಂ ಸಾವಧಾನಂ ಶ್ರೋತುಮರ್ಹಸೀತಿ ॥ ಮುಖ್ಯಾಭಿಪ್ರಾಯವೇನೆಂದರೆ—ಎಲೈ ಇಂದ್ರನೇ, ನಮ್ಮ ಪಿತೃಗಳಾದ ಅಂಗಿರಾ ಋಷಿಗಳು

ನಿನ್ನನ್ನು ಸ್ತೋತ್ರಮಾಡಲಾಗಿ ನೀನು ಅವರ ಸ್ತೋತ್ರವನ್ನು ಕೇಳಿ ಸೂರ್ಯನ ತೇಜಸ್ಸನ್ನು ಆವರಿಸಿದ್ದ ಮೇಘವನ್ನು ನಿವಾರಣೆ ಮಾಡಿ ಸೂರ್ಯನ ಕಿರಣಗಳನ್ನು ಪ್ರಕಾಶಿಸುವಂತೆ ಮಾಡಿದೆ ಭೂಮಿಯ ತಲವನ್ನು ಸಮನಾಗಿಯೂ ವಿಸ್ತೀರ್ಣವಾಗಿಯೂ ಆಗುವಂತೆ ಮಾಡಿದೆ ಅಂತರಿಕ್ಷದಲ್ಲಿ ಸ್ವರ್ಗಲೋಕವನ್ನು ಸೃಷ್ಟಿಸಿ ಅದನ್ನೂ ದೃಢವಾಗಿರುವಂತೆ ಮಾಡಿರುತ್ತೀಯೆ ಈ ವಿಧವಾದ ಕರ್ಮಗಳನ್ನು ನಮ್ಮ ಪಿತೃಗಳಾದ ಅಂಗಿರಾಋಷಿಗಳು ಮಾಡಿದ ಸ್ತೋತ್ರಗಳಿಂದ ಸಂತೋಷಪಟ್ಟು ಮಾಡಿರುವೆ. ಆದುದರಿಂದ ಅಂಗಿರಾಋಷಿಯ ಪುತ್ರರಾದ ನಮ್ಮ ಸ್ತೋತ್ರವನ್ನು ಸಾವಧಾನವಾಗಿ ಕೇಳು ಎಂದಭಿಪ್ರಾಯವು

**ಗೃಣಾನಃ— ಸ್ತೂಯಮಾನಃ ಸನ್** I ಸ್ತೋತ್ರಮಾಡಲ್ಪಟ್ಟವನಾಗಿ

**ದಸ್ಮ—ದರ್ಶನೀಯ I ಅಥವಾ ದಸು ಉಪಕ್ಷಯೇ I ಶತ್ರೂಣಾಮುಪಕ್ಷಯಿತರಿಂದ್ರ** I ಸುಂದರನಾದ ಅಥವಾ ಶತ್ರುಗಳನ್ನು ನಾಶಮಾಡುವ

**ಗೋಭಿಃ**— ಕಿರಣಗಳಿಂದ , **ಸರ್ವೇಽಪಿ ರಶ್ಮಯೋ ಗಾವ ಉಚ್ಯಂತೇ** (ನಿ – ೬).

**ಅಂಧಃ** – ತಮಸ್ಸು, ಕತ್ತಲೆ (ನಿ ೫-೧).

**ರಜಃ** –**ಲೋಕವು I ಲೋಕಾ** ರಜಾಂಸ್ಯುಚ್ಯಂತೇ (ನಿ ४-೧೯).

**ಸಾನು— ಸಮುಚ್ಛ್ರಿತಪ್ರದೇಶಂ I** ಎತ್ತರವಾದ ಪ್ರದೇಶವನ್ನು (ಸಮನಾಗಿ ಮಾಡಿದೆ)

॥ ವ್ಯಾಕರಣಪ್ರಕ್ರಿಯಾ ॥

**ಗೃಣಾನಃ**-- ಕರ್ಮಾರ್ಥದಲ್ಲಿ **ಲಟ್** ಬಂದಾಗ ಅದಕ್ಕೆ ಶಾನಚ್ ಕರ್ಮಣಿಯಲ್ಲಿ **ಸಾರ್ವಧಾತುಕೇಯಕ್** ಎಂಬುದರಿಂದ ವಿಕರಣಸ್ಥಾನದಲ್ಲಿ ಯಕ್ ಪ್ರಾಪ್ತವಾದರೆ **ವ್ಯತ್ಯಯೋ ಬಹುಲಂ** ಎಂಬುದರಿಂದ ಅದಕ್ಕೆ ಶ್ನಾ ಬರುತ್ತದೆ ಪ್ವಾದಿಯಲ್ಲಿ ಸೇರಿರುವುದರಿಂದ ಶ್ನಾಪರದಲ್ಲಿರುವಾಗ **ಪ್ವಾದೀನಾಂ ಹ್ರಸ್ವಃ** (ಪಾ ಸೂ ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ ಬರುತ್ತದೆ. **ಋವರ್ಣಾನ್ನಸ್ಯ ಣತ್ವಂ ವಾಚ್ಯಂ** ಎಂಬ ವಚನದಿಂದ ಶ್ನಾ ನಕಾರಕ್ಕೆ ಣತ್ವ ಗೃಣಾನಃ ಎಂದು ರೂಪವಾಗುತ್ತದೆ ಶಾನಚ್ ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ

**ದಸ್ಮ**—ದಸು ಉಪಕ್ಷಯೇ ಧಾತು **ಇಷಿಯುಧೀಂಧಿದಸಿ**—(ಉ ಸೂ ೧-೧೪೨) ಎಂಬುದರಿಂದ ಮಕ್ ಪ್ರತ್ಯಯ, ದಸ್ಮ ಎಂದಾಗುತ್ತದೆ ಸಂಬುದ್ಧಿಯಲ್ಲಿಯೂ ಸುಲೋಪದಿಂದ ದಸ್ಮ ಎಂದಾಗುತ್ತದೆ. **ಆಮಂತ್ರಿತಸ್ಯ ಚ** ಎಂಬುದುದರಿಂದ ನಿಘಾತಸ್ವರ

**ವಃ**— ವೃಞ್ ವರಣೇ ಧಾತು ಲುಙ್‌ನಲ್ಲಿ ಮಧ್ಯಮಪುರುಷ ಏಕವಚನ ಸಿಪ್ **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಚ್ಲಿ ಲುಙಿ** ಎಂಬುದರಿಂದ ಚ್ಲಿವಿಕರಣ. ಅದಕ್ಕೆ **ಮಂತ್ರೇಘಸಹ್ವರಣ** (ಪಾ ಸೂ ೨-೪-೮೦) ಎಂಬುದರಿಂದ **ಲುಕ್**. ಸಿಪ್ ನಿಮಿತ್ತವಾಗಿ ಧಾತುವಿಗೆ ಗುಣ **ಉರಣ್ರಪರಃ** ಎಂಬುದರಿಂದ

ರಪರವಾಗಿ ಅರ್ ಬರುತ್ತದೆ. ಆಗ ಹಲ್ ಪರದಲ್ಲಿ ಸಿಪ್ಪಿನ ಅಪೃಕ್ತವಿರುವುದರಿಂದ **ಹಲ್ ಙ್ಯಾಭ್ಯೋದೀರ್ಘಾತ್—** ಸೂತ್ರದಿಂದ ಅದಕ್ಕೆ ಲೋಪ. ರೇಫಕ್ಕೆ **ಖರವಸಾನಯೋರ್ವಿಸರ್ಜನೀಯಃ** ಎಂಬುದರಿಂದ ವಿಸರ್ಗ. **ಬಹುಲಂ ಛಂದಸ್ಯಮಾಙ್ ಯೋಗೇಽಪಿ** ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ ವಃ ಎಂದು ರೂಪ ವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ

**ಅಂಧಃ**—ತಮೋಽಪ್ಯಂಧ ಉಚ್ಯತೇ ನಾಸ್ಮಿನ್ ಧ್ಯಾನಂ ಭವತಿ (ನಿರು ೫-೧) ಎಂಬುದಾಗಿ ಯಾಸ್ಕರು ಹೇಳಿರುತ್ತಾರೆ ಕತ್ತಲೆಯು ಧ್ಯಾನಕ್ಕೆ ಅಡ್ಡಿಯಾದುದರಿಂದ ಅಂಧಶಬ್ದದಿಂದ ವ್ಯವಹೃತವಾಗುತ್ತದೆ

**ರಜಃ**—ಲೋಕಾ ರಜಾಂಸ್ಯುಚ್ಯಂತೇ (ನಿರು ೪-೧೯) ಎಂದು ಹೇಳಿರುವುದರಿಂದ ರಜಃಶಬ್ದವು ಲೋಕ ವಾಚಿಯಾಗಿರುತ್ತದೆ **ಸುಪಾಂ ಸುಲುಕ್** ಎಂಬುದರಿಂದ ಷಷ್ಠಿಗೆ ಲುಕ್ ಬಂದಿದೆ

**ಅಸ್ತಭ್ನಾಯಃ**—ಸ್ತಂಭು ಸೌತ್ರವಾದ ಧಾತು. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ **ಇತಶ್ಚ** ಎಂಬುದರಿಂದ ಇಕಾರ ಲೋಪ **ಸ್ತಂಭು ಸ್ತುಂಭು**— (ಪಾ ಸೂ. ೩-೧-೮೨) ಎಂಬುದರಿಂದ ಶ್ನಾ ಪ್ರತ್ಯಯ. **ಛಂದಸಿ ಶಾಯಜಪಿ** (ಪಾ. ಸೂ. ೩-೧-೮೪) ಎಂಬುದರಿಂದ ಹಿ ಪರದಲ್ಲಿ ಇಲ್ಲದೇ ಇದ್ದರೂ ವ್ಯತ್ಯಯದಿಂದ ಶ್ನಾ ಪ್ರತ್ಯಯಕ್ಕೆ ಶಾಯಜಾದೇಶ **ಸಾರ್ವಧಾತುಕಮಪಿತ್** ಎಂಬುದರಿಂದ ಶಾಯಜ್ ಙಿತ್ತಾಗುವುದರಿಂದ **ಅನಿದಿತಾಂ-ಹಲಉಪ—**ಸೂತ್ರದಿಂದ ಉಪಧಾಭೂತವಾದ ನಕಾರಕ್ಕೆ ಲೋಪ. ಲಙ್ ನಿಮಿತ್ತಕವಾಗಿ ಅಂಗಕ್ಕೆ ಅಡಾಗಮ. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗಗಳು ಬಂದರೆ ಅಸ್ತಭಾಯಃ ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರು ವುದರಿಂದ ನಿಘಾತಸ್ವರ ಬರುತ್ತದೆ.

**ಅಪ್ರಥಯಃ**—ಪ್ರಥ ಪ್ರಖ್ಯಾನೇ ಧಾತು. ಭ್ವಾದಿ. ಣಿಚ್ಚಿನಲ್ಲಿ, ಮಿತ್ ಸಂಜ್ಞಾ ಇರುವುದರಿಂದ **ಮಿತಾಂ ಹ್ರಸ್ವ** ಎಂಬುದರಿಂದ ಹ್ರಸ್ವ. ಲಙ್ ಮಧ್ಯಮಪುರುಷ ಏಕವಚನದಲ್ಲಿ ಅಪ್ರಥಯಃ ಎಂದು ರೂಪವಾಗುತ್ತದೆ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.



॥ ಸಂಹಿತಾಪಾಠಃ ॥

ತದು ಪ್ರಯಕ್ಷತಮಮಸ್ಯ ಕರ್ಮ ದಸ್ಮಸ್ಯ ಚಾರುತಮಮಸ್ತಿ ದಂಸಃ ।

ಉಪಹ್ವರೇ ಯದುಪರಾ ಅಪಿನ್ವನ್ಮಧ್ವರ್ಣಸೋ ನದ್ಯಶ್ಚತಸ್ರಃ ॥ ೬ ॥

॥ ಪದಪಾಠಃ ॥

ತತ್ । ಊಂ ಇತಿ । ಪ್ರಯಕ್ಷಽತಮಂ । ಅಸ್ಯ । ಕರ್ಮ । ದಸ್ಮಸ್ಯ । ಚಾರುಽತಮಂ । ಅಸ್ತಿ । ದಂಸಃ ।

ಉಪಽಹ್ವರೇ । ಯತ್ । ಉಪರಾಃ । ಅಪಿನ್ವತ್ । ಮಧುಽಅರ್ಣಸಃ । ನದ್ಯಃ । ಚತಸ್ರಃ ॥ ೬ ॥

॥ ಸಾಯಣಭಾಷ್ಯಂ ॥

ಪ್ರವರ್ಗ್ಯೇಽಭಿಷ್ಟವೇ ತದು ಪ್ರಯಕ್ಷತಮಮಿತ್ಯೇಷಾ । ಅಥೋತ್ತರಮಿತ್ಯತ್ರ ಸೂತ್ರಿತಂ । ತದು ಪ್ರಯಕ್ಷತಮಮಸ್ಯ ಕರ್ಮಾತ್ಮನ್ವನ್ನಭೋ ದುಹ್ಯತೇ ಘೃತಂ ಪಯಃ । ಆ. ೪-೭ । ಇತಿ ॥

ದಸ್ಮಸ್ಯ ದರ್ಶನೀಯಸ್ಯಾಸ್ಯೇಂದ್ರಸ್ಯ ತದು ತದೇವ ಕರ್ಮ ಪ್ರಯಕ್ಷತಮಂ । ಅತಿಶಯೇನ ಪೂಜ್ಯಂ । ದಂಸ ಇತಿ ಕರ್ಮನಾಮ । ದಂಸಸ್ತದೇವ ಕರ್ಮ ಚಾರುತಮಂ । ಅತಿಶಯೇನ ಶೋಭನಂ । ಕಿಂ ತದಿತ್ಯತ ಆಹ । ಅಯಮಿಂದ್ರ ಉಪಹ್ವರ ಉಪಹ್ವರ್ತವ್ಯೇ ಗಂತವ್ಯೇ ಪೃಥಿವ್ಯಾಃ ಸಂಬಂಧಿನಿ ಸಮೀಪದೇಶ ಉಪರಾ ಉಪ್ತಾಃ ಸ್ಥಾಪಿತಾ ಮಧ್ವರ್ಣಸೋ ಮಧುರೋದಕಾಶ್ಚತಸ್ರೋ ನದ್ಯಃ ಪ್ರಧಾನಭೂತಾ ಗಂಗಾದಿನದೀರಪಿನ್ವತ್ । ಅಸಿಂಚದಿತಿ । ಯದೇತ್ಕರ್ಮ ತದನ್ಯೇನ ಕರ್ತುಮಶಕ್ಯತ್ವಾತ್ಪೂಜ್ಯಮಿತ್ಯರ್ಥಃ ॥ ಪ್ರಯಕ್ಷತಮಂ । ಯಕ್ಷ ಪೂಜಾಯಾಂ । ಯಕ್ಷ್ಯತ ಇತಿ ಯಕ್ಷಃ । ಅತಿಶಯೇನ

ಯುಕ್ಷೋ ಯುಕ್ಷತಮಃ । ಪುನಃ ಪ್ರಾದಿಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ದಂಸಃ । ದಸಿ ದಂಸನದರ್ಶನಯೋಃ । ಚುರಾದಿರಾತ್ಮನೇಪದೀ । ದಂಸ್ಯತೇ ಕರ್ತವ್ಯತಯಾ ದೃಶ್ಯತ ಇತಿ ದಂಸಃ ಕರ್ಮ । ಔಣಾದಿಕಃ ಕರ್ಮಣ್ಯಸುನ್ । ಉಪಹ್ವರೇ । ಹ್ವೃ ಕೌಟಿಲ್ಯೇ । ಕೌಟಿಲ್ಯಲಕ್ಷಣಗತಿವಾಚಿನಾತ್ರ ಗತಿಮಾತ್ರಂ ಲಕ್ಷ್ಯತೇ । ಉಪಹ್ವರಂತಿ ಗಚ್ಛಂತ್ಯಸ್ಮಿನ್ನದ್ಯ ಇತ್ಯುಪಹ್ವರೋ ಭೂಪ್ರದೇಶಃ । ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣೇತ್ಯಧಿಕರಣೇ ಘಪ್ರತ್ಯಯಃ । ಗುಣಃ । ಕೃದುತ್ತರಪದಪ್ರಕೃತಿಸ್ವರತ್ವಂ । ಅಪಿನ್ವತ್ । ಪಿವಿ ಸೇಚನೇ । ಭೌವಾದಿಕಃ । ಚತಸ್ರಃ । ಶಸ್ । ತ್ರಿಚತುರೋಃ ಸ್ತ್ರಿಯಾಂ ತಿಸೃಚತಸೃ ಇತಿ ಚತುರ್‌ಶಬ್ದಸ್ಯ ಚತಸ್ರಾದೇಶ ಆದ್ಯುದಾತ್ತೋ ನಿಪಾತಿತಃ। ಪೂರ್ವಸವರ್ಣದೀರ್ಘೇ ಪ್ರಾಪ್ತೇಽಚಿ ರ ಋತ ಇತಿ ರೇಫಾದೇಶಃ । ಪಾ. ೭-೨-೯೯, ೧೦೦ । ಚತುರ್‌ಶಬ್ದಸ್ಯಾದ್ಯುದಾತ್ತತ್ವಾತ್ಸ್ಥಾನಿವದ್ಭಾವೇನ ಚತಸ್ರಾದೇಶಸ್ಯಾದ್ಯುದಾತ್ತತ್ವೇ ಸಿದ್ಧೇಽಪಿ ಪುನರಾದ್ಯುದಾತ್ತನಿಪಾತನಸಾಮರ್ಥ್ಯಾದ್ಯಣಾದೇಶಸ್ಯ ವಾ ಪೂರ್ವವಿಧೌ ಸ್ಥಾನಿವದ್ಭಾವಾಚ್ಚತುರಃ ಶಸೀತ್ಯಂತೋದಾತ್ತತ್ವಸ್ಯಾಭಾವಃ । ನ ಚ ನ ಪದಾಂತೇತಿ ಸ್ಥಾನಿವದ್ಭಾವಪ್ರತಿಷೇಧಃ । ಸ್ವರದೀರ್ಘಯಲೋಪೇಷು ಲೋಪಾಜಾದೇಶ ಏವ ನ ಸ್ಥಾನಿವತ್ ಅನ್ಯತ್ತು ಸ್ಥಾನಿವದೇವ । ಮ. ೧-೧-೫೮ । ಇತಿ ನಿಯಮಾತ್ ॥

॥ ಪ್ರತಿಪದಾರ್ಥ ॥

**ಯತ್** —ಯಾವಕಾರಣದಿಂದ (ಈ ಇಂದ್ರನು) । **ಉಪಹ್ವರೇ**—(ನದಿಗಳು) ವಕ್ರವಾಗಿ ಹರಿಯುವ ಭೂಪ್ರದೇಶದಲ್ಲಿ । **ಉಪರಾಃ**—ಸ್ಥಾಪಿತವಾದ । **ಮಧ್ವರ್ಣಸಃ**—ಸಿಹಿ ನೀರುಳ್ಳ । **ಚತಸ್ರಃ** —ನಾಲ್ಕು (ಮುಖ್ಯವಾದ) । **ನದ್ಯಃ**—(ಗಂಗಾದಿ) ನದಿಗಳನ್ನು । **ಅಪಿನ್ವತ್**—ನೀರುಳ್ಳವುಗಳನ್ನಾಗಿ ಮಾಡಿದನೋ । (**ತತ್**—ಆದ್ದರಿಂದ) । **ದಸ್ಮಸ್ಯ**—ದರ್ಶನೀಯನಾದ (ಶತ್ರುದಮನನಾದ) । **ಅಸ್ಯ**—ಈ ಇಂದ್ರನ । **ತದು**—ಅದೇ । **ಕರ್ಮ**—ಕಾರ್ಯವು । **ಪ್ರಯುಕ್ಷತಮಂ**—ಅತ್ಯಂತಪೂಜ್ಯವಾದುದು । **ದಂಸಃ**—(ಅದೇ) ಕಾರ್ಯವು । **ಚಾರುತಮಂ**—ಅತ್ಯಂತ ಮಂಗಳಕರವಾದುದು ॥

॥ ಭಾವಾರ್ಥ ॥

ಈ ಇಂದ್ರನು ಭೂಮಿಯಲ್ಲಿ ಹರಿಯುವ ಸಿಹಿ ನೀರುಳ್ಳ ಗಂಗಾದಿ ನಾಲ್ಕು ನದಿಗಳಿಗೆ ನೀರನ್ನು ಒದಗಿಸುವ (ಇತರರಿಂದ ಅಸಾಧ್ಯವಾದ) ಕಾರ್ಯವನ್ನು ಮಾಡಿದನು. ಆದುದರಿಂದ, ಇವನ ಈ ಕಾರ್ಯವು ಅತ್ಯಂತ ಸ್ತೋತ್ರಾರ್ಹವೂ ಪರಮಮಂಗಳಕರವೂ ಆದದ್ದು

## English Translation.

The deeds of that handsome Indra are most admirable ; his exploits are most glorious in that he has replenished the four rivers of sweet water spread over the surface of the earth.

ಪ್ರವರ್ಗ್ಯವೆಂಬ ಯಾಗವಿಶೇಷದಲ್ಲಿ **ತದು ಪ್ರಯಕ್ಷತಮಂ** ಎಂಬ ಈ ಋಕ್ಕನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ತದು ಪ್ರಯಕ್ಷತಮಮಸ್ಯ ಕರ್ಮಾತ್ಮಸ್ವಿನ್ನಭೋ ದುಹ್ಯತೇ ಘೃತಂ ಪಯಃ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ ೪–೭)

**ತತ್ ಉ––ತದೇವ** । ಅದೇ, ಆ ಕರ್ಮವೇ.

**ಪ್ರಯಕ್ಷತಮಂ—ಯಕ್ಷ ಪೂಜಾಯಾಂ । ಯಕ್ಷ್ಯತ ಇತಿ ಯಕ್ಷಃ । ಅತಿಶಯೇನ ಯಕ್ಷೋ ಯಕ್ಷತಮಃ । ಅತಿಶಯೇನ ಪೂಜ್ಯಂ** । ಅತಿಶಯವಾಗಿ ಪೂಜಿಸಲ್ಪಡುವ, ಪ್ರಶಸ್ಯಾರ್ಹವಾದ

**ದಸ್ಮಸ್ಯ––ದಸಿ ದಂಸನದರ್ಶನಯೋಃ ದರ್ಶನೀಯಸ್ಯೇಂದ್ರಸ್ಯ** । ಸುಂದರನಾದ ಇಂದ್ರನ

**ದಂಸಃ**—ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮಗಳ ಮಧ್ಯದಲ್ಲಿ ದಂಸಃ ಎಂಬ ಶಬ್ದವು ಪಠಿತವಾಗಿರುವುದರಿಂದ ದಂಸಃ ಎಂದರೆ ಕರ್ಮವು, ಸಾಹಸಕಾರ್ಯವು ಎಂದರ್ಥವು (ನಿ ೩–೧)

**ಉಪಹ್ವರೇ—ಹ್ವೃ ಕೌಟಿಲ್ಯೇ । ಕೌಟಿಲ್ಯಲಕ್ಷಣಗತಿವಾಚಿನಾತ್ರ ಗತಿಮಾತ್ರಂ ಲಕ್ಷ್ಯತೇ । ಉಪಹರ್ತವ್ಯೇ ಗಂತವ್ಯೇ** । ವಕ್ರವಾಗಿ ಹೋಗುವ ಅಥವಾ ಹರಿಯುವ

**ಮಧ್ವರ್ಣಸಃ—ಮಧುರೋದಕಾಃ** । ಸಿಹಿನೀರಿನಿಂದ ಪೂರ್ಣವಾದ ನದಿಗಳು

**ಚತಸ್ರಃ**—ನಾಲ್ಕು (ನದಿಗಳು) ಭಾಷ್ಯಕಾರರು ಇಲ್ಲಿ ನಾಲ್ಕು ನದಿಗಳೆಂದರೆ ಗಂಗಾದಿ ನಾಲ್ಕು ನದಿಗಳೆಂದು ಹೇಳಿರುವರು. ಆದರೆ ಇಲ್ಲಿ ಉಕ್ತವಾಗಿರುವುದು ಗಂಗಾದಿನದಿಗಳೋ ಅಥವಾ ಬೇರೆ ನದಿಗಳೋ ಯಾವುದೂ ಸ್ಪಷ್ಟವಾಗಿಲ್ಲ ಸ್ಕಂದಸ್ವಾಮಿಯು ಈ ಶಬ್ದಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ ನದಿಗಳು ಹರಿಯುವಂತೆ ಮಾಡಿದನೆಂದು ಅರ್ಥ ವಿವರಣೆ ಮಾಡಿರುವರು

॥ ವ್ಯಾಕರಣಪ್ರಕ್ರಿಯಾ ॥

**ಪ್ರಯಕ್ಷತಮಮ್**—ಯಕ್ಷ ಪೂಜಾಯಾಂ ಧಾತು ಯಕ್ಷ್ಯತೇ ಇತಿ ಯಕ್ಷಃ ಅತಿಶಯೇನ ಯಕ್ಷಃ ಯಕ್ಷತಮಃ (ಹೆಚ್ಚಾಗಿ ಪೂಜಿಸಲ್ಪಡುವವನು) ಆಮೇಲೆ ಪ್ರ ಎಂಬುದರೊಡನೆ ಪ್ರಾದಿಸಮಾಸ **ತತ್ಪುರುಷೇ ತುಲ್ಯಾರ್ಥತೃತೀಯಾ** (ಪಾ. ಸೂ. ೬–೨–೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರವು ಬರುತ್ತದೆ

**ದಂಸಃ**—ದಸಿ ದಂಶನದರ್ಶನಯೋಃ ಧಾತು. ಚುರಾದಿ, ನಿತ್ಯವಾಗಿ ಆತ್ಮನೇಪದೀ. **ಇದಿತೋ ನುಮ್ ಧಾತೋಃ** ಎಂಬುದರಿಂದ ನುಮಾಗಮ ದಂಸ್ಯತೇ ಕರ್ತವ್ಯತಯಾ ದೃಶ್ಯತೇ ಇತಿ ದಂಸಃ ಕರ್ಮ (ಅವಶ್ಯ ಮಾಡಬೇಕೆಂದಿರುವುದು ಕಾರ್ಯ) ಕರ್ಮಾರ್ಥದಲ್ಲಿ ಔಣಾದಿಕವಾದ ಅಸುನ್ (ಸರ್ವಧಾತುಭ್ಯೋಽಸುನ್) ದಂಸಸ್ ಶಬ್ದವಾಗುತ್ತದೆ ಅಸುನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಉಪಹ್ವರೇ**— ಹ್ವೃ ಕೌಟಿಲ್ಯೇ ಧಾತು ಕೌಟಿಲ್ಯೇ ಎಂಬುದರಿಂದ ಕುಟಿಲಗತಿವಾಚಕತ್ವವು ವಿವಕ್ಷಿತವಾಗಿರುವುದು ಇಲ್ಲಿ ಮಾತ್ರ ಕೇವಲ ಗತಿವಾಚಕತ್ವವನ್ನು ಸ್ವೀಕರಿಸಬೇಕು ಉಪಹ್ವರಂತಿ ಗಚ್ಛಂತಿ ಅಸ್ಮಿನ್ ನದ್ಯಃ

ಇತಿ ಉಪಹ್ವರೋ ಭೂಪ್ರದೇಶಃ (ನದಿಗಳು ಹರಿಯುವ ದೇಶವೆಂದರ್ಥ) **ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ** (ಪಾ. ಸೂ. ೩-೩-೧೧೮) ಎಂಬುದರಿಂದ ಅಧಿಕರಣಾರ್ಥದಲ್ಲಿ ಘಪ್ರತ್ಯಯ ಇದು ಆರ್ಧಧಾತುಕಸಂಜ್ಞೆಯನ್ನು ಹೊಂದಿರುವುದರಿಂದ ಇದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ ಪ್ರಾದಿಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ ಸಪ್ತಮೀ ಏಕವಚನಾಂತರೂಪ

**ಅಪಿನ್ವತ್**--ಪಿವಿ ಸೇಚನೇ ಧಾತು ಭ್ವಾದಿ **ಇದಿತೋನುಮ್ ಧಾತೋಃ** ಎಂಬುದರಿಂದ ಧಾತುವಿಗೆ ನುಮ್ ಲಙ್ ಪ್ರಥಮಪುರುಷೈಕವಚನದಲ್ಲಿ ಅಪಿನ್ವತ್ ಎಂದು ರೂಪವಾಗುತ್ತದೆ ಯತ್ ಎಂಬ ಹಿಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಅಡುದಾತ್ತವೆಂಬುದರಿಂದ ಆದ್ಯುದಾತ್ತವಾದ ಪದವಾಗುತ್ತದೆ

**ಚತಸ್ರಃ**—ಚತುರ್ ಶಬ್ದ ಶಸ್ ಪರದಲ್ಲಿರುವಾಗ ಸ್ತ್ರೀತ್ವದಲ್ಲಿ **ತ್ರಿಚತುರೋಃ ಸ್ತ್ರಿಯಾಂ ತಿಸೃಚತಸೃ** (ಪಾ ಸೂ ೭-೨-೯೯) ಎಂಬುದರಿಂದ ಚತಸೃ ಆದೇಶವು ಆದ್ಯುದಾತ್ತವಾಗಿ ನಿಪಾತಿತವಾಗಿದೆ ಚತಸೃ+ಅಸ್ ಎಂದಿರುವಾಗ ಪೂರ್ವಸವರ್ಣದೀರ್ಘವು ಪ್ರಾಪ್ತವಾದರೆ **ಅಚಿರಋತಃ** (ಪಾ ಸೂ. ೭-೨-೧೦೦) ಎಂಬುದರಿಂದ ಋಕಾರಕ್ಕೆ ರೇಫಾದೇಶ ಬರುತ್ತದೆ ಚತಸ್ರಃ ಎಂದು ರೂಪವಾಗುತ್ತದ. ಇಲ್ಲಿ ಚತುರ್ ಎಂಬುದು ಮೊದಲೇ ಆದ್ಯುದಾತ್ತನಾಗಿರುವಾಗ ಸ್ಥಾನಿವದ್ಭಾವದಿಂದ ಚತಸ್ರಾದೇಶಕ್ಕೂ ಆದ್ಯುದಾತ್ತತ್ವವು ಸಿದ್ಧವಾಗುವಾಗ ಪುನಃ ಆದೇಶ ಕಾಲದಲ್ಲಿ ಆದ್ಯುದಾತ್ತವನ್ನು ನಿಪಾತಮಾಡಿದುದರಿಂದಲೇ ಯಣಾದೇಶಕ್ಕೆ **ಅಚಃ ಪರಸ್ಮಿನ್ ಪೂರ್ವವಿಧೌ** ಎಂಬುದರಿಂದ ಸ್ಥಾನಿವದ್ಭಾವವನ್ನು **ಮಾಡಿಕೊಂಡು** **ಚತುರಃ ಶಸಿ** (ಪಾ ಸೂ ೬-೧-೧೬೭) ಎಂಬುದರಿಂದ **ಅಂತೋದಾತ್ತತ್ವವು** ಬರುವುದಿಲ್ಲ ಇಲ್ಲಿ ಸ್ವರಕಾರ್ಯಮಾಡುವುದರಿಂದ **ನಪದಾಂತದ್ವಿರ್ವಚನ**-ಸೂತ್ರದಿಂದ ಸ್ಥಾನಿವದ್ಭಾವಪ್ರತಿಷೇಧ ಬರುವುದರಿಂದ ಹಿಂದೆ ಹೇಳಿದ ಪ್ರಕ್ರಿಯೆಯು ಸಿದ್ಧಿಸುವುದಿಲ್ಲವಲ್ಲ ಎಂದು ಶಂಕೆ ಬರುತ್ತದೆ ಆದರೆ **ಸ್ವರದೀರ್ಘಲೋಪೇಷು ಲೋಪಾಜಾದೇಶ ಏವ ನ ಸ್ಥಾನಿವತ್, ಅನ್ಯತ್ತು ಸ್ಥಾನಿವದೇವ** (ಪಾ ಸೂ. ೧-೧-೫೮-೧) ಎಂದು ಲೋಪರೂಪ ಅಜಾದೇಶ ವಿಷಯದಲ್ಲಿಯೇ ಈ ಸ್ಥಾನಿವದ್ಭಾವಪ್ರತಿಷೇಧವಿರುವುದರಿಂದ ಇಲ್ಲಿ ಯಣ್ ಬಂದಿರುವುದರಿಂದ ನಿಷೇಧ ಬರುವುದಿಲ್ಲ. ಆದುದರಿಂದ ಆದ್ಯುದಾತ್ತ ನಿಪಾತಕ್ಕೆ ಭಂಗ ಬರುವುದಿಲ್ಲ ॥ ೬ ॥



|| ಸಂಹಿತಾಪಾಠಃ ||

ದ್ವಿತಾ ವಿ ವವ್ರೇ ಸನಜಾ ಸನೀಳೇ ಅಯಾಸ್ಯಃ ಸ್ತವಮಾನೇಭಿ-
ರರ್ಕೈಃ |
ಭಗೋ ನ ಮೇನೇ ಪರಮೇ ವ್ಯೋಮನ್ನಧಾರಯದ್ರೋದಸೀ
ಸುದಂಸಾಃ || ೭ ||

|| ಪದಪಾಠಃ ||

ದ್ವಿತಾ | ವಿ | ವವ್ರೇ | ಸನऽಜಾ | ಸನೀಳೇ ಇತಿ ಸऽನೀಳೇ | ಅಯಾಸ್ಯಃ | ಸ್ತವ-
ಮಾನೇಭಿಃ | ಅರ್ಕೈಃ |
ಭಗಃ | ನ | ಮೇನೇ ಇತಿ | ಪರಮೇ | ವಿऽಓಮನ್ | ಅಧಾರಯತ್ | ರೋದಸೀ
ಇತಿ | ಸುऽದಂಸಾಃ || ೭ ||

|| ಸಾಯಣಭಾಷ್ಯಂ ||

ಅಯಾಸ್ಯಃ | ಯಾಸಃ ಪ್ರಯತ್ನಃ | ತತ್ಸಾಧ್ಯೋ ಯಾಸ್ಯಃ | ನ ಯಾಸ್ಯೋಽಯಾಸ್ಯಃ | ಯುದ್ಧರೂಪೈಃ ಪ್ರಯತ್ನೈಃ ಸಾಧಯಿತುಮಶಕ್ಯ ಇತ್ಯರ್ಥಃ | ಕಥಂ ಸಾಧ್ಯತ ಇತ್ಯತ ಆಹ | ಸ್ತವಮಾನೇಭಿಃ ಸ್ತೋತ್ರಂ ಕುರ್ವದ್ಭಿಃ ಪುರುಷೈರರ್ಕೈಃ ಸ್ತುತಿರೂಪೈರ್ಮಂತ್ರೈಃ ಸ್ತೂಯಮಾನಃ ಸನ್ನಿಂದ್ರಃ ಸುಸಾಧ್ಯೋ ಭವತಿ | ಯದ್ವಾ | ಅಯಾಸ್ಯಃ ಪಂಚವೃತ್ತಿರ್ಮುಖ್ಯಪ್ರಾಣಃ | ಸ ಹ್ಯಾಸ್ಯಾನ್ಮುಖಾದಯತೇ ಗಚ್ಛತಿ ನಿಷ್ಕ್ರಾಮತಿ | ತದುಪಾಸಕೋಽಪ್ಯಂಗಿರಾ ಉಪಚಾರಾದಯಾಸ್ಯ ಉಚ್ಯತೇ | ತಥಾ ಚ ಛಂದೋಗೈರಾಮ್ನಾತಂ | ತಂ ಹಾಯಾಸ್ಯ ಉದ್ಗೀಥಮುಪಾಸಾಂ ಚಕ್ರ ಏತಮು ಏವಾಯಾಸ್ಯಂ ಮನ್ಯಂತ ಆಸ್ಯಾದ್ಯದಯತೇ ತೇನ | ಛಾಂ ಉ. ೧-೨-೧೨ | ಇತಿ | ಅಥವಾ | ಅಯಮಾಸ್ಯೇ ಮುಖೇ ವರ್ತತ ಇತ್ಯಯಾಸ್ಯಃ | ತಥಾ ಚ ವಾಜಸನೇಯಕಂ | ತೇ ಹೋಚುಃ ಕ್ವ ನು ಸೋಽಭೂದ್ಯೋ ನ ಇತ್ಥಮಸಕ್ತೇತ್ಯಯಮಾಸ್ಯೇಽಂತರಿತಿ | ಶತ. ಬ್ರಾ. ೧೪-೪-೧-೯ | ಇತಿ | ಪೂರ್ವವದುಪಾಸಕೋಽಪ್ಯ-

ಯಾಸ್ಯಃ । ತೇನ ಋಷಿಣಾ ಸ್ತವಮಾನೇಭಿರ್ಗುಣಿನಿಷ್ಠಗುಣಾಭಿಧಾನಲಕ್ಷಣಾಂ ಸ್ತುತಿಂ ಕುರ್ವದ್ಭಿರರ್ಕೈರ್ಮಂತ್ರೈಃ ಕರಣಭೂತೈಃ ಸ್ತೂಯಮಾನಃ ಸನ್ ಸನಜಾ । ಸನೇತಿ ನಿಪಾತೋ ನಿತ್ಯಾರ್ಥಃ । ನಿತ್ಯಜಾತೇ । ಸರ್ವದಾ ವಿದ್ಯಮಾನಸ್ವಭಾವೇ ಇತ್ಯರ್ಥಃ । ಪ್ರಥಮಭಾವವಿಕಾರವಾಚಿನಾ ಜನಿನಾ ದ್ವಿತೀಯೋ ಭಾವವಿಕಾರಃ ಸತ್ತಾ ಲಕ್ಷ್ಯತೇ । ಯಥೌತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧ ಇತ್ಯೌತ್ಪತ್ತಿಕಮಿತಿ ನಿತ್ಯಂ ಬ್ರೂಮ ಇತಿ ಹಿ ತದ್ಭಾಷ್ಯಂ । ಸನೀಳೇ ಸಮಾನಂ ನೀಳಮೇಕೋ ನಿವಾಸಸ್ಥಾನಂ ಯಯೋಸ್ತೇ । ಸಂಲಗ್ನೇ ಇತ್ಯರ್ಥಃ । ಏವಂವಿಧೇ ದ್ಯಾವಾಪೃಥಿವ್ಯೌ ದ್ವಿತಾ ದ್ವಿಧಾ ವಿ ವವ್ರೇ । ವಿವೃತೇ ಅಕರೋತ್ । ಭೇದೇನಾಸ್ಥಾಪಯದಿತ್ಯರ್ಥಃ । ಮೇನೇ ಮನನೀಯೇ ಪರಮ ಉತ್ಕೃಷ್ಟೇ ವ್ಯೋಮನ್ ವಿವಿಧರಕ್ಷಣೇ ನಭಸಿ ವರ್ತಮಾನೋ ಭಗೋ ನ ಸೂರ್ಯ ಇವ ಸುದಂಸಾಃ ಶೋಭನಕರ್ಮೇಂದ್ರೋ ರೋದಸೀ ದ್ಯಾವಾಪೃಥಿವ್ಯಾವಧಾರಯತ್ । ಅಪೋಷಯತ್ । ಯದ್ವಾ । ಮೇನೇತಿ ಸ್ತ್ರೀನಾಮ । ತಥಾ ಚ ಯಾಸ್ಕಃ । ಮೇನಾ ಗ್ನಾ ಇತಿ ಸ್ತ್ರೀಣಾಂ ಮೇನಾ ಮಾನಯಂತ್ಯೇನಾ ಇತಿ । ನಿ. ೩ ೨೧ । ಸ್ತ್ರೀರೂಪಮಾಪನ್ನೇ ರೋದಸೀ ಇಂದ್ರೋಽಪುಷ್ಯದಿತ್ಯರ್ಥಃ । ದ್ವಿತಾ । ದ್ವಿಧೇತ್ಯಸ್ಯ ಧಕಾರಸ್ಯ ತಕಾರಶ್ಛಾಂದಸಃ । ಸನಜಾ । ಜನೀ ಪ್ರಾದುರ್ಭಾವೇ । ಅಸ್ಮಾದ್ಭಾವೇಽನ್ಯೇಷ್ವಪಿ ದೃಶ್ಯತ ಇತಿ ದೃಶಿಗ್ರಹಣಸ್ಯ ಸರ್ವೋಪಾಧಿವ್ಯಭಿಚಾರಾರ್ಥತ್ವಾತ್ ಕೇವಲಾದಪಿ ಜನೇರ್ಡಪ್ರತ್ಯಯಃ । ಸನಾ ನಿತ್ಯಂ ಜೋ ಜನನಂ ಯಯೋಸ್ತೇ ಸನಜೇ । ಪೂರ್ವಪದಸ್ಯ ಹ್ರಸ್ವಶ್ಛಾಂದಸಃ । ಏವಮಾದಿತ್ವಾದಂತೋದಾತ್ತತ್ವಂ । ತದೇವ ಬಹುವ್ರೀಹಿಸ್ವರೇಣ ಶಿಷ್ಯತೇ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಅಯಾಸ್ಯಃ । ಯಸು ಪ್ರಯತ್ನೇ । ಯಾಸಃ ಪ್ರಯತ್ನಃ । ತತ್ರ ಭವೋ ಯಾಸ್ಯಃ । ಭವೇ ಛಂದಸೀತಿ ಯತ್ । ನ ಯಾಸ್ಯೋಽಯಾಸ್ಯಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಶ್ರುತ್ಯುಕ್ತನಿರ್ವಚನೇ ತು ಪೃಷೋದರಾದಿತ್ವಾದಭಿಮತರೂಪಸ್ವರಸಿದ್ಧಿಃ । ಮೇನೇ । ಸಪ್ತಮ್ಯೇಕವಚನಸ್ಯ ಸುಪಾಂ ಸುಲುಗಿತಿ ಶೇ ಆದೇಶಃ । ಶೇ । ಪಾ. ೧-೧-೧೩ । ಇತಿ ಪ್ರಗೃಹ್ಯತ್ವಂ । ಯದ್ವಾ । ಮನ್ಯತ ಇತಿ ಮೇನಾ । ಪಚಾದ್ಯಚ್ । ನಶಿಮನ್ಯೋರಲಿಟ್ಯೇತ್ವಂ ವಕ್ತವ್ಯಂ । ಪಾ. ೬-೪-೧೨೦-೫ । ಇತ್ಯೇತ್ವಂ । ತತಷ್ಟಾಪ್ । ದ್ವಿವಚನ ಈದೂದೇದ್ದ್ವಿವಚನಂ । ಪಾ. ೧-೧--೧೧ । ಇತಿ ಪ್ರಗೃಹ್ಯತ್ವಂ । ಸುದಂಸಾಃ । ದಂಸ ಇತಿ ಕರ್ಮವಾಚೀ । ಅಸುನ್ಪ್ರತ್ಯಯಾಂತ ಆದ್ಯುದಾತ್ತಃ । ಬಹುವ್ರೀಹಾವಾದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಯಾಸ್ಯಃ**—(ಯುದ್ಧಾದಿ) ಪ್ರಯತ್ನ ಸಾಧ್ಯನಲ್ಲದ ಅಥವಾ ಆಸ್ಯ ಅಂದರೆ ಮುಖದಲ್ಲಿರುವ ವಾಯುವಿನ ಉಪಾಸಕನಾದ ಅಂಗಿರಸನು (ಅವನಿಂದ) । **ಸ್ತವಮಾನೇಭಿಃ**—ಸ್ತುತಿಸುವವರಿಂದ (ಸ್ತುತಿಸುವ ಪುರುಷರಿಂದ) ಅಥವಾ ಸ್ತುತಿಸುವ । **ಅರ್ಕೈಃ**—(ಸ್ತುತಿರೂಪನಾದ) ಮಂತ್ರಗಳಿಂದ (ಸುಸಾಧ್ಯನಾದ ಇಂದ್ರನು) । **ಸನಜಾ** - ಸ್ವಭಾವತಃ ನಿತ್ಯವಾದ । **ಸನೀಳೇ**—ಒಂದೇ ಸ್ಥಳದಲ್ಲಿರುವ (ಭೂಮ್ಯಾಕಾಶಗಳನ್ನು) । **ದ್ವಿತಾ**—ಎರಡು ಭಾಗವಾಗಿ । **ವಿ ವವ್ರೇ**--ಬೇರ್ಪಡಿಸಿಟ್ಟನು । **ಸುದಂಸಾಃ**—ಮಂಗಳಕರವಾದ ಕರ್ಮಗಳುಳ್ಳ (ಇಂದ್ರನು) । **ಮೇನೇ**—ಮನನೀಯನಾದ (ಭವ್ಯವಾದ) । **ಪರಮೇ**—ಉತ್ಕೃಷ್ಟವಾದ । **ವ್ಯೋಮನ್**--ಆಕಾಶದಲ್ಲಿ

(ಇರುವ) । **ಭಗೋ ನ**—ಸೂರ್ಯನಂತೆ । (**ಮೇನೇ**—ಸ್ತ್ರೀರೂಪವನ್ನು ಧರಿಸಿರುವ) । **ರೋದಸೀ**--ಭೂಮ್ಯಾಕಾಶಗಳನ್ನು । **ಅಧಾರಯತ್** --ಪೋಷಿಸಿದನು

॥ ಭಾವಾರ್ಥ ॥

ಇಂದ್ರನು ಯುದ್ಧಾದಿ ಪ್ರಯತ್ನಗಳಿಂದ ಒಲಿಸಿಕೊಳ್ಳಲು ಸಾಧ್ಯನಲ್ಲ ಸ್ತುತಿರೂಪವಾದ ಮಂತ್ರಗಳಿಂದ ಸ್ತೋತ್ರ ಮಾಡುವವರಿಗೆ ಸುಲಭಸಾಧ್ಯನು ಅಥವಾ ವಾಯು ಉಪಾಸಕನಾದ ಅಂಗಿರಸನ ಸ್ತುತಿರೂಪವಾದ ಮಂತ್ರಗಳಿಗೆ ಸಾಧ್ಯನು. ಈ ಇಂದ್ರನು ನಿತ್ಯವಾದ ಮತ್ತು ಒಂದಾಗಿದ್ದ ಭೂಮ್ಯಾಕಾಶಗಳನ್ನು ಪ್ರತ್ಯೇಕಿಸಿ, ಭವ್ಯವಾದ ಮತ್ತು ಉತ್ಕೃಷ್ಟವಾದ ಆಕಾಶದಲ್ಲಿರುವ ಸೂರ್ಯನಂತೆ ಸ್ತ್ರೀರೂಪಧಾರಿಗಳಾದ ಈ ಭೂಮ್ಯಾಕಾಶಗಳನ್ನು ಪೋಷಿಸಿದನು.

## English Translation

He who is not to be attained by violence but easily propitiated by those who praise him with sacred hymns, parted the spheres of heaven and earth, like the Sun in the august and most excellent sky

॥ ವಿಶೇಷವಿಷಯಗಳು ॥

**ಅಯಾಸ್ಯಃ**—**ಯಸು ಪ್ರಯತ್ನೇ । ಯಾಸಃ ಪ್ರಯತ್ನಃ । ತತ್ಸಾಧ್ಯೋ ಯಾಸ್ಯಃ । ನ ಯಾಸ್ಯೋಽಯಾಸ್ಯಃ । ಯುದ್ಧರೂಪೈಃ ಪ್ರಯತ್ನೈಃ ಸಾಧಯಿತುಮಶಕ್ಯ ಇತ್ಯರ್ಥಃ ।** ಯಾಸವೆಂದರೆ ಪ್ರಯತ್ನವು ಪ್ರಯತ್ನದಿಂದ ಸಾಧ್ಯವಾದುದು ಯಾಸ್ಯವು ಪ್ರಯತ್ನದಿಂದ ಸಾಧ್ಯವಲ್ಲದ್ದು ಅಯಾಸ್ಯವು ಎಂದರೆ ಯುದ್ಧಾದಿಪ್ರಯತ್ನಗಳಿಂದ ಇಂದ್ರನನ್ನು ಒಲಿಸಿಕೊಳ್ಳುವುದು ಅಸಾಧ್ಯವು. ಆದರೆ ಸ್ತೋತ್ರಗಳಿಂದ ಸುಲಭವಾಗಿ ವಶನಾಗುವನು ಎಂದಭಿಪ್ರಾಯವು ಅಥವಾ **ಅಯಾಸ್ಯಃ ಪಂಚವೃತ್ತಿರ್ಮುಖ್ಯಪ್ರಾಣಃ । ಸ ಹ್ಯಾಸ್ಯಾನ್ಮುಖಾದಯತೇ ಗಚ್ಛತಿ ನಿಷ್ಕ್ರಾಮತಿ ತದುಪಾಸಕೋಽಸ್ಯಾಂಗಿರಾ ಉಪಚಾರಾದಯಾಸ್ಯ ಉಚ್ಯತೇ । ತಥಾ ಛಂದೋಗೈರಾಮ್ನಾತಂ । ತಂ ಹಾಯಾಸ್ಯ ಉದ್ಗೀಥಮುಪಾಸಾಂ ಚಕ್ರ ಏತಮು ಏವಾಯಾಸ್ಯಂ ಮನ್ಯಂತ ಆಸ್ಯಾದ್ಯದಯತೇ ತೇನ** (ಛಾಂ ಉ ೧-೨-೧೨) ಇತಿ । ಅಥವಾ ಅಯಾಸ್ಯ ಎಂದರೆ ಪ್ರಾಣವು (ಪ್ರಾಣವಾಯುವು) ಅದು ಮುಖದಿಂದ ಹೋಗುವುದುದಾದ್ದರಿಂದ ಅಯಾಸ್ಯವೆಂದು ಹೇಳಲ್ಪಡುವುದು ಅಂತಹ ಪ್ರಾಣೋಪಾಸಕನಾದುದರಿಂದ ಅಂಗಿರಾಋಷಿಯು ಔಪಚಾರಿಕವಾಗಿ ಅಯಾಸ್ಯನೆಂದು ಹೇಳಲ್ಪಡುವನು ಈ ವಿಷಯದಲ್ಲಿ ಛಾಂದೋಗ್ಯ ಉಪನಿಷದ್ವಾಕ್ಯವು ಇರುವುದು. ಅಥವಾ— **ಅಯಾಮಾಸ್ಯೇ ಮುಖೇ ವರ್ತತ ಇತ್ಯಯಾಸ್ಯಃ । ತಥಾ ಚ ವಾಜಸನೇಯಕಂ । ತೇ ಹೋಚುಃ ಕ್ವ ನು ಸೋಽಭೂದ್ಯೋ ನ ಇತ್ಥಮಸಕ್ತೇತ್ಯಯಮಾಸ್ಯೇಂತರಿತಿ** (ಶತ ಬ್ರಾ. ೧೪-೪-೧-೯) ಅಥವಾ ಅಯಂ ಎಂದರೆ ಈ ಪ್ರಾಣವು ಆಸ್ಯ—ಮುಖದಲ್ಲಿರುವುದರಿಂದ ಇದಕ್ಕೆ ಅಯಾಸ್ಯವೆಂದು ಹೆಸರು. ಈ ವಿಷಯದಲ್ಲಿ ಶತಪಥ ಬ್ರಾಹ್ಮಣವಾಕ್ಯವಿರುವುದು. ಇಂತಹ ಪ್ರಾಣೋಪಾಸಕನಾದ

ಅಂಗಿರಾ ಋಷಿಗೆ ಅಯಾಸ್ಯನೆಂದು ಹೆಸರು. ಈ ಋಷಿಯಿಂದ ಸ್ತುತಿಸಲ್ಪಟ್ಟ ಇಂದ್ರನು ಎಂದು ಅರ್ಥವನ್ನು ಹೇಳಬಹುದು.

**ಸನಜಾ—ಜನೀ ಪ್ರಾದುರ್ಭಾವೇ । ಸನಾ ನಿತ್ಯಂ ಜೋ ಜನನಂ ಯಯೋಸ್ತೇ ಸನಜೇ ।** ಸದಾಕಾಲವೂ ಇರುವವರು ಎಂದರೆ ನಿತ್ಯವೂ ಒಂದೇ ಸ್ಥಳದಲ್ಲಿ ಯಾವಾಗಲೂ ಇರುವವರು. ಭೂಮ್ಯಂತರಿಕ್ಷಗಳು ಯಾವಾಗಲೂ ಒಂದೇ ಸ್ಥಳದಲ್ಲಿ ಜತೆಯಾಗಿಯೇ ಇರುವವು ಎಂದಭಿಪ್ರಾಯವು

**ಸನೀಳೇ—ಸಮಾನಂ ನೀಳಮೋಕೋ ನಿವಾಸಸ್ಥಾನಂ ಯಯೋಸ್ತೇ ।** ಸಮಾನವಾದ ವಾಸಸ್ಥಾನವುಳ್ಳ, ಒಟ್ಟಿಗೆ ಇರುವ ಒಂದೇ ಕಡೆ ಇರುವ,

**ಭಗೋ ನ**—ಸೂರ್ಯನಂತೆ, ದ್ವಾದಶಾದಿತ್ಯರಲ್ಲಿ ಭಗನು ಒಬ್ಬನು

**ಸುದಂಸಾಃ**—ದಂಸಃ ಎಂದರೆ ಕರ್ಮವು (ನಿ ೩-೧) ಉತ್ತಮವಾದ ಕರ್ಮಗಳುಳ್ಳ ಎಂದರೆ ಉತ್ತಮ ಕಾರ್ಯಗಳನ್ನು ಮಾಡುವ

॥ ವ್ಯಾಕರಣಪ್ರಕ್ರಿಯಾ ॥

**ದ್ವಿತಾ**--ದ್ವಿಧಾ ಎಂದಿರುವಾಗ ಧಕಾರಕ್ಕೆ ತಕಾರಾದೇಶವು ಛಾಂದಸವಾಗಿ ಬರುತ್ತದೆ ಸಂಖ್ಯಾಯಾ ವಿಧಾರ್ಥೇ ಧಾ (ಪಾ ಸೂ. ೫-೩-೪೨) ಎಂಬುದರಿಂದ ಧಾ ಪ್ರತ್ಯಯ ಪ್ರತ್ಯಯಸ್ವರದಿಂದ ಅಂತೋದಾತ್ತ

**ಸನಜಾ**—ಜನೀ ಪ್ರಾದುರ್ಭಾವೇ ಧಾತು ದಿವಾದಿ **ಅನ್ಯೇಭ್ಯೋಽಪಿ ದೃಶ್ಯತೇ** ಎಂಬಲ್ಲಿ ದೃಶಿಗ್ರಹಣವು ಎಲ್ಲಾ ವಿಶೇಷಣಗಳ ತ್ಯಾಗದಲ್ಲಿಯೂ ಪ್ರತ್ಯಯವಿಧಾನಕ್ಕೋಸ್ಕರ ಉಪಾತ್ತವಾಗಿದೆ ವಾಸ್ತವವಾಗಿ ಉಪಪದವಿರುವಾಗ ಪ್ರತ್ಯಯವು ಅದರಿಂದ ಬರುವುದಾದರೂ ಹಿಂದಿನಂತೆ ದೃಶಿಗ್ರಹಣದಿಂದ ಕೇವಲವಾದ ಈ ಧಾತುವಿಗೂ ಭಾವಾರ್ಥದಲ್ಲಿ ಡಪ್ರತ್ಯಯ ಬರುತ್ತದೆ ಡಿತ್ತಾದುದರಿಂದ ಸಾಮರ್ಥ್ಯದಿಂದ ಭಸಂಜ್ಞಾ, ಇಲ್ಲದಿದ್ದರೂ ಜನಿನ ಟಿಗೆ (ಅನ್) ಲೋಪ ಬರುತ್ತದೆ ಜ ಎಂದು ರೂಪವಾಗುತ್ತದೆ ಸನಾ-ನಿತ್ಯಂ ಜೋ ಜನನಂ ಯಯೋಸ್ತೇ ಸನಜೇ ಪೂರ್ವಪದಕ್ಕೆ ಛಾಂದಸವಾಗಿ ಹ್ರಸ್ವ ಬರುತ್ತದೆ **ನಿಪಾದೀನಾಮಂತಃ** (ಫಿ ಸೂ ೭೭) ಎಂಬಲ್ಲಿ ಈ ಶಬ್ದವು ಸೇರಿರುವುದರಿಂದ ಅಂತೋದಾತ್ತವಾಗುತ್ತದೆ ಬಹುವ್ರೀಹಿ ಸಮಾಸದಲ್ಲಿಯೂ ಈ ಅಂತೋದಾತ್ತಸ್ವರವೇ ಉಳಿಯುತ್ತದೆ ದ್ವಿವಚನದ ಔ ವಿಭಕ್ತಿಗೆ **ಸುಪಾಂಸುಲುಕ್** ಸೂತ್ರದಿಂದ ಆಕಾರಾದೇಶ ಬರುತ್ತದೆ

**ಅಯಾಸ್ಯಃ**—ಯಸು ಪ್ರಯತ್ನೇ ಧಾತು. ಯಾಸಃ-ಪ್ರಯತ್ನಃ ಘಞ್‌ಪ್ರತ್ಯಯ ಯಾಸೇ ಭವಃ ಯಾಸ್ಯಃ-**ಭವೇ ಛಂದಸಿ** (ಪಾ ಸೂ. ೪-೪-೧೧೦) ಎಂಬುದರಿಂದ ಯತ್‌ಪ್ರತ್ಯಯ **ಯಸ್ಯೇತಿಚ** ಎಂಬುದರಿಂದ ಅಕಾರಲೋಪ ನ ಯಾಸ್ಯಃ ಅಯಾಸ್ಯಃ **ಪರಾದಿಶ್ಛಂದಸಿಬಹುಲಂ** (ಪಾ ಸೂ ೬-೩-೧೯೯) ಎಂಬುದರಿಂದ ಉತ್ತರಪದದ ಆದ್ಯುದಾತ್ತಸ್ವರ ಬರುತ್ತದೆ. ಇಲ್ಲಿ ಶ್ರುತ್ಯುಕ್ತಶಬ್ದನಿರ್ವಚನಮಾಡುವುದಾದರೆ **ಪೃಷೋದರಾದೀನಿ ಯಥೋಪದಿಷ್ಟಂ** ಎಂಬುದರಿಂದ ಪೃಷೋದರಾದಿಯು ಆಕೃತಿಗಣವಾದುದರಿಂದ ಅದರಲ್ಲಿ ಈ ಪದವನ್ನು ಸೇರಿಸಿ ಅಭಿಮತಸ್ವರಸಿದ್ಧಿಯನ್ನು ಸ್ವೀಕರಿಸಬೇಕು

**ಮೇನೇ**—ಮೇನಾ ಎಂಬುದು ಸ್ತ್ರೀಯ ಹೆಸರು ಸಪ್ತಮಿಯ ಏಕವಚನಕ್ಕೆ **ಸುಪಾಂಸುಲುಕ್** ಎಂಬುದರಿಂದ **ಶೀ** ಆದೇಶ ಶಿತ್ತಾದುದರಿಂದ ಸರ್ವಾದೇಶ **ಶೀ** (ಪಾ. ಸೂ ೧-೧-೧೩) ಎಂಬುದರಿಂದ ಪ್ರಗೃಹ್ಯ ಸಂಜ್ಞೆಯು ಬರುತ್ತದೆ. ಅಥವಾ **ಮನ್ಯತೇ** ಇತಿ ಮೇನಾ ಮನಧಾತುವು ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯಃ** ಸೂತ್ರದಿಂದ ಅಚ್ ಪ್ರತ್ಯಯ. **ನಶಿಮನ್ಯೋೇರಲಿಟಿ ಏತ್ವಂ ವಕ್ತವ್ಯಮ್** (ಪಾ. ಸೂ ೬ ೪ ೧೨೦-೫) ಎಂಬುದರಿಂದ ಅಚ್ ಪರದಲ್ಲಿರುವಾಗ ಧಾತುವಿನ ಅಕಾರಕ್ಕೆ ಏತ್ವ. ಮೇನ ಶಬ್ದವಾಗುತ್ತದೆ. ಸ್ತ್ರೀತ್ವದಲ್ಲಿ **ಅಜಾದ್ಯತಃ** ಸೂತ್ರದಿಂದ ಟಾಪ್ ದ್ವಿವಚನ ಪರದಲ್ಲಿರುವಾಗ **ಔಙಆಪಃ** ಎಂಬುದರಿಂದ ಅದಕ್ಕೆ ಶೀ ಆದೇಶ ಗುಣ, ಮೇನೇ ಎಂದು ರೂಪವಾಗುತ್ತದೆ ದ್ವಿವಚನವು ಈಗ ಏದಂತವಾಗಿರುವುದರಿಂದ **ಈದೂದೇದ್ದ್ವಿವಚನಂ ಪ್ರಗೃಹ್ಯಮ್** (ಪಾ ಸೂ ೧-೧-೧೧) ಎಂಬುದರಿಂದ ಪ್ರಗೃಹ್ಯಸಂಜ್ಞಾ ಬರುತ್ತದೆ

**ವ್ಯೋಮನ್**—ಸಪ್ತಮೀ ಏಕವಚನಕ್ಕೆ **ಸುಪಾಂಸುಲುಕ್** ಎಂಬುದರಿಂದ ಲುಕ್

**ಅಧಾರಯತ್**—ಣಿಜಂತದ ಲಙ್ ಪ್ರಥಮಪುರುಷ ಏಕವಚನರೂಪ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಅಡುದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಸುದಂಸಾಃ**—ದಂಸವೆಂಬುದು ಕರ್ಮವಾಚಕವಾದ ಪದ ದಸಿ ದಂಸನದರ್ಶನಯೋಃ ಧಾತು ಅಸುನ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತ. ಶೋಭನಂ ದಂಸಃ ಯಸ್ಯ ಸಃ ಸುದಂಸಾಃ **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ ೬-೨-೧೧೯) ಎಂಬುದರಿಂದ ಬಹುವ್ರೀಹಿಯಲ್ಲಿ ದ್ವ್ಯಚ್ಕವುಳ್ಳ ಉತ್ತರಪದವಿರುವುದರಿಂದ ಉತ್ತರಪದ ಆದ್ಯುದಾತ್ತಸ್ವರವು ಬರುತ್ತದೆ ದಕಾರೋತ್ತರಾಕಾರವು ಉದಾತ್ತವಾಗುವುದರಿಂದ ಸುದಂಸಾಃ ಎಂಬುದು ಮಧ್ಯೋದಾತ್ತವಾದ ಪದವಾಗುತ್ತದೆ



॥ ಸಂಹಿತಾಪಾಠಃ ॥

ಸನಾದ್ದಿವಂ ಪರಿ ಭೂಮಾ ವಿರೂಪೇ ಪುನರ್ಭುವಾ ಯುವತೀ

ಸ್ವೇಭಿರೇವೈಃ ।

ಕೃಷ್ಣೇಭಿರಕ್ತೋಷಾ ರುಶದ್ಭಿರ್ವಪುರ್ಭಿರಾ ಚರತೋ ಅ-

ನ್ಯಾನ್ಯಾ ॥ ೮ ॥

॥ ಪದಪಾಠಃ ॥

ಸನಾತ್ । ದಿವಂ । ಪರಿ । ಭೂಮ । ವಿರೂಪೇ ಇತಿ ವಿಽರೂಪೇ । ಪುನಃಽಭುವಾ । ಯುವತೀ ಇತಿ । ಸ್ವೇಭಿಃ । ಏವೈಃ ।

ಕೃಷ್ಣೇಭಿಃ । ಅಕ್ತಾ । ಉಷಾಃ । ರುಶತ್ಽಭಿಃ । ವಪುಃಽಭಿಃ । ಆ । ಚರತಃ । ಅನ್ಯಾಽಅನ್ಯಾ ॥ ೮ ॥

॥ ಸಾಯಣಭಾಷ್ಯಂ ॥

ವಿರೂಪೇ ಶುಕ್ಲಕೃಷ್ಣತಯಾ ವಿಷಮರೂಪೇ ಪುನರ್ಭುವಾ ಪುನಃಪುನಃ ಪ್ರತಿದಿವಂ ಸಂಜಾಯಮಾನೇ ಯುವತೀ ತರುಣ್ಯೌ । ರಾತ್ರ್ಯುಷಸೋಃ ಸರ್ವದೈಕರೂಪ್ಯಾದೇವಂಭೂತೇ ರಾತ್ರ್ಯುಷಸೌ ದಿವಂ ದ್ಯುಲೋಕಂ ಭೂಮ ಭೂಮಿಂ ಚ ಸನಾಚ್ಚಿರಕಾಲಾದಾರಭ್ಯ ಸ್ವೇಭಿರೇವೈಃ ಸ್ವಕೀಯೈರ್ಗಮನೈಃ ಪರಿ ಚರತಃ । ಪರ್ಯಾವರ್ತೇತೇ । ಅಯಮೇವಾರ್ಥಃ ಸ್ಪಷ್ಟೀಕ್ರಿಯತೇ । ಅಕ್ತಾ ರಾತ್ರಿಃ ಕೃಷ್ಣೇಭಿರಂಧಕಾರರೂಪೈರ್ವರ್ಣೈರುಪಲಕ್ಷಿತಾ ಉಷಾಶ್ಚ ರುಶದ್ಭಿರ್ದೀಪ್ಯಮಾನೈರ್ವಪುರ್ಭಿಃ ಸ್ವಶರೀರಭೂತೈಸ್ತೇಜೋಭಿರುಪಲಕ್ಷಿತಾ ಅನ್ಯಾನ್ಯಾ ಪರಸ್ಪರವ್ಯತಿಹಾರೇಣಾ ಚರತಃ । ಆವರ್ತೇತೇ । ಹೇ ಇಂದ್ರ ಏತತ್ಸರ್ವಂ ತ್ವಯೈವ ಕಾರ್ಯತೇ ತ್ವದಧೀನತ್ವಾತ್ಸರ್ವಾಸಾಂ ದೇವತಾನಾಮಿತ್ಯರ್ಥಃ ॥ ಭೂಮ । ಸುಪಾಂ ಸುಲುಗಿತಿ ದ್ವಿತೀಯಾಯಾ ಡಾದೇಶಃ । ಛಾಂದಸೋ ಹ್ರಸ್ವಃ । ಏವೈಃ । ಇಣ್ ಗತೌ । ಇಣ್ಶೀಭ್ಯಾಂ ವನ್ । ಉ. ೧-೧೫೨ । ಇತಿ ಭಾವೇ ವನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಅಕ್ತಾ । ನಕ್ತೇತಿ ರಾತ್ರಿನಾಮ । ನಲೋಪಶ್ಛಾಂದಸಃ । ವಪುರ್ಭಿಃ । ಅರ್ತಿಪೃವಪೀತ್ಯಾದಿನಾ । ಉ ೨-೧೧೮ । ಉಸ್ । ನಿತ್ತ್ವಾದಾದ್ಯುದಾತ್ತಃ । ಅನ್ಯಾನ್ಯಾ । ಕರ್ಮವ್ಯತಿಹಾರೇ ಸರ್ವನಾಮ್ನೋ ದ್ವೇ ಭವತ ಇತಿ ವಕ್ತವ್ಯಂ ಸಮಾಸವಚ್ಚ ಬಹುಲಂ । ಮ. ೮-೧-೧೨-೧೧ । ಇತಿ ದ್ವಿರ್ಭಾವೇ ತಸ್ಯ ಪರಮಾಮ್ರೇಡಿತಮಿತ್ಯಾಮ್ರೇಡಿತಸಂಜ್ಞಾಯಾಮನುದಾತ್ತಂ ಚೇತ್ಯಾಮ್ರೇಡಿತಸ್ಯಾನುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ವಿರೂಪೇ**—(ಶುಕ್ಲ, ಕೃಷ್ಣಗಳೆಂಬ) ವಿವಿಧ ರೂಪಗಳುಳ್ಳ । **ಪುನರ್ಭುವಾ**—ಪುನಃ ಪುನಃ ಜನಿಸುವ । **ಯುವತೀ**—(ಸರ್ವದಾ) ತರುಣಿಯರಾದ (ಹಗಲು ರಾತ್ರಿಗಳು) । **ದಿವಂ**—ಆಕಾಶವನ್ನೂ । **ಭೂಮ**—ಭೂಮಿಯನ್ನೂ । **ಸನಾತ್**—ಅನಾದಿಕಾಲದಿಂದಲೂ । **ಸ್ವೇಭಿರೇವೈಃ**—ತಮ್ಮ ಗಮನಾಗಮನಗಳಿಂದ । **ಪರಿ (ಚರತಃ)**—ಸುತ್ತುತ್ತಿರುತ್ತಾರೆ । **ಅಕ್ತಾ**—ರಾತ್ರಿಯು । **ಕೃಷ್ಣೇಭಿಃ**—ಕಪ್ಪಾದ (ರೂಪದಿಂದಲೂ)

(ಅಂಧಕಾರದಿಂದಲೂ) । **ಉಷಾಃ**—ಉಷಸ್ಸು (ಹಗಲು) । **ರುಶದ್ಭಿಃ**—ಪ್ರಕಾಶಮಾನವಾದ । **ವಪುರ್ಭಿಃ**—ಶರೀರಗಳಿಂದಲೂ (ತೇಜಸ್ಸಿನಿಂದ) । **ಅನ್ಯಾನ್ಯಾ**--ಒಬ್ಬರಾದಮೇಲೊಬ್ಬರು । **ಆ ಚರತಃ** – ತಿರುಗುತ್ತಿರುತ್ತಾರೆ

॥ ಭಾವಾರ್ಥ ॥

ಎಲೈ ಇಂದ್ರನೇ ಹಗಲು ರಾತ್ರಿಗಳು ಪ್ರತಿ ದಿನವೂ ಹುಟ್ಟುತ್ತವೆ, ಸಾಯುತ್ತವೆ, ಆದರೂ ತಾರುಣ್ಯವುಳ್ಳವರಾಗಿಯೇ ಇರುತ್ತಾರೆ ಇವರಿಬ್ಬರಲ್ಲಿ ಹಗಲು ತನ್ನ ಪ್ರಕಾಶದಿಂದಲೂ, ರಾತ್ರಿಯು ತನ್ನ ಅಂಧಕಾರದಿಂದಲೂ ಅನಾದಿಕಾಲದಿಂದ ಈ ಭೂವ್ಯಾಕಾಶಗಳನ್ನು ಸರದಿಯ ಮೇಲೆ, ಒಂದಾದಮೇಲೊಂದು, ನಿನ್ನಾಜ್ಞೆಗೊಳಪಟ್ಟು। ಆವರಿಸಿರುತ್ತವೆ

## English Translation

Night and dawn of various complexion, repeatedly born, but ever youthful, have traversed their revolutions alternately, from a remote period, earth and heaven , night with her dark, dawn with her liminous limbs.

॥ ವಿಶೇಷವಿಷಯಗಳು ॥

**ಸನಾತ್**--ಬಹು ಪ್ರಾಚೀನಕಾಲದಿಂದ, ಅತಿ ಪುರಾತನ ಕಾಲದಿಂದ, from a remote period

**ವಿರೂಪೇ**—ಪರಸ್ಪರ ವಿಷಮರೂಪಗಳುಳ್ಳ, ಎಂದರೆ ರಾತ್ರಿಯು ಕತ್ತಲೆಯ ರೂಪದಿಂದಿರುವುದು ಉಷಸ್ಸು ಪ್ರಕಾಶ(ಬೆಳಕು) ರೂಪದಿಂದ ಇರುವುದು ಆದುದರಿಂದ ರಾತ್ರ್ಯುಷಸ್ಸುಗಳು ಪರಸ್ಪರ ವ್ಯತಿರಿಕ್ತನಾದ ರೂಪಗಳುಳ್ಳವು ಎಂದಭಿಪ್ರಾಯವು

**ಪುನರ್ಭುವಾ**—ಮತ್ತೆ ಮತ್ತೆ ಎಂದರೆ ಪ್ರತಿದಿನವೂ ಹುಟ್ಟುತ್ತಿರುವ, ಹಗಲುರಾತ್ರಿಗಳು ಪ್ರತಿದಿನವೂ ಒಂದಾಗುತ್ತಲೊಂದು ಎಡಬಿಡದೆ ಪರಿವರ್ತನಕ್ರಮದಿಂದ ಉಂಟಾಗುವವು

**ಆ ಚರತಃ ಅನ್ಯಾನ್ಯಾ**—ಒಂದಾಗುತ್ತಲೊಂದು, ರಾತ್ರಿಯಾದ ಮೇಲೆ ಉಷಃಕಾಲವೂ, ಹಗಲು ಆದ ಮೇಲೆ ರಾತ್ರಿಯೂ ಒಂದಾದನಂತರ ಮತ್ತೊಂದು ಪ್ರಾಪ್ತವಾಗುವುದೆಂದಭಿಪ್ರಾಯವು

**ಯುವತೀ**—ಪ್ರತಿದಿನವೂ ಪ್ರಾಪ್ತವಾಗುವುದರಿಂದ ಯುವತಿಯರೆಂದು ಹೇಳಲ್ಪಡುವರು

**ಕೃಷ್ಣೇಭಿಃ ಅಕ್ತಾ । ಉಷಾ ರುಶದ್ಭಿಃ ವಪುರ್ಭಿಃ**—ರಾತ್ರಿಯು ಕತ್ತಲೆ ಎಂಬ ಶರೀರಗಳಿಂದಲೂ ಉಷಸ್ಸು ಪ್ರಕಾಶಮಾನವಾದ ಬೆಳಕೆಂಬ ಶರೀರಗಳಿಂದಲೂ ಸಂಚರಿಸುವವು.

॥ ವ್ಯಾಕರಣಪ್ರಕ್ರಿಯಾ ॥

**ಭೂಮ**— ಭೂಮಿ ಶಬ್ದದ ಮೇಲೆ ದ್ವಿತೀಯಾ ಏಕವಚನವಿರುವಾಗ **ಸುಪಾಂಸುಲುಕ್**—ಎಂಬುದರಿಂದ ವಿಭಕ್ತಿಗೆ ಡಾದೇಶ. ಡಿತ್ತಾದುದರಿಂದ ಪ್ರಾತಿಪದಿಕದ ಟಿಗೆ (ಇ) ಲೋಪ. ಭೂಮಾ ಎಂದಾಗಬೇಕಾಗುತ್ತದೆ. ಸಂಹಿತಾದಲ್ಲಿ ಛಾಂದಸವಾಗಿ ಹ್ರಸ್ವ ಬಂದಿದೆ.

**ಯುವತೀ**—ಯುವನ್ ಶಬ್ದಕ್ಕೆ ಸ್ತ್ರೀತ್ವದಲ್ಲಿ **ಯೂನಸ್ತಿಃ** (ಪಾ ಸೂ ೪-೧-೭೭) ಎಂಬುದರಿಂದ ತದ್ಧಿತಸಂಜ್ಞೆಯುಳ್ಳ ತಿಪ್ರತ್ಯಯ **ಸ್ವಾದಿಷ್ವಸರ್ವನಾಮಸ್ಥಾನೇ** ಸೂತ್ರದಿಂದ ಪದಸಂಜ್ಞಾ ಇರುವುದರಿಂದ **ನಲೋಪಃಪ್ರಾತಿಪದಿಕಾಂತಸ್ಯ** ಎಂಬುದರಿಂದ ನಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತ ದ್ವಿವಚನಾಂತರೂಪ

**ಏನ್ವೈಃ**—ಇಣ್ ಗತೌ ಧಾತು. **ಇಣ್‌ಶೀಙ್‌ಭ್ಯಾಂ ವನ್** (ಉ. ಸೂ ೧-೨೫೦) ಎಂಬುದರಿಂದ ಭಾವಾರ್ಥದಲ್ಲಿ ವನ್ ಪ್ರತ್ಯಯ. ವನ್ ಪರದಲ್ಲಿರುವಾಗ ಧಾತುವಿಗೆ ಗುಣ ಏವ ಎಂದಾಗುತ್ತದೆ, ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ

**ಅಕ್ತಾ**— ನಕ್ತಾ ಎಂಬಲ್ಲಿ ಅಕ್ತಾ ಎಂದಾಗಿದೆ ಛಾಂದಸವಾಗಿ ನ ಲೋಪ ಬಂದಿದೆ

**ಕೃಷ್ಣೇಭಿಃ**—**ಬಹುಲಂ ಛಂದಸಿ** ಎಂಬುದರಿಂದ **ಅತೋ ಭಿಸ ಐಸ್** ಎಂಬುದರಿಂದ ಐಸ್ ಭಿಸಿಗೆ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಎಂಬುದರಿಂದ ಅಂಗಕ್ಕೆ ಏತ್ವ ಬಂದರೆ ಕೃಷ್ಣೇಭಿಃ ಎಂದು ರೂಪವಾಗುತ್ತದೆ

**ವಪುರ್ಭಿಃ**—ಡುವಪ್ ಬೀಜಸಂತಾನೇ ಧಾತು **ಅರ್ತಿಪೃ ವಪಿಯಜಿ** (ಉ ಸೂ. ೨-೨೭೪) ಎಂಬುದರಿಂದ ಉಸ್ ಪ್ರತ್ಯಯ ವಪುಸ್ ಶಬ್ದವಾಗುತ್ತದೆ ಸೂತ್ರದಲ್ಲಿ ಅದಕ್ಕೆ ನಿತ್ ಎಂದು ನಿತ್ವ ವಿಧಾನ ಮಾಡಿರುವುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತವಾಗುತ್ತದೆ ತೃತೀಯಾ ಬಹುವಚನಾಂತರೂಪ

**ಅನ್ಯಾನ್ಯಾ**—**ಕರ್ಮವ್ಯತಿಹಾರೇ ಸರ್ವನಾಮ್ನೋ ದ್ವೇ ಭವತ ಇತಿ ವಕ್ತವ್ಯಂ ಸಮಾಸವಚ್ಚ ಬಹುಲಮ್** (ಪಾ ಮ ೮-೧-೧೨-೧೧) ಕರ್ಮವ್ಯತಿಹಾರವು ತೋರುವಾಗ ಸರ್ವನಾಮಶಬ್ದಕ್ಕೆ ದ್ವಿತ್ವ ಬರುತ್ತದೆ ಅದು ಸಮಾಸದಂತೆ ಆಗುತ್ತದೆ, ಎಂಬುದರಿಂದ ಇಲ್ಲಿ ಅನ್ಯ ಎಂಬ ಸರ್ವನಾಮಶಬ್ದಕ್ಕೆ ದ್ವಿತ್ವ ಆಗ **ತಸ್ಯ ಪರಮಾಮ್ರೇಡಿತಮ್** (ಪಾ ಸೂ ೮-೧-೨) ಎಂಬುದರಿಂದ ಪರದರೂಪಕ್ಕೆ ಆಮ್ರೇಡಿತ ಸಂಜ್ಞೆ ಬರುತ್ತದೆ. ಸಮಾಸಭಾವ ಹೇಳಿರುವುದರಿಂದ ವಿಭಕ್ತಿಗೆ **ಸುಪೋಧಾತುಪ್ರಾತಿಪದಿಕಯೋಃ** ಎಂಬುದರಿಂದ ಲುಕ್ ಬರುತ್ತದೆ. **ಅನುದಾತ್ತಂ ಚ** (ಪಾ ಸೂ ೮-೧-೩) ಎಂಬುದರಿಂದ ಆಮ್ರೇಡಿತಕ್ಕೆ ಅನುದಾತ್ತಸ್ವರ ಬರುತ್ತದೆ.

**ಆ ಚರತಃ**—ಚರ ಗತಿಭಕ್ಷಣಯೋಃ ಧಾತು. ಲಟ್ ಪ್ರಥಮಪುರುಷ ದ್ವಿವಚನದಲ್ಲಿ ಚರತಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.



॥ ಸಂಹಿತಾಪಾಠಃ ॥

ಸನೇಮಿ ಸಖ್ಯಂ ಸ್ವಪಸ್ಯಮಾನಃ ಸೂನುರ್ದಾಧಾರ ಶವಸಾ
ಸುದಂಸಾಃ ।
ಆಮಾಸು ಚಿದ್ದಧಿಷೇ ಪಕ್ವಮಂತಃ ಪಯಃ ಕೃಷ್ಣಾಸು ರುಶ-
ದ್ರೋಹಿಣೀಷು ॥ ೯ ॥

॥ ಪದಪಾಠಃ ॥

ಸನೇಮಿ । ಸಖ್ಯಂ । ಸು ಽ ಅಪಸ್ಯಮಾನಃ । ಸೂನುಃ । ದಾಧಾರ । ಶವಸಾ ।
ಸು ಽ ದಂಸಾಃ ।
ಆಮಾಸು । ಚಿತ್ । ದಧಿಷೇ । ಪಕ್ವಂ । ಅಂತರಿತಿ । ಪಯಃ । ಕೃಷ್ಣಾಸು ।
ರುಶತ್ । ರೋಹಿಣೀಷು ॥ ೯ ॥

॥ ಸಾಯಣಭಾಷ್ಯಂ ॥

ಸ್ವಪಸ್ಯಮಾನಃ । ಸ್ವಪಃ ಶೋಭನಂ ಕರ್ಮ । ತದಿವಾಚರನ್ ಶವಸಾ ಶವಸೋ ಬಲಸ್ಯ ಸೂನುಃ ಪುತ್ರಃ । ಅತಿಬಲವಾನಿತ್ಯರ್ಥಃ । ಸುದಂಸಾಃ ಶೋಭನಯಾಗಾದಿಕರ್ಮಯುಕ್ತಃ । ಏವಂಭೂತ ಇಂದ್ರಃ ಸಖ್ಯಂ ಯಜಮಾನಾನಾಂ ಸಖಿತ್ವಂ ಸನೇಮಿ ಪುರಾಣಂ ದಾಧಾರ । ಧಾರಯತಿ । ಪೋಷಯತೀತ್ಯರ್ಥಃ । ಸನೇಮೀತಿ ಪುರಾಣನಾಮ । ಪ್ರವಯಾಃ ಸನೇಮೀತಿ ಪಾಠಾತ್ । ಕಿಂಚಾಮಾಸು ಚಿತ್ ಅದ್ಯಾಪ್ಯಸ್ವಪರಿ-ಪಕ್ವಾಸು ಗೋಷು ಚಾಂತರ್ಮಧ್ಯೇ ಪಕ್ವಂ ಪರಿಪಕ್ವಂ ಪಯೋ ದಧಿಷೇ । ಧಾರಯಸಿ । ತಥಾ ಕೃಷ್ಣಾಸು ಕೃಷ್ಣವರ್ಣಾಸು ರೋಹಿಣೀಷು ಲೋಹಿತವರ್ಣಾಸು ಚ ಗೋಷು ತದ್ವಿಪರೀತಂ ರುಶದ್ದೀಪ್ಯಮಾನಂ ಶ್ವೇತವರ್ಣಂ ಪಯೋ ದಧಿಷೇ ॥ ಸಖ್ಯಂ । ಸಖ್ಯುರ್ಭಾವಃ ಸಖ್ಯಂ । ಸಖ್ಯುರ್ಯ ಇತಿ ಯಃ । ಪ್ರತ್ಯಯ-ಸ್ವರಃ । ದಾಧಾರ । ಧೃಞ್ ಧಾರಣೇ । ತುಜಾದಿತ್ವಾದಭ್ಯಾಸಸ್ಯ ದೀರ್ಘತ್ವಂ । ಪಕ್ವಂ । ಪಚೋ ವಃ ।

**ಪಾ. ೮-೨-೫೨ । ಇತಿ ನಿಷ್ಠಾತಕಾರಸ್ಯ ವತ್ವಂ । ರೋಹಿಣೀಷು । ರುಹ ಬೀಜಜನ್ಮನಿ ಪ್ರಾದುರ್ಭಾವೇ । ರುಹೇ ರಶ್ಚ ಲೋ ವಾ । ಉ. ೩-೯೪ । ಇತೀತನ್ಪ್ರತ್ಯಯಾಂತೋ ರೋಹಿತಶಬ್ದ ಆದ್ಯುದಾತ್ತೋ ವರ್ಣವಾಚೀ । ವರ್ಣಾದನುದಾತ್ತಾತ್ತೋಪಧಾತ್ತೋ ನಃ । ಪಾ. ೪-೧-೩೯ । ಇತಿ ಙೀಪ್ । ತತ್ಸಂನಿಯೋಗೇನ ತಕಾರಸ್ಯ ನಕಾರಾದೇಶಶ್ಚ । ಙೀಪಃ ಪಿತ್ತ್ವಾದನುದಾತ್ತತ್ವೇ ಪ್ರಾತಿಪದಿಕಸ್ವರ ಏವ ಶಿಷ್ಯತೇ ॥**

॥ ಪ್ರತಿಪದಾರ್ಥ ॥

**ಸ್ವಪಸ್ಯಮಾನಃ**— ಮಂಗಳಕರವಾದ ಕರ್ಮದಂತೆ ಆಚರಿಸುವ (ಮಂಗಳಕರವಾದ ಕರ್ಮಗಳನ್ನಾಚರಿಸುವ) । **ಶವಸಾ ಸೂನುಃ**—ಬಲದ ಪುತ್ರನಾದ (ಬಲಿಷ್ಠನಾದ) । **ಸುದಂಸಾಃ**—ಯಾಗಾದಿ ಪವಿತ್ರ ಕರ್ಮಗಳುಳ್ಳ (ಇಂದ್ರನು) । **ಸನೇಮಿ**— ಪುರಾತನವಾದ । **ಸಖ್ಯಂ**—(ಯಜ್ಞಗಳ ಯಜಮಾನರುಗಳ) ಸಖ್ಯವನ್ನು । **ದಾಧಾರ**—ಅಪ್ರಿಯವುಳ್ಳದ್ದನ್ನಾಗಿ ಮಾಡುತ್ತಾನೆ (ಪೋಷಿಸುತ್ತಾನೆ) । (ಇಂದ್ರನಾದ ನೀನು) **ಆಮಾಸು ಚಿತ್**—ಅಪರಿಪಕ್ವವಾದ ಗೋವುಗಳಲ್ಲಿಯೂ । **ಅಂತಃ**—ಒಳಗಡೆ । **ಪಕ್ವಂ**—ಪಕ್ವವಾದ । **ಪಯಃ**— ಕ್ಷೀರವನ್ನು । **ದಧಿಷೇ**— ಇಡುತ್ತೀಯೇ । **ಕೃಷ್ಣಾಸು**— ಕಪ್ಪಾದ (ಗೋವುಗಳಲ್ಲಿಯೂ) । **ರೋಹಿಣೀಷು**— ಕೆಂಪಾದ (ಗೋವುಗಳಲ್ಲಿಯೂ) । **ರುಶತ್**-ಪ್ರಕಾಶಿಸುತ್ತಿರುವ (ಬೆಳ್ಳಗಿರುವ) । (**ಪಯಃ**— ಹಾಲನ್ನು) । (**ದಧಿಷೇ** --ಇಡುತ್ತೀಯೆ) ॥

॥ ಭಾವಾರ್ಥ ॥

ಇಂದ್ರನು ಮಹಾಬಲಿಷ್ಠನು ಮಂಗಳಕರವಾದ ಮತ್ತು ಪವಿತ್ರವಾದ ಕರ್ಮಗಳುಳ್ಳವನು. ಮತ್ತು ಯಜಮಾನರ ಸ್ನೇಹಿತನು ಇವನು ಅಪರಿಪಕ್ವವಾದ ಗೋವುಗಳಲ್ಲಿಯೂ ಕೂಡ ಪಕ್ವವಾದ ಕ್ಷೀರವನ್ನುಂಟು ಮಾಡುತ್ತಾನೆ. ಮತ್ತು ಗೋವುಗಳು ಕಪ್ಪಾಗಿರಲೀ, ಕೆಂಪಾಗಿರಲೀ. ಅವುಗಳಲ್ಲಿ ಬೆಳ್ಳಗಿರುವ, ಶುಭ್ರವಾದ ಹಾಲನ್ನೇ ಕಲ್ಪಿಸಿರುತ್ತಾನೆ

## English Translation

(Indra) the son of strength, full of good works, diligent in pious acts retains his ancient friendships for his people; O Indra, you placed the ripened milk in immature cows whether black or red and white milk in the black cows.

॥ ವಿಶೇಷವಿಷಯಗಳು ॥

**ಸನೇಮಿ**—ಪ್ರತ್ನಂ, ಪ್ರದಿವಃ ಮೊದಲಾದ ಆರು ಪುರಾಣನಾಮಗಳ ಮಧ್ಯದಲ್ಲಿ ಸನೇಮಿ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ ೩-೨೦) ಪುರಾತನವಾದ, ಹಳೆಯದಾದ ಬಹಳ ಹಿಂದಿನ, ಸನೇಮಿ ಎಂದರೆ ಬಹಳ ಹಿಂದಿನಿಂದ ಬಂದ ಸ್ನೇಹ, old friendship.

**ಸ್ವಪಸ್ಯಮಾನಃ**--ಅಪಃ ಎಂದರೆ ಕರ್ಮವು. (ನಿ ೩-೧) ಸು+ಅಪಃ ಎಂದರ ಶೋಭನಕರ್ಮವು ಅಂತಹ ಕರ್ಮವುಳ್ಳವನು ಇಂದ್ರನು ಎಂದಭಿಪ್ರಾಯವು

**ಸೂನುಃ ಶವಸಾ**--**ಬಲಸ್ಯ ಪುತ್ರಃ** । ಶಕ್ತಿಯ ಪುತ್ರನು, ಅತಿಬಲಶಾಲಿಯು ಎಂದರ್ಥವು

**ಸುದಂಸಾಃ**—ದಂಸಃ ಎಂದರೆ ಕರ್ಮವು (ನಿ ೨ ೧) ಸುದಂಸಾಃ ಎಂದರೆ ಅನೇಕ ಸಾಹಸಕಾರ್ಯಗಳನ್ನು ಮಾಡಿದವನು

**ಆಮಾಸು ಚಿತ್ ವಧಿಷೇ ಪಕ್ವಂ ಅಂತಃ ಪಯಃ- ಅಪರಿಪಕ್ವಾಸು ಗೋಷು ಚಾಂತರ್ಮಧ್ಯೇ ಪಕ್ವಂ ಪಯೋ ದಧಿಷೇ ।** ಈ ಸೂಕ್ತಿನ ಉತ್ತರಾರ್ಧದಲ್ಲಿ ಎರಡು ವಾಕ್ಯಗಳಿರುವವು ಈ ಎರಡು ವಾಕ್ಯಗಳೂ ಇಂದ್ರನ ಎರಡು ಮಹಿಮೆಗಳನ್ನು ವರ್ಣಿಸುವವು ಅವುಗಳಲ್ಲಿ ಒಂದಾದ ಈ ವಾಕ್ಯವು— ಹಸುಗಳು ಚೆನ್ನಾಗಿ ಬೆಳೆದು ಕರುಗಳನ್ನು ಹಾಕುವುದಕ್ಕೆ ಮುಂಚೆಯೇ ಅವುಗಳಲ್ಲಿ ಹಾಲು ಉತ್ಪತ್ತಿಯಾಗುವಂತೆ ಮಾಡುವ ಮಹಿಮೆಯು ವರ್ಣಿತವಾಗಿರುವುದು ಮತ್ತೊಂದು ವಾಕ್ಯವಾದ -

**ಪಯಃ ಕೃಷ್ಣಾಸು ರುಶತ್ ರೋಹಿಣೀಷು**--ಎಂಬ ಈ ವಾಕ್ಯದಲ್ಲಿ ಹಸುಗಳು ಕಪ್ಪಾಗಿರಲಿ ಅಥವಾ ಕೆಂಪಗಿರಲಿ ಅವುಗಳ ಹಾಲು ಮಾತ್ರ ಬೆಳ್ಳಗೇ ಇರುವುದು ಇಂತಹ ಕಾರ್ಯವನ್ನು ಮಾಡುವುದಕ್ಕೆ ಇಂದ್ರನಿಗೆ ಮಾತ್ರ ಸಾಮರ್ಥ್ಯವಿರುವುದು ಎಂಬ ಇಂದ್ರನ ಎರಡನೆಯ ಮಹಿಮೆಯು ವರ್ಣಿತವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಸಖ್ಯಮ್**--ಸಖ್ಯುರ್ಭಾವಃ ಸಖ್ಯಮ್ **ಸಖ್ಯುರ್ಯಃ** (ಪಾ. ಸೂ ೫-೧-೧೨೬) ಎಂಬುದರಿಂದ ಭಾವಾರ್ಥದಲ್ಲಿ ಯ ಪ್ರತ್ಯಯ **ಯಸ್ಯೇತಿ ಚ** ಎಂಬುದರಿಂದ ಯಾದಿಪ್ರತ್ಯಯ ನಿಮಿತ್ತಕ ಭಸಂಜ್ಞಾ ಇರುವುದರಿಂದ ಇಕಾರಲೋಪ ಬರುತ್ತದೆ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ

**ಸ್ವಪಸ್ಯಮಾನಃ**—ಸ್ವಪಃ ಇವ ಆಚರತಿ ಎಂಬರ್ಥದಲ್ಲಿ ಸ್ವಪಃ ಎಂಬುದಕ್ಕೆ **ಕ್ಯಙ್** ಸ್ವಪಸ್ಯತೇ ಇತಿ ಸ್ವಪಸ್ಯಮಾನಃ ಕ್ಯಙಂತದ ಮೇಲೆ ಲಡರ್ಥದಲ್ಲಿ ಶಾನಚ್ **ಆನೇ ಮುಕ್** ಎಂಬುದರಿಂದ ಅಜಂತಕ್ಕೆ ಮುಕಾಗಮ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು ಅನುದಾತ್ತ ಕ್ಯಙ್ ಸ್ವರವು ಸತಿಶಿಷ್ಟವಾಗುತ್ತದೆ

**ದಾಧಾರ** -ಧೃಞ್ ಧಾರಣೇ ಲಿಟ್ ಪ್ರಥಮಪುರುಷೈಕವಚನಕ್ಕೆ **ಪರಸ್ಮೈಪದಾನಾಂ**—ಸೂತ್ರದಿಂದ ಣಲಾದೇಶ ಲಿಣ್ನಿಮಿತ್ತಕವಾಗಿ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಉರದತ್ವ, ಹಲಾದಿಶೇಷ ಜಸ್ತ್ವ ಣಲ್ ನಿಮಿತ್ತಕವಾಗಿ **ಅಚೋ ಞ್ಣಿತಿ** ಎಂಬುದರಿಂದ ಧಾತುವಿನ ಋಕಾರಕ್ಕೆ ವೃದ್ಧಿ **ಉರಣ್ರಪರಃ** ಎಂಬುದರಿಂದ ರಪರವಾಗಿ ಬಂದರೆ ವಧಾರ ಎಂದಾಗುತ್ತದೆ. ತುಜಾದಿಯಲ್ಲಿ ಸೇರಿರುವುದರಿಂದ **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ

**ಪಕ್ವಮ್**—ಡುಪಚಷ್ ಪಾಕೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ ಬರುತ್ತದೆ. ಪಚ್+ತ ಎಂದಿರುವಾಗ **ಪಚೋೕ ವಃ** (ಪಾ ಸೂ.೮-೨-೫೨) ಎಂಬುದರಿಂದ ನಿಷ್ಠಾತಕಾರಕ್ಕೆ ವತ್ವ. ಇದು ಅಸಿದ್ಧವಾದುದರಿಂದ **ಚೋಃ ಕುಃ** (ಪಾ. ಸೂ ೮-೨-೩೦) ಎಂಬುದರಿಂದ ಚಕಾರಕ್ಕೆ ತಕಾರಾದೇಶ ಬರುತ್ತದೆ. ಪಕ್ವ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ರೋಹಿಣೀಷು**—ರುಹ ಬೀಜಜನ್ಮನಿ ಪ್ರಾದುರ್ಭಾವೇ ಧಾತು **ರುಹೇ ರಶ್ಚ ಲೋ ವಾ** (ಉ. ಸೂ. ೩-೩೭೪) ಎಂಬುದರಿಂದ ಇತನ್‌ಪ್ರತ್ಯಯ. ಪ್ರತ್ಯಯ ನಿಮಿತ್ತಕವಾಗಿ ಧಾತುವಿನ ಲಘೂಪಧೆಗೆ ಗುಣ ರೋಹಿತ ಎಂದು ಆದ್ಯುದಾತ್ತವಾದ ಪದವಾಗುತ್ತದೆ ಇದು ವರ್ಣವಾಚಕವಾಗುತ್ತದೆ. ಆದುದರಿಂದ ಸ್ತ್ರೀತ್ವದಲ್ಲಿ **ವರ್ಣಾದನುದಾತ್ತಾತ್ತೋಪಧಾತ್ತೋನಃ** (ಪಾ. ಸೂ. ೪-೧-೩೯) ಎಂಬುದರಿಂದ ಜೀಪ್. ತತ್ಸಂನಿಯೋಗದಿಂದ ತಕಾರಕ್ಕೆ ನಕಾರಾದೇಶ ಅನುದಾತ್ತ ವಿಶಿಷ್ಟವಾಗಿ ತಕಾರ ಉಪಧೆಯಾಗಿ ವರ್ಣವಾಚಕವಾಗಿರುವ ರೋಹಿತ ಶಬ್ದಕ್ಕೆ ಪೂರ್ವೋಕ್ತ ಕಾರ್ಯಗಳು ಬಂದರೆ ರೋಹಿಣೀ ಎಂದು ರೂಪವಾಗುತ್ತದೆ ರೇಫದ ಪರದಲ್ಲಿ ನಕಾರ ಬಂದುದರಿಂದ **ಅಟ್‌ಕುಪ್ವಾಙ್** ಸೂತ್ರದಿಂದ ಣತ್ವ ಬಂದಿದೆ ಇಲ್ಲಿ ಜೀಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಪ್ರಾತಿಪದಿಕಸ್ವರವು ಉಳಿಯುತ್ತದೆ ಸಪ್ತಮೀ ಬಹುವಚನದಲ್ಲಿ ರೋಹಿಣೀಷು ಎಂದು ರೂಪವಾಗುತ್ತದೆ. ಆದ್ಯುದಾತ್ತವಾದ ಪದವಾಗುತ್ತದೆ.

---

॥ ಸಂಹಿತಾಪಾಠಃ ॥

ಸನಾತ್ಸನೀಳಾ ಅವನೀರವಾತಾ ವ್ರತಾ ರಕ್ಷಂತೇ ಅಮೃತಾಃ
ಸಹೋಭಿಃ ।
ಪುರೂ ಸಹಸ್ರಾ ಜನಯೋ ನ ಪತ್ನೀರ್ದುವಸ್ಯಂತಿ ಸ್ವಸಾರೋ
ಅಹ್ರಯಾಣಂ ॥ ೧೦ ॥

॥ ಪದಪಾಠಃ ॥

ಸನಾತ್ । ಸಽನೀಳಾಃ । ಅವನೀಃ । ಅವಾತಾಃ । ವ್ರತಾ । ರಕ್ಷಂತೇ । ಅಮೃತಾಃ । ಸಹಃಽಭಿಃ ।

ಪುರು । ಸಹಸ್ರಾ । ಜನಯಃ । ನ । ಪತ್ನೀಃ । ದುವಸ್ಯಂತಿ । ಸ್ವಸಾರಃ । ಅಹ್ರಯಾಣಂ ॥ ೧೦ ॥

॥ ಸಾಯಣಭಾಷ್ಯಂ ॥

ಸನಾಚ್ಚಿರಕಾಲಾದಾರಭ್ಯ ಸನೀಳಾಃ ಸಮಾನನಿವಾಸಸ್ಥಾನಾ ಅವಾತಾಃ । ವಾತಂ ಗಮನಂ ತದ್ರಹಿತಾಃ । ಏಕಸಾಣ್ಯವಸ್ಥಾನಾತ್ । ಅವನಯ ಇತ್ಯಂಗುಲಿನಾಮ । ಏವಂಭೂತಾ ಅವನೀರಂಗುಲಯಃ ಪುರು ಪುರೂಣಿ ಬಹೂನಿ ಸಹಸ್ರಸಂಖ್ಯಾಕಾನಿ ವ್ರತಾ ವ್ರತಾನೀಂದ್ರಸಂಬಂಧೀನಿ ಕರ್ಮಾಣ್ಯಮೃತಾಃ ಪುನಃಪುನಃಕರಣೇಽಪ್ಯಾಲಸ್ಯರಹಿತಾಃ ಸತ್ಯಃ ಸಹೋಭಿರಾತ್ಮೀಯೈರ್ಬಲೈಃ ೪ ರಕ್ಷಂತೇ । ಪಾಲಯಂತಿ । ಅಪಿ ಚ ಸ್ವಸಾರಃ ಸ್ವಯಮೇವ ಸರಂತ್ಯೋಽಂಗುಲಯಃ ಪತ್ನೀಃ ಪಾಲಯಿತ್ರ್ಯೋಽಹ್ರಯಾಣಂ ಲಜ್ಜಾರಹಿತಂ । ಪ್ರಗಲ್ಭಮಿತ್ಯರ್ಥಃ । ಯದ್ವಾ । ಅಹ್ರೀತಯಾನಂ ಪ್ರಶಸ್ತಗಮನಮಿಂದ್ರಂ ಜನಯೋ ನ । ಜನಯ ಇತಿ ದೇವಾನಾಂ ಪತ್ನ್ಯ ಉಚ್ಯಂತೇ । ದೇವಾನಾಂ ವೈ ಪತ್ನೀರ್ಜನಯ ಇತಿ ಶ್ರುತೇಃ । ತಾ ಇವ ದುವಸ್ಯಂತಿ । ಪರಿಚರಂತಿ । ಅಂಜಲಿಬಂಧನೇನೇಂದ್ರಂ ಪ್ರೀಣಯಂತೀತ್ಯರ್ಥಃ ॥ ಅವನೀಃ । ಅವನಯೋಽಂಗುಲಯೋ ಭವಂತ್ಯವಂತಿ ಕರ್ಮಾಣಿ । ನಿ ೩-೯ । ಇತಿ ಯಾಸ್ಕಃ । ಸುಪಾಂ ಸುಲುಗಿತಿ ಜಸಃ ಪೂರ್ವಸವರ್ಣದೀರ್ಘತ್ವಂ । ಅವಾತಾಃ । ವಾ ಗತಿಗಂಧನಯೋಃ । ಅಸಿಹಸೀತ್ಯಾದಿನಾ ಭಾವೇ ತನ್ಪ್ರತ್ಯಯಃ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ವ್ರತಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ದುವಸ್ಯಂತಿ । ದುವಸ್ಯತಿಃ ಪರಿಚರಣಕರ್ಮಾ । ಕಂಡ್ವಾದಿಃ । ಅತೋ ಯಕ ಏವ ಸ್ವರಃ ಶಿಷ್ಯತೇ । ಪಾದಾದಿತ್ವಾನ್ನಿಘಾತಾಭಾವಃ । ಅಹ್ರಯಾಣಂ । ಹ್ರೀ ಲಜ್ಜಾಯಾಂ । ಬಹುಲಂ ಛಂದಸೀತಿ ಶ್ಲೋರಭಾವಃ । ವ್ಯತ್ಯಯೇನ ಶಾನಚ್ । ಮುಗಭಾವಶ್ಛಾಂದಸಃ । ನಞ್ಸಮಾಸೇಽವ್ಯಯಪೂರ್ವಪದ-ಪ್ರಕೃತಿಸ್ವರತ್ವಂ । ಯದ್ವಾ । ಬಹುಲಂ ಛಂದಸೀತಿ ಶಪೋ ಲುಕಿ ಛಂದಸ್ಯುಭಯಥೇತಿ ಶಾನಚ ಆರ್ಧಧಾತುಕತ್ವೇನ ಙಿತ್ತ್ವಾಭಾವೇ-ಗುಣಾಯಾದೇಶೌ । ಪೂರ್ವವತ್ಸಮಾಸಸ್ವರೌ । ಯಾಸ್ಕಸ್ತ್ವೇವಂ ವ್ಯಾಖ್ಯತ್ । ಅಹ್ರಯಾಣೋಽಹ್ರೀತಯಾನಃ । ನಿ. ೫-೧೫ । ಇತಿ ॥

॥ ಪ್ರತಿಪದಾರ್ಥ ॥

**ಸನಾತ್** -- ಅನಾದಿಕಾಲದಿಂದಲೂ । **ಸನೀಲಾಃ**— ಸಮಾನ ನಿವಾಸಸ್ಥಾನವುಳ್ಳ । **ಅವಾತಾಃ**—(ಒಂದೇ ಕೈಯಲ್ಲಿರುವುದರಿಂದ) ಗಮನವಿಲ್ಲದ । **ಅವನೀಃ**— ಬೆರಳುಗಳು । **ಪುರು**—ಅನೇಕ । **ಸಹಸ್ರಾ**—ಅಸಂ

ಖ್ಯಾತವಾದ । **ವ್ರತಾ**—(ಇಂದ್ರ ಸಂಬಂಧವಾದ) ಕರ್ಮಗಳನ್ನು । **ಅಮೃತಾಃ**—(ಪುನಃ ಪುನಃ ಮಾಡಿದರೂ) ಆಲಸ್ಯವಿಲ್ಲದವುಗಳಾಗಿ । **ಸಹೋಭಿಃ**—ತಮ್ಮ ಬಲದಿಂದ । **ರಕ್ಷಂತೇ**—ಕಾಪಾಡಿಕೊಂಡು ಬಂದಿವೆ. । **ಪತ್ನೀಃ**—ರಕ್ಷಕರಾದ । **ಸ್ವಸಾರಃ**—ಸ್ವತಃ ಚಲಿಸುವ (ಅಂಗುಲಿಗಳು) । **ಅಹ್ರಯಾಣಂ**—ಲಜ್ಜಾರಹಿತವಾಗಿ ಅಥವಾ ಅವ್ಯಾಹತಗಮನವುಳ್ಳ (ಇಂದ್ರನನ್ನು) । **ಜನಯೋ ನ**—ದೇವಸ್ತ್ರೀಯರಂತೆ । **ದುವಸ್ಯಂತಿ**—ಸೇವಿಸುತ್ತವೆ.

॥ ಭಾವಾರ್ಥ ॥

ಒಂದೇ ಕಡೆ ಇರುವ, ಸ್ಥಳಪಲ್ಲಟವಿಲ್ಲದ, ಬೆರಳುಗಳು ಇಂದ್ರನ ಸಂಬಂಧವಾದ ಅಸಂಖ್ಯಾತ ಕರ್ಮಗಳನ್ನು ಅನಾದಿಕಾಲದಿಂದಲೂ ಸ್ವಕೀಯವಾದ ಬಲದಿಂದ ನಡೆಸಿಕೊಂಡು ಬಂದಿವೆ. ರಕ್ಷಕಗಳಾದ, ಸ್ವತಃ ಚಲಿಸಲು ಶಕ್ತಿಯುಳ್ಳ ಅಂಗುಲಿಗಳು ದೇವಸ್ತ್ರೀಯರುಗಳಂತೆ ಅಂಜಲಿ ಬಂಧಾದಿಗಳಿಂದ ಲಜ್ಜಾರಹಿತವಾಗಿ ಇಂದ್ರನ ಸೇವೆಯನ್ನು ಮಾಡುತ್ತವೆ

## English Translation.

From a remote time the contiguous, unshifting and unwearied fingers practise with all their energies many thousand acts of devotion towards Indra; and like the wives of the gods the protecting sisters (fingers) worship him who is without shame.

॥ ವಿಶೇಷವಿಷಯಗಳು ॥

ಈ ಋಕ್ಕಿನ ಅರ್ಥವು ಸ್ವಲ್ಪ ತೊಡಕಾಗಿರುವುದು. ಋಷಿಯ ಅಭಿಪ್ರಾಯವು ಸ್ಪಷ್ಟವಾಗಿ ವರ್ಣಿತವಾಗಿಲ್ಲ

**ಸನೀಳಾಃ**—ನೀಳಂ ಎಂದರೆ ಗೃಹ ಅಥವಾ ವಾಸಸ್ಥಾನವು (ನಿ. ೩-೧೩) ಸನೀಳಾಃ ಎಂದರೆ ಸಮಾನ ವಾಸಸ್ಥಾನ ಎಂದರೆ ಒಂದೇ ಕಡೆ ಇರುವ ಎಂದಭಿಪ್ರಾಯವು.

**ಅವನೀಃ--ಅಗ್ರುವಃ ಅಣ್ವ್ಯಃ ।** ಮೊದಲಾದ ಇಪ್ಪತ್ತೆರಡು ಅಂಗುಲಿನಾಮಗಳ ಮಧ್ಯದಲ್ಲಿ ಅವನಯಃ ಎಂಬ ಶಬ್ದವು ಪಠಿತವಾಗಿರುವುದರಿಂದ ಅವನೀಃ ಎಂದರೆ ಬೆರಳುಗಳನ್ನು ಎಂದರ್ಥವು (ನಿ. ೩-೯)

**ಅವಾತಾಃ—ವಾ ಗತಿಗಂಧನಯೋಃ । ವಾತಂ ಗಮನಂ ತದ್ರಹಿತಾಃ ।** ಗಮನರಹಿತವಾದ ಎಂದರೆ ನಿಯಮಿತಸ್ಥಳವನ್ನು ಬಿಟ್ಟು ಚಲಿಸದಿರುವ.

**ವ್ರತಾ—ಇಂದ್ರಸಂಬಂಧೀನಿ ಕರ್ಮಾಣಿ ।** ವ್ರತವೆಂದರೆ ಕರ್ಮವು (ನಿ ೩-೧) ವ್ರತಾ ಎಂಬ ಶಬ್ದವು ದ್ವಿತೀಯಾ ಬಹುವಚನವು.

**ಅಮೃತಾಃ--ಪುನಃಪುನಃಕರಣೇऽಪ್ಯಾಲಸ್ಯರಹಿತಾಃ ।** ಮತ್ತೆ ಮತ್ತೇ ಕೆಲಸ ಮಾಡುವುದರಲ್ಲಿ ಆಲಸ್ಯವಿಲ್ಲದಿರುವ.

**ಸಹೋಭಿಃ—ಆತ್ಮೀಯೈರ್ಬಲೈಃ** । ಸಹಃ ಎಂದರೆ ಬಲವು (ನಿ ೨-೯)

**ಜನಯೋ ನ**—ಜನಯಃ ಎಂದರೆ ಸ್ತ್ರೀಯರು **ಜನೀನಾಂ ಜಾಯಾನಾಂ** (ನಿ ೧೦-೯೯) ಎಂದು ಸಿರುಕ್ತವಚನವಿರುವುದು ಸ್ತ್ರೀಯರಂತೆ, ಪತ್ನಿಯರಂತೆ

**ದುವಸ್ಯಂತಿ ದುವಸ್ಯತಿ ಪರಿಚರಣಕರ್ಮಾ** (ನಿ ೩-೫) ಪರಿಚರಂತಿ । ಸೇವೆ ಮಾಡುತ್ತವೆ

**ಸ್ವಸಾರಃ—ಸ್ವಯಮೇವ ಸರಂತ್ಯೋಂಗುಲಯಃ** । ಪ್ರೇರಣೆ ಇಲ್ಲದೆ ತಾವೇ ಚಲಿಸುವುದರಿಂದ ಸ್ವಸಾರಃ ಎಂದರೆ ಅಂಗುಲಿಗಳು ಬೆರಳುಗಳು ಸ್ವಸಾರಃ ಎಂದರೆ ಸಹೋದರಿಯರು, sisters ಎಂದೂ ಅರ್ಥವು

**ಅಹ್ರಯಾಣಂ—ಹ್ರೀ ಲಜ್ಜಾಯಾಂ । ಲಜ್ಜಾರಹಿತಂ** । ಲಜ್ಜಾರಹಿತನಾದ, ನಾಚಿಕೆಯಿಲ್ಲದ ಯಾಸ್ಕರು ಅಹ್ರಯಾಣೋಽಹ್ರೀತಯಾನಃ (ನಿ ೫-೧೫) ಎಂದು ಹೇಳಿರುವರು

॥ ವ್ಯಾಕರಣಪ್ರಕ್ರಿಯಾ ॥

**ಅವನೀಃ** ಅವನಯೋಽಂಗುಲಯೋ ಭವಂತಿ, ಅವಂತಿ ಕರ್ಮಾಣಿ (ನಿರು ೩-೯) ಎಂಬುದಾಗಿ ಯಾಸ್ಕರು ಹೇಳುತ್ತಾರೆ ಅವನಿ ಎಂದರೆ ಕೈಬೆರಳುಗಳು ಕೆಲಸವನ್ನು ರಕ್ಷಿಸುತ್ತವೆ (ಮಾಡಲು ಸಹಾಯವಾಗುತ್ತವೆ) ಆದುದರಿಂದ ಅನ್ವರ್ಥನಾದ ಹೆಸರು ಎಂದು ತಾತ್ಪರ್ಯ ಅವನಿ। ಜಸ್ ಎಂದಿರುವಾಗ **ಸುಪಾಂಸುಲುಕ್** ಎಂಬುದರಿಂದ ಜಸ್ಸಿಗೆ ಪೂರ್ವಸವರ್ಣದೀರ್ಘ ಸಕಾರಕ್ಕೆ ರುತ್ವವಿಸರ್ಗ ಅವನೀಃ ಎಂದು ರೂಪವಾಗುತ್ತದೆ

**ಅವಾತಾಃ**—ವಾ ಗತಿಗಂಧನಯೋಃ ಧಾತು **ಅಸಿಹಸಿ—**ಎಂಬುದರಿಂದ ಭಾವಾರ್ಥದಲ್ಲಿ ತನ್‌ಪ್ರತ್ಯಯ. ನ ವಿದ್ಯತೇ ವಾತಃ ಗಮನಂ ಯಾಸಾಂ ತಾಃ ಅವಾತಾಃ ಬಹುವ್ರೀಹಿಯಲ್ಲಿ **ನಞ್‌ಸುಭ್ಯಾಂ** (ಪಾ ಸೂ ೬-೧-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರವು ಬರುತ್ತದೆ

**ವ್ರತಾ** ವ್ರತ। ಜಸ್ ಎಂದಿರುವಾಗ **ಜಶ್ಶಸೋಃ ಶಿಃ** ಎಂಬುದರಿಂದ ಶಿ ಆದೇಶ **ಶಿ ಸರ್ವನಾಮಸ್ಥಾನಮ್** ಎಂಬುದರಿಂದ ಸರ್ವನಾಮಸ್ಥಾನಸಂಜ್ಞೆ ಇರುವುದರಿಂದ **ನಪುಂಸಕಸ್ಯ ಝಲಚಃ** ಎಂಬುದರಿಂದ ನುಮಾಗಮ **ಸರ್ವನಾಮಸ್ಥಾನೇಚಾಸಂಬುದ್ಧೌ** ಎಂಬುದರಿಂದ ದೀರ್ಘ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ ನಲೋಪ ವ್ರತಾ ಎಂದು ರೂಪವಾಗುತ್ತದೆ

**ರಕ್ಷಂತೇ**—ರಕ್ಷ ಪಾಲನೇ ಧಾತು ಲಟ್ ಪ್ರಥಮಪುರುಷ ಬಹುವಚನರೂಪ ತಿಙಂತನಿಘಾತಸ್ವರ ಬರುತ್ತದೆ

**ದುವಸ್ಯಂತಿ**- ದುವಸ್ಯತಿಃ ಪರಿಚರಣಕರ್ಮಾ (ಸೇವಾ) ಕಂಡ್ವಾದಿಯು ಆಕೃತಿಗಣವೆಂಬುದರಿಂದ ಈ ಧಾತುವು ಅಲ್ಲಿ ಸೇರುತ್ತದೆ ಅಲ್ಲಿ ದುವಸ್ ಸಂದೀಪನೆ ಎಂದು ವ್ಯಾಖ್ಯಾಂತರದಲ್ಲಿ ಹೇಳಿರುತ್ತಾರೆ **ಕಂಡ್ವಾದಿಭ್ಯೋ ಯಕ್** (ಪಾ ಸೂ ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್ ಬರುತ್ತದೆ ಸನಾದಿಯಲ್ಲಿ ಯಕ್ ಸೇರಿರುವುದರಿಂದ **ಸನಾದ್ಯಂತಾ ಧಾತವಃ** ಎಂಬುದರಿಂದ ದುವಸ್ಯ ಎಂಬುದಕ್ಕೆ ಧಾತುಸಂಜ್ಞೆ ಬರುತ್ತದೆ ಲಟ್ ಪ್ರಥಮಪುರುಷ

ಬಹುವಚನದ ಝಿಗೆ **ಝೋಽಂತಃ** ಎಂಬುದರಿಂದ ಅಂತಾದೇಶ ಬರುತ್ತದೆ ಅಂತಿಪರದಲ್ಲಿರುವಾಗ **ಕರ್ತರಿ ಶಪ್** ಸೂತ್ರದಿಂದ ಶಪ್ **ಅತೋಗುಣೇ** ಎಂಬುದರಿಂದ ಪರರೂಪ. ಇಲ್ಲಿ ಯಕ್ಕಿನ ಸ್ವರವು ಸತಿಶಿಷ್ಟವಾಗುವುದರಿಂದ ಅದಕ್ಕೇ ಏಕಾದೇಶ ಬಂದಿರುವುದರಿಂದ ಸ್ಯ ಎಂಬಲ್ಲಿರುವ ಆಕಾರವು ಉದಾತ್ತವಾಗುತ್ತದೆ. ಪಾದದ ಆದಿಯಲ್ಲಿರುವುದರಿಂದ **ಆಪಾದಾದೌ** ಎಂದು ನಿಷೇಧಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ

**ಅಹ್ರಯಾಣಮ್**—ಹ್ರೀ ಲಜ್ಜಾಯಾಂ ಧಾತು ಜುಹೋತ್ಯಾದಿ **ವ್ಯತ್ಯಯೋ ಬಹುಲಂ** ಎಂಬುದರಿಂದ ನಿಮಿತ್ತವಿಲ್ಲದಿದ್ದರೂ ಶಾನಚ್ ಬರುತ್ತದೆ **ಬಹುಲಂ ಛಂದಸಿ** ಸೂತ್ರದಿಂದ ಶ್ಲು ವಿಕರಣ ಬರುವುದಿಲ್ಲ ಶಾನಚ್ ಪರದಲ್ಲಿರುವಾಗ ಧಾತುವಿಗೆ ಗುಣ ಗುಣದ ಏಕಾರಕ್ಕೆ ಅಯಾದೇಶ. ಛಾಂದಸವಾಗಿ ಮುಕಾಗಮ ಬಾರದಿರುವುದರಿಂದಲೇ ಹಿಂದಿನ ಕಾರ್ಯಗಳು ಬರುತ್ತವೆ ರೇಫದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ ಹ್ರಯಾಣ ಎಂದು ರೂಪವಾಗುತ್ತದೆ ನಞ್ ಸಮಾಸವಾದಾಗ **ತತ್ಪುರುಷೇ ತುಲ್ಯಾರ್ಥ** ಸೂತ್ರದಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ ಅಥವಾ ಪೂರ್ವೋಕ್ತವಾದ ಧಾತುವಿಗೆ **ಬಹುಲಂ ಛಂದಸಿ** ಎಂಬುದರಿಂದ ಶಪ್ ಪ್ರಾಪ್ತವಾಗಿ ಅದಕ್ಕೆ ಲುಕ್ ಬರುತ್ತದೆ. **ಛಂದಸ್ಯುಭಯಥಾ** (ಪಾ ಸೂ ೩-೪-೧೧೭) ಎಂಬುದರಿಂದ ಶಾನಚಿಗೆ ಆರ್ಧಧಾತುಕ ಸಂಜ್ಞೆ ಇರುವುದರಿಂದ **ಸಾರ್ವಧಾತುಕಮಪಿತ್** ಸೂತ್ರದಿಂದ ಶಾನಚಿಗೆ ಙಿತ್ವ ಬರುವುದಿಲ್ಲ ತನ್ನಿಮಿತ್ತವಾಗಿ ಧಾತುವಿಗೆ ಗುಣಾಯಾದೇಶಗಳು ಬರುತ್ತವೆ ಅಜಂತವಾಗದಿರುವುದರಿಂದಲೇ ಮುಕಾಗಮ ಬರುವುದಿಲ್ಲ. ಸಮಾಸ ಮತ್ತು ಸ್ವರವು ಹಿಂದಿನಂತೆಯೇ ಬರುತ್ತವೆ ಯಾಸ್ಕರು ಈ ರೀತಿಯಾಗಿ ವ್ಯಾಖ್ಯಾನಮಾಡಿರುತ್ತಾರೆ. **ಅಹ್ರಯಾಣೋಽಹ್ರೀತಯಾನಃ** (ನಿರು ೫-೧೫) ॥ ೧೦ ॥



॥ ಸಂಹಿತಾಪಾಠಃ ॥

ಸನಾಯುವೋ ನಮಸಾ ನವ್ಯೋ ಅರ್ಕೈರ್ವಸೂಯವೋ ಮತಯೋ ದಸ್ಮ ದದ್ರುಃ ।
ಪತಿಂ ನ ಪತ್ನೀರುಶತೀರುಶಂತಂ ಸ್ಪೃಶಂತಿ ತ್ವಾ ಶವಸಾವನ್ಮನೀಷಾಃ ॥ ೧೧ ॥

॥ ಪದಪಾಠಃ ॥

ಸನಾಽಯುವಃ । ನಮಸಾ । ನವ್ಯಃ । ಅರ್ಕೈಃ । ವಸುಽಯುವಃ । ಮತಯಃ । ದಸ್ಮ । ದದ್ರುಃ ।

ಪತಿಂ । ನ । ಪತ್ನೀಃ । ಉಶತೀಃ । ಉಶಂತಂ । ಸ್ಪೃಶಂತಿ । ತ್ವಾ । ಶವಸಾಽವನ್ । ಮನೀಷಾಃ ॥೧೧ ॥

॥ ಸಾಯಣಭಾಷ್ಯಂ ॥

ಹೇ ದಸ್ಮ ದರ್ಶನೀಯೇಂದ್ರ ಅರ್ಕೈಃ ಶಸ್ತ್ರರೂಪೈರ್ಮಂತ್ರೈರ್ನಮಸಾ ನಮಸ್ಕಾರೇಣ ಯಸ್ತ್ವಂ ನವ್ಯಃ ಸ್ತುತ್ಯೋ ಭವಸಿ । ಸನಾಯುವಃ ಸನಾತನಮಗ್ನಿಹೋತ್ರಾದಿ ನಿತ್ಯಂ ಕರ್ಮಾತ್ಮನ ಇಚ್ಛಂತೋ ವಸೂಯವೋ ವಸು ಧನಮಾತ್ಮನ ಇಚ್ಛಂತೋ ಧನಕಾಮಾ ಷಾ ಮತಯೋ ಮೇಧಾವಿನಸ್ತ್ವಾಂ ದದ್ರುಃ । ಬಹುನಾ ಪ್ರಯಾಸೇನ ಜಗ್ಮುಃ । ಹೇ ಶವಸಾವನ್ ಬಲವನ್ನಿಂದ್ರ ತೈಃ ಪ್ರಯುಕ್ತಾ ಮನೀಷಾಃ ಸ್ತುತ-ಯಸ್ತ್ವಾಂ ಸ್ಪೃಶಂತಿ । ಪ್ರಾಪ್ನುವಂತಿ । ತತ್ರ ದೃಷ್ಟಾಂತಃ ಉಶತೀರುಶತ್ಯಃ ಕಾಮಯಮಾನಾಃ ಪತ್ನೀಃ ಪತ್ನ್ಯ ಉಶಂತಂ ಕಾಮಯಮಾನಂ ಪತಿಂ ನ । ಯಥಾ ಪತಿಂ ಸಂಭಜಂತೇ ತದ್ವತ್ ॥ ಸನಾಯುವಃ । ಸನೇತ್ಯೇತದವ್ಯಯಂ ನಿತ್ಯತ್ವಮಾಚಷ್ಟೇ । ತೇನ ಚ ತದ್ವಾನ್ ಲಕ್ಷ್ಯತೇ । ಸನಾ ಸನಾತನಂ ಕರ್ಮಾತ್ಮನ ಇಚ್ಛಂತೀತಿ ಸನಾಯುವಃ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ಜಸಿ ವರ್ಣವ್ಯತ್ಯಯೇನೋತ್ವಂ । ಮತಯಃ । ಮನಜ್ಞಾನೇ । ಮನ್ಯಂತ ಇತಿ ಮತಯಃ ಸ್ತೋತಾರಃ । ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ನ ಕ್ತಿಚಿ ದೀರ್ಘಶ್ಚೇತಿ ನಿಷೇಧೇ ಪ್ರಾಪ್ತೇ ಬಾಹುಲಕಾದನುದಾತ್ತೋಪದೇಶೇತ್ಯಾದಿನಾನು-ನಾಸಿಕಲೋಪಃ । ಚಿತ್ತ್ವಾದಂತೋದಾತ್ತತ್ವಂ । ದದ್ರುಃ । ದ್ರಾ ಕುತ್ಸಾಯಾಂ ಗತೌ । ಲಿಟ್ಯುಸ್ಯಾತೋ ಲೋಪ ಇಟಿ ಚೇತ್ಯಾಕಾರಲೋಪಃ । ಉಶತೀಃ । ವಶ ಕಾಂತೌ । ಲಟಃ ಶತೃ । ಅದಾದಿತ್ವಾಚ್ಛಪೋ ಲುಕ್ । ಶತುರ್ಙಿತ್ತ್ವಾದ್ಗ್ರಹಿಜ್ಯಾದಿನಾ ಸಂಪ್ರಸಾರಣಂ । ಉಗಿತಶ್ಚೇತಿ ಙೀಪ್ । ಶತುರನುಮ ಇತಿ ನದ್ಯಾ ಉದಾತ್ತತ್ವಂ । ವಾ ಛಂದಸೀತಿ ಪೂರ್ವಸವರ್ಣದೀರ್ಘಃ । ಶವಸಾವನ್ । ಮತುಪ್ಯಾಕಾರೋಪಜನ-ಶ್ಛಾಂದಸಃ । ಯದ್ವಾ । ಮತ್ವರ್ಥೀಯ ಅವನಿಪ್ ॥

। ಪ್ರತಿಪದಾರ್ಥ ।

**ದಸ್ಮ**— ಸುಂದರನಾದ ಇಂದ್ರನೇ (ನೀನು । **ಅರ್ಕೈಃ**—(ಶಸ್ತ್ರರೂಪ) ಮಂತ್ರಗಳಿಂದಲೂ । **ನಮಸಾ**—ನಮಸ್ಕಾರದಿಂದಲೂ । **ನವ್ಯಃ**—ಸ್ತುತ್ಯನು । **ಸನಾಯುವಃ**—ಸನಾತನವಾದ (ಅಗ್ನಿಹೋತ್ರಾದಿ) ಕರ್ಮಗಳನ್ನು ಇಚ್ಛಿಸುವ । **ವಸೂಯವಃ** ಧನಕಾಮರಾದ । **ಮತಯಃ**—ಮೇಧಾವಿಗಳು । **ದದ್ರುಃ**- ಬಹಳ ಪ್ರಯಾಸದಿಂದ (ನಿನ್ನನ್ನು) ಪ್ರಾಪ್ತರಾದರು । **ಶವಸಾವನ್**—ಬಲಿಷ್ಠನಾದ ಇಂದ್ರನೇ । **ಮನೀಷಾಃ**—

ಸ್ತೋತ್ರಗಳು । **ತ್ವಾ**—ನಿನ್ನನ್ನು । **ಉಶತೀಃ**—ಪ್ರೀತಿಪಾತ್ರರಾದ । **ಪತ್ನೀಃ**—ಪತ್ನಿಯರು । **ಉಶಂತಂ**—ಪ್ರೇಮಿಯಾದ । **ಪತಿಂ ನ**—ಪತಿಯನ್ನು ಹೇಗೋ ಹಾಗೆ । **ಸ್ಪೃಶಂತಿ**—ಹೊಂದುತ್ತವೆ.

॥ ಭಾವಾರ್ಥ ॥

ಸುಂದರಾಕೃತಿಯುಳ್ಳ ಇಂದ್ರನೇ, ನೀನು ಸ್ತುತಿವಾಕ್ಯಗಳಿಂದಲೂ ನಮಸ್ಕಾರಗಳಿಂದಲೂ ಪ್ರಾಪ್ಯನು ಅಗ್ನಿಹೋತ್ರಾದಿಕರ್ಮಗಳನ್ನು ಮಾಡಲು ಇಚ್ಛಿಸುವ ಮತ್ತು ಧನಾದಿಗಳನ್ನು ಅಪೇಕ್ಷಿಸುವ ಮೇಧಾವಿಗಳು ಬಹಳ ಪ್ರಯಾಸದಿಂದ ನಿನ್ನನ್ನು ಒಲಿಸಿಕೊಳ್ಳುತ್ತಾರೆ ಅವರ ಸ್ತುತಿವಾಕ್ಯಗಳು, ಪತಿಪ್ರೀತಿಪಾತ್ರಳಾದ ಪತ್ನಿಯು ಪ್ರೇಮಿಯಾದ ಪತಿಯನ್ನು ಹೇಗೆ ಹೊಂದುತ್ತಾಳೋ ಹಾಗೆ ನಿನ್ನನ್ನು ಸೇರುತ್ತವೆ

## English Translation.

O beautiful Indra, you are to be praised with holy hymns; the pious who are desirous of holy rites, those who are anxious for riches and those who are wise approach you with veneration; O powerful Indra, their minds adhere to you as affectionate wives to a loving husband.

॥ ವಿಶೇಷವಿಷಯಗಳು ॥

**ಸನಾಯುವಃ**—**ಸನೇತ್ಯೇದದವ್ಯಯಂ ನಿತ್ಯತ್ವಮಾಚಷ್ಟೇ । ಸನಾ ಸನಾತನಂ ಕರ್ಮಾತ್ಮನ ಇಚ್ಛಂತೀತಿ ಸನಾಯುವಃ ।** ಸನಾ ಎಂಬ ಶಬ್ದವು ಅವ್ಯಯವು ಇದು ನಿತ್ಯವೆಂಬ ಅರ್ಥವನ್ನು ಸೂಚಿಸುವುದು. ಆದುದರಿಂದ ಸನಾ ಎಂದರೆ ನಿತ್ಯವಾದ ಸನಾತನಕರ್ಮಗಳನ್ನು ಅಥವಾ ಯಜ್ಞಾದಿಕರ್ಮಗಳನ್ನು ಯುವಃ- ಮಾಡಲಪೇಕ್ಷಿಸುವ ಜನರು ಎಂದರ್ಥವು

**ನವ್ಯಃ**—**ಸ್ತುತ್ಯಃ** । ಸ್ತುತ್ಯನು, ಸ್ತುತಿಸಲ್ಪಡಲು ಅರ್ಹನು

**ಅರ್ಕೈಃ**—ಶಸ್ತ್ರರೂಪವಾದ ವೇದಮಂತ್ರಗಳಿಂದ

**ವಸೂಯವಃ**—ಧನವನ್ನು ಇಚ್ಛಿಸುವವರು

**ಮತಯಃ**—**ಮೇಧಾವಿನಃ** । ಬುದ್ಧಿವಂತರಾದ ಜನರು, ವಿವೇಕಿಗಳು.

**ದದ್ರುಃ**—**ದ್ರಾ ಕುತ್ಸಾಯಾಂ ಗತೌ** । ಹೊಂದಿದರು ಅಥವಾ ನಿನ್ನ ಸಮೀಪಕ್ಕೆ ಬಂದರು ಅಥವಾ ಬರುವರು.

**ಶವಸಾವನ್**—ಶವಃ ಎಂದರೆ ಬಲವು. (ನಿ ೯-೧) ಶವಸಾವನ್ ಬಲವುಳ್ಳವನು ಇದು ಸಂಬುದ್ಧಿ ಪ್ರಥಮೈಕವಚನವು.

**ಉಶತೀಃ ಉಶಂತಂ ವಶ ಕಾಂತೌ । ಉಶತ್ಯಃ ಕಾಮಯಮಾನಾಃ ಪತ್ನ್ಯಃ । ಉಶಂತಂ ಕಾಮಯಮಾನಂ ಪತಿಮಿವ ।** ಪತಿಯನ್ನು ಪ್ರೀತಿಸುವ ಪತ್ನಿಯು ತನ್ನನ್ನು ಪ್ರೀತಿಸುವ ಪತಿಯ ಸಮೀಪಕ್ಕೆ ಹೋಗುವಂತೆ ಇಲ್ಲಿ ಉಶತೀಃ ಎಂಬ ಶಬ್ದವು ಪತ್ನೀಃ ಎಂಬ ಶಬ್ದಕ್ಕೂ ಉಶಂತಂ ಎಂಬ ಶಬ್ದವು ಪತಿಂ ಎಂಬ ಶಬ್ದಕ್ಕೂ ವಿಶೇಷಣಗಳು

**ಸ್ಪೃಶಂತಿ ಪ್ರಾಪ್ನುವಂತಿ । ಸ್ಪೃಶ ಸ್ಪರ್ಶನೇ ।** ಹೋಗುವರು, ಹೊಂದುವರು

**ಮನೀಷಾಃ ಸ್ತುತಯಃ । ಮನೀಷಯಾ ಮನಸ ಈಷಯಾ ಸ್ತುತ್ಯಾ ಪ್ರಜ್ಞಯಾ ವಾ** (ನಿ ೨-೨೫) ಎಂದು ನಿರುಕ್ತವಚನವಿರುವುದರಿಂದ ಮನೀಷಾಃ ಎಂದರೆ ಸ್ತುತಿಗಳು, ಸ್ತೋತ್ರಗಳು ಎಂದರ್ಥವು

॥ ವ್ಯಾಕರಣಪ್ರಕ್ರಿಯಾ ॥

**ಸನಾಯುವಃ** -ಸನಾ ಎಂಬುದು ಒಂದು ಅವ್ಯಯ. ಇದು ನಿತ್ಯತ್ವರೂಪಾರ್ಥವನ್ನು ಬೋಧಿಸುತ್ತದೆ ಇದರಿಂದ ಲಕ್ಷಣಾವೃತ್ತಿಯಿಂದ ನಿತ್ಯತ್ವವುಳ್ಳದ್ದು ಎಂದು ಬೋಧಿತವಾಗುತ್ತದೆ ಸನಾ ಸನಾತನಂ ಕರ್ಮ ಆತ್ಮನಃ ಇಚ್ಛತಿ ಎಂಬರ್ಥದಲ್ಲಿ **ಸುಪ ಆತ್ಮನಃ ಕ್ಯಚ್** ಎಂಬುದರಿಂದ ಕ್ಯಚ್ ಬರುತ್ತದೆ ಸನಾಯ ಎಂಬುದು **ಸನಾದ್ಯಂತಾಧಾತವಃ** ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ ಇದರಮೇಲೆ **ಕ್ಯಾಚ್ಛಂದಸಿ** (ಪಾ. ಸೂ ೩-೨ ೧೭೦) ಎಂಬುದರಿಂದ ಉಪ್ರತ್ಯಯ **ಅತೋಲೋಪಃ** ಸೂತ್ರದಿಂದ ಕ್ಯಚ್ಚಿನ ಅಕಾರಕ್ಕೆ ಲೋಪ ಸನಾಯು ಶಬ್ದವಾಗುತ್ತದೆ ಜಸ್ಸಿನಲ್ಲಿ **ಜಸಿಚ** ಎಂಬುದರಿಂದ ಉಕಾರಕ್ಕೆ ಗುಣಾವಾದೇಶಗಳು ಬಂದರೆ ಸಕಾರಕ್ಕೆ ರುತ್ವ ವಿಸರ್ಗಗಳಿಂದ ಸನಾಯುವಃ ಎಂದು ರೂಪವಾಗುತ್ತದೆ ಅವಾದೇಶದ ಅಕಾರಕ್ಕೆ ಉಕಾರವು ಛಾಂದಸವಾಗಿ ಬರುತ್ತದೆ. ಉ ಪ್ರತ್ಯಯಸ್ವರ ಬರುತ್ತದೆ

**ವಸೂಯವಃ** -ಹಿಂದಿನಂತೆ ಪ್ರಕ್ರಿಯಾ ವಸು ಆತ್ಮನಃ ಇಚ್ಛಂತಿ ವಸೂಯಂತಿ **ಕ್ಯಚಿ ಚ** ಎಂಬುದರಿಂದ ಪೂರ್ವಕ್ಕೆ ದೀರ್ಘ ವಸೂಯಂತಿ ಇತಿ ವಸೂಯವಃ ಉ ಪ್ರತ್ಯಯ ಗುಣ, ಅವಾದೇಶ ಹಿಂದಿನಂತೆ ಸ್ವರ

**ಮತಯಃ** ಮನ ಜ್ಞಾನೇ ಧಾತು ಮನ್ಯಂತೇ ಇತಿ ಮತಯಃ ಸ್ತೋತಾರಃ ಈ ಧಾತುವಿಗೆ **ಕ್ತಿಚ್‌ಕ್ತೌ ಚ ಸಂಜ್ಞಾಯಾಂ** (ಪಾ. ಸೂ ೩-೩-೧೭೪) ಎಂಬುದರಿಂದ ಸಂಜ್ಞಾತೋರುವಾಗ ಕ್ತಿಚ್ ಪ್ರತ್ಯಯಃ **ನಕ್ತಿಚಿ ದೀರ್ಘಶ್ಚ** (ಪಾ ಸೂ ೬-೪-೩೯) ಎಂಬುದರಿಂದ ನಿಷೇಧವು ಪ್ರಾಪ್ತವಾದರೂ ಬಹುಲಗ್ರಹಣದಿಂದ **ಅನುದಾತ್ತೋಪದೇಶವನತಿ**-ಸೂತ್ರದಿಂದ ಮನು ಧಾತುವಿನ ನಕಾರಕ್ಕೆ ಲೋಪ ಬರುತ್ತದೆ ಕ್ತಿಚ್ ಚಿತ್ತಾದುದರಿಂದ **ಚಿತಃ** ಸೂತ್ರದಿಂದ ಅಂತೋದಾತ್ತಸ್ವರ ಬರುತ್ತದೆ ಮತಿ ಶಬ್ದಕ್ಕೆ ಜಸ್ ಪರದಲ್ಲಿರುವಾಗ **ಜಸಿಚ** ಸೂತ್ರದಿಂದ ಗುಣಾಯಾದೇಶಗಳು ಬಂದಾಗ ಮತಯಃ ಎಂದು ರೂಪವಾಗುತ್ತದೆ

**ದದ್ರುಃ**—ದ್ರಾ ಕುತ್ಸಾಯಾಂ ಗತೌ ಧಾತು. ಲಿಟ್ ಪ್ರಥಮಪುರುಷ ಬಹುವಚನದ ಝಿಗೆ **ಪರಸ್ಮೈಪದಾನಾಂ**—ಸೂತ್ರದಿಂದ ಉಸಾದೇಶ ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ ದದ್ರಾ-ಉಸ್ ಎಂದಿರುವಾಗ **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಲೋಪ. ಪ್ರತ್ಯಯ

ಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ದದ್ರುಃ ಎಂದು ರೂಪವಾಗುತ್ತದೆ ಅತಿಜಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

**ಉಶತೀಃ** – ವಶ ಕಾಂತೌ ಧಾತು ಕಾಂತಿಯೆಂದರೆ ಇಚ್ಛಾ ಲಡರ್ಥದಲ್ಲಿ **ಲಟಃ ಶತೃಶಾನಚಾ**–ಸೂತ್ರದಿಂದ ಶತೃಪ್ರತ್ಯಯ. ಅದಾದಿಯಾದುದರಿಂದ **ಅದಿಪ್ರಭೃತಿಭ್ಯಃ ಶಪಃ** ಸೂತ್ರದಿಂದ ಶಪಿಗೆ ಲುಕ್ **ಸಾರ್ವಧಾತುಕಮಪಿತ್** ಎಂಬುದರಿಂದ ಶತೃ ಙಿತ್ತಾದುದರಿಂದ **ಗ್ರಹಿಜ್ಯಾವಯಿ**—(ಪಾ ಸೂ ೬-೧-೧೬) ಸೂತ್ರದಿಂದ ಸಂಪ್ರಸಾರಣ ಬರುತ್ತದೆ **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ ಉಶತ್ ಶಬ್ದವಾಗುತ್ತವ ಸ್ತ್ರೀತ್ವದಲ್ಲಿ ಶತೃ ಉಗಿತ್ತಾದುದರಿಂದ **ಉಗಿತಶ್ಚ** ಎಂಬುದರಿಂದ ಙೀಪ್ ಬರುತ್ತದೆ ಉಶತೀ ಶಬ್ದಕ್ಕೆ ಶಸ್ ಪರದಲ್ಲಿರುವಾಗ **ವಾಛಂದಸಿ** ಸೂತ್ರದಿಂದ ಪೂರ್ವಸವರ್ಣದೀರ್ಘ ಬಂದರೆ ಉಶತೀಃ ಎಂದು ರೂಪವಾಗುತ್ತದೆ **ಶತರನುಮೋನದ್ಯಜಾದೀ**–(ಪಾ. ಸೂ ೬-೧-೧೭೩) ಎಂಬುದರಿಂದ ನುವಾಗವು ಇಲ್ಲಿ ಬಾರದಿರುವುದರಿಂದ ನದಿಗೆ (ಈಗೆ) ಉದಾತ್ತಸ್ವರ ಬರುತ್ತದೆ

**ಸ್ಪೃಶಂತಿ**—ಸ್ಪೃಶ ಸಂಸ್ಪರ್ಶನೇ ಧಾತು ತುದಾದಿ ಲಟ್ ಪ್ರಥಮಪುರುಷ ಬಹುವಚನದಲ್ಲಿ ಉಕ್ತರೂಪವಾಗುತ್ತದೆ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ವಿಕರಣಸ್ವರ ಬರುತ್ತದೆ

**ಶವಸಾವನ್**—ಶವಃ ಬಲಂ ಅಸ್ಯಾಸ್ತೀತಿ ಎಂಬರ್ಥದಲ್ಲಿ ಮತುಪ್ ಪ್ರತ್ಯಯ ಸಕಾರೋತ್ತರಾಕಾರವು ಛಾಂದಸವಾಗಿ ಬರುತ್ತದೆ. ಅಕಾರದ ಪರದಲ್ಲಿರುವುದರಿಂದ **ಮಾದುಪಧಾಯಾ**—ಸೂತ್ರದಿಂದ ಮತುಪ್ಪಿನ ಮಕಾರಕ್ಕೆ ವಕಾರಾದೇಶ ಸಂಬುದ್ಧಿಯಲ್ಲಿ ಶವಸಾವನ್ ಎಂದು ರೂಪವಾಗುತ್ತದೆ. ಅಥವಾ ಶವಸ್ ಶಬ್ದದ ಮೇಲೆ ಮತ್ವರ್ಥದಲ್ಲಿ ಅವನಿಪ್ ಪ್ರತ್ಯಯ ಹಿಂದಿನಂತೆಯೇ ರೂಪವಾಗುತ್ತದೆ **ಆಮಂತ್ರಿತಸ್ಯಚ** ಎಂಬುದರಿಂದ ನಿಘಾತಸ್ವರ ಬರುತ್ತದೆ ॥ ೧೧ ॥



॥ ಸಂಹಿತಾಪಾಠಃ ॥

ಸನಾದೇವ ತವ ರಾಯೋ ಗಭಸ್ತೌ ನ ಕ್ಷೀಯಂತೇ ನೋಪ ದಸ್ಯಂತಿ ದಸ್ಮ ।
ದ್ಯುಮಾಁ ಅಸಿ ಕ್ರತುಮಾಁ ಇಂದ್ರ ಧೀರಃ ಶಿಕ್ಷಾ ಶಚೀವಸ್ತವ ನಃ ಶಚೀಭಿಃ ॥ ೧೨ ॥

॥ ಪದಪಾಠಃ ॥

ಸನಾತ್ । ಏವ । ತವ । ರಾಯಃ । ಗಭಸ್ತೌ । ನ । ಕ್ಷೀಯಂತೇ । ನ । ಉಪ । ದಸ್ಯಂತಿ । ದಸ್ಮ ।

ದ್ಯುಽಮಾನ್ । ಅಸಿ । ಕ್ರತುಽಮಾನ್ । ಇಂದ್ರ । ಧೀರಃ । ಶಿಕ್ಷ । ಶಚೀಽವಃ । ತವ । ನಃ । ಶಚೀಭಿಃ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ದಸ್ಮ ದರ್ಶನೀಯೇಂದ್ರ । ಗಭಸ್ತಿರಿತಿ ಬಾಹುನಾಮ । ತವ ಗಭಸ್ತೌ ಹಸ್ತೇ ಸನಾದೇವ ಚಿರಕಾಲಾದಾರಭ್ಯ ಸ್ಥಿತಾನಿ ರಾಯೋ ಧನಾನಿ ನ ಕ್ಷೀಯಂತೇ । ನ ವಿನಶ್ಯಂತಿ । ನೋಪ ದಸ್ಯಂತಿ ಚ । ಸ್ತೋತೃಭ್ಯೋ ದತ್ತೇಽಪಿ ತ್ವದ್ಧಸ್ತಗತಂ ಧನಮುಪಕ್ಷಯಂ ನ ಪ್ರಾಪ್ನೋತಿ । ಅಪಿ ತು ವರ್ಧತೇ । ಹೇ ಇಂದ್ರ ಧೀರೋ ಬುದ್ಧಿಮಾನ್ ಧೃಷ್ಟೋ ವಾ ತ್ವಂ ದ್ಯುಮಾನ್ ದೀಪ್ತಿಮಾನಸಿ । ತಥಾ ಕ್ರತುಮಾನ್ ಲೋಕರಕ್ಷಣಹೇತುಭೂತಕರ್ಮಯುಕ್ತೋಽಸಿ । ಹೇ ಶಚೀವಃ ಕರ್ಮವನ್ನಿಂದ್ರ ತವ ಶಚೀಭಿಸ್ತ್ವದೀಯೈಃ ಕರ್ಮಭಿರ್ನೋಽಸ್ಮಭ್ಯಂ ಧನಂ ಶಿಕ್ಷ । ದೇಹಿ । ಶಿಕ್ಷತಿರ್ದಾನಕರ್ಮಾ ॥ ಕ್ಷೀಯಂತೇ । ಕ್ಷೀಞ್ ಹಿಂಸಾಯಾಂ । ಅಸ್ಮಾತ್ಕರ್ಮಕರ್ತರಿ ಕರ್ಮವದ್ಭಾವಾದ್ಯಗಾತ್ಮನೇಪದೇ । ವತ್ಕರಣಂ ಸ್ವಾಶ್ರಯಮಪಿ ಯಥಾ ಸ್ಯಾದಿತಿ ಕರ್ತೃವದ್ಭಾವಾದಚಃ ಕರ್ತ್ರಯಕಿ । ಪಾ. ೬-೧-೧೯೫ । ಇತ್ಯಾದ್ಯುದಾತ್ತತ್ವಂ । ಚಾದಿಲೋಪೇ ವಿಭಾಷೇತಿ ನಿಘಾತಪ್ರತಿಷೇಧಃ । ಶಚೀವಃ । ಶಚ್ಯಸ್ಯಾಸ್ತೀತಿ ಶಚೀವಾನ್ । ಛಂದಸೀರಃ ಇತಿ ಮತುಪೋ ವತ್ವಂ । ಸಂಬುದ್ಧೌ ಮತುವಸೋ ರುರಿತಿ ನಕಾರಸ್ಯ ರುತ್ವಂ ॥

॥ ಪ್ರತಿಪದಾರ್ಥ ॥

**ದಸ್ಮ** – ದರ್ಶನೀಯನಾದ ಇಂದ್ರನೇ । **ತವ**—ನಿನ್ನ । **ಗಭಸ್ತೌ**—ಕೈಯಲ್ಲಿ । **ಸನಾದೇವ**—ಅನಾದಿಕಾಲದಿಂದಲೂ (ಇರುವ) । **ರಾಯಃ**—ದ್ರವ್ಯವು । **ನ ಕ್ಷೀಯಂತೇ**—ನಾಶವಾಗುವುದಿಲ್ಲ । **ನ ಉಪ ದಸ್ಯಂತಿ**—ಸ್ತೋತೃಗಳಿಗೆ ಕೊಟ್ಟಾಗ್ಯೂ ಕಡಿಮೆಯಾಗುವುದಿಲ್ಲ । **ಹೇ ಇಂದ್ರ**—ಎಲೈ ಇಂದ್ರನೇ । **ಧೀರಃ**—ಬುದ್ಧಿಯುಕ್ತನಾದ ಅಥವಾ ಧೀರನಾದ (ನೀನು) । **ದ್ಯುಮಾನ್**— ಪ್ರಕಾಶಯುಕ್ತನೂ । **ಕ್ರತುಮಾನ್**—(ಲೋಕರಕ್ಷಕವಾದ) ಕರ್ಮಗಳುಳ್ಳವನೂ (ಆಗಿದ್ದೀಯೆ) । **ಶಚೀವಃ**--ಕರ್ಮಿಷ್ಠನಾದ ಇಂದ್ರನೇ । **ತವ**—ನಿನ್ನ । **ಶಚೀಭಿಃ**—ಕರ್ಮಗಳಿಂದ । **ನಃ**—ನಮಗೆ । **ಶಿಕ್ಷ**—(ಧನವನ್ನು) ಕೊಡು ॥

॥ ಭಾವಾರ್ಥ ॥

ಇಂದ್ರನೇ ನೀನು ಧೀರನೂ, ತೇಜಸ್ವಿಯೂ, ಲೋಕರಕ್ಷಣಾರ್ಥವಾಗಿಯೇ ಕರ್ಮಗಳನ್ನು ಮಾಡತಕ್ಕವನು. ನಿನ್ನ ಹಸ್ತದಲ್ಲಿ ಅನಾದಿಕಾಲದಿಂದಲೂ ಇರುವ ದ್ರವ್ಯವು ನಾಶವಾಗುವುದಿಲ್ಲ ಅಥವಾ ನಿನ್ನನ್ನು ಸ್ತುತಿಸುವವರಿಗೆ ದಾನಮಾಡಿದರೂ ಕಡಿಮೆಯಾಗುವುದಿಲ್ಲ ಆದುದರಿಂದ ನೀನು ನಮಗೆ ಧನವನ್ನು ಕೊಡು

English Translation

O beautiful Indra, the riches that have long been held in your hands do not diminish, nor do they perish; Indra, you are illustrious, wise, diligent of action; doer of good deeds, enrich us by your acts

॥ ವಿಶೇಷವಿಷಯಗಳು ॥

**ಸನಾತ್ ಏವ**—ಬಹಳ ಹಿಂದಿನಕಾಲದಿಂದಲೂ, ಎಂದರೆ ಯಾವಾಗಲೂ

**ರಾಯಃ**—ರಯಿಃ ರಾಯಃ (ನಿ ೩-೯) ಧನಗಳು

**ಗಭಸ್ತೌ**- ಆಯತೀ ಚ್ಯವಾನಾ ಮೊದಲಾದ ಹನ್ನೆರಡು ಬಾಹುನಾಮಗಳ ಮಧ್ಯದಲ್ಲಿ ಗಭಸ್ತಿಶಬ್ದವು ಪಠಿತವಾಗಿರುವುದರಿಂದ ಗಭಸ್ತೌ ಎಂದರೆ ಬಾಹುವಿನಲ್ಲಿ. ಹಸ್ತದಲ್ಲಿ, ಕೈಯಲ್ಲಿ

**ನ ಕ್ಷೀಯಂತೇ ನೋಪ ದಸ್ಯಂತಿ**--ನಾಶವಾಗುವುದೂ ಇಲ್ಲ ಕಮ್ಮಿಯಾಗುವುದೂ ಇಲ್ಲ ಮತ್ತು ಅಭಿವೃದ್ಧಿಯಾಗುವುದು ಎಂದಭಿಪ್ರಾಯವು.

**ದ್ಯುಮಾನ್—ದೀಪ್ತಿಮಾನ್ ।** ಪ್ರಕಾಶವುಳ್ಳವನು ಎಂದರೆ ಮಹಿಮಾನ್ವಿತನು, ಪ್ರಸಿದ್ಧನು.

**ಕ್ರತುಮಾನ್**—ಕ್ರತುವೆಂದರೆ ಕರ್ಮ (ನಿ ೨ ೧) ಅನೇಕ ಸಾಹಸ ಕರ್ಮಗಳುಳ್ಳವನು, ಸ್ತೋತ್ರಮಾಡುವವರಿಗೆ ಫಲರೂಪವಾದ ಕರ್ಮಗಳನ್ನು ಕೊಡುವವನು

**ಶಚೀವಃ, ಶಚೀಭಿಃ**--ಶಚೀ ಎಂದರೆ ಕರ್ಮ (ನಿ ೨-೧) ಶಚೀವಃ ಎಂದರೆ **ಶಚ್ಯಸ್ಯಾಸ್ತೀತಿ ಶಚೀವಾನ್ ।** ಕರ್ಮಗಳುಳ್ಳವನು ಎಂದರೆ ಶತ್ರುವಧಾದಿಕರ್ಮಗಳನ್ನು ಮಾಡುವವನು, ಶಚೀಭಿಃ ಎಂದರೆ ಕರ್ಮಗಳಿಂದ, ಸಾಹಸಕೃತ್ಯಗಳಿಂದ

॥ ವ್ಯಾಕರಣಪ್ರಕ್ರಿಯಾ ॥

**ರಾಯಃ**—ರೈ ಶಬ್ದ ಜಸ್ ಪರದಲ್ಲಿರುವಾಗ ಆಯಾದೇಶ ಸಕಾರಕ್ಕೆ ರುತ್ವವಿಸರ್ಗ ರಾಯಃ ಎಂಬ ರೂಪವಾಗುತ್ತದೆ

**ಕ್ಷೀಯಂತೇ**—ಕ್ಷೀಙ್ ಹಿಂಸಾಯಾಂ ಧಾತು ಇದಕ್ಕೆ ಕರ್ಮಕರ್ತರಿಯಲ್ಲಿ ಲಟ್ (ಕರ್ಮಕ್ಕೆ ಸ್ವವ್ಯಾಪಾರದಲ್ಲಿ ಪ್ರಾಧಾನ್ಯವಿವಕ್ಷಾಮಾಡಿದಾಗ ಕರ್ತೃತ್ವವಿರುವುದರಿಂದ ಕರ್ಮವೇ ಕರ್ತೃವಾಗುತ್ತದೆ. ಕರ್ಮ

ಕರ್ತರಿಯಲ್ಲಿ ಕರ್ಮವದ್ಭಾವ ಹೇಳಿರುವುದರಿಂದ ಆತ್ಮನೇಪದಪ್ರತ್ಯಯ ಬರುತ್ತದೆ **ಸಾರ್ವಧಾತುಕೇ ಯಕ್** ಎಂಬುದರಿಂದ ಯಕ್ **ಝೋಂತಃ** ಸೂತ್ರದಿಂದ ಪ್ರತ್ಯಯಕ್ಕೆ ಅಂತಾದೇಶ ಕ್ಷೀಯಂತೇ ಎಂದು ರೂಪವಾಗುತ್ತದೆ **ಕರ್ಮವತ್ ಕರ್ಮಣಾ** ಸೂತ್ರದಲ್ಲಿ **ವತ್ಕರಣಂ ಸ್ವಾಶ್ರಯಮಪಿ ಯಥಾಸ್ಯಾತ್** (ಕಾ ೩-೧-೮೭) ಎಂಬುದರಿಂದ ಕರ್ತೃವದ್ಭಾವವೂ ಇರುವುದರಿಂದ **ಅಚಃ ಕರ್ತೃಯಕಿ** (ಪಾ ಸೂ ೬-೧-೧೯೫) ಎಂಬ ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ **ಚಾದಿಲೋಪೇ ವಿಭಾಷಾ** (ಪಾ ಸೂ ೮-೧-೬೩) ಎಂಬುದರಿಂದ ಹಿಂದೆ ಚಾದಿಯಲ್ಲಿರುವ ನಶಬ್ದದ ಯೋಗವಿರುವುದರಿಂದ ನಿಘಾತಪ್ರತಿಷೇಧ ಬರುತ್ತದೆ

**ದಸ್ಯಂತಿ**—ದಸು ಉಪಕ್ಷಯೇ ಧಾತು ದಿವಾದಿ **ಝೋಂತಃ** ಸೂತ್ರದಿಂದ ಲಿಟ್ಟಿನ ಝಿಗೆ ಅಂತಾದೇಶ **ದಿವಾದಿಭ್ಯಃ ಶ್ಯನ್** ಸೂತ್ರದಿಂದ ಶ್ಯನ್ ವಿಕರಣ **ಅತೋಗುಣೇ** ಸೂತ್ರದಿಂದ ಪರರೂಪ ದಸ್ಯಂತಿ ಎಂದು ರೂಪವಾಗುತ್ತದೆ ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದ

**ಶಿಕ್ಷ**—ಶಿಕ್ಷ ವಿದ್ಯೋಪಾದಾನೇ ಧಾತು ಇಲ್ಲಿ ದಾನಕ್ರಿಯಾದಲ್ಲಿ ಸ್ವೀಕೃತವಾಗಿದೆ ಲೋಣ್ಮಧ್ಯಮಪುರುಷ ಏಕವಚನದಲ್ಲಿ ಶಿಕ್ಷ ಎಂದು ರೂಪವಾಗುತ್ತದೆ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ **ದ್ವ್ಯಚೋಽತಸ್ತಿಙಃ** ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದ

**ಶಚೀವಃ**—ಶಚೀ ಅಸ್ಯಾಸ್ತೀತಿ ಶಚೀವಾನ್ **ತದಸ್ಯಾಸ್ತಿ**—ಸೂತ್ರದಿಂದ ಮತುಪ್ **ಛಂದಸೀರಃ** ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ ಶಚೀವತ್ ಶಬ್ದವಾಗುತ್ತದೆ ಸಂಬುದ್ಧಿಯಲ್ಲಿ **ಮತುವಸೋರುಃ ಸಂಬುದ್ಧೌ** ಎಂಬುದರಿಂದ ನಕಾರಕ್ಕೆ ರುತ್ವ ಬರುತ್ತದೆ ಶಚೀವರ್ ಎಂದಿರುವಾಗ **ಖರವಸಾನ**—**ಸೂತ್ರದಿಂದ** ವಿಸರ್ಗ **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ದ್ಯುಮಾँ ಅಸಿ**—ದ್ಯುಮಾನ್+ಅಸಿ ಎಂದಿರುವಾಗ **ದೀರ್ಘಾದಟಿ ಸಮಾನಪಾದೇ** (ಪಾ ಸೂ ೮-೩-೯) ಎಂಬುದರಿಂದ ಹಿಂದೆ ನಕಾರಕ್ಕೆ ರುತ್ವ ಬರುತ್ತದ **ಆತೋಽಟಿ ನಿತ್ಯಂ** ಎಂಬುದರಿಂದ ಹಿಂದೆ ಇರುವ ಆಕಾರಕ್ಕೆ ನಿತ್ಯವಾಗಿ ಅನುನಾಸಿಕತ್ವವು ಬರುತ್ತದೆ ॥ ೧೨ ॥

॥ ಸಂಹಿತಾಪಾಠಃ

ಸನಾಯತೇ ಗೋತಮ ಇಂದ್ರ ನವ್ಯಮತಕ್ಷದ್ಬ್ರಹ್ಮ ಹರಿಯೋಜನಾಯ ।

ಸುನೀಥಾಯ ನಃ ಶವಸಾನ ನೋಧಾಃ ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್ ॥ ೧೩ ॥

॥ ಪದಪಾಠಃ ॥

**ಸನಾಽಯತೇ । ಗೋತಮಃ । ಇಂದ್ರ । ನವ್ಯಂ । ಅತಕ್ಷತ್ । ಬ್ರಹ್ಮ । ಹರಿಽ-**
**ಯೋಜನಾಯ ।**

**ಸುಽನೀಥಾಯ । ನಃ । ಶವಸಾನ । ನೋಧಾಃ । ಪ್ರಾತಃ । ಮಕ್ಷು । ಧಿಯಾಽ-**
**ವಸುಃ । ಜಗಮ್ಯಾತ್ ॥ ೧೩ ॥**

॥ ಸಾಯಣಭಾಷ್ಯಂ ॥

ಸ ಇಂದ್ರಃ ಸನಾಯತೇ । ನಿತ್ಯ ಇವಾಚರತಿ । ಸರ್ವೇಷಾಮಾದ್ಯೋ ಭವತಿ । ಹೇ ಶವಸಾನ ಬಲವನ್ನಿಂದ್ರ ಹರಿಯೋಜನಾಯ । ಹರೀ ಅಶ್ವೌ ರಥೇ ಯೋಜಯತೀತಿ ಹರಿಯೋಜನಃ । ಸುನೀಥಾಯ ಸುಷ್ಠು ನೇತ್ರೇ । ಏವಂಭೂತಾಯ ತಸ್ಮೈ ತುಭ್ಯಂ ಗೋತಮತೋ ಗೋತಮಸ್ಯ ಋಷೇಃ ಪುತ್ರೋ ನೋಧಾ ಋಷಿರ್ನವ್ಯಂ ನೂತನಂ ಬ್ರಹ್ಮೈತತ್ಸೂಕ್ತರೂಪಂ ಸ್ತೋತ್ರಂ ನೋಽಸ್ಮದರ್ಥಮತಕ್ಷತ್ । ಅಕರೋತ್ । ಅತೋಽಸ್ಮಾಭಿರನೇನ ಸ್ತೋತ್ರೇಣ ಸ್ತುತಃ ಸನ್ಧಿಯಾ ಬುದ್ಧ್ಯಾ ಕರ್ಮಣಾ ವಾ ಪ್ರಾಪ್ತವಸುರಿಂದ್ರಃ ಪ್ರಾತಃಕಾಲೇ ಮಕ್ಷು ಶೀಘ್ರಂ ಜಗಮ್ಯಾತ್ । ಆಗಚ್ಛತು ॥ ಸನಾಯತೇ । ಸನೇತಿ ನಿಪಾತೋ ನಿತ್ಯಶಬ್ದಸಮಾನಾರ್ಥಃ । ತಸ್ಮಾದಾಚಾರಾರ್ಥೇ ಕ್ಯಙ್ಪ್ರತ್ಯಯಃ । ಸುನೀಥಾಯ । ಣೀಞ್ ಪ್ರಾಪಣ ಇತ್ಯಸ್ಮಾದೌಣಾದಿಕಸ್ಥಕ್ಪ್ರತ್ಯಯಃ । ಥಾಥಾದಿಸ್ವರಃ ॥

॥ ಪ್ರತಿಪದಾರ್ಥ ॥

**ಶವಸಾನ**- ಬಲಿಷ್ಠನಾದ । **ಇಂದ್ರ**--- ಇಂದ್ರನೇ । **ಸನಾಯತೇ** -- ನಿತ್ಯನಂತೆ ಆಚರಿಸುವ (ಸರ್ವರಿಗೂ ಆದ್ಯನಾದ) । **ಹರಿಯೋಜನಾಯ** --ಅಶ್ವಗಳನ್ನು ರಥಕ್ಕೆ ಹೂಡುವ । **ಸುನೀಥಾಯ**—ಒಳ್ಳೆಯ ನೇತೃವಾದ ನಿನಗೆ । **ಗೋತಮಃ**—ಗೋತಮ ಋಷಿಯ ಪುತ್ರನಾದ । **ನೋಧಾಃ**—ನೋಧಸ್ ಎಂಬ ಋಷಿಯು । **ನವ್ಯಂ**—ನೂತನವಾದ । **ಬ್ರಹ್ಮ**- ಈ ಸೂಕ್ತರೂಪವಾದ ಸ್ತುತಿಯನ್ನು । **ನಃ**—ನಮಗೋಸ್ಕರ । **ಅತಕ್ಷತ್**---ಮಾಡಿದನು.(ಆದುದರಿಂದ ನಮ್ಮಿಂದ ಸ್ತುತನಾದ ಇಂದ್ರನು) । **ಧಿಯಾವಸುಃ**—ಸ್ವಬುದ್ಧಿಯಿಂದ ಅಥವಾ ಕರ್ಮಗಳಿಂದ ಸಂಪಾದಿಸಿದ ಧನವುಳ್ಳವನಾಗಿ । **ಪ್ರಾತಃ** --- ಪ್ರಾತಃಕಾಲದಲ್ಲಿ । **ಮಕ್ಷು**- - ಶೀಘ್ರವಾಗಿ । **ಜಗಮ್ಯಾತ್**--- ಬರಲಿ ॥

॥ ಭಾವಾರ್ಥ ॥

ಬಲಿಷ್ಠನಾದ ಇಂದ್ರನೇ, ಸರ್ವರಿಗೂ ಆದ್ಯನಾದ, ರಥಕ್ಕೆ ಅಶ್ವಗಳನ್ನು ಹೂಡುತ್ತಿರುವ, ಒಳ್ಳೆಯ ನಾಯಕನಾದ ನಿನ್ನನ್ನುದ್ದೇಶಿಸಿ, ಗೋತಮ ಪುತ್ರನಾದ ನೋಧಸನು ನೂತನವಾದ ಇದೊಂದು ಸೂಕ್ತರೂಪವಾದ ಸ್ತುತಿಯನ್ನು ರಚಿಸಿದಾನೆ. ಇದರಿಂದ ಸ್ತುತನಾದ (ಇಂದ್ರನು) ತನ್ನ ಸ್ವಂತಬುದ್ಧಿಯಿಂದ ಅಥವಾ ಕರ್ಮಗಳಿಂದ ಸಂಪಾದಿಸಿದ ದ್ರವ್ಯವುಳ್ಳವನಾಗಿ ಪ್ರಾತಃಕಾಲದಲ್ಲಿ ಶೀಘ್ರನಾಗಿ ನಮ್ಮಲ್ಲಿಗೆ ಬರಲಿ

## English Translation

O mighty Indra, Nodhas, the son of Gotama has composed for us this new hymn addressed to you who exist for ever, you harness your horses to your chariot, and you are the sure guide of all. May he (Indra) who has acquired wealth by pious acts come hither quickly in the morning.

॥ ವಿಶೇಷವಿಷಯಗಳು ॥

ಪ್ರಥಮ ಮಂಡಲದಲ್ಲಿ ಹನ್ನೊಂದನೆಯ ಅನುವಾಕ ಎಂದರೆ ೫೮-೬೪ ಸೂಕ್ತಗಳಿಗೆ ಗೋತಮ ಪುತ್ರನಾದ ನೋಧಾ ಎಂಬುವನು ಋಷಿಯು. ಈ ನೋಧನು ಈ ಸೂಕ್ತಗಳಿಗೂ (೭೪ ಋಕ್ಕುಗಳು) ಎಂಟನೆಯ ಮಂಡಲದಲ್ಲಿ ೮೮ ನೆಯ ಸೂಕ್ತಕ್ಕೂ (೬ ಋಕ್ಕು) ಒಂಭತ್ತನೆಯ ಮಂಡಲದಲ್ಲಿ ೯೩ ನೆಯ ಸೂಕ್ತಕ್ಕೆ (೫ ಋಕ್ಕು) ಒಟ್ಟು ೮೫ ಋಕ್ಕುಗಳಿಗೆ ಋಷಿಯಾಗಿರುವನು. ಈ ಋಷಿಯು ಸಾಧಾರಣವಾಗಿ ಪ್ರತಿಸೂಕ್ತದ ಕೊನೆಯ ಋಕ್ಕಿನ ಕೊನೆಯ ಪಾದವನ್ನು **ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್** ಎಂಬ ಪಲ್ಲವಿಯಂತಿರುವ ವಾಕ್ಯದಿಂದ ಸೂಕ್ತವನ್ನು ಸಮಾಪ್ತಿಗೊಳಿಸಿರುವನು. ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್— ಎಂದರೆ ಯಜ್ಞಾದಿಕರ್ಮಗಳಿಂದ ಅಥವಾ ಸ್ತೋತ್ರಗಳಿಂದ ಸ್ತುತಿಸಲ್ಪಡುವ (ಇಂದ್ರನು) ಪ್ರಾತಃಕಾಲದಲ್ಲಿ ಬೇಗನೆ (ಯಜ್ಞಭೂಮಿಗೆ) ಬರಲಿ ಎಂದರ್ಥವು

**ಸನಾಯತೇ— ನಿತ್ಯ ಇವಾಚರತಿ** । ಯಾವಾಗಲೂ ಇರುವವನು, ನಾಶರಹಿತನು

**ಹರಿಯೋಜನಾಯ—** ಹರೀ ಎಂಬ (ಇಂದ್ರನ) ಅಶ್ವಗಳನ್ನು ರಥಕ್ಕೆ ಕಟ್ಟಿರುವ

**ಸುನೀಥಾಯ— ಣೀಞ್ ಪ್ರಾಪಣೇ** । ಜನಗಳಿಗೆ ಉತ್ತಮ ಮಾರ್ಗದರ್ಶಕನಾದ ಇಂದ್ರನಿಗಾಗಿ

**ಶವಸಾನ—ಬಲವನ್ನಿಂದ್ರ** । ಶವಃ ಎಂದರೆ ಬಲವು. ಶವಸಾನ ಎಂದರೆ ಬಲವುಳ್ಳ ಇಂದ್ರನು

**ಧಿಯಾವಸುಃ—ಅಸ್ಮಾಭಿರನೇನ ಸ್ತೋತ್ರೇಣ ಸ್ತುತಸ್ಸನ್ ಬುದ್ಧ್ಯಾ ಕರ್ಮಣಾ ವಾ ಪ್ರಾಪ್ತವಸುರಿಂದ್ರಃ** । ನಮ್ಮಿಂದ ಸ್ತುತಿಸಲ್ಪಟ್ಟ ಅಥವಾ ಯಜ್ಞಾದಿಕರ್ಮಗಳಿಂದ ಆರಾಧಿಸಲ್ಪಟ್ಟ ಇಂದ್ರನು

**ಜಗಮ್ಯಾತ್—ಆಗಚ್ಛತು** । ಬರಲಿ

॥ ವ್ಯಾಕರಣಪ್ರಕ್ರಿಯಾ ॥

**ಸನಾಯತೇ**—ಸನಾ ಎಂಬುದು ನಿಪಾತ. ಇದು ನಿತ್ಯಶಬ್ದಸಮಾನಾರ್ಥವಾಗಿದೆ ಇದಕ್ಕೆ ಆಚಾರಾರ್ಥದಲ್ಲಿ **ಕರ್ತುಃ ಕ್ಯಙ್ ಸಲೋಪಶ್ಚ** ಎಂಬುದರಿಂದ ಕ್ಯಙ್ ಪ್ರತ್ಯಯ **ಸನಾದ್ಯಂತಾ ಧಾತವಃ** ಸೂತ್ರದಿಂದ ಸನಾಯ ಎಂಬ ಕ್ಯಙಂತವು ಧಾತುಸಂಜ್ಞೆಯನ್ನು ಹೊಂದುತ್ತದೆ. ಕ್ಯಙ್ ಙಿತ್ತಾದುದರಿಂದ ಆತ್ಮನೇಪದಪ್ರತ್ಯಯ ಬರುತ್ತದೆ ಸನಾಯತೇ ಎಂದು ರೂಪವಾಗುತ್ತದೆ ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದ

**ಅತಕ್ಷತ್**- ತಕ್ಷೂ ತನೂಕರಣೇ ಧಾತು ಲಙ್ ಪ್ರಥಮಪುರುಷ ಏಕವಚನದಲ್ಲಿ **ಇತಶ್ಚ** ಸೂತ್ರದಿಂದ ಪ್ರತ್ಯಯ ಇಕಾರಕ್ಕೆ ಲೋಪ. ಶಪ್ ವಿಕರಣ, ಅಂಗಕ್ಕೆ ಅಡಾಗಮ ಅತಕ್ಷತ್ ಎಂದು ರೂಪವಾಗುತ್ತದೆ ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ ಆಗ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ

**ಹರಿಯೋಜನಾಯ**—ಹರೀ ಯೋಜಯತೀತಿ ಹರಿಯೋಜನಃ. ಯುಜಿರ್ ಯೋಗೇ ಧಾತು ಲ್ಯುಟ್ ಪ್ರತ್ಯಯ **ಯುವೋರನಾಕೌ** ಎಂಬುದರಿಂದ ಅದಕ್ಕೆ ಅನಾದೇಶ ಲಿತ್ತಾದುದರಿಂದ **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವವು ಉದಾತ್ತವಾಗುತ್ತದೆ ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸುನೀಥಾಯ**—ಣೀಞ್ ಪ್ರಾಪಣೇ ಧಾತು. ಇದಕ್ಕೆ ಉಣಾದಿಸಿದ್ಧವಾದ ಥಕ್ ಪ್ರತ್ಯಯ ಕಿತ್ತಾದುದ ರಿಂದ **ಕ್ಙಿತಿಚ** ಸೂತ್ರದಿಂದ ಧಾತುವಿಗೆ ಇಕ್‌ಲಕ್ಷಣ ಗುಣಪ್ರತಿಷೇಧ ಬರುತ್ತದೆ. ಸುಷ್ಠು ನೀಥಃ ಸುನೀಥಃ ತಸ್ಮೈ **ಥಾಥಘಞ್‌ಕ್ತಾಜ**—(ಪಾ. ಸೂ. ೬-೨-೧೪೪) ಸೂತ್ರದಿಂದ ಗತಿಯು ಉಪಪದವಾಗಿರುವುದರಿಂದ ಅಂತ ಉದಾತ್ತ ವಾಗುತ್ತದೆ ॥ ೧೩ ॥

**ಶವಸಾನ**—ಸಂಬುದ್ಧಿಯಲ್ಲಿ **ಆಮಂತ್ರಿತಸ್ಯ ಚ** ಸೂತ್ರದಿಂದ ನಿಘಾತಸ್ವರ ಬರುತ್ತದೆ.

ಅರವತ್ತೆರಡನೆಯ ಸೂಕ್ತವು ಸಮಾಪ್ತವು.



# ಅರವತ್ತಮೂರನೆಯ ಸೂಕ್ತವು

**ತ್ವಂ ಮಹಾನಿತಿ ನವರ್ಚಂ ಷಷ್ಠಂ ಸೂಕ್ತಂ । ನೋಧಸ ಆರ್ಷಂ ತ್ರೈಷ್ಟುಭಮೈಂದ್ರಂ । ಅನುಕ್ರಮ್ಯತೇ ಚ । ತ್ವಂ ನವೇತಿ ॥ ಸಮೂಳ್ಹೇ ದಶರಾತ್ರೇ ದ್ವಿತೀಯೇ ಛಂದೋಮೇ ಮರುತ್ವತೀಯೇ ಶಸ್ತ್ರ ಏತತ್ಸೂಕ್ತಂ । ವಿಶ್ವಜಿತೋಽಗ್ನಿಂ ನರ ಇತಿ ಖಂಡೇ ಸೂತ್ರಿತಂ । ತಾಂ ಸು ತೇ ಕೀರ್ತಿಂ ತ್ವಂ ಮಹಾँ ಇಂದ್ರ ಯೋ ಹ ॥ ಆ. ೮-೭ । ಇತಿ ॥**

ಅನುವಾದವು—**ತ್ವಂ ಮಹಾನ್** ಎಂಬುದು ಹನ್ನೊಂದನೆಯ ಅನುವಾಕದಲ್ಲಿ ಆರನೆಯ ಸೂಕ್ತವು ಇದರಲ್ಲಿ ಒಂಭತ್ತು ಋಕ್ಕುಗಳಿರುವವು ಈ ಸೂಕ್ತಕ್ಕೆ ನೋಧಾ ಎಂಬುವನು ಋಷಿಯು. ಇಂದ್ರನು ದೇವತೆಯು, ತ್ರಿಷ್ಟುಪ್ ಛಂದಸ್ಸು **ತ್ವಂ ನವ** ಎಂದು ಅನುಕ್ರಮಣಿಕೆಯಲ್ಲಿ ಹೇಳಿರುವುದು **ಸಮೂಳ್ಹೇ** ಎಂಬ ಹತ್ತು ದಿನಗಳಲ್ಲಿ ಮಾಡುವ ಯಾಗ ವಿಶೇಷದಲ್ಲಿ ದ್ವಿತೀಯ ಛಂದೋಮಾ ಮಂತ್ರಗಳನ್ನು ಪಠಿಸುವಾಗ ಮರುತ್ವತೀಯಶಸ್ತ್ರ ಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ವಿಶ್ವಜಿತೋಽಗ್ನಿಂ ನರ** ಎಂಬ ಖಂಡದಲ್ಲಿ **ತಾಂ ಸುತೇ ಕೀರ್ತಿಂ ತ್ವಂ ಮಹಾँ ಇಂದ್ರ ಯೋ ಹ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೭)

## ಸೂಕ್ತ—೬೩

॥ ಓಂ ॥

॥ ಮಂಡಲ—೧ ॥ ಅನುವಾಕ—೧೧ ॥ ಸೂಕ್ತ—೬೩ ॥

॥ ಅಷ್ಟಕ—೧ ॥ ಅಧ್ಯಾಯ—೫ ॥ ವರ್ಗ—೪, ೫ ॥

॥ **ಸೂಕ್ತದಲ್ಲಿರುವ ಋಕ್ಸಂಖ್ಯೆ—೯** ॥

॥ ಋಷಿಃ—ನೋಧಾ ಗೌತಮಃ ॥

ದೇವತಾ—ಇಂದ್ರಃ ॥

ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ತ್ವಂ ಮಹಾँ ಇಂದ್ರ ಯೋ ಹ ಶುಷ್ಮೈರ್ದ್ಯಾವಾ ಜಜ್ಞಾನಃ ಪೃಥಿವೀ ಅಮೇ ಧಾಃ ।

ಯದ್ಧ ತೇ ವಿಶ್ವಾ ಗಿರಯಶ್ಚಿದಭ್ವಾ ಭಿಯಾ ದೃಳ್ಹಾಸಃ ಕಿರಣಾ
ನೈಜನ್ ॥ ೧ ॥

॥ ಪದಪಾಠಃ ॥

ತ್ವಂ । ಮಹಾನ್ । ಇಂದ್ರ । ಯಃ । ಹ । ಶುಷ್ಮೈಃ । ದ್ಯಾವಾ । ಜಜ್ಞಾನಃ ।
ಪೃಥಿವೀ ಇತಿ । ಅಮೇ । ಧಾಃ ।

ಯತ್ । ಹ । ತೇ । ವಿಶ್ವಾ । ಗಿರಯಃ । ಚಿತ್ । ಅಭ್ವಾ । ಭಿಯಾ ।
ದೃಳ್ಹಾಸಃ । ಕಿರಣಾಃ । ನ । ಐಜನ್ ॥ ೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಮಹಾನ್ ಗುಣೈಃ ಸರ್ವಾಧಿಕೋ ಭವಸಿ । ಯೋ ಹ ಯಃ ಖಲು ತ್ವಮ-ಮೇಽಸುರಕೃತೇ ಭಯೇ ಸತಿ ಜಜ್ಞಾನಸ್ತದಾನೀಮೇವ ಪ್ರಾದುರ್ಭೂತಃ ಸನ್ ಶುಷ್ಮೈಃ ಶತ್ರೂಣಾಂ ಶೋಷಕೈರಾತ್ಮೀಯೈರ್ಬಲೈರ್ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಧಾಃ । ಅಧಾರಯಃ । ತಾದೃಶಾದ್ಭ-ಯಾದವಮೂಮುಚ ಇತ್ಯರ್ಥಃ । ಕಿಂಚ । ಯದ್ಧ ತೇ ಯಸ್ಯ ಖಲು ತವ ಸಂಬಂಧಿನ್ಯಾ ಭಿಯಾ ಭೀತ್ಯಾ ವಿಶ್ವಾ ವಿಶ್ವಾನಿ ವ್ಯಾಪ್ತಾನಿ ಯಾನಿ ಭೂತಜಾತಾನಿ ಗಿರಯಶ್ಚಿತ್ ಯೇ ಚ ಶಿಲೋಚ್ಚಯಾಃ । ಅಭ್ವಾ । ಮಹನ್ನಾಮೈತತ್ । ಅನ್ಯಾನ್ಯಪಿ ಮಹಾಂತಿ ಯಾನಿ ಸಂತಿ । ತೇಽಪಿ ಸರ್ವೇ ದೃಳ್ಹಾಸೋ ದೃಢಾ ಅಪ್ಯೈಜನ್ । ಅಕಂಪಿಷತ । ತತ್ರ ದೃಷ್ಟಾಂತಃ । ಕಿರಣಾ ನ । ಯಥಾ ಸೂರ್ಯರಶ್ಮಯ ಇತಸ್ತತೋ ನಭಸಿ ಕಂಪಂತೇ ತದ್ವತ್ ॥ ಜಜ್ಞಾನಃ । ಜನೀ ಪ್ರಾದುರ್ಭಾವೇ । ಲಿಟಃ ಕಾನಚ್ । ಗಮಹನೇತ್ಯಾದಿ-ನೋಪಧಾಲೋಪಃ । ಸ್ಥಾನಿವದ್ಭಾವಾದ್ದ್ವಿರ್ಭಾವಾದಿ । ಚಿತ ಇತ್ಯಂತೋದಾತ್ತತ್ವಂ । ದ್ಯಾವಾಪೃಥಿವೀ ಇತ್ಯಸ್ಯ ಸಮಸ್ತಪದಸ್ಯ ಮಧ್ಯೇ ಜಜ್ಞಾನ ಇತ್ಯಸ್ಯ ಪಾಠಶ್ಛಾಂದಸಃ । ಯತ್ । ಸುಪಾಂ ಸುಲುಗಿತಿ ಷಷ್ಠ್ಯಾ ಲುಕ್ । ಅಭ್ವಾ । ಆ ಸಮಂತಾದ್ಭವಂತಿ ಸದ್ಭಾವಂ ಪ್ರಾಪ್ನುವಂತೀತ್ಯಭ್ವಾ ಮಹಾಂತಃ । ಆಙ್ಪೂರ್ವಾದ್ಭವತೇರೌಣಾದಿಕೋ ಡ್ವನ್ಪ್ರತ್ಯಯಃ । ಉಪಸರ್ಗಸ್ಯ ಹ್ರಸ್ವತ್ವಂ ಚ । ಯದ್ವಾ । ನಞ್ಪೂರ್ವಾದ್ಭವತೇಃ ಪ್ರಾಪ್ತ್ಯರ್ಥಾನ್ನಞಿ ಭುವೋ ಡಿದಿತಿ ಕ್ವನ್ಪ್ರತ್ಯಯಃ । ಮಹಾಂತೋ ಹಿ ಪ್ರಾಪ್ತುಂ ನ ಶಕ್ಯಂತೇ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಕಿರಣಾಃ । ಕೀರ್ಯಂತೇ ವಿಕ್ಷಿಪ್ಯಂತ

**ಇತಿ ಕಿರಣಾಃ । ಕ್ಷ್ಮಾ ವಿಕ್ಷೇಪೇ । ಕ್ಷ್ಮಾ ಪ್ಯ್ಯಾವೃಜಿಮಂದಿನಿಧಾಞ್ಭ್ಯಃ ಕ್ಯುಃ । ಉ. ೨-೮೧ । ಇತಿ ಕ್ಯುಪ್ರತ್ಯ-ಯಃ । ಯೋರನಾದೇಶೇ ಪ್ರತ್ಯಯಾದ್ಯುದಾತ್ತತ್ವಂ । ಋತ ಇದ್ಧಾತೋರಿತೀತ್ವಂ । ಐಜನ್ । ಏಜೃ ಕಂಪನೇ । ಲಙ್ಯಾಡಾಗಮಃ । ಸ ಚೋದಾತ್ತಃ । ವೃದ್ಧಿಶ್ಚ ॥**

॥ ಪ್ರತಿಪದಾರ್ಥ ॥

ಇಂದ್ರ—ಇಂದ್ರನೇ । **ತ್ವಂ**—ನೀನು । **ಮಹಾನ್**--ಗುಣಾಧಿಕನು । **ಯೋ ಹ**—ಯಾವ ನೀನೇ । **ಅನೋ**—(ಅಸುರರಿಂದ) ಭಯವುಂಟಾದಾಗ । **ಜಜ್ಞಾನಃ—**ಆವಿರ್ಭೂತನಾಗಿ । **ಶುಷ್ಮೈಃ—** ಶತ್ರುನಾಶಕವಾದ ನಿನ್ನ ಬಲಗಳಿಂದ । **ದ್ಯಾವಾಪೃಥಿವೀ**—ಭೂಮ್ಯಾಕಾಶಗಳನ್ನು । **ಧಾಃ**—ಆಧಾರವುಳ್ಳದ್ದನ್ನಾಗಿ ಮಾಡಿದೆ (ಅವುಗಳನ್ನು ಭಯರಹಿತವನ್ನಾಗಿ ಮಾಡಿದೆ) । **ಯದ್ಧ ತೇ**—ಯಾವ ನಿನ್ನದೇ ಆದ । **ಭೀತ್ಯಾ**—ಭಯದಿಂದ । **ವಿಶ್ವಾ—**ವ್ಯಾಪಿಸಿಕೊಂಡಿದ್ದ ಎಲ್ಲ ಭೂತ ಸಮುದಾಯಗಳೂ । **ಗಿರಯಶ್ಚಿತ್—** ಪರ್ವತಗಳೂ । **ಅಭ್ವಾ**—ಇತರ ದೊಡ್ಡ ದೊಡ್ಡ ವಸ್ತುಗಳೂ । **ದೃಳ್ಹಾಸಃ**—ದೃಢವಾಗಿದ್ದಾಗ್ಯೂ । **ಕಿರಣಾನ—**(ಸೂರ್ಯನ) ಕಿರಣಗಳಂತೆ । **ಐಜನ್**-- ನಡುಗಿದುವು

॥ ಭಾವಾರ್ಥ ॥

ಭೂಮ್ಯಾಕಾಶಗಳಿಗೆ ಅಸುರ ಸಂಬಂಧನಾದ ಭಯವುಂಟಾಗಲು ಮಹಾತ್ಮನಾದ ನೀನು ತಕ್ಷಣವೇ ಆವಿರ್ಭೂತನಾಗಿ ಅವೆರಡಕ್ಕೂ ಒದಗಿದ್ದ ಭಯವನ್ನು ಪರಿಹಾರಮಾಡಿದ ನಿನ್ನ ಭಯದಿಂದಲೇ, ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿದ್ದ ಭೂತಗಳೂ, ದೃಢವಾಗಿದ್ದ ಪರ್ವತಗಳೂ ಮತ್ತು ಇತರ ದೊಡ್ಡ ದೊಡ್ಡ ವಸ್ತುಗಳೂ ಕೂಡ, ಸೂರ್ಯನ ಕಿರಣಗಳು ಕಂಪಿಸುವಂತೆ, ಕಂಪಿಸಿದುವು

## English Translation

O Indra, you are the mighty one, who becoming manifest in the hour of alarm, sustained, by you energies, heaven and earth, then through fear of you, all creatures and the mountains, and all other vast and solid things trembled like the rays of the Sun.

॥ ವಿಶೇಷವಿಷಯಗಳು ॥

**ಜಜ್ಞಾನಃ— ತದಾನೀಮೇವ ಪ್ರಾದುರ್ಭೂತಃ** ಆಗಿನ ಕಾರ್ಯಕ್ಕನುಗುಣವಾದ ಆಕಾರವೂ ಆಯುಧವೂ ಇವುಗಳನ್ನು ಧರಿಸಿ ಪ್ರಕಟವಾದವನು

**ಶುಷ್ಮೈಃ— ಶತ್ರೂಣಾಂ ಶೋಷಕೈರಾತ್ಮೀಯೈರ್ಬಲೈಃ** ಶತ್ರುಗಳನ್ನು ಹೆದರಿಸುವ ಅಥವಾ ನಡುಗುವಂತೆ ಮಾಡುವ ತನ್ನ ಸಾಮರ್ಥ್ಯಗಳಿಂದ. ಶುಷ್ಮಶಬ್ದವು ಓಜಃ, ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ಪಠಿತವಾಗಿರುವುದು (ನಿ ೨-೯).

**ದ್ಯಾವಾಪೃಥಿವೀ–ದ್ಯಾವಾಪೃಥಿವ್ಯೌ** ಭೂಮ್ಯಂತರಿಕ್ಷಗಳು ಇಲ್ಲಿ ಸಂಹಿತೆಯಲ್ಲಿ ಜಜ್ಞಾನಃ ಎಂಬ ಪದವು ಸಮಸ್ತ ಪದವಾದ ದ್ಯಾವಾಪೃಥಿವೀ ಎಂಬ ಪದಗಳ ಮಧ್ಯದಲ್ಲಿ ಪ್ರಯುಕ್ತವಾಗಿರುವುದು ವೈದಿಕ ಪ್ರಯೋಗ ವಾಗಿರುತ್ತದೆ.

**ಅಭ್ವಾ—**ಮಹತ್ ಬ್ರಧ್ನಃ ಮೊದಲಾದ ಇಪ್ಪತ್ತೈದು ಮಹನ್ನಾಮಗಳ ಮಧ್ಯದಲ್ಲಿ ಅಭ್ವಾ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ ೩–೧೩) ಈ ಶಬ್ದಕ್ಕೆ ದೊಡ್ಡ ವಸ್ತುಗಳು ಎಂದರೆ ಗೃಹಪಾಷಾಣಾದಿಗಳು ಎಂದೂ, ಅರ್ಣಃ ಕ್ಷೋದಃ ಮೊದಲಾದ ನೂರೊಂದು ಉದಕನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ ಈ ಶಬ್ದಕ್ಕೆ ಉದಕ ವೆಂದೂ (ನಿ ೨–೨೪) ಅರ್ಥಗಳಿರುವವು ಪ್ರಸಕ್ತ ಸಂದರ್ಭದಲ್ಲಿ ಈ ಶಬ್ದಕ್ಕೆ ಮಹತ್ ಎಂದರೆ ದೊಡ್ಡವಸ್ತುಗಳು ಎಂಬರ್ಥವನ್ನು ಹೇಳಬೇಕು

**ದೃಳ್ಹಾಸಃ—ದೃಢಾಃ** ಬಲವಾದವು ಶಕ್ತಿಯುಳ್ಳವು ಎಂದು ಅರ್ಥವು. ಋಗ್ವೇದದಲ್ಲಿ ಅಜ್ಮಧ್ಯಸ್ಥವಾದ ಡಕಾರಕ್ಕೆ ಳಕಾರವೂ ಢಕಾರಕ್ಕೆ ಳ್ಹಕಾರವೂ ಉಪಯೋಗಿಸುವ ರೂಢಿ ಇರುವುದು. ಇಲ್ಲಿ ದೃಳ್ಹಾಸಃ ಎಂಬುದು ಪ್ರಥಮಾ ಬಹುವಚನ ವೈದಿಕಪ್ರಯೋಗವು

**ಕಿರಣಾಃ— ಕೀರ್ಯಂತೇ ವಿಕ್ಷಿಪ್ಯಂತೆ ಇತಿ ಕಿರಣಾಃ** ರಶ್ಮಿಗಳು ಎಂದು ಅರ್ಥವು (ನಿ ೧–೫) ರಲ್ಲಿ ಇಪ್ಪತ್ತೈದು ರಶ್ಮಿನಾಮಗಳ ಮಧ್ಯದಲ್ಲಿ ಈ ಶಬ್ದವು ಪಠಿತವಾಗಿರುವುದು.

**ನ—ಇವ.** ಉಪಮಾರ್ಥಕವು. ಯಾಸ್ಕರು ಇದಮಿವ, ಎಂಬ ಇವೇ ಮೊದಲಾದ ಹನ್ನೆರಡು ಉಪಮಾ ವಾಚಕಗಳ ಮಧ್ಯದಲ್ಲಿ ನ ಎಂಬ ಶಬ್ದವನ್ನೂ ಪಾಠಮಾಡಿರುವರು. (ನಿ. ೩–೧೩) ಸ್ಕಂದ ಸ್ವಾಮಿಗಳು ತಮ್ಮ ಭಾಷ್ಯದಲ್ಲಿ ನಿಪಾತಪ್ರಾಯತ್ವಾತ್ ಶಬ್ದನಿರ್ವಚನಸ್ಯಾವಕ್ತವ್ಯತ್ವಾತ್, ಎಂದು ಈ ಶಬ್ದದ ಅರ್ಥವನ್ನು ಹೇಳಿರುವರು

**ಕಿರಣಾ ನ ಐಜನ್** —ಸೂರ್ಯನ ಕಿರಣಗಳಂತೆ ಕಂಪಿಸಿದವು , ಸೂರ್ಯನ ಕಿರಣಗಳು ಅಚಲವಾಗಿದ್ದರೂ ಅವು ವಾಯುಮಂಡಲದ ಮೂಲಕ ಪ್ರವೇಶಿಸಿ ನಮ್ಮ ಸಮೀಪಕ್ಕೆ ಬರುವಾಗ ವಾಯುವಿನ ಚಲನೆಯಿಂದ ಕಂಪಿಸು ವಂತೆ ತೋರುವವು ಹೇಗೆಂದರೆ ಅಲೆಗಳಿಂದ ಯುಕ್ತವಾದ ನೀರಿನಲ್ಲಿ ಸೂರ್ಯ ಅಥವಾ ಚಂದ್ರಬಿಂಬವು ಪ್ರತಿಫಲಿತ ವಾದಾಗ ಆ ಬಿಂಬವು ಚಲನರಹಿತವಾಗಿದ್ದರೂ ಜಲವು ಚಲನಯುಕ್ತವಾದ್ದರಿಂದ ಕಂಪಿಸುವಂತೆ ತೋರುವುದು ಅದರಂತೆ ಇಲ್ಲಿಯೂ ಊಹಿಸಬೇಕು

॥ ವ್ಯಾಕರಣಪ್ರಕ್ರಿಯಾ ॥

**ಇಂದ್ರ—ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ

**ಜಜ್ಞಾನಃ—**ಜನೀ ಪ್ರಾದುರ್ಭಾವೇ ಧಾತು. ಇದಕ್ಕೆ ಲಿಟ್ ವಿವಕ್ಷಾಮಾಡಿದಾಗ **ಲಿಟ ಕಾನಜ್ವಾ** (ಪಾ ಸೂ ೩–೨–೧೦೬) ಸೂತ್ರದಿಂದ ಅದಕ್ಕೆ ಕಾನಚ್ ಜನ್+ಆನ ಎಂದಿರುವಾಗ **ಗಮಹನಜನ** (ಪಾ ಸೂ ೬–೪–೯೮) ಎಂಬುದರಿಂದ ಧಾತುವಿನ ಉಪಧೆಗೆ ಲೋಪ **ಸ್ಥಾನಿವದಾದೇಶ** ಸೂತ್ರದಿಂದ ಕಾನಚಿಗೆ ಸ್ಥಾನಿವದ್ಭಾವ ದಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ. ಜಜ್ಞಾನ ಎಂದು ರೂಪವಾಗುತ್ತದೆ ಕಾನಚ್ ಚಿತ್ತಾದುದ

ರಿಂದ **ಚಿತಃ** ಸೂತ್ರದಿಂದ ಅಂತೋದಾತ್ತಸ್ವರ ಬರುತ್ತದೆ ಇಲ್ಲಿ ದ್ಯಾವಾಪೃಥಿವೀ ಎಂಬುದು ಸಮಸ್ತವಾದ ಪದ ಸಮಸ್ತಪದದ ಮಧ್ಯದಲ್ಲಿ ಜಜ್ಞಾನಃ ಎಂದು ಪಾಠಮಾಡಿರುವುದು ಛಾಂದಸಪ್ರಯೋಗ ಎಂದು ತಿಳಿಯಬೇಕು.

**ದ್ಯಾವಾಪೃಥಿವೀ**—ದ್ಯೌಶ್ಚ ಪೃಥಿವೀ ಚ ಎಂದು ಸಮಾಸಮಾಡಿದಾಗ **ದಿವೋ ದ್ಯಾವಾ** (ಪಾ ಸೂ ೬-೩-೨೯) ಎಂಬುದರಿಂದ ದಿವ್ ಶಬ್ದಕ್ಕೆ ದ್ಯಾವಾದೇಶ ಬರುತ್ತದೆ **ದೇವತಾದ್ವಂದ್ವೇಚ** (ಪಾ ಸೂ ೬-೨-೧೪೧) ಎಂಬುದರಿಂದ ಉಭಯಪದಗಳಿಗೆ ಯುಗಪತ್ ಪ್ರಕೃತಿಸ್ವರ ಬರುತ್ತದೆ

**ಯತ್**—ಷಷ್ಠೀ ಏಕವಚನಪರದಲ್ಲಿರುವಾಗ **ಸುಪಾಂ ಸುಲುಕ್**—ಸೂತ್ರದಿಂದ ಷಷ್ಠಿಗೆ ಲುಕ್.

**ಅಭ್ವಾ**—ಆ ಸಮಂತಾತ್ ಭವಂತಿ ಸದ್ಭಾವಂ ಪ್ರಾಪ್ನುವಂತೀತಿ ಅಭ್ವಾ ಮಹಾಂತಃ (ಒಳಗೂ ಹೊರಗೂ ಸದ್ಭಾವವನ್ನು ಹೊಂದಿರುವವರು ಎಂದರ್ಥ) ಆಙ್ ಪೂರ್ವಕವಾದ ಭೂ ಧಾತುವಿಗೆ ಔಣಾದಿಕವಾದ ಡ್ವನ್ ಪ್ರತ್ಯಯ ಡಿತ್ತಾದುದರಿಂದ ಧಾತುವಿನ ಟಿಗೆ ಲೋಪ. ಉಪಸರ್ಗಕ್ಕೆ ಬಹುಲಗ್ರಹಣದಿಂದ ಹ್ರಸ್ವ ಅಭ್ವ ಎಂದಾಗುತ್ತದೆ ಅಥವಾ ನಞ್‌ಪೂರ್ವಕವಾದ ಸ್ವಾಸ್ತ್ಯರ್ಥಕವಾದ ಭೂ ಧಾತುವಿಗೆ **ನಞಿ ಭುವೋ ಡಿತ್** ಎಂಬುದರಿಂದ ಕ್ವನ್ ಪ್ರತ್ಯಯ ಡಿತ್ವವಿಧಾನದಿಂದ ಹಿಂದಿನಂತೆ ಧಾತುವಿನ ಟಿಗೆ ಲೋಪ ಅಭ್ವ ಎಂದು ರೂಪವಾಗುತ್ತದೆ ಮಹಾತ್ಮರನ್ನು ಹೊಂದಲು ಕಷ್ಟವಾದುದರಿಂದ ಅಪ್ರಾಪ್ಯರು ಎಂದರ್ಥವಾಗುತ್ತದೆ. ಬಹುವಚನದಲ್ಲಿ ಶಿ ಆದೇಶ ಬಂದಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ ನಞ್‌ಸ್ವರ ಬರುತ್ತದೆ

**ಕಿರಣಾಃ**—ಕೀರ್ಯಂತೇ ವಿಕ್ಷಿಪ್ಯಂತೇ ಇತಿ **ಕಿರಣಾಃ** ಕೄ ವಿಕ್ಷೇಪೇ ಧಾತು **ೠತ ಇದ್ಧಾತೋಃ** ಎಂಬುದರಿಂದ ಧಾತುವಿಗೆ ಇತ್ವ **ಉರಣ್‌ರಪರಃ** ಸೂತ್ರದಿಂದ ರಪರವಾಗಿ ಬರುತ್ತದೆ **ಕೄ ಪೄ ವೃಜಿ ಮಂದಿ ನಿಧಾಞ್‌ಭ್ಯಃ ಕ್ಯುಃ** (ಉ ಸೂ ೨-೩೯) ಎಂಬುದರಿಂದ ಕ್ಯುಪ್ರತ್ಯಯ **ಯುವೋರನಾಕೌ** ಸೂತ್ರದಿಂದ ಅದಕ್ಕೆ ಅನಾದೇಶ ರೇಫದ ಪರದಲ್ಲಿರುವುದರಿಂದ **ಅಟ್‌ಕುಪ್ವಾಙ್** ಸೂತ್ರದಿಂದ ನಕಾರಕ್ಕೆ ಣತ್ವ ಕಿರಣ ಎಂದು ರೂಪವಾಗುತ್ತದೆ ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾದ ಶಬ್ದವಾಗುತ್ತದೆ

**ಐಜನ್**—ಏಜೃ ಕಂಪನೇ ಧಾತು ಲಙ್ ಪ್ರಥಮಪುರುಷಬಹುವಚನದಲ್ಲಿ ಝಿ ಪ್ರತ್ಯಯ **ಝೋಂತಃ** ಎಂಬುದರಿಂದ ಝಕಾರಕ್ಕೆ ಅಂತಾದೇಶ **ಕರ್ತರಿ ಶಪ್** ಸೂತ್ರದಿಂದ ಶಪ್ ವಿಕರಣ **ಆಡಜಾದೀನಾಂ** ಎಂಬುದರಿಂದ ಅಂಗಕ್ಕೆ ಆಡಾಗಮ **ಆಟಶ್ಚ** ಎಂಬುದರಿಂದ ಧಾತುವಿನ ಏಕಾರಕ್ಕೂ ಆಟಾಗಮಕ್ಕೂ ವೃದ್ಧಿ ಏಕಾದೇಶವಾಗಿ ಬರುತ್ತದೆ ಸಂಯೋಗಾಂತಲೋಪದಿಂದ ಪ್ರತ್ಯಯದ ತಕಾರಕ್ಕೆ ಲೋಪ. ಐಜನ್ ಎಂದು ರೂಪವಾಗುತ್ತದೆ. ನ ಶಬ್ದದ ಯೋಗವಿರುವುದರಿಂದ **ಚಾದಿ ಲೋಪೇ ವಿಭಾಷಾ** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ ಆಟಾಗಮವು ಉದಾತ್ತವಾದುದರಿಂದ **ಏಕಾದೇಶ ಉದಾತ್ತೇನೋದಾತ್ತಃ** ಎಂಬುದರಿಂದ ಬಂದಿರುವ ಏಕಾದೇಶವೂ ಉದಾತ್ತವಾಗುತ್ತದೆ ॥ ೧ ॥



॥ ಸಂಹಿತಾಪಾಠಃ ॥

ಆ ಯದ್ಧರೀ ಇಂದ್ರ ವಿವ್ರತಾ ವೇರಾ ತೇ ವಜ್ರಂ ಜರಿತಾ ಬಾಹ್ವೋರ್ಧಾತ್ ।

ಯೇನಾವಿಹರ್ಯತಕ್ರತೋ ಅಮಿತ್ರಾನ್ಪುರ ಇಷ್ಣಾಸಿ ಪುರುಹೂತ ಪೂರ್ವೀಃ ॥ ೨ ॥

॥ ಪದಪಾಠಃ ॥

ಆ । ಯತ್ । ಹರೀ ಇತಿ । ಇಂದ್ರ । ವಿಽವ್ರತಾ । ವೇಃ । ಆ । ತೇ । ವಜ್ರಂ । ಜರಿತಾ । ಬಾಹ್ವೋಃ । ಧಾತ್ ।

ಯೇನ । ಅವಿಹರ್ಯತಕ್ರತೋ ಇತ್ಯವಿಹರ್ಯತಽಕ್ರತೋ । ಅಮಿತ್ರಾನ್ । ಪುರಃ । ಇಷ್ಣಾಸಿ । ಪುರುಽಹೂತ । ಪೂರ್ವೀಃ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಯದ್ಯದಾ ವಿವ್ರತಾ ವಿವಿಧಕರ್ಮಾಣೌ ಹರೀ ತ್ವದೀಯಾವಶ್ವಾವಾ ವೇಃ ರಥ ಆಗಮಯಸಿ । ರಥೇ ಯೋಜಯಸೀತ್ಯರ್ಥಃ । ತದಾನೀಂ ತೇ ತವ ಬಾಹ್ವೋರ್ಹಸ್ತಯೋರ್ಜರಿತಾ ಸ್ತೋತಾ ವಜ್ರಮಾ ಧಾತ್ । ಸೋತ್ರೇಣ ಸ್ಥಾಪಯತಿ । ಸ್ತೋತ್ರಾ ಸ್ತುತೇ ಪ್ರಯತ್ನಮಂತರೇಣ ವಜ್ರಂ ತ್ವದ್ಧಸ್ತೇ ದೃಶ್ಯತ ಇತ್ಯರ್ಥಃ । ಹೇ ಅವಿಹರ್ಯತಕ್ರತೋ ಪ್ರೇಪ್ಸಿತಕರ್ಮವನ್ನಿಂದ್ರ ಅಮಿತ್ರಾನ್ ಶತ್ರೂನ್ಯೇನ ವಜ್ರೇಣೇಷ್ಣಾಸಿ ಅಭಿಗಚ್ಛಸಿ । ಹೇ ಪುರುಹೂತ ಪುರುಭಿರ್ಬಹುಭಿರ್ಯಜಮಾನೈರಾಹೂತ ತ್ವಂ ಪೂರ್ವೀರ್ಬಹ್ವೀಃ ಪುರೋಽಸುರಪುರಾಣಿ ಭೇತ್ತುಮಭಿಗಚ್ಛಸೀತ್ಯರ್ಥಃ ॥ ವಿವ್ರತಾ । ವ್ರತಮಿತಿ ಕರ್ಮನಾಮ । ವಿವಿಧಂ ವ್ರತಂ ಯಯೋಸ್ತೌ । ಸುಪಾಂ ಸುಲುಗಿತಿ ಪೂರ್ವಸವರ್ಣದೀರ್ಘತ್ವಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ವೇಃ । ವೀ ಗತಿಪ್ರಜನಕಾಂತ್ಯಶನಖಾದನೇಷು । ಅಂತರ್ಭಾವಿತಣ್ಯರ್ಥಾಚ್ಛಾಂದಸೇ ಲಙಿ ಸಿಪ್ಯದಾದಿತ್ವಾಚ್ಛಪೋ ಲುಕ್ । ಬಹುಲಂ ಛಂದಸ್ಯಮಾಙ್ಯೋಗೇಽಪೀ-

ತ್ಯಡಭಾವಃ । ಧಾತ್ । ದಧಾತೇಶ್ಛಾಂದಸೇ ಲುಙಿ ಗಾತಿಸ್ಥೇತಿ ಸಿಚೋ ಲುಕ್ । ಪೂರ್ವವದಡಭಾವಃ । ಅವಿಹರ್ಯತಕ್ರತೋ । ಹರ್ಯತಿಃ ಪ್ರೇಪ್ಸಾಕರ್ಮೇತಿ ಯಾಸ್ಕಃ । ನಿ. ೭-೧೭ । ಹರ್ಯ ಗತಿಕಾಂತ್ಯೋಃ । ಕಾಂತಿರಭಿಲಾಷಃ । ವಿಹರ್ಯತೋಽನಭಿಲಷಿತಃ । ಅವಿಹರ್ಯತೋಽಭಿಲಷಿತ ಇತ್ಯರ್ಥಃ । ತಾದೃಶಃ ಕ್ರತುಃ ಕರ್ಮ ಯಸ್ಯ ಸ ತಥೋಕ್ತಃ । ಅಮಿತ್ರಾನ್ । ನ ಸಂತಿ ಮಿತ್ರಾಣ್ಯೇಷ್ವಿತಿ ಬಹುವ್ರೀಹೌ ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ । ಇಷ್ಣಾಸಿ । ಇಷ ಆಭೀಕ್ಷ್ಣ್ಯೇ । ಅತ್ರ ಗತ್ಯರ್ಥಃ । ಕ್ರ್ಯಾದಿಭ್ಯಃ ಶ್ನಾ । ಸಿಪಃ ಪಿತ್ತ್ವಾದನುದಾತ್ತತ್ವೇ ತಸ್ಯೈವ ಸ್ವರಃ ಶಿಷ್ಯತೇ । ಯದ್ವೃತ್ತಯೋಗಾದನಿಘಾತಃ ॥

। ಪ್ರತಿಪದಾರ್ಥ ।

**ಇಂದ್ರ**— ಇಂದ್ರನೇ । **ಯತ್**— ಯಾವಾಗ । **ವಿವ್ರತಾ**—ವಿವಿಧ ಕರ್ಮಗಳುಳ್ಳ । **ಹರೀ**—(ನಿನ್ನ) ಎರಡು ಅಶ್ವಗಳನ್ನು । **ಆ ವೇಃ**—ರಥಕ್ಕೆ ಯೋಜನೆ ಮಾಡಿದಿಯೋ (ಆಗ) । **(ಹೇ) ಅವಿಹರ್ಯತಕ್ರತೋ**—ಇಷ್ಟಬಂದಂತೆ ಕೆಲಸಮಾಡಬಲ್ಲವನೇ (ಇಂದ್ರನೇ) । **ಅಮಿತ್ರಾನ್**—ಶತ್ರುಗಳನ್ನು । **ಯೇನ**—ಯಾವ ವಜ್ರದಿಂದ । **ಇಷ್ಣಾಸಿ** ಎದುರಿಸುತ್ತೀಯೋ (ಮತ್ತು) । **ಪುರುಹೂತ**- ಅನೇಕರಿಂದ ಆಹೂತನಾದ ಇಂದ್ರನೇ । **ಪೂರ್ವೀಃ**- ಅನೇಕವಾದ । **ಪುರಃ**—ಶತ್ರುಗಳ ಪಟ್ಟಣಗಳನ್ನು । **ಇಷ್ಣಾಸಿ**- ಎದುರಿಸುತ್ತೀಯೋ । **ತೇ** -ಅಂತಹ ನಿನ್ನ । **ಬಾಹ್ವೋಃ** - ಕೈಗಳಲ್ಲಿ । **ಜರಿತಾ** ಸ್ತೋತೃವು । **ವಜ್ರಂ**--ವಜ್ರಾಯುಧವನ್ನು । **ಆ ಧಾತ್**—ಇಡುತ್ತಾನೆ ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಸ್ವೇಚ್ಛಾಪ್ರವೃತ್ತಿಯುಳ್ಳವನು ನಿನ್ನನ್ನು ಅನೇಕರು ಆಹ್ವಾನಿಸುತ್ತಾರೆ ನೀನು ಯಾವಾಗ ರಥಕ್ಕೆ ಕುದುರೆಗಳನ್ನು ಹೂಡುತ್ತೀಯೋ ಆಗ ಸ್ತೋತೃಗಳು ಸ್ತೋತ್ರ ಮಾಡುತ್ತಾರೆ ಸ್ತೋತ್ರಮಾಡಿದೊಡನೆ, ವಜ್ರಾಯುಧವು ನಿನ್ನ ಕೈಯಲ್ಲಿ ಅನಾಯಾಸವಾಗಿ ಬಂದು ಕುಳಿತುಕೊಳ್ಳುತ್ತದೆ ಅದರಿಂದ ಯುಕ್ತನಾಗಿ, ನೀನು ಶತ್ರುಗಳನ್ನು ಎದುರಿಸಿ, ಅವರ ಅನೇಕ ಪಟ್ಟಣಗಳನ್ನು ನಾಶಮಾಡುತ್ತೀಯೆ.

## English Translation

Indra, when you harness your variously moving horses, your praiser places your thunderbolt in your hands, performer of undesired (of enemies) acts, you assail your enemies, and glorified by many destroy their numerous cities

॥ ವಿಶೇಷ ವಿಷಯಗಳು ॥

**ವಿವ್ರತಾ—ವ್ರತಮಿತಿ ಕರ್ಮನಾಮ । ವಿವಿಧಂ ವ್ರತಂ ಯಯೋಸ್ತೌ ವಿವಿಧ ಕರ್ಮಾಣೌ**— ಬಹಳ ವಿಧವಾದ ಕೆಲಸಗಳನ್ನು ಮಾಡತಕ್ಕವುಗಳು ಎಂದು ಅರ್ಥವು. ವ್ರತ ಶಬ್ದವು ಇಲ್ಲಿ ಕರ್ಮಸಾಮಾನ್ಯವಾಚಕವಾಗಿ

ಪ್ರಯುಕ್ತವಾಗಿರುವುದು ಈ ಶಬ್ದವು ಅಪಃ, ಅಪ್ನಃ ಎಂಬ ಇಪ್ಪತ್ತಾರು ಕರ್ಮನಾಮಗಳ ಮಧ್ಯದಲ್ಲಿ (೩-೧) ಪಠಿತವಾಗಿರುವುದು.

**ಹರೀ**—ಇಂದ್ರನ ಕುದುರೆಗಳು ಯಾಸ್ಕರು ಅತ್ಯಃ, ಹಯಃ, ಅರ್ವಾ, ಎಂಬ ಇವೇ ಮೊದಲಾದ ಇಪ್ಪತ್ತಾರು ಅಶ್ವನಾಮಗಳ ಮಧ್ಯದಲ್ಲಿ ಹರೀ ಶಬ್ದವನ್ನು ಹೇಳಿಲ್ಲವು ಆದರೆ **ದಶೋತ್ತರಾಣ್ಯಾದಿಷ್ಟೋಪ ಯೋಜನಾನೀತ್ಯಾಚಕ್ಷತೇ ಸಾಹಚರ್ಯಜ್ಞಾನಾಯ** (ನಿ ೨-೨೮) ಎಂದು ಪ್ರಾರಂಭಮಾಡಿ, **ಹರೀ ಇಂದ್ರಸ್ಯ** (೧) **ರೋಹಿತೋಽಗ್ನೇಃ** (೨) **ಹರಿತ ಆದಿತ್ಯಸ್ಯ** (೩) **ರಾಸಭಾವಶ್ವಿನೋಃ** (೪) **ಅಜಾಃ ಪೂಷ್ಣಃ** (೫) **ಪೃಷತ್ಯೋ ಮರುತಾಂ** (೬) **ಅರುಣ್ಯೋ ಗಾವ ಉಷಸಃ** (೭) **ಶ್ಯಾವಾಃ ಸವಿತುಃ** (೮) **ವಿಶ್ವರೂಪಾ ಬೃಹಸ್ಪತೇಃ** (೯) **ನಿಯುತೋ ವಾಯೋಃ** (೧೦) ಎಂದು ಆಯಾಯ ದೇವತೆಗಳ ವಾಹನಗಳನ್ನು ಹೇಳುವಾಗ ಇಂದ್ರನ ವಾಹನವನ್ನು ಹರೀಶಬ್ದವು ಬೋಧಿಸುವುದು ಎಂದು ಹೇಳಿರುವರು

**ಜರಿತಾ**—ಸ್ತೋತಾ. ಸ್ತೋತ್ರಮಾಡುವ ಯಜಮಾನನು ರೇಭಃ, ಜರಿತಾ, (ನಿ. ೩-೧೯) ಎಂಬ ಇವೇ ಮೊದಲಾದ ಹದಿಮೂರು ಸ್ತೋತ್ರ ಮಾಡುವವರ ನಾಮಗಳ ಮಧ್ಯದಲ್ಲಿ ಈ ಶಬ್ದವೂ ಪಠಿತವಾಗಿರುವುದು.

**ಪುರುಹೂತ—ಪುರುಭಿರ್ಯಜಮಾನೈರಾಹೂತ.** ಯಜ್ಞಮಾಡತಕ್ಕವರಾದ ಬಹಳ ಮಂದಿ ಯಜಮಾನರಿಂದ ಕರೆಯಲ್ಪಟ್ಟವನು ಇಂದ್ರನು ಎಂದು ಅರ್ಥವು

**ಅವಿಹರ್ಯತಕ್ರತೋ—ಹರ್ಯತಿಃ ಪ್ರೇಪ್ಸಾಕರ್ಮಾ** (ನಿ ೭-೧೭) **ಪ್ರೇಪ್ಸಿತಕರ್ಮನ್,** ಅಥವಾ **ಹರ್ಯ ಗತಿಕಾಂತ್ಯೋಃ ಕಾಂತಿರಭಿಲಾಷಃ । ವಿಹರ್ಯತೋಽನಭಿಲಷಿತಃ । ಅವಿಹರ್ಯತೋಽಭಿಲಷಿತ ಇತ್ಯರ್ಥಃ ।** ಹರ್ಯ ಧಾತುವಿಗೆ ಅಪೇಕ್ಷಿಸು, ಅಭಿಲಾಷೆಪಡು ಎಂಬರ್ಥವಿರುವುದು ವಿಹರ್ಯತಃ ಎಂದರೆ ಅಭಿಲಾಷೆ ಇಲ್ಲದ ಎಂದರ್ಥವು ಅವಿಹರ್ಯತಃ ಎಂದರೆ ಅದಿಲ್ಲದ ಎಂದರೆ ಅಭಿಲಷಿತವಾದ, ಎಲ್ಲರಿಗೂ ಹಿತಕರವಾದ ಎಂದಭಿಪ್ರಾಯವು **ಅಭಿಲಷಿತಃ ಕ್ರತುಃ ಕರ್ಮ ಯಸ್ಯ ಸಃ** ಎಲ್ಲರಿಗೂ ಹಿತಕರವಾದ ಕೆಲಸಗಳನ್ನು ಮಾಡತಕ್ಕವನು. ಇಲ್ಲಿ ಕ್ರತುಶಬ್ದವು ಕರ್ಮಸಾಮಾನ್ಯವಾಚಕವಾಗಿ ಪ್ರಯುಕ್ತವಾಗಿರುವುದು

॥ ವ್ಯಾಕರಣಪ್ರಕ್ರಿಯಾ ॥

**ಹರೀ—**ಹರೀ ಎಂಬುದು ಈಕಾರಾಂತವಾದ ದ್ವಿವಚನ **ಈದೂದೇದ್ದ್ವಿವಚನಂ ಪ್ರಗೃಹ್ಯಂ** ಎಂಬುದರಿಂದ ಪ್ರಗೃಹ್ಯಸಂಜ್ಞಾ ಬರುವುದರಿಂದ **ಪ್ಲುತಪ್ರಗೃಹ್ಯಾ ಅಚಿನಿತ್ಯಂ** ಸೂತ್ರದಿಂದ ಪ್ರಕೃತಿಭಾವ ಬರುತ್ತದೆ

**ವಿವ್ರತಾ**—ವ್ರತವೆಂಬುದು ಕರ್ಮದ ಹೆಸರು. ವಿವಿಧಂ ವ್ರತಂ ಯಯೋಃ ತೌ ವಿವ್ರತೌ. ಸಂಹಿತಾದಲ್ಲಿ **ಸುಪಾಂಸುಲುಕ್**—ಸೂತ್ರದಿಂದ ಔಕಾರಕ್ಕೆ ಪೂರ್ವಸವರ್ಣದೀರ್ಘ ಬರುತ್ತದೆ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ

**ವೇಃ**- ವೀ ಗತಿಪ್ರಜನಕಾಂತ್ಯಶನ ಖಾದನೇಷು, ಧಾತು. ಣಿಜರ್ಥವು ಇದರ ಅರ್ಥದಲ್ಲಿ ಅಂತರ್ಭೂತವಾಗಿದೆ. ಣ್ಯರ್ಥವುಳ್ಳ ಈ ಧಾತುವಿನ ಮೇಲೆ ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್, **ಇತಶ್ಚ** ಸೂತ್ರದಿಂದ ಇಕಾರಕ್ಕೆ ಲೋಪ. ಅದಾದಿಯಾದುದರಿಂದ **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್ ಸಿಪ್ ನಿಮಿತ್ತಕವಾಗಿ ಧಾತುವಿಗೆ ಗುಣ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ ವೇಃ ಎಂದು ರೂಪವಾಗುತ್ತದೆ ಯತ್ ಎಂದು ಹಿಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ

**ಜರಿತಾ**—ಜೄ ವಯೋಹಾನೌ ಧಾತು ಇಲ್ಲಿ ಸ್ತುತಿಕರ್ಮದಲ್ಲಿ ಸ್ವೀಕೃತವಾಗಿದೆ ಕರ್ತ್ರರ್ಥದಲ್ಲಿ ತೃಚ್ ಪ್ರತ್ಯಯ ವಲಾದಿಯಾದುದರಿಂದ ಇಡಾಗಮ ಆರ್ಧಧಾತುಕವಾದುದರಿಂದ ತನ್ನಿಮಿತ್ತವಾಗಿ ಧಾತುವಿಗೆ ಗುಣ. **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದ

**ಧಾತ್**—ಡುಧಾಞ್ ಧಾರಣಪೋಷಣಯೋಃ ಧಾತು ಹಿಂದಿನಂತೆಯೇ **ಛಂದಸಿಲುಙ್**--ಸೂತ್ರದಿಂದ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚ** ಸೂತ್ರದಿಂದ ಅದರ ಇಕಾರಕ್ಕೆ ಲೋಪ **ಚ್ಲೇಃ ಸಿಚ್** ಎಂಬುದರಿಂದ ಪ್ರಾಪ್ತವಾದ ಸಿಚಿಗೆ **ಗಾತಿಸ್ಥಾಘುಪಾಭೂಭ್ಯಃ**—ಸೂತ್ರ ದಿಂದ ಲುಕ್ **ಬಹುಲಂ ಛಂದಸ್ಯಮಾಙಯೋಗೇಽಪಿ** ಸೂತ್ರದಿಂದ ಅಡಭಾವ ಧಾತ್ ಎಂದು ರೂಪವಾಗುತ್ತದೆ ನಿಘಾತಸ್ವರ ಬರುತ್ತದೆ

**ಅವಿಹರ್ಯತಕ್ರತೋ**—ಹರ್ಯತಿಃ ಪ್ರೇಪ್ಸಾಕರ್ಮಾ (ನಿರು ೭-೧೭) ಎಂದು ಯಾಸ್ಕರು ಹೇಳಿರುತ್ತಾರೆ (ಅತ್ಯಂತೇಚ್ಛಾ ಎಂದರ್ಥ) ಹರ್ಯ ಗತಿಕಾಂತ್ಯೋಃ ಧಾತು ಇಲ್ಲಿಯೂ ಕಾಂತಿ ಎಂದರೆ ಅಭಿಲಾಷೆ ಎಂದರ್ಥ ವಿಹರ್ಯತಃ ಅನಭಿಲಷಿತಃ (ಇಚ್ಛೆ ಇಲ್ಲದವನು ಎಂದರ್ಥ) ವಿಹರ್ಯತಃ ನ ಭವತಿ ಇತಿ ಅವಿಹರ್ಯತಃ ಅಭಿಲಷಿತಃ (ಇಚ್ಛೆಪಟ್ಟವನು ಎಂದರ್ಥ ) ತಾದೃಶಃ ಕ್ರತುಃ ಕರ್ಮ ಯಸ್ಯ ಸಃ ತಥೋಕ್ತಃ (ಆ ರೀತಿಯಾದ ಇಚ್ಛೆಪಟ್ಟಿರುವ ಕರ್ಮವುಳ್ಳವನು ಎಂದು ತಾತ್ಪರ್ಯ ) ಸಂಬುದ್ಧಿಯಲ್ಲಿ **ಹ್ರಸ್ವಸ್ಯ ಗುಣಃ** ಎಂಬುದರಿಂದ ಗುಣಬಂದಾಗ ಏಙಂತದ ಪರದಲ್ಲಿರುವುದರಿಂದ ಸುಲೋಪ ಬರುತ್ತದೆ **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ

**ಅಮಿತ್ರಾನ್**—ನ ಸಂತಿ ಮಿತ್ರಾಣಿ ಏಷ್ವಿತಿ ಅಮಿತ್ರಾಃ ತಾನ್ ಅಮಿತ್ರಾನ್ **ನಞೋ ಜರಮರಮಿತ್ರಮೃತಾಃ** (ಪಾ ಸೂ ೬-೨-೧೧೬) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ

**ಇಷ್ಣಾಸಿ**—ಇಷ ಆಭೀಕ್ಷ್ಣ್ಯೇ ಧಾತು ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ ಅಪಿತ್ತಾದುದರಿಂದ ಇದಕ್ಕೆ ಙಿದ್ವದ್ಭಾವ ಬರುತ್ತದೆ ಆದುದರಿಂದ ಲಘೂಪಧಗುಣ ಬರುವುದಿಲ್ಲ **ರಷಾಭ್ಯಾಂ ಣೋನಃ ಸಮಾನಪದೇ** ಸೂತ್ರದಿಂದ ಅದಕ್ಕೆ ಣತ್ವ ಇಷ್ಣಾಸಿ ಎಂದು ರೂಪವಾಗುತ್ತದೆ ಸಿಪ್ ಪಿತ್ತಾದುದರಿಂದ ಅನುದಾತ್ತ ಆಗ ವಿಕರಣ ಸ್ವರ ಉಳಿಯುತ್ತದೆ ಯೇನ ಎಂದು ಹಿಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಂ** ಸೂತ್ರದಿಂದ ನಿಘಾತಪ್ರತಿಷೇಧ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ತ್ವಂ ಸತ್ಯ ಇಂದ್ರ ಧೃಷ್ಣುರೇತಾನ್ತ್ವಮೃಭುಕ್ಷಾ ನರ್ಯಸ್ತ್ವಂ ಷಾಟ್ ।
ತ್ವಂ ಶುಷ್ಣಂ ವೃಜನೇ ಪೃಕ್ಷ ಆಣೌ ಯೂನೇ ಕುತ್ಸಾಯ ದ್ಯುಮತೇ ಸಚಾಹನ್ ॥ ೩ ॥

॥ ಪದಪಾಠಃ ॥

ತ್ವಂ । ಸತ್ಯ । ಇಂದ್ರ । ಧೃಷ್ಣುಃ । ಏತಾನ್ । ತ್ವಂ । ಋಭುಕ್ಷಾಃ । ನರ್ಯಃ । ತ್ವಂ । ಷಾಟ್ ॥
ತ್ವಂ । ಶುಷ್ಣಂ । ವೃಜನೇ । ಪೃಕ್ಷೇ । ಆಣೌ । ಯೂನೇ । ಕುತ್ಸಾಯ । ದ್ಯುಽಮತೇ । ಸಚಾ । ಅಹನ್ ॥ ೩ ॥

। ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಸತ್ಯಃ ಸತ್ಸು ಭವಃ । ಸರ್ವೋತ್ಕೃಷ್ಟ ಇತ್ಯರ್ಥಃ । ಏತಾನ್ ಶತ್ರೂನಭಿಗತಃ ಸನ್ ಧೃಷ್ಣುಸ್ತೇಷಾಂ ಧರ್ಷಯಿತಾ ತಿರಸ್ಕರ್ತಾ । ಕಿಂಚ ತ್ವಮೃಭುಕ್ಷಾ ಋಭೂಣಾಮಧಿಪತಿಃ । ತೇಷು ಕೃತನಿವಾಸೋ ವಾ । ಯದ್ವಾ । ಮಹನ್ನಾಮೈತತ್ । ಮಹಾನ್ಪ್ರವೃದ್ಧೋಽಸಿ । ನರ್ಯೋ ನೃಭ್ಯೋ ಹಿತಃ । ತಥಾ ತ್ವಂ ಷಾಟ್ ಶತ್ರೂಣಾಮಭಿಭವಿತಾ । ಹಂತೇತ್ಯರ್ಥಃ । ಕಿಂಚ । ವೃಜನ ಇತ್ಯಾದೀನಿ ತ್ರೀಣಿ ಸಂಗ್ರಾಮನಾಮಾನಿ । ಅತ್ರ ಪೂರ್ವೇ ವಿಶೇಷಣೇ । ವೃಜನೇ ವರ್ಜನಯುಕ್ತೇ । ಸಂಗ್ರಾಮೇ ಹಿ ವೀರಾಃ ಪುರುಷಾ ವರ್ಜ್ಯಂತೇ ಹಿಂಸ್ಯಂತೇ । ಪೃಕ್ಷೇ ಸಂಪರ್ಚನೀಯೇ ವೀರ್ಯೈರ್ಯೋದ್ಧುಂ ಪ್ರಾಪ್ತವ್ಯೇ । ಏವಂವಿಧ ಆಣೌ ಸಂಗ್ರಾಮೇ ದ್ಯುಮತೇ ದೀಪ್ತಿಮತೇ ಯೂನೇ ತರುಣಾಯ ಕುತ್ಸಾಯ ಸಚಾ ತ್ವಂ ಸಹಾಯೋ ಭೂತ್ವಾ ಶುಷ್ಣಂ ಶೋಷಯಿತಾರಮೇತತ್ಸಂಜ್ಞಮಸುರಮಹನ್ । ಅವಧೀಃ ॥ ಋಭುಕ್ಷಾಃ । ಋಭುರಿತಿ ಮೇಧಾವಿನಾಮ । ಉರು ವಿಸ್ತೀರ್ಣಂ ಭಾತಿ । ಯದ್ವಾ । ಋತೇನ ಯಜ್ಞೇನ

ಭಾತಿ ಭವತೀತಿ ವಾ ಋಭುಃ । ಉರುಶಬ್ದೇ ಋತಶಬ್ದೇ ವೋಪಪದೇ ಭಾತೇರ್ಭವತೇರ್ವಾ ಮೃಗಯ್ವಾ-ದಯಶ್ಚ । ಉ. ೧-೩೮ । ಇತಿ ಕುಪ್ರತ್ಯಯಃ । ಪೂರ್ವಪದಸ್ಯ ಋಭಾವಶ್ಚ ನಿಪಾತ್ಯತೇ । ಕ್ಷಯತಿರೈಶ್ವ-ರ್ಯಕರ್ಮಾ । ತೇಷಾಮಿಾಷ್ಟ ಇತ್ಯೃಭುಕ್ಷಾಃ । ಯದ್ವಾ । ಕ್ಷಿ ನಿವಾಸಗತ್ಯೋಃ । ತೇಷು ನಿವಸತೀತಿ ಪತೇಸ್ಥ । ಉ. ೪-೧೨ । ಇತಿ ವಿಧೀಯಮಾನ ಇನಿಪ್ರತ್ಯಯೋ ಬಹುಲವಚನಾದಸ್ಮಾದಪಿ ಭವತಿ । ಟಿಲೋಪಶ್ಚ । ಸೌ ಪಥಿಮಥ್ಯೃಭುಕ್ಷಾಮಾತ್ । ಪಾ. ೭-೧-೮೫ । ಇತ್ಯಾತ್ವಂ । ಪ್ರತ್ಯಯಸ್ವರಃ । ಷಾಟ್ । ಸಹ ಅಭಿಭವೇ । ಛಂದಸಿ ಸಹ ಇತಿ ಕೇವಲಾದಪಿ ಣ್ವಿಃ । ಷತ್ವಂ ಛಾಂದಸಂ । ದ್ಯುಮತೇ । ದ್ಯೌರ್ದೀಪ್ತಿರಸ್ಮಿನ್ನಸ್ತೀತಿ ದ್ಯುಮಾನ್ । ಸ್ವಾದಿಷ್ವಸರ್ವನಾಮಸ್ಥಾನ ಇತಿ ಪದಸಂಜ್ಞಾಯಾಂ ದಿವ ಉದಿತ್ಯುತ್ವಂ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಇಂದ್ರ**—ಇಂದ್ರನೇ । **ತ್ವಂ**—ನೀನು । **ಸತ್ಯಃ**—ಸರ್ವೋತ್ಕೃಷ್ಟನು । **ಏತಾನ್**—ಶತ್ರುಗಳನ್ನು (ಎದುರಿಸಿ) । **ಧೃಷ್ಣುಃ**—ತಿರಸ್ಕರಿಸುವವನು (ಅವಮಾನಮಾಡುವವನು) । **ತ್ವಂ**—ನೀನು । **ಋಭುಕ್ಷಾಃ**—ಋಭುಗಳಿಗೆ ಅಧಿಪತಿಯು, ಋಭುಗಳಲ್ಲಿ ವಾಸಿಸುವನು, ಅಥವಾ ಸರ್ವಶ್ರೇಷ್ಠನು **ನರ್ಯಃ**—ಮನುಷ್ಯರಿಗೆ ಹಿತಕರನು । **ತ್ವಂ**—ನೀನು । **ಷಾಟ್**—ಶತ್ರುಗಳನ್ನು ಸೋಲಿಸುವವನು । **ವೃಜನೇ**—(ಯುದ್ಧದಲ್ಲಿ ಶತ್ರುಗಳಿಗೆ) ಹಿಂಸಾಯುಕ್ತವಾದ । **ಪೃಕ್ಷೇ**—(ವೀರರಿಂದ ಯುದ್ಧಾರ್ಥವಾಗಿ) ಪ್ರಾಪ್ತವ್ಯವಾದ । **ಆಣೌ**—ಯುದ್ಧದಲ್ಲಿ । **ದ್ಯುಮತೇ**—ತೇಜಸ್ವಿಯಾದ । **ಯೂನೇ**—ತರುಣನಾದ । **ಕುತ್ಸಾಯ**—ಕುತ್ಸನಿಗೆ । **ತ್ವಂ**—ನೀನು । **ಸಚಾ**—ಸಹಾಯಕನಾಗಿ । **ಶುಷ್ಣಂ**—ಶೋಷಣೆ ಮಾಡತಕ್ಕ ಶುಷ್ಣನೆಂಬ ಅಸುರನನ್ನು । **ಅಹನ್**—ವಧಮಾಡಿದ

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಸರ್ವೋತ್ಕೃಷ್ಟನು ಮನುಷ್ಯರಿಗೆ ಹಿತವನ್ನುಂಟುಮಾಡುವವನು ಋಭುಗಳಿಗೆ ಅಧಿಪತಿಯು, ಶತ್ರುಗಳಿಗೆ ಅವಮಾನವಮಾಡುವವನು ಮತ್ತು ಅಪಜಯ ಮಾಡುವವನು ಘೋರನಾದ ಯುದ್ಧದಲ್ಲಿ ತೇಜಸ್ವಿಯಾದ, ತರುಣನಾದ ಕುತ್ಸನಿಗೆ ಸಹಾಯಕನಾಗಿ ಶುಷ್ಣನೆಂಬ ರಾಕ್ಷಸನನ್ನು ವಧೆಮಾಡಿದ

## English Translation

Indra, you are the best of all beings, the assailer and humiliator (of your enemies), the chief of Ribhus, the friend of man, the subduer of enemies, you aided the young and illustrious Kutsa and killed Sushna, in the deadly and close-faught battle.

॥ ವಿಶೇಷವಿಷಯಗಳು ॥

**ಸತ್ಯಃ ಸತ್ಸು ಭವಃ, ಸರ್ವೋತ್ಕೃಷ್ಟಃ** ಎಲ್ಲರಿಗಿಂತಲೂ ಹೆಚ್ಚಾದವನು. ಪೂಜ್ಯನಾದವನು.

**ಋಭುಕ್ಷಾಃ—ಋಭೂಣಾಮಧಿಪತಿಃ, ತೇಷು ಕೃತನಿವಾಸಃ, ಅಥವಾ ಮಹನ್ನಾಮೈತತ್, ಮಹಾನ್ ಪ್ರವೃದ್ಧೋಽಸಿ.** ಋಭುಗಳೆಂದರೆ ಬಹಳ ಬುದ್ಧಿಯುಳ್ಳವರು ಅವರಲ್ಲಿ ಶ್ರೇಷ್ಠನು ಎಂದು ಅರ್ಥವು ಅಥವಾ ಬುದ್ಧಿಯುಳ್ಳವರಿಗೆ ಅಷ್ಟುಮಟ್ಟಿನ ಬುದ್ಧಿ ಶಕ್ತಿಯನ್ನು ಅನುಗ್ರಹಿಸುವವನು, ಪೂಜ್ಯವಾದ ಸ್ಥಾನದಲ್ಲಿ ವಾಸಮಾಡುವವನು ಎಂದು ಅರ್ಥವು. ಅಥವಾ ಎಲ್ಲರಿಗಿಂತಲೂ ಮಿಗಿಲಾದವನು ಎಂದು ಅರ್ಥವು ಅಭ್ವಃ ಮೊದಲಾದ ಇಪ್ಪತ್ತೈದು ಮಹನ್ನಾಮಗಳ ಮಧ್ಯದಲ್ಲಿ ಈ ಶಬ್ದವು ಪಠಿತವಾಗಿರುವುದು (ನಿ ೩-೧೩)

**ಧೃಷ್ಣುಃ—ಧರ್ಷಯಿತಾ, ತಿರಸ್ಕರ್ತಾ** ಶತ್ರುಗಳನ್ನು ಎದುರಾಳಾಗಿ ನಿಂತು ಹಿಮ್ಮೆಟ್ಟಿಸುವವನು ಓಡಿಸುವವನು

**ನರ್ಯಃ—ನೃಭ್ಯೋ ಹಿತಃ** ಮನುಷ್ಯರಿಗೆ ಹಿತವನ್ನು ಉಂಟುಮಾಡುವವನು

**ಷಾಟ್—ಶತ್ರೂಣಾಮಭಿಭವಿತಾ** ಶತ್ರುಗಳನ್ನು ಓಡಿಸುವವನು

**ಶುಷ್ಣಂ—ಶೋಷಯಿತಾರಮೇತತ್ಸಂಜ್ಞಮಸುರಂ** ಎಲ್ಲರನ್ನೂ ಹಿಂಸೆಮಾಡುವ ಸ್ವಭಾವದಿಂದ ದಿದ್ದ ಶುಷ್ಣನೆಂದು ಹೆಸರುಳ್ಳ ರಾಕ್ಷಸನೆಂದು ಅರ್ಥವು ಕುತ್ಸನೆಂಬವನಿಗೆ ಇಂದ್ರನು ಸಹಾಯಕನಾಗಿ ಲೋಕಕ್ಕೆ ತೊಂದರೆಯನ್ನು ಉಂಟುಮಾಡುತ್ತಿದ್ದ ಶುಷ್ಣನೆಂಬ ಅಸುರನನ್ನು ಯುದ್ಧದಲ್ಲಿ ನಾಶಮಾಡಿರುವನೆಂದು ಇತಿಹಾಸದಲ್ಲಿ ಪ್ರಸಿದ್ಧವಾಗಿರುವುದು.

**ವೃಜನೇ—ವರ್ಜನಯುಕ್ತೇ ಸಂಗ್ರಾಮೇ ಹಿ ವೀರಾಃ ಪುರುಷಾಃ ವಜ್ಯಂತೇ ಹಿಂಸ್ಯಂತೇ,** ಶೂರರಾದವರು ತಮ್ಮ ಶರೀರದ ಹಂಗು ತೊರೆದು ತಮ್ಮ ಪ್ರಾಣಗಳನ್ನು ಕಳೆದುಕೊಳ್ಳುವ ಸನ್ನಿವೇಶವಾದ ಯುದ್ಧವೆಂದು ವೃಜನಶಬ್ದಕ್ಕೆ ಅರ್ಥವಾಗಿರುತ್ತದೆ ಇಲ್ಲಿ ವೃಜನ ಶಬ್ದವು ಹಿಂಸೆಯು ಉಂಟಾಗುವ ಕ್ರಿಯಾವಾಚಕವಾಗಿರುವುದು ಆದ್ದರಿಂದಲೇ ಈ ಶಬ್ದವನ್ನು ಯುದ್ಧವೆಂಬ ಅರ್ಥದಲ್ಲಿ ಸಾಯಣರು ಉಪಯೋಗಿಸಿರುವರು

**ಆಣೌ--ಸಂಗ್ರಾಮೇ,** ಯುದ್ಧದಲ್ಲಿ. ಪೃಕ್ಷೇ. ವೃಜನೇ ಎಂಬ ಶಬ್ದಗಳೂ ಈ ಶಬ್ದವೂ ಕೂಡ ಸಂಗ್ರಾಮವಾಚಕವೆಂದು ಸಾಯಣರು ಹೇಳಿರುವರು. ಯಾಸ್ಕರು ಸಂಗ್ರಾಮ ಪರವಾದ ನಲವತ್ತಾರು ಶಬ್ದಗಳಲ್ಲಿ ಪೃಕ್ಷೇ, ಆಣೌ ಎಂಬ ಶಬ್ದಗಳನ್ನು (ನಿ. ೩-೯) ಪಾಠಮಾಡಿ ಇರುವರು. ಸ್ಕಂದ ಸ್ವಾಮಿಗಳು **ತ್ವಂ ಶುಷ್ಣಂ ವೃಜನೇ ಪೃಕ್ಷ ಆಣೌ** ಎಂಬ ಈ ಋಕ್ಕನ್ನೇ ಉದಾಹರಿಸಿ ಆಣೌ ಎಂಬ ಪದವು ಸಂಗ್ರಾಮಪರವಾಗಿರುವುದು ಎಂದು ಹೇಳಿರುತ್ತಾರ

॥ ವ್ಯಾಕರಣಪ್ರಕ್ರಿಯಾ ॥

**ಋಭುಕ್ಷಾಃ**--ಋಭುರಿತಿ ಮೇಧಾವಿನಾಮ (ಬುದ್ಧಿಯುಳ್ಳವ) ಉರು ವಿಸ್ತೀರ್ಣಂ ಭಾತಿ (ಹೆಚ್ಚಾಗಿ ಪ್ರಕಾಶಿಸುವವನು) ಅಥವಾ. ಋತೇನ, ಯಜ್ಞೇನ ಭಾತಿ, ಭವತೀತಿ ವಾ ಋಭುಃ (ಯಜ್ಞದಿಂದ ಪ್ರಕಾಶಿಸುವವನು. ಅಥವಾ ಆಗುವವನು, ಇರುವವನು) ಉರುಶಬ್ದ ಅಥವಾ ಋತಶಬ್ದವು ಉಪಪದವಾಗಿರುವಾಗ ಭಾ ದೀಪ್ತೌ ಅಥವಾ ಭೂ ಸತ್ತಾಯಾಂ ಧಾತುವಿಗೆ **ಮೃಗಯ್ವಾದಯಶ್ಚ** (ಉ ಸೂ ೧-೩೮) ಎಂಬುದರಿಂದ ಕುಪ್ರತ್ಯಯ ಪೂರ್ವಪದಕ್ಕೆ ಋಭಾವವೂ ಅದರಿಂದಲೇ ನಿಪಾತಿತವಾಗುತ್ತದೆ ಋಭು ಎಂದು ರೂಪವಾಗುತ್ತದೆ ಕ್ಷಯತಿರೈಶ್ವರ್ಯಕರ್ಮಾ

(ಕ್ಷಿ ಎಂಬ ಧಾತುವು ಐಶ್ವರ್ಯಾರ್ಥದಲ್ಲಿದೆ) ತೇಷಾಂ **ಈಷ್ಟೇ** ಇತಿ ಋಭುಕ್ಷಾಃ ಅಥವಾ ಕ್ಷಿ ನಿವಾಸಗತ್ಯೋಃ ಧಾತು. ಋಭುಷು ನಿವಸತಿ ಇತಿ ಋಭುಕ್ಷಾಃ **ಪತೇಸ್ಥ** (ಉ ಸೂ ೪-೪೫೭) ಎಂಬುದರಿಂದ ವಿಧಿಸಲ್ಪಡುವ ಇನಿಪ್ರತ್ಯಯವು ಉಣಾದಿಯ ಬಹುಲಗ್ರಹಣದಿಂದ ಈ ಧಾತುವಿಗೂ ಬರುತ್ತದೆ ಟಿಲೋಪವೂ ಅದರಿಂದಲೇ ಸಿದ್ಧವಾಗುತ್ತದೆ ಋಭುಕ್ಷಿನ್ ಶಬ್ದವಾಗುತ್ತದೆ ಸು ಪರದಲ್ಲಿರುವಾಗ **ಪಥಿಮಥ್ಯೃಭುಕ್ಷಾಮಾತ್** (ಪಾ ಸೂ ೭-೧-೮೫) ಎಂಬುದರಿಂದ ಆತ್ವಬರುತ್ತದೆ **ಇತೋತ್ ಸರ್ವನಾಮಸ್ಥಾನೇ** (ಪಾ ಸೂ ೭-೧ ೮೬) ಎಂಬುದರಿಂದ ಇಕಾರಕ್ಕೆ ಅಕಾರಾದೇಶ ಬರುತ್ತದೆ ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ ಋಭುಕ್ಷಾಃ ಎಂದು ರೂಪವಾಗುತ್ತದೆ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ

**ಧೃಷ್ಣುಃ**—ಞಿಧೃಷಾ ಪ್ರಾಗಲ್ಭ್ಯೇ ಧಾತು **ತ್ರಸಿಗೃಧಿ ಧೃಷಿ**-(ಪಾ ಸೂ ೩-೨-೧೪೦) ಎಂಬುದರಿಂದ ಕ್ನು ಪ್ರತ್ಯಯ, ಕಿತ್ತಾದುದರಿಂದ **ಲಘೂಪಧಗುಣ** ಬರುವುದಿಲ್ಲ ಷಕಾರದ ಪರದಲ್ಲಿ ನಕಾರ ಬಂದುದರಿಂದ ಣತ್ವ ಧೃಷ್ಣುಃ ಎಂದು ರೂಪವಾಗುತ್ತದೆ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ನರ್ಯಃ**—ನರಾಯ ಹಿತಃ ನರ್ಯಃ **ತಸ್ಮೈ ಹಿತಂ** ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿ ಚ** ಸೂತ್ರದಿಂದ ಅಕಾರಲೋಪ **ಯತೋಽನಾವಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಷಾಟ್**—ಷಹ ಅಭಿಭವೇ ಧಾತು **ಛಂದಸಿ ಸಹಃ** (ಪಾ ಸೂ ೩-೨-೬೩) ಎಂಬುದರಿಂದ ಕೇವಲನಾದ ಸಹಧಾತುವಿಗೂ ಣ್ವಿಪ್ರತ್ಯಯ ಬರುತ್ತದೆ ಣಿತ್ತಾದುದರಿಂದ **ಅತ ಉಪಧಾಯಾಃ** ಎಂಬುದರಿಂದ ಉಪಧಾವೃದ್ಧಿ ಬರುತ್ತದೆ ಸಾಹ್ ಎಂದಿರುವಾಗ ಷತ್ವವು ಛಾಂದಸವಾಗಿ ಬರುತ್ತದೆ ಸು ಪರವಾಗಿರುವಾಗ **ಹೋಢಃ** ಸೂತ್ರದಿಂದ ಢತ್ವ **ಜಲಾಂ ಜಶೋಂತೇ** ಸೂತ್ರದಿಂದ ಜಶ್ತ್ವ **ವಾವಸಾನೇ** ಎಂಬುದರಿಂದ ಚರ್ತ್ವ ಷಾಟ್ ಎಂದು ರೂಪವಾಗುತ್ತದೆ

**ದ್ಯುಮತೇ**—ದ್ಯೌಃ ದೀಪ್ತಿಃ ಅಸ್ಮಿನ್ ಅಸ್ತೀತಿ ದ್ಯುಮಾನ್ **ತದಸ್ಯಾಸ್ತಿ**—ಸೂತ್ರದಿಂದ ಮತುಪ್ **ಸ್ವಾದಿಷ್ವಸರ್ವನಾಮಸ್ಥಾನೇ** ಎಂಬುದರಿಂದ ಪದಸಂಜ್ಞಾ ಇರುವಾಗ **ದಿವ ಉತ್** (ಪಾ ಸೂ ೬-೧-೧೩೧) ಎಂಬುದರಿಂದ ದಿವ್ ಶಬ್ದಕ್ಕೆ ಉತ್ವ ಯಣಾದೇಶ ದ್ಯುಮತ್ ಶಬ್ದವಾಗುತ್ತದೆ ಸು ಪರದಲ್ಲಿರುವಾಗ ಉಗಿತ್ತಾದುದರಿಂದ **ಉಗಿದಚಾಂ** ಸೂತ್ರದಿಂದ ನುಮಾಗಮ **ಅತ್ವಸಂತಸ್ಯ ಚಾಽಧಾತೋಃ** ಸೂತ್ರದಿಂದ ದೀರ್ಘ **ಹಲ್ ಙ್ಯಾಭ್ಯೋ** ಸೂತ್ರದಿಂದ ಸುಲೋಪ, **ಸಂಯೋಗಾಂತಸ್ಯ ಲೋಪಃ** ಸೂತ್ರದಿಂದ ತಲೋಪ ದ್ಯುಮಾನ್ ಎಂದು ರೂಪವಾಗುತ್ತದೆ **ಹ್ರಸ್ವನುಡ್ಭ್ಯಾಂ ಮತುಪ್** (ಪಾ ಸೂ ೬-೧-೧೭೬) ಎಂಬುದರಿಂದ ಮತುಪಿಗೆ ಉದಾತ್ತಸ್ವರ ಬರುತ್ತದೆ

**ಅಹನ್**—ಹನ ಹಿಂಸಾಗತ್ಯೋಃ ಧಾತು **ಲಙ್** ಪ್ರಥಮಪುರುಷ ಏಕವಚನದಲ್ಲಿ ತಿಪ್ **ಇತಶ್ಚ** ಸೂತ್ರದಿಂದ ಇಕಾರಲೋಪ **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್ **ಹಲ್ ಙ್ಯಾಭ್ಯೋ** ಸೂತ್ರದಿಂದ ಅಪೃಕ್ತವಾದ ತಿಗೆ ಲೋಪ, ಅಂಗಕ್ಕೆ ಅಡಾಗಮ. ಅಹನ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ತ್ವಂ ಹ ತ್ಯದಿಂದ್ರ ಚೋದೀಃ ಸಖಾ ವೃತ್ರಂ ಯದ್ವಜ್ರಿನ್ವೃಷ-
ಕರ್ಮನ್ನುಭ್ನಾಃ ।
ಯದ್ಧ ಶೂರ ವೃಷಮಣಃ ಪರಾಚೈರ್ವಿ ದಸ್ಯೂಂರ್ಯೋನಾ-
ವಕೃತೋ ವೃಥಾಷಾಟ್ ॥ ೪ ॥

॥ ಪದಪಾಠಃ ॥

ತ್ವಂ । ಹ । ತ್ಯತ್ । ಇಂದ್ರ । ಚೋದೀಃ । ಸಖಾ । ವೃತ್ರಂ । ಯತ್ । ವಜ್ರಿನ್ ।
ವೃಷಽಕರ್ಮನ್ । ಉಭ್ನಾಃ ॥
ಯತ್ । ಅ । ಶೂರ । ವೃಷಽಮನಃ । ಪರಾಚೈಃ । ವಿ । ದಸ್ಯೂನ್ । ಯೋನೌ ।
ಅಕೃತಃ । ವೃಥಾಷಾಟ್ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಹ ತ್ವಂ ಖಲು ಸಖಾ ಕುತ್ಸಸ್ಯ ಸಹಾಯಃ ಸನ್ ತ್ಯತ್ತತ್ಪ್ರಸಿದ್ಧಂ ಧನಂ ಜಯಲಕ್ಷಣಂ ಯಶೋ ವಾ ಚೋದೀಃ । ಪ್ರೇರಿತವಾನ್ । ಅಕಾರ್ಷೀರಿತ್ಯರ್ಥಃ । ಹೇ ವೃಷಕರ್ಮನ್ ವೃಷ್ಟ್ಯುದಕಸೇಚನರೂಪಕರ್ಮೋಪೇತ ವಜ್ರಿನ್ ವಜ್ರವನ್ನಿಂದ್ರ ವೃತ್ರಂ ಸರ್ವಸ್ಯ ಧನಸ್ಯಾವರೀತಾರಂ ಕುತ್ಸಸ್ಯ ಶತ್ರುಂ ಯದ್ಯದೋಭ್ನಾಃ ಆತುಭ್ನಾಃ ಅಹಿಂಸೀಃ । ಅಪಿ ಚ ಹೇ ಶೂರ ಶತ್ರೂಣಾಂ ಪ್ರೇರಕ ವೃಷಮಣಃ ಕಾಮಾಭಿವರ್ಷಕಮನಸ್ಕೇಂದ್ರ ವೃಥಾಷಾಟ್ ಅನಾಯಾಸೇನ ಶತ್ರೂಣಾಮಭಿಭವಿತಾ ತ್ವಂ ಯದ್ಧ ಯದಾ ಖಲು ಯೋನೌ ವೀರೈರ್ಮಿಶ್ರಣೀಯೇ ಸಂಗ್ರಾಮೇ ದಸ್ಯೂನ್ಕುತ್ಸಸ್ಯೋಪಕ್ಷಯಿತೄನನ್ಯಾನ್ ಶತ್ರೂನ್ಪರಾಚೈಃ ಪರಾಗಮನೈರ್ವ್ಯಕೃತಃ ಪರಾಙ್ಮುಖಾ ಯಥಾ ಭವಂತಿ ತಥಾ ವ್ಯಚ್ಛಿನಃ । ತದಾನೀಂ ಕುತ್ಸಃ ಸರ್ವಂ ಯಶಃ ಪ್ರಾಪ್ನೋದಿತ್ಯರ್ಥಃ ॥ ಚೋದೀಃ । ಚುದ ಪ್ರೇರಣೇ । ಲುಙಿ ನೇಟೀತಿ ಸಿಚಿ ವೃದ್ಧಿಪ್ರತಿಷೇಧಃ । ಉಭ್ನಾಃ । ಣಭ ತುಭ ಹಿಂಸಾಯಾಂ । ಕ್ರ್ಯಾದಿಕಃ । ಲಙಿ ಸಿಪಿ

**ತಲೋಪಶ್ಛಾಂದಸಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಪರಾಚೈರಿತ್ಯೇತದವ್ಯಯಂ । ನೀಚೈರುಚ್ಚೈರಿತಿವದಿತಿ ಭಟ್ಟಭಾಸ್ಕರಮಿಶ್ರಃ । ಪರಾಚೈಃ ಪರಾಂಚನ್ನೈರಿತಿ ನಿರುಕ್ತಂ । ನಿ. ೧೧-೨೫ । ದಸ್ಯೂನ್ । ದೀರ್ಘಾದಟಿಸಮಾನಪಾದ ಇತಿ ನಕಾರಸ್ಯ ರುತ್ವಂ । ಅತ್ರಾನುನಾಸಿಕಃ ಪೂರ್ವಸ್ಯ ತು ವೇತ್ಯೂಕಾರಸ್ಯ ಸಾನುನಾಸಿಕತಾ । ಅಕೃತಃ । ಕೃತೀ ಛೇದನೇ । ಲಙಿ ಸಿಪಿ ತುದಾದಿತ್ವಾಚ್ಛಪ್ರತ್ಯಯಃ । ಆಗಮಾನುಶಾಸನಸ್ಯಾನಿತ್ಯತ್ವಾತ್ ಶೇ ಮುಚಾದೀನಾಮಿತಿ ನುಮಾಗಮಸ್ಯಾಭಾವಃ । ಶಸ್ಯ ಙಿತ್ತ್ವಾ-ದ್ಗುಣಾಭಾವಃ ॥**

॥ ಪ್ರತಿಪದಾರ್ಥ ॥

(ಹೇ) **ವೃಷಕರ್ಮನ್**—ವೃಷ್ಟಿಯನ್ನುಂಟುಮಾಡುವ ಕರ್ಮಯುಕ್ತನಾದ । **ವಜ್ರಿನ್** - ವಜ್ರಾಯುಧವುಳ್ಳ, (ಇಂದ್ರನೇ) । **ವೃತ್ರಂ**—(ಕುತ್ಸಶತ್ರುವಾದ) ವೃತ್ರಾಸುರನನ್ನು । **ಯತ್**—ಯಾವಾಗ । **ಉಭ್ನಾಃ** ಓಡಿಸಿದೆಯೋ । (ಮತ್ತು) **ಶೂರ**--ಶೂರನಾದ । **ವೃಷಮಣ—**ಇಷ್ಟಾರ್ಥವನ್ನು ಕೊಡುವ ಮನಸ್ಸುಳ್ಳ ಇಂದ್ರನೇ । **ವೃಥಾಷಾಟ್**—ಅನಾಯಾಸವಾಗಿ ಶತ್ರುಗಳನ್ನು ಪರಾಜಯಗೊಳಿಸುವ ನೀನು । **ಯದ್ಧ**—ಯಾವಾಗ । **ಯೋನೌ**—ನೀರರು ಸೇರುವ ಯುದ್ಧದಲ್ಲಿ । **ದಸ್ಯೂನ್** - ಕುತ್ಸನ ಇತರ ಶತ್ರುಗಳನ್ನು । **ಪರಾಚೈಃ**—ಪರಾಗಮನದಿಂದ । **ವಿ ಅಕೃತಃ**- ಕತ್ತರಿಸಿದೆಯೋ (ಸಂಹಾರ ಮಾಡಿದೆಯೋ) । (**ತದಾ—**ಆಗ) । **ಇಂದ್ರ**—ಎಲೈ ಇಂದ್ರನೇ । **ತ್ವಂ ಹ**—ನೀನೇ । **ಸಖಾ**—(ಕುತ್ಸನಿಗೆ) ಸಹಾಯಕನಾಗಿ । **ತ್ಯತ್**—ಆದನ್ನು (ಪ್ರಸಿದ್ಧವಾದ ಜಯರೂಪವಾದ ಯಶಸ್ಸನ್ನು) । **ಚೋದೀಃ** ಪ್ರೇರಿಸಿದೆ(ಉಂಟುಮಾಡಿದ) ॥

॥ ಭಾವಾರ್ಥ ॥

ಹೇ ಇಂದ್ರ, ನೀನು ವೃಷ್ಟಿಕಾರಕನು, ವಜ್ರಾಯುಧವುಳ್ಳವನು ಈಪ್ಸಿತವಾದದ್ದನ್ನು ಕೊಡುವವನು, ಅನಾಯಾಸವಾಗಿ ಶತ್ರುಗಳನ್ನು ಸೋಲಿಸುವವನು ನೀನೇ ವೃತ್ರಾಸುರನನ್ನೂ ಅವನ ಸಹಾಯಕರಾದ, ಇತರ ಕುತ್ಸನ ಶತ್ರುಗಳನ್ನೂ ಪರಾಜಯಗೊಳಿಸಿ, ಕುತ್ಸನಿಗೆ ಕೀರ್ತಿಯುಂಟಾಗುವಂತೆ ಮಾಡಿದೆ.

## English Translation.

Sender of rain and weilder of thunderbolt, you verily animated him to acquire such renown as that which you acquired when you slew Vritra, munificent hero, you easily conquer your foes, you put to flight the Dasyus in battle

॥ ವಿಶೇಷವಿಷಯಗಳು ॥

**ತ್ಯತ್ —ತತ್, ಪ್ರಸಿದ್ಧಂ ಧನಂ, ಜಯಲಕ್ಷಣಂ ಯಶೋ ವಾ** । ಲೋಕದಲ್ಲಿ ಬಹಳಮಟ್ಟಿಗೆ ಎಲ್ಲರಿಗೂ ಉಪಯೋಗಕರವಾಗಿರುವ ದ್ರವ್ಯವು ಎಂದು ಅರ್ಥವು. ಅಥವಾ ಪ್ರವ್ಯದಂತೆ ಸಂಪಾದಿಸಲು ತಕ್ಕದ್ದಾದ ಕೀರ್ತಿಯು

**ವೃಷಕರ್ಮನ್—ವೃಷ್ಟ್ಯುದಕಸೇಚನಕರ್ಮೋಪೇತ.** ಮಳೆಯ ನೀರನ್ನು ಸುರಿಸುವ ಕೆಲಸವನ್ನು ಮಾಡುವವನು.

**ವೃಷಮಣಃ—ಕಾಮಾಭಿವರ್ಷಕಮನಸ್ಕ** ಅವರವರ ಅಭಿಲಾಷೆಗಳನ್ನು ನೆರವೇರಿಸುವ ಮನಸ್ಸುಳ್ಳವನು.

**ವೃಥಾಷಾಟ್—ಅನಾಯಾಸೇನ ಶತ್ರೂಣಾಮಭಿಭವಿತಾ.** ಕೊಂಚವೂ ಆಯಾಸಪಡದಂತೆ ಶತ್ರುಗಳನ್ನು ನಿಗ್ರಹಮಾಡುವವನು ಎಂದು ಅರ್ಥವು.

**ಪರಾಚೈಃ—ಪರಾಗಮನೈಃ** ಹಿಂದಕ್ಕೆ ಹೋಗುವುದು ಹಿಮ್ಮೆಟ್ಟುವುದು. ಭಟ್ಟಭಾಸ್ಕರರು **ಪರಾಚೈಃ ಇತ್ಯೇತದವ್ಯಯಂ ನೀಚೈರುಚ್ಚೈರಿತಿವತ್** ಎಂದು ಅರ್ಥಮಾಡಿರುವರು ಯಾಸ್ಕರು **ಪರಾಚೈಃ ಪರಾಂಚನೈಃ** (ನಿ ೧೧-೨೫) ಎಂದು ಅರ್ಥವನ್ನು ವಿವರಿಸಿ ಇರುತ್ತಾರೆ

॥ ವ್ಯಾಕರಣಪ್ರಕ್ರಿಯಾ ॥

**ಚೋದೀಃ**— ಚುದ ಪ್ರೇರಣೇ ಧಾತು ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ **ಇತಶ್ಚ** ಸೂತ್ರದಿಂದ ಇಕಾರಲೋಪ. ಚ್ಲಿ ಪ್ರಾಪ್ತವಾದಾಗ **ಚ್ಲೇಃ ಸಿಚ್** ಸೂತ್ರದಿಂದ ಅದಕ್ಕೆ ಸಿಜಾದೇಶ **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಅದಕ್ಕೆ ಇಡಾಗಮ **ಅಸ್ತಿ ಸಿಚೋಽಪೃಕ್ತೇ** (ಪಾ. ಸೂ ೭-೩-೯೬) ಎಂಬುದರಿಂದ ಅಪೃಕ್ತವಾದ ಸಿಪ್ಪಿಗೆ ಈಡಾಗಮ **ನೇಟಿ** (ಪಾ ಸೂ ೭-೨-೪) ಇಡಾದಿಯಾದ ಸಿಚ್ ಪರದಲ್ಲಿರುವಾಗ ವೃದ್ಧಿ ಬರುವುದಿಲ್ಲ ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ ಬರುವುದಿಲ್ಲ **ಇಟ ಈಟಿ** (ಪಾ ಸೂ. ೮-೨-೨೮) ಎಂಬುದರಿಂದ ಸಿಚ್ಚಿಗೆ ಲೋಪ **ಪುಗಂತಲಘೂಪಧಸ್ಯ** ಸೂತ್ರದಿಂದ **ಲಘೂಪಧೆಗೆ** ಗುಣ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಉಭ್ನಾಃ—ಣಭ** ತುಭ ಹಿಂಸಾಯಾಂ ಧಾತು ಕ್ರ್ಯಾದಿ ಲಙ್ ಮಧ್ಯಮಪುರುಷದ ಸಿಪ್ಪಿನ ಇಕಾರಕ್ಕೆ ಲೋಪ, **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. ಅಪಿತ್ ಸಾರ್ವಧಾತುಕವಾದುದರಿಂದ ಙಿತ್ತಾಗುತ್ತದೆ. ಆದುದರಿಂದ ಲಘೂಪಧಗುಣ ಬರುವುದಿಲ್ಲ ಧಾತುವಿನ ತಕಾರಕ್ಕೆ ಛಾಂದಸವಾಗಿ ಲೋಪಬರುತ್ತದೆ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಸೂತ್ರದಿಂದ ಅಡಾಗಮ ಬರುವುದಿಲ್ಲ ಯತ್ ಎಂದು ಹಿಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಬರುವುದಿಲ್ಲ ಆಗ ವಿಕರಣದ ಸ್ವರ ಬರುತ್ತದೆ ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ಉಭ್ನಾಃ ಎಂದು ರೂಪವಾಗುತ್ತದೆ

**ಪರಾಚೈಃ—**ಭಟ್ಟಭಾಸ್ಕರಮಿಶ್ರರು ನೀಚೈಃ ಉಚ್ಚೈಃ ಎಂಬುದು ಹೇಗೆ ಅವ್ಯಯವೋ ಹಾಗೆ ಪರಾಚೈಃ ಎಂಬುದೂ ಅವ್ಯಯವೆಂದು ವಿವರಿಸಿರುತ್ತಾರೆ ಪರಾಚೈಃ ಪರಾಂಚನೈಃ (ನಿರು ೧೧-೨೫) ಎಂದು ನಿರುಕ್ತದಲ್ಲಿ ಹೇಳಿದೆ.

**ದಸ್ಯೂನ್—ದೀರ್ಘಾದಟಿ ಸಮಾನಪಾದೇ** (ಪಾ ಸೂ ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ **ಅತ್ರಾನುನಾಸಿಕಃ ಪೂರ್ವಸ್ಯತುವಾ** (ಪಾ-ಸೂ-೮-೩-೨) ಸೂತ್ರದಿಂದ ರುವಿನ ಪೂರ್ವದಲ್ಲಿರುವ ಉಕಾರಕ್ಕೆ ಅನುನಾಸಿಕತ್ವ ಬರುತ್ತದ.

**ಆಕೃತಃ**—ಕೃತೀ ಛೇದನೇ ಧಾತು. ಲಙ್‌ನ ಸಿಪ್ಪಿಗೆ **ಇತಶ್ಚ** ಎಂಬುದರಿಂದ ಇಕಾರ ಲೋಪ **ತುದಾದಿಭ್ಯಶಃ** ಎಂಬುದರಿಂದ ಶ ವಿಕರಣ, ಮುಚಾದಿಯಲ್ಲಿ ಸೇರಿದರೂ **ಆಗಮಶಾಸ್ತ್ರಸ್ಯ ಅನಿತ್ಯತ್ವಂ** ಎಂಬ ವಚನದಿಂದ **ಶೇಮುಚಾದೀನಾಂ** (ಪಾ ಸೂ ೭-೧-೫೯) ಎಂಬುದರಿಂದ ನುಮಾಗಮ ಬರುವುದಿಲ್ಲ ವಿಕರಣವು ಅಪಿತ್ತಾದುದರಿಂದ **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ತಾಗುತ್ತದೆ ಆದುದರಿಂದ ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ ಲಙ್‌ನಿಮಿತ್ತವಾಗಿ ಅಂಗಕ್ಕೆ ಅಡಾಗಮ ಅಕೃತಃ ಎಂದು ರೂಪವಾಗುತ್ತದೆ. ವ್ಯವಹಿತವಾದರೂ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಅಡಾಗಮ ಉದಾತ್ತವಾದುದರಿಂದ ಅಕೃತಃ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ

**ವೃಥಾಷಾಟ್**—ಹಿಂದೆ ಪ್ರಕ್ರಿಯಾ ತೋರಿಸಿದೆ. ಸಮಾಸವಾದಾಗ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ ॥ ೪ ॥



॥ ಸಂಹಿತಾಪಾಠಃ ॥

ತ್ವಂ ಹ ತ್ಯದಿಂದ್ರಾರಿಷಣ್ಯನ್ದೃಳ್ಹಸ್ಯ ಚಿನ್ಮರ್ತಾನಾಮಜುಷ್ಟೌ ।
ವ್ಯ೧ಸ್ಮದಾ ಕಾಷ್ಠಾ ಅರ್ವತೇ ವರ್ಘನೇವ ವಜ್ರಿಞ್ಛ್ನಥಿಹ್ಯ-
ಮಿತ್ರಾನ್ ॥ ೫ ॥

। ಪದಪಾಠಃ ।

ತ್ವಂ । ಹ । ತ್ಯತ್ । ಇಂದ್ರ । ಅರಿಷಣ್ಯನ್ । ದೃಳ್ಹಸ್ಯ । ಚಿತ್ । ಮರ್ತಾನಾಂ । ಅಜುಷ್ಟೌ ॥
ವಿ । ಅಸ್ಮತ್ । ಆ । ಕಾಷ್ಠಾಃ । ಅರ್ವತೇ । ವಃ । ಘನಾಽಇವ । ವಜ್ರಿನ್ । ಶ್ನಥಿಹಿ । ಅಮಿತ್ರಾನ್ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಹ ತ್ವಂ ಖಲು ತ್ಯತ್ ತಸ್ಯ ದೃಳ್ಹಸ್ಯ ಚಿತ್ ದೃಢಸ್ಯ ಕಸ್ಯಚಿದಪ್ಯರಿಷಣ್ಯನ್ ರೇಷಣಮನಿಚ್ಛನ್ ಏವಂಸ್ವಭಾವೋ ಭವಸಿ । ದೇವತಾತ್ವೇನಾನುಗ್ರಹೀತೃತ್ವಾತ್ । ತಥಾಪಿ ಮರ್ತಾನಾಂ ಸ್ತೋತೄಣಾಮಸ್ಮಾಕಂ ಶತ್ರುಭಿರಜುಷ್ಟಾವಪ್ರೀತೌ ಸತ್ಯಾಮಸ್ಮದರ್ವತೇಽಸ್ಮದೀಯಾಶ್ವಾಯ ಗಂತುಂ ಕಾಷ್ಠಾ ದಿಶ ಆ ಸಮಂತಾತ್ ವಿ ವಃ । ವಿವೃತಾಃ ಕುರು । ಯಥಾ ಸರ್ವಾಸು ದಿಕ್ಷ್ವಸ್ಮದೀಯಾ ಅಶ್ವಾಃ ಪ್ರತಿರೋಧಮಂತರೇಣ ಗಚ್ಛಂತಿ ತಥಾ ಕುರ್ವಿತ್ಯರ್ಥಃ । ಕಿಂಚ ತತ್ರತ್ಯಾನಮಿತ್ರಾನ್ ಹೇ ವಜ್ರಿನ್ವಜ್ರವನ್ನಿಂದ್ರ ಘನೇವ ಘನೇನ ಕಠಿನೇನ ಪರ್ವತೇನೇವ ವಜ್ರೇಣ ಶ್ನಥಿಹಿ । ಶ್ನಥಯ । ಜಹೀತ್ಯರ್ಥಃ । ಯದ್ವಾ । ಮರ್ತಾನಾಂ ಮನುಷ್ಯಾಣಾಂ ಮಧ್ಯೇ ಯಸ್ಮಿನ್ಕಸ್ಮಿಂಶ್ಚಿತ್ತ್ವನಾಪ್ರೀತೌ ಸತ್ಯಾಂ ತಸ್ಯ ಶತ್ರೋರ್ದೃಢಸ್ಯಾಪ್ಯರಿಷಣ್ಯನ್ ರೇಷಣಂ ಹಿಂಸನಮನಿಚ್ಛನ್ವರ್ತಸೇ । ಯಸ್ಮಿಂಸ್ತು ಕುತ್ಸಾದೌ ಪ್ರೀತಿರಸ್ತಿ ತಸ್ಯ ಶತ್ರುವಧಂ ಚಕೃಷೇ । ಅತಸ್ತ್ವ ಪ್ರಿಯಾಣಾಮಸ್ಮಾಕಮರ್ವತ ಇತ್ಯಾದಿ ಪೂರ್ವವತ್ ॥ ತ್ಯತ್ । ಸುಪಾಂ ಸುಲುಗಿತಿ ಷಷ್ಠ್ಯಾ ಲುಕ್ । ಅರಿಷಣ್ಯನ್ । ರಿಷ್ಟಶಬ್ದಾತ್ ಕ್ಯಚಿ ದುರಸ್ಯುರ್ದ್ರವಿಣಸ್ಯುರ್ವೃಷಣ್ಯತಿ ರಿಷಣ್ಯತಿ । ಪಾ. ೭-೪-೩೬ । ಇತಿ ರಿಷಣ್ಭಾವೋ ನಿಪಾತ್ಯತೇ । ನಞ್ಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ಅಸ್ಮತ್ । ಪೂರ್ವವತ್ ಷಷ್ಠ್ಯಾಲುಕ್ । ಅರ್ವತೇ ಅರ್ವಣಸ್ತ್ರಸಾವನಞ ಇತಿ ನಕಾರಸ್ಯ ತಕಾರಾದೇಶಃ । ವನಿಪ್ಪಪೌ ಪಿತ್ತ್ವಾದನುದಾತ್ತೌ । ಪರಿಶೇಷಾದ್ಧಾತುಸ್ವರಃ । ಘನೇವ । ಮೂರ್ತೌ ಘನಃ । ಪಾ. ೩-೩-೭೭ । ಇತಿ ಕಾಠಿನ್ಯೇ ಗಮ್ಯಮಾನೇ ಹಂತೇರಪ್ಪ್ರತ್ಯಯಾಂತೋ ನಿಪಾತ್ಯತೇ । ಶ್ನಥಿಹಿ । ಶ್ನಥ್ಯ ಹಿಂಸಾರ್ಥಃ । ಣ್ಯಂತಾಲ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ ॥ ೪ ॥

॥ ಪ್ರತಿಪದಾರ್ಥ ॥

ಇಂದ್ರ—ಇಂದ್ರನೇ । ತ್ವಂ ಹ -ನೀನಾದರೋ । ದೃಳ್ಹಸ್ಯ- ದೃಢನಾದ । ತ್ಯತ್ ಚಿತ್— ಯಾವ ನೊಬ್ಬನಿಗೂ । ಅರಿಷಣ್ಯನ್—ಹಿಂಸೆಮಾಡಲು ಇಚ್ಛಿಸುವವನಲ್ಲ । (ತಥಾಪಿ —ಹಾಗಾದರೂ) । ಮರ್ತಾನಾಂ ಸ್ತೋತೃಗಳಾದ ನಮಗೆ । ಅಜುಷ್ಟೌ—(ಶತ್ರುಗಳಿಂದ) ಅಪ್ರೀತಿಯುಂಟಾದಲ್ಲಿ । ಅಸ್ಮತ್ ನಮ್ಮ । ಅರ್ವತೇ—ಅಶ್ವಕ್ಕೆ (ಹೋಗಲು) । ಕಾಷ್ಠಾಃ--ದಿಕ್ಕುಗಳನ್ನು । ಆ (ಎಲ್ಲಾ ಕಡೆಗಳಲ್ಲಿಯೂ) ಸುತ್ತಲೂ । ವಿ ವಃ—ತೆರೆದಿಡು । (ಕಿಂಚ - ಮತ್ತೂ) । ವಜ್ರಿನ್--ವಜ್ರಾಯುಧವುಳ್ಳ ಇಂದ್ರನೇ । ಅಮಿತ್ರಾನ್—(ಆ ದಿಕ್ಕುಗಳಲ್ಲಿರುವ ನಮ್ಮ) ಶತ್ರುಗಳನ್ನು । ಘನೇವ—ಕಠಿನವಾದ ಪರ್ವತದಂತೆ ಇರುವ ವಜ್ರಾಯುಧದಂತೆ । ಶ್ನಥಿಹಿ—(ವಧಮಾಡು) (ವಜ್ರದಿಂದ) ಉರುಳಿಸು । [ಅಥವಾ ಇಂದ್ರ—ಇಂದ್ರನೇ । ತಂ ಹ—ನೀನಾದರೋ । ಮರ್ತಾನಾಂ --ಮನುಷ್ಯರಲ್ಲಿ (ಯಾರ ವಿಷಯದಲ್ಲಿಯಾದರೂ) । ಅಜುಷ್ಟೌ -(ನಿನಗೆ) ಅಪ್ರೀತಿಯುಂಟಾದಲ್ಲ । ತ್ಯತ್—ಅವನ ಶತ್ರುವಿನ ವಿಷಯದಲ್ಲಿ । ದೃಳ್ಹಸ್ಯ ಚಿತ್ --ದೃಢನಾಗಿದ್ದರೂ । ಅರಿಷಣ್ಯನ್ --ಹಿಂಸಿಸಲು ಇಚ್ಛೆಯಿಲ್ಲದವನು । (ತಥಾಪಿ—ಹಾಗಿದ್ದಾಗ್ಯೂ) । ಮರ್ತಾನಾಂ —ಸ್ತೋತೃಗಳಾದ । ಅಸ್ಮತ್- ನಮ್ಮ । ಅರ್ವತೇ--ಅಶ್ವಕ್ಕೆ (ಅಶ್ವಗಳು ಸಂಚರಿಸಲು) । ಕಾಷ್ಠಾಃ—ದಿಕ್ಕುಗಳನ್ನು । ಆ —ಸುತ್ತಲೂ । ವಿ ವಃ--ತೆರೆದಿಡು ಇತ್ಯಾದಿ] ॥

॥ ಭಾವಾರ್ಥ ॥

ಎಲೈ ಇಂದ್ರನೇ, ದೃಢಚಿತ್ತನಾದ ಯಾವನೊಬ್ಬ ಮನುಷ್ಯನಿಗೂ ಹಿಂಸೆ ಮಾಡದಿರುವುದು ಅಥವಾ ಮನುಷ್ಯರಲ್ಲಿ ಯಾರಾದರೂ ನಿನ್ನ ಅಪ್ರೀತಿಗೊಳಗಾಗಿದ್ದಾರೆ, ಅಂತಹ ಮನುಷ್ಯರು ದೃಢಚಿತ್ತವುಳ್ಳವರಾದರೂ, ಅವರ ಶತ್ರುಗಳಿಗೆ ಹಿಂಸೆ ಮಾಡದಿರುವುದೂ ನಿನ್ನ ಸ್ವಭಾವ ಆದರೂ ನಿನ್ನ ಸ್ತೋತೃಗಳಾದ ನಮಗೆ ಶತ್ರುಗಳಿಂದ ಭಯ ಬಂದಾಗ, ಎಲೈ ವಜ್ರಿಯೇ, ನಮ್ಮ ಅಶ್ವಗಳು ಎಲ್ಲ ದಿಕ್ಕುಗಳಲ್ಲಿಯೂ ಓಡಾಡುವಂತೆ ಅನುಕೂಲಪಡಿಸು ಮತ್ತು ಅಲ್ಲಿರಬಹುದಾದ ನಮ್ಮ ಶತ್ರುಗಳನ್ನು, ವಜ್ರದಿಂದ ಕಠಿನವಾದ ಪರ್ವತಗಳನ್ನು ಭೇದಿಸುವಂತೆ, ನಾಶಮಾಡು

English Translation

Indra, you who are unwilling to harm any resolute mortal, set open all the quarters of the horizon to the horses of us who praise you when we are exposed to the aversion of our enemies, and wielder of the thunderbolt, demolish our foes as with a club

॥ ವಿಶೇಷ ವಿಷಯಗಳು ॥

**ಅರಿಷಣ್ಯನ್ –ರೇಷಣಮನಿಚ್ಛನ್** ಹಿಂಸೆಯನ್ನು ಮಾಡಲು ಇಚ್ಛೆಯಿಲ್ಲದವನು

**ಮರ್ತಾನಾಂ—ಸ್ತೋತೄಣಾಂ** ಹೊಗಳತಕ್ಕ, ಸ್ತುತಿಮಾಡತಕ್ಕ ಮನುಷ್ಯರು,

**ವಿ ವಃ- ವಿವೃತಾಃ ಕುರು । ಯಥಾ ಸರ್ವಾಸು ದಿಕ್ಷು ಅಸ್ಮದೀಯಾಃ ಅಶ್ವಾಃ ಪ್ರತಿರೋಧಮಂತರೇಣ ಗಚ್ಛಂತಿ ತಥಾ ಕುರು.** ಎಲ್ಲಾ ದಿಕ್ಕುಗಳಲ್ಲಿಯೂ ಯಾವ ತಡೆಯೂ ಇಲ್ಲದ ಹಾಗೆ ನಮ್ಮ ಕುದುರೆಗಳು ತಿರುಗಾಡುವ ಹಾಗೆ ಮಾಡು

॥ ವ್ಯಾಕರಣಪ್ರಕ್ರಿಯಾ ॥

**ತ್ಯೆತ್** -ಷಷ್ಠೀ ಏಕವಚನ ಪರದಲ್ಲಿರುವಾಗ **ಸುಪಾಂ ಸುಲುಕ್**—ಸೂತ್ರದಿಂದ ಷಷ್ಠಿಗೆ ಲುಕ್

**ಅರಿಷಣ್ಯನ್**—ರೇಷಣಂ ಆತ್ಮನಃ ಇಚ್ಛತಿ ರಿಷಣ್ಯತಿ ರಿಷ್ಟ ಶಬ್ದದಮೇಲೆ **ಸುಪ ಆತ್ಮನಃ ಕ್ಯಚ್** ಎಂಬುದರಿಂದ ಕ್ಯಚ್ ವಿವಕ್ಷಾಮಾಡಿದಾಗ **ದುರಸ್ಯು ದ್ರವಿಣಸ್ಯುರ್ವೃಷಣ್ಯತಿ ರಿಷಣ್ಯತಿ** (ಪಾ ಸೂ ೭-೪-೩೬) ಎಂಬುದರಿಂದ ರಿಷಣ್ ಎಂಬ ಸ್ವರೂಪವು ನಿಪಾತಿತವಾಗುತ್ತದೆ ರಿಷಣ್ಯತಿ ಇತಿ ರಿಷಣ್ಯನ್ ರಿಷಣ್ಯ ಎಂಬ ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ ನ ರಿಷಣ್ಯನ್ ಅರಿಷಣ್ಯನ್ ನಞಸಮಾಸವಾದಾಗ **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ. ೬-೨-೨) ಸೂತ್ರದಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ

**ಅಸ್ಮತ್**—ಅಸ್ಮಚ್ಛಬ್ದದಮೇಲೆ ಷಷ್ಠೀ ಏಕವಚನವಿರುವಾಗ **ಸುಪಾಂ ಸುಲುಕ್**—ಸೂತ್ರದಿಂದ ಲುಕ್

**ಅರ್ವತೇ**—ಋಧಾತುವಿಗೆ **ಅನ್ಯೇಭ್ಯೋಽಪಿದೃಶ್ಯತೇ** ಎಂಬುದರಿಂದ ವನಿಪ್ ಪ್ರತ್ಯಯ ವನಿಪ್ ಪರದಲ್ಲಿರುವಾಗ ಧಾತುವಿಗೆ ಗುಣ ಅರ್ವನ್ ಶಬ್ದವಾಗುತ್ತದೆ ಚತುರ್ಥೀ ಏಕವಚನಪರದಲ್ಲಿರುವಾಗ **ಅರ್ವಣಸ್ತ್ರ**-

**ಸಾವನೆಷಾಃ** (ಪಾ ಸೂ. ೬-೪-೧೨೭) ಎಂಬುದರಿಂದ ನಕಾರಕ್ಕೆ ತಕಾರಾದೇಶ ಅರ್ವತೇ ಎಂದು ರೂಪವಾಗುತ್ತದೆ. ವನಿಪ್‌ಪ್ರತ್ಯಯ ಜೇ ಸುಪ್ ವಿಭಕ್ತಿಯು **ಅನುದಾತ್ತೌಸುಪ್ಪಿತೌ** ಎಂಬುದರಿಂದ ಅನುದಾತ್ತಗಳಾಗುವುದರಿಂದ ಪರಿಶೇಷದಿಂದ ಧಾತುಸ್ವರ ಉಳಿಯುತ್ತದೆ.

**ಘನೇವ--ಮೂರ್ತೌ ಘನಃ** (ಪಾ ಸೂ ೩-೩-೭೭) ಎಂಬುದರಿಂದ ಕಾಠಿಣ್ಯವು ತೋರುತ್ತಿರುವಾಗ ಹನ್ ಧಾತುವಿಗೆ ಅಪ್‌ಪ್ರತ್ಯಯಾಂತವಾಗಿ ನಿಪಾತಿತವಾಗಿದೆ

**ಶ್ನಥಿಹಿ**—ಶ್ನಥ ಹಿಂಸಾಯಾಂ ಧಾತು. ಪ್ರಯೋಜಕವ್ಯಾಪಾರ ತೋರುತ್ತಿರುವಾಗ **ಹೇತುಮತಿ ಚ** ಸೂತ್ರದಿಂದ ಣಿಚ್. ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಅದಕ್ಕೆ ಹಿ ಆದೇಶ. **ಕರ್ತರಿ ಶಪ್** ಸೂತ್ರದಿಂದ ಪ್ರಾಪ್ತವಾದ ಶಪ್ಪಿಗೆ **ಬಹುಲಂ ಛಂದಸಿ** ಎಂಬುದರಿಂದ ಲುಕ್, ಶ್ನಥಿಹಿ ಎಂದು ರೂಪವಾಗುತ್ತದೆ. ಅತಿಜಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಸೂತ್ರದಿಂದ ನಿಘಾತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ತ್ವಾಂ ಹ ತ್ಯದಿಂದ್ರಾರ್ಣಸಾತೌ ಸ್ವರ್ಮೀಳ್ಹೇ ನರ ಆಜಾ ಹವಂತೇ ।
ತವ ಸ್ವಧಾವ ಇಯಮಾ ಸಮರ್ಯ ಊತಿರ್ವಾಜೇಷ್ವತಸಾಯ್ಯಾ ಭೂತ್ ॥ ೬ ॥

॥ ಪದಪಾಠಃ ॥

**ತ್ವಾಂ । ಹ । ತ್ಯತ್ । ಇಂದ್ರ । ಅರ್ಣಽಸಾತೌ । ಸ್ವಃಽಮೀಳ್ಹೇ । ನರಃ । ಆಜಾ । ಹವಂತೇ ।**
**ತವ । ಸ್ವಧಾಽವಃ । ಇಯಂ । ಆ । ಸಽಮರ್ಯೇ । ಊತಿಃ । ವಾಜೇಷು । ಅತಸಾಯ್ಯಾ । ಭೂತ್ ॥ ೬ ॥**

|| ಸಾಯಣಭಾಷ್ಯಂ ||

ಹೇ ಇಂದ್ರ ಅರ್ಣಸಾತಾವರ್ಣಸಾಂ ಗಂತ್ರೀಣಾಂ ಯುದ್ಧೇ ಪ್ರವೃತ್ತಾನಾಂ ಪುರುಷಾಣಾಂ ಸಾತಿರ್ಲಾಭೋ ಯಸ್ಮಿನ್ ಸ್ವರ್ಮೀಳ್ಹೇ। ಮೀಳ್ಹಮಿತಿ ಧನನಾಮ। ಸುಷ್ಠ್ವರಣೀಯಂ ಧನಂ ಯಸ್ಮಿನ್। ಏವಂಭೂತ ಆಜಾ ಆಜೌ ಸಂಗ್ರಾಮೇ ತ್ಯತ್ತಂ ಪ್ರಸಿದ್ಧಂ ತ್ವಾಮೇವ ನರೋ ಯೋದ್ಧು-ಕಾಮಾಃ ಪುರುಷಾಃ ಸಹಾಯಾರ್ಥಂ ಹವಂತೇ। ಆಹ್ವಯಂತಿ। ಯದ್ವಾ। ಅರ್ಣಸ ಉದಕಸ್ಯ ಸಾತಿ-ರ್ಲಾಭೋ ಯಸ್ಮಿನ್ವೃತ್ರಾದಿಯುದ್ಧೇ ತಸ್ಮಿನ್ನಿತ್ಯರ್ಥಃ। ವೃಷ್ಟಿನಿರೋಧಕೇನ ವೃತ್ರೇಣ ಸಹ ವರ್ಷ-ಣಾರ್ಥಂ ತವ ಯುಧ್ಯದ್ಧಂ ತತ್ರ ಸ್ತೋತಾರಸ್ತ್ವಾಂ ಪ್ರೋತ್ಸಾಹಯಂತೀತಿ ಭಾವಃ। ಯಸ್ಮಾದೇವಂ ತಸ್ಮಾತ್ ಹೇ ಸ್ವಧಾವೋ ಹೇ ಅನ್ನವನ್ ಬಲವನ್ನೇಂದ್ರ ಸಮರ್ಯೇ ಸಂಗ್ರಾಮೇ ತವ ಸಂಬಂಧಿನೀಯ-ಮೂತಿಸ್ತ್ವದೀಯಮಿದಂ ರಕ್ಷಣಂ ಆ ಅಸ್ಮದಾಭಿಮುಖ್ಯೇನ ಭೂತ್। ಭವತು। ವಾಜೇಷು ಸಂಗ್ರಾ-ಮೇಷು ಯೈಷೋತಿರತಸಾಯ್ಯಾ ಯೋದ್ಧೃಭಿಃ ಪ್ರಾಪ್ತವ್ಯಾ ಭವತಿ॥ ತ್ಯತ್। ಸುಪಾಂ ಸುಲುಗಿತಿ ದ್ವಿತೀಯಾಯಾ ಲುಕ್। ಅರ್ಣಸಾತೌ। ಋ ಗತೌ। ಬಹುಲವಚನಾದೌಣಾದಿಕೋ ನಪ್ರತ್ಯಯಃ। ಷಣು ದಾನ ಇತ್ಯಸ್ಮಾದ್ಭಾವೇ ಕ್ತಿನಿ ಜನಸನಖನಾಮಿತ್ಯನುನಾಸಿಕಸ್ಯಾತ್ವಂ। ಬಹುವ್ರೀಹೌ ಪೂರ್ವಪದ-ಪ್ರಕೃತಿಸ್ವರತ್ವಂ। ಯದ್ವಾ। ಉದಕೇ ನುಟ್ಚ। ಉ. ೪-೧೯೬। ಇತ್ಯರ್ತೇರಸುನ್ಪ್ರತ್ಯಯೋ ನುಡಾಗ-ಮಶ್ಚ। ಪೀವೋಪವಸನಾದೀನಾಂ ಛಂದಸಿ ಲೋಪೋ ವಕ್ತವ್ಯಃ। ಮ. ೬-೩-೧೦೯-೬। ಇತಿ ಸಲೋಪಃ। ನಿತ್ತ್ವಾದಾದ್ಯುದಾತ್ತತ್ವಂ। ಪೂರ್ವವದ್ಬಹುವ್ರೀಹಿಸ್ವರಃ। ಸ್ವರ್ಮೀಳ್ಹೇ। ಸ್ವರ್ ಶಬ್ದೋ ನ್ಯಙ್ಸ್ವರೌ ಸ್ವರಿತಾವಿತಿ ಸ್ವರಿತಃ। ಬಹುವ್ರೀಹಿಸ್ವರೇಣ ಸ ಏವ ಶಿಷ್ಯತೇ। ಆಜಾ। ಸುಪಾಂ ಸುಲುಗಿತಿ ಸಪ್ತಮ್ಯಾ ಡಾದೇಶಃ। ಸ್ವಧಾವಃ। ಮತುವಸೋರುರಿತಿ ಮತುಪೋ ರುತ್ವಂ। ಅತಸಾಯ್ಯಾ। ಅತ ಸಾತತ್ಯಗಮನೇ। ಔಣಾದಿಕಃ ಸಾಯ್ಯಪ್ರತ್ಯಯಃ। ತಸ್ಯಾಡಾಗಮಶ್ಚ। ಆಗಮಾನುದಾತ್ತತ್ವೇ ಪ್ರತ್ಯಯಾದ್ಯುದಾತ್ತತ್ವಂ। ಭೂತ್। ಛಂದಸಿ ಲುಙ್‌ಲಙ್‌ಲಿಟ ಇತಿ ಪ್ರಾರ್ಥನಾಯಾಂ ಲುಙ್ ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ॥

|| ಪ್ರತಿಪದಾರ್ಥ ||

ಇಂದ್ರ—ಇಂದ್ರನೇ। ಅರ್ಣಸಾತೌ– ಹೊರಟಿರುವವರಿಗೆ (ಯುದ್ಧದಲ್ಲಿ ತೊಡಗಿರುವವರಿಗೆ) ಲಾಭ ಧಾಯಕವಾದ। ಸ್ವರ್ಮೀಳ್ಹೇ- ಪ್ರಯತ್ನಸಾಧ್ಯವಾದ ಧನವುಳ್ಳ। ಆಜಾ—ಸಂಗ್ರಾಮದಲ್ಲಿ। ತ್ಯತ್—(ಪ್ರಸಿದ್ಧನಾದ) ನಿನ್ನನ್ನೇ। ನರಃ—ಯುದ್ಧಾಪೇಕ್ಷಿಗಳಾದವರು। ಹವಂತೇ—(ಸಹಾಯಕ್ಕಾಗಿ) ಕರೆಯುತ್ತಾರ। [ಅಥವಾ ಅರ್ಣಸಾತೌ—ಉದಕ ಲಾಭವುಳ್ಳ (ವೃತ್ರಾದಿಗಳೊಡನೆ ನಡೆದ)। ಸ್ವರ್ಮೀಳ್ಹೇ—ಪ್ರಯತ್ನಸಾಧ್ಯನಾದ ಧನವುಳ್ಳ। ತವ--ನಿನ್ನ ಸಂಬಂಧವಾದ। ಆಜಾ—ಯುದ್ಧದಲ್ಲಿ। ತ್ಯತ್—ಆ (ಪ್ರಸಿದ್ಧನಾದ) ನಿನ್ನನ್ನು। ನರಃ—ಸ್ತೋತೃಗಳು। ಹವಂತೇ—ಪ್ರೋತ್ಸಾಹಿಸುತ್ತಾರೆ।] ಸ್ವಧಾವಃ -ಅನ್ನಯುಕ್ತನಾದ ಅಥವಾ ಬಲಿಷ್ಠನಾದ ಎಲೈ ಇಂದ್ರನೇ, । ವಾಜೇಷು—ಯುದ್ಧಗಳಲ್ಲಿ। ಅತಸಾಯ್ಯಾ—ಯೋದ್ಧೃಗಳಿಗೆ ನಿನ್ನಿಂದ ಯಾವ ರಕ್ಷಣೆಯು ಕೊಡಲ್ಪಡುವುದೋ। ಇಯಂ ಊತಿಃ—ಅಂತಹ ರಕ್ಷಣೆಯು। ಸಮರ್ಯೇ—ನಾವು ಮಾಡುವ ಯುದ್ಧದಲ್ಲಿಯೂ (ನಮಗೆ)। ಭೂತ್— ಆಗಲಿ (ಲಭಿಸಲಿ)

॥ ಭಾವಾರ್ಥ ॥

ಎಲೈ ಇಂದ್ರನೇ, ಅನೇಕ ಮನುಷ್ಯರಿಂದ ಧನಲಾಭಕ್ಕೋಸ್ಕರ ಮಾಡಲ್ಪಡುತ್ತಿರುವ ಯುದ್ಧದಲ್ಲಿ, ಮನುಷ್ಯರು ನಿನ್ನನ್ನು ಸಹಾಯಾರ್ಥಿಗಳಾಗಿ ಸ್ತುತಿಸುತ್ತಾರೆ. (ವೃಷ್ಟಿ ನಿರೋಧಕನಾದ ವೃತ್ರಾಸುರನೊಡನೆ ವೃಷ್ಟಿಯನ್ನುಂಟು ಮಾಡಲು ನೀನು ಮಾಡಿದ ಯುದ್ಧದಲ್ಲಿ ನಿನ್ನನ್ನು ಮನುಷ್ಯರು ಪ್ರೋತ್ಸಾಹಿಸುತ್ತಾರೆ) ಬಲಿಷ್ಠನಾದ ಇಂದ್ರನೇ, ನಿನ್ನ ರಕ್ಷಣೆಯು ಯುದ್ಧದಲ್ಲಿ ತೊಡಗಿರುವ ಎಲ್ಲ ಯೋದ್ಧೃಗಳಿಗೂ ಅತ್ಯಾವಶ್ಯಕ ಅಂತಹ ನಿನ್ನ ರಕ್ಷಣೆಯು ನಮಗೆ ಲಭಿಸಲಿ.

## English Translation

Men invoke you, such as you are in the thick-thronged and wealth bestowing conflict. O powerful Indra, may this succour ever be granted in war, worthy to be enjoyed by warriors in battle

॥ ವಿಶೇಷವಿಷಯಗಳು ॥

**ಅರ್ಣಸಾತೌ-- ಅರ್ಣಾನಾಂ ಗಂತೄಣಾಂ ಯುದ್ಧೇ ಪ್ರವೃತ್ತಾನಾಂ ಪುರುಷಾಣಾಂ ಸಾತಿರ್ಲಾಭೋ ಯಸ್ಮಿನ್ । ಅರ್ಣಸ ಉದಕಸ್ಯ ಸಾತಿರ್ಲಾಭೋ ಯಸ್ಮಿನ್ ।** ಯುದ್ಧದಲ್ಲಿ ಎಂದು ಅರ್ಥವು ವೃತ್ರನೆಂಬ ಅಸುರನು ಲೋಕಕ್ಕೆ ಮಳೆಯು ಆಗದೆ ಇರುವಂತೆ ಪ್ರತಿಬಂಧಕವನ್ನು ಮಾಡಿದಾಗ ಇಂದ್ರನು ಅವನೊಡನೆ ಯುದ್ಧವನ್ನು ಮಾಡಿ ಮಳೆಯು ಒರುವಂತೆ ಮಾಡಿದನು ಯುದ್ಧಕ್ಕಾಗಿ ಉದ್ಯುಕ್ತರಾದ ವೀರಪುರುಷರು ಸೇರುವ ಸನ್ನಿವೇಶವು ಯುದ್ಧವೆನಿಸಿರುವುದು ವೃತ್ರಾಸುರನೊಡನೆ ಇಂದ್ರನು ನಡಸಿದ ವ್ಯವಹಾರದ ಫಲವು ಉದಕಪ್ರಾಪ್ತಿಯಾಗಿರುವದರಿಂದ ಅಂತಹ ಯುದ್ಧದಲ್ಲಿ ಎಂದು ಅರ್ಥವು

**ಸ್ವಧಾವಃ—ಅನ್ನವನ್, ಬಲವನ್ ವಾ.** ಅನ್ನವನ್ನು ಅಥವಾ ಬಲವನ್ನು ಹೊಂದಿರುವ ಇಂದ್ರನು ಎಂದು ಅರ್ಥವು

**ಅತಸಾಯ್ಯಾ -- ಅನುಪಕ್ಷೀಣಾ, ಸತತಗಾಮಿನೀ ವಾ.** ಕೊಂಚವೂ ಕಡಿಮೆಯಾಗದಿರುವುದು ಅಥವಾ ಒಂದೇ ಸಮನಾಗಿ ನಡೆಯುತ್ತಿರುವುದು ಎಂಬುವುದಾಗಿ ಸ್ಕಂದಸ್ವಾಮಿಗಳು ಅರ್ಥಮಾಡಿರುವರು ಸಾಯಣಭಾಷ್ಯದಲ್ಲಿ ನಿನ್ನ ರಕ್ಷಣೆಯು ಯುದ್ಧ ಮಾಡುವ ನ್ಯಸಿಕರಿಂದ ಹೊಂದಲ್ಪಡುವುದು ಎಂದು (ಊತಿಃ ಅತಸಾಯ್ಯಾ ಯೋದ್ಧೃಭಿಃ ಪ್ರಾಪ್ತವ್ಯಾ ಭವತಿ) ಅರ್ಥವನ್ನು ವಿವರಿಸಿರುವರು

**ಸಮರ್ಯೇ—ಸಂಗ್ರಾಮೇ ಮರ್ಯೈಃ ಮರಣಧರ್ಮಿಭಿಃ ಸಹ ವರ್ತತೇ ಇತಿ ಸಮರ್ಯಃ** ಯುದ್ಧವು ರಣಃ, ವಿವಾಕ್. ಮೊದಲಾದ ನಲವತ್ತಾರು ಯುದ್ಧವಾಚಕಗಳಲ್ಲಿ ಈ ಪದವೂ (ನಿ ೩-೯) ಪಠಿತವಾಗಿರುವುದು

**ಸ್ವಮೀಳ್ಹೇ--ಮೀಳ್ಹಮಿತಿ ಧನನಾಮ ಸುಷ್ಠು ಅರಣೀಯಂ ಧನಂ ಯಸ್ಮಿನ್.** ಅಪೇಕ್ಷಿತವಾಗಿರುವ ಧನವು ಎಂದು ಅರ್ಥವು. ಮಘಂ, ರೇಕ್ಣಃ, ರಿಕ್ಥಂ, ಎಂಬ ಇಪ್ಪತ್ತೆಂಟು ಧನನಾಮಗಳಲ್ಲಿ ಮೀಳ್ಹಶಬ್ದವು

(ನಿ ೩-೯) ಪಠಿತವಾಗಿರುವುದು. ಮೀಳ್ಹುಂ ಮೀಳ್ಹಂ, ಎಂದು ಈ ಧನವಾಚಕವಾದ ಶಬ್ದವು ಉಕಾರಾಂತವಾಗಿಯೂ ಅಕಾರಾಂತವಾಗಿಯೂ ಇರುವುದು ನಿರುಕ್ತದಲ್ಲಿ ಉಕಾರಾಂತವಾಗಿ ಪಾಠಮಾಡಿರುವುದು ನಿರುಕ್ತವ್ಯಾಖ್ಯಾನದಲ್ಲಿ ಭಟ್ಟಭಾಸ್ಕರ ಮಿಶ್ರರು ಮಾಡಿರುವ ಭಾಷ್ಯದಲ್ಲಿ "ಮೀಳ್ಹುಷ್ಟಮ ಶಿವತಮ" ಎಂದು ಪಾಠವನ್ನು ಅಂಗೀಕರಿಸಿ ವ್ಯಾಖ್ಯಾನ ಮಾಡಿರುವರು " ರುದ್ರಸ್ಯ ಯೇ ಮೀಳ್ಹುಷಃ ಸಂತಿ ಪುತ್ರಾಃ" "ತಾಂ ಆ ರುದ್ರಸ್ಯ ಮೀಳ್ಹುಷಃ" ಎಂದು ಋಕ್ಸಂಹಿತಾ ಪಾಠದಲ್ಲಿ ಉಕಾರಾಂತವಾಗಿರುವುದು. ಆದ್ದರಿಂದ ಈ ಶಬ್ದವು ಉಕಾರಾಂತವಾಗಿರಬೇಕೆಂದು ಕೆಲವರು ಅಭಿಪ್ರಾಯ ಪಡುವರು ಇನ್ನೂ ಕೆಲವರು "ಮೀಳ್ವ್ಹಾಃ" "ಮೀಳ್ವ್ಹಾಂಸಂ" ಎಂದು ಸಕಾರಾಂತವೆಂದು ಈ ಶಬ್ದವನ್ನು ನಿರ್ಣಯ ಮಾಡಿರುತ್ತಾರೆ ಈ ಪ್ರಕಾರವಾದ ಭಿನ್ನಭಿನ್ನವಾದ ಅಭಿಪ್ರಾಯಗಳು ಇರುವ ಕಾರಣ ಅಕಾರಾಂತ ಮತ್ತು ಉಕಾರಾಂತವಾದ ಎಂಬ ಎರಡು ವಿಧವಾದ ಪಾಠವನ್ನೂ ಅಂಗೀಕರಿಸಿರುವರು ಎಂದು ತಿಳಿಯಬೇಕು.

॥ ವ್ಯಾಕರಣಪ್ರಕ್ರಿಯಾ ॥

**ತ್ಯತ್**—ತ್ಯತ್ ಅಮ್ ಎಂದಿರುವಾಗ **ಸುಪಾಂ ಸುಲುಕ್** ಸೂತ್ರದಿಂದ ಲುಕ್

**ಅರ್ಣಸಾತೌ** - ಋ ಗತೌ ಧಾತು. ಉಣಾದಿಸೂತ್ರ ಬಹುಲಗ್ರಹಣದಿಂದ ಉಣಾದಿಸಿದ್ಧವಾದ ನ ಪ್ರತ್ಯಯವು ಈ ಧಾತುವಿಗೂ ಬರುತ್ತದೆ ನ ಪರದಲ್ಲಿರುವಾಗ ಧಾತುವಿಗೆ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ **ರಷಾಭ್ಯಾಂ ಣೋ ನಃ ಸಮಾನಪದೇ** ಸೂತ್ರದಿಂದ ನಕಾರಕ್ಕೆ ಣತ್ವ ಅರ್ಣ ಎಂದಾಗುತ್ತದೆ. ಷಣು ದಾನೇ ಧಾತು ಇದಕ್ಕೆ ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ ಕಿತ್ತಾದುದರಿಂದ **ಜನಸನಖನಾಂ** (ಪಾ ಸೂ ೬-೪-೪೨) ಎಂಬುದರಿಂದ ಧಾತುವಿನ ನಕಾರಕ್ಕೆ ಆತ್ವ. ಅರ್ಣಾನಾಂ ಸಾತಿಃ ಯಸ್ಮಿನ್ ಅರ್ಣಸಾತಿ ತಸ್ಮಿನ್ ಅರ್ಣಸಾತೌ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರಃ ಬರುತ್ತದೆ ಅಥವಾ **ಉದಕೇ ನುಟ್ ಚ** (ಉ ಸೂ ೪ ೬೨೬) ಎಂಬುದರಿಂದ ಹಿಂದಿನಂತೆಯೇ ಋಧಾತುವಿಗೆ ಅಸುನ್ ಪ್ರತ್ಯಯ ಅದರೊಡನೆ ನುಡಾಗಮವೂ ಕೂಡ ಬರುತ್ತದೆ ಧಾತುವಿಗೆ ಗುಣ ಬಂದಾಗ **ಅರ್ಣಸ್** ಎಂದು ರೂಪವಾಗುತ್ತದೆ ಸಾತಿಃ ಎಂಬುದು ಹಿಂದಿನಂತೆಯೇ ಆಗುತ್ತದೆ ಸಮಾಸವಾದಾಗ (ಅರ್ಣಸಃ ಸಾತಿಃ ಯಸ್ಮಿನ್) **ಪೀವೋಪವಸನಾದೀನಾಂ ಛಂದಸಿ ಲೋಪೋ ವಕ್ತವ್ಯಃ** (ಪಾ ವಾ. ೬-೩-೧೦೯-೬) ಎಂಬುದರಿಂದ ಆ ಗಣದಲ್ಲಿ ಇದು ಸೇರಿರುವುದರಿಂದ ಸಲೋಪ ಬರುತ್ತದೆ ನಿತ್ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ (ಅರ್ಣಸ್) ಬರುತ್ತದೆ ಹಿಂದಿನಂತೇ ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ

**ಸ್ವರ್ಮೀಳ್ಹೇ**—ಸ್ವರ್ ಎಂಬುದು ಅವ್ಯಯ ಇದು **ನ್ಯಙ್ ಸ್ವರೌ ಸ್ವರಿತೌ** (ಫಿ ಸೂ. ೭೪) ಎಂಬ ಸೂತ್ರದಿಂದ ಸ್ವರಿತವಾಗುತ್ತದೆ ಸ್ವರ್ ಮೀಳಹಂ ಯಸ್ಮಿನ್ ಎಂದು ಬಹುವ್ರೀಹಿಯಲ್ಲಿ **ಬಹುವ್ರೀಹೌ** ಸೂತ್ರದಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ

**ಆಜಾ**—ಆಜಿ+ಟಾ ಎಂದಿರುವಾಗ **ಸುಪಾಂ ಸುಲುಕ್** ಸೂತ್ರದಿಂದ ಸಪ್ತಮೀ ವಿಭಕ್ತಿಗೆ ಡಾದೇಶ ಬರುತ್ತದೆ ಡಿತ್ತಾದುದರಿಂದ ಟಿಲೋಪ ಬಂದು ಆಜಾ ಎಂದು ರೂಪವಾಗುತ್ತದೆ.

**ಸ್ವಧಾವಃ**—ಸ್ವಧಾ ಅಸ್ಯ ಅಸ್ತಿ ಇತಿ ಸ್ವಧಾವಾನ್ **ತದಸ್ಯಾಸ್ತ್ಯ**-ಸೂತ್ರದಿಂದ ಮತುಪ್ ಸಂಬುದ್ಧಿಯಲ್ಲಿ **ಮತುವಸೋರುಃ ಸಂಬುದ್ಧೌ** (ಪಾ ಸೂ ೮-೩-೧) ಎಂಬುದರಿಂದ ಮತುಪಿಗೆ ರುತ್ವ. ಅಕಾರದ ಪರದಲ್ಲಿರುವುದ

ರಿಂದ **ಮಾದುಪಧಾಯಾಃ** ಸೂತ್ರದಿಂದ ಮತುಪಿನ ಮಕಾರಕ್ಕೆ ವಕಾರಾದೇಶ. ಸ್ವಧಾವರ್ ಎಂದಿರುವಾಗ **ಖರವಸಾನಯೋರ್ವಿಸರ್ಜನೀಯಃ** ಎಂಬುದರಿಂದ ಅವಸಾನದಲ್ಲಿ ವಿಸರ್ಗ ಬರುತ್ತದೆ. ಸ್ವಧಾವಃ ಎಂದು ರೂಪವಾಗುತ್ತದೆ

**ಆತಸಾಯ್ಯಾ—**ಅತ ಸಾತತ್ಯ ಗಮನೇ ಧಾತು. ಇದಕ್ಕೆ ಉಣಾದಿಸಿದ್ಧವಾದ ಸಾಯ್ಯ ಪ್ರತ್ಯಯ ಅದಕ್ಕೆ ಆಡಾಗಮವೂ ಬರುತ್ತದೆ. **ಆಗಮಾ ಅನುದಾತ್ತಾಃ** ಎಂದುದರಿಂದ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಸಕಾರೋತ್ತರಾಕಾರವು ಉದಾತ್ತವಾಗುತ್ತದೆ

**ಭೂತ್—**ಭೂ ಸತ್ತಾಯಾಂ ಧಾತು. ಪ್ರಾರ್ಥನಾರೂಪಾರ್ಥದಲ್ಲಿ **ಛಂದಸಿ ಲುಙ್‌ಲುಙ್‌ಲಿಟಃ** ಎಂಬುದರಿಂದ ಲುಙ್. ಪ್ರಥಮಪುರುಷ ಏಕವಚನದ ತಿಪ್ಪಿನ ಇಕಾರಕ್ಕೆ **ಇತಶ್ಚ** ಎಂಬುದರಿಂದ ಲೋಪ ಚ್ಲಿಗೆ ಪ್ರಾಪ್ತವಾದ ಸಿಚ್ಚಿಗೆ **ಗಾತಿಸ್ಥಾಘುಪಾ**-ಸೂತ್ರದಿಂದ ಲುಕ್ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಮಾಙ್ ಸಂಬಂಧವಿಲ್ಲದಿದ್ದರೂ ಅಡಾಗಮ ಬರುವುದಿಲ್ಲ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೬ ॥



॥ ಸಂಹಿತಾಪಾಠಃ ॥

ತ್ವಂ ಹ ತ್ಯದಿಂದ್ರ ಸಪ್ತ ಯುಧ್ಯನ್ಪುರೋ ವಜ್ರಿನ್ಪುರುಕುತ್ಸಾಯ ದರ್ದಃ ।
ಬರ್ಹಿರ್ನ ಯತ್ಸುದಾಸೇ ವೃಥಾ ವರ್ಗಂಹೋ ರಾಜನ್ವರಿವಃ ಪೂರವೇ ಕಃ ॥ ೭ ॥

॥ ಪದಪಾಠಃ ॥

ತ್ವಂ । ಹ । ತ್ಯತ್ । ಇಂದ್ರ । ಸಪ್ತ । ಯುಧ್ಯನ್ । ಪುರಃ । ವಜ್ರಿನ್ । ಪುರುಽಕುತ್ಸಾಯ । ದರ್ದರಿತಿ ದರ್ದಃ ।

**ಬರ್ಹಿಃ । ನ । ಯತ್ । ಸುऽದಾಸೇ । ವೃಥಾ । ವರ್ಕ್ । ಅಂಹೋಃ । ರಾಜನ್ । ವರಿವಃ । ಪೂರವೇ । ಕರಿತಿ ಕಃ ॥ ೭ ॥**

॥ ಸಾಯಣಭಾಷ್ಯಂ ॥

ಹೇ ವಜ್ರಿನ್ ವಜ್ರವನ್ನಿಂದ್ರ ಪುರುಕುತ್ಸಾಯೈತತ್ಸಂಜ್ಞಾಯ ಋಷಯೇ ಯುಧ್ಯನ್ ತದೀಯ-ಶತ್ರುಭಿಃ ಸಹ ಯುದ್ಧಂ ಕುರ್ವಾಣಸ್ತ್ವಮೇವ ತ್ಯತ್ ತಾಃ ಸಪ್ತ ಪುರಃ ತದೀಯಾನಿ ಸಪ್ತಸಂಖ್ಯಾನಿ ನಗರಾಣಿ ದರ್ದಃ । ವ್ಯದಾರಯಃ । ಅಭೈತ್ಸೀರಿತ್ಯರ್ಥಃ । ಅಪಿ ಚ ಸುದಾಸ ಏತತ್ಸಂಜ್ಞಾಯ ರಾಜ್ಞೇಽಂ-ಹೋರೇತತ್ಸಂಜ್ಞಸ್ಯಾಸುರಸ್ಯ ಸಂಬಂಧಿ ಯದ್ಧನಮಸ್ತಿ ತದ್ವೃಥಾನಾಯಾಸೇನ ಬರ್ಹಿರ್ನ ಬರ್ಹಿರಿವ ವರ್ಕ್ । ಅವೃಣಕ್ । ಅಚ್ಛಿನ ಇತ್ಯರ್ಥಃ । ತದನಂತರಂ ಪೂರವೇ ತ್ವಾಂ ಹವಿಷಾ ಪೂರಯತೇ ತಸ್ಮೈ ಸುದಾಸೇ ಹೇ ರಾಜನ್ ಸ್ವಾಮಿನ್ನಿಂದ್ರ ವರಿವೋ ಧನಂ ಕಃ । ಅಕಾರ್ಷೀಃ ॥ ತ್ಯತ್ । ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ । ದರ್ದಃ । ದೄ ವಿದಾರಣೇ । ಅಸ್ಮಾದ್ಯಙ್ಲುಗಂತಾಲ್ಲಙಿ ಸಿಪ್ಯದಾದಿವಚ್ಚೇತಿ ವಚನಾ-ಚ್ಛಪೋ ಲುಕ್ । ಹಲ್ಙ್ಯಾಬ್ಭ್ಯ ಇತಿ ಸಲೋಪಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಸುದಾಸೇ । ಶೋಭನಂ ದದಾತೀತಿ ಸುದಾಃ । ಅಸುನ್ । ಸುದಾಃ ಕಲ್ಯಾಣದಾನಃ । ನಿ. ೨-೨೪ । ಇತಿ ಯಾಸ್ಕಃ । ವರ್ಕ್ । ವೃಜೀ ವರ್ಜನೇ । ಲಙಿ ಸಿಪಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಲಘೂ-ಪಧಗುಣೇ ಪೂರ್ವವತ್ಸಲೋಪಃ । ಅಡಭಾವಶ್ಚ । ಚೋಃ ಕುರಿತಿ ಕುತ್ವಂ । ಕಃ । ಡುಕೃಞ್ ಕರಣೇ । ಲುಙಿ ಸಿಪಿ ಮಂತ್ರೇ ಘಸೇತಿ ಚ್ಲೇರ್ಲುಕ್ । ಪೂರ್ವವತ್ಸಲೋಪಾಡಭಾವೌ ॥

॥ ಪ್ರತಿಪದಾರ್ಥ ॥

**ವಜ್ರಿನ್ ಇಂದ್ರ**—ವಜ್ರಧಾರಿಯಾದ ಎಲೈ ಇಂದ್ರನೇ । **ಪುರುಕುತ್ಸಾಯ**—ಪುರುಕುತ್ಸನೆಂಬ ಋಷಿಗೆ (ಅವನ ಪರವಾಗಿ) । **ಯುಧ್ಯನ್**—ಅವನ ಶತ್ರುಗಳೊಡನೆ ಯುದ್ಧಮಾಡಿದ । **ತ್ವಂ**—ನೀನು । **ತ್ಯತ್**—ಆ (ಅವನ) । **ಸಪ್ತಪುರಃ**—ಏಳು ಪಟ್ಟಣಗಳನ್ನು । **ದರ್ದಃ**—ಸೀಳಿದೆ (ನಾಶಮಾಡಿದ ಮತ್ತೂ) । **ಸುದಾಸೇ**—ಸುದಾಸನೆಂಬ ರಾಜನಿಗೆ (ಅವನಿಗೋಸ್ಕರ) । **ಅಂಹೋಃ**—ಅಂಹಸ್ ಎಂಬ ಅಸುರನ । **ಯತ್ (ತತ್)**—ಯಾವ (ಧನವಿತ್ತೋ ಅದನ್ನು) । **ವೃಥಾ**—ಅನಾಯಾಸವಾಗಿ । **ಬರ್ಹಿರ್ನ**—ಸಮಿತ್ತಿನಂತೆ । **ವರ್ಕ್**—ಕತ್ತರಿಸಿದೆ (ನಾಶಮಾಡಿದೆ) । **ಪೂರವೇ**—(ನಿನ್ನನ್ನು) ಹವಿಸ್ಸಿನಿಂದ ತುಂಬುತ್ತಿದ್ದ (ಹವಿಸ್ಸನ್ನು ಅರ್ಪಿಸುತ್ತಿದ್ದ ಸುದಾಸನಿಗೆ) । **ರಾಜನ್**—ಸ್ವಾಮಿಯೇ (ಇಂದ್ರನೇ) । **ವರಿವಃ**—ಧನವನ್ನು । **ಕಃ**—ಉಂಟುಮಾಡಿದ ॥

॥ ಭಾವಾರ್ಥ ॥

ವಜ್ರಧಾರಿಯಾದ ಎಲೈ ಇಂದ್ರನೇ, ಪುರುಕುತ್ಸನೆಂಬ ಋಷಿಯ ಪರನಾಗಿ ಯುದ್ಧಮಾಡಿ, ಅವನ ಶತ್ರುಗಳ ಏಳು ಪುರಗಳನ್ನು ನಾಶಮಾಡಿದೆ ನಿನಗೆ ಹವಿಸ್ಸನ್ನು ಅರ್ಪಿಸುತ್ತಿದ್ದ ಸುದಾಸನೆಂಬ ರಾಜನಿಗಾಗಿ ಅವನ ಶತ್ರುವಾದ

ಅಂಹಸ್ಸೆಂಬ ಅಸುರನನ್ನು ಒಂದು ದರ್ಭೆಯನ್ನು ತುಂಡುಮಾಡುವಷ್ಟು ಸುಲಭವಾಗಿ ಸೋಲಿಸಿ, ಅವನ ಧನವನ್ನು ಸುದಾಸನಿಗೆ ಕೊಡಿಸಿದೆ.

## English Translation

India, weildei of the thunderbolt, fighting on behalf of Puiukutsa, you overtuined the seven cities; O king, you did cut off foi Sudas the wealth of Amhas, as if it had been a tuft of sacred grass and gave it to him, who pleased you with oblations.

|| ವಿಶೇಷವಿಷಯಗಳು ||

**ಪುರುಕುತ್ಸಾಯ**—ಪುರುಕುತ್ಸನೆಂಬ ಒಬ್ಬ ಋಷಿಯು **ಏತತ್ಸಂಜ್ಞಾಯ ಋಷಯೇ** ಈ ಹೆಸರಿನಿಂದ ಪ್ರಸಿದ್ಧನಾದ ಒಬ್ಬ ಋಷಿಗೋಸ್ಕರವಾಗಿ ಇಂದ್ರನು ಅವನ ಶತ್ರುಗಳೊಡನೆ ಯುದ್ಧವನ್ನು ಮಾಡಿ ಅವರ ಏಳು ನಗರಗಳನ್ನೂ ನಾಶಮಾಡಿರುವನು

**ಸುದಾಸೇ—ಏತತ್ಸಂಜ್ಞಾಯ ರಾಜ್ಞೇ. ಶೋಭನಂ ದದಾತೀತಿ ಸುದಾಃ, ಸುದಾಃ ಕಲ್ಯಾಣದಾನಃ (ನಿ. ೨–೨೪) ಇತಿ ಯಾಸ್ಕಃ** ಸುದಾ ಎಂಬ ಹೆಸರುಳ್ಳ ರಾಜನು ಈ ರಾಜನಿಗಾಗಿ ಅಂಹು ಎಂದು ಹೆಸರುಳ್ಳ ಅಸುರನ ಧನವನ್ನೆಲ್ಲವನ್ನೂ ಇಂದ್ರನು ನಾಶಗೊಳಿಸಿರುವನು ಮತ್ತು ಅದನ್ನು ಆ ರಾಜನಿಗೆ ಕೊಟ್ಟಿರುವನು

**ಅಂಹೋಃ—ಏತತ್ಸಂಜ್ಞಾಸ್ಯಾಸುರಸ್ಯ.** ಅಂಹು ಎಂದು ಹೆಸರುಳ್ಳ ಅಸುರನು ಸ್ಕಂದಸ್ವಾಮಿಗಳು—ಅಂಹು ಶಬ್ದವು ಪಾಪರೂಪಾರ್ಥದಲ್ಲಿ ಇರುವ ಕಾರಣ ಸುದಾ ಎಂಬ ರಾಜನ ಪಾಪಗಳನ್ನೆಲ್ಲವನ್ನೂ ನಾಶಮಾಡಿರುವನೆಂದು ಅರ್ಥಮಾಡಿರುವರು.

**ಪೂರವೇ—ಹವಿಷಾ ತ್ವಾ ಪೂರಯತೀತಿ ಪೂರುಃ** ಹವಿಸ್ಸುಗಳಿಂದ ತೃಪ್ತಿಪಡಿಸುವವನು

**ವರಿವಃ**— ಧನಂ ದ್ರವ್ಯವೆಂದು ಅರ್ಥವು.

|| ವ್ಯಾಕರಣಪ್ರಕ್ರಿಯಾ ||

**ತ್ರೈತ್—**ತ್ರೈತ್+ಶಸ್ ಎಂದಿರುವಾಗ **ಸುಪಾಂಸುಲುಕ್** ಸೂತ್ರದಿಂದ ಶಸ್ಸಿಗೆ ಲುಕ್

**ಸಪ್ತ**- ನಾಂತವಾದ ಸಂಖ್ಯಾವಾಚಕವಾದುದರಿಂದ ಪರದಲ್ಲಿರುವ ಶಸಿಗೆ **ಷಡ್ಭ್ಯೋ ಲುಕ್** ಎಂಬುದರಿಂದ ಲುಕ್ **ನಲೋಪಃ ಪ್ರಾತಿ—**ಸೂತ್ರದಿಂದ ನಕಾರಲೋಪ

**ದರ್ದಃ—**ದೃ ವಿದಾರಣೇ ಧಾತು. ಇದಕ್ಕೆ ಅತಿಶಯಾರ್ಥದಲ್ಲಿ ಯಙ್ ಅದಕ್ಕೆ **ಯಙೋಽಚಿ ಚ** ಎಂಬುದರಿಂದ ಲುಕ್ ಯಙ್‌ಲುಗಂತದ ಮೇಲೆ ಲಙ್‌ನಲ್ಲಿ ಸಿಪ್ ಯಙನ್ನು ನಿಮಿತ್ತೀಕರಿಸಿ **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ **ರುಗ್‌ರಿಕೌ ಚ ಲುಕಿ** (ಪಾ. ಸೂ ೭–೪–೯೧) ರುಕಾಗಮ ಯಙ್‌ಲುಕಿಗೆ **ಅದಾದಿವಚ್ಚ** ಎಂದುದರಿಂದ ಶಪಿಗೆ ಲುಕ್ ಸಿಪ್ ನಿಮಿತ್ತವಾಗಿ ಧಾತುವಿನ ಋಕಾರಕ್ಕೆ ಗುಣ

**ಹಲ್ಙ್ಯಾಭ್ಯೋ**—ಸೂತ್ರದಿಂದ ಅಪೃಕ್ತವಾದ ಸಿಪ್ಪಿಗೆ ಲೋಪ ರೇಫಕ್ಕೆ **ಖರವಸಾನಯೋರ್ವಿಸರ್ಜನೀಯಃ** ಎಂಬುದರಿಂದ ಅವಸಾನನಿಮಿತ್ತಕವಾಗಿ ವಿಸರ್ಗ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ದರ್ದಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುದಾಸೇ**—ಶೋಭನಂ ದದಾತೀತಿ ಸುದಾಃ. ಡುದಾಞ್ ದಾನೇ ಧಾತು. ಸರ್ವಧಾತುನಿಬಂಧನವಾದ ಔಣಾದಿಕ ಅಸುನ್ ಪ್ರತ್ಯಯ ಬರುತ್ತದೆ ಸುದಾಸ್ ಶಬ್ದವಾಗುತ್ತದೆ ಚತುರ್ಥೀಯಲ್ಲಿ ಸುದಾಸೇ ಎಂದು ರೂಪವಾಗುತ್ತದೆ **ಸುದಾಃ ಕಲ್ಯಾಣದಾನಃ** (ನಿರು. ೨ ೨೪) ಎಂದು ಯಾಸ್ಕರು ಹೇಳಿರುತ್ತಾರೆ (ಚೆನ್ನಾಗಿ ದಾನ ಮಾಡುವವನು) ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ ಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ

**ವರ್ಕ್**—ವೃಜೀ ವರ್ಜನೇ ಧಾತು ಲಙ್ ಮಧ್ಯಮಪುರುಷ ಏಕವಚನದ ಸಿಪ್ಪಿಗೆ **ಇತಶ್ಚ** ಎಂಬುದರಿಂದ ಇಕಾರಲೋಪ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್ ಸಿಪ್ ನಿಮಿತ್ತಕವಾಗಿ **ಪುಗಂತ-ಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ **ಹಲ್ಙ್ಯಾಭ್ಯೋ** ಸೂತ್ರದಿಂದ ಪ್ರತ್ಯಯಕ್ಕೆ ಲೋಪ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ವರ್ಜ್ ಎಂದಿರುವಾಗ **ಚೋಃ ಕುಃ** ಎಂಬುದರಿಂದ ಕುತ್ವ ಬಂದರೆ ವರ್ಕ್ ಎಂದು ರೂಪವಾಗುತ್ತದೆ

**ರಾಜನ್—ನ ಙಿ ಸಂಬುದ್ಧ್ಯೋಃ** ಎಂಬುದರಿಂದ ನಲೋಪ ನಿಷೇಧ ಅಸಂಬುದ್ಧೌ ಎಂಬುದರಿಂದ ದೀರ್ಘಾಭಾವ **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ

**ಕಃ**- ಡುಕೃಞ್ ಕರಣೇ ಧಾತು ಲುಙ್‌ನಲ್ಲಿ ಸಿಪ್ ಆದರ ಇಕಾರಕ್ಕೆ ಹಿಂದಿನಂತೆ ಲೋಪ. **ಚ್ಲಿ ಲುಙಿ** ಸೂತ್ರದಿಂದ ಚ್ಲಿ ಪ್ರಾಪ್ತವಾದಾಗ **ಮಂತ್ರೇ ಘಸಹ್ವರಣ**-(ಪಾ ಸೂ. ೨-೪-೮೦) ಎಂಬ ಸೂತ್ರದಿಂದ ಮಂತ್ರದಲ್ಲಿ ಚ್ಲಿಗೆ ಲುಕ್ ಬರುತ್ತದೆ ಆಗ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಋಕಾರಕ್ಕೆ ಗುಣ ಹಲ್ಙ್ಯಾದಿ ಸೂತ್ರದಿಂದ ಸಿಪ್ಪಿಗೆ ಲೋಪ ಹಿಂದಿನಂತೆಯೇ ಅಡಾಗಮ ಬರುವುದಿಲ್ಲ ಧಾತುವಿನ ರೇಫಕ್ಕೆ ಅವಸಾನನಿಮಿತ್ತಕವಾಗಿ ವಿಸರ್ಗ ಕಃ ಎಂದು ರೂಪವಾಗುತ್ತದೆ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ ॥ ೭ ॥



॥ ಸಂಹಿತಾಪಾಠಃ ॥

ತ್ವಂ ತ್ಯಾಂ ನ ಇಂದ್ರ ದೇವ ಚಿತ್ರಾಮಿಷಮಾಪೋ ನ ಪೀಪಯಃ ಪರಿಜ್ಮನ್ ।

ಯಯಾ ಶೂರ ಪ್ರತ್ಯಸ್ಮಭ್ಯಂ ಯಂಸಿ ತ್ಮನಮೂರ್ಜಂ ನ ವಿಶ್ವಧ ಕ್ಷರಧ್ಯೈ ॥ ೮ ॥

॥ ಪದಪಾಠಃ ॥

ತ್ವಂ । ತ್ಯಾಂ । ನಃ । ಇಂದ್ರ । ದೇವ । ಚಿತ್ರಾಂ । ಇಷಂ । ಆಪಃ । ನ । ಪೀಪಯಃ । ಪರಿಽಜ್ಮನ್ ।

ಯಯಾ । ಶೂರ । ಪ್ರತಿ । ಅಸ್ಮಭ್ಯಂ । ಯಂಸಿ । ತ್ಮನಂ । ಊರ್ಜಂ । ನ । ವಿಶ್ವಧ । ಕ್ಷರಧ್ಯೈ ॥ ೮ ॥

॥ ಸಾಯಣಭಾಷ್ಯಂ ॥

ಹೇ ದೇವ ದ್ಯೋತಮಾನೇಂದ್ರ ತ್ವಂ ನೋಽಸ್ಮಾಕಂ ಚಿತ್ರಾಂ ಚಾಯನೀಯಾಂ ತ್ಯಾಂ ತಾಮಿಷಮನ್ನಂ ಪರಿಜ್ಮನ್ ಪರಿತೋ ವ್ಯಾಪ್ತಾಯಾಂ ಭೂಮೌ ಪೀಪಯಃ । ಪ್ರಾವರ್ಧಯಃ । ಯಥಾ ಸರ್ವಾ ಭೂಮಿರನ್ನೇನ ಪರಿಪೂರ್ಣಾ ಭವತಿ ತಥಾ ಕುರ್ವಿತ್ಯರ್ಥಃ । ತತ್ರ ದೃಷ್ಟಾಂತಃ । ಆಪೋ ನ । ಯಥಾಪೋ ವೃಷ್ಟ್ಯುದಕಾನಿ ಭೂಮ್ಯಾಂ ವರ್ಷಣೇನ ಪ್ರವರ್ಧಯಸಿ ತದ್ವತ್ । ಯದ್ವಾ । ಭೂಮೌ ವರ್ತಮಾನಾನಸ್ಮಾನ್ಯಥಾಪಃ ಪಾಯಯಸಿ ತದ್ವಚ್ಚಿತ್ರಾಮಿಷಮಪಿ ಪಾಯಯೇತಿ ಭಾವಃ । ಹೇ ಶೂರೇಂದ್ರ ಯಯೇಷಾತ್ಮನಮಾತ್ಮಾನಂ ಜೀವನಮಸ್ಮಭ್ಯಂ ಪ್ರತಿ ಯಂಸಿ । ಪ್ರಯಚ್ಛಸಿ । ತತ್ರ ದೃಷ್ಟಾಂತಃ । ವಿಶ್ವಧ ವಿಶ್ವತಃ ಸರ್ವತಃ ಕ್ಷರಧ್ಯೈ ಕ್ಷರಿತುಮೂರ್ಜಂ ನ ಉದಕಮಿವ । ಯಥಾಸ್ಮಭ್ಯಂ ಬಹುಲಮುದಕಂ ಪ್ರಯಚ್ಛಸಿ ತದ್ವತ್ಪ್ರಾಣಧಾರಣರೂಪಂ ಜೀವನಮಪಿ ಪ್ರಯಚ್ಛಸೀತಿ ಭಾವಃ ॥ ಆಪಃ । ಶಸಿ ಪ್ರಾಪ್ತೇ ವ್ಯತ್ಯಯೇನ ಜಸ್ । ಅಪ್ತೃನ್ನಿತ್ಯಾದಿನಾ ದೀರ್ಘಃ । ಪೀಪಯಃ । ಸ್ಫಾಯೀ ಓಪ್ಯಾಯೀ ವೃದ್ಧೌ । ಣ್ಯಂತಾಚ್ಛಾಂದಸೇ ಲುಙಿ ಪ್ಯಾಯಃ ಪೀ । ಪಾ. ೬-೧-೨೮ । ಇತಿ ವ್ಯತ್ಯಯೇನ ಪೀಭಾವಃ । ಣಿಶ್ರಿದ್ರುಸ್ರುಭ್ಯ ಇತಿ ಚ್ಲೇಶ್ಚಙಾದೇಶಃ । ಣಿಲೋಪಾದೀನಿ । ಯದ್ವಾ । ಪೀಙ್ ಪಾನ ಇತ್ಯಸ್ಮಾಲ್ಲುಙಿ ಚಙಿ ಪೂರ್ವವತ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಪರಿಜ್ಮನ್ । ಜಮತಿರ್ಗತಿಕರ್ಮಾ । ಅಜ ಗತಿಕ್ಷೇಪಣಯೋಃ । ಆಭ್ಯಾಂ ಪರಿಪೂರ್ವಾಭ್ಯಾಂ ಶ್ವನ್ನುಕ್ಷನ್ನಿತ್ಯಾದೌ ಕನಿನ್ಪ್ರತ್ಯಯಾಂತೋ ನಿಪಾತಿತಃ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಯಂಸಿ । ಯಮು ಉಪರಮೇ । ಬಹುಲಂ ಛಂದಸೀತಿ ಶಪೋ ಲುಕ್ । ತ್ಮನಂ । ಆಙೋಽನ್ಯತ್ರಾಪಿ ಛಂದಸಿ ದೃಶ್ಯತೇ ।

**ಕಾ ೬-೪-೧೪೧-೧ । ಇತ್ಯಾತ್ಮನ ಆಕಾರಲೋಪಃ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದುಪಧಾದೀ-ರ್ಘಾಭಾವಃ । ವಿಶ್ವಧ । ವಿಶ್ವಶಬ್ದಾತ್ತ್ರಸಿಲಃ ಸಕಾರಲೋಪೋ ಧತ್ವಂ ಚ ಪೃಷೋದರಾದಿತ್ವಾತ್ । ಕ್ಷರಧ್ಯೈ । ಕ್ಷರ ಸಂಚಲನೇ । ತುಮರ್ಥೇ ಸೇಸೇನಿತ್ಯಧ್ಯೈಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಶೂರ**— ಶೂರನಾದ ಇಂದ್ರನೇ । **ಯಯಾ** - ಯಾವ ಅನ್ನದಿಂದ । **ತ್ಮನಂ**—ಆತ್ಮವನ್ನು (ನಮ್ಮ ಜೀವವನ್ನು) । **ಅಸ್ಮಭ್ಯಂ** — ನಮಗೆ । **ವಿಶ್ವತಃ**— ಸುತ್ತಲೂ । **ಕ್ಷರಧ್ಯೈ**—ವ್ಯಾಪಿಸಲು । **ಊರ್ಜಂ ನ**— ನೀರನ್ನು ಹೇಗೋ (ಹಾಗೆ) । **ಪ್ರತಿ ಯಂಸಿ**—ಕೊಡುತ್ತೀಯೋ । **ತ್ಯಾಂ**--ಅಂತಹ । **ಚಿತ್ರಾಂ**—ವಿವಿಧವಾದ । **ಇಷಂ** – ಅನ್ನವನ್ನು । **ದೇವ**—ಪ್ರಕಾಶಮಾನನಾದ । **ಇಂದ್ರ**—ಎಲೈ ಇಂದ್ರನೇ । **ತ್ವಂ**— ನೀನು । **ನಃ**— ನಮಗೆ । **ಪರಿಜ್ಮನ್** — ವ್ಯಾಪ್ತವಾದ ಭೂಮಿಯಲ್ಲಿ । **ಪೀಪಯಃ** – ಅಭಿವೃದ್ಧಿಪಡಿಸಿದೆ ॥

॥ ಭಾವಾರ್ಥ ॥

ಶೂರನೂ, ಪ್ರಕಾಶಮಾನನೂ ಆದ ಇಂದ್ರನೇ, ನಮಗೆ ನೀರನ್ನು ಒದಗಿಸಿ ಪ್ರಾಣಧಾರಣ ಮಾಡಿಸುವಂತೆ, ಯಾವ ಅನ್ನವನ್ನು ಕೊಟ್ಟು ಪ್ರಾಣಧಾರಣ ಮಾಡಿಸುತ್ತೀಯೋ ಹೇಗೆ ವೃಷ್ಟ್ಯುದಕವು ಭೂಮಿಯನ್ನೆಲ್ಲಾ ವ್ಯಾಪಿಸುವಂತೆ ಮಾಡುತ್ತೀಯೋ ಅದೇ ರೀತಿ ನಾನಾವಿಧವಾದ ಆಹಾರವು ಭೂಮಿಯಲ್ಲಿ ವರ್ಧಿಸುವಂತೆ ಮಾಡು

## English Translation

O divine Indra, increase, for us throughout the earth, abundant food (that it may be as plentiful) as water, by which, O hero, you bestow upon us (existence) as you cause water to flow on every side

ವಿಶೇಷ ವಿಷಯಗಳು

**ಚಿತ್ರಾಂ ಚಾಯನೀಯಾಂ.** ಪೂಜಿಸಲು ಅರ್ಹವಾದ ಎಂದು ಅರ್ಥವು ಸ್ಕಂದಸ್ವಾಮಿಗಳು ಪೂಜನೀಯಾಂ ವಿಚಿತ್ರಾಂ ವಾ ಎಂದು ಅರ್ಥವನ್ನು ಮಾಡಿರುವರು ಇದರಿಂದ ಹೊಗಳಲು ತಕ್ಕುದಾದ ಅಥವಾ ಅನೇಕ ವಿಧವಾದ ಎಂದು ತಾತ್ಪರ್ಯವು

**ಇಷಂ - ಅನ್ನಂ.** ಅನ್ನವು ಎಂದು ಸಾಯಣರು ಹೇಳಿರುವರು ಅನ್ನವೆಂದರೆ ಉದಕವು, ನೀರು ಎಂದು ಅರ್ಥವು. ಅನ್ನ ಶಬ್ದವು ನೂರೊಂದು ಉದಕನಾಮಗಳ ಮಧ್ಯದಲ್ಲಿ (ನಿ ೧-೧೨) ಉಕ್ತವಾಗಿರುತ್ತದೆ ಇಷ ಶಬ್ದವು ಅನ್ನವೆಂಬರ್ಥದಲ್ಲಿ ಇಪ್ಪತ್ತೆಂಟು ನಾಮಗಳ (ನಿ ೨ ೭) ಮಧ್ಯದಲ್ಲಿ ಪಠಿತವಾಗಿರುವುದು ಸ್ಕಂದಸ್ವಾಮಿಗಳು ಇಷ ಶಬ್ದವು ಸೋಮರೂಪವಾದ ಅನ್ನವೆಂದು ಅರ್ಥಮಾಡಿರುವರು **ಸೋಮಲಕ್ಷಣಂ ಅನ್ನಂ** ಎಂದು ಹೇಳಿರುವರು

**ಅಪೋ ನ ಪೀಪಯಃ**---**ಯಥಾ ವೃಷ್ಟ್ಯುದಕಾನಿ ಭೂಮ್ಯಾಂ ಪ್ರವರ್ಧಯಸಿ, ಯದ್ವಾ ಭೂಮೌ ವರ್ತಮಾನಾನಸ್ಮಾನ್ ಯಥಾ ಅಪಃ ಪಾಯಯಸಿ.** ಮಳೆಯ ನೀರು ಭೂಮಿಯಲ್ಲಿ ಬಹಳ ಮಟ್ಟಿಗೆ ವೃದ್ಧಿಯಾಗುವ ಹಾಗೆ ಮಾಡುತ್ತೀಯೆ ಎಂದು ಒಂದು ವಿಧವಾದ ಅರ್ಥವು ಭೂಮಿಯಲ್ಲಿ ಜೀವಿಸುತ್ತಿರುವ ನಾವುಗಳು ನೀರನ್ನು ಕುಡಿಯುವ ಹಾಗೆ ವೃದ್ಧಿ ಮಾಡುತ್ತೀಯೆ ಎಂದು ಇನ್ನೊಂದು ವಿಧವಾದ ಅರ್ಥವು. ಇಲ್ಲಿ ನ ಎಂಬ ಶಬ್ದವು ಉಪಮಾರ್ಥವನ್ನು ಹೇಳುವ ಇವ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು ವೃದ್ಧ್ಯರ್ಥಕವಾದ ಓಪ್ಯಾಯೀ ಎಂಬ ಧಾತುವೂ ಕೂಡ ಣಿಜರ್ಥದಲ್ಲಿ ಉಪಯೋಗಿಸಲ್ಪಟ್ಟು ನೀರು ತಾನಾಗಿ ವೃದ್ಧಿಯಾಗುವಂತೆ ಮಾಡುತ್ತೀಯೆ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು.

**ತ್ಮನಂ- ಆತ್ಮಾನಂ ಜೀವಂ** ಈ ಶರೀರದಲ್ಲಿ ಅಭಿಮಾನದಿಂದ ಇರುವ ಅಹಂಕಾರಾಸ್ಪದನಾದ ಜೀವನೆಂದು ಅರ್ಥವು

**ವಿಶ್ವಥ ವಿಶ್ವತಃ ಸರ್ವತಃ** ಎಲ್ಲಾ ಪ್ರದೇಶದಲ್ಲಿಯೂ, ಎಲ್ಲಾ ವಿಧದಿಂದಲೂ ಎಂದು ಅರ್ಥವು

**ಊರ್ಜಂ ನ—ಉದಕಮಿವ.** ನೀರುಗಳನ್ನು ವೃದ್ಧಿಮಾಡಿ ನಮಗೆ ಅನುಗ್ರಹಿಸಿ ಕೊಟ್ಟಿರುವ ಹಾಗೆ ಎಂದು ಅರ್ಥವು. ಇಲ್ಲಿ ನ ಎಂಬುವುದು ಉಪಮಾವಾಚಕವಾಗಿ ನಿರುಕ್ತದಲ್ಲಿ (ನಿ. ೨-೪) ಪಠಿತವಾಗಿರುವುದು

**ಪರಿಜ್ಮನ್—ಪರಿತಃ ವ್ಯಾಪ್ತಾಯಾಂ ಭೂಮೌ.** ಸುತ್ತಲೂ ವ್ಯಾಪಿಸಿ ಇರುವ ಭೂಮಿಯಲ್ಲಿ ಎಂದು ಅರ್ಥವು

॥ ವ್ಯಾಕರಣಪ್ರಕ್ರಿಯಾ ॥

**ಅಪಃ**—ಅಪ್ ಶಬ್ದ. ಶಸ್ ಪ್ರಾಪ್ತವಾದಾಗ **ವ್ಯತ್ಯಯೋ ಬಹುಲಂ** ಎಂಬುದರಿಂದ ಜಸ್ ಬರುತ್ತದೆ ಅಪ್+ಜಸ್ ಎಂದಿರುವಾಗ **ಅಪ್ತೃನ್ತೃಚ್**-(ಪಾ ಸೂ ೬-೪-೧೧) ಎಂಬುದರಿಂದ ಜಸ್ಸಿಗೆ ಸರ್ವನಾಮಸ್ಥಾನ ಸಂಜ್ಞೆ ಇರುವುದರಿಂದ ಉಪಧಾದೀರ್ಘ ಬರುತ್ತದೆ. ಜಸಿನ ಸಕಾರಕ್ಕೆ ರುತ್ವವಿಸರ್ಗ ಬಂದರೆ ಅಪಃ ಎಂದು ರೂಪವಾಗುತ್ತದೆ

**ಪೀಪಯಃ**—ಸ್ಫಾಯಿೀ ಓಪ್ಯಾಯೀ ವೃದ್ಧೌ ಪ್ರಾರ್ಥನಾರೂಪ ಅರ್ಥದಲ್ಲಿ **ಛಂದಸಿಲುಙ್‌ಲಙ್‌ಲಿಟಃ** ಸೂತ್ರದಿಂದ ಲುಙ್ ಪ್ರೇರಕವ್ಯಾಪಾರ ತೋರುವುದರಿಂದ ಧಾತುವಿಗೆ ಣಿಚ್ ಬರುತ್ತದೆ ವ್ಯತ್ಯಯದಿಂದ ನಿಷ್ಠಾಪರನಾಗಿರುವಾಗ ವಿಧಿಸಿರುವ **ಪ್ಯಾಯಃ ಪೀ** (ಪಾ ಸೂ ೬-೧-೨೮) ಎಂಬುದರಿಂದ ಪೀ ಭಾವವು ಲುಙ್‌ನಲ್ಲಿಯೂ ಬರುತ್ತದೆ ಪೀ+ಇ ಲುಙ್ ಎಂದಿರುವಾಗ **ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್** ಎಂಬುದರಿಂದ ಚ್ಲಿಗೆ ಚಙ್ ಆದೇಶ. **ಣೇರನಿಟಿ** ಎಂಬುದರಿಂದ ಅನಿಡಾದಿಯಾದ ಆರ್ಧಧಾತುಕವು ಪರದಲ್ಲಿರುವುದರಿಂದ ಣಿಗೆ **ಲೋಪ ಚಙಿ** ಸೂತ್ರದಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ **ಹ್ರಸ್ವಃ** ಎಂಬುದರಿಂದ ಹ್ರಸ್ವ ಣಿಚ್ ನಿಮಿತ್ತಕವಾಗಿ ಧಾತುವಿನ ಇಕಾರಕ್ಕೆ ವೃದ್ಧಿ ಆಯಾದೇಶ. **ಣೌಚಙ್ಯುಪಧಾಯಾಃ ಹ್ರಸ್ವಃ** ಸೂತ್ರದಿಂದ ಉಪಧಾಹ್ರಸ್ವ **ಸನ್ವಲಘುನಿ ಚಙ್ ಪರೇಽನಗ್ಲೋಪೇ** ಎಂಬುದರಿಂದ ಸನ್ವದ್ಭಾವವಿರುವುದರಿಂದ **ದೀರ್ಘೋ ಲಘೋಃ** ಸೂತ್ರದಿಂದ ಅಭ್ಯಾಸಕ್ಕೆ

ದೀರ್ಘ ಬರುತ್ತದೆ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ಸೀಷಯಃ ಎಂದು ರೂಪವಾಗುತ್ತದೆ ಅಥವಾ ಷೀಙ್ ಶಾನೇ ಧಾತು ಇದಕ್ಕೆ ಹಿಂದಿನಂತೆ ಣಿಚ್ ಣಿಜಂತದ ಮೇಲೆ ಲುಙ್. ಚಙಾದಿಗಳು ಹಿಂದಿನಂತೇ ಬಂದು ಉಕ್ತರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಪರಿಜ್ಮನ್** ಗತಿಕರ್ಮಕವಾದ ಜಮುಧಾತು ಅಥವಾ ಅಜ ಗತಿಕ್ಷೇಪಣಯೋಃ ಧಾತು ಇವುಗಳಿಗೆ ಪರಿಪೂರ್ವವಾಗಿರುವಾಗ **ಶ್ವನ್ನುಕ್ಷನ್ ಪೂಷನ್** (ಉ ಸೂ ೧-೧೫೭) ಎಂಬುದರಿಂದ ಕನಿನ್ ಪ್ರತ್ಯಯಾಂತವಾಗಿ ನಿಪಾತಿತರೂಪವಾಗುತ್ತದೆ ನಿಪಾತದಿಂದಲೇ ವರ್ಣವಿಕಾರ ಸಿದ್ಧವಾಗುತ್ತದೆ. ಸಪ್ತಮಿಯಲ್ಲಿ **ಸುಪಾಂ ಸುಲುಕ್**— ಸೂತ್ರದಿಂದ ವಿಭಕ್ತಿಗೆ ಲುಕ್ ಬರುತ್ತದೆ ನಿತ್‌ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ

**ಯಂಸಿ** ಯಮ ಉಪರಮೇ ಧಾತು ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್ **ನಶ್ಚಾಪದಾಂತಸ್ಯ ಝಲಿ** ಸೂತ್ರದಿಂದ ಮಕಾರಕ್ಕೆ ಅನುಸ್ವಾರ. ಸಿಪ್ ಪಿತ್ತಾದುದರಿಂದ ಅನುದಾತ್ತ ಧಾತುವಿನ ಅಂತೋದಾತ್ತಸ್ವರದಿಂದ ಆದ್ಯುದಾತ್ತವಾದ ಪದವಾಗುತ್ತದೆ ಯಯಾ ಎಂದು ಹಿಂದೆ ಇರುವುದರಿಂದ ನಿಘಾತಸ್ವರ ಬರುವುದಿಲ್ಲ

**ತ್ಮನಮ್— ಆಜೋಽನ್ಯತ್ರಾಪಿ ಚ್ಛಂದಸಿ ದೃಶ್ಯತೇ** (ಕಾ ೬-೪-೧೪೧-೧) ಎಂಬುದರಿಂದ ಆತ್ಮನ್ ಶಬ್ದದ ಆಕಾರಕ್ಕೆ ಲೋಪ **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬುದರಿಂದ **ಸರ್ವನಾಮಸ್ಥಾನೇಚಾಽಸಂಬುದ್ಧೌ** ಎಂಬುದರಿಂದ ಉಪಧಾದೀರ್ಘ ಬರುವುದಿಲ್ಲ

**ವಿಶ್ವಧ—ಪಂಚಮ್ಯಾಸ್ತಸಿಲ್** (ಪಾ ಸೂ ೫-೩-೭) ಎಂಬುದರಿಂದ ವಿಶ್ವಶಬ್ದಕ್ಕೆ ಪ್ರಾಪ್ತವಾದ ತಸಿಲಿನ ಸಕಾರಕ್ಕೆ ಲೋಪವೂ ತಕಾರಕ್ಕೆ ಧಕಾರವೂ **ಪೃಷೋದರಾದೀನಿ ಯಥೋಪದಿಷ್ಟಂ** ಎಂಬುದರಿಂದ ಅದರಲ್ಲಿ ಸೇರಿರುವುದರಿಂದ ಸಿದ್ಧವಾಗುತ್ತದೆ

**ಕ್ಷರಧ್ಯೈ**—ಕ್ಷರ ಸಂಚಲನೇ ಧಾತು ಕ್ಷರಿತುಂ ಎಂದು ತುಮುನ್ ಬರುವಾಗ **ತುಮರ್ಥೇ ಸೇಸೇನಸೇ**- (ಪಾ. ಸೂ ೩-೪-೯) ಎಂಬುದರಿಂದ **ಅಧ್ಯೈನ್** ಪ್ರತ್ಯಯ ಬರುತ್ತದೆ ಕ್ಷರಧ್ಯೈ ಎಂದು ರೂಪವಾಗುತ್ತದೆ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ॥೮॥



॥ ಸಂಹಿತಾಪಾಠಃ ॥

ಅಕಾರಿ ತ ಇಂದ್ರ ಗೋತಮೇಭಿಬ್ರಹ್ಮಾಣ್ಯೋಕ್ತಾ ನಮಸಾ
ಹರಿಭ್ಯಾಂ ।
ಸುಪೇಶಸಂ ವಾಜಮಾ ಭರಾ ನಃ ಪ್ರಾತರ್ಮಕ್ಷೂ ಧಿಯಾವಸು-
ರ್ಜಗಮ್ಯಾತ್ ॥ ೯ ॥

॥ ಪದಪಾಠಃ ॥

ಅಕಾರಿ । ತೇ । ಇಂದ್ರ । ಗೋತಮೇಭಿಃ । ಬ್ರಹ್ಮಾಣಿ । ಆಽಉಕ್ತಾ । ನಮಸಾ ।
ಹರಿಽಭ್ಯಾಂ ।
ಸುಽಪೇಶಸಂ । ವಾಜಂ । ಆ । ಭರ । ನಃ । ಪ್ರಾತಃ । ಮಕ್ಷು । ಧಿಯಾಽವಸುಃ ।
ಜಗಮ್ಯಾತ್ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ಗೋತಮೇಭಿರ್ಗೋತಮಗೋತ್ರೋತ್ಪನ್ನೈರೇತತ್ಸಂಜ್ಞೈರ್ಋಷಿಭಿರಕಾರಿ । ಸ್ತೋತ್ರಂ ಕೃತಮಿತ್ಯರ್ಥಃ । ಏತದೇವ ಸ್ಪಷ್ಟೀಕರೋತಿ । ಬ್ರಹ್ಮಾಣಿ ಮಂತ್ರಜಾತಾನಿ ನಮಸಾ ಹವಿರ್ಲಕ್ಷಣೇನಾನ್ನೇನ ಸಹ ಹರಿಭ್ಯಾಮಶ್ವಾಭ್ಯಾಂ ಯುಕ್ತಾಯ ತುಭ್ಯಮೋಕ್ತಾ । ಅಭಿಮುಖ್ಯೇನೋಕ್ತಾನಿ । ಯದ್ವಾ । ಮರ್ಯಾದಾಯಾಮಾಕಾರಃ । ಯಥಾಶಾಸ್ತ್ರಂ ಪ್ರಯುಕ್ತಾನಿ । ಸ ತ್ವಂ ಸುಪೇಶಸಂ । ಪೇಶ ಇತಿ ರೂಪನಾಮ । ಬಹುವಿಧರೂಪಯುಕ್ತಂ ವಾಜಮನ್ನಂ ನೋಽಸ್ಮಭ್ಯಮಾ ಭರ । ಆಹರ । ದೇಹೀತಿ ಯಾವತ್ । ಧಿಯಾ ಬುದ್ಧ್ಯಾ ಕರ್ಮಣಾ ವಾ ಪ್ರಾಪ್ತಧನ ಇಂದ್ರಃ ಪ್ರಾತಃಕಾಲೇಽಸ್ಮದ್ರಕ್ಷಣಾರ್ಥಂ ಜಗಮ್ಯಾತ್ । ಆಗಚ್ಛತು ॥ ಓಕ್ತಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಸುಪೇಶಸಂ । ಪಿಶ ಅವಯವೇ । ಅಸುನ್ । ಬಹುವ್ರೀಹಾವಾದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ಭರ । ಹೃಗ್ರಹೋರ್ಭ ಇತಿ ಭತ್ವಂ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ ॥ ೯ ॥

॥ ಪ್ರತಿಪದಾರ್ಥ ॥

**ಇಂದ್ರ**—ಇಂದ್ರನೇ । **ತೇ**—ನಿನಗೆ । **ಗೋತಮೇಭಿಃ**—ಗೋತಮಪುತ್ರರಾದ ಋಷಿಗಳಿಂದ । **ಅಕಾರಿ**—(ಸ್ತೋತ್ರವು) ಮಾಡಲ್ಪಟ್ಟಿತು । **ಬ್ರಹ್ಮಾಣಿ**—ಮಂತ್ರಗಳು । **ನಮಸಾ** ಹವೀರೂಪವಾದ ಅನ್ನದೊಡನೆ । **ಹರಿಭ್ಯಾಂ**—ಎರಡು ಕುದುರೆಗಳಿಂದ (ಯುಕ್ತನಾದ ನಿನಗೆ) । **ಓಕ್ತಾ**—ವಿಧಿಪೂರ್ವಕವಾಗಿ ಅರ್ಪಿಸಲ್ಪಟ್ಟವೆ । (**ಸ ತ್ವಂ** -ಅಂತಹ ನೀನು) ।**ನಃ**—ನಮಗೆ । **ಸುಪೇಶಸಂ**—ನಾನಾ ರೂಪವಾದ । **ವಾಜಂ**—ಅನ್ನವನ್ನು । **ಆ ಭರ**—ತೆಗೆದುಕೊಂಡು ಬಾ (ಕೊಡು) । **ಧಿಯಾವಸುಃ**—ಬುದ್ಧಿಯಿಂದ (ಕರ್ಮಗಳಿಂದ) ಪ್ರಾಪ್ತವಾದ ಧನವುಳ್ಳ (ಇಂದ್ರನು) । **ಪ್ರಾತಃ** -ಪ್ರಾತಃಕಾಲದಲ್ಲಿ । **ಮಕ್ಷು** -ಶೀಘ್ರವಾಗಿ । **ಜಗಮ್ಯಾತ್**—ಬರಲಿ ॥

॥ ಭಾವಾರ್ಥ ॥

ಎಲೈ ಇಂದ್ರನೇ, ಗೋತಮಪುತ್ರರಾದ ಋಷಿಗಳು ಮಂತ್ರಪೂರ್ವಕವಾಗಿ ಹವಿಸ್ಸನ್ನು ಶಾಸ್ತ್ರಪ್ರಕಾರವಾಗಿ ಅಶ್ವಗಳಿಂದ ಯುಕ್ತನಾದ ನಿನಗೆ ಅರ್ಪಿಸಿದ್ದಾರೆ ಸ್ತುತನಾದವನೂ, ನಿನ್ನ ಬುದ್ಧಿಯಿಂದ ಅಥವಾ ಕರ್ಮಗಳಿಂದ ಆರ್ಜಿತವಾದ ಧನಯುಕ್ತನಾದವನೂ ಆದ ನೀನು ಪ್ರಾತಃಕಾಲದಲ್ಲಿ ಶೀಘ್ರವಾಗಿ ಬಂದು, ನಮಗೆ ನಾನಾರೂಪವಾದ ಅನ್ನವನ್ನು ಕೊಡು

## English Translation

O Indra, praises have been offered to you by the sons of Gotama; they have been uttered with reverence to you, borne hither by your horses; grant us various sorts of food. May he (Indra) who has acquired wealth by pious acts come hither quickly in the morning.

॥ ವಿಶೇಷವಿಷಯಗಳು ॥

**ಗೋತಮೇಭಿಃ—ಗಂತೃತಮೈರೇತತ್ಸಂಜ್ಞೈಃ** ಋಷಿಭಿಃ—ಸಂಚರಿಸುವ ಸ್ವಭಾವವುಳ್ಳವರಾದ ಕಾರಣ ಗೋತಮರೆಂದು ಹೆಸರನ್ನು ಹೊಂದಿರುವ ಋಷಿಗಳು ಎಂದು ಅರ್ಥವು **ಗೋತಮಪುತ್ರೈಃ** ಎಂದು ಸ್ಕಂದಸ್ವಾಮಿಗಳು ಹೇಳಿರುವರು

**ನಮಸಾ—ಹವಿರ್ಲಕ್ಷಣೇನಾನ್ನೇನ.** ಹವಿಸ್ಸಿನ ರೂಪದಿಂದ ಇರುವ ಅನ್ನದಿಂದ ಎಂದು ಸಾಯಣರು ಅರ್ಥಮಾಡಿರುವರು. ಸ್ಕಂದಸ್ವಾಮಿಗಳು **ನಮಸ್ಕಾರೇಣ ಸಹ ಹವಿರ್ಲಕ್ಷಣೇನ ಅನ್ನೇನ ವಾ** ಎಂದು ಎರಡು ವಿಧವಾದ ಅರ್ಥವನ್ನೂ ಹೇಳಿರುವರು

**ಹರಿಭ್ಯಾಂ**—ಇಂದ್ರನ ಕುದುರೆಗಳಿಂದ ಎಂದು ಅರ್ಥವು ಹರೀ ಶಬ್ದವು ಇಂದ್ರನ ಕುದರೆಗಳೆಂದು ನಿರುಕ್ತದಲ್ಲಿ (ನಿ. ೨-೨೮) ಉಕ್ತವಾಗಿರುವುದು

**ಓಕ್ತಾ—ಆಭಿಮುಖ್ಯೇನ ಉಕ್ತಾನಿ ಯದ್ವಾ ಯಥಾಶಾಸ್ತ್ರಂ ಪ್ರಯುಕ್ತಾನಿ** ಆ+ಉಕ್ತಾ. ಆ ಎಂಬ ಉಪಸರ್ಗಕ್ಕೆ ಎರಡು ವಿಧವಾದ ಅರ್ಥವೂ ಉಕ್ತವಾಗಿರುವುದು ಎದುರಿಗೆ; ಶಾಸ್ತ್ರಕ್ರಮಕ್ಕನುಸಾರವಾಗಿ ಸ್ತೋತ್ರವು ಹೇಳಲ್ಪಟ್ಟಿರುವುದು ಎಂದು ಅರ್ಥವು

**ಸು ಪೇಶಸಂ—ಪೇಶ ಇತಿ ರೂಪನಾಮ ಬಹುವಿಧರೂಪಯುಕ್ತಂ,** ಬಹಳ ವಿಧವಾದ ಆಕಾರದಿಂದ ಇರುವ ಎಂದು ಅರ್ಥವು. ಪೇಶ ಶಬ್ದವು (ನಿರುಕ್ತ ೩-೧೩) ರೂಪ ಎಂಬ ಅರ್ಥದಲ್ಲಿ ಹದಿನಾರು ಶಬ್ದಗಳ ಮಧ್ಯದಲ್ಲಿ ಉಕ್ತವಾಗಿರುತ್ತದೆ.

**ವಾಜಂ—ಅನ್ನಂ,** ಅನ್ನವು ಎಂದು ಅರ್ಥವು ವಾಜಶಬ್ದವು ಅಂಧಃ, ವಾಜಃ ಎಂಬ ಇಪ್ಪತ್ತೆಂಟು ಅನ್ನ ನಾಮಗಳ ಮಧ್ಯದಲ್ಲಿ (ನಿ ೨-೯) ಉಕ್ತವಾಗಿರುತ್ತದೆ

**ಧಿಯಾವಸುಃ—ಬುದ್ಧ್ಯಾ ಕರ್ಮಣಾ ವಾ ಪ್ರಾಪ್ತಧನಃ** ಬುದ್ಧಿಯಿಂದಲಾಗಲಿ, ಕೆಲಸಮಾಡುವುದ ರಿಂದಲಾಗಲಿ ದ್ರವ್ಯವನ್ನು ಹೊಂದಿದವನು.

॥ ವ್ಯಾಕರಣಪ್ರಕ್ರಿಯಾ ॥

**ಅಕಾರಿ—**ಡುಕೃಞ್ ಕರಣೇ ಧಾತು ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ **ಚಿಣ್ ಭಾವಕರ್ಮಣೋಃ** (ಪಾ ಸೂ ೩-೧ ೬೬) ಎಂಬುದರಿಂದ ಚ್ಲಿಗೆ ಚಿಣ್ ಆದೇಶ **ಚಿಣೋಲುಕ್** ಎಂಬುದರಿಂದ ಚಿಣಿನ ಪರದಲ್ಲಿರುವ ತಶಬ್ದಕ್ಕೆ ಲುಕ್ ಬರುತ್ತದೆ ಚಿಣ್ ಣಿತ್ತಾದುದರಿಂದ **ಅಚೋಞ್ಣಿತಿ** ಸೂತ್ರದಿಂದ ಧಾತುವಿನ ಋಕಾರಕ್ಕೆ ವೃದ್ಧಿ ಅಂಗಕ್ಕೆ ಅಡಾಗಮ ಅಕಾರಿ ಎಂದು ರೂಪವಾಗುತ್ತದೆ ಪಾದಾದಿ ಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ

**ಓಕ್ತಾ**—ಆಙ್ ಉಪಸರ್ಗ ವಚ ಪರಿಭಾಷಣೇ ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ **ವಚಿಸ್ವಪಿಯ-ಜಾದೀನಾಂ ಕಿತಿ** ಎಂಬುದರಿಂದ ಧಾತುವಿಗೆ ಸಂಪ್ರಸಾರಣ **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ **ಚೋಃಕುಃ** ಸೂತ್ರದಿಂದ ಚಕಾರಕ್ಕೆ ಕುತ್ವ ಆಙ್ ಸಂಬಂಧ ಬಂದಾಗ ಗುಣ ನಪುಂಸಕದಲ್ಲಿ **ಜಶ್ಶಸೋಃ ಶಿಃ** ಎಂಬುದರಿಂದ ಜಸ್ಸಿಗೆ ಶಿ ಆದೇಶ. **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ ಓಕ್ತಾ ಎಂದು ರೂಪ ವಾಗುತ್ತದೆ

**ಸುಪೇಶಸಮ್**—ಪಿಶ ಅವಯವೇ ಧಾತು **ಸರ್ವಧಾತುಭ್ಯೋಽಸುನ್** (ಉ ಸೂ ೪-೬೨೮) ಎಂಬುದ ರಿಂದ ಅಸುನ್ ಪ್ರತ್ಯಯ ಪ್ರತ್ಯಯ ನಿಮಿತ್ತಕವಾಗಿ ಧಾತುವಿನ **ಲಘೂಪಧೆಗೆ** ಗುಣ. ಪೇಶಸ್ ಶಬ್ದವಾಗುತ್ತದೆ ಶೋಭನಾನಿ ಪೇಶಾಂಸಿ ಯಸ್ಯ ಸಃ 'ಸುಪೇಶಾಃ ತಂ ಸುಪೇಶಸಮ್ ಬಹುವ್ರೀಹಿ ಸಮಾಸದಲ್ಲಿ **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ ಸೂ. ೬-೨-೧೧೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಭರ—**ಹೃಞ್ ಹರಣೇ ಧಾತು 'ಉಪಸರ್ಗೇಣ ಧಾತ್ವರ್ಥೋ ಬಲಾದನ್ಯಃ ಪ್ರತೀಯತೇ' ಎಂಬ ವಚನ ದಿಂದ ಆಙ್ ಉಪಸರ್ಗಸಂಬಂಧ ಬಂದಾಗ ದಾನ ಎಂಬ ಅರ್ಥವು ತೋರುತ್ತದೆ. ಲೋಟಿನಲ್ಲಿ ಸಿಪ್ಪಿಗೆ ಹಿ ಆದೇಶ

**ಕರ್ತರಿ ಶಪ್** ಸೂತ್ರದಿಂದ ಶಪ್ ವಿಕರಣ **ಅತೋ ಹೇಃ** ಎಂಬುದರಿಂದ ಹಿಗೆ ಲುಕ್ ಶಪ್ ನಿಮಿತ್ತಕವಾಗಿ ಧಾತುವಿನ ಇಕಿಗೆ ಗುಣ **ಹೃಗ್ರಹೋರ್ಭಃ ಛಂದಸಿ** ಎಂಬುದರಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ಸಂಹಿತಾದಲ್ಲಿ **ದ್ವ್ಯಚೋಽತಸ್ತಿಙಃ** (ಪಾ ಸೂ ೬-೩-೧೩೫) ಎಂಬುದರಿಂದ ಧಾತುವಿನ ಅಂತ್ಯಾಕಾರಕ್ಕೆ ದೀರ್ಘ ಬರುತ್ತದೆ

**ಜಗಮ್ಯಾತ್—**ಗಮ್ಲೃ ಗತೌ ಧಾತು ವಿಧಿಲಿಙ್‌ನಲ್ಲಿ ತಿಪ್ ಪ್ರತ್ಯಯ **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ **ಲೋಪ ಬಹುಲಂ ಛಂದಸಿ** ಎಂಬುದರಿಂದ ಶ್ಲುವಿಕರಣ **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ **ಕುಹೋಶ್ಚುಃ** ಎಂಬುದರಿಂದ ಗಕಾರಕ್ಕೆ ಜಕಾರಾದೇಶ ಲಿಙಿಗೆ ಯಾಸುಟಾಗಮ ಜಗಮ್ಯಾತ್ ಎಂದು ರೂಪವಾಗುತ್ತದೆ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ ॥ ೯ ॥

ಅರವತ್ತನೂರನೇ ಸೂಕ್ತವು ಸಮಾಪ್ತವಾಗಿದೆ



## ಅರವತ್ತನಾಲ್ಕನೆಯ ಸೂಕ್ತವು

**ವೃಷ್ಣೇ ಶರ್ಧಾಯೇತಿ ಪಂಚದಶರ್ಚಂ ಸಪ್ತಮಂ ಸೂಕ್ತಂ । ನೋಧಸ ಆರ್ಷಂ ಮಾರುತಂ । ಅಂತ್ಯಾ ತ್ರಿಷ್ಟುಪ್ । ಶಿಷ್ಟಾಶ್ಚತುರ್ದಶ ಜಗತ್ಯಃ । ತಥಾ ಚಾನುಕ್ರಾಂತಂ । ವೃಷ್ಣೇ ಪಂಚೋನಾ ಮಾರುತಂ ತ್ರಿಷ್ಟುಬಂತಮಿತಿ ॥ ಚಾತುರ್ವಿಂಶಿಕೇಽಹನ್ಯಾಗ್ನಿಮಾರುತ ಇದಂ ಮಾರುತಂ ನಿವಿದ್ಧಾನೀಯಂ । ಸೂತ್ರಿತಂ ಚ । ಪೃಕ್ಷಸ್ಯ ವೃಷ್ಣೋ ವೃಷ್ಣೇ ಶರ್ಧಾಯ ಯಜ್ಞೇನ ವರ್ಧತೇತ್ಯಾಗ್ನಿಮಾರುತಂ । ಆ ೭-೪ । ಇತಿ ॥ ಅಭಿಪ್ಲವಿಕೇ ಪಂಚಮೇಽಹನ್ಯಪ್ಯೇತದಾಗ್ನಿಮಾರುತೇ ಮಾರುತನಿವಿದ್ಧಾನಂ । ಸೂತ್ರಿತಂ ಚ । ಪೃಕ್ಷಸ್ಯ ವೃಷ್ಣೋ ವೃಷ್ಣೇ ಶರ್ಧಾಯ ನೂ ಚಿತ್ಸಹೋಜಾ ಇತ್ಯಾಗ್ನಿಮಾರುತಂ । ಆ । ೭-೭ । ಇತಿ ॥**

ವಿನಿಯೋಗವು—**ವೃಷ್ಣೇ ಶರ್ಧಾಯ** ಎಂಬ ಸೂಕ್ತವು ಪ್ರಥಮ ಮಂಡಲದ ಹನ್ನೊಂದನೆಯ ಅನುವಾಕದಲ್ಲಿ ಏಳನೆಯ ಸೂಕ್ತವು ಇದರಲ್ಲಿ ಹದಿನೈದು ಋಕ್ಕುಗಳಿರುವವು ಈ ಸೂಕ್ತಕ್ಕೆ ನೋಧಾ ಗೌತಮನೆಂಬುವನು ಋಷಿಯು ಮರುತ್ತುಗಳೇ ದೇವತೆಗಳು ಕೊನೆಯ ಋಕ್ಕು ತ್ರಿಷ್ಟುಪ್ ಛಂದಸ್ಕವು ಉಳಿದ ಹದಿನಾಲ್ಕು ಋಕ್ಕುಗಳು ಜಗತೀಛಂದಸ್ಕವು ಅನುಕ್ರಮಣಿಕೆಯಲ್ಲಿ **ವೃಷ್ಣೇ ಪಂಚೋನಾ ಮಾರುತಂ ತ್ರಿಷ್ಟುಬಂತಮಿತಿ** ಎಂದು ಹೇಳಿರುವುದು ಯಜ್ಞದ ಇಪ್ಪತ್ತನಾಲ್ಕನೆಯ ದಿನ ಆಗ್ನಿಮಾರುತಶಸ್ತ್ರ ಮಂತ್ರ ಪಠನಕಾಲದಲ್ಲಿ ಮರುದ್ದೇವತಾಕವಾದ ನಿವಿದ್ಧಾನೀಯ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಅಶ್ವಲಾಯನಶ್ರೌತಸೂತ್ರದ **ಪೃಕ್ಷಸ್ಯ ವೃಷ್ಣೋ ವೃಷ್ಣೇ ಶರ್ಧಾಯ ಯಜ್ಞೇನ ವರ್ಧತೇತ್ಯಾಗ್ನಿಮಾರುತಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ ೭-೪) ಅಭಿಪ್ಲವಯಾಗದಲ್ಲಿಯೂ ಐದನೆಯ ದಿವಸದಲ್ಲಿ ಆಗ್ನಿಮಾರುತಶಸ್ತ್ರ ಮಂತ್ರಗಳಲ್ಲಿ ಮಾರುತ ನಿವಿದ್ಧ ಮಂತ್ರಗಳಿಗಾಗಿ ಈ ಸೂಕ್ತವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಪೃಕ್ಷಸ್ಯ ವೃಷ್ಣೋ ವೃಷ್ಣೇ ಶರ್ಧಾಯ ನೂ ಚಿತ್ಸಹೋಜಾ ಇತ್ಯಾಗ್ನಿಮಾರುತಂ** ಎಂಬ ಸೂತ್ರವು ನಿರ್ದೇಶಿಸುವುದು. (ಆ ೭-೭)

## ಸೂಕ್ತ—೬೪

॥ ಓಂ ॥

॥ ಮಂಡಲ—೧ ॥ ಅನುವಾಕ—೧೧ ॥ ಸೂಕ್ತ—೬೪ ॥

॥ ಅಷ್ಟಕ- ೧ ॥ ಅಧ್ಯಾಯ- ೫ ॥ ವರ್ಗ—೬, ೭, ೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥

॥ ಋಷಿಃ—ನೋಧಾ ಗೌತಮಃ ॥

ದೇವತಾ—ಮರುತಃ ॥

ಛಂದಃ—೧-೧೪ ಜಗತೀ । ೧೫ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ವೃಷ್ಣೇ ಶರ್ಧಾಯ ಸುಮಖಾಯ ವೇಧಸೇ ನೋಧಃ ಸುವೃಕ್ತಿಂ

ಪ್ರ ಭರಾ ಮರುದ್ಭ್ಯಃ ।

ಅಪೋ ನ ಧೀರೋ ಮನಸಾ ಸುಹಸ್ತ್ಯೋ ಗಿರಃ ಸಮಂಜೇ

ವಿದಥೇಷ್ವಾಭುವಃ ॥ ೧ ॥

॥ ಪದಪಾಠಃ ॥

ವೃಷ್ಣೇ । ಶರ್ಧಾಯ । ಸುಽಮಖಾಯ । ವೇಧಸೇ । ನೋಧಃ । ಸುಽವೃಕ್ತಿಂ ।

ಪ್ರ । ಭರ । ಮರುತ್ಽಭ್ಯಃ ।

ಅಪಃ । ನ । ಧೀರಃ । ಮನಸಾ । ಸುಽಹಸ್ತ್ಯಃ । ಗಿರಃ । ಸಂ । ಅಂಜೇ । ವಿದ-

ಥೇಷು । ಆಽಭುವಃ ॥ ೧ ॥

॥ ಸಾಯಣಭಾಷ್ಯಂ ॥

ಅತ್ರ ಪೂರ್ವಾರ್ಧೇನ ಸ್ತುತೌ ನೋಧಾಃ ಪ್ರೇರ್ಯತೇ । ಹೇ ನೋಧೋ ವೃಷ್ಣೇ ಕಾಮಾನಾಂ ವರ್ಷಿತ್ರೇ ಸುಮುಖಾಯ ಶೋಭನಯಜ್ಞಾಯ ವೇಧಸೇ ಪುಷ್ಪಫಲಾದೀನಾಂ ಕರ್ತ್ರೇ । ವಾಯೌ ಸತಿ ಹಿ ಪುಷ್ಪಾಣಿ ಫಲಾನಿ ಚೋತ್ಪದ್ಯಂತೇ । ಏವಂವಿಧಾಯ ಮರುದ್ಭ್ಯಃ । ವಿಭಕ್ತಿವ್ಯತ್ಯಯಃ । ಮರುತಾಂ ಮಿತರಾವಿಣಾಂ ಶರ್ಧಾಯ ಸಮೂಹಾಯ ಸುವೃಕ್ತಿಂ ಸುಷ್ಟ್ವಾವರ್ಜಕಂ ಸುಷ್ಠು ಪ್ರವೃತ್ತಂ ವಾ ಸ್ತೋತ್ರಂ ಪ್ರ ಭರ । ಪ್ರೇರಯ । ಸ್ತುಹೀತಿ ಯಾವತ್ । ಸ್ತುತೌ ಪ್ರೇರಿತೋ ನೋಧಾ ಆಹ । ಧೀರೋ ಧೀಮಾನ್ ಸುಹಸ್ತ್ಯಃ ಶೋಭನಾಂಗುಲಿಯುಕ್ತಃ । ಕೃತಾಂಜಲಿರಿತ್ಯರ್ಥಃ । ಏವಂಭೂತೋಽಹಂ ಮನಸಾ ಗಿರಃ ಸ್ತುತಿಲಕ್ಷಣಾ ವಾಚಃ ಸಮಂಜೇ । ಸಮ್ಯಗ್ವ್ಯಕ್ತಾಃ ಕರೋಮಿ । ಯಾ ಗಿರೋ ವಿದಥೇಷು ಯಜ್ಞೇಷ್ವಾಭುವಃ । ಆಙ್ ಮರ್ಯಾದಾಯಾಂ । ಯಥಾಶಾಸ್ತ್ರಂ ಪ್ರಯುಕ್ತಾ ಭವಂತೀತ್ಯಾಭುವಃ । ದೇವತಾಭಿಮುಖೀಕರಣಾಯ ಸಮರ್ಥಾಃ। ಯಜ್ಞಯೋಗ್ಯಾಃ ಸ್ತೋತ್ರೈರ್ಮನಃಪೂರ್ವಕಂ ಮರುದ್ಗಣಂ ಸ್ತೌಮೀತಿ ಭಾವಃ । ತತ್ರ ದೃಷ್ಟಾಂತಃ । ಅಪೋ ನ । ಯಥಾ ಪರ್ಜನ್ಯೋ ಯುಗಪದೇವ ಬಹುಷು ಪ್ರದೇಶೇಷು ಬಹುಶೋ ಜಲಾನಿ ವರ್ಷತಿ ತದ್ವತ್ ॥ ವೃಷ್ಣೇ । ವೃಷು ಸೇಚನೇ । ಕನಿನ್ಯುವೃಷಿತಕ್ಷಿ-ತ್ಯಾದಿನಾ ಕನಿನ್ಪ್ರತ್ಯಯಃ । ಕಿತ್ತ್ವಾದ್ಗುಣಾಭಾವೋ ನಿತ್ತ್ವಾದಾದ್ಯುದಾತ್ತತ್ವಂ । ಚತುರ್ಥ್ಯೇಕವಚ ನೇಽಲ್ಲೋಪೋಽನ ಇತ್ಯಕಾರಲೋಪಃ । ಶರ್ಧಾಯ ॥ ಶೃಧು ಪ್ರಸಹನೇ । ಶರ್ಧ್ಯತೇ ಪ್ರಸಹ್ಯತೇಽನೇನ ಪರ್ವತಾದಿಕಮಿತಿ ಶರ್ಧೋ ಮರುತ್ಸಂಘಃ । ಕರಣೇ ಘಞ್ । ಞಿತ್ತ್ವಾದಾದ್ಯುದಾತ್ತತ್ವಂ । ಸುಮು-ಖಾಯ । ಶೋಭನೋ ಮುಖೋ ಯಸ್ಯ । ನಞ್ಸುಭ್ಯಾಮಿತಿ ಪ್ರಾಪ್ತೇ ವ್ಯತ್ಯಯೇನ ಪೂರ್ವಪದಪ್ರಕೃತಿ-ಸ್ವರತ್ವಂ । ನೋಧಃ । ಪಾದಾದಿತ್ವಾತ್ ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ । ಸುಹಸ್ತ್ಯಃ । ಹಸ್ತೇ ಭವಾ ಹಸ್ತ್ಯಾಃ । ಭವೇ ಛಂದಸೀತಿ ಯತ್ । ಯತೋ ನಾವ ಇತ್ಯಾದ್ಯುದಾತ್ತತ್ವಂ । ತತಃ ಸುಶಬ್ದೇನ ಬಹುವ್ರೀಹಾವಾದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ನೋಧಃ**—ನೋಧಸನೇ । **ವೃಷ್ಣೇ**—ಇಷ್ಟಾರ್ಥಪ್ರದರಾದ । **ಸುಮುಖಾಯ**—ಮಂಗಳಕರವಾದ ಯಜ್ಞವುಳ್ಳ । **ವೇಧಸೇ**—ಫಲಪುಷ್ಪಾದಿಕರ್ತೃವಾದ । **ಮರುದ್ಭ್ಯಃ**—ಮರುತ್ತುಗಳ । **ಶರ್ಧಾಯ**—ಸಮೂಹಕ್ಕೆ । **ಸುವೃಕ್ತಿಂ**—ಚೆನ್ನಾಗಿ ಪ್ರಸನ್ನೀಕರಿಸಿಕೊಳ್ಳುವ ಸ್ತುತಿಯನ್ನು । **ಪ್ರ ಭರ**—ಪ್ರೇರಿಸು (ಮಾಡು) । **ಧೀರಃ**—ಧೀಮಂತನಾದ ನಾನು । **ಸುಹಸ್ತ್ಯಃ**—ಒಳ್ಳೆಯ ಅಂಗುಳಿಗಳಿಂದ ಯುಕ್ತನಾಗಿ (ಅಂಜಲಿಬದ್ಧನಾಗಿ) । **ಮನಸಾ**—ಮನಸ್ಸಿನಿಂದ । **ವಿದಥೇಷು**—ಯಜ್ಞಗಳಲ್ಲಿ । **ಆಭುವಃ**—ಶಾಸ್ತ್ರಪ್ರಕಾರ ಪ್ರಯುಕ್ತವಾದ (ದೇವತೆಗಳನ್ನು ಅಭಿಮುಖೀಕರಿಸಿಕೊಳ್ಳುವ) । **ಗಿರಃ**—ಸ್ತುತಿರೂಪವಾದ ವಾಕ್ಯಗಳನ್ನು । **ಅಪೋ ನ**—ನೀರಿನಂತೆ । **ಸಮಂಜೇ**—ಚೆನ್ನಾಗಿ ವ್ಯಕ್ತಪಡಿಸುತ್ತೇನೆ ॥

॥ ಭಾವಾರ್ಥ ॥

ಎಲೈ ನೋಧಸಋಷಿಯೇ, ಇಷ್ಟಾರ್ಥಪ್ರದರಾದ, ಯಜ್ಞದಲ್ಲಿ ಸ್ತುತ್ಯರಾದ, ಫಲಪುಷ್ಪಕರ್ತೃಗಳಾದ ಮರುದ್ದೇವತೆಗಳನ್ನು ಚೆನ್ನಾಗಿ ಪ್ರಸನ್ನರಾಗುವಂತೆ ಸ್ತುತಿಸು. ನೋಧಋಷಿಯಾದ ನಾನು ಸಮಾಹಿತನಾಗಿ, ಅಂಜಲಿಬದ್ಧನಾಗಿ, ಯಜ್ಞಗಳಲ್ಲಿ ದೇವತೆಗಳನ್ನು ಅಭಿಮುಖರನ್ನಾಗಿ ಮಾಡಬಲ್ಲ ಸ್ತುತಿವಾಕ್ಯಗಳನ್ನು, ಜಲಪ್ರವಾಹದಂತೆ, ಸುಲಭವಾಗಿ ಉಚ್ಚರಿಸುತ್ತೇನೆ.

## English Translation

Offer, Nodhas, earnest praise to the company of the Maruts, the senders of rain and ripeners of fruit, deserving of adoration Composed, and with folded-hands, I utter the praises conceived in my mind, which are efficacious in sacred rites (and flow readily) as the waters

॥ ವಿಶೇಷವಿಷಯಗಳು ॥

**ವೃಷ್ಣೇ—ಕಾಮಾನಾಂ ವರ್ಷಿತ್ರೇ** ತಮ್ಮನ್ನು ಸೇವಿಸುವವರ ಅಭಿಲಾಷೆಗಳನ್ನು ಪೂರ್ತಿಮಾಡುವವರು. ಈ ಮರುದ್ದೇವತೆಗಳೆಂದು ಅಭಿಪ್ರಾಯವು. ಈ ಮರುದ್ದೇವತೆಗಳು ನಲವತ್ತೊಂಭತ್ತು ಮಂದಿ ಇರುವುದರಿಂದ ಇವರ ಸಮೂಹವನ್ನು ಉದ್ದೇಶಮಾಡಿಕೊಂಡು ಇಲ್ಲಿ ಏಕವಚನವು ಪ್ರಯುಕ್ತವಾಗಿರುವುದು

**ಶರ್ಧಾಯ—ಶರ್ಧ್ಯತೇ ಪ್ರಸಹ್ಯತೇ ಅನೇನ ಪರ್ವತಾದಿಕಂ ಇತಿ ಶರ್ಧಃ ಮರುತ್ಸಂಘಃ.** ಬೆಟ್ಟವೇ ಮೊದಲಾದವುಗಳನ್ನು ಕೂಡ ಅಲುಗಾಡುವಂತೆ ಮಾಡುವಕಾರಣ ಮರುದ್ದೇವತೆಗಳ ಗುಂಪಿಗೆ ಶರ್ಧರೆಂದು ಹೆಸರು ಉಂಟಾಗಿರುವುದು.

**ವೇಧಸೇ—ಪುಷ್ಪಫಲಾದೀನಾಂ ಕರ್ತ್ರೇ । ವಾಯೌ ಹಿ ಸತಿ ಪುಷ್ಪಾಣಿ ಫಲಾನಿ ಚ ಉತ್ಪದ್ಯಂತೇ** ವಾಯುವಿನ ಚಲನವಲನಾದಿಗಳಿಂದ ವೃಕ್ಷಗಳೂ ಮತ್ತು ಲತೆಗಳೂ ಮೊದಲಾದ ಸ್ಥಾವರ ಜಂಗಮಾತ್ಮಕವಾದ ಪ್ರಪಂಚದಲ್ಲಿ ಆಯಾಯ ಪುಷ್ಪಫಲಾದಿಗಳೇ ಮೊದಲಾದವುಗಳು ಉತ್ಪನ್ನವಾಗುವುವು ಅದ್ದರಿಂದಲೇ ಈ ಮರುದ್ದೇವತೆಗಳು ವೇಧಶ್ಶಬ್ದದಿಂದ ಬೋಧ್ಯರಾಗಿರುವರು. ಸ್ಕಂದಸ್ವಾಮಿಗಳು ವೇಧಶ್ಶಬ್ದಕ್ಕೆ ಪ್ರಾಜ್ಞರೆಂದು ಅರ್ಥವನ್ನು ಮಾಡಿರುವರು

**ಸುಹಸ್ತ್ಯಃ—ಶೋಭನಾಂಗುಲಿಯುಕ್ತಃ** ಸ್ತೋತ್ರವನ್ನು ಮಾಡುವ ಕಾಲಕ್ಕನುಗುಣವಾಗಿ ವಿನ್ಯಾಸ ಮಾಡಿರುವ ಅಂಗುಲಿಗಳಿಂದ ಕೂಡಿದ ಹಸ್ತವುಳ್ಳವನೆಂದು ಅಭಿಪ್ರಾಯವು

**ವಿದಥೇಷು—ಯಜ್ಞೇಷು ।** ಯಜ್ಞಗಳಲ್ಲಿ ವಿದಥಶಬ್ದವು ಯಜ್ಞನಾಮಗಳಲ್ಲಿ ಪಠಿತವಾಗಿರುವುದು (ನಿ ೩-೧೭)

**ಆಭುವಃ—ಯಥಾಶಾಸ್ತ್ರಂ ಪ್ರಯುಕ್ತಾ ಭವಂತೀತ್ಯಾಭುವಃ ದೇವತಾಭಿಮುಖೀಕರಣಾಯ ಸಮರ್ಥಾಃ** ಯಜ್ಞದಲ್ಲಿ ಪಠಿಸುವ ಸ್ತೋತ್ರಗಳು ಶಾಸ್ತ್ರಕ್ಕನುಸಾರವಾಗಿ ಪ್ರಯುಕ್ತಗಳಾಗಿ ಆಯಾಯ ದೇವತೆಗಳನ್ನು

ಯಜ್ಞಮಾಡುವ ಯಜಮಾನರಿಗೆ ಅಭಿಮುಖರನ್ನಾಗಿ ಮಾಡುವುದರಲ್ಲಿ ತಕ್ಕಮಟ್ಟಿನ ಶಕ್ತಿಯನ್ನು ಹೊಂದಿರುವುವು ಎಂದು ಅಭಿಪ್ರಾಯವು. ಸ್ಕಂದಸ್ವಾಮಿಗಳು—"ಶರ್ಧಶಬ್ದವು" ಉತ್ಸಾಹವುಳ್ಳ ಎಂದು ಅರ್ಥವನ್ನು ಹೇಳುವುದು ವೇಧಶ್ಶಬ್ದವು ಪ್ರಾಜ್ಞರೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು ಸುಹಸ್ತ್ಯಃ-ಸುವರ್ಣಾಲಂಕಾರವುಳ್ಳ ಹಸ್ತವುಳ್ಳವನು ಮತ್ತು ಸುಹಸ್ತ್ಯಃ-ವಾಕ್ಯಗಳು ಆ ಭುವಃ --ಮಹತ್ತಾದವುಗಳು" ಎಂದು ಈ ಶಬ್ದಗಳಿಗೆ ಬೇರೆ ಬೇರೆ ಯಾವ ಅರ್ಥವನ್ನು ಹೇಳಿರುವರು. ಗಣವೆಂಬ ಶಬ್ದವನ್ನು ಅಧ್ಯಾಹಾರ ಮಾಡಿಕೊಂಡು ಅಂತರಾತ್ಮನಾದ ನಾನು ಮನಸ್ಸಿನೊಡನೆ ಸೇರಿ ಮರುದ್ಗಣಕ್ಕಾಗಿ ಸ್ತೋತ್ರವನ್ನು ಹೇಳುತ್ತೇನೆ ಆದ್ದರಿಂದ ಶರೀರಾತ್ಮನಾದ ಎಲೈ ನೋಧ ಋಷಿಯೇ ನೀನೂ ಕೂಡ ಮರುದ್ಗಣದ ವಿಷಯವಾಗಿ ಪೂಜ್ಯವಾದ ಸ್ತೋತ್ರವನ್ನು ಪಠಿಸು ಎಂದು ಅರ್ಥ ಮಾಡಿರುವರು

॥ ವ್ಯಾಕರಣಪ್ರಕ್ರಿಯಾ ॥

**ವೃಷ್ಣೇ**—ವೃಷು ಸೇಚನೇ ಧಾತು **ಕನಿನ್ಯುವೃಷಿತಕ್ಷಿ**-(ಉ ಸೂ ೧-೧೫೪) ಎಂಬುದರಿಂದ ಕನಿನ್ ಪ್ರತ್ಯಯ ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ ವೃಷನ್ ಶಬ್ದವಾಗುತ್ತದೆ ಚತುರ್ಥೀ ಏಕವಚನದಲ್ಲಿ **ಅಲ್ಲೋಪೋಽನಃ** ಎಂಬುದರಿಂದ ಅಕಾರಲೋಪ. **ರಷಾಭ್ಯಾಂ**-ಸೂತ್ರದಿಂದ ನಕಾರಕ್ಕೆ ಣತ್ವ. ವೃಷ್ಣೇ ಎಂದು ರೂಪವಾಗುತ್ತದೆ ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ

**ಶರ್ಧಾಯ**—ಶೃಧು ಪ್ರಸಹನೇ ಧಾತು ಶರ್ಧ್ಯತೇ ಪ್ರಸಹ್ಯತೇ ಅನೇನ ಪರ್ವತಾದಿಕಮಿತಿ ಶರ್ಧಃ ಮರುತ್ಸಂಘಃ (ಗಾಳಿಯ ಸಾಧನದಿಂದ ಪರ್ವತಾದಿಗಳು ಸಹಿಸಲ್ಪಡುತ್ತವೆ) ಕರಣಾರ್ಥದಲ್ಲಿ ಘಞ್ ಪ್ರತ್ಯಯ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಉಪಧೆಗೆ ಗುಣ ಶರ್ಧ ಎಂದು ರೂಪವಾಗುತ್ತದೆ. ಚತುರ್ಥೀ ಏಕವಚನದ ರೂಪ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಪ್ರತ್ಯಯ ಞಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ.

**ಸುಮಖಾಯ**—ಶೋಭನಃ ಮಖೋ ಯಸ್ಯ ಸಃ ಸುಮಖಃ ತಸ್ಮೈ ಸುಮಖಾಯ **ನಞ್ಸುಭ್ಯಾಂ** (ಪಾ ಸೂ ೬-೨-೧೭೨) ಎಂಬುದರಿಂದ ಸ್ವರವು ಪ್ರಾಪ್ತವಾದರೆ ವ್ಯತ್ಯಯದಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ

**ನೋಧಃ**--ಸಂಬುದ್ಧಿಯಲ್ಲಿ ಸಕಾರಕ್ಕೆ ರುತ್ವ ವಿಸರ್ಗಬಂದರೆ ನೋಧಃ ಎಂದು ರೂಪವಾಗುತ್ತದೆ ಪಾದದ ಆದಿಯಲ್ಲಿರುವುದರಿಂದ **ಆಮಂತ್ರಿತಸ್ಯ** (ಪಾ ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಸುವೃಕ್ತಿಂ** ವೃಜೀ ವರ್ಜನೇ ಧಾತು **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ **ಚೋಃ ಕುಃ** ಸೂತ್ರದಿಂದ ಧಾತುವಿನ ಜಕಾರಕ್ಕೆ ಕುತ್ವ **ಖರಿ ಚ** ಎಂಬುದರಿಂದ ಚರ್ತ್ವ ದ್ವಿತೀಯಾ ಏಕವಚನರೂಪ **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ

**ಭರ**—ಹಿಂದಿನ ಮಂತ್ರದಲ್ಲಿ ಪ್ರಕ್ರಿಯಾ ಹೇಳಿದೆ

**ಸುಹಸ್ತ್ಯಃ**—ಹಸ್ತೇ ಭವಾಃ ಹಸ್ತ್ಯಾಃ **ಭವೇ ಛಂದಸಿ** (ಪಾ ಸೂ ೪.೪.೧೧೦) ಎಂಬುದರಿಂದ ಭವಾರ್ಥದಲ್ಲಿ ಯತ್ ಪ್ರತ್ಯಯ **ಯತೋಽನಾವಃ** (ಪಾ ಸೂ ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ

ಬರುತ್ತದೆ ಶೋಭನಾಃ ಹಸ್ತಾಃ ಯಸ್ಯ ಸಃ ಸುಹಸ್ತ್ಯಃ ಬಹುವ್ರೀಹಿಸಮಾಸದಲ್ಲಿ **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ ಸೂ ೬-೨-೧೧೯) ಎಂಬುದರಿಂದ ದ್ವ್ಯಚ್ಕವಾದ ಪದವು ಉತ್ತರಪದವಾಗಿರುವುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ

**ಸಮಞ್ಜೇ**—ಸಮ್ ಉಪಸರ್ಗ. ಅಂಜೂ ವ್ಯಕ್ತಿಮರ್ಷಣಕಾಂತಿಗತಿಷು ಧಾತು. ವ್ಯತ್ಯಯದಿಂದ ಆತ್ಮನೇ ಪದಪ್ರತ್ಯಯ ಬರುತ್ತದೆ. **ಶ್ನಸೋರಲ್ಲೋಪಃ** ಎಂಬುದರಿಂದ ಶ್ನ ವಿನ ಅಕಾರಕ್ಕೆ ಲೋಪ ಉತ್ತಮಪುರುಷದ ಇಟಿಗೆ **ಟಿತ ಆತ್ಮನೇಪದಾನಾಂ**-ಸೂತ್ರದಿಂದ ಏತ್ವ. ಅಂಜೇ ಎಂದು ರೂಪವಾಗುತ್ತದೆ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ತೇ ಜಜ್ಞಿರೇ ದಿವ ಋಷ್ವಾಸ ಉಕ್ಷಣೋ ರುದ್ರಸ್ಯ ಮರ್ಯಾ

ಅಸುರಾ ಅರೇಪಸಃ ।

ಪಾವಕಾಸಃ ಶುಚಯಃ ಸೂರ್ಯಾಇವ ಸತ್ವಾನೋ ನ ದ್ರಪ್ಸಿನೋ

ಘೋರವರ್ಪಸಃ ॥ ೨ ॥

॥ ಪದಪಾಠಃ ॥

ತೇ । ಜಜ್ಞಿರೇ । ದಿವಃ । ಋಷ್ವಾಸಃ । ಉಕ್ಷಣಃ । ರುದ್ರಸ್ಯ । ಮರ್ಯಾಃ ।

ಅಸುರಾಃ । ಅರೇಪಸಃ ।

ಪಾವಕಾಸಃ । ಶುಚಯಃ । ಸೂರ್ಯಾಃऽಇವ । ಸತ್ವಾನಃ । ನ । ದ್ರಪ್ಸಿನಃ ।

ಘೋರऽವರ್ಪಸಃ ॥ ೨ ॥

॥ ಸಾಯಣಭಾಷ್ಯಂ ॥

ತೇ ಮರುತೋ ದಿವೋಽಂತರಿಕ್ಷಾಜ್ಜಜ್ಞಿರೇ । ಪ್ರಾದುರ್ಬಭೂವುಃ । ಕೀದೃಶಾಃ । ಋಷ್ವಾಸೋ ದರ್ಶನೀಯಾಃ ಉಕ್ಷಣಃ ಸೇಕ್ತಾರಃ । ಯುವಾನ ಇತ್ಯರ್ಥಃ । ರುದ್ರಸ್ಯ ಮರ್ಯಾಃ । ಮರ್ಯಶಬ್ದೋ ಮನುಷ್ಯವಾಚೀಹ ಮರುತಾಂ ಮರ್ತ್ಯತ್ವಾಸಂಭವಾತ್ಪುತ್ರಾ ಇತ್ಯಸ್ಮಿನ್ನರ್ಥೇ ಪರ್ಯವಸ್ಯತಿ । ಮರುತಾಂ ರುದ್ರಪುತ್ರತ್ವಂ ಚ ಮಂತ್ರಾಂತರೇ ಸ್ಪಷ್ಟಂ । ಆ ತೇ ಪಿತರ್ಮರುತಾಂ ಸುಮ್ನಮೇತು । ಋಗ್ವೇ ೨-೩೩-೧ । ಇತಿ । ಅಸುರಾಃ ಶತ್ರೂಣಾಂ ನಿರಸಿತಾರಃ ಅರೇಪಸಃ । ರೇಪ ಇತಿ ಪಾಪನಾಮ । ಪಾಪರಹಿತಾಃ ಪಾವಕಾಸಃ ಸರ್ವೇಷಾಂ ಶೋಧಕಾಃ ಸೂರ್ಯಾ ಇವ ಶುಚಯೋ ದೀಪ್ತಾಃ ಸತ್ವಾನೋ ನ ಯಥಾ ಪರಮೇಶ್ವರಸ್ಯ ಭೂತಗಣಾ ಅತಿಶಯೇನ ಬಲಪರಾಕ್ರಮಾಃ । ತತ್ಸದೃಶಾ ಇತ್ಯರ್ಥಃ । ಸತ್ವಾನ ಇತಿ ಭೂತಗಣಾ ಉಚ್ಯಂತೇ । ಅಥೋ ಯೇ ಅಸ್ಯ ಸತ್ವಾನಃ । ತೈ. ಸಂ ೪-೫-೧-೩ । ಇತ್ಯಾದೌ ತಥಾ ದರ್ಶನಾತ್ । ದ್ರಪ್ಸಿನೋ ವೃಷ್ಟ್ಯುದಕಬಿಂದುಭಿರ್ಯುಕ್ತಾಃ । ಮರುತಃ ಸೃಷ್ಟಾಂ ವೃಷ್ಟಿಂ ನಯಂತೀತಿ ಶ್ರುತೇಃ । ತೈ. ಸಂ ೨-೪-೧೦-೨ । ಘೋರವರ್ಪಸಃ । ವರ್ಪ ಇತಿ ರೂಪನಾಮ । ಘೋರರೂಪಾಃ । ಶತ್ರೂಣಾಂ ಭಯಂಕರರೂಪಾ ಇತ್ಯರ್ಥಃ । ಯದ್ವಾ । ಸತ್ವಾನೋ ನ ಘೋರವರ್ಪಸಃ । ಯಥಾ ಭೂತಗಣಾ ಭಯಂಕರರೂಪಾಸ್ತದ್ವದೇತೇಽಪೀತ್ಯರ್ಥಃ ॥ ಋಷ್ವಾಸಃ । ಋಷೀ ಗತೌ । ಗತ್ಯರ್ಥಾ ಬುದ್ಧ್ಯರ್ಥಾ ಇತ್ಯತ್ರ ಜ್ಞಾನಾರ್ಥಃ । ಸರ್ವನಿಘೃಷ್ವೇತ್ಯಾದೌ । ಉ ೧-೧೫೩ । ವಪ್ರತ್ಯಯಾಂತೋ ನಿಪಾತಿತಃ । ಆಜ್ಜಸೇರಸುಕ್ । ಉಕ್ಷಣಃ । ವಾ ಷಪೂರ್ವಸ್ಯ ನಿಗಮ ಇತ್ಯುಪಧಾದೀರ್ಘಾಭಾವಃ । ಅರೇಪಸಃ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸತ್ವಾನಃ । ಷದ್ಲೃ ವಿಶರಣಗತ್ಯವಸಾದನೇಷು । ಪ್ರ ಈರಸದ್ಯೋಸ್ತುಟ್ಚ । ಉ. ೪-೧೧೬ । ಇತಿ ವಿಧೀಯಮಾನಃ ಕ್ವನಿಪ್ಪ್ರತ್ಯಯೋ ಬಹುಲವಚನಾತ್ಕೇವಲಾದಪಿ ಭವತಿ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ ॥

॥ ಪ್ರತಿಪದಾರ್ಥ ॥

**ತೇ**—ಆ ಮರುದ್ದೇವತೆಗಳು । **ಋಷ್ವಾಸಃ**—ಮನೋಹರ ರೂಪವುಳ್ಳವರಾಗಿಯೂ, (ಗಮನಸ್ವಭಾವವುಳ್ಳವರಾಗಿ, ಜ್ಞಾನಿಗಳಾಗಿ) । **ಉಕ್ಷಣಃ**—ತರುಣರಾಗಿಯೂ । **ರುದ್ರಸ್ಯ ಮರ್ಯಾಃ**—ರುದ್ರನ ಪುತ್ರರಾಗಿಯೂ । **ಅಸುರಾಃ**—ಶತ್ರುನಾಶಕರಾಗಿಯೂ । **ಅರೇಪಸಃ**—ಪಾಪರಹಿತರಾಗಿಯೂ । **ಪಾವಕಾಸಃ**—(ಎಲ್ಲರನ್ನೂ) ಪವಿತ್ರರನ್ನಾಗಿ ಮಾಡುವವರಾಗಿಯೂ । **ಸೂರ್ಯಾ ಇವ**—ಸೂರ್ಯನಂತೆ । **ಶುಚಯಃ**—ಪ್ರಕಾಶಮಾನರಾಗಿಯೂ । **ಸತ್ವಾನೋ ನ** (ಪರಮೇಶ್ವರನ ಭೂತಗಣದಂತೆ) ಬಲಿಷ್ಠರಾಗಿಯೂ । **ದ್ರಪ್ಸಿನಃ**—ಜಲಬಿಂದುಯುಕ್ತರಾಗಿಯೂ । **ಘೋರವರ್ಪಸಃ**—(ಶತ್ರುಗಳಿಗೆ) ಭಯಂಕರಾಕಾರವುಳ್ಳವರಾಗಿಯೂ । **ದಿವಃ**—ಅಂತರಿಕ್ಷದಿಂದ । **ಜಜ್ಞಿರೇ**—ಆವಿರ್ಭೂತರಾದರು ॥

॥ ಭಾವಾರ್ಥ ॥

ಮನೋಹರವಾದ ರೂಪವುಳ್ಳವರೂ, ತರುಣರೂ, ರುದ್ರನ ಪುತ್ರರೂ, ಶತ್ರುನಾಶಕರೂ, ತಾವು ಸ್ವತಃ ಶುದ್ಧರೂ, ಇತರರನ್ನು ಶುದ್ಧಿಮಾಡತಕ್ಕವರೂ ಸೂರ್ಯನಂತೆ ಪ್ರಕಾಶಮಾನರೂ, ಭೂತಗಣದಂತೆ ಬಲಿಷ್ಠರೂ, ಶತ್ರು

ಗಳಿಗೆ ಭಯಂಕರವಾದ ರೂಪವುಳ್ಳವರೂ, ಆದ ಮರುದ್ದೇವತೆಗಳು ವೃಷ್ಟ್ಯುದಕ ಬಿಂದುಗಳಿಂದ ಯುಕ್ತರಾಗಿ ಅಂತರಿಕ್ಷದಿಂದ ಆವಿರ್ಭೂತರಾದರು.

## English Translation.

They were born handsome and vigorus from the sky, the sons of Rudra, the conquerors of their foes, pure from sin, and purifying all, radiant as suns, powerful as evil spirits, diffusers of raindrops, and of fearful forms

‖ ವಿಶೇಷ ವಿಷಯಗಳು ‖

**ಋಷ್ವಾಸಃ—ದರ್ಶನೀಯಾಃ** । ಸೌಂದರ್ಯಶಾಲಿಗಳು, ರೂಪವಂತರು.

**ಉಕ್ಷಣಃ—ಸೇಕ್ತಾರಃ, ಯುವಾನಃ, ವರ್ಷಿತಾರಃ,** ಮಳೆಯನ್ನು ಸುರಿಯುವಂತೆ ಮಾಡುವವರು, ಯೌವನದಿಂದ ಕೂಡಿರುವರು, ಮರುದ್ದೇವತೆಗಳು.

**ರುದ್ರಸ್ಯ ಮರ್ಯಾಃ—ಮರ್ಯ ಶಬ್ದಃ ಮನುಷ್ಯವಾಚೀ ಇಹ ಮರುತಾಂ ಮರ್ತ್ಯತ್ವಾಸಂಭವಾತ್ ಪುತ್ರಾ ಇತಿ ಅರ್ಥೇ ಪರ್ಯವಸ್ಯತಿ. ಮರುತಾಂ ರುದ್ರಪುತ್ರತ್ವಂ "ಆ ತೇ ಪಿತರ್ಮರುತಾಂ ಸುಮ್ನಮೇತು" (ಋ. ಸಂ. ೨-೩೩-೧) ಇತಿ.** ಮರ್ಯ ಎಂದರೆ ಮನುಷ್ಯರೆಂದು ಅರ್ಥವು ಮರುದ್ದೇವತೆಗಳಿಗೆ ಮರಣಧರ್ಮವುಳ್ಳ ಮನುಷ್ಯತ್ವವು ಉಂಟಾಗದಿರುವ ಕಾರಣ ಇವರು ಮಕ್ಕಳಾಗಿರುವರು ಎಂದು ತಿಳಿಯಬೇಕು "ಆ ತೇ ಪಿತರ್ಮರುತಾಂ" ಎಂಬ ಋಕ್ಸಂಹಿತಾವಾಕ್ಯವು ಮರುದ್ದೇವತೆಗಳು ರುದ್ರನ ಪುತ್ರರಾಗಿರುವರೆಂಬ ಅಭಿಪ್ರಾಯವನ್ನು ವ್ಯಕ್ತಗೊಳಿಸುತ್ತದೆ

ಸ್ಕಂದಸ್ವಾಮಿಗಳು—ಈ ಮರುದ್ದೇವತೆಗಳು ("ತೇ ದಿವಸ್ಪರಾಶಾತ್ ಜಜ್ಞಿರೇ ದ್ಯೌರೇಷಾಂ ಮಾತಾ") ಅಂತರಿಕ್ಷದಿಂದ ಉತ್ಪನ್ನರಾದವರು ಅಂತರಿಕ್ಷವೇ ಇವರಿಗೆ ಜನನಿಯು ಎಂದು ಹೇಳಿರುವರು ಮತ್ತು ಅದಿತಿದೇವಿ ಕಶ್ಯಪಋಷಿ ಇವರಿಂದ ಮರುದ್ದೇವತೆಗಳು ಜನ್ಮವನ್ನು ಪಡೆದಿರುವರೆಂಬುದು ಪುರಾಣಾದಿ ಇತಿಹಾಸದಲ್ಲಿ ಸ್ಪಷ್ಟವಾಗಿರುತ್ತದೆ ಈ ಮರುದ್ದೇವತೆಗಳು ತಮ್ಮ ನಿರತಿಶಯವಾದ ಮಹಿಮೆಯನ್ನು ಎಲ್ಲರಿಗೂ ತಿಳಿಯುವಂತೆ ಮಾಡುವುದಕ್ಕಾಗಿ ಹೀಗೆ ತಮ್ಮ ಉತ್ಪತ್ತಿಯನ್ನು ವ್ಯಕ್ತಮಾಡಿರುವರು ಎಂದು ತಿಳಿಯಬೇಕು ಮತ್ತು—"ರುದ್ರಸ್ಯ ಯೇ ಮೀಳ್ಹುಷಃ ಸಂತಿ ಪುತ್ರಾಃ" (ಋ ಸಂ ೬-೬೬-೩ ಯಾಮನ್ ರುದ್ರಸ್ಯ ಸೂನವಃ ಋ. ಸಂ ೧-೬೪-೧ ಎಂಬ ಮಂತ್ರಗಳಿಂದ ಈ ಮರುದ್ದೇವತೆಗಳು ರುದ್ರನ ಪುತ್ರರಾಗಿರುವರು ಎಂಬ ಅರ್ಥವನ್ನು ಹೇಳಿರುತ್ತಾರೆ

**ಅಸುರಾಃ- ಶತ್ರೂಣಾಂ ನಿರಸಿತಾರಃ** ಯಜ್ಞಮಾಡುವ ಯಜಮಾನರುಗಳ ಶತ್ರುಗಳನ್ನು ನಾಶಮಾಡುವವರು.

**ಅರೇಪಸಃ—ಪಾಪರಹಿತಾಃ. ರೇಪ ಇತಿ ಪಾಪನಾಮ ।** ಮರುದ್ದೇವತೆಗಳು ಪಾಪಸಂಬಂಧವಿಲ್ಲದವರು. ರೇಪವೆಂದರೆ ಪಾಪವೆಂದು ಅರ್ಥವು.

**ಪಾವಕಾಸಃ—ಸರ್ವೇಷಾಂ ಶೋಧಕಾಃ** ಅಗ್ನಿಯು ಇತರ ಪದಾರ್ಥಗಳನ್ನು ಶುದ್ಧಿಮಾಡುವ ಹಾಗೆ ಈ ಮರುದ್ದೇವತೆಗಳು ಎಲ್ಲಕ್ಕೂ ಪರಿಶುದ್ಧಿಯನ್ನು ಉಂಟುಮಾಡುವವರು

**ಸತ್ವಾನೋ ನ—ಸತ್ವಾನ ಇತಿ ಭೂತಗಣಾ ಉಚ್ಯಂತೇ । ಅಥೋ ಯೇ ಅಸ್ಯ ಸತ್ವಾನಃ ಇತ್ಯಾದೌ ತಥಾದರ್ಶನಾತ್ । (ತೈ. ಸಂ. ೪-೫-೧-೩)** ನ ಶಬ್ದವು ಉಪಮಾವಾಚಕವಾಗಿರುವುದು ಸತ್ವಾನಃ ಎಂಬ ಪದದಿಂದ ಪರಮೇಶ್ವರನ ಭೂತಗಣಗಳು ಎಂಬ ಅರ್ಥವು ಉಂಟಾಗುವುದು. ಈ ಮರುದ್ದೇವತೆಗಳು ಪರಮೇಶ್ವರನ ಭೂತಗಣಗಳ ಹಾಗೆ ಬಹಳ ಪರಾಕ್ರಮಶಾಲಿಗಳಾಗಿರುವರೆಂದು ಅಭಿಪ್ರಾಯವು

**ದ್ರಪ್ಸಿನಃ ವೃಷ್ಟ್ಯುದಕಬಿಂದುಭಿರ್ಯುಕ್ತಾಃ** ಮಳೆಯ ನೀರನ್ನು ಸುರಿಸುವ ಸಣ್ಣಹನಿಗಳಿಂದ ಕೂಡಿದವರು ಈ ಮರುದ್ದೇವತೆಗಳು ಎಂದರ್ಥವು **ಮರುತಃ ಸೃಷ್ಟಿಂ ನಯಂತಿ** (ತೈ ಸಂ ೨-೪-೧೦ ೨) ವೃಷ್ಟಿಯು ಎಲ್ಲಾ ಕಡೆಯಲ್ಲಿಯೂ ಆಗುವಂತೆ ಮಾಡುವರು ಎಂದು ದ್ರಪ್ಸಿನಃ ಎಂಬ ಪದಕ್ಕೆ ಅರ್ಥವು. ಸ್ಕಂದಸ್ವಾಮಿಗಳು "**ವೃಷ್ಟ್ಯುದಕಲಕ್ಷಣೇನ ರಸೇನ ರಸವಂತಃ । ಅಥವಾ ಸತ್ವಾನೋ ನೇತಿ ಶಬ್ದಾತ್ ಯಥಾ ಇಂದ್ರಪ್ರಭೃತಯೋ ದಾತಾರೋ ವ್ರಪ್ಸಿನಃ ತಥಾ ಪ್ರಪ್ಸಿನಃ**" ಮಳೆಯ ನೀರಿನ ರೂಪವಾದ ಹನಿಗಳಿಂದ ಕೂಡಿದ ಮರುದ್ದೇವತೆಗಳು ಇಂದ್ರನೇ ಮೊದಲಾದ ದೇವತೆಗಳಂತೆ ಮಳೆಯ ಸಣ್ಣಸಣ್ಣ ತುಂತುರುಗಳಿಂದ ಕೂಡಿದವರು ಎಂದು ಅರ್ಥವನ್ನು ಹೇಳಿರುವರು

**ಘೋರವರ್ಪಸಃ—ವರ್ಪ ಇತಿ ರೂಪನಾಮ. ಘೋರರೂಪಾಃ ಶತ್ರೂಣಾಂ ಭಯಂಕರರೂಪಾಃ । ಯಥಾ ಭೂತಗಣಾ ಭಯಂಕರರೂಪಾಃ ತದ್ವತ್ ಏತೇಽಪಿ** ಈ ಮರುದ್ದೇವತೆಗಳು ಯಜ್ಞ ಮಾಡುವ ಯಜಮಾನರುಗಳ ಶತ್ರುಗಳಿಗೆ ಪರಮೇಶ್ವರನ ಭೂತಗಣಗಳ ಹಾಗೆ ಭಯವನ್ನು ಉಂಟುಮಾಡುವ ಆಕಾರವನ್ನು ಧರಿಸಿ ಇರುವವರಾಗಿ ಕಾಣಿಸಿಕೊಳ್ಳುವರು. ವರ್ಪಃ ಶಬ್ದವು ಹದಿನಾರು ರೂಪನಾಮಗಳ ಮಧ್ಯದಲ್ಲಿ ಪಠಿತವಾಗಿರುವುದು (ನಿ ೩-೭)

॥ ವ್ಯಾಕರಣಪ್ರಕ್ರಿಯಾ ॥

**ಜಜ್ಞಿರೇ** ಜನೀ ಪ್ರಾದುರ್ಭಾವೇ ಧಾತು ಲಿಟ್ ಪ್ರಥಮಪುರುಷ ಬಹುವಚನದಲ್ಲಿ **ಲಿಟಸ್ತಝಯೋ-ರೇಶಿರೇಚ್** ಎಂಬುದರಿಂದ ಇರೇಚ್ ಆದೇಶ ದ್ವಿತ್ವಾದಿಗಳು ಬಂದಾಗ **ಉಕ್ತ**ರೂಪವಾಗುತ್ತದೆ ತಿಙಂತನಿಘಾತಸ್ವರ ಬರುತ್ತದೆ

**ದಿವಃ—ಊಡಿದಂಪದಾದಿ—**ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಋಷ್ವಾಸಃ**—ಋಷೀ ಗತೌ ಧಾತು ಗತ್ಯರ್ಥಾಃ ಬುದ್ಧ್ಯರ್ಥಾಃ, ಎಂಬುದುರಿಂದ ಇಲ್ಲಿ ಜ್ಞಾನಾರ್ಥಕವಾಗಿದೆ **ಸರ್ವನಿಘೃಷ್ವರಿಷ್ವಲಷ್ವ**—(ಉ ಸೂ. ೧-೧೫೧) ಎಂಬುದರಿಂದ ವಪ್ರತ್ಯಯಾಂತವಾಗಿ ನಿಪಾತಿತವಾಗಿದೆ.

ಋಷ್ವ ಜಸ್ ಎಂದಿರುವಾಗ **ಆಜ್ಜಸೇರಸುಕ್** ಎಂಬುದರಿಂದ ಜಸಿಗೆ ಅಸುಕಾಗಮ ಅಸಸ್ ಎಂದಿರುವಾಗ ಸಕಾರಕ್ಕೆ ರುತ್ವ ವಿಸರ್ಗ ಋಷ್ವಾಸಃ ಎಂದು ರೂಪವಾಗುತ್ತದೆ

**ಉಕ್ಷಣಃ**—ಉಕ್ಷನ್ ಶಬ್ದ **ಶ್ವನ್ನುಕ್ಷನ್**—(ಉ. ಸೂ. ೧. ೧೫೭) ಎಂಬುದರಿಂದ ಕನಿಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪ್ರಥಮಾ ಜಸ್ಸಿನಲ್ಲಿ **ಸರ್ವನಾಮಸ್ಥಾನೇ ಚಾಸಂಬುದ್ಧೌ** ಸೂತ್ರದಿಂದ ದೀರ್ಘವು ಪ್ರಾಪ್ತ-ವಾದರೆ **ವಾ ಷಪೂರ್ವಸ್ಯ ನಿಗಮೇ** (ಪಾ. ಸೂ. ೬-೪-೯) ಎಂಬುದರಿಂದ ಉಪಧಾ ದೀರ್ಘ ಬರುವುದಿಲ್ಲ

**ಅರೇಪಸಃ**—ನ ವಿದ್ಯತೇ ರೇಪಃ ಯೇಷಾಂ ತೇ ಅರೇಪಸಃ ಬಹುವ್ರೀಹಿಸಮಾಸ **ನಞ್ಸುಭ್ಯಾಂ** (ಪಾ ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನಾಂತ ರೂಪ

**ಪಾವಕಾಸಃ**—ಪಾವಕ+ಜಸ್ ಎಂದಿರುವಾಗ **ಆಜ್ಜಸೇರಸುಕ್** (ಪಾ ಸೂ ೭-೧-೫೦) ಎಂಬುದರಿಂದ ಅಸುಕಾಗಮ. ರುತ್ವವಿಸರ್ಗ ಬಂದರೆ ಪಾವಕಾಸಃ ಎಂದು ರೂಪವಾಗುತ್ತದೆ.

**ಸತ್ವಾನಃ**—ಷದ್ಲೃ ವಿಶರಣಗತ್ಯವಸಾದನೇಷು ಧಾತು **ಪ್ರ ಈರಸದ್ಯೋಸ್ತುಟ್ ಚ** (ಉ. ಸೂ. ೪-೫೨೬) ಎಂಬುದರಿಂದ ವಿಧಿಸಲ್ಪಡುವ ಕ್ವನಿಪ್ ಪ್ರತ್ಯಯವು **ಉಣಾದಯೋ ಬಹುಲಂ** ಎಂದು ಬಹುವಚನದಿಂದ ಕೇವಲವಾಗಿರುವಾಗಲೂ ಬರುತ್ತದೆ **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸಕಾರಾದೇಶ ಸತ್ವನ್ ಶಬ್ದ ವಾಗುತ್ತದೆ ಜಸಿನಲ್ಲಿ **ಸರ್ವನಾಮಸ್ಥಾನೇಚಾ**—ಎಂಬುದರಿಂದ ನಾಂತೋಪಧೆಗೆ ದೀರ್ಘ. ಸತ್ವಾನಃ ಎಂದು ರೂಪ ವಾಗುತ್ತದೆ. ವನಿಪ್ ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತವಾಗುತ್ತದೆ. ಆಗ **ಧಾತೋಃ** ಎಂಬುದರಿಂದ ಬಂದಿರುವ ಧಾತುಸ್ವರವೇ ಉಳಿಯುತ್ತದೆ. ಸತ್ವಾನಃ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ

**ಘೋರವರ್ಪಸಃ**—ಘೋರಂ ವರ್ಪಃ ಏಷಾಂ ತೇ ಘೋರವರ್ಪಸಃ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ ॥ ೨ ॥



॥ ಸಂಹಿತಾಪಾಠಃ ॥

ಯುವಾನೋ ರುದ್ರಾ ಅಜರಾ ಅಭೋಗ್ಘನೋ ವವಕ್ಷುರಧ್ರಿಗಾವಃ ಪರ್ವತಾ ಇವ ।

ದೃಳ್ಹಾ ಚಿದ್ವಿಶ್ವಾ ಭುವನಾನಿ ಪಾರ್ಥಿವಾ ಪ್ರ ಚ್ಯಾವಯಂತಿ

ದಿವ್ಯಾನಿ ಮಜ್ಮನಾ || ೩ ||

|| ಪದಪಾಠಃ ||

ಯುವಾನಃ | ರುದ್ರಾಃ | ಅಜರಾಃ | ಅಭೋಕ್ ಽ ಹನಃ | ವವಕ್ಷುಃ | ಅಧ್ರಿ ಽ-

ಗಾವಃ | ಪರ್ವತಾಃ ಽ ಇವ |

ದೃಳ್ಹಾ | ಚಿತ್ | ವಿಶ್ವಾ | ಭುವನಾನಿ | ಪಾರ್ಥಿವಾ | ಪ್ರ | ಚ್ಯವಯಂತಿ |

ದಿವ್ಯಾನಿ | ಮಜ್ಮನಾ || ೩ ||

|| ಸಾಯಣಭಾಷ್ಯಂ ||

ಯುವಾನಸ್ತರುಣಾ ರುದ್ರಾ ರುದ್ರಪುತ್ರಾ ಅಜರಾ ಜರಾರಹಿತಾ ಅಭೋಗ್ಘನೋ ಯೇ ದೇವಾನ್ಹವಿರ್ಭಿರ್ನ ಭೋಜಯಂತಿ ತೇಷಾಂ ಹಂತಾರಃ ಅಧ್ರಿಗಾವೋಽಧೃತಗಮನಾಃ ಪರೈರನಿವಾರಿತಗತಯಃ ಪರ್ವತಾ ಇವ ದೃಢಾಂಗಾಃ ಏವಂಭೂತಾ ಮರುತೋ ವವಕ್ಷುಃ | ಸ್ತೋತೄಣಾಮಭಿಮತಂ ಪ್ರಾಪಯಿತುಮಿಚ್ಛಂತಿ | ಅಪಿ ಚ ವಿಶ್ವಾ ಸರ್ವಾಣಿ ಭುವನಾನಿ ಸದ್ಭಾವಂ ಪ್ರಾಪ್ತಾನಿ ಪಾರ್ಥಿವಾ ಪೃಥಿವ್ಯಾಂ ಭವಾನಿ ದಿವ್ಯಾನಿ ದಿವಿ ಭವಾನಿ ಚ ವಸೂನಿ ದೃಳ್ಹಾ ಚಿತ್ ದೃಢಾನ್ಯಪಿ ಮಜ್ಮನಾ | ಮಜ್ಮನೇತಿ ಬಲನಾಮ | ಮಜ್ಮನಾ ಶೋಧಕೇನ ಬಲೇನ ಪ್ರಚ್ಯಾವಯಂತಿ | ಪ್ರಚಾಲಯಂತಿ || ಅಭೋಗ್ಘನಃ | ಭೋಜಯಂತೀತಿ ಭೋಜಃ | ನ ಭೋಜೋಽಭೋಜಃ | ತೇಷಾಂ ಹಂತಾರಃ | ಬಹುಲಂ ಛಂದಸೀತಿ ಹಂತೇಃ ಕ್ವಿಪ್ | ಝಯೋ ಹೋಽನ್ಯತರಸ್ಯಾಂ | ಪಾ. ೮ ೪-೬೨ | ಇತಿ ಹಕಾರಸ್ಯ ಘತ್ವಂ | ಇನ್ಹನ್ಪೂಷಾರ್ಯಮ್ಣಾಂ ಶೌ | ಪಾ. ೬-೪-೧೨ | ಇತಿ ನಿಯಮಾದ್ದೀರ್ಘಾಭಾವ. | ವವಕ್ಷುಃ | ವಹ ಪ್ರಾಪಣೇ | ಅಸ್ಮಾದಿಚ್ಛಾಸನ್ಯೇಕಾಚ ಇತೀಟ್ಪ್ರತಿಷೇಧಃ | ದ್ವಿರ್ಭಾವಃ | ಢತ್ವಕತ್ವಷತ್ವಾನಿ | ಸನ್ಯತ ಇತೀತ್ವಾಭಾವಶ್ಛಾಂದಸಃ | ಲಿಟ್ಯುಸ್ಯಮಂತ್ರೇ | ಪಾ. ೩-೧-೩೫ | ಇತಿ ನಿಷೇಧಾದಾಮ್ಪ್ರತ್ಯಯಾಭಾವೇಽತೋ ಲೋಪ ಇತ್ಯಾಕಾರಲೋಪಃ | ಪ್ರತ್ಯಯಸ್ವರಃ | ಪಾದಾದಿತ್ವಾನ್ನಿಘಾತಾಭಾವಃ ||

|| ಪ್ರತಿಪದಾರ್ಥ ||

**ಯುವಾನಃ**--ತರುಣರಾದ | **ರುದ್ರಾಃ**--ರುದ್ರಪುತ್ರರಾದ | **ಅಜರಾಃ**—ಜರಾರಹಿತರಾದ | **ಅಭೋಗ್ಘನಃ**—ದೇವತೆಗಳಿಗೆ ಹವಿಸ್ಸನ್ನು ಅರ್ಪಿಸದೇ ಇರುವವರನ್ನು ವಧೆ ಮಾಡುವ | **ಅಧ್ರಿಗಾವಃ**—ಅವ್ಯಾ

ಹತಗತಿಯುಳ್ಳ । **ಪರ್ವತಾ ಇವ**—ಪರ್ವತಗಳಂತೆ ದೃಢಾಂಗರಾದ (ಮರುದ್ದೇವತೆಗಳು) । **ವವಕ್ಷುಃ**—(ಸ್ತೋತೃಗಳ ಇಷ್ಟಾರ್ಥವನ್ನು) ಒದಗಿಸಲು ಇಚ್ಛಿಸುತ್ತಾರೆ । **(ಅಪಿ ಚ**—ಮತ್ತೂ) । **ವಿಶ್ವಾ**—ಎಲ್ಲಾ । **ಪಾರ್ಥಿವಾ**—ಭೂಮಿಯಲ್ಲಿರುವ । **ದಿವ್ಯಾನಿ**-ಅಂತರಿಕ್ಷದಲ್ಲಿರುವ (ಸ್ವರ್ಗದಲ್ಲಿರುವ) । **ಭುವನಾನಿ**—ಇರುವಂಥವುಗಳನ್ನು (ಪದಾರ್ಥಗಳನ್ನು) । **ದೃಳ್ಹಾ ಚಿತ್**—ದೃಢವಾಗಿದ್ದಾಗ್ಯೂ । **ಮಜ್ಮನಾ**—ಬಲದಿಂದ । **ಪ್ರ ಚ್ಯಾವಯಂತಿ**—ಅಲ್ಲಾಡಿಸುತ್ತಾರೆ (ಚಲಿಸುವಂತೆ ಮಾಡುತ್ತಾರೆ ||

|| ಭಾವಾರ್ಥ ||

ಮರುದ್ದೇವತೆಗಳು ತರುಣರು, ರುದ್ರಪುತ್ರರು, ಜರಾರಹಿತರು, ಅವ್ಯಾಹತಗತಿಯುಳ್ಳವರು, ಪರ್ವತಗಳಂತೆ ದೃಢಾಂಗರು ಅಥವಾ ಅಚಲರು, ದೇವತೆಗಳನ್ನು ಪೂಜಿಸದವರನ್ನು ವಧಮಾಡುತ್ತಾರೆ ಸ್ತೋತೃಗಳ ಇಷ್ಟಾರ್ಥವನ್ನು ಪೂರೈಸುವುದರಲ್ಲಿ ಮಗ್ನರು ಇವರು, ಭೂಮಿಯಲ್ಲೇ ಆಗಲೀ, ಸ್ವರ್ಗದಲ್ಲಾಗಲೀ ಇರುವ ಪದಾರ್ಥಗಳು ಎಷ್ಟೇ ದೃಢವಾಗಿದ್ದರೂ, ಅವುಗಳನ್ನು ಚಲಿಸುವಂತೆ ಮಾಡುತ್ತಾರೆ.

## English Translation

Youthful Rudras, and undecaying, destructive of those who do not worship (the gods), of unobstructed progress, and immovable as mountains, they are desirous of granting (the wishes of the worshipper) and by their strength agitate all substances, whether of heaven or of earth

|| ವಿಶೇಷ ವಿಷಯಗಳು ||

**ರುದ್ರಾಃ—ರುದ್ರಪುತ್ರಾಃ ।** ರುದ್ರನ ಮಕ್ಕಳು. ಮರುದ್ದೇವತೆಗಳು ರುದ್ರಪುತ್ರರೆಂಬ ವಿಷಯದಲ್ಲಿ ಪ್ರಮಾಣವನ್ನು ಇದರ ಹಿಂದಿನ ಋಕ್ಕಿನಲ್ಲಿ ಹೇಳಿರುವುದು.

**ಅಭೋಗ್ಘನಃ—ಯೇ ದೇವಾನ್ ಹವಿರ್ಭಿಃ ನ ಭೋಜಯಂತಿ ತೇಷಾಂ ಹಂತಾರಃ ।** ದೇವತೆಗಳನ್ನು ಹವಿಸ್ಸುಗಳಿಂದ ತೃಪ್ತಿಪಡಿಸದೆ ಇರುವವರನ್ನು ನಾಶಮಾಡುವವರು

**ಅಧ್ರಿಗಾವಃ ಅಧೃತಗಮನಾಃ ಪರೈರನಿವಾರಿತಗತಯಃ ।** ಇತರರಿಂದ ತಡೆಯಲಾಗದ ಶಕ್ತಿಯುಳ್ಳವರು. ಮರುದ್ದೇವತೆಗಳು ಸಂಚಾರ ಮಾಡುವಾಗ ಇವರನ್ನು ಯಾರೂ ತಡೆಯಲಾರರೆಂದು ಅರ್ಥವು

**ದೃಳ್ಹಾಃ ಪರ್ವತಾ ಇವ—ದೃಢಾಂಗಾಃ ।** ಬೆಟ್ಟಗಳ ಹಾಗೆ ಬಲವಾದ ಅವಯವಗಳುಳ್ಳ ಶರೀರವನ್ನು ಹೊಂದಿರುವವರು

**ಮಜ್ಮನಾ ಪ್ರಚ್ಯಾವಯಂತಿ—ಮಜ್ಮನಾ ಶೋಧಕೇನ ಬಲೇನ । ಮಜ್ಮನೇತಿ ಬಲನಾಮ । ಪ್ರಚಾಲಯಂತಿ ।** ಮರುದ್ದೇವತೆಗಳು ಪೃಥಿವಿಯಲ್ಲಿಯೂ, ದೇವಲೋಕದಲ್ಲಿಯೂ ಉತ್ಪನ್ನವಾದ ಪದಾರ್ಥಗಳು

ದೃಢವಾಗಿದ್ದರೂ ಕೂಡ ಅವುಗಳನ್ನು ತಮ್ಮ ಬಲದಿಂದ ನಾಶಮಾಡುವರು ಎಂದು ಅರ್ಥವು ಮಜ್ಮನಾ ಎಂಬ ಪದವು ಬಲವೆಂಬ ಅರ್ಥದಲ್ಲಿ ಓಜಃ ಪಾಜಃ ಎಂಬ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ಪಠಿತವಾಗಿರುವುದು (ನಿ ೩-೯) ಸ್ಕಂದಸ್ವಾಮಿಗಳು ಈ ಋಕ್ಕಿನಲ್ಲಿರುವ ವಿವಕ್ಷುಃ ಎಂಬ ಪದವನ್ನು ಬಹುವಚನಸ್ಥಾನೇ ಏಕವಚನಂ ಎಂದು ವೈದಿಕಪ್ರಯೋಗಕ್ಕೆ ಕಾರಣವನ್ನು ಹೇಳಿ, ವಿವಕ್ಷವಃ ಎಂದು ಶಬ್ದವನ್ನು ಅಂಗೀಕರಿಸಿ ಇರುವರು. ಇದರಿಂದ ವಿವಕ್ಷಿಥ ಎಂಬ ಪದವು ಮಹನ್ನಾಮದಲ್ಲಿ ಪಠಿತವಾಗಿ ಇರುವುದರಿಂದ ವಿವಕ್ಷವಃ ಎಂಬ ಈ ಶಬ್ದವು ಮಹನ್ನಾಮವಾಗಿ ರುವುದು ಎಂದು ಅರ್ಥಮಾಡಿರುತ್ತಾರೆ

**ಭುವನಾನಿ ಸದ್ಭಾವಂ ಪ್ರಾಪ್ತಾನಿ ।** ಉತ್ಪತ್ತಿಯಿಂದ ಸ್ಥಿತಿಯನ್ನು ಹೊಂದಿರುವವುಗಳು

॥ ವ್ಯಾಕರಣಪ್ರಕ್ರಿಯಾ ॥

**ಅಭೋಗ್ಘನಃ** - ಭೋಜಯಂತೀತಿ ಭೋಜಃ । ನ ಭೋಜಃ ಅಭೋಜಃ । ತೇಷಾಂ ಹಂತಾರಃ ಹನ ಹಿಂಸಾಗತ್ಯೋಃ ಧಾತು ಇದಕ್ಕೆ **ಬಹುಲಂ ಛಂದಸಿ** ಎಂಬುದರಿಂದ ಕ್ವಿಪ್ ಪ್ರತ್ಯಯ ಅಭೋಜ್+ಹನ್ ಎಂದಿರುವಾಗ **ಝಯೋ ಹೋಽನ್ಯತರಸ್ಯಾಂ** (ಪಾ ಸೂ ೮-೪-೬೨) ಎಂಬುದರಿಂದ ಹಕಾರಕ್ಕೆ ಪೂರ್ವಸವರ್ಣ ಸಂವಾರನಾದ ಘೋಷಪ್ರಯತ್ನ ಸಾಮ್ಯದಿಂದ ಘಕಾರ ಬರುತ್ತದೆ ನಂತರ ಜಕಾರಕ್ಕೆ **ಚೋಃ ಕುಃ** ಎಂಬುದರಿಂದ ಕುತ್ವ ಅಭೋಗ್ಘನ್ ಶಬ್ದವಾಗುತ್ತದೆ ಜಸ್ ಪರದಲ್ಲಿರುವಾಗ ಉಪಧಾದೀರ್ಘಕ್ಕೆ **ಇನ್ ಹನ್ ಪೂಷಾರ್ಯಮ್ಣಾಂ ಶೌ** (ಪಾ ಸೂ ೬-೪-೧೨) ಎಂಬುದರಿಂದ ನಿಯಮಮಾಡಿರುವುದರಿಂದ ದೀರ್ಘ ಬರುವುದಿಲ್ಲ ಕಾರಕ ಪೂರ್ವಪದವಾಗಿರುವುದರಿಂದ **ಗತಿಕಾರಕೋಪಪದಾತ್ ಕೃತ್** ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ

**ವವಕ್ಷುಃ**—ವಹ ಪ್ರಾಪಣೇ ಧಾತು ಇಚ್ಛಾರ್ಥದಲ್ಲಿ **ಧಾತೋಃ ಕರ್ಮಣಃ ಸಮಾನ** ಎಂಬುದರಿಂದ ಸನ್ **ಏಕಾಚ ಉಪದೇಶೇನುದಾತ್ತಾತ್** ಎಂಬುದರಿಂದ ಸನ್ನಿಗೆ ಇಣ್ನಿಷೇಧ ಬರುತ್ತದೆ **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ **ಸನ್ಯತಃ** ಎಂಬುದರಿಂದ ಇತ್ವವು ಛಾಂದಸವಾಗಿ ಇಲ್ಲಿ ಬರುವುದಿಲ್ಲ ಧಾತುವಿನ ಹಕಾರಕ್ಕೆ ಝಲ್ ಪರದಲ್ಲಿರುವುದರಿಂದ **ಹೋಢಃ** ಎಂಬುದರಿಂದ ಢತ್ವ ಸಕಾರ ಪರದಲ್ಲಿರುವುದರಿಂದ **ಷಢೋಃ ಕಃ ಸಿ** ಎಂಬುದರಿಂದ ಕತ್ವ ಕಕಾರದ ಪರದಲ್ಲಿ ಸಕಾರ ಎಂದುದರಿಂದ **ಆದೇಶಪ್ರತ್ಯಯಯೋಃ** ಎಂಬುದರಿಂದ ಷತ್ವ **ಸನಾದ್ಯಂತಾಧಾತವಃ** ಎಂಬುದರಿಂದ ವವಕ್ಷ ಎಂಬ ಸನ್ನಂತವು ಧಾತುಸಂಜ್ಞೆಯನ್ನು ಹೊಂದುತ್ತದೆ ಇದಕ್ಕೆ ಲಿಟ್ಟಿನಲ್ಲಿ ಪ್ರಾಪ್ತವಾದ ಝಿಗೆ **ಪರಸ್ಮೈಪದಾನಾಂ**-ಸೂತ್ರದಿಂದ ಉಸ್ ಆದೇಶ. **ಕಾಸ್ ಪ್ರತ್ಯಯಾದಾಮಮಂತ್ರೇ ಲಿಟಿ** ಎಂಬಲ್ಲಿ ಅಮಂತ್ರೇ ಎಂದು ನಿಷೇಧಮಾಡಿರುವುದರಿಂದ ಆಮ್ ಬರುವುದಿಲ್ಲ **ಅತೋ ಲೋಪಃ** ಎಂಬುದರಿಂದ ಸನ್ನಿನ ಅಕಾರಕ್ಕೆ ಲೋಪ **ಲಿಟಿ ಧಾತೋರನಭ್ಯಾಸಸ್ಯ** ಎಂಬಲ್ಲಿ ಅನಭ್ಯಾಸಸ್ಯ ಎಂದುದರಿಂದ ಪುನಃ ಲಿಣ್ನಿಮಿತ್ತಕವಾಗಿ ದ್ವಿತ್ವ ಬರುವುದಿಲ್ಲ. ವವಕ್ಷುಃ ಎಂದು ರೂಪವಾಗುತ್ತದೆ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಅಂತೋದಾತ್ತವಾಗುತ್ತದೆ **ಅಪಾದಾದೌ** ಎಂದು ನಿಷೇಧಮಾಡಿರುವುದರಿಂದ ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ

**ವಿಶ್ವಾ**—ವಿಶ್ವ+ಜಸ್ ಎಂದಿರುವಾಗ **ಜಶ್ಶಸೋಃ ಶಿಃ** ಎಂಬುದರಿಂದ ಪ್ರಾಪ್ತವಾದ ಶಿಗೆ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಲೋಪ

**ಚ್ಯಾವಯಂತಿ**— ಚ್ಯು ಸಹನೇ ಧಾತು ಚುರಾದಿ **ಸತ್ಯಾಪಪಾಶ** ಸೂತ್ರದಿಂದ ಸ್ವಾರ್ಥದಲ್ಲಿ ಣಿಚ್ ಬರುತ್ತದೆ ಣಿಚ್ ನಿಮಿತ್ತಕವಾಗಿ ಧಾತುವಿಗೆ ವೃದ್ಧಿ ಆವಾದೇಶ. ಲಟಿನಲ್ಲಿ ಝಿ ಪ್ರತ್ಯಯ **ಝೋಂತಃ** ಎಂಬುದರಿಂದ ಅಂತಾದೇಶ ಶಪ್ ವಿಕರಣ. ತನ್ನಿಮಿತ್ತಕವಾಗಿ ಣಿಚ್ಚಿಗೆ ಗುಣ ಅಯಾದೇಶ. ಚ್ಯಾವಯಂತಿ ಎಂದು ರೂಪ ವಾಗುತ್ತದೆ ॥ ೩ ॥



॥ ಸಂಹಿತಾಪಾಠಃ ॥

ಚಿತ್ರೈರಂಜಿಭಿರ್ವಪುಷೇ ವ್ಯಂಜತೇ ವಕ್ಷಃಸು ರುಕ್ಮಾಁ ಅಧಿ-
ಯೇತಿರೇ ಶುಭೇ ।

ಅಂಸೇಷ್ವೇಷಾಂ ನಿ ಮಿಮೃಕ್ಷುರೃಷ್ಟಯಃ ಸಾಕಂ ಜಜ್ಞಿರೇ
ಸ್ವಧಯಾ ದಿವೋ ನರಃ ॥ ೪ ॥

॥ ಪದಪಾಠಃ ॥

ಚಿತ್ರೈಃ । ಅಂಜಿऽಭಿಃ । ವಪುಷೇ । ವಿ । ಅಂಜತೇ । ವಕ್ಷಃऽಸು । ರುಕ್ಮಾನ್ ।
ಅಧಿ । ಯೇತಿರೇ । ಶುಭೇ ।

ಅಂಸೇಷು । ಏಷಾಂ । ನಿ । ಮಿಮೃಕ್ಷುಃ । ಋಷ್ಟಯಃ । ಸಾಕಂ । ಜಜ್ಞಿರೇ ।
ಸ್ವಧಯಾ । ದಿವಃ । ನರಃ ॥ ೪ ॥

॥ ಸಾಯಣಭಾಷ್ಯಂ ॥

ವಪುರಿತಿ ರೂಪನಾಮ । ವಪುಷೇ ರೂಪಾಯ ಶೋಭಾರ್ಥಂ ಮರುತಶ್ಚಿತ್ರೈರ್ನಾನಾವಿಧೈರಂಜಿಭೀ ರೂಪಾಭಿವ್ಯಂಜನಸಮರ್ಥೈರಾಭರಣೈಃ ಸ್ವಶರೀರಾಣಿ ವ್ಯಂಜತೇ । ವ್ಯಕ್ತಂ ಕುರ್ವಂತಿ । ಅಲಂಕುರ್ವಂತೀ-ತ್ಯರ್ಥಃ । ವಕ್ಷಃಸು ಭುಜಾಂತರೇಷು ರುಕ್ಮಾನ್ ರೋಚಮಾನಾನ್ಹಾರಾನಧಿ ಯೇತಿರೇ । ಉಪರಿ ಚಕ್ರಿರೇ ।

ಕಿಮರ್ಥಂ ಶುಭೇ ಶೋಭನಾರ್ಥಂ । ಅಪಿ ಚೈಷಾಂ ಮರುತಾಮಂಸೇಷ್ವೃಷ್ಟಯ ಆಯುಧಾನಿ ನಿ ಮಿಮೃಕ್ಷುಃ । ನಿಮೃಷ್ಟಾಃ ಸ್ಥಿತಾ ಬಭೂವುಃ । ತೈರಾಯುಧೈಃ ಸಹಿತಾ ನರೋ ನೇತಾರೋ ಮರುತೋ ದಿವೋಽಂತರಿಕ್ಷಾತ್ಸ್ವಧಯಾ ಸ್ವಕೀಯೇನ ಬಲೇನ ಸಾಕಂ ಸಹ ಜಜ್ಞಿರೇ । ಪ್ರಾದುರ್ಬಭೂವುಃ ॥ ಯೇತಿರೇ । ಯತೀ ಪ್ರಯತ್ನೇ । ಲಿಟ್ಯತ ಏಕಹಲ್ಮಧ್ಯ ಇತ್ಯೇತ್ವಾಭ್ಯಾಸಲೋಪೌ । ಶುಭೇ । ಶುಭ ದೀಪ್ತೌ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಸಾವೇಕಾಚ ಇತಿ ಚತುರ್ಥ್ಯಾ ಉದಾತ್ತತ್ವಂ । ಮಿಮೃಕ್ಷುಃ । ಮೃಜೂಷ್ ಶುದ್ಧೌ । ಸನ್ಯೂದಿತ್ವಾದಿಡಭಾವಃ । ಹಲಂತಾಚ್ಚೇತಿ ಸನಃ ಕಿತ್ವಾದ್ಗುಣಾಭಾವಃ । ದ್ವಿರ್ವಚನಾದಿ । ಸನ್ಯತ ಇತೀತ್ವಂ । ಲಿಟ್ಯುಸ್ಯತೋ ಲೋಪ ಇತ್ಯಾಕಾರಲೋಪಃ । ಜಜ್ಞಿರೇ । ಜನೀ ಪ್ರಾದುರ್ಭಾವೇ । ಲಿಟಿ ಗಮಹನೇತ್ಯಾದಿನೋಪಧಾಲೋಪಃ ॥

॥ ಪ್ರತಿಪದಾರ್ಥ ॥

**ವಪುಷೇ**—ಅಲಂಕಾರಕ್ಕಾಗಿ (ಮರುತ್ತುಗಳು) । **ಚಿತ್ರೈಃ**—ನಾನಾವಿಧವಾದ । **ಅಂಜಿಭಿಃ**—ಆಭರಣಗಳಿಂದ (ತಮ್ಮ ಶರೀರಗಳನ್ನು) । **ವಿ ಅಂಜತೇ**—ವ್ಯಕ್ತಪಡಿಸಿಕೊಳ್ಳುತ್ತಾರೆ । **ವಕ್ಷಃಸು**—ಎದೆಯ ಭಾಗಗಳಲ್ಲಿ । **ರುಕ್ಮಾನ್**—ಮನೋಹರವಾದ (ಹಾರಗಳನ್ನು) । **ಶುಭೇ**—ಅಲಂಕಾರಕ್ಕೋಸ್ಕರ । **ಅಧಿ ಯೇತಿರೇ**—ಮೇಲೆ ಮಾಡಿಕೊಂಡರು (ಧರಿಸಿದರು) । **ಏಷಾಂ**—ಈ ಮರುದ್ದೇವತೆಗಳ । **ಅಂಸೇಷು**—ಭುಜಗಳ ಮೇಲೆ । **ಋಷ್ಟಯಃ**—ಆಯುಧಗಳು । **ನಿ ಮಿಮೃಕ್ಷುಃ**—ಧರಿಸಲ್ಪಟ್ಟುವು (ಅವುಗಳಿಂದ ಯುಕ್ತರಾಗಿ) । **ನರಾಃ**—ನೇತೃಗಳಾದ (ಮರುದ್ದೇವತೆಗಳು) । **ಸ್ವಧಯಾ ಸಾಕಂ**—ಸ್ವಕೀಯವಾದ ಬಲದೊಡನೆ । **ದಿವಃ**—ಅಂತರಿಕ್ಷದಿಂದ । **ಜಜ್ಞಿರೇ**—ಪ್ರಾದುರ್ಭೂತರಾದರು ।

॥ ಭಾವಾರ್ಥ ॥

ಒಲಿಷ್ಠರೂ ಉತ್ತಮ ನೇತೃಗಳೂ ಆದ ಮರುದ್ದೇವತೆಗಳು, ಚಿತ್ರವಿಚಿತ್ರವಾದ ಆಭರಣಗಳನ್ನೂ, ಎದೆಯ ಭಾಗದಲ್ಲಿ ಮನೋಹರವಾದ ಹಾರಗಳನ್ನೂ, ಭುಜಗಳಲ್ಲಿ ಆಯುಧಗಳನ್ನೂ ಧರಿಸಿಕೊಂಡು, ಅಂತರಿಕ್ಷದಿಂದ ಆವಿರ್ಭೂತರಾದರು.

## English Translation

They decorate their persons with various ornaments, they have placed, for elegance, brilliant garlands, on their breasts, lances are borne upon their shoulders, and with them and their own strength have they been born, leaders, from the sky

॥ ವಿಶೇಷವಿಷಯಗಳು ॥

**ವಪುಷೇ—ರೂಪಾಯ ಶೋಭಾರ್ಥಂ । ವಪುರಿತಿ ರೂಪನಾಮ ।** ವಪ್ಪಃ ಎಂಬ ಶಬ್ದವು ನಿರ್ಣಿಕ್, ವವ್ರಿಃ (ನಿ ೩-೧೩) ಎಂಬ ಇವೇ ಮೊದಲಾದ ಹದಿನಾರು ರೂಪನಾಮಗಳ ಮಧ್ಯದಲ್ಲಿ ಪಠಿತವಾಗಿರುವುದು ಅಲಂಕಾರವಾಗಿ ಕಾಂತಿಯುಳ್ಳದ್ದಾಗಿ ಕಾಣಿಸುವ ಉದ್ದೇಶದಿಂದ.

**ಚಿತ್ರೈಃ—ಅಞ್ಜಿಭಿಃ ರೂಪಾಭಿವ್ಯಞ್ಜನಸಮರ್ಥೈರಾಭರಣೈಃ** ಆಕಾರವು ಚೆನ್ನಾಗಿ ಕಾಣಿಸುವ ಹಾಗೆ ಮಾಡುವ ಒಡವೆಗಳು ಮೊದಲಾದವುಗಳಿಂದ ಈ ಆಭರಣಗಳು ಅನೇಕ ವಿಧವಾಗಿರುವುವು.

**ರುಕ್ಮಾನ್—ರೋಚಮಾನಾನ್ ಹಾರಾನ್ ।** ಕಾಂತಿಯನ್ನು ಹೊಂದಿ ಹೊಳೆಯುವ ಹಾರಗಳನ್ನು.

**ಅಧಿಯೇತಿರೇ—ಉಪರಿ ಚಕ್ರಿರೇ** । ಮರುದ್ದೇವತೆಗಳು ತಮ್ಮ ಶರೀರದ ಸೌಂದರ್ಯವು ಚೆನ್ನಾಗಿ ಎಲ್ಲರಿಗೂ ಕಾಣಬೇಕೆಂಬ ಉದ್ದೇಶದಿಂದ ಅನೇಕವಾದ ಬಹಳ ಕಾಂತಿಯಿಂದ ಹೊಳೆಯುತ್ತಿರುವ ಆಭರಣಗಳನ್ನು ಧರಿಸಿರುವರು ವಕ್ಷಃಪ್ರದೇಶದಲ್ಲಿ ಹಾರಗಳನ್ನು ಧರಿಸಿ ಇರುವರು.

**ನರಃ - ನೇತಾರೋ ಮರುತಃ** । ತಮ್ಮನ್ನು ಆಶ್ರಯಿಸಿದ ಯಜಮಾನರುಗಳನ್ನು ಸರಿಯಾದ ಮಾರ್ಗದಲ್ಲಿ ಸೇರಿಸುವ ಮರುದ್ದೇವತೆಗಳು.

**ಸ್ವಧಯಾ—ಸ್ವಕೀಯೇನ ಬಲೇನ** । ತಮ್ಮ ಬಲದಿಂದ ತಾವಾಗಿಯೇ ಪ್ರಕಟವಾದರು ಎಂದು ಅರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ವ್ಯಂಜತೇ**—ಅಂಜೂ ವ್ಯಕ್ತಿ ಮ್ರಕ್ಷಣಕಾಂತಿಗತಿಷು ಧಾತು **ಲಿಟ್** ಪ್ರಥಮಪುರುಷ ಬಹುವಚನದ ರೂಪ. ತಿಙಂತನಿಘಾತಸ್ವರ ಬರುತ್ತದೆ

**ಯೇತಿರೇ**—ಯತೀ ಪ್ರಯತ್ನೇ ಧಾತು ಲಿಟ್ಟಿನ ಪ್ರಥಮಪುರುಷ ಬಹುವಚನಕ್ಕೆ **ಲಿಟಸ್ತಝಯೋ-** ಸೂತ್ರದಿಂದ ಇರೇಚಾದೇಶ ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ ಯಯತ್+ಇರೇ ಎಂದಿರುವಾಗ **ಅತ ಏಕಹಲ್ಮಧ್ಯೇನಾದೇಶಾದೇರ್ಲಿಟಿ** (ಪಾ. ಸೂ. ೬-೪-೧೨೦) ಎಂಬುದರಿಂದ ಅಕಾರವು ಸಂಯೋಗಮಧ್ಯದಲ್ಲಿ ಇಲ್ಲದಿರುವುದರಿಂದ ಧಾತುವಿನ ಅಕಾರಕ್ಕೆ ಏತ್ವವೂ ಅಭ್ಯಾಸಕ್ಕೆ ಲೋಪವೂ ಬರುತ್ತವೆ. ಯೇತಿರೇ ಎಂದು ರೂಪವಾಗುತ್ತದೆ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ

**ಶುಭೇ**—ಶುಭ ದೀಪ್ತೌ ಧಾತು ಸಂಪದಾದಿಯಲ್ಲಿ ಸೇರಿರುವುದರಿಂದ **ಸಂಪದಾದಿಭ್ಯಃ ಕ್ವಿಪ್** (ವಾ ೨೨೩೩) ಎಂಬುದರಿಂದ ಕ್ವಿಪ್. ಶುಭ್ ಶಬ್ದವಾಗುತ್ತದೆ. ಚತುರ್ಥೀ ಏಕವಚನದಲ್ಲಿ ಶುಭೇ ಎಂದು ರೂಪವಾಗುತ್ತದೆ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ ೬-೧-೧೬೮) ಎಂಬುದರಿಂದ ಚತುರ್ಥೀಗೆ ಉದಾತ್ತ ಸ್ವರ ಬರುತ್ತದೆ.

**ಮಿಮ್ಯಕ್ಷುಃ**—ಮ್ಯಕ್ಷ ಸಂಘಾತೇ ಧಾತು ಇಚ್ಛಾ ತೋರುವಾಗ **ಧಾತೋಃ ಕರ್ಮಣಃ ಸಮಾನ ಕರ್ತೃಕಾದಿಚ್ಛಾಯಾಂ ವಾ** ಎಂಬುದರಿಂದ ಸನ್. ಊದಿತ್ತಾದ ಧಾತುವಿನ ಪರದಲ್ಲಿ ಬಂದುದರಿಂದ ಸನಿಗೆ ಇಡಾಗಮ ಬರುವುದಿಲ್ಲ. **ಹಲಂತಾಚ್ಚ** (ಪಾ. ಸೂ. ೧-೨-೧೦) ಇಕ್ ಸಮೀಪದ ಹಲಿನ ಪರದಲ್ಲಿರುವ ಝಲಾದಿ ಯಾದ ಸನ್ ಕಿತ್ತಾಗುತ್ತದೆ ಎಂಬುದರಿಂದ ಇಲ್ಲಿ ಇಕಾರದ ಪರದಲ್ಲಿ ಜಕಾರವಿದ್ದು ಅದರ ಪರದಲ್ಲಿ ಸನ್ ಬಂದುದ ರಿಂದ ಕಿದ್ವದ್ಭಾವವನ್ನು ಹೊಂದುತ್ತದೆ ಆದುದರಿಂದ ಲಘೂಪಧಗುಣ ಬರುವುದಿಲ್ಲ. **ಸನ್ಯಙೋಃ** ಎಂಬುದರಿಂದ

ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಆದಿಹಲ್ ಶೇಷ **ಉರತ್** ಎಂಬುದರಿಂದ ಅತ್ವ ಪುನಃ ಹಲಾದಿಶೇಷ. ಮಮೃಜ್+ಸ ಎಂದಿರುವಾಗ **ಸನ್ಯತಃ** ಎಂಬುದರಿಂದ ಅಭ್ಯಾಸಾಕಾರಕ್ಕೆ ಇತ್ವ ಧಾತುವಿನ ಜಕಾರಕ್ಕೆ **ಚೋಃಕುಃ** ಎಂಬುದರಿಂದ ಕುತ್ವ **ಖರಿಚ** ಸೂತ್ರದಿಂದ ಅದಕ್ಕೆ ಕತ್ವ ಕಕಾರದ ಪರದಲ್ಲಿರುವುದರಿಂದ ಸನಿನ ಸಕಾರಕ್ಕೆ **ಆದೇಶ-ಪ್ರತ್ಯಯಯೋಃ** ಎಂಬುದರಿಂದ ಷತ್ವ ಕಷಗಳ ಸಂಬಂಧದಿಂದ ಕ್ಷಕಾರವಾಗುತ್ತದೆ ಮಿಮೃಕ್ಷ ಎಂಬುದು **ಸನಾದ್ಯಂತಾ ಧಾತವಃ** ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಲಿಟಿನ ಬಹುವಚನಕ್ಕೆ ಬಂದ ಆದೇಶವಾದ ಉಸಿನಲ್ಲಿ (ಲಿಟಿನ ತಿಙ್‌ಗೆ ಆರ್ಧಧಾತುಕಸಂಜ್ಞೆ ಬರುತ್ತದೆ) **ಅತೋ ಲೋಪಃ** ಎಂಬುದರಿಂದ ಸನಿನ ಅಕಾರಕ್ಕೆ ಲೋಪ ಮಿಮೃಕ್ಷುಃ ಎಂದು ರೂಪವಾಗುತ್ತದೆ ತಿಙಂತನಿಘಾತಸ್ವರ ಬರುತ್ತದೆ.

**ಜಜ್ಞಿರೇ**—ಜನೀ ಪ್ರಾದುರ್ಭಾವೇ ಧಾತು ಲಿಟಿನ ಝ ಪ್ರತ್ಯಯಕ್ಕೆ ಇರೇಚ್ ಆದೇಶ ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ **ಗಮಹನ ಜನಖ**-(ಪಾ. ಸೂ. ೬-೪-೯೮) ಎಂಬುದರಿಂದ ಧಾತುವಿನ ಉಪಧೆಗೆ ಲೋಪ ಬರುತ್ತದೆ ಜಜ್ಞಿರೇ ಎಂದು ರೂಪವಾಗುತ್ತದೆ **ತಿಙ್ಙತಿಙಃ** ಸೂತ್ರದಿಂದ ನಿಘಾತಸ್ವರ ಬರುತ್ತದೆ.

**ದಿವಃ**—**ಊಡಿದಂ ಪದಾದಿ**-(ಪಾ ಸೂ ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ ॥ ೪ ॥



॥ ಸಂಹಿತಾಪಾಠಃ ॥

ಈಶಾನಕೃತೋ ಧುನಯೋ ರಿಶಾದಸೋ ವಾತಾನ್ವಿದ್ಯುತಸ್ತ-
ವಿಷೀಭಿರಕ್ರತ ।
ದುಹಂತ್ಯೂಧರ್ದಿವ್ಯಾನಿ ಧೂತಯೋ ಭೂಮಿಂ ಪಿನ್ವಂತಿ
ಪಯಸಾ ಪರಿಜ್ರಯಃ ॥ ೫ ॥

॥ ಪದಪಾಠಃ ॥

ಈಶಾನಽಕೃತಃ । ಧುನಯಃ । ರಿಶಾದಸಃ । ವಾತಾನ್ । ವಿಽದ್ಯುತಃ । ತವಿಷೀಭಿಃ ।
ಅಕ್ರತ ।

ದುಹಂತಿ । ಊಧಃ । ದಿವ್ಯಾನಿ । ಧೂತಯಃ । ಭೂಮಿಂ । ಪಿನ್ವಂತಿ । ಪಯಸಾ । ಪರಿಽಜ್ರಯಃ ॥ ೫ ॥

॥ ಸಾಯಣಭಾಷ್ಯಂ ॥

ಈಶಾನಕೃತಃ ಸ್ತೋತಾರಮೀಶಾನಂ ಧನಾಧಿಪತಿಂ ಕುರ್ವಾಣಾ ಧುನಯೋ ಮೇಘಾದೀನಾಂ ಕಂಪಯಿತಾರೋ ರಿಶಾದಸೋ ರಿಶಾನಾಂ ಹಿಂಸಕಾನಾಮತ್ತಾರಃ । ಯದ್ವಾ ರಿಶತಾಂ ಹಿಂಸತಾಮುಸಿತಾರೋ ನಿರಸಿತಾರಃ । ಏವಂಭೂತಾ ಮರುತಸ್ತವಿಷೀಭಿರಾತ್ಮೀಯೈರ್ಬಲೈರ್ವಾತಾನ್ ಪುರೋವಾತಾದೀನ್ ವಿದ್ಯುತೋ ವಿದ್ಯೋತಮಾನಾಸ್ತಡಿತಶ್ಚಾಕ್ರತ । ಕುರ್ವಂತಿ । ಕೃತ್ವಾ ಚ ಪರಿಜ್ರಯಃ ಪರಿತೋ ಗಂತಾರೋ ಧೂತಯಃ ಕಂಪಯಿತಾರೋ ಮರುತೋ ದಿವ್ಯಾನಿ ದಿವಿಭವಾನ್ಯೂಧರೂಧಃಸ್ಥಾನೀಯಾನ್ಯಭ್ರಾಣಿ ದುಹಂತಿ । ರಿಕ್ತೀಕುರ್ವಂತಿ । ಜಲರಹಿತಾನಿ ಕುರ್ವಂತೀತ್ಯರ್ಥಃ । ತದನಂತರಂ ಭೂಮಿಂ ಪಯಸಾ ಮೇಘಾನ್ನಿರ್ಗತೇನೋದಕೇನ ಜಲೇನ ಪಿನ್ವಂತಿ । ಸಿಂಚಂತಿ ॥ ರಿಶಾದಸಃ । ರಿಶ ಹಿಂಸಾಯಾಂ । ಇಗುಪಧಲಕ್ಷಣಃ ಕಃ । ರಿಶಂತಿ ಹಿಂಸಂತೀತಿ ರಿಶಾಃ ಶತ್ರವಃ । ತಾನದಂತೀತಿ ರಿಶಾದಸಃ । ಅಸುನ್ । ನಿತ್ತ್ವಾದಾದ್ಯುದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ಯದ್ವಾ । ರಿಶಚ್ಛಬ್ದಾಚ್ಛೃತ್ರಂತಾದಸು ಕ್ಷೇಪಣ ಇತ್ಯಸ್ಮಾತ್ ಕ್ವಿಪ್ । ವ್ಯತ್ಯಯೇನ ಪೂರ್ವಪದಸ್ಯೋಪಧಾದೀರ್ಘಃ । ಅಂತೋದಾತ್ತತ್ವಂ ಚ । ಅಕ್ರತ । ಕರೋತೇಶ್ಛಾಂದಸೋ ವರ್ತಮಾನೇ ಲುಙ್ । ಮಂತ್ರೇ ಘಸೇತಿ ಚ್ಲೇರ್ಲುಕ್ । ಊಧಃ । ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ ॥

॥ ಪ್ರತಿಪದಾರ್ಥ ॥

**ಈಶಾನಕೃತಃ**—ಸ್ತೋತೃವನ್ನು ಧನಾಧಿಪತಿಯನ್ನಾಗಿ ಮಾಡುವ । **ಧುನಯಃ**—ಮೇಘಾದಿಗಳನ್ನು ಕಂಪಿಸುವಂತೆ ಮಾಡುವ । **ರಿಶಾದಸಃ**—ಹಿಂಸಕರನ್ನು ಭಕ್ಷಣಮಾಡುವ (ಹಿಂಸಕರನ್ನು ನಾಶಮಾಡುವ) ಮರುತ್ತುಗಳು । **ತವಿಷೀಭಿಃ**— ಸ್ವಕೀಯವಾದ ಬಲದಿಂದ । **ವಾತಾನ್**—ಪುರೋವಾತಗಳನ್ನೂ । **ವಿದ್ಯುತಃ**—ಮಿಂಚುಗಳನ್ನೂ । **ಅಕ್ರತ**—ಮಾಡಿದರು । **ಪರಿಜ್ರಯಃ**—ಎಲ್ಲಾ ದಿಕ್ಕುಗಳಲ್ಲಿಯೂ ಸಂಚರಿಸುವ । **ಧೂತಯಃ**—ಕಂಪನ ಉಂಟುಮಾಡುವ (ಮರುದ್ದೇವತೆಗಳು) । **ದಿವ್ಯಾನಿ**—ಅಂತರಿಕ್ಷದಲ್ಲಿ ಇರುವ । **ಊಧಃ**—ಕೆಚ್ಚಲಿನಂತಿರುವ ಮೇಘಗಳನ್ನು । **ದುಹಂತಿ**—ಕರೆಯುತ್ತವೆ । **ಭೂಮಿಂ**—ಭೂಮಿಯನ್ನು । **ಪಯಸಾ**—(ಮೇಘದಿಂದ ಬಂದ) ನೀರಿನಿಂದ । **ಪಿನ್ವಂತಿ**—ಚುಮುಕಿಸುತ್ತವೆ

॥ ಭಾವಾರ್ಥ ॥

ಮರುದ್ದೇವತೆಗಳು ಸ್ತೋತ್ರಮಾಡುವವರನ್ನು ಧನಿಕರನ್ನಾಗಿ ಮಾಡುತ್ತಾರೆ, ಹಿಂಸಕರನ್ನು ವಧಮಾಡುತ್ತಾರೆ. ಮತ್ತು ಎಲ್ಲಾ ಪದಾರ್ಥಗಳನ್ನೂ ಕಂಪಿಸುವಂತೆ ಮಾಡುತ್ತಾರೆ. ಇವರು ಮೇಘಗಳನ್ನು ಕಂಪಿಸುವಂತೆ ಮಾಡಿ,

ಪುರೋವಾತಗಳನ್ನೂ ಮಿಂಚುಗಳನ್ನೂ ಉಂಟುಮಾಡಿ ಎಲ್ಲಾ ದಿಕ್ಕುಗಳಲ್ಲಿಯೂ ಸಂಚಾರಮಾಡಿ ಮಳೆಯನ್ನು ಉಂಟುಮಾಡುತ್ತಾರೆ ಆ ನೀರಿನಿಂದ ಭೂಮಿಯನ್ನು ಆವೃತವನ್ನಾಗಿ ಮಾಡುತ್ತಾರೆ

English Translation

Enriching their worshipper, agitating the clouds, devourers of foes, they create the winds and lightnings by their power, thn circumambient and agitating Maruts milk heavenly udders, and sprinkle the earth with the water

॥ ವಿಶೇಷ ವಿಷಯಗಳು ॥

**ಈಶಾನಕೃತಃ ಸ್ತೋತಾರಮೀಶಾನಂ ಧನಾಧಿಪತಿಂ ಕುರ್ವಾಣಃ ।** ಮರುದ್ದೇವತೆಗಳು ತಮ್ಮನ್ನು ಸ್ತುತಿಮಾಡುವವರು ಧನಾಧಿಪತಿಗಳಾಗಿ ಇರುವ ಹಾಗೆ ಅನುಗ್ರಹವನ್ನು ಮಾಡುವರು

**ಧುನಯಃ—ಮೇಘಾದೀನಾಂ ಕಂಪಯಿತಾರಃ ।** ಮೇಘನೇ ಮೊದಲಾದವುಗಳನ್ನು ಅಲುಗಾಡಿಸುವರು

**ರಿಶಾದಸಃ—ರಿಶಾನಾಂ ಹಿಂಸಕಾನಾಮತ್ತಾರಃ । ರಿಶತಾಂ ಹಿಂಸತಾಮಸಿತಾರೋ ನಿರಸಿತಾರಃ । ರಿಶಂತಿ ಹಿಂಸಂತೀತಿ ಶತ್ರವಃ ತಾನ್ ಅದಂತೀತಿ ರಿಶಾದಸಃ ।** ತೊಂದರೆಯನ್ನು ಉಂಟುಮಾಡಿ ಹಿಂಸೆಯನ್ನು ಮಾಡುವ ಶತ್ರುಗಳನ್ನು ನಾಶಪಡಿಸುವವರು ಅಥವಾ ಓಡಿಸುವವರು ಈ ಮರುದ್ದೇವತೆಗಳೆಂದು ಅರ್ಥವು.

**ತವಿಷೀಭಿಃ—ಆತ್ಮೀಯೈಃ ಬಲೈಃ** ತವಸ್ ಎಂಬ ಶಬ್ದವು (ನಿ ೩-೯) ಓಜಃ ಪಾಜಃ ಎಂಬ ಇಪ್ಪತ್ತೆಂಟು ಬಲನಾಮಗಳಲ್ಲಿ ಪಠಿತವಾಗಿರುವುದು, ತಮ್ಮ ಸಾಮರ್ಥ್ಯದಿಂದ

**ವಿದ್ಯುತಃ ಅಕ್ರತ-ವಿದ್ಯೋತಮಾನಾಸ್ತಡಿತಶ್ಚ ಕುರ್ವನ್ತಿ ।** ಪ್ರಕಾಶಿಸುವ ಮಿಂಚುಗಳನ್ನೂ- ಮತ್ತು ಸುಂಟರಗಾಳಿಯೇ ಮೊದಲಾದವುಗಳನ್ನು ಕೂಡ ಈ ಮರುದ್ದೇವತೆಗಳು ಉತ್ಪನ್ನಮಾಡುವರು

**ಪರಿಜ್ರಯಃ ಊಧಃ ದುಹಂತಿ—ಪರಿತೋ ಗಂತಾರಃ ಊಧಸ್ಥಾನೀಯಾನ್ಯಭ್ರಾಣಿ ರಿಕ್ತೀ-ಕುರ್ವಂತಿ ।** ಮರುದ್ದೇವತೆಗಳು ಅಂತರಿಕ್ಷದಲ್ಲಿ ಸುತ್ತಲೂ ಸಂಚರಿಸುತ್ತಾ ನೀರಿನಿಂದ ತುಂಬಿರುವ ಮೇಘಗಳಿಂದ ಹಸುಗಳ ಕೆಚ್ಚಲಿನಿಂದ ಹಾಲನ್ನು ಕರೆಯುವ ಹಾಗೆ ಮಳೆಯ ನೀರನ್ನು ಭೂಮಿಗೆ ಹಿಂಡುವರು. ಮೇಘಗಳು ಬರಿದಾಗಿ ಇರುವಂತೆ ಮಾಡುವರು.

॥ ವ್ಯಾಕರಣಪ್ರಕ್ರಿಯಾ ॥

**ಈಶಾನಕೃತಃ—** ಈಶಾನಂ ಕುರ್ವಂತಿ ಇತಿ ಈಶಾನಕೃತಃ ಡುಕೃಞ್ ಕರಣೇ ಧಾತು ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿಕೃತಿ ತುಕ್** ಎಂಬುದರಿಂದ ಧಾತುವಿಗೆ ತುಕಾಗಮ ಕೃದಂತವಾಗಿರುವುದರಿಂದ ಕಾರಕಪೂರ್ವದಲ್ಲಿ ರುವುದರಿಂದ ಸಮಾಸದಲ್ಲಿ **ಗತಿಕಾರಕೋ-**ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಬಹು ವಚನಾಂತರೂಪ.

**ರಿಶಾದಸಃ**—ರಿಶ ಹಿಂಸಾಯಾಂ ಧಾತು **ಇಗುಪಧಜ್ಞಾಪ್ರೀಕಿರಃ ಕಃ** (ಪಾ. ಸೂ ೩-೧-೧೩೫) ಎಂಬುದರಿಂದ ಈ ಧಾತುವು ಇಗುಪಧವಾಗಿರುವುದರಿಂದ ಕಪ್ರತ್ಯಯ. ಪ್ರತ್ಯಯ ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ ರಿಶಂತಿ ಹಿಂಸಂತಿ ಇತಿ ರಿಶಾಃ ಶತ್ರವಃ (ಹಿಂಸೆಮಾಡುವವರು) ರಿಶಾನ್ ಅದಂತಿ ಇತಿ ರಿಶಾದಸಃ ಅದ ಭಕ್ಷಣೇ ಧಾತು. **ಸರ್ವಧಾತುಭ್ಯೋಽಸುನ್** ಎಂಬುದರಿಂದ ಅಸುನ್ ಪ್ರತ್ಯಯ. ಅದಸ್ ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಸಮಾಸವಾದಾಗ **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕಾರಕಉಪಪದವಾಗಿರುವುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಅಥವಾ ರಿಶ ಧಾತುವಿಗೆ ಲಡರ್ಥದಲ್ಲಿ ಶತೃಪ್ರತ್ಯಯ. **ತುದಾದಿಭ್ಯಃ ಶಃ** ಎಂಬುದರಿಂದ ಶ ವಿಕರಣ. **ಸಾರ್ವಧಾತುಕಮಪಿತ್** ಎಂಬುದರಿಂದ ಅದು ಙಿದ್ವದ್ಭಾವವನ್ನು ಹೊಂದುವುದರಿಂದ ಲಘೂಪಧಗುಣ ಬರುವುದಿಲ್ಲ. ರಿಶತ್ ಎಂದು ಶಬ್ದವಾಗುತ್ತದೆ ವ್ಯತ್ಯಯದಿಂದ ಛಂದಸ್ಸಿನಲ್ಲಿ ರಿಶತ್ ಶಬ್ದದ ಉಪಧೆಗೆ ದೀರ್ಘ ಬರುತ್ತದೆ ರಿಶತಃ ಅಸ್ಯಂತಿ ಇತಿ ರಿಶಾದಸಃ ಅಸು ಕ್ಷೇಪಣೇ ಧಾತು **ಕ್ವಿಪ್ ಚ** (ಪಾ ಸೂ ೩-೮-೭೬) ಎಂಬುದರಿಂದ ಈ ಧಾತುವಿಗೆ ಕ್ವಿಪ್ ಪ್ರತ್ಯಯ ಕ್ವಿಪ್ಪಿನಲ್ಲಿ ಸರ್ವವೂ ಲೋಪವಾಗುತ್ತದೆ ರಿಶಾದಸ್ ಶಬ್ದವಾಗುತ್ತದ ವ್ಯತ್ಯಯದಿಂದಲೇ ಪೂರ್ವಪದಾಂತೋದಾತ್ತಸ್ವರ ಬರುತ್ತದೆ. ಬಹುವಚನದಲ್ಲಿ ರಿಶಾದಸಃ ಎಂದು ರೂಪವಾಗುತ್ತದೆ

**ಅಕ್ರತ**—ಡುಕೃಞ್ ಕರಣೇ ಧಾತು ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲುಙ್ ಲುಙ್ ಬಹುವಚನದ ಝ ಪ್ರತ್ಯಯಕ್ಕೆ **ಆತ್ಮನೇಪದೇಷ್ವನತಃ** (ಪಾ ಸೂ ೭-೧-೫) ಎಂಬುದರಿಂದ ಅತಾದೇಶ ಬರುತ್ತದೆ **ಚ್ಲಿ ಲುಙಿ** ಎಂಬುದರಿಂದ ಪ್ರಾಪ್ತವಾದ ಚ್ಲಿಗೆ **ಮಂತ್ರೇ ಘಸಹ್ವರಣ-** (ಪಾ. ಸೂ ೨-೪-೮೦) ಎಂಬ ಸೂತ್ರದಿಂದ ಲುಕ್ ಲುಙ್ ನಿಮಿತ್ತವಾಗಿ ಅಂಗಕ್ಕೆ ಅಡಾಗಮ. ಅಚ್ ಪರದಲ್ಲಿರುವುದರಿಂದ ಪ್ರತ್ಯಯವು ಙಿತ್ತಾದುದರಿಂದ ಗುಣಬಾರದಿರುವಾಗ **ಇಕೋ ಯಣಚಿ** ಸೂತ್ರದಿಂದ ಋಕಾರಕ್ಕೆ ಯಣಾದೇಶ ಅಕ್ರತ ಎಂದು ರೂಪವಾಗುತ್ತದೆ **ತಿಙ್ಙತಿಙಃ** ಸೂತ್ರದಿಂದ ನಿಘಾತಸ್ವರ ಬರುತ್ತದೆ

**ದುಹಂತಿ**— ದುಹ ಪ್ರಪೂರಣೇ ಧಾತು. ಲಟ್ ಪ್ರಥಮಪುರುಷ ಬಹುವಚನದಲ್ಲಿ ಶಪ್ಪಿಗೆ ಲುಕ್ ಬಂದುದರಿಂದ **ಕ್ಙಿತಿಚ** ಸೂತ್ರದಿಂದ ಗುಣ ನಿಷೇಧ ಬರುವುದರಿಂದ ಅಂತಾದೇಶ ಬಂದಾಗ ದುಹಂತಿ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಮಧ್ಯೋದಾತ್ತವಾಗುತ್ತದ. ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ

**ಊಧಃ**— ಊಧಸ್+ಶಸ್ ಎಂದಿರುವಾಗ **ಸುಪಾಂ ಸುಲುಕ್**-ಸೂತ್ರದಿಂದ ವಿಭಕ್ತಿಗೆ ಲುಕ್ ಪ್ರಾತಿಪದಿಕದ ಸಕಾರಕ್ಕೆ ರುತ್ವವಿಸರ್ಗಗಳು ಬರುತ್ತವೆ.

**ಪಿನ್ವಂತಿ** —ಪಿವಿ ಸೇಚನೇ ಧಾತು. ಇದಿತ್ತಾದುದರಿಂದ ನುಮಾಗಮ ಬರುತ್ತದೆ. ಪ್ರತ್ಯಯಕ್ಕೆ **ಝೋಂತಃ** ಎಂಬುದರಿಂದ ಅಂತಾದೇಶ. **ಕರ್ತರಿ ಶಪ್** ಸೂತ್ರದಿಂದ ಶಪ್ ವಿಕರಣ **ಅತೋ ಗುಣೇ** ಎಂಬುದರಿಂದ ಪರರೂಪ. ಪಿನ್ವಂತಿ ಎಂದು ರೂಪವಾಗುತ್ತದೆ ತಿಙಂತನಿಘಾತಸ್ವರ ಬರುತ್ತದೆ.



॥ ಸಂಹಿತಾಪಾಠಃ ॥

ಪಿನ್ವಂತ್ಯಪೋ ಮರುತಃ ಸುದಾನವಃ ಪಯೋ ಘೃತವದ್ವಿದಥೇ-
ಷ್ವಾಭುವಃ ।
ಅತ್ಯಂ ನ ಮಿಹೇ ವಿ ನಯಂತಿ ವಾಜಿನಮುತ್ಸಂ ದುಹಂತಿ ಸ್ತನ-
ಯಂತಮಕ್ಷಿತಂ ॥ ೬ ॥

॥ ಪದಪಾಠಃ ॥

ಪಿನ್ವಂತಿ । ಅಪಃ । ಮರುತಃ । ಸುಽದಾನವಃ । ಪಯಃ । ಘೃತಽವತ್ । ವಿದ-
ಥೇಷು । ಆಽಭುವಃ ।
ಅತ್ಯಂ । ನ । ಮಿಹೇ । ವಿ । ನಯಂತಿ । ವಾಜಿನಂ । ಉತ್ಸಂ । ದುಹಂತಿ । ಸ್ತನ-
ಯಂತಂ । ಅಕ್ಷಿತಂ ॥ ೬ ॥

॥ ಸಾಯಣಭಾಷ್ಯಂ ॥

ಮರುತ್ವತೀಯಶಸ್ತ್ರೇ ಪಿನ್ವಂತ್ಯಪ ಇತ್ಯೇಷಾ ಧಾಯ್ಯಾ । ಸೂತ್ರಿತಂ ಚ । ಅಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪ ಇತಿ ಧಾಯ್ಯಾಃ । ಆ ೫ ೧೪ । ಇತಿ ॥

ಸುದಾನವಃ ಶೋಭನದಾನಾ ಮರುತಃ ಪಯಃ ಕ್ಷೀರವತ್ ಸಾರವತೀರಪಃ ಪಿನ್ವಂತಿ । ಸಿಂಚಂತಿ । ಆಭುವಃ । ಆಭವಂತೀತ್ಯಾಭುವ ಋತ್ವಿಜಃ । ತೇ ವಿದಥೇಷು ಯಜ್ಞೇಷು ಘೃತವತ್ । ಯಥಾ ಘೃತಂ ಸಿಂಚಂತ್ಯೇವಂ ಮರುತೋಽಪಿ ವೃಷ್ಟಿಂ ಕುರ್ವಂತೀತಿ ಭಾವಃ । ತತ್ರ ಹೇತುಮಾಹ । ಅತ್ಯಂ ನ ಯಥಾಶ್ವಂ ಸಾದಿನೋ ವಿನಯಂತಿ ಯುದ್ಧಾರ್ಥಂ ಶಿಕ್ಷಂತ್ಯೇವಂ ಮರುತೋ ವಾಜಿನಂ ವೇಗವಂತಂ ಮೇಘಂ ಮಿಹೇ ವರ್ಷಣಾಯ ವಿ ನಯಂತಿ । ಸ್ವಾಧೀನಂ ಕುರ್ವಂತೀತಿ ಭಾವಃ । ಅಪಿಯ ಚ ಸ್ತನಯಂತಂ ಗರ್ಜಂತಮಕ್ಷಿತಮಕ್ಷೀಣಮುತ್ಸಂ । ಉತ್ಸವಂತ್ಯಸ್ಮಾದಾಪ ಇತ್ಯುತ್ಸೋ ಮೇಘಃ । ತಂ

**ದುಹಂತಿ। ರಿಕ್ತೀಕುರ್ವಂತಿ॥ ಸುದಾನವಃ। ಸುಪ್ರತ್ಯಯೊಾಂತೋ ದಾನುಶಬ್ದ ಆದ್ಯುದಾತ್ತಃ। ಬಹುವ್ರೀಹಾವಾದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ। ಮಿಹೇ। ಮಿಹ ಸೇಚನೇ। ಸಂಪದಾದಿಲಕ್ಷಣೋ ಭಾವೇ ಕ್ವಿಪ್। ಸಾವೇಕಾಚ ಇತಿ ವಿಭಕ್ತಿರುದಾತ್ತಾ। ಸ್ತನಯಂತಂ। ಸ್ತನ ಶಬ್ದೇ। ಚುರಾದಿರದಂತಃ। ಅತೋ ಲೋಪಸ್ಯ ಸ್ಥಾನಿವದ್ಭಾವಾದ್ವೃದ್ಧ್ಯಭಾವಃ॥**

॥ ಪ್ರತಿಪದಾರ್ಥ ॥

**ಸುದಾನವಃ**- ಒಳ್ಳೆಯ ದಾನಿಗಳಾದ। **ಮರುತಃ**—ಮರುದ್ದೇವತೆಗಳು। **ಪಯಃ** -ಕ್ಷೀರದಂತೆ ಸಾರವತ್ತಾದ। **ಅಪಃ**--ನೀರನ್ನು। **ಅಭುವಃ**—ಋತ್ವಿಜರು। **ವಿದಥೇಷು**—ಯಜ್ಞಗಳಲ್ಲಿ। **ಘೃತವತ್**—ತುಪ್ಪದಂತೆ। **ಪಿನ್ವಂತಿ**– ಚುಮುಕಿಸುತ್ತಾರೆ। **ಅತ್ಯಂ ನ**--ಕುದುರೆಯನ್ನು (ಯುದ್ಧಕ್ಕಾಗಿ ಶಿಕ್ಷಣ ಕೊಟ್ಟು ಸ್ವಾಧೀನಪಡಿಸಿಕೊಳ್ಳುವಂತೆ)। **ವಾಜಿನಂ**—ವೇಗವಾಗಿ (ಚಲಿಸುತ್ತಿರುವ) ಮೇಘವನ್ನು। **ಮಿಹೇ** ಮಳೆ ಸುರಿಸುವುದಕ್ಕೋಸ್ಕರ। **ವಿ ನಯಂತಿ**—ಸ್ವಾಧೀನಪಡಿಸಿಕೊಳ್ಳುತ್ತಾರೆ। **ಸ್ತನಯಂತಂ**– ಗರ್ಜಿಸುತ್ತಿರುವ। **ಅಕ್ಷಿತಂ**—ಅಕ್ಷಯವಾದ। **ಉತ್ಸಂ**—ಮೇಘವನ್ನು। **ದುಹಂತಿ**—ಕರೆಯುತ್ತಾರೆ (ಮಳೆ ಬೀಳಿಸುತ್ತಾರೆ)॥

॥ ಭಾವಾರ್ಥ ॥

ಒಳ್ಳೆಯ ದಾನಿಗಳಾದ ಮರುದ್ದೇವತೆಗಳು, ಯುದ್ಧಕ್ಕಾಗಿ ಅಶ್ವಗಳನ್ನು ಸ್ವಾಧೀನಪಡಿಸಿಕೊಳ್ಳುವಂತೆ, ವೇಗವಾಗಿ ಚಲಿಸುತ್ತಿರುವ, ಗರ್ಜಿಸುತ್ತಿರುವ ಮೇಘಗಳನ್ನು ಸ್ವಾಧಿನಪಡಿಸಿಕೊಂಡು, ಋತ್ವಿಜರು ಯಜ್ಞಗಳಲ್ಲಿ ಘೃತವನ್ನು ಸುರಿಯುವಂತೆ, ಕ್ಷೀರದಂತೆ ಸಾರವತ್ತಾದ ನೀರನ್ನು ಭೂಮಿಯ ಮೇಲೆ ವೃಷ್ಟಿಯ ರೂಪದಲ್ಲಿ ಸುರಿಸುತ್ತಾರೆ.

## English Translation.

The munificent Maruts scatter the nutritious water as priests, at sacrifices, the clarified butter; as grooms lead forth a horse, they bring forth, for its rain, the fleet-moving cloud, and milk it, thundering, and unexhausted

॥ ವಿಶೇಷವಿಷಯಗಳು ॥

ಮರುತ್ವತೀಯ ಶಸ್ತ್ರಮಂತ್ರಪಠನಕಾಲದಲ್ಲಿ **ಪಿನ್ವಂತ್ಯಪಃ** ಎಂಬ ಈ ಋಕ್ಕನ್ನು ಧಾಯ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಅಗ್ನಿರ್ನೇತಾ ತ್ವಂ ಸೋಮ ಕ್ರತುಭಿಃ ಪಿನ್ವಂತ್ಯಪ ಇತಿ ಧಾಯ್ಯಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೫-೧೪)

**ಸುದಾನವಃ—ಶೋಭನದಾನಾಃ।** ಬಹಳ ಮಟ್ಟಿಗೆ ಶುಭವನ್ನು ಉಂಟುಮಾಡುವ ಸ್ವಭಾವವುಳ್ಳವರು.

**ಅಭ್ವಃ—ಅಭುವಂತೀತ್ಯಾಭುವಃ । ಋತ್ವಿಜಃ ।** ಋತ್ವಿಕ್ಕುಗಳು ಎಂದು ಸಾಯಣರು ಅರ್ಥವನ್ನು ಹೇಳಿರುವರು ಸ್ಕಂದಸ್ವಾಮಿಗಳು ಈ ಶಬ್ದವು ಮಹನ್ನಾಮವಾಗಿರುವುದರಿಂದ ಮರುತಃ ಎಂಬ ಶಬ್ದಕ್ಕೆ ವಿಶೇಷಣ ವನ್ನಾಗಿ ಹೇಳಿರುತ್ತಾರೆ.

**ಪಯಃ ಘೃತವತ್ ಪಿನ್ವಂತಿ ಕ್ಷೀರವತ್ ಸಾರವತೀಃ ಅಪಃ ಸಿಂಚಂತಿ ।** ಮರುದ್ದೇವತೆಗಳು ಹಾಲಿನ ಹಾಗೆ ರುಚಿಕರವಾದ ಮತ್ತು ಸಾರವಾದ ನೀರನ್ನು ಮಳೆಯ ರೂಪದಿಂದ ಸುರಿಸುವರು ಯಜ್ಞಮಾಡುವ ಪ್ರದೇಶ ಗಳಲ್ಲಿ ಗೋವುಗಳು ಕೂಡ ವೃಷ್ಟಿಯ ಮೂಲಕವಾಗಿ ಬಹಳವಾಗಿ ಹಾಲನ್ನು ಹಿಂಡುವಂತೆ ಮಾಡುವರೆಂಬು ಸ್ಕಂದ ಸ್ವಾಮಿಗಳು ಅರ್ಥಮಾಡುವರು

**ಅತ್ಯಂ ನ ಮಿಹೇ--ಅತ್ಯ ಇತ್ಯಶ್ವನಾಮ । ಮಿಹ ಸೇಚನೇ ।** ಅಶ್ವವನ್ನು ನೀರಿನಲ್ಲಿ ತೊಳೆಯುವುದಕ್ಕಾಗಿ ಅಲ್ಲಲ್ಲಿಗೆ ಕರೆದುಕೊಂಡು ಹೋಗುವಂತೆ ವೇಗವಾಗಿರುವ ಮೇಘವನ್ನು ಮರುದ್ದೇವತೆಗಳು ವೃಷ್ಟಿಗಾಗಿ ತಮ್ಮ ಸ್ವಾಧೀನಮಾಡಿಕೊಂಡು ಇರುವರು

**ವಿದಥೇಷು ಘೃತವತ್—ಯಥಾ ಘೃತಂ ಸಿಂಚಂತಿ ಏವಂ ಮರುತೋಽಪಿ ವೃಷ್ಟಿಂ ಕುರ್ವಂತಿ ।** ವಿದಥೇಷು ಎಂಬ ಶಬ್ದವು ಯಜ್ಞಃ, ವೇನಃ ಎಂಬ ಹದಿನೈದು ಯಜ್ಞನಾಮಗಳ ಮಧ್ಯದಲ್ಲಿ (ನಿ ೩-೧೯) ಪಠಿತ ವಾಗಿ ಇರುವುದು ಯಜ್ಞದಲ್ಲಿ ತುಪ್ಪವನ್ನು ಅಗ್ನಿಯಲ್ಲಿ ಹೋಮಮಾಡುವ ಹಾಗೆ ಮರುದ್ದೇವತೆಗಳು ಮಳೆಯ ನೀರನ್ನು ವೃಷ್ಟಿರೂಪದಿಂದ ಧಾರಾಕಾರವಾಗಿ ಸುರಿಸುವರು.

**ಉತ್ಸಂ—ಉತ್ಸ್ರವಂತ್ಯಸ್ಮಾದಾಪ ಇತಿ ಉತ್ಸೋ ಮೇಘಃ** ನೀರುಗಳು ಬಹಳವಾಗಿ ಸುರಿಯುವುದ ರಿಂದ ಮೇಘಕ್ಕೆ ಉತ್ಸವೆಂದು ಹೆಸರು ಸ್ಕಂದಸ್ವಾಮಿಗಳು **ಉತ್ಸಶಬ್ದೋಽತ್ರ ಮೇಘವಚನಃ** ಉತ್ಸ ಎಂಬ ಶಬ್ದವು ಮೇಘವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು. ಅದದುರುತ್ಸಂ (ಋ ಸಂ ೫-೩೭-೧) ಎಂದು ಉದಾ ಹರಣೆಯನ್ನು ಕೊಟ್ಟಿರುವರು.

**ವಾಜಿನಂ—ವಾಜಮಿತಿ ಅಪಠಿತಮಪಿ ಬಲನಾಮ ವೇಗವಚನಂ ವಾ । ಉಪಮಾನಭೂತಸ್ಯ ಚಾತ್ಯಸ್ಯೇದಂ ವಿಶೇಷಣಂ ಬಲವಂತಂ ವೇಗವಂತಂ ವಾ ಅಶ್ವಮಿವ ಅಥವಾ ವಾಜ ಇತ್ಯನ್ನನಾಮ । ಇಹ ಚ ತತ್ಕಾರಣತ್ವಾತ್ ವೃಷ್ಟಿಲಕ್ಷಣೇ ಉದಕೇ ಪ್ರವೃತ್ತಂ । ಇದಂ ಮೇಘಸ್ಯ ವಿಶೇಷಣಂ । ವೃಷ್ಟ್ಯು- ದಕವಂತಮಿತ್ಯರ್ಥಃ ।** ಎಂದು ಸ್ಕಂದಸ್ವಾಮಿಗಳು ಹೇಳಿರುವರು. ವಾಜಶಬ್ದವು ಬಲನಾಮಗಳ ಮಧ್ಯದಲ್ಲಿ ಪಠಿತವಲ್ಲದಿದ್ದರೂ ವಾಜವೆಂದರೆ ಬಲವೆಂದು ಅರ್ಥವು ಈ ಪದವು ಅತ್ಯವೆಂದರೆ ಅಶ್ವವೆಂದು ಹೇಳುವ ಅತ್ಯಪದಕ್ಕೆ ವಿಶೇಷಣವು ಈ ಅತ್ಯಪದ ಬೋಧ್ಯವಾದ ಅಶ್ವವು ಮೇಘಪದಕ್ಕೆ ವಿಶೇಷಣವಾಗಿ ಪ್ರಯುಕ್ತವಾಗಿರುವುದು ಈ ಪದವು ವಿಶೇಷಣವಾಗಿರುವುದರಿಂದ ಮೇಘವು ಬಲವುಳ್ಳದ್ದಾಗಿಯೂ, ಅಥವಾ ವೇಗವುಳ್ಳದ್ದಾಗಿಯೂ ಇರುವು ದೆಂದು ಅರ್ಥವು ಹೀಗೆ ಇರುವ ಮೇಘಗಳನ್ನು ಮರುದ್ದೇವತೆಗಳು ತಮ್ಮ ಅಧೀನದಲ್ಲಿ ಇರಿಸಿಕೊಂಡಿರುವರೆಂದು ಅರ್ಥವು ಅಥವಾ ವಾಜವೆಂಬ ಶಬ್ದವು ಅನ್ನನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ ಅನ್ನವು ಉಂಟಾಗಲು

ಕಾರಣವಾದ ವೃಷ್ಟ್ಯುದಕವೆಂಬ ಅರ್ಥವು ಈ ಪದದಿಂದ ಉಂಟಾಗುವುದು. ಈ ಪದವು ಮೇಘಪದಕ್ಕೆ ವಿಶೇಷಣವಾಗಿ ಇರುವುದರಿಂದ ಮೇಘವು ವೃಷ್ಟ್ಯುದಕವುಳ್ಳದ್ದೆಂದು ಅರ್ಥವಾಗುವುದು

॥ ವ್ಯಾಕರಣಪ್ರಕ್ರಿಯಾ ॥

**ಸುದಾನವಃ**—ಶೋಭನಃ ದಾನುಃ ಯೇಷಾಂ ತೇ ಸುದಾನವಃ ಡುದಾಞ್ ದಾನೇ ಧಾತು ಔಣಾದಿಕವಾದ ನು ಪ್ರತ್ಯಯ ಬರುತ್ತದೆ. ವ್ಯತ್ಯಯದಿಂದ ದಾನು ಶಬ್ದವು ಆದ್ಯುದಾತ್ತವಾಗುತ್ತದೆ ಬಹುವ್ರೀಹಿ ಸಮಾಸವಾದಾಗ **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬-೨-೧೧೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ಘೃತವತ್**—ತೇನ ತುಲ್ಯಂ ಕ್ರಿಯಾ ಚೇದ್ವತಿಃ (ಪಾ ಸೂ ೫-೧ ೧೧೫) ಎಂಬುದರಿಂದ ವತಿ ಪ್ರತ್ಯಯ

**ಆಭುವಃ**—ಆ ಭವಂತಿ ಇತಿ ಆಭುವಃ **ಕ್ವಿಪ್ ಚ** ಎಂಬುದರಿಂದ ಭೂ ಧಾತುವಿಗೆ ಕ್ವಿಪ್ ಪ್ರತ್ಯಯ ಭೂ ಶಬ್ದವಾಗುತ್ತದೆ **ನ ಭೂಸುಧಿಯೋಃ** ಎಂಬುದರಿಂದ ಯಣ್ ನಿಷೇಧ ಬರುವುದರಿಂದ ಉವಙಾದೇಶ ಬರುತ್ತದೆ

**ಮಿಹೇ**—ಮಿಹ ಸೇಚನೇ ಧಾತು ಸಂಪದಾದಿಯಲ್ಲಿ ಸೇರಿರುವುದರಿಂದ **ಸಂಪದಾದಿಭ್ಯಃ ಕ್ವಿಪ್** ಎಂಬುದರಿಂದ ಕ್ವಿಪ್ ಪ್ರತ್ಯಯ ಅಲ್ಲಿ ಸರ್ವಲೋಪವಾಗುವುದರಿಂದ ಮಿಹ್ ಶಬ್ದವಾಗುತ್ತದೆ ಚತುರ್ಥಿಯಲ್ಲಿ ಮಿಹೇ ಎಂದು ರೂಪವಾಗುತ್ತದೆ **ಸಾವೇಕಾಚಸ್ತೃತೀಯಾದಿಃ** (ಪಾ ಸೂ ೬-೧-೧೬೮) ಎಂಬುದರಿಂದ ಏಕಾಚ್ಚಿನ ಪರದಲ್ಲಿ ಬಂದುದರಿಂದ ವಿಭಕ್ತಿಯು ಉದಾತ್ತವಾಗುತ್ತದೆ

**ನಯಂತಿ**—ಣೀಞ್ ಪ್ರಾಪಣೇ ಧಾತು ಭ್ವಾದಿ ಲಟ್ ಬಹುವಚನದಲ್ಲಿ ನಯಂತಿ ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಸ್ತನಯಂತಮ್**-ಸ್ತನ ಶಬ್ದೇ ಧಾತು ಚುರಾದಿ ಇದು ಅದಂತವಾದ ಧಾತು ಆದುದರಿಂದ **ಸತ್ಯಾಪಪಾಶ**-ಸೂತ್ರದಿಂದ ಸ್ವಾರ್ಥದಲ್ಲಿ ಣಿಚ್ ಬಂದಾಗ **ಅತೋ ಲೋಪಃ** ಎಂಬುದರಿಂದ ಆ ಅಕಾರಕ್ಕೆ ಲೋಪ ಬರುತ್ತದೆ **ಅಚಃ ಪರಸ್ಮಿನ್ ಪೂರ್ವವಿಧೌ** ಎಂಬುದರಿಂದ ಅದರ ಪೂರ್ವಕ್ಕೆ ವೃದ್ಧ್ಯಾದಿಗಳನ್ನು ಮಾಡಬೇಕೆಂದಿರುವಾಗ ಸ್ಥಾನಿವದ್ಭಾವ ಬರುವುದರಿಂದ ಣಿಚ್ ನಿಮಿತ್ತಕವಾಗಿ ಉಪಧಾವೃದ್ಧಿ ಮುಂತಾದ ಕಾರ್ಯಗಳು ಬರುವುದಿಲ್ಲ. ಸ್ತನಿ ಎಂಬ ಣಿಜಂತ ಧಾತುವಿನ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ **ಕರ್ತರಿ ಶಪ್** ಎಂಬುದರಿಂದ ಶಪ್. ತನ್ನಿಮಿತ್ತಕವಾಗಿ ಣಿಚ್ಚಿನ ಇಕಾರಕ್ಕೆ ಗುಣ ಅಯಾದೇಶ **ಅತೋ ಗುಣೇ** ಎಂಬುದರಿಂದ ಪರರೂಪ. ಸ್ತನಯತ್ ಎಂದು ಶಬ್ದವಾಗುತ್ತದೆ ಶಪ್ ಪಿತ್ತಾದುದರಿಂದ ಅನುದಾತ್ತ ಅದುಪದೇಶದ ಪರದಲ್ಲಿ ಲಸಾರ್ವಧಾತುಕವು (ಶತೃ) ಬಂದುದರಿಂದ **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುತ್ತದೆ ದ್ವಿತೀಯಾ ಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ ಬರುತ್ತದೆ ಸ್ತನಯಂತಮ್ ಎಂದು ರೂಪವಾಗುತ್ತದೆ.

**ಅಕ್ಷಿತಮ್**—ಕ್ಷಿ ಕ್ಷಯೇ ಧಾತು ಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ ನ ಕ್ಷಿತಃ ಅಕ್ಷಿತಃ ತಂ ಅಕ್ಷಿತಮ್ **ತತ್ಪುರುಷೇ ತುಲ್ಯಾರ್ಥ** (ಪಾ. ಸೂ ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ ॥ ೬ ॥

---

॥ ಸಂಹಿತಾಪಾಠಃ ॥

ಮಹಿಷಾಸೋ ಮಾಯಿನಶ್ಚಿತ್ರಭಾನವೋ ಗಿರಯೋ ನ ಸ್ವತ-
ವಸೋ ರಘುಸ್ಯದಃ ।
ಮೃಗಾ ಇವ ಹಸ್ತಿನಃ ಖಾದಥಾ ವನಾ ಯದಾರುಣೀಷು ತವಿ-
ಷೀರಯುಗ್ಧ್ವಂ ॥ ೭ ॥

॥ ಪದಪಾಠಃ ॥

ಮಹಿಷಾಸಃ । ಮಾಯಿನಃ । ಚಿತ್ರऽಭಾನವಃ । ಗಿರಯಃ । ನ । ಸ್ವऽತವಸಃ ।
ರಘುऽಸ್ಯದಃ ।
ಮೃಗಾಃऽಇವ । ಹಸ್ತಿನಃ । ಖಾದಥ । ವನಾ । ಯತ್ । ಆರುಣೀಷು । ತವಿಷೀಃ ।
ಅಯುಗ್ಧ್ವಂ ॥ ೭ ॥

॥ ಸಾಯಣಭಾಷ್ಯಂ ॥

ಮಹಿಷ ಇತಿ ಮಹನ್ನಾಮ । ಮಹಿಷಾಸೋ ಮಹಾಂತಃ । ಮಾಯೇತಿ ಜ್ಞಾನನಾಮ । ಮಾಯಿನಃ ಪ್ರಾಜ್ಞಾಶ್ಚಿತ್ರಭಾನವಃ ಶೋಭನದೀಪ್ತಯೋ ಗಿರಯೋ ನ ಸ್ವತವಸಃ ಪರ್ವತಾ ಇವ ಸ್ವಕೀಯೇನ ಬಲೇನ ಯುಕ್ತಾ ರಘುಷ್ಯದಃ ಶೀಘ್ರಗಮನಾ ಹೇ ಮರುತ ಏವಂಭೂತಗುಣವಿಶಿಷ್ಟಾ ಯೂಯಂ

**ಹಸ್ತಿನೋ ಹಸ್ತವಂತೋ ಮೃಗಾ ಇವ ಗಜಾ ಇವ ವನಾ ವನಾನಿ ವೃಕ್ಷಜಾತಾನಿ ಖಾದಥ । ಭಕ್ಷಯಥ । ಪ್ರಭಂಕ್ಥೇತಿ ಯಾವತ್ । ಯದ್ಯಸ್ಮಾದಾರುಣೀಷ್ವರುಣವರ್ಣಾಸು ವಡವಾಸು ತವಿಷೀರ್ಬಲಾನ್ಯ-ಯುಗ್ಧ್ವಂ ಸಂಯೋಜಿತವಂತಃ । ತಸ್ಮಾದ್ಬಲವತಾಮಿವ ವಾಹನಸ್ಯಾಪಿ ಪ್ರಬಲತ್ವಾತ್ಸಂಯುಕ್ತಾ ಭವಂತಃ ಸರ್ವಂ ಭಂಜಂತೀತ್ಯರ್ಥಃ ॥ ರಘುಷ್ಯದಃ । ಸ್ಯಂದೂ ಪ್ರಸ್ರವಣೇ । ರಘು ಶೀಘ್ರಂ ಸ್ಯಂದಂತೇ ಗಚ್ಛಂತೀತಿ ರಘುಷ್ಯದಃ । ಕ್ವಿಪ್ಚೇತಿ ಕ್ವಿಪ್ । ಅನಿದಿತಾಮಿತಿ ನಲೋಪಃ । ವಾಲಮೂಲಲಘ್ವಲಮಿತಿ ಲತ್ವವಿಕಲ್ಪಃ । ಮಂ. ೮-೨-೧೮ । ಕೃದುತ್ತರಪದಪ್ರಕೃತಿಸ್ವರತ್ವಂ । ಖಾದಥ । ಖಾದೃ ಭಕ್ಷಣೇ । ಅಯುಗ್ಧ್ವಂ । ಯುಜಿರ್ ಯೋಗೇ । ಲುಙಿ ಚ್ಲೇಃ ಸಿಚ್ । ಏಕಾಚ ಇತೀಟ್ಪ್ರತಿಷೇಧಃ । ಧಿ ಚ । ಪಾ. ೮ ೨ ೨೫ । ಇತಿ ಸಕಾರಲೋಪಃ । ಚೋಃ ಕುರಿತಿ ಕುತ್ವಂ । ಅಡಾಗಮ ಉದಾತ್ತಃ । ಯದ್ವೃತ್ತಯೋಗಾದನಿಘಾತಃ ॥**

॥ ಪ್ರತಿಪದಾರ್ಥ ॥

**ಮಹಿಷಾಸಃ**— ಮಹಾತ್ಮರಾದ । **ಮಾಯಿನಃ** —ಪ್ರಾಜ್ಞರಾದ । **ಚಿತ್ರಭಾನವಃ** — ಶೋಭಾಯಮಾನವಾದ ಕಾಂತಿಯುಳ್ಳ । **ಗಿರಯೋ ನ**—ಪರ್ವತಗಳಂತೆ । **ಸ್ವತವಸಃ** - ಸ್ವಕೀಯವಾದ ಬಲಯುಕ್ತರಾದ । **ರಘುಷ್ಯದಃ**—ಶೀಘ್ರಗಾಮಿಗಳಾದ (ಎಲೈ ಮರುದ್ದೇವತೆಗಳೇ) । **ಯತ್**—ಯಾವ ಕಾರಣದಿಂದ । **ಅರುಣೀಷು**—ಅರುಣವರ್ಣವುಳ್ಳ ಅಶ್ವಗಳಲ್ಲಿ । **ತವಿಷೀಃ**—ಬಲವನ್ನು । **ಅಯುಗ್ಧ್ವಂ**—ಯೋಜನೆ ಮಾಡಿದ್ದೀರೋ (ಅದರಿಂದ) । **ಹಸ್ತಿನಃ**—ಸೊಂಡಲುಳ್ಳ । **ಮೃಗಾ ಇವ**—ಗಜಗಳಂತೆ । **ವನಾ**- ವನಗಳನ್ನು । **ಖಾದಥ** ಭಕ್ಷಣಮಾಡುತ್ತೀರಿ (ಮುರಿದುಹಾಕುತ್ತೀರಿ.) ॥

॥ ಭಾವಾರ್ಥ ॥

ಮಹಾತ್ಮರೂ, ಪ್ರಾಜ್ಞರೂ ಒಳ್ಳೆಯ ಕಾಂತಿಯುಕ್ತರೂ, ಪರ್ವತಗಳಂತೆ ಬಲಾಢ್ಯರೂ, ಶೀಘ್ರಗಾಮಿಗಳೂ ಆದ ಎಲೈ ಮರುದ್ದೇವತೆಗಳೇ, ಬಲಾಢ್ಯವಾದ ನಿಮ್ಮ ವಾಹನಗಳಿಂದ (ಜಿಂಕೆಗಳಿಂದ) ಯುಕ್ತರಾಗಿ, ಗಜಗಳು ಹೇಗೆ ಕಾಡುಗಳಲ್ಲಿ ತಮ್ಮ ಸೊಂಡಿಲುಗಳಿಂದ ವೃಕ್ಷಗಳನ್ನು ಮುರಿಯುತ್ತವೋ ಹಾಗೆ, ಕಾಡುಗಳನ್ನು ನಾಶಮಾಡುತ್ತೀರಿ

## English Translation

Vast, possessed of knowledge, bright-shining like mountains in stability, and quick in motion, you like elephants, break down the forests when you put vigour into your ruddy (mares)

॥ ವಿಶೇಷವಿಷಯಗಳು ॥

**ಮಹಿಷಾಸಃ—ಮಹಾಂತಃ** । ದೊಡ್ಡವರು, ಪೂಜ್ಯರು **ಮಹಿಷ ಇತಿ ಮಹನ್ನಾಮ** ಮಹಿಷ ಎಂಬ ಪದವು (ನಿ ೩-೧೩) ಮಹತ್ ಬ್ರಧ್ನಃ ಮೊದಲಾದ ಇಪ್ಪತ್ತೈದು ಮಹನ್ನಾಮಗಳ ಮಧ್ಯದಲ್ಲಿ ಪಠಿಸಲ್ಪಟ್ಟಿದೆ.

**ಮಾಯಿನಃ--ಪ್ರಾಜ್ಞಾಃ |** ಸರ್ವಜ್ಞರಾದವರು. **ಮಾಯಾ ಇತಿ ಜ್ಞಾನನಾಮ** ಮಾಯಾ ಎಂಬ ಪದವು ಕೇತಃ ಕೇತುಃ (ನಿರು ೩-೯) ಎಂಬ ಪನ್ನೊಂದ ಪ್ರಜ್ಞಾನಾಮಗಳ ಮಧ್ಯದಲ್ಲಿ ಪಠಿತವಾಗಿರುವುದು.

**ಮೃಗಾ ಇವ ಹಸ್ತಿನಃ ಖಾದಥ ವನಾ--ವನಶಬ್ದಃ ವೃಕ್ಷವಚನಃ ಯಥಾ ಮೃಗಾಃ ತೃಣಾನಿ ಖಾದಂತಿ ಯಥಾ ಚ ಹಸ್ತಿನೋ ವೃಕ್ಷಾನ್ ಖಾದಂತಿ ತದ್ವತ್ ಯೂಯಂ ಸ್ವಸಾಮರ್ಥ್ಯಾತ್ ಶತ್ರೂನ್ ಖಾದಥ | ಅಥವಾ ಯಥಾ ಸಿಂಹಾ ವ್ಯಾಘ್ರಾ ವಾ ಗತ್ವಾ ಹಸ್ತಿನಃ ಖಾದಂತಿ ತದ್ವತ್ ಯೂಯಂ ಉದಕವತೋ ಮೇಘಾನ್ ಖಾದಥ |** ಸ್ಕಂದಸ್ವಾಮಿಗಳು ಇಲ್ಲಿ ಅರ್ಥಮಾಡಿರುವ ಕ್ರಮವು--ವನ ಶಬ್ದವು ವೃಕ್ಷವೆಂಬ ಅರ್ಥವನ್ನು ಬೋಧಿಸುವುದು. ಮೃಗಗಳು ಹುಲ್ಲುಕಡ್ಡಿಯನ್ನು ಭಕ್ಷಿಸಿ ನಾಶಮಾಡುವಂತೆಯೂ, ಆನೆಗಳು ಮರಗಳನ್ನು ಮುರಿದು ತಿನ್ನುವ ಹಾಗೆಯೂ ಮರುದ್ದೇವತೆಗಳಾದ ನೀವು ನಿಮ್ಮ ಸ್ವಂತ ಸಾಮರ್ಥ್ಯದಿಂದ ಯಜ್ಞಮಾಡುವ ಯಜಮಾನರ ಶತ್ರುಗಳನ್ನು ನಾಶಮಾಡಿ ಎಂದು ಒಂದು ವಿಧವಾದ ಅರ್ಥವು. ಅಥವಾ ಹುಲಿಯೇ ಆಗಲಿ, ಸಿಂಹವೇ ಆಗಲಿ, ಸಂಚರಿಸುತ್ತಾ ಹೋಗಿ ಆನೆಗಳನ್ನು ಭಕ್ಷಿಸುವ ಹಾಗೆ ಮರುದ್ದೇವತೆಗಳಾದ ನೀವು ನೀರಿನಿಂದ ತುಂಬಿರುವ ಮೇಘಗಳನ್ನು ವೃಷ್ಟಿಯನ್ನು ಉಂಟುಮಾಡುವುದರ ಮೂಲಕ ನಾಶಮಾಡಿರಿ ಎಂದು ಇನ್ನೊಂದರ್ಥವು.

**ಯದಾರುಣೀಷು ತವಿಷೀರಯುಗ್ಧ್ವಂ--ಅರುಣವರ್ಣಾಸು ಬಡವಾಸು ಬಲಾನಿ ಸಂಯೋಜಿತವಂತಃ** ಕೆಂಪು ಬಣ್ಣವುಳ್ಳ ಜಿಂಕೆಗಳನ್ನು ವಾಹನವನ್ನಾಗಿ ಉಪಯೋಗಿಸಿಕೊಂಡು ಅವುಗಳಲ್ಲಿ ನಿಮ್ಮ ಸಾಮರ್ಥ್ಯವನ್ನು ಅನುಗ್ರಹಿಸಿರುವಿರಿ ಎಂದು ಅರ್ಥವು. ಇಲ್ಲಿ ಪೃಷತ್ಯೋಮರುತಾಂ (ನಿ ೨-೨೮) ಎಂದು ಯಾಸ್ಕರ ನಿರುಕ್ತ ವಚನವಿರುವುದು. ಸ್ಕಂದಸ್ವಾಮಿಗಳು ತವಿಷೀರಯುಗ್ಧ್ವಂ=ಬಲದಿಂದ ಕೂಡಿರುವ ಕುದುರೆಗಳನ್ನು ಯುದ್ಧಕ್ಕಾಗಿ ಮರುದ್ದೇವತೆಗಳು ತಮ್ಮ ರಥಗಳಿಗೆ ಕಟ್ಟಿರುವರೆಂದು ಅರ್ಥವನ್ನು ಹೇಳಿರುವರು.

**ರಘುಷ್ಯದಃ--ಶೀಘ್ರಗಮನಾಃ ರಘು | ಲಘು ಶೀಘ್ರಂ ಸ್ಯಂದಂತೇ ಗಚ್ಛಂತಿ** ಮರುದ್ದೇವತೆಗಳು ಬಹಳವೇಗದಿಂದ ಜಾಗ್ರತೆಯಾಗಿ ಸಂಚರಿಸುವವರು.

ವ್ಯಾಕರಣಪ್ರಕ್ರಿಯಾ ॥

**ಮಹಿಷಾಸಃ--**ಮಹಿಷ+ಜಸ್ ಎಂದಿರುವಾಗ **ಆಜ್ಜಸೇರಸುಕ್** (ಪಾ. ಸೂ. ೭-೧-೫೦) ಎಂಬುದರಿಂದ ಅಸುಕಾಗಮ ಬರುತ್ತದೆ. ಸಕಾರಕ್ಕೆ ರುತ್ವ ವಿಸರ್ಗ ಬಂದರೆ ಮಹಿಷಾಸಃ ಎಂದು ರೂಪವಾಗುತ್ತದೆ.

**ಮಾಯಿನಃ--**ಮಾಯಾ ಅಸ್ಯ ಅಸ್ತೀತಿ ಮಾಯೀ, ವ್ರೀಹ್ಯಾದಿಯಲ್ಲಿ ಇದು ಪಠಿತವಾದುದರಿಂದ **ವ್ರೀಹ್ಯಾದಿಭ್ಯಶ್ಚ** (ಪಾ. ಸೂ. ೫-೨-೧೧೬) ಎಂಬುದರಿಂದ ಇನಿ ಪ್ರತ್ಯಯ ಬರುತ್ತದೆ. **ಯಸ್ಯೇತಿ ಚ ಸೂತ್ರ**ದಿಂದ ಆಕಾರ **ಲೋಪ**. ಮಾಯಿನ್ ಶಬ್ದವಾಗುತ್ತದೆ. ಬಹುವಚನದಲ್ಲಿ ಮಾಯಿನಃ ಎಂದು ರೂಪವಾಗುತ್ತದೆ.

**ಚಿತ್ರಭಾನವಃ** ಚಿತ್ರಾಃ ಭಾನವಃ ಯಸ್ಯ ಸಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸ್ವತವಸಃ**—ಸ್ವಕೀಯಂ ತವಃ ಯೇಷಾಂ ತೇ ಸ್ವತವಸಃ. ಬಹುವ್ರೀಹಿಸಮಾಸ ಹಿಂದಿನಂತೆಯೇ ಸ್ವರ ಬರುತ್ತದೆ

**ರಘುಷ್ಯದಃ**—ಸ್ಯಂದೂ ಪ್ರಸ್ರವಣೇ ಧಾತು ರಘು ಶೀಘ್ರಂ ಸ್ಯಂದಂತೇ ಗಚ್ಛಂತಿ ಇತಿ ರಘುಷ್ಯದಃ **ಕ್ವಿಪ್ ಚ** ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ ಕಿತ್ತಾದ ಪ್ರತ್ಯಯ ಪರದಲ್ಲಿ ಬಂದುದರಿಂದ **ಅನಿದಿತಾಂ ಹಲ ಉಪಧಾಯಾಃ**- ಎಂಬುದರಿಂದ ಉಪಧಾಭೂತ ನಕಾರಕ್ಕೆ ಲೋಪ ರಘುಸ್ಯದ ಶಬ್ದವಾಗುತ್ತದೆ **ವಾಲಮೂಲ-ಲಘ್ವಲಮ್** (ಪಾ ಸೂ ೮-೨-೧೮) ಎಂಬುದರಿಂದ ರಘು ಎಂಬಲ್ಲಿ ಲತ್ವ ವಿಕಲ್ಪವಾದುದರಿಂದ ಲತ್ವ ಬರುವುದಿಲ್ಲ ಬಹುವಚನದಲ್ಲಿ ರಘುಷ್ಯದಃ ಎಂದು ರೂಪವಾಗುತ್ತದೆ. **ಗತಿಕಾರಕೋಪಪದಾತ್ ಕೃತ್** ಎಂದುದರಿಂದ ಕೃದುತ್ತರ ಪದ ಪ್ರಕೃತಿಸ್ವರ ಬರುತ್ತದೆ. ಕ್ವಿಪ್ಪಿನಲ್ಲಿ ಸರ್ವವೂ ಲೋಪವಾದುದರಿಂದ ಧಾತುವಿನ ಅಕಾರವು ಉದಾತ್ತವಾಗುತ್ತದೆ

**ಹಸ್ತಿನಃ**- ಹಸ್ತಃ ಅಸ್ಯ ಅಸ್ತಿ ಇತಿ ಹಸ್ತೀ ಮತ್ವರ್ಥದಲ್ಲಿ **ಅತ ಇನಿಠನೌ** ಎಂಬುದರಿಂದ ಇನಿ ಪ್ರತ್ಯಯ ಬಹುವಚನದಲ್ಲಿ ಹಸ್ತಿನಃ ಎಂದು ರೂಪವಾಗುತ್ತದ ಪ್ರತ್ಯಯ ಸ್ವರದಿಂದ ಇಕಾರ ಉದಾತ್ತವಾಗುತ್ತದೆ

**ಖಾದಥ**--ಖಾದೃ ಭಕ್ಷಣೇ ಧಾತು ಲಟ್ ಮಧ್ಯಮಪುರುಷದಲ್ಲಿ ಥ ಪ್ರತ್ಯಯ **ಕರ್ತರಿ ಶಪ್** ಎಂಬುದರಿಂದ ಶಪ್ ವಿಕರಣ ಖಾದಥ ಎಂದು ರೂಪವಾಗುತ್ತದ ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದ **ಅನ್ಯೇಷಾಮಪಿ ದೃಶ್ಯತೇ** ಎಂಬುದರಿಂದ ಮಂತ್ರದಲ್ಲಿ ದೀರ್ಘ ಬರುತ್ತದೆ

**ಅಯುಗ್ಧ್ವಂ**—ಯುಜಿರ್ ಯೋಗೇ ಧಾತು ಲುಙಿನಲ್ಲಿ ಮಧ್ಯಮಪುರುಷ ಬಹುವಚನದಲ್ಲಿ ಧ್ವಮ್ ಪ್ರತ್ಯಯ **ಚ್ಲಿ ಲುಙಿ** ಸೂತ್ರದಿಂದ ಪ್ರಾಪ್ತವಾದ ಚ್ಲಿಗೆ **ಚ್ಲೇಃ ಸಿಚ್** ಎಂಬುದರಿಂದ ಸಿಜಾದೇಶ **ಏಕಾಚ ಉಪದೇಶೇಽನುದಾತ್ತಾತ್** ಎಂಬುದರಿಂದ ಸಿಚ್ಚಿಗೆ ಇಡಾಗಮ ಬರುವುದಿಲ್ಲ **ಧಿ ಚ** (ಪಾ ಸೂ ೮-೨-೨೫) ಧಕಾರಾದಿಯಾದ ಪ್ರತ್ಯಯ ಪರದಲ್ಲಿರುವಾಗ ಸಕಾರಕ್ಕೆ ಲೋಪ ಬರುತ್ತದೆ ಎಂಬುದರಿಂದ ಸಿಚ್ಚಿಗೆ ಲೋಪ **ಚೋಃ ಕುಃ** ಸೂತ್ರದಿಂದ ಧಾತುವಿನ ಜಕಾರಕ್ಕೆ. ಕುತ್ವದಿಂದ ಗಕಾರಾದೇಶ. ಲುಙ್ ನಿಮಿತ್ತಕವಾಗಿ ಅಂಗಕ್ಕೆ ಅಡಾಗಮ ಅಯುಗ್ಧ್ವಮ್ ಎಂದು ರೂಪವಾಗುತ್ತದೆ ಅಡುದಾತ್ತಃ ಎಂಬುದರಿಂದ ಆದ್ಯುದಾತ್ತವಾದ ಪದವಾಗುತ್ತದೆ ಯತ್ ಎಂದು ಹಿಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ ॥ ೭ ॥



॥ ಸಂಹಿತಾಪಾಠಃ ॥

ಸಿಂಹಾ ಇವ ನಾನದತಿ ಪ್ರಚೇತಸಃ ಪಿಶಾ ಇವ ಸುಪಿಶೋ ವಿಶ್ವ-

ವೇದಸಃ ।

ಕ್ಷಪೋ ಜಿನ್ವಂತಃ ಪೃಷತೀಭಿರ್ಋಷ್ಟಿಭಿಃ ಸಮಿತ್ಸಬಾಧಃ ಶವ-
ಸಾಹಿಮನ್ಯವಃ ॥ ೮ ॥

॥ ಪದಪಾಠಃ ॥

ಸಿಂಹಾಃ ಽ ಇವ । ನಾನದತಿ । ಪ್ರ ಽ ಚೇತಸಃ । ಪಿಶಾಃ ಽ ಇವ । ಸು ಽ ಪಿಶಃ ।
ವಿಶ್ವ ಽ ವೇದಸಃ ।

ಕ್ಷಪಃ । ಜಿನ್ವಂತಃ । ಪೃಷತೀಭಿಃ । ಋಷ್ಟಿ ಽ ಭಿಃ । ಸಂ । ಇತ್ । ಸ ಽ ಬಾಧಃ ।
ಶವಸಾ । ಅಹಿ ಽ ಮನ್ಯವಃ ॥ ೮ ॥

॥ ಸಾಯಣಭಾಷ್ಯಂ ॥

ಪ್ರಚೇತಸಃ ಪ್ರಕೃಷ್ಟಜ್ಞಾನಾ ಮರುತಃ ಸಿಂಹಾ ಇವ ನಾನದತಿ । ಭೃಶಂ ಶಬ್ದಂ ಕುರ್ವಂತಿ । ಯಥಾ ಸಿಂಹಾ ಗಿರಿಗಹ್ವರೇಷು ಗಂಭೀರಂ ಶಬ್ದಂ ಕುರ್ವಂತಿ ಏವಂ ಮರುತ್ಸ್ವಸ್ಯಾಗತೇಷು ಗಂಭೀರಃ ಶಬ್ದ ಉತ್ಪದ್ಯತ ಇತಿ ಭಾವಃ । ತಥಾ ಸುಪಿಶಃ ಶೋಭನಾವಯವಾಃ ಶೋಭನಾಲಂಕಾರಾ ವಾ । ತತ್ರ ದೃಷ್ಟಾಂತಃ । ಪಿಶಾ ಇವ । ಪಿಶ ಇತಿ ರುರುನಾಮ । ಯಥಾ ರುರವಃ ಸ್ವಶರೀರಗತೈಃ ಶ್ವೇತಬಿಂದುಭಿರಲಂಕೃತಾಸ್ತದ್ವತ್ । ವಿಶ್ವವೇದಸಃ ಸರ್ವಜ್ಞಾಃ ಕ್ಷಪಃ ಶತ್ರೂಣಾಂ ಕ್ಷಪಯಿತಾರೋ ಜಿನ್ವಂತಃ ಸ್ತೋತೄನ್ಪ್ರೀಣಯಂತಃ ಶವಸಾ ಬಲೇನಾಹಿಮನ್ಯವ ಆಹನನಶೀಲಮನ್ಯುಯುಕ್ತಾಃ । ಯದ್ವಿಷಯಃ ಕೋಪೋ ಜಾಯತೇ ತಸ್ಯ ಹನನೇ ಸಮರ್ಥಾ ಇತ್ಯರ್ಥಃ । ಯದ್ವಾ । ಮನನಂ ಜ್ಞಾನಂ ಮನ್ಯುಃ । ಅಹೀನಜ್ಞಾನಾಃ । ಉತ್ಕೃಷ್ಟಬುದ್ಧಯ ಇತ್ಯರ್ಥಃ । ಏವಂಭೂತಾ ಮರುತಃ ಪೃಷತೀಭಿಃ । ಪೃಷತ್ಯ ಇತಿ ಮರುತಾಂ ವಾಹನಸ್ಯಾಖ್ಯಾ । ಪೃಷತ್ಯಃ ಶ್ವೇತಬಿಂದ್ವಂಕಿತಾ ಮೃಗ್ಯ ಇತ್ಯೈತಿಹಾಸಿಕಾಃ । ನಾನಾವರ್ಣಾ ಮೇಘಮಾಲಾ ಇತಿ ನೈರುಕ್ತಾಃ । ತಾಭಿರ್ಋಷ್ಟಿಭಿರಾಯುಧೈಶ್ಚ ಸಹಿತಾಃ ಸಂತಃ ಸಬಾಧಃ ಶತ್ರುಭಿರ್ಬಾಧಿತಾನ್ಯಜಮಾನಾನ್ ಸಮಿತ್ ಸಮಾನಮೇವ ಯುಗಪದೇವ ರಕ್ಷಿತುಮಾಗಚ್ಛಂತೀತಿ ಶೇಷಃ ॥ ನಾನದತಿ । ನದ ಅವ್ಯಕ್ತೇ ಶಬ್ದೇ । ಅಸ್ಮಾದ್ಯಙ್ಲುಗಂತಾಲ್ಲಟ್ । ಪಿಶಾ ಇವ । ಪಿಶ ಅವಯವೇ । ಇಗುಪಧಲಕ್ಷಣಃ ಕಃ । ಸುಪಿಶಃ । ಸುಪೂರ್ವಾತ್ಪಿಶ ಅವಯವ ಇತ್ಯಸ್ಮಾತ್ ಕ್ವಿಪ್ಚೇತಿ ಕ್ವಿಪ್ । ಪೃಷತೀಭಿಃ । ಪೃಷು ಸೇಚನೇ । ವರ್ತಮಾನೇ ಪೃಷದ್ಬೃಹನ್ಮಹಜ್ಜಗಚ್ಛತೃವಚ್ಚ । ಉ ೨-೮೪ । ಇತಿ ಶತೃವದ್ಭಾವಾ-

**ದುಗಿಶಕ್ಷೀತಿ ಜೀಪ್ । ಅತ ಏವ ಶತುರನುಮ ಇತಿ ನದ್ಯಾ ಉದಾತ್ತತ್ವೇ ಪ್ರಾಪ್ತೇ ಬೃಹನ್ಮಹತೋರು-ಪಸಂಖ್ಯಾನಮಿತಿ ನಿಯಮಾತ್ತಸ್ಯಾಭಾವಃ ॥**

॥ ಪ್ರತಿಪದಾರ್ಥ ॥

**ಪ್ರಚೇತಸಃ**- ಒಳ್ಳೆಯ ಜ್ಞಾನಿಗಳಾದ (ಮರುತ್ತುಗಳು) । **ಸಿಂಹಾ ಇವ**--ಸಿಂಹಗಳಂತೆ । **ನಾನದತಿ**— ಹೆಚ್ಚಾಗಿ ಶಬ್ದವನ್ನು ಮಾಡುತ್ತಾರೆ । **ಪಿಶಾ ಇವ**—ಜಿಂಕೆಗಳಂತೆ । **ಸುಪಿಶಃ**—ಅಲಂಕೃತವಾದ ಅವಯವ ಗಳುಳ್ಳ । **ವಿಶ್ವವೇದಸಃ**—ಸರ್ವಜ್ಞರಾದ । **ಕ್ಷಪಃ**—ಶತ್ರುನಾಶಕರಾದ । **ಜಿನ್ವಂತಃ**--ಸ್ತೋತೃಗಳನ್ನು ಆನಂದಪಡಿಸುವ । **ಶವಸಾ**—ಬಲದಿಂದ (ಯುಕ್ತರಾದ) । **ಅಹಿಮನ್ಯವಃ** ಹನನಶೀಲವಾದ ಕೋಪವುಳ್ಳ, ಅಥವಾ ಅಹೀನವಾದ ಜ್ಞಾನವುಳ್ಳ (ಮರುತರು) । **ಪೃಷತೀಭಿಃ**—ತಮ್ಮ ವಾಹನಗಳಾದ, ಬಿಳೀ ಚುಕ್ಕೆಗಳುಳ್ಳ ಜಿಂಕೆ ಗಳಿಂದ, (ನಾನಾವರ್ಣವಾದ ಮೇಘಮಾಲೆಯಿಂದ) । **ಋಷ್ಟಿಭಿಃ** -- ಆಯುಧಗಳಿಂದ (ಯುಕ್ತರಾಗಿ) । **ಸಬಾಧಃ**-- ಶತ್ರುಗಳಿಂದ ಬಾಧಿತನಾದ (ಯಜಮಾನನನ್ನು) । **ಸಮಿತ್**--ಕೂಡಲೇ (ರಕ್ಷಿಸಲು ಬರುತ್ತಾರೆ) ॥

॥ ಭಾವಾರ್ಥ ॥

ಮರುದ್ದೇವತೆಗಳು ಸಿಂಹದಂತೆ ಗಂಭೀರವಾದ ಧ್ವನಿಮಾಡತಕ್ಕವರು, ಸರ್ವಜ್ಞರು, ಚೆನ್ನಾಗಿ ಅಲಂಕೃತರು, ಶತ್ರುನಾಶಕರು, ಅಹಿತರನ್ನು ಹನನಮಾಡುವಷ್ಟು ಕೋಪವುಳ್ಳವರು, ಸ್ತೋತೃಗಳನ್ನು ಆನಂದಪಡಿಸತಕ್ಕವರು ಇಂಥವರು, ಯಜಮಾನನಿಗೆ ತೊಂದರೆಬಂದಾಗ, ತಮ್ಮ ವಾಹನಗಳ ಮೇಲೆ, ಆಯುಧಸಮೇತರಾಗಿ ಬಂದು ರಕ್ಷಿಸಲಿ

## English Translation

The most wise Maruts roar like lions, the all-knowing are graceful as the spotted deer, destroying (their foes) delighting (their worshippers), of deadly strength in their anger, they come with their antelopes, and their arms (to defend the sacrificer) against interruption.

॥ ವಿಶೇಷವಿಷಯಗಳು ॥

**ಸಿಂಹಾ ಇವ ನಾನದತಿ--ಭೃಶಂ ಶಬ್ದಂ ಕುರ್ವಂತಿ । ಯಥಾ ಸಿಂಹಾಃ ಗಿರಿಗಹ್ವರೇಷು ಗಂಭೀರಂ ಶಬ್ದಂ ಕುರ್ವಂತಿ ಏವಂ ಮರುತ್ಸು ಅಪ್ಯಾಗತೇಷು ಗಂಭೀರಃ ಶಬ್ದಃ ಉತ್ಪದ್ಯತೇ** । ಸಿಂಹಗಳು ಪರ್ವತಗಳ ಗುಹೆಗಳಲ್ಲಿ ಆರ್ಭಟವನ್ನು ಮಾಡುವಹಾಗೆ ಮರುದ್ದೇವತೆಗಳು ಬಂದಾಗ ಬಲವಾದ ಧ್ವನಿಯು ಕೇಳಿಸುವುದು. ಆದ್ದರಿಂದ ಈ ಮರುದ್ದೇವತೆಗಳು ಘಟ್ಟಿಯಾದ ಧ್ವನಿಯನ್ನು ಮಾಡುವವರು

**ಪಿಶಾ ಇವ ಸುಪಿಶಃ—ಪಿಶ ಇತಿ ರುರುನಾಮ ಶೋಭನಾವಯವಾ ಶೋಭನಾಲಂಕಾರಾ ವಾ ।** ಪಿಶ ಎಂಬ ಶಬ್ದವು ಜಿಂಕೆ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು ಜಿಂಕೆಗಳು ತಮ್ಮ ಶರೀರದಲ್ಲಿ ಇರುವ ಬಿಳಿಯ

ಚುಕ್ಕೆಗಳಿಂದ ಅಲಂಕಾರವುಳ್ಳದ್ದಾಗಿರುವ ಹಾಗೆ ಈ ಮರುದ್ದೇವತೆಗಳು ಚೆನ್ನಾಗಿ ಕಾಣುವಂತೆ ಇರುವ ಉತ್ತಮವಾದ ಆಭರಣಗಳಿಂದ ತಮ್ಮ ಶರೀರವನ್ನು ಅಲಂಕರಿಸಿಕೊಂಡಿರುವರು ಅಥವಾ ಸ್ವಭಾವದಿಂದಲೇ ಚೆನ್ನಾಗಿ ಕಾಣಿಸುವ ಮಂಗಳಕರವಾದ ಶರೀರವುಳ್ಳವರು

**ಶವಸಾ ಅಹಿಮನ್ಯವಃ—ಬಲೇನ ಆಹನನಶೀಲಮನ್ಯುಯುಕ್ತಾಃ । ಯದ್ವಾ ಮಾನನಂ ಜ್ಞಾನಂ ಮನ್ಯುಃ । ಅಹೀನಜ್ಞಾನಾಃ ಉತ್ಕೃಷ್ಟಬುದ್ಧಯಃ ।** ಇವರಿಗೆ ಕೋಪವು ಉಂಟಾದವರನ್ನು (ಯಾರ ಮೇಲೆ ಕೋಪವು ಬಂದಿರುವುದೋ ಅವರನ್ನು) ಇವರು ತಮ್ಮ ಸ್ವಂತಸಾಮರ್ಥ್ಯದಿಂದಲೇ ನಿಗ್ರಹ ಮಾಡುವ ಸ್ವಭಾವವುಳ್ಳವರು ಎಂದು ಒಂದು ವಿಧವಾದ ಅರ್ಥವು ಮನ್ಯು ಶಬ್ದವು ಜ್ಞಾನವೆಂಬ ಅರ್ಥದಲ್ಲಿ ಇರುವುದರಿಂದ ಬಹಳ ಹೆಚ್ಚಾದ ಜ್ಞಾನವುಳ್ಳವರು ಉತ್ತಮವಾದ ಬುದ್ಧಿಯುಳ್ಳವರು ಎಂದು ಇನ್ನೊಂದು ವಿಧವಾದ ಅರ್ಥವು

**ಪೃಷತೀಭಿಃ ಋಷ್ಟಿಭಿಃ ಸಬಾಧಃ— ಪೃಷತ್ಯ ಇತಿ ಮರುತಾಂ ವಾಹನಸ್ಯಾಖ್ಯಾ । ಪೃಷತ್ಯಃ ಶ್ವೇತ ಬಿಂದ್ವಂಕಿತಾ ಮೃಗ್ಯ ಇತಿ ಐತಿಹಾಸಿಕಾಃ । ನಾನಾವರ್ಣಾ ಮೇಘಮಾಲಾ ಇತಿ ನೈರುಕ್ತಾಃ । ತಾಭಿಃ ಆಯುಧೈಶ್ಚ ಸಹಿತಾಃ ಶತ್ರುಭಿರ್ಬಾಧಿತಾನ್ ಯಜಮಾನಾನ್ ಯುಗಪದೇವ ರಕ್ಷಿತುಂ ಆಗಚ್ಛಂತೀ-ತ್ಯರ್ಥಃ ।** ಬಿಳಿಯ ಚುಕ್ಕಿಗಳಿಂದ ಕೂಡಿದ ಜಿಂಕೆಯು ಪೃಷತೀ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವುದು ಎಂದು ಪೌರಾಣಿಕರು ಹೇಳಿರುವರು ಅನೇಕವಾದ ಬಣ್ಣಗಳುಳ್ಳ ಮೇಘಮಾಲೆಗೆ ಪೃಷತೀ ಎಂದು ಹೆಸರು ಎಂದು ನಿಘಂಟು ಕಾರರು ಹೇಳುತ್ತಾರೆ ಮರುದ್ದೇವತೆಗಳು ತಮ್ಮ ವಾಹನವಾದ ಪೃಷತೀ ಅಥವಾ ಜಿಂಕೆಗಳನ್ನು ವಾಹನವಾಗಿ ಮಾಡಿಕೊಂಡು, ಅಥವಾ ಅನೇಕ ಬಣ್ಣವುಳ್ಳ ಮೇಘಮಾಲೆಯನ್ನು ಏರಿಕೊಂಡು ಆಯುಧಗಳನ್ನು ಧರಿಸಿ, ಯಜ್ಞ ಮಾಡುತ್ತಿರುವ ಯಜಮಾನರ ಶತ್ರುಗಳನ್ನು ನಿಗ್ರಹಮಾಡುವುದಕ್ಕಾಗಿ ಆ ಕ್ಷಣದಲ್ಲಿಯೇ ಬರುವರು

ಸ್ಕಂದಸ್ವಾಮಿಗಳು **ಪಿಶಾ ಇವ ಸುಪಿಶಃ— ಅಗ್ನಯ ಇವ ಸುರೂಪಾಃ** ಮರುದ್ದೇವತೆಗಳು ಅಗ್ನಿಯಂತೆ ಇರುವ ಆಕಾರವುಳ್ಳವರು. **ಕ್ಷಪಃ ಸಂಜಿನ್ವಂತಃ ನಾನದತಿ—ಉದಕಂ ಮೇಘಾತ್ ಸಂಕ್ಷಾರಯಂತಃ ನಾನದತಿ** ನೀರುಗಳನ್ನು ಮೇಘಗಳಿಂದ ಸುರಿಸುವಾಗ ಆರ್ಭಟಮಾಡುವರು

**ಅಹಿಮನ್ಯವಃ – ಅವಿನಷ್ಟಾ ದೀಪ್ತಿರೇತೇಭ್ಯಃ । ದೀಪ್ತಿಮಂತ. । ಅಥವಾ ಅಹೀನದೀಪ್ತಯಃ ಉತ್ಕೃಷ್ಟದೀಪ್ತಯಃ ಅಥವಾ ಅಹಿರ್ಮೇಘೋ ಅಸುರೋವಾ ತದ್ವಿಷಯಃ ಕ್ರೋಧೋ ಯೇಷಾಂ ತೇ ।** ನಾಶವನ್ನು ಹೊಂದದ ಇರುವಕಾಂತಿಯುಳ್ಳವರು ಅಥವಾ ಬಹಳ ಹೆಚ್ಚಾದ ಕಾಂತಿಯುಳ್ಳವರು, ಎಂದು ಅಹಿಮನ್ಯವ ಶಬ್ದದ ಅರ್ಥವನ್ನು ಹೇಳಿರುವರು ಮತ್ತು ಅಹಿಶಬ್ದವು ಮೇಘ ಅಥವಾ ಅಹಿ ಎಂಬ ಹೆಸರುಳ್ಳ ಅಸುರ ಎಂದು ಅರ್ಥವನ್ನು ಬೋಧಿಸುವುದು ಮರುದ್ದೇವತೆಗಳು ಈ ಮೇಘಗಳ ಅಥವಾ ಅಸುರರ ವಿಷಯದಲ್ಲಿ ಕೋಪವುಳ್ಳವರು ಎಂದು ಇನ್ನೊಂದುವಿಧವಾಗಿ ಅರ್ಥಮಾಡಿರುವರು

॥ ವ್ಯಾಕರಣಪ್ರಕ್ರಿಯಾ ॥

**ಸಿಂಹಾ ಇವ** ಷಿಸಿ ಹಿಂಸಾಯಾಂ ಧಾತು ಇದಿತ್ತಾದುದರಿಂದ ನುಮಾಗಮ ಅಚ್ ಪ್ರತ್ಯಯ ಪೃಷೋದ ರಾದಿಯಲ್ಲಿ ಸೇರಿರುವುದರಿಂದ ವರ್ಣವ್ಯತ್ಯಾಸ ಬರುತ್ತೆ **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದ

**ನಾನದತಿ**—ನದ ಅವ್ಯಕ್ತೇ ಶಬ್ದೇ ಧಾತು. ಭೃಶಾರ್ಥದಲ್ಲಿ ಯಙ್ **ಯಙೋಽಚಿ ಚ** ಸೂತ್ರದಿಂದ ಅದಕ್ಕೆ ಲುಕ್ **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ **ದೀರ್ಘೋಽಕಿತಃ** (ಪಾ. ಸೂ ೭-೪-೮೩) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ ನಾನದ್ ಎಂಬ ಯಙ್‌ಲುಗಂತದ ಮೇಲೆ ಲಟ್ ಪ್ರಥಮಪುರುಷ ಬಹುವಚನದ ಝಿಗೆ **ಅದಭ್ಯಸ್ತಾತ್** ಎಂಬುದರಿಂದ ಅತಾದೇಶ-ನಾನದತಿ-ಎಂದು ರೂಪವಾಗುತ್ತದೆ. **ತಿಙ್ಙತಿಙಃ** ಸೂತ್ರದಿಂದ ನಿಘಾತಸ್ವರ ಬರುತ್ತದೆ

**ಪಿಶಾ ಇವ** ಪಿಶ ಅವಯವೇ ಧಾತು. **ಇಗುಪಧಜ್ಞಾಪ್ರೀಕಿರಃ ಕಃ** (ಪಾ ಸೂ ೩-೧-೧೩೫) ಎಂಬುದರಿಂದ ಕ ಪ್ರತ್ಯಯ ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ ಬಹುವಚನದಲ್ಲಿ ಪಿಶಾಃ ಎಂದು ರೂಪವಾಗುತ್ತದೆ.

**ಸುಪಿಶಃ**—ಸುಪೂರ್ವಕವಾದ ಪಿಶ (ಅವಯವೇ) ಧಾತುವಿಗೆ **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. ಸುಪಿಶ್ ಎಂದು ಶಬ್ದವಾಗುತ್ತದೆ ಬಹುವಚನದ ರೂಪ **ಗತಿಕಾರಕೋಪಪದಾತ್ ಕೃತ್** ಸೂತ್ರದಿಂದ ಪ್ರಕೃತಿಸ್ವರ ಬರುತ್ತದೆ.

**ವಿಶ್ವವೇದಸಃ**-- ಬಹುವ್ರೀಹಿಯಲ್ಲಿ **ಬಹುವ್ರೀಹೌ ಪ್ರಕೃ**-ಸೂತ್ರದಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ

**ಜಿನ್ವಂತಃ**—ಜಿವಿ ಪ್ರೀಣನೇ ಧಾತು **ಇದಿತೋನುಮ್ ಧಾತೋಃ** ಎಂಬುದರಿಂದ ನುಮಾಗಮ ಲಡರ್ಥದಲ್ಲಿ ಶತೃಪ್ರತ್ಯಯ ಶಪ್ ವಿಕರಣ ಜಿನ್ವತ್ ಶಬ್ದವಾಗುತ್ತದೆ ಅದುಪದೇಶದ ಪರದಲ್ಲಿರುವುದರಿಂದ ಶತೃ **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತ. ಧಾತುವಿನ ಸ್ವರ ಉಳಿಯುತ್ತದೆ ಬಹುವಚನದಲ್ಲಿ ನುಮಾಗಮ ಬರುವುದರಿಂದ ಜಿನ್ವಂತಃ ಎಂದು ರೂಪವಾಗುತ್ತದೆ

**ಪೃಷತೀಭಿಃ**—ಪೃಷು ಸೇಚನೇ ಧಾತು **ವರ್ತಮಾನೇ ಪೃಷದ್‌ಬಹನ್ಮಹಜ್ಜಗಚ್ಛತೃವಚ್ಚ** (ಉ ಸೂ ೨-೨೪೧) ಎಂಬುದರಿಂದ ನಿಪಾತಿತವಾಗಿದೆ ಶತೃವದ್ಭಾವ ಹೇಳಿರುವುದರಿಂದ **ಉಗಿತಶ್ಚ** ಎಂಬ ಸೂತ್ರದಿಂದ ಸ್ತ್ರೀತ್ವವಿವಕ್ಷಾ ಮಾಡಿದಾಗ ಙೀಪ್ ಬರುತ್ತದೆ ಪೃಷತೀ ಎಂದು ರೂಪವಾಗುತ್ತದೆ ತೃತೀಯಾ ಬಹುವಚನದಲ್ಲಿ **ಶತುರನುಮೋನದ್ಯಜಾದೀ** (ಪಾ ಸೂ ೬-೧-೧೭೩) ಎಂಬುದರಿಂದ ಶತೃವದ್ಭಾವವಿರುವುದರಿಂದ ನದಿಗೆ (ಈಕಾರಕ್ಕೆ) ಉದಾತ್ತಸ್ವರವು ಪ್ರಾಪ್ತವಾದರೆ **ಬೃಹನ್ಮಹತೋರುಪಸಂಖ್ಯಾನಂ** ಎಂಬುದರಿಂದ ಎರಡುಶಬ್ದಕ್ಕೇ ನಿಯಮಮಾಡಿರುವುದರಿಂದ ಉದಾತ್ತ ಸ್ವರ ಬರುವುದಿಲ್ಲ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಅಹಿಮನ್ಯವಃ** - ಬಹುವ್ರೀಹಿ ಸಮಾಸದಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ ॥ ೨ ॥



॥ ಸಾಯಣಭಾಷ್ಯಂ ॥

ರೋದಸೀ ಆ ವದತಾ ಗಣಶ್ರಿಯೋ ನೃಷಾಚಃ ಶೂರಾಃ ಶವ-
ಸಾಹಿಮನ್ಯವಃ ।
ಆ ವಂಧುರೇಷ್ವಮತಿರ್ನ ದರ್ಶತಾ ವಿದ್ಯುನ್ನ ತಸ್ಥೌ ಮರುತೋ
ರಥೇಷು ವಃ ॥ ೯ ॥

॥ ಪದಪಾಠಃ ॥

ರೋದಸೀ ಇತಿ । ಆ । ವದತ । ಗಣಽಶ್ರಿಯಃ । ನೃಽಸಾಚಃ । ಶೂರಾಃ
ಶವಸಾ । ಅಹಿಽಮನ್ಯವಃ ।
ಆ । ವಂಧುರೇಷು । ಅಮತಿಃ । ನ । ದರ್ಶತಾ । ವಿಽದ್ಯುತ್ । ನ । ತಸ್ಥೌ ।
ಮರುತಃ । ರಥೇಷು ವಃ ॥ ೯ ॥

॥ ಸಾಯಣಭಾಷ್ಯಂ ॥

ಹೇ ಗಣಶ್ರಿಯೋ ಗಣಶಃ ಶ್ರಯಮಾಣಾಃ ಸಪ್ತಗಣರೂಪೇಣಾವಸ್ಥಿತಾ ನೃಷಾಚೋ ನೄನ್ ಯಜಮಾನಾನ್ಹವಿಃಸ್ವೀಕರಣಾಯ ಸೇವಮಾನಾಃ ಶೂರಾಃ ಶೌರ್ಯೋಪೇತಾ ಏವಂಭೂತಾ ಹೇ ಮರುತಃ ಶವಸಾ ಬಲೇನಾಹಿಮನ್ಯವ ಆಹನನಸ್ವಭಾವಕೋಪಯುಕ್ತಾಃ ಸಂತೋ ರೋದಸೀ ದ್ಯಾವಾಪೃಥಿವ್ಯಾವಾ ವದತ । ಆ ಸಮಂತಾಚ್ಛಬ್ದಯತ । ಯುಷ್ಮದಾಗಮನೇ ಸತಿ ಭವದೀಯಶಬ್ದೇನ ದ್ಯಾವಾಪೃಥಿವ್ಯೌ ಪೂರ್ಣೇ ಕುರುತೇತಿ ಭಾವಃ । ಕಿಂಚ ಹೇ ಮರುತೋ ವೋ ಯುಷ್ಮಾಕಂ ತೇಜೋ ವಂಧುರೇಷು । ಬಂಧಕಕಾಷ್ಠಾನಿರ್ಮಿತಂ ಸಾರಥೇಃ ಸ್ಥಾನಂ ವಂಧುರಮಿತ್ಯುಚ್ಯತೇ । ತದ್ಯುಕ್ತೇಷು ರಥೇಷ್ವಾ ತಸ್ಥೌ । ಆತಿಷ್ಠತಿ । ಅವಸ್ಥಿತಂ ಸತ್ಸರ್ವೈರ್ದೃಶ್ಯತೇ । ತತ್ರ ದೃಷ್ಟಾಂತದ್ವಯಮುಚ್ಯತೇ । ಅಮತಿರ್ನ । ಅಮತಿ-ರಿತಿ ರೂಪನಾಮ । ಯಥಾ ನಿರ್ಮಲಂ ರೂಪಂ ಸರ್ವೈರ್ದೃಶ್ಯತೇ । ದರ್ಶತಾ ವಿದ್ಯುನ್ನ । ಯಥಾ ವಾ ದರ್ಶನೀಯಾ ವಿದ್ಯುನ್ಮೇಘಸ್ಥಾ ಸರ್ವೈರ್ದೃಶ್ಯತೇ । ಏವಂ ರಥೇ ಸ್ಥಿತಾನಾಂ ಯುಷ್ಮಾಕಂ ಜ್ಯೋತಿರಪಿ

**ಸರ್ವೈರ್ದೃಶ್ಯತ ಇತ್ಯರ್ಥಃ ॥ ವದತ । ಋಚಿ ತುನುಘೇತ್ಯಾದಿನಾ ದೀರ್ಘಃ । ನೃಷಾಚಃ । ಪಾದಾದಿತ್ವಾ-ದಾಮಂತ್ರಿತಾದ್ಯುದಾತ್ತತ್ವಂ । ಅಮತಿಃ । ಅಮ ಗತ್ಯಾದಿಷು । ಅಮೇರತಿಃ । ಉ. ೪-೫೯ । ಇತ್ಯೌ-ಣಾದಿಕೋಽತಿಪ್ರತ್ಯಯಃ । ಪ್ರತ್ಯಯಾದ್ಯುದಾತ್ತತ್ವಂ । ದರ್ಶತಾ । ಭೃಮೃದೃಶೀತ್ಯಾದಿನಾತಚ್ ಪ್ರತ್ಯಯಃ। ಚಿತ್ವಾದಂತೋದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಗಣಶ್ರಿಯಃ** ಏಳರ ಗುಂಪುಗಳಲ್ಲಿರುವ । **ನೃಷಾಚಃ** ಮನುಷ್ಯರನ್ನು (ಯಜಮಾನರನ್ನು ಹವಿಸ್ಸಿಗಾಗಿ) ಆಶ್ರಯಿಸುವ। **ಶೂರಾಃ** ಶೂರರಾದ ಎಲೈ ಮರುದ್ದೇವತೆಗಳೇ। **ಶವಸಾ** - ಬಲದಿಂದ । **ಅಹಿಮನ್ಯವಃ** - (ಅಹಿತರ ವಿಷಯದಲ್ಲಿ) ಕನಲುವ ಸ್ವಭಾವವುಳ್ಳ, ಕೋಪಯುಕ್ತರಾಗಿ । **ರೋದಸೀ** – ಭೂಮ್ಯಾಕಾಶಗಳಲ್ಲಿ । **ಆ ವದತ**— ಘಟ್ಟಿಯಾಗಿ ಶಬ್ದಮಾಡಿ । (**ಕಿಂಚ** ಮತ್ತೂ) । **ಮರುತಃ**—ಮರುತ್ತರೇ । **ವಃ**—ನಿಮ್ಮ ತೇಜಸ್ಸು । **ವಂಧುರೇಷು**—ಕಾಷ್ಠನಿರ್ಮಿತವಾದ ಸಾರಥಿಸ್ಥಾನಯುಕ್ತವಾದ । **ರಥೇಷು**—ರಥಗಳಲ್ಲಿ । **ಅಮತಿರ್ನ**—ಪ್ರಕಾಶಮಾನವಾದ ರೂಪದಂತೆಯೂ । **ದರ್ಶತಾ** —ರಮ್ಯವಾದ । **ವಿದ್ಯುನ್ನ**—ಮಿಂಚಿನಂತೆಯೂ। **ಆ ತಸ್ಥೌ**—ಇರುತ್ತದೆ ॥

॥ ಭಾವಾರ್ಥ ॥

ಏಳು ಏಳರಂತೆ ಗುಂಪುಗಳಾಗಿ ವಿಭಕ್ತರಾದ, ಮನುಷ್ಯರಿಂದ ದತ್ತವಾದ ಹವಿಸ್ಸನ್ನು ಸ್ವೀಕರಿಸುವ, ಶೂರರಾದ, ಬಲಿಷ್ಠರಾದ, ಅಹಿತರ ವಿಷಯದಲ್ಲಿ ಮಹಾ ಕೋಪಿಷ್ಠರಾದ ಎಲೈ ಮರುದ್ದೇವತೆಗಳೇ, ನೀವು ಭೂಮ್ಯಾಕಾಶಗಳನ್ನು ಆವರಿಸಿ ಘಟ್ಟಿಯಾಗಿ ಶಬ್ದಮಾಡಿ. ಮತ್ತು ರಥದಲ್ಲಿರುವ ನಿಮ್ಮ ತೇಜಸ್ಸು, ಮೇಘಮಧ್ಯದಲ್ಲಿರುವ ಮಿಂಚು ಅಥವಾ ನಿರ್ಮಲವಾದ ಸುಂದರಾಕೃತಿಯು ಹೇಗೆ ಎಲ್ಲರಿಗೂ ಮನೋಹರವಾಗಿ ಕಾಣಿಸುತ್ತದೋ ಅದರಂತೆ ಕಾಣಿಸುತ್ತದೆ

## English Translation.

Maruts, who are distinguished in troops, who are benevolent to men, who are heroes, nnd whose strength is deadly in your anger, you make heaven and earth resound (at your coming); your (glory) sits in the seat-furnished chariots, conspicuous as (a beautiful) form, or as the lovely lightning.

॥ ವಿಶೇಷವಿಷಯಗಳು ॥

**ನೃಷಾಚಃ—ನೄನ್ ಯಜಮಾನಾನ್ ಹವಿಸ್ಸ್ವೀಕರಣಾಯ ಸೇವಮಾನಾಃ ।** ಯಜ್ಞಮಾಡುವ ಯಜಮಾನರುಗಳು ಒಪ್ಪಿಸುವ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಯಜಮಾನರುಗಳನ್ನು ರಕ್ಷಿಸುತ್ತಾ ಅವರನ್ನು ಪ್ರತೀಕ್ಷೆ ಮಾಡುತ್ತಿರುವವರು.

**ಶವಸಾ ಅಹಿಮನ್ಯವಃ—ಬಲೇನ ಆಹನನಸ್ವಭಾವಕೋಪಯುಕ್ತಾಃ** ಮರುದ್ದೇವತೆಗಳು ತಮ್ಮ ನೈಸರ್ಗಿಕವಾದ ಸಾಮರ್ಥ್ಯದಿಂದ ಯಜಮಾನರ ಶತ್ರುಗಳನ್ನು ಹೊಡೆಯುವ ಸ್ವಭಾವದಿಂದ ಕೂಡಿರುವ ಕೋಪವುಳ್ಳವರು

**ರೋದಸೀ ಅವದತ—ಯುಷ್ಮದಾಗಮನೇ ಸತಿ** ಭವದೀಯಶಬ್ದೇನ ದ್ಯಾವಾಪೃಥಿವ್ಯೌ ಪೂರ್ಣೇ ಕುರುತ । ನೀವು ಬರುವಾಗ ಉಂಟಾಗುವ ಧ್ವನಿಯಿಂದ ಭೂಮ್ಯಂತರಿಕ್ಷಗಳು ತುಂಬುವುವು

**ಅಮತಿರ್ನ—ಅಮತಿರಿತಿರೂಪನಾಮ ।** ನಿರ್ಣಿಕ್, ವವ್ರಿಃ ಎಂಬ ಇವೇ ಮೊದಲಾದ ಹದಿನಾರು ರೂಪನಾಮಗಳ ಮಧ್ಯದಲ್ಲಿ (ನಿ ೩-೧೩) ಅಮತಿಃ ಎಂಬ ಶಬ್ದವು ಪಠಿತವಾಗಿರುವುದು. **ಯಥಾ ನಿರ್ಮಲಂ ರೂಪಂ ಸರ್ವೈರ್ದೃಶ್ಯತೇ ಏವಂ ರಥೇ ಸ್ಥಿತಾನಾಂ ಯುಷ್ಮಾಕಂ ಜ್ಯೋತಿರಪಿ ಸರ್ವೈಃ ದೃಶ್ಯತೇ ।** ಕೊಳೆಯು ಇಲ್ಲದಿರುವುದರಿಂದ ಚೆನ್ನಾಗಿರುವ ಆಕಾರವು ಎಲ್ಲರಿಗೂ ಕಾಣಿಸುವ ಹಾಗೆ ರಥದಲ್ಲಿ ಇರುವ ನಿಮ್ಮ ಜ್ಯೋತಿಸ್ಸ್ವರೂಪದಿಂದ ಇರುವ ಆಕಾರವೂ ಕೂಡ ಎಲ್ಲರಿಗೂ ಕಾಣಿಸುವುದು ಈ ವಿಷಯದಲ್ಲಿ **ದರ್ಶತಾ ವಿದ್ಯುನ್ನ—ಯಥಾ ವಾ ದರ್ಶನೀಯಾ ವಿದ್ಯುತ್ ಮೇಘಸ್ಥಾ ಸರ್ವೈಃ ದೃಶ್ಯತೇ**—ಮೇಘದ ಮಧ್ಯದಲ್ಲಿ ಚೆನ್ನಾಗಿ ಹೊಳೆಯುವ ಮಿಂಚು ಎಲ್ಲರಿಗೂ ಕಾಣಿಸುವ ಹಾಗೆ ಎಂದು ಉಪಮಾನವನ್ನು ಹೇಳಿರುವುದು

**ಗಣಶ್ರಿಯಃ—ಗಣಶಃ ಶ್ರೂಯಮಾಣಾಃ ಸಪ್ತಗಣರೂಪೇಣಾವಸ್ಥಿತಾಃ** ಮರುದ್ದೇವತೆಗಳು ಗುಂಪಾಗಿ ಇರುವರೆಂದು ಪ್ರಸಿದ್ಧಿಯು ಏಳು ಗುಂಪಾಗಿರುವರೆಂದು ಅರ್ಥವು

॥ ವ್ಯಾಕರಣಪ್ರಕ್ರಿಯಾ ॥

**ವದತ**- ವದ ವ್ಯಕ್ತಾಯಾಂ ವಾಚಿ, ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಥ ಪ್ರತ್ಯಯ **ಲೋಟೋ ಲಙ್ವತ್** ಎಂಬುದರಿಂದ **ತಸ್‌ಥಸ್‌ಥಮಿಪಾಂ ತಾಂತಂತಾಮಃ** ಸೂತ್ರದಿಂದ ಥಕ್ಕೆ ತ ಆದೇಶ ಬರುತ್ತದೆ **ಕರ್ತರಿ ಶಪ್** ಎಂಬುದರಿಂದ ಶಪ್ ವಿಕರಣ ವದತ ಎಂದು ರೂಪವಾಗುತ್ತದೆ **ಋಚಿ ತುನುಘ** (ಪಾ ಸೂ ೬-೩-೧೩೩) ಎಂಬುದರಿಂದ ಮಂತ್ರದಲ್ಲಿ ದೀರ್ಘ ಬರುತ್ತದೆ ಅಲ್ಲಿ ತಙ್ ಗ್ರಹಣದಿಂದ ಥ ಎಂಬುದು ಆದೇಶವಾಗಿ ಬಂದ ತ ಎಂಬುದೇ ವ್ಯಾಖ್ಯಾನದಿಂದ ಗ್ರಹೀತವಾಗಿದೆ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ

**ಗಣಶ್ರಿಯಃ** – ಸಂಬೋಧನಾ ಬಹುವಚನಾಂತರೂಪ **ಆಮಂತ್ರಿತಸ್ಯ ಚ** ಎಂಬ ದರಿಂದ ನಿಘಾತಸ್ವರ ಬರುತ್ತದೆ

**ನೃಷಾಚಃ** ಇಲ್ಲಿಯೂ ಆಮಂತ್ರಿತಸಂಜ್ಞೆ ಬಂದರೂ ಪಾದಾದಿಯಲ್ಲಿ ಬಂದಿರುವುದರಿಂದ ಅಷ್ಟಮಿಕನಿಘಾತ ಬರುವುದಿಲ್ಲ **ಆಮಂತ್ರಿತಸ್ಯ** (ಪಾ ಸೂ ೬-೧ ೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಅಮತಿಃ**—ಅಮ ಧಾತು ಗತ್ಯಾದ್ಯರ್ಥದಲ್ಲಿದೆ **ಅಮೇರತಿಃ** (ಉ ಸೂ ೪-೫೯) ಎಂಬುದರಿಂದ ಔಣಾದಿಕವಾದ ಅತಿಪ್ರತ್ಯಯ ಬರುತ್ತದೆ **ಆದ್ಯುದಾತ್ತಶ್ಚ** ಎಂಬುದರಿಂದ ಬಂದಿರುವ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಕಾರೋತ್ತರಾಕಾರವು ಉದಾತ್ತವಾಗುತ್ತದೆ. ಪ್ರಥಮಾ ಏಕವಚನದಲ್ಲಿ ಅಮತಿಃ ಎಂದು ರೂಪವಾಗುತ್ತದೆ.

**ದರ್ಶತಾ**— ದೃಶಿರ್ ಪ್ರೇಕ್ಷಣೇ ಧಾತು **ಭೃಮೃದೃಶಿಯಜಿ ಪವಿ** (ಉ. ಸೂ. ೧-೭) ಎಂಬುದರಿಂದ ಅತಚ್ ಪ್ರತ್ಯಯ ಪ್ರತ್ಯಯ ನಿಮಿತ್ತಕವಾಗಿ ಧಾತುವಿನ ಉಪಧೆಗೆ ಗುಣ ಪ್ರತ್ಯಯ ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದೆ ಸ್ತ್ರೀತ್ವದಲ್ಲಿ **ಅಜಾದ್ಯತಷ್ಟಾಪ್** ಸೂತ್ರದಿಂದ ಟಾಪ್ ದರ್ಶತಾ ಎಂದು ರೂಪವಾಗುತ್ತದೆ.

**ತಸ್ಥೌ**— ಷ್ಠಾ ಗತಿನಿವೃತ್ತೌ ಧಾತು **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಿಟ್ **ಆತ ಔಣಲಃ** ಎಂಬುದರಿಂದ ತಿಪಿಗೆ ಆದೇಶವಾಗಿ ಬಂದ ಣಲಿಗೆ ಔ ಆದೇಶ ಬರುತ್ತದೆ ಧಾತುವಿಗೆ ದ್ವಿತ್ವ **ಶರ್ಪೂರ್ವಾಃ ಖಯಃ** ಎಂಬುದರಿಂದ ಅಭ್ಯಾಸದ ಖರಾದ ತಕಾರಕ್ಕೆ ಶೇಷ. ವೃದ್ಧಿ, ತಸ್ಥೌ ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಮರುತಃ—ಆಮಂತ್ರಿತಸ್ಯ ಚ** (ಪಾ ಸೂ ೮-೧-೧೯) ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ ॥ ೯ ॥



॥ ಸಂಹಿತಾಪಾಠಃ ॥

ವಿಶ್ವವೇದಸೋ ರಯಿಭಿಃ ಸಮೋಕಸಃ ಸಂಮಿಶ್ಲಾಸಸ್ತವಿಷೀಭಿ-
ರ್ವಿರಪ್ಶಿನಃ ।
ಅಸ್ತಾರ ಇಷುಂ ದಧಿರೇ ಗಭಸ್ತ್ಯೋರನಂತಶುಷ್ಮಾ ವೃಷಖಾ-
ದಯೋ ನರಃ ॥ ೧೦ ॥

॥ ಪದಪಾಠಃ ॥

**ವಿಶ್ವಽವೇದಸಃ । ರಯಿಽಭಿಃ । ಸಂಽಓಕಸಃ । ಸಂಽಮಿಶ್ಲಾಸಃ । ತವಿಷೀಭಿಃ । ವಿಽರಪ್ಶಿನಃ ।**

ಅಸ್ತಾರಃ । ಇಷುಂ । ದಧಿರೇ । ಗಭಸ್ತ್ಯೋಃ । ಅನಂತऽಶುಷ್ಮಾಃ । ವೃಷऽಖಾದಯಃ । ನರಃ ॥ ೧೦ ॥

॥ ಸಾಯಣಭಾಷ್ಯಂ ॥

ವಿಶ್ವವೇದಸಃ ಸರ್ವಜ್ಞಾ ರಯಿಭಿರ್ಧನೈಃ ಸಮೋಕಸಃ ಸಮಾನನಿವಾಸಾಃ ಸಮವೇತಾ ವಾ ಧನಾಧಿಪತಯ ಇತ್ಯರ್ಥಃ । ತವಿಷೀಭಿರ್ಬಲೈಃ ಸಂಮಿಶ್ಲಾಸಃ ಸಂಮಿಶ್ರಾಃ । ಸಂಯುಕ್ತಾ ಇತ್ಯರ್ಥಃ । ವಿರಪ್ಶಿನಃ । ಮಹನ್ನಾಮೈತತ್ । ಮಹಾಂತಃ । ಅಸ್ತಾರಃ ಶತ್ರೂಣಾಂ ನಿರಸಿತಾರಃ ಅನಂತಶುಷ್ಮಾ ಅನವಚ್ಛಿನ್ನಬಲಾಃ ವೃಷಖಾದಯಃ । ವೃಷೇಂದ್ರಃ ಖಾಧಿರಾಯುಧಸ್ಥಾನೀಯೋ ಯೇಷಾಂ ತೇ ತಥೋಕ್ತಾಃ । ಯದ್ವಾ । ವೃಷಾ ಸೋಮಃ ಖಾದಿಃ ಖಾದ್ಯಃ ಪೇಯೋ ಯೇಷಾಂ ತೇ । ನರೋ ನೇತಾರಃ । ಏವಂಭೂತಾ ಮರುತಃ । ಗಭಸ್ತಿರಿತಿ ಬಾಹುನಾಮ । ಗಭಸ್ತ್ಯೋರ್ಬಾಹ್ವೋರಿಷುಂ ದಧಿರೇ । ಶತ್ರೂಣಾಂ ನಿರಸನಾಯ ಧನುರ್ಬಾಣಾಧಿಕಮಾಯುಧಂ ಧಾರಯಂತಿ ॥ ಸಮೋಕಸಃ । ಉಚ ಸಮವಾಯೇ । ಅಸುನಿ ಬಹುಲವಚನಾತ್ಕುತ್ವಮಿತ್ಯೋಕ ಉಚಃ ಕೇ । ಪಾ. ೭-೩ ೬೪ । ಇತ್ಯತ್ರೋಕ್ತಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಸಂಮಿಶ್ಲಾಸಃ । ಕಪಿಲಕಾದಿತ್ವಾಲ್ಲತ್ವಂ । ವಿರಪ್ಶಿನಃ । ರಪ ಲಪ ವ್ಯಕ್ತಾಯಾಂ ವಾಚಿ । ವಿಪೂರ್ವಾದಸ್ಮಾದ್ಬಹುಲವಚನಾತ್ ಶಕ್ಪ್ರತ್ಯಯಃ । ವಿವಿಧಂ ಶಬ್ದಂ ರಪಂತೀತಿ ವಿರಪ್ಶಾಃ ಸ್ತೋತಾರಃ । ತ ಏಷಾಂ ಸಂತೀತಿ ವಿರಪ್ಶಿನಃ । ಯದ್ವಾ । ವಿವಿಧಂ ರಪಣಂ ವಿರಪ್ಶಂ । ತದೇಷಾಮಸ್ತೀತಿ । ಮರುತೋ ಹಿ ವಿವಿಧಂ ಶಬ್ದಂ ಕುರ್ವತೇ । ಇನಿಪ್ರತ್ಯಯಸ್ವರಃ । ಅಸ್ತಾರಃ । ತಾಚ್ಛೀಲಿಕಸ್ತೃನ್ । ಇಡಭಾವಶ್ಛಾಂದಸಃ । ನಿತ್ತ್ವಾದಾದ್ಯುದಾತ್ತತ್ವಂ । ಅನಂತಶುಷ್ಮಾಃ । ನಾಸ್ತ್ಯಂತೋಽಸ್ಯೇತ್ಯನಂತಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಅನಂತಃ ಶುಷ್ಮೋ ಬಲಂ ಯೇಷಾಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ವೃಷಖಾದಯಃ । ಖಾದೃ ಭಕ್ಷಣೇ ಔಣಾದಿಕ ಇನ್ಪ್ರತ್ಯಯಃ । ವೃಷಞ್ಛಬ್ದಃ ಕನಿನ್ಪ್ರತ್ಯಯಾಂತ ಆದ್ಯುದಾತ್ತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥ ೭ ॥

॥ ಪ್ರತಿಪದಾರ್ಥ ॥

**ವಿಶ್ವವೇದಸಃ**- ಸರ್ವಜ್ಞರಾದ । **ರಯಿಭಿಃ**—ಐಶ್ವರ್ಯದಿಂದ (ಐಶ್ವರ್ಯದೊಡನೆ) । **ಸಮೋಕಸಃ**—ಸಮಾನ ನಿವಾಸವುಳ್ಳ (ಐಶ್ವರ್ಯಯುಕ್ತರಾದ) । **ತವಿಷೀಭಿಃ**—ಬಲದಿಂದ । **ಸಂಮಿಶ್ಲಾಸಃ** -ಯುಕ್ತರಾದ । **ವಿರಪ್ಶಿನಃ**—ಮಾಹಾತ್ಮ್ಯರಾದ । **ಅಸ್ತಾರಃ**—ಶತ್ರುನಿರಾಸಕರಾದ । **ಅನಂತಶುಷ್ಮಾಃ**—ಅಪಾರವಾದ ಶಕ್ತಿಯುಳ್ಳ । **ವೃಷಖಾದಯಃ**—ಇಂದ್ರನೇ ಆಯುಧವಾಗಿ ಉಳ್ಳ ಅಥವಾ ಸೋಮರಸವೇ ಪಾನೀಯವಾಗಿ ಉಳ್ಳ । **ನರಃ**—ನೇತೃಗಳಾದ ಮರುದ್ದೇವತೆಗಳು । **ಗಭಸ್ತ್ಯೋಃ**—ಎರಡೂ ಬಾಹುಗಳಲ್ಲಿಯೂ । **ಇಷುಂ**—ಆಯುಧವನ್ನು । **ದಧಿರೇ** - ಧರಿಸಿದ್ದಾರೆ.

॥ ಭಾವಾರ್ಥ ॥

ಸರ್ವಜ್ಞರೂ, ಐಶ್ವರ್ಯವಂತರೂ, ಬಲಿಷ್ಠರೂ, ಮಹಾತ್ಮರೂ, ಅಪಾರವಾದ ದೇಹಶಕ್ತಿಯುಳ್ಳವರೂ, ಇಂದ್ರನನ್ನೇ ಆಯುಧಸ್ಥಾನದಲ್ಲಿ ಹೊಂದಿರುವವರೂ, ಸೋಮರಸವೇ ಪಾನೀಯವಾಗಿ ಉಳ್ಳವರೂ, ಒಳ್ಳೆಯ ನಾಯಕರೂ ಆದ ಮರುದ್ದೇವತೆಗಳು ಎರಡೂ ಬಾಹುಗಳಲ್ಲಿಯೂ ಶತ್ರುನಿರಸನಾರ್ಥವಾಗಿ ಆಯುಧಗಳನ್ನು ಧರಿಸಿದ್ದಾರೆ.

## English Translation

The Maruts, who are all-knowing, co-dwellers with wealth, combined with strength, loud-sounding, repellers of foes, of infinite prowess, whose weapon (of offence) is Indra, and who are leaders (of men), hold in their hands, the shaft.

॥ ವಿಶೇಷ ವಿಷಯಗಳು ॥

**ವಿರಪ್ಶಿನಃ—ಮಹನ್ನಾಮೈತತ್ । ಮಹಾಂತಃ । ವಿವಿಧಂ ಶಬ್ದಂ ರಪಂತೀತಿ ವಿರಪ್ಶಾಃ ಸ್ತೋತಾರಃ ತೇ ಏಷಾಂ ಸಂತೀತಿ ವಿರಪ್ಶಿನಃ । ಯದ್ವಾ ವಿವಿಧಂ ರಪಣಂ ವಿರಪ್ಶಮ್ ತದೇಷಾಮಸ್ತೀತಿ । ಮರುತೋಹಿ ವಿವಿಧಂ ಶಬ್ದಂ ಕುರ್ವತೇ ।** ವಿರಪ್ಶಿ ಶಬ್ದವು ಇಪ್ಪತ್ತೈದು ಮಹನ್ನಾಮಗಳ (ನಿ ೧೩-೩) ಮಧ್ಯದಲ್ಲಿ ಉಕ್ತವಾಗಿರುವುದು. ಪೂಜ್ಯರು, ದೊಡ್ಡವರು ಎಂದು ಅರ್ಥವು ಅನೇಕವಾದ ಶಬ್ದಗಳನ್ನು ಉಚ್ಚರಿಸುತ್ತಾ ಸ್ತೋತ್ರಮಾಡುವವರ ಸ್ತುತಿಗಳಿಗೆ ವಿಷಯರಾಗಿ ಇರುವವರು ಎಂದು ಅರ್ಥವು ಮರುದ್ದೇವತೆಗಳು ಉಂಟುಮಾಡುವ ಧ್ವನಿಯು ಬಹಳ ವಿಧವಾಗಿರುವುದು. ಆದ್ದರಿಂದ ಇವರಿಗೆ ಈ ಹೆಸರು ಬಂದಿರುವುದು ಎಂದು ಮತ್ತೊಂದು ವಿಧವಾದ ಅರ್ಥವು

**ಅನಂತಶುಷ್ಮಾಃ—ಅನವಚ್ಛಿನ್ನಬಲಾಃ । ನಾಸ್ತಿ ಅಂತೋ ಅಸ್ಯೇತಿ ಅನಂತಃ ಶುಷ್ಮಃ ಬಲಂ ಯೇಷಾಂ ।** ಓಜಃ, ಪಾಜಃ, ವಾಜಃ ಎಂಬ ಇಪ್ಪತ್ತೆಂಟು ಬಲನಾಮಗಳ (ನಿ ೩-೯) ಮಧ್ಯದಲ್ಲಿ ಶುಷ್ಮಶಬ್ದವು ಪಠಿತವಾಗಿರುವುದು. ಅಳತೆ ಮಾಡಿ ಅಥವಾ ಊಹೆ ಮಾಡಿ ಹೇಳಲು ಸಾಧ್ಯವಿಲ್ಲದಿರುವ ಬಲವುಳ್ಳವರು ಎಂದು ಮರುದ್ದೇವತೆಗಳಿಗೆ ಇದು ವಿಶೇಷಣವಾಗಿರುವುದು

**ವೃಷಖಾದಯಃ—ವೃಷಾ ಇಂದ್ರಃ ಖಾದಿಃ ಆಯುಧಸ್ಥಾನೀಯೋ ಯೇಷಾಂ ತೇ । ಯದ್ವಾ ವೃಷಾ ಸೋಮಃ ಖಾದಿಃ ಖಾದ್ಯಃ ಪೇಯೋ ಯೇಷಾಂ ತೇ ।** ವೃಷ ಶಬ್ದವು ಇಂದ್ರನು ಮತ್ತು ಸೋಮಲತೆಯು ಎಂದು ಎರಡು ವಿಧವಾದ ಅರ್ಥಗಳುಳ್ಳದ್ದಾಗಿರುವುದು ಶತ್ರುಗಳನ್ನು ನಿಗ್ರಹಮಾಡುವುದಕ್ಕಾಗಿ ಆಯುಧಗಳನ್ನು ಧರಿಸಿರುವ ಹಾಗೆ ಈ ಮರುದ್ದೇವತೆಗಳು ಇಂದ್ರನನ್ನು ತಮ್ಮ ಪ್ರಾಮುಖ್ಯದಲ್ಲಿ ಇರಿಸಿಕೊಂಡಿರುವರು ಅಥವಾ ಸೋಮರಸವನ್ನು ಪಾನಮಾಡುವರು ಎಂದೂ ಅರ್ಥವು.

ಸ್ಕಂದಸ್ವಾಮಿಗಳು--ವೃಷಖಾದಯಃ ವರ್ಷಿತುರ್ಮೇಘಸ್ಯ ಖಾದಿತಾರಃ । ಅಥವಾ ಖಾದಿಶಬ್ದ ಇಹ ಕವಚವಚನಃ ಕಟ್ಟಿರಿಕಾ ಕಾರಾಯುಧವಿಶೇಷವಾಚಿನೋ ವಾ । ಅಂಸೇಷು ರಿಷ್ಟಯೋ ಪತ್ಸು ಖಾದಯ

(ಋ ಸಂ. ೫-೫೪-೧೧) ತ್ವೇಷಂ ಗಣಂ ತವಸಂ ಖಾದಿಹಸ್ತಂ (ಋ ಸಂ ೫-೫೮-೨) ಇತ್ಯಾದಿಷು ದರ್ಶನಾತ್ । ಮರುದ್ದೇವತೆಗಳು ವೃಷ್ಟಿಯ ಉದಕವನ್ನು ಸುರಿಸುವ ಮೇಘವನ್ನು ನಾಶಪಡಿಸುವವರು ಎಂದು ಅರ್ಥವನ್ನು ಹೇಳುವರು. ಮತ್ತು ಅಂಸೇಷು—ಹೆಗಲುಗಳಲ್ಲಿ, ಋಷ್ಟಯಃ—ಆಯುಧಗಳು, ಪತ್ಸು-ಪಾದಗಳಲ್ಲಿ, ಖಾದಯಃ—ಆವರಣಗಳು, ಎಂದು ಅರ್ಥವುಳ್ಳ ಶ್ರುತಿವಾಕ್ಯವನ್ನು ಉದಾಹರಿಸಿ ಖಾದಿಶಬ್ದವು ಕವಚವೆಂಬ ಅರ್ಥವನ್ನು ಹೇಳುವುದು ಎಂದು ಅರ್ಥಮಾಡಿರುವರು ಮತ್ತು ಒಂದು ವಿಧವಾದ ಆಯುಧವಿಶೇಷವಾಚಕವು ಎಂದು ಹೇಳಿರುವರು

**ಗಭಸ್ತ್ಯೋಃ-- ಗಭಸ್ತಿರಿತಿ ಬಾಹುನಾಮ.** ಗಭಸ್ತಿ ಎಂದರೆ ಬಾಹುಗಳು, ತೋಳುಗಳೆಂದರ್ಥವು ಗಭಸ್ತೀ ಶಬ್ದವು ಆಯತೀ. ಚ್ಯವಾನಾ ಮೊದಲಾದ ಹನ್ನೆರಡು (ನಿ ೨-೮) ಬಾಹುನಾಮಗಳ ಮಧ್ಯದಲ್ಲಿ ಪಠಿತವಾಗಿರುವುದು ಸ್ಕಂದಸ್ವಾಮಿಗಳು **ಗಭಸ್ತ್ಯೋಃ--ಬಾಹುನಾಮ್ನೈತತ್ ತತ್ಸಂಬಂಧಾತ್ತ್ವಿಹ ಹಸ್ತಯೋಃ ಪ್ರಯುಕ್ತಂ । ಆತ್ಮೀಯಯೋಃ ಹಸ್ತಯೋಃ ಇಷುಂ ದಧಿರೇ ಧಾರಯಂತಿ** । ಗಭಸ್ತಿ ಶಬ್ದವು ಬಾಹು ಎಂಬ ಅರ್ಥವನ್ನು ಬೋಧಿಸುವುದು ಬಾಹು ಸಂಬಂಧದಿಂದ ಇಲ್ಲಿ ಹಸ್ತವು ಎಂದು ಅರ್ಥವನ್ನು ಹೇಳಬೇಕು ಇದರಿಂದ ಮರುದ್ದೇವತೆಗಳು ತಮ್ಮ ಹಸ್ತಗಳಲ್ಲಿ ಧನಸ್ಸು ಬಾಣ ಮೊದಲಾದ ಆಯುಧಗಳನ್ನು ಧರಿಸಿರುವರು ಎಂದು ಅರ್ಥವನ್ನು ಹೇಳಿರುವರು

**ನರಃ—ನೇತಾರಃ** ಯಜಮಾನರನ್ನು ಮುಂದುವರಿಯುವಂತೆ ಮಾಡುವರು ಮರುದ್ದೇವತೆಗಳು ಸ್ಕಂದಸ್ವಾಮಿಗಳು **ನರಃ ಮನುಷ್ಯಾಕಾರಾಃ** ಮನುಷ್ಯರಂತೆ ಆಕಾರವನ್ನು ಹೊಂದಿರುವವರು ಎಂದು ಅರ್ಥಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಸಮೋಕಸಃ—**ಉಚ ಸಮವಾಯೇ ಧಾತು ಸರ್ವಧಾತುನಿಬಂಧನವಾದ ಅಸುನ್ ಪ್ರತ್ಯಯ. ಉಣಾದಿಯಲ್ಲಿ ಬಹುಲವಚನವಿರುವುದರಿಂದ ಅಸುನ್ ಪರದಲ್ಲಿರುವಾಗ ಧಾತುವಿನ ಚಕಾರಕ್ಕೆ ಕುತ್ವ. ಇದು **ಓಕ ಉಚಃ ಕೇ** (ಕಾ ೭-೩-೬೪) ಎಂಬಲ್ಲಿ ವಿವರಿಸಲ್ಪಟ್ಟಿದೆ ಸಮಾನಂ ಓಕಃ ಯೇಷಾಂ ತೇ ಸಮೋಕಸಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಸಂಮಿಶ್ಲಾಸಃ**—ಸಂಮಿಶ್ರಾಸಃ ಎಂದಿರುವಾಗ ಇದು ಕಪಿಲಕಾದಿಯಲ್ಲಿ ಸೇರಿರುವುದರಿಂದ ವಿಕಲ್ಪವಾಗಿ ಲತ್ವ ಬರುತ್ತದೆ ಮಿಶ್ರ ಸಂಪರ್ಕೇ ಧಾತು. ಹಿಂದಿನಂತೆ ಬಹುವ್ರೀಹಿಯಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವಿರಪ್ಶಿನಃ**—ರಪ ಲಪ ವ್ಯಕ್ತಾಯಾಂ ವಾಚಿ ಧಾತು. ವಿಪೂರ್ವವಾಗಿರುವಾಗ ಇದಕ್ಕೆ ಉಣಾದಿಯ ಬಹುಲವಚನದಿಂದ ಶಕ್ ಪ್ರತ್ಯಯ ವಿವಿಧಂ ಶಬ್ದಂ ರಪಂತೀತಿ ವಿರಪ್ಶಾಃ ಸ್ತೋತಾರಃ ವಿರಪ್ಶಾಃ ಏಷಾಂ ಸಂತಿ ಇತಿ ವಿರಪ್ಶಿನಃ ಮತ್ವರ್ಥದಲ್ಲಿ **ಅತ ಇನಿಠನೌ** ಎಂಬುದರಿಂದ ಇನಿ ಪ್ರತ್ಯಯ. ವಿರಪ್ಶಿನ್ ಶಬ್ದವಾಗುತ್ತದೆ ಬಹುವಚನಾಂತರೂಪ ಪ್ರತ್ಯಯ ಸ್ವರದಿಂದ ಇಕಾರವು ಉದಾತ್ತವಾಗುತ್ತದೆ ಅಥವಾ ವಿವಿಧಂ ರಪಣಂ ವಿರಪ್ಶಮ್ ತತ್ ಏಷಾಮಸ್ತೀತಿ ವಿರಪ್ಶಿನಃ ಮರುತೋ ಹಿ ವಿವಿಧಂ ಶಬ್ದಂ ಕುರ್ವತೇ (ಹಿಂದಿನ ರೀತಿಯಲ್ಲಿ ನಾನಾಶಬ್ದ ಮಾಡುವ, ಸ್ತುತಿಮಾಡುವವರಿಂದ ಕೂಡಿದುದು ಎಂದೂ, ಎರಡನೇ ರೀತಿಯಲ್ಲಿ ನಾನಾ ಶಬ್ದಮಾಡತಕ್ಕದ್ದು ಎಂದೂ, ಅರ್ಥವಾಗುತ್ತದೆ.)

**ಅಸ್ತಾರಃ**—ಅಸು ಕ್ಷೇಪಣೇ ಧಾತು. ತಚ್ಛೀಲಾರ್ಥದಲ್ಲಿ ತೃನ್ ಪ್ರತ್ಯಯ ಛಾಂದಸವಾಗಿ ಇಡಾಗಮ ಬರುವುದಿಲ್ಲ. ಅಸ್ತೃ ಶಬ್ದವಾಗುತ್ತದೆ. ಜಸಿನಲ್ಲಿ **ಋತೋ ಙಿ ಸರ್ವನಾಮಸ್ಥಾನಯೋಃ** (ಪಾ. ಸೂ ೭-೩-೧೧೦) ಎಂಬುದರಿಂದ ಋದಂತಾಂಗಕ್ಕೆ ಗುಣ. **ಅಪ್‌ತೃನ್‌ತೃಚ್**--ಸೂತ್ರದಿಂದ ಉಪಧಾದೀರ್ಘ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ. ಅಸ್ತಾರಃ ಎಂದು ರೂಪವಾಗುತ್ತದೆ. ತೃನ್ ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ.

**ಅನಂತಶುಷ್ಮಾಃ**—ನಾಸ್ತಿ ಅಂತೋಽಸ್ಯ ಇತಿ ಅನಂತಃ **ನಞ್‌ಸುಭ್ಯಾಂ** (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ. ಅನಂತಃ ಶುಷ್ಮೋ ಬಲಂ ಯೇಷಾಂ ತೇ ಅನಂತಶುಷ್ಮಾಃ ಬಹುವ್ರೀಹಿ ಸಮಾಸವಾದಾಗ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ವೃಷಖಾದಯಃ**—ಖಾದೃ ಭಕ್ಷಣೇ ಧಾತು. **ಸರ್ವಧಾತುಭ್ಯ ಇನ್** (ಉ. ಸೂ. ೪-೧೧೮) ಎಂಬುದರಿಂದ ಇನ್ ಪ್ರತ್ಯಯ ಖಾದಿ ಎಂದು ರೂಪವಾಗುತ್ತದೆ. ವೃಷನ್ ಶಬ್ದವು ಕನಿನ್ ಪ್ರತ್ಯಯಾಂತವಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತವಾಗುತ್ತದೆ ವೃಷಾ ಖಾದಿಃ ಯೇಷಾಂ ತೇ ವೃಷಖಾದಯಃ ಹಿಂದಿನಂತೆಯೇ ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ. ವೃಷಖಾದಿ+ಜಸ್ ಎಂದಿರುವಾಗ **ಜಸಿಚ** ಎಂಬುದರಿಂದ ಇಗಂತಾಂಗಕ್ಕೆ ಗುಣ ಅಯಾದೇಶ ವೃಷಖಾದಯಃ ಎಂದು ರೂಪವಾಗುತ್ತದೆ ॥ ೧೦ ॥



॥ ಸಂಹಿತಾಪಾಠಃ ॥

ಹಿರಣ್ಯಯೇಭಿಃ ಪವಿಭಿಃ ಪಯೋವೃಧ ಉಜ್ಜಿಘ್ನಂತ ಆಪಥ್ಯೋ<br>
ಽನ ಪರ್ವತಾನ್ ।<br>
ಮಖಾ ಅಯಾಸಃ ಸ್ವಸೃತೋ ಧ್ರುವಚ್ಯುತೋ ದುಧ್ರಕೃತೋ<br>
ಮರುತೋ ಭ್ರಾಜದೃಷ್ಟಯಃ ॥ ೧೧ ॥

। ಪದಪಾಠಃ ।

ಹಿರಣ್ಯಯೇಭಿಃ । ಪವಿಽಭಿಃ । ಪಯಃಽವೃಧಃ । ಉತ್ । ಜಿಘ್ನಂತೇ । ಆಽ-
ಪಥ್ಯಃ । ನ । ಪರ್ವತಾನ್ ।

ಮಖಾಃ । ಅಯಾಸಃ । ಸ್ವಽಸೃತಃ ಧ್ರುವಽಚ್ಯುತಃ । ದುಧ್ರಽಕೃತಃ । ಮರುತಃ ।
ಭ್ರಾಜತ್ಽಋಷ್ಟಯಃ ॥ ೧೧ ॥

। ಸಾಯಣಭಾಷ್ಯಂ ।

ಮರುತೋ ಹಿರಣ್ಯಯೇಭಿಃ ಸುವರ್ಣಮಯೈಃ । ಯದ್ವಾ । ಹಿತರಮಣೀಯೈಃ ಪವಿಭಿಃ ರಥಾನಾಂ ಚಕ್ರೈಃ ಪರ್ವತಾನ್ಪರ್ವವತೋ ಮೇಘಾನ್ ಯದ್ವಾ ಶಿಲೋಚ್ಚಯಾನುಜ್ಜಿಘ್ನಂತೇ । ಊರ್ಧ್ವಂ ಗಮಯಂತಿ । ಸ್ಥಾನಾತ್ಪ್ರಚ್ಯಾವಯಂತೀತ್ಯರ್ಥಃ । ತತ್ರ ದೃಷ್ಟಾಂತಃ । ಪಥ್ಯೋ ನ । ಯಥಾ ಪಥಿ ಗಚ್ಛನ್ರಥೋ ಮಾರ್ಗ ಆಸ್ಥಿತಂ ತೃಣವೃಕ್ಷಾದಿಕಂ ಚೂರ್ಣೀಕೃತ್ಯೋರ್ಧ್ವಂ ನಯತಿ ಗಮಯತಿ । ಯದ್ವಾ । ಯಥಾ ಸಂಯುಕ್ತಾ ಗಜಾ ಮಾರ್ಗಸ್ಥಿತಂ ವೃಕ್ಷಾದಿಕಂ ಭಗ್ನಂ ಕುರ್ವಂತಿ । ಕೀದೃಶಾ ಮರುತಃ । ಪಯೋವೃಧಃ ಪಯಸೋ ವೃಷ್ಟ್ಯುದಕಸ್ಯ ವರ್ಧಯಿತಾರಃ । ಯದ್ವಾ । ಪೃಶ್ನೇಃ ಪಯಸಾ ವರ್ಧಮಾನಾಃ । ಪೃಶ್ನ್ಯೈ ವೈ ಪಯಸೋ ಮರುತೋ ಜಾತಾಃ । ತೈ. ಸಂ ೨-೨-೧೧-೪ । ಇತಿ ಶ್ರೂಯತೇ । ಮಖಾಃ । ಮಖ ಇತಿ ಯಜ್ಞನಾಮ । ತದ್ವಂತಃ । ಅಯಾಸೋ ದೇವಯಜನದೇಶಂ ಪ್ರತಿ ಗಂತಾರಃ ಸ್ವಸೃತಃ ಶತ್ರೂನ್ಪ್ರತಿ ಸ್ವಯಮೇವ ಸರಂತೋ ಗಚ್ಛಂತಃ ಧ್ರುವಚ್ಯುತೋ ಧ್ರುವಾಣಾಂ ನಿಶ್ಚಲಾನಾಂ ಪರ್ವತಾದೀನಾಮಪಿ ಚ್ಯಾವಯಿತಾರಃ ದುಧ್ರಕೃತೋ ದುಧ್ರಂ ದುಷ್ಟಾನಾಂ ಧಾರಯಿತಾರಮಾತ್ಮಾನಂ ಕುರ್ವಾಣಾಃ । ಯದ್ವಾ । ದುರ್ಧರಮನ್ಯೈರ್ಧರ್ತುಮಶಕ್ಯಮಾತ್ಮಾನಂ ಕುರ್ವಾಣಾಃ । ಭ್ರಾಜದೃಷ್ಟಯಃ । ದೀಪ್ಯಮಾನಾಯುಧಾಃ ॥ ಉಜ್ಜಿಘ್ನಂತೇ । ಹಂತೇರ್ವ್ಯತ್ಯಯೇನಾತ್ಮನೇಪದಂ । ಬಹುಲಂ ಛಂದಸೀತಿ ಶಪಃ ಶ್ಲುಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಗಮಹನೇತ್ಯಾದಿನೋಪಧಾಲೋಪಃ । ಹೋ ಹಂತೇರಿತಿ ಘುತ್ವಂ । ವ್ಯತ್ಯಯೇನಾಂತಾದೇಶಃ । ಪಥ್ಯಃ । ಪಥಿ ಭವಃ । ಭವೇ ಛಂದಸೀತಿ ಯತ್ । ನಸ್ತದ್ಧಿತೇ । ಪಾ. ೬-೪ ೧೪೪ । ಇತಿ ಟಿಲೋಪಃ । ವ್ಯತ್ಯಯೇನಾಂತಸ್ವರಿತತ್ವಂ । ಯದ್ವಾ । ಛಂದಸೀವನಿಪಾವಿತಿ ಮತ್ವರ್ಥೀಯ ಈಕಾರಃ । ಉದಾತ್ತಸ್ವರಿತಯೋರ್ಯಣ ಇತಿ ವಿಭಕ್ತೇಃ ಸ್ವರಿತತ್ವಂ । ಅಯಾಸಃ । ಅಯ ಪಯ ಗತೌ । ಅಯಂತ ಇತ್ಯಯಾಃ । ಪಚಾದ್ಯಚ್ । ಆಜ್ಜಸೇರಸುಕ್ । ದುಧ್ರಕೃತಃ । ಅತ್ರ ದುಃಶಬ್ದೇನ ದುಷ್ಟಾ ಲಕ್ಷ್ಯಂತೇ । ಧೃಞ್ ಧಾರಣೇ । ದುಷ್ಟಾನ್ ಧಾರಯತೀತಿ ದುಧ್ರಃ । ಮೂಲವಿಭುಜಾದಿತ್ವಾತ್ । ಪಾ. ೩-೨-೫-೨ । ಕಪ್ರತ್ಯಯಃ । ಯದ್ವಾ । ಈಷದ್ದುಃಸುಷ್ವಿತಿ

ದುಃಶಬ್ದ ಉಪಪದೇ ಕರ್ಮಣಿ ಖಲ್ । ಗುಣಾಭಾವಶ್ಛಾಂದಸಃ । ತಂ ಕುರ್ವಂತೀತಿ ದುಧ್ರಕೃತಃ ಕ್ವಿಪ್ಚೇತಿ ಕ್ವಿಪ್ । ರೇಫಲೋಪಶ್ಛಾಂದಸಃ ॥

॥ ಪ್ರತಿಪದಾರ್ಥ ॥

**ಪಯೋವೃಧಃ** ವೃಷ್ಟ್ಯುದಕವನ್ನು ಅಭಿವೃದ್ಧಿಪಡಿಸುವ ಆಕಾಶದ ಉದಕದಿಂದ ಅಭಿವೃದ್ಧಿಹೊಂದಿದ । **ಮಖಾಃ**--ಯಜ್ಞಗಳುಳ್ಳ, । **ಅಯಾಸಃ**---(ದೇವತೆಗಳನ್ನುದ್ದೇಶಿಸಿ ಯಜ್ಞಮಾಡುವ ಪ್ರದೇಶಕ್ಕೆ ತಾವೇ) ಹೋಗುವ । **ಸ್ವಸೃತಃ**—(ಶತ್ರುಗಳನ್ನೆದುರಿಸಿ) ತಾವೇ ಹೋಗುವ । **ಧ್ರುವಚ್ಯುತಃ**—ಅಚಲವಾದ ಪರ್ವತಗಳನ್ನೂ ಕೂಡ ಬೀಳಿಸುವ । **ದುಧ್ರಕೃತಃ** - (ತಮ್ಮನ್ನು ಇತರರಿಂದ) ಧರಿಸಲಸಾಧ್ಯರನ್ನಾಗಿ ಮಾಡುವ **ಭ್ರಾಜದೃಷ್ಟಯಃ**--- ದೀಪ್ಯಮಾನವಾದ ಆಯುಧಗಳುಳ್ಳ । **ಮರುತಃ** — ಮರುದ್ದೇವತೆಗಳು । **ಹಿರಣ್ಯಯೇಭಿಃ**- ಸುವರ್ಣಮಯುವಾದ, (ಹಿತವಾದ ಮತ್ತು ರಮಣೀಯುವಾದ) । **ಪವಿಭಿಃ—**ರಥಚಕ್ರಗಳಿಂದ । **ಪರ್ವತಾನ್** ಮೇಘಗಳನ್ನೂ (ಶಿಲಾಸಮೂಹಗಳನ್ನೂ) । **ಆ ರಥ್ಯಃ ನ**— (ರಥವು) ಮಾರ್ಗದಲ್ಲಿರುವ (ತೃಣವೃಕ್ಷಾದಿಗಳನ್ನೂ) ಹೇಗೋ ಹಾಗೆ । **ಉಜ್ಜಿಘ್ನಂತೇ**— ಮೇಲಕ್ಕೆ ಹೊರಡಿಸುತ್ತಾರೆ

॥ ಭಾವಾರ್ಥ ॥

ವೃಷ್ಟ್ಯುದಕವನ್ನು ಅಭಿವೃದ್ಧಿಪಡಿಸುವವರೂ, ಯಾಗಾದಿ ಕರ್ಮವುಳ್ಳವರೂ, ಯಾಗ ಸ್ಥಳಕ್ಕೇ ತಾವೇ ಹೋಗತಕ್ಕವರೂ, ಶತ್ರುಗಳನ್ನು ತಾವೇ ಎದುರಿಸುವವರೂ, ಅಚಲವಾದ ಪರ್ವತಗಳನ್ನೂ ಕೂಡ ಬೀಳಿಸಬಲ್ಲವರೂ, ಇತರರಿಂದ ತಡೆಯಲಸಾಧ್ಯರೂ, ಪ್ರಕಾಶಮಾನವಾದ ಆಯುಧಗಳುಳ್ಳವರೂ, ಆದ ಮರುದ್ದೇವತೆಗಳು, ತಮ್ಮ ಸುವರ್ಣಮಯುವಾದ ಚಕ್ರಯುಕ್ತವಾದ ರಥದಲ್ಲಿ ಕುಳಿತು, ರಥವು ಗಮನವೇಗದಲ್ಲಿ ದಾರಿಯಲ್ಲಿರುವ ತೃಣಶಿಲಾದಿಗಳನ್ನು ಮೇಲಕ್ಕೆ ಹಾರಿಸುವಂತೆ, ಮೇಘಗಳನ್ನು ಚದರಿಸುತ್ತಾರೆ

## English Translation.

Augmenters of rain, they drive with golden wheels the clouds asunder, as elephants (in a herd break down the trees in their way) they are honoured with sacrifices, visitants of the hall of offering, spontaneous assailers of (their foes) subverters of what are stable, immovable themselves, and wearers of shining weapons

॥ ವಿಶೇಷ ವಿಷಯಗಳು ॥

**ಹಿರಣ್ಯಯೇಭಿಃ --ಸುವರ್ಣಮಯೈಃ, ಯದ್ವಾ ಹಿತರಮಣೀಯೈಃ** ಸುವರ್ಣಮಯುವಾದ, ಅಥವಾ ಸುಖಕರವಾಗಿಯೂ ಮನೋಹರವಾಗಿಯೂ ಇರುವ ರಥದ ಚಕ್ರಗಳಿಂದ.

**ಅಪಥ್ಯಃ ನ - ಯಥಾ ಪಥಿ ಗಚ್ಛನ್ ರಥೋ ಮಾರ್ಗೇ ಅಸ್ಥಿತಂ ತೃಣವೃಕ್ಷಾದಿಕಂ ಚೂರ್ಣೀಕೃತ್ಯೋರ್ಧ್ವಂ ನಯತಿ ಯದ್ವಾ ಯಥಾ ಸಂಯುಕ್ತಾ ಗಜಾ ಮಾರ್ಗಸ್ಥಿತಂ ವೃಕ್ಷಾದಿಕಂ ಭಗ್ನಂ ಕುರ್ವನ್ತಿ ತಥಾ ಪರ್ವತಾನ್ ಉಜ್ಜಿಘ್ನಂತೇ।** ದಾರಿಕಾರನು ಆಚರಿಸುವ ಹಾಗೆ ಎಂದು ಅರ್ಥವು। ದಾರಿಯಲ್ಲಿ ಹೋಗುತ್ತಿರುವ ರಥವು ದಾರಿಯಲ್ಲಿ ಅಡ್ಡಲಾಗಿರುವ ಮರವೇ ಮೊದಲಾದವುಗಳನ್ನು ಮುರಿದು ತುಂಡು ತುಂಡು ಮಾಡಿ ಎಸೆಯುವಂತೆಯೂ, ಹಿಂಡು ಹಿಂಡಾಗಿರುವ ಆನೆಗಳು ದಾರಿಯಲ್ಲಿ ಇರುವ ಮರವೇ ಮೊದಲಾದವುಗಳನ್ನು ಮುರಿಯುವಂತೆಯೂ ಮರುದ್ದೇವತೆಗಳು ಮೇಘಗಳನ್ನೂ ಬೆಟ್ಟಗಳನ್ನೂ ಕಿತ್ತು ಮೇಲಕ್ಕೆ ಎಸೆಯುವರು

**ಪಯೋವೃಧಃ -ಪಯಸೋ ವೃಷ್ಟ್ಯುದಕಸ್ಯ ವರ್ಧಯಿತಾರಃ ಯದ್ವಾ ಪೃಶ್ನೇಃಪಯಸಾ ವರ್ಧಮಾನಾಃ।** ಮಳೆಯ ನೀರನ್ನು ಹೆಚ್ಚು ಮಾಡುವವರು ಅಥವಾ ಪೃಶ್ನಿಯ ಹಾಲಿನಿಂದ ವೃದ್ಧಿಯನ್ನು ಹೊಂದಿ ಇರುವವರು ಮರುದ್ದೇವತೆಗಳು **ಪೃಶ್ನಿಯೈ ವೈ ಪಯಸೋ ಮರುತೋ ಜಾತಾಃ** ಎಂಬ ತೈತ್ತಿರೀಯ (ಸಂ ೨-೨-೧೧ ४) ಎಂಬ ವಾಕ್ಯದಿಂದ ಈ ಪೃಶ್ನಿಯ ಹಾಲಿನಿಂದ ಮರುದ್ದೇವತೆಗಳು ವೃದ್ಧಿಯನ್ನು ಹೊಂದಿದರೆಂಬ ವಿಷಯವು ಸ್ಪಷ್ಟವಾಗುತ್ತದೆ

**ಮಖಾಃ- ಮಖ ಇತಿ ಯಜ್ಞನಾಮ ತದ್ವಂತಃ** ಮಖ ಎಂಬ ಶಬ್ದವು ಯಜ್ಞವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು ಯಜ್ಞಗಳನ್ನು ಆಚರಿಸುವವರು ಮರುದ್ದೇವತೆಗಳೆಂದು ಅಭಿಪ್ರಾಯವು ಯಾಸ್ಕರು ಮಖಶಬ್ದವನ್ನು ಯಜ್ಞಃ, ವೇನಃ (ನಿ ೩-೧೯) ಎಂಬ ಹದಿನೈದು ಯಜ್ಞನಾಮಗಳ ಮಧ್ಯದಲ್ಲಿ ಪಾಠಮಾಡಿರುವರು

**ಧ್ರುವಚ್ಯುತಃ—ಧ್ರುವಾಣಾಂ ನಿಶ್ಚಲಾನಾಂ ಪರ್ವತಾದೀನಾಮಪಿ ಚ್ಯಾವಯಿತಾರಃ।** ಸ್ಥಿರವಾಗಿ ಚಲಿಸದೆ ಇರುವ ಪರ್ವತವೇ ಮೊದಲಾದವುಗಳನ್ನೂ ಅವುಗಳ ನಿಯತವಾದ ಪ್ರದೇಶದಿಂದ ಕದಲಿಸುವವರು

**ದುಧ್ರಕೃತಃ— ಅತ್ರ ದುಃಶಬ್ದೇನ ದುಷ್ಟಾಃ ಲಕ್ಷ್ಯಂತೇ। ದುಷ್ಟಾನ್ ಧಾರಯತೀತಿ ದುಧ್ರಃ ದುಷ್ಟಾನಾಂ ಧಾರಯಿತಾರಮಾತ್ಮಾನಂ ಕುರ್ವಾಣಾಃ। ಯದ್ವಾ ದುರ್ಧರಮನ್ಯೈರ್ಧರ್ತುಮಶಕ್ಯಮಾತ್ಮಾನಂ ಕುರ್ವಾಣಾಃ।** ದುಃ ಎಂಬ ಶಬ್ದದಿಂದ ದುಷ್ಟರು ಎಂಬ ಅರ್ಥವನ್ನು ಹೇಳಬೇಕು. ದುಷ್ಟರನ್ನು ಹತ್ತೋಟಿಯಲ್ಲಿ ಇರಿಸಿರುವವನು ದುಧ್ರನೆನಿಸಿರುವನು ದುಷ್ಟರನ್ನು ತಮ್ಮ ಸಾಮರ್ಥ್ಯದಿಂದ ಅಧೀನದಲ್ಲಿ ಇರುವ ಹಾಗೆ ಮಾಡಿರುವರು ಈ ಮರುದ್ದೇವತೆಗಳು ಅಥವಾ ಈ ಮರುದ್ದೇವತೆಗಳು ಇತರರಿಂದ ಅಧೀನದಲ್ಲಿ ಇರುವಂತೆ ಮಾಡಲಶಕ್ಯರು ಎಂದು ಅರ್ಥವು

ಸ್ಯಂದಸ್ವಾಮಿಗಳು-- **ಹಿರಣ್ಯಯೇಭಿಃ ಪವಿಭಿಃ ಪಯೋವೃಧಃ** ಸುವರ್ಣಮಯವಾದ ರಥದ ಚಕ್ರಧಾರೆಗಳಿಂದ ವೃಷ್ಟ್ಯುದಕ ಧಾರೆಗಳನ್ನು ಅಭಿವೃದ್ಧಿ ಮಾಡುವರು. **ಆಪಥ್ಯೋ ನ**—ಆಪಥಯೋ ನಿಷಥಯೋ ಅಸ್ತಸ್ಪೃಧಾ ಅನುಪಥಾಃ (ಋ. ವೇ ೫-೫೨-೧೦) ಇತಿ ಪ್ರಯೋಗದರ್ಶನಾತ್ ಆಪಥಯಃ ಮರುತಃ ಉಚ್ಯಂತೇ। ತೇಷಾಂ ಸ್ವಭೂತಾ ಆಪಥ್ಯಃ। ಅಥವಾ ಅವಿದ್ಯಮಾನಃ ನಿಯತಃ ಪಂಥಾಃ ಯಸ್ಮಿನ್ ತತ್ ಅಂತರಿಕ್ಷಂ। ತತ್ರ ಭವಾಃ ಆಪಥ್ಯಃ। ಆಪಥಯ ಶಬ್ದವು ಉಕ್ತವಾಗಿರುವ ಪ್ರಯೋಗದಿಂದ ಮರುದ್ದೇವತೆಗಳನ್ನು ಬೋಧಿಸುವುದು ಈ ಮರುದ್ದೇವತೆಗಳು ಅಪಥಯಃ ನಿಯತವಾದ ಮಾರ್ಗವನ್ನು ಹೊಂದಿರುವವರಲ್ಲವು ನಿಷಥಯಃ ಬಹಳ

ಮಾರ್ಗಗಳಲ್ಲಿ ಸಂಚರಿಸುತ್ತಿರುವವರು ಅನ್ತಸ್ಪಥಾಃ—ಒಳದಾರಿ ಎಂದರೆ ಸಣ್ಣ ಸಣ್ಣ ದಾರಿಯಲ್ಲಿಯೂ ಸಂಚರಿಸುವವರು. ಮತ್ತು ಅನುಪಥಾಃ ಒಂದು ಮಾರ್ಗವನ್ನು ಅನುಸರಿಸಿರುವ ಇನ್ನೊಂದು ದಾರಿಯಲ್ಲಿಯೂ ಸಂಚರಿಸುವವರು ಆದ್ದರಿಂದ ಇವರನ್ನು ಆಪಥಯಃ ಎಂಬ ಶಬ್ದದಿಂದ ಕರೆಯುವರು ಇವರ ಸಮೂಹವು ಅಪಥ್ಯವೆನಿಸಿರುವುದು. ಅಥವಾ ನಿಯತವಾದ ಮಾರ್ಗವು ಇಲ್ಲದೆ ಸರ್ವತಃ ಸಂಚರಿಸುವುದಕ್ಕೆ ಅನುಕೂಲವಾಗಿರುವುದು ಅಂತರಿಕ್ಷವು ಈ ಅಂತರಿಕ್ಷದಲ್ಲಿ ಉತ್ಪನ್ನರಾಗುವರು, ಪ್ರಕಟವಾಗಿ ತೋರುವರು. ಮರುದ್ದೇವತೆಗಳು ಆಪಥ್ಯರೆನಿಸುವರು ಎಂದು ಅರ್ಥವನ್ನು ವಿವರಿಸಿರುವರು. ಮತ್ತು ಪರ್ವತಾನ್ ಉಜ್ಜಿಘ್ನಂತಃ ಪರ್ವತಾನ್ ಮೇಘನಾಮ್ನೈತತ್ ಮೇಘಾನಾಮುಪರಿ ಚಂಕ್ರಮ್ಯಮಾಣಾಃ ರಥಚಕ್ರಧಾರಾಭಿಃ ಮೇಘಾನ್ ಭಿಂದಂತಿ। ಶ್ಯಾವಾಶ್ವೋಽಪಿ ವಕ್ಷ್ಯತಿ ಉತಪವ್ಯಾ ರಥಾನಾಮದ್ರಿಂ ಭಿಂದಂತ್ಯೋಜಸಾ (ಋ ವೇ ೫-೫೨-೯) ಇತಿ ಪರ್ವತಾನ್ ಎಂಬುವುದು ಮೇಘನಾಮವಾಗಿರುವುದು ಮರುದ್ದೇವತೆಗಳು ಮೇಘಗಳ ಮೇಲುಗಡೆಯಲ್ಲಿ ಸಂಚರಿಸುತ್ತಾ ತಮ್ಮ ರಥದ ಚಕ್ರಧಾರೆಗಳಿಂದ ಮೇಘಗಳನ್ನು ಭೇದಿಸುವರು ಋಗ್ವೇದಗತವಾದ ಮಂತ್ರದಿಂದ ಶ್ಯಾವಾಶ್ವನೆಂಬ ಋಷಿಯೂ ಕೂಡ ಇದೇ ಅಭಿಪ್ರಾಯವನ್ನು ವ್ಯಕ್ತಗೊಳಿಸಿರುವನು. ಈ ಮರುದ್ದೇವತೆಗಳು ರಥಾನಾಂ ಪವ್ಯಾ ರಥಚಕ್ರಧಾರೆಗಳಿಂದ ಅದ್ರಿಂ ಓಜಸಾ ಭಿಂದಂತಿ ಮೇಘಗಳನ್ನು ತಮ್ಮ ಬಲದಿಂದ ಭೇದಿಸುವರು ಎಂದು ಅರ್ಥಮಾಡಿರುವರು

॥ ವ್ಯಾಕರಣಪ್ರಕ್ರಿಯಾ ॥

**ಹಿರಣ್ಯಯೇಭಿಃ**—ತೃತೀಯಾ ಬಹುವಚನದಲ್ಲಿ **ಬಹುಲಂ ಛಂದಸಿ** (ಪಾ ಸೂ ೭-೧-೧೦) ಎಂಬುದರಿಂದ ಭಿಸಿಗೆ ಐಸಾದೇಶ ಬರುವುದಿಲ್ಲ **ಬಹುವಚನೇ ಝಲ್ಯೇತ್** ಎಂಬುದರಿಂದ ಏತ್ವ ಬರುತ್ತದೆ

**ಉಜ್ಜಿಘ್ನಂತೇ**—ಹನ ಹಿಂಸಾಗತ್ಯೋಃ ಧಾತು **ವ್ಯತ್ಯಯೋ ಬಹುಲಂ** ಎಂಬುದರಿಂದ ಲಟಿನಲ್ಲಿ ಆತ್ಮನೇಪದ ಪ್ರತ್ಯಯ ಬರುತ್ತದೆ **ಝೋಽಂತಃ** ಎಂಬುದರಿಂದ ಅದಕ್ಕೆ ಅಂತಾದೇಶ **ಬಹುಲಂ ಛಂದಸಿ** (ಪಾ. ಸೂ ೨-೪-೭೬) ಎಂಬುದರಿಂದ ಶಪ್ಪಿಗೆ ಶ್ಲು ಆದೇಶ. **ಶ್ಲೌ** ಸೂತ್ರದಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ **ಕುಹೋಶ್ಚುಃ** ಎಂಬುದರಿಂದ ಚುತ್ವ **ಅಭ್ಯಾಸೇ ಚರ್ಚ** ಸೂತ್ರದಿಂದ ಅದಕ್ಕೆ ಜಸ್ತ್ವ ಜಹನ್ ಅಂತೇ ಎಂದಿರುವಾಗ ಪ್ರತ್ಯಯವು ಅಪಿತ್ತಾದುದರಿಂದ **ಸಾರ್ವಧಾತುಕಮಪಿತ್** ಸೂತ್ರದಿಂದ ಙಿತ್ತಾಗುವುದರಿಂದ **ಗಮಹನಜನ**—(ಪಾ ಸೂ ೬-೪-೯೮) ಎಂಬುದರಿಂದ ಧಾತುವಿನ ಉಪಧೆಗೆ **ಲೋಪ** ಬರುತ್ತದೆ **ಹೋಹಂತೇ-ರ್ಞ್ಣಿನ್ನೇಷು** ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಧಾತುವಿನ ಹಕರಕ್ಕೆ ನಕಾರ ಕುತ್ವದಿಂದ ಘಕಾರಾದೇಶ. **ಬಹುಲಂ ಛಂದಸಿ** (ಪಾ ಸೂ ೭-೪-೭೮) ಎಂಬುದರಿಂದ ಅಭ್ಯಾಸದ ಅಕಾರಕ್ಕೆ ಇತ್ವ ಜಿಘ್ನಂತೇ ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಪಥ್ಯ** ಪಥಿ ಭವಃ ಪಥ್ಯಃ **ಭವೇ ಛಂದಸಿ** (ಪಾ ಸೂ ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ ಯಾದಿಪ್ರತ್ಯಯವಾದುದರಿಂದ **ಯಚಿ ಭಮ್** ಎಂಬುದರಿಂದ ಪೂರ್ವಕ್ಕೆ ಭಸಂಜ್ಞಾ ಇರುತ್ತದೆ ಆದುದರಿಂದ **ನಸ್ತದ್ಧಿತೇ** (ಪಾ. ಸೂ ೬-೪-೧೪೪) ಎಂಬುದರಿಂದ ನಾಂತವಾದ ಪಥಿನ್ ಶಬ್ದದ ಟಿಗೆ **ಲೋಪ** ಬರುತ್ತದೆ **ಯತೋಽನಾವಃ** ಎಂಬುದು ಬಾರದೆ ವ್ಯತ್ಯಯದಿಂದ ಅಂತಸ್ವರಿತವು ಬರುತ್ತದೆ. ಅಥವಾ ಪಂಥಾ **ಅಸ್ಯ** ಅಸ್ತಿ ಎಂಬ

ಮತ್ವರ್ಥದಲ್ಲಿ **ಛಂದಸೀ ವನಿಪೌ** (ಪಾ. ಸೂ. ೫-೨-೧೧೨-೨) ಎಂಬುದರಿಂದ ಈಕಾರ ಬರುತ್ತದೆ. ಟಿಲೋಪ ಬಂದರೆ ಪಥೀ ಎಂದಾಗುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾದಾಗ ಜಸ್ಸಿನಲ್ಲಿ ಯಣಾದೇಶ ಬರುತ್ತದೆ ಆಗ **ಉದಾತ್ತ ಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** ಎಂಬುದರಿಂದ ವಿಭಕ್ತಿಗೆ ಸ್ವರಿತ ಸ್ವರ ಬರುತ್ತದೆ

**ಅಯಾಸಃ**—ಅಯ ಪಯ ಗತೌ ಧಾತು. ಅಯಂತೇ ಇತಿ ಅಯಾಃ ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹ ಪಚಾದಿಭ್ಯೋ**—(ಪಾ. ಸೂ ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಅಯ ಎಂದು ರೂಪ ವಾಗುತ್ತದೆ. ಪ್ರಥಮಾ ಬಹುವಚನ ಜಸ್ ಪರದಲ್ಲಿರುವಾಗ **ಆಜ್ಜಸೇರಸುಕ್**—(ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ ಬರುತ್ತದೆ ಅಂತ್ಯ ಸಕಾರಕ್ಕೆ ರುತ್ವ ವಿಸರ್ಗ ಬಂದರೆ ಅಯಾಸಃ ಎಂದು ರೂಪವಾಗುತ್ತದೆ.

**ಧ್ರುವ ಚ್ಯುತಃ—**ಧ್ರುವಾಣಾಂ ಚ್ಯಾವಯಿತಾರಃ ಧ್ರುವಚ್ಯುತಃ. ಚ್ಯುತಿರ್ ಕ್ಷರಣೇ ಣಿಜಂತದ ಮೇಲೆ ಕ್ವಿಪ್ ಪ್ರತ್ಯಯ. ಪ್ರಥಮಾ ಬಹುವಚನಾಂತವಾದ ರೂಪ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ

**ದುಧ್ರಕೃತಃ—**ಇಲ್ಲಿ ದುಃ ಶಬ್ದದಿಂದ ದುಷ್ಟರು ಎಂದು ಲಕ್ಷಣಾವೃತ್ತಿಯಿಂದ ಸ್ವೀಕರಿಸಬೇಕು ದುಷ್ಟಾನ್ ಧಾರಯತಿ ದುಧ್ರಃ. ಧೃಞ್ ಧಾರಣೇ ಧಾತು ಮೂಲವಿಭುಜಾದಿಯಲ್ಲಿ ಸೇರಿರುವುದರಿಂದ **ಕ ಪ್ರಕರಣೇ ಮೂಲವಿಭುಜಾದಿಭ್ಯ ಉಪಸಂಖ್ಯಾನಮ್** (ಪಾ ಸೂ ೩-೨-೫-೨) ಎಂಬುದರಿಂದ ಕಪ್ರತ್ಯಯ. ಕಿತ್ತಾದುದರಿಂದ ಗುಣನಿಷೇಧ ಯಣಾದೇಶದಿಂದ ಧ್ರ ಎಂದು ರೂಪವಾಗುತ್ತದೆ ಅಥವಾ **ಈಷದ್ದುಃಸುಷು**— (ಪಾ ಸೂ ೩-೩-೧೨೬) ಎಂಬುದರಿಂದ ದುಃಶಬ್ದವು ಉಪಪದವಾಗಿರುವಾಗ ಕರ್ಮಣಿಯಲ್ಲಿ ಖಲ್ ಪ್ರತ್ಯಯ ಆಗ ಧಾತುವಿಗೆ ಗುಣಾಭಾವವನ್ನು ಛಾಂದಸವೆಂದು ಹೇಳಬೇಕು. ದಧ್ರಂ ಕುರ್ವಂತಿ ಇತಿ ದಧ್ರಕೃತಃ. ಡುಕೃಞ್ ಕರಣೇ ಧಾತು **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯ ಪಿತಿ ಕೃತಿತುಕ್** ಎಂಬುದರಿಂದ ಕೃಧಾತುವಿನ ಋಕಾರಕ್ಕೆ ತುಕಾಗಮ ದುಧ್ರಕೃತ್ ಶಬ್ದವಾಗುತ್ತದೆ. ಬಹುವಚನಾಂತರೂಪ. ದುರಿನ ರೇಫಕ್ಕೆ ಛಾಂದಸವಾಗಿ ಲೋಪ ಹೇಳಬೇಕು **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿ ಸ್ವರದಿಂದ ಕಕಾರದ ಮೇಲಿರುವ ಋಕಾರವು ಉದಾತ್ತವಾಗುತ್ತದೆ ॥ ೧೧ ॥

॥ ಸಂಹಿತಾಪಾಠಃ ॥

ವೃಷುಂ ಪಾವಕಂ ವನಿನಂ ವಿಚರ್ಷಣಿಂ ರುದ್ರಸ್ಯ ಸೂನುಂ

ಹವಸಾ ಗೃಣೀಮಸಿ ।

ರಜಸ್ತುರಂ ತವಸಂ ಮಾರುತಂ ಗಣಮೃಜೀಷಿಣಂ ವೃಷಣಂ ಸಶ್ಚತ ಶ್ರಿಯೇ ॥ ೧೨ ॥

॥ ಪದಪಾಠಃ ॥

ಘೃಷುಂ । ಪಾವಕಂ । ವನಿನಂ । ವಿಽಚರ್ಷಣಿಂ । ರುದ್ರಸ್ಯ । ಸೂನುಂ । ಹವಸಾ ಗೃಣೀಮಸಿ ।

ರಜಃಽತುರಂ । ತವಸಂ । ಮಾರುತಂ । ಗಣಂ । ಋಜೀಷಿಣಂ । ವೃಷಣಂ । ಸಶ್ಚತ । ಶ್ರಿಯೇ ॥ ೧೨ ॥

॥ ಸಾಯಣಭಾಷ್ಯಂ ॥

ಘೃಷುಂ ಶತ್ರೂಣಾಂ ಬಲಸ್ಯ ಘರ್ಷಕಂ ವಿನಾಶಯಿತಾರಂ ಪಾವಕಂ ಸರ್ವೇಷಾಂ ಶೋಧಕಂ ವನಿನಂ । ವನಮಿತ್ಯುದಕನಾಮ । ಉದಕವಂತಂ । ವೃಷ್ಟಿಪ್ರದಮಿತ್ಯರ್ಥಃ । ವಿಚರ್ಷಣಿಂ ವಿಶೇಷೇಣ ಸರ್ವಸ್ಯ ದ್ರಷ್ಟಾರಂ ರುದ್ರಸ್ಯ ಮಹಾದೇವಸ್ಯ ಸೂನುಂ ಪುತ್ರಭೂತಂ । ಏವಂವಿಧಂ ಮರುತಾಂ ಸಮೂಹಂ ಹವಸಾಹ್ವಾನಸಾಧನೇನ ಸ್ತೋತ್ರೇಣ ಗೃಣೀಮಸಿ । ಶಬ್ದಯಾಮಃ । ಸ್ತುಮ ಇತ್ಯರ್ಥಃ । ಹೇ ಋತ್ವಿಗ್ಯಜಮಾನಾಃ ಯೂಯಮಪಿ ಶ್ರಿಯೇ ಐಶ್ವರ್ಯಾಯ ಧನಾರ್ಥಂ ಮಾರುತಂ ಗಣಂ ಮರುತಾಂ ಸಂಘಂ ಸಶ್ಚತ । ಪ್ರಾಪ್ನುತ । ಕೀದೃಶಂ । ರಜಸ್ತುರಂ ಪಾರ್ಥಿವಸ್ಯ ಪಾಂಸೋಸ್ತ್ವರಯಿತಾರಂ । ಪ್ರೇರಕಮಿತ್ಯರ್ಥಃ । ತವಸಂ ಪ್ರವೃದ್ಧಂ ಋಜೀಷಿಣಂ । ತೃತೀಯಸವನೇ ಹಿ ಮರುತಃ ಸ್ತೂಯಂತೇ ತತ್ರ ಚ ಋಜೀಷಮಭಿಷುಣ್ವಂತೀತಿ ಋಜೀಷಸಂಬಂಧಃ ಶ್ರುತಃ । ಅತಸ್ತದ್ವಂತಂ ವೃಷಣಂ ಕಾಮಾನಾಂ ವರ್ಷಿತಾರಂ ॥ ಹವಸಾ । ಹ್ವೇಞೋಽಸಿಪ್ರತ್ಯಯೇ ಬಹುಲಂ ಛಂದಸೀತಿ ಸಂಪ್ರಸಾರಣಂ । ಗೃಣೀಮಸಿ । ಗೄ ಶಬ್ದೇ । ಇದಂತೋ ಮಸಿಃ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ । ರಜಸ್ತುರಂ । ರಜಾಂಸಿ ತುತೋರ್ತೀತಿ ರಜಸ್ತೂಃ । ತುರ ತ್ವರಣೇ । ಕ್ವಿಪ್ಚೇತಿ ಕ್ವಿಪ್ । ವೃಷಣಂ । ವಾ ಷಪೂರ್ವಸ್ಯ ನಿಗಮ ಇತಿ ದೀರ್ಘಾಭಾವಃ । ಸಶ್ಚತ । ಸ್ಲಸ್ಜ ಷಸ್ಜ ಗತಾವಿತ್ಯತ್ರ ಸಶ್ಚಿಮಪ್ಯೇಕ ಇತಿ ಧಾತುವೃತ್ತಾವುಕ್ತಂ । ಗತಿಕರ್ಮಸು ಚ ಸಶ್ಚತೀತಿ ಪಠಿತಂ । ಶ್ರಿಯೇ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥

‖ ಪ್ರತಿಪದಾರ್ಥ ‖

**ಘೃಷುಂ**— ಶತ್ರುಗಳ ಬಲವನ್ನು ನಾಶಮಾಡುವ । **ಪಾವಕಂ** (ಎಲ್ಲರನ್ನೂ ಎಲ್ಲವನ್ನೂ) ಶುದ್ಧಿಮಾಡುವ **ವನಿನಂ**—ನೀರು ಉಳ್ಳ । **ವಿಚರ್ಷಣಿಂ**—ಚೆನ್ನಾಗಿ (ಎಲ್ಲವನ್ನೂ) ನೋಡುವ । **ರುದ್ರಸ್ಯ**—ರುದ್ರನ । **ಸೂನುಂ**—ಪುತ್ರರಾದ (ಮರುದ್ಗಣವನ್ನು) । **ಹವಸಾ**—ಆಹ್ವಾನಸಾಧಕವಾದ ಸ್ತೋತ್ರದಿಂದ । **ಗೃಣೀಮಸಿ**—ಸ್ತುತಿಸೋಣ (ಎಲೈ ಋತ್ವಿಜರೇ ಮತ್ತು ಯಜಮಾನರೇ) । **ರಜಸ್ತುರಂ**—ಧೂಳನ್ನೆಬ್ಬಿಸುವ । **ತವಸಂ**—ಪ್ರವೃದ್ಧವಾದ (ವೇಗವುಳ್ಳ) । **ಋಜೀಷಿಣಂ**—ಋಜೀಷವೆಂಬ ಪಾತ್ರೆಯುಳ್ಳ । **ವೃಷಣಂ**—(ಇಷ್ಟಾರ್ಥಗಳನ್ನು) ವರ್ಷಿಸುವ । **ಮಾರುತಂ ಗಣಂ** -ಮರುದ್ಗಣವನ್ನು । **ಶ್ರಿಯೇ**—ಐಶ್ವರ್ಯಕ್ಕಾಗಿ । **ಸಶ್ಚತ**—ಆಶ್ರಯಿಸಿ (ಸ್ತುತಿಸಿ)

‖ ಭಾವಾರ್ಥ ‖

ಶತ್ರುನಾಶಕರೂ, ಎಲ್ಲರನ್ನೂ ಎಲ್ಲ ಪದಾರ್ಥಗಳನ್ನೂ ಶುದ್ಧಿಮಾಡುವವರೂ ವೃಷ್ಟ್ಯುದಕವುಳ್ಳವರೂ, ಸರ್ವ ದ್ರಷ್ಟೃಗಳೂ, ರುದ್ರನ ಪುತ್ರರೂ, ಆದ ಮರುದ್ದೇವತೆಗಳನ್ನು ಸ್ತುತಿಸುತ್ತೇವೆ. ಎಲೈ ಋತ್ವಿಜರೇ ಮತ್ತು ಯಜಮಾನನೇ, ನೀವೂ ಕೂಡ ಧೂಳನ್ನೆಬ್ಬಿಸುವ, ವೇಗವುಳ್ಳ, ಋಜೀಷವೆಂಬ ಪಾತ್ರೆಯಿಂದ ಹವಿಸ್ಸನ್ನು ಸ್ವೀಕರಿಸುವ ಇಷ್ಟಾರ್ಥಪ್ರದರಾದ ಮರುದ್ದೇವತೆಗಳನ್ನು ಐಶ್ವರ್ಯಲಾಭಕ್ಕಾಗಿ ಸ್ತುತಿಸಿ

English Translation

We Invoke with praise the foe destroying, all-purifying, water-shelding, all-surveying band of Maruts, the offspring of Rudra, priests, to obtain prosperity, have recourse to the dust-raising and powerful band of Maruts, receiving libations from sacred vessels, and showering down (benefits)

‖ ವಿಶೇಷವಿಷಯಗಳು ‖

**ಘೃಷುಂ ಶತ್ರೂಣಾಂ ಬಲಸ್ಯ ವರ್ಧಕಂ ವಿನಾಶಯಿತಾರಂ** ಶತ್ರುಗಳ ಶಕ್ತಿಯನ್ನು ನಾಶ ಮಾಡುವವರು

**ರಜಸ್ತುರಂ—ಪಾರ್ಥಿವಸ್ಯ ಪಾಂಸೋಸ್ತ್ವರಯಿತಾರಂ ಪ್ರೇರಕಂ** ಭೂಮಿಯ ಧೂಳನ್ನು ಎರಚುವವರು.

**ಋಜೀಷಿಣಂ — ತೃತೀಯಸವನೇ ಹಿ ಮರುತಃ ಸ್ತೂಯಂತೇ ತತ್ರ ಚ ಋಜೀಷಮಭಿಷುಣ್ವಂತಿ ಇತಿ ಋಜೀಷಸಂಬಂಧಃ ಶ್ರುತಃ । ಅತಸ್ತದ್ವಂತಂ ।** ಯಜ್ಞವು ನಡೆಯುತ್ತಿರುವಾಗ ಸಾಯಂ ಸವನಕಾಲವು

ಮೂರನೆಯ ಸವನವೆನಿಸಿಕೊಂಡಿರುವುದು ಇದು ಸೋಮಾಭಿಷವ ಕರ್ಮದ ಕಾಲವು. ಈ ಕಾಲವು ಪ್ರಾಪ್ತವಾದಾಗ ಹೋತೃವು ತನಗೆ ಸಂಬಂಧಪಟ್ಟ ಋತ್ವಿಕ್ಕುಗಳೊಡನೆ ಮರುದ್ದೇವತೆಗಳನ್ನು ಆಯಾಯ ಮಂತ್ರಗಳಿಂದ ಸ್ತೋತ್ರಮಾಡುವನು. ಆಗ ಅಗ್ನಿಯಲ್ಲಿ ಹೋಮ ಮಾಡುವುದಕ್ಕಾಗಿ ಸೋಮಲತೆಯನ್ನು ಹಿಂಡಿ ರಸವನ್ನು ತೆಗೆಯುವರು ಆದ್ದರಿಂದ ಈ ಸೋಮರಸದ ಸಂಬಂಧವು ಮರುತ್ತಗಳಿಗೆ ಉಂಟಾಗುವುದು. ಇದರಿಂದ ತದ್ವಂತಂ ಸೋಮ ಸಂಬಂಧವುಳ್ಳವರು ಮರುದ್ದೇವತೆಗಳು ಎಂದು ಅರ್ಥವು.

**ವೃಷಣಂ ಮಾರುತಂ ಗಣಂ ಶ್ರಿಯೇ ಸಚ್ಛತೆ—ಕಾಮಾನಾಂ ವರ್ಷಯಿತಾರಂ ಮರುತಂ ಸಮೂಹಂ ಐಶ್ವರ್ಯಾಯ ಪ್ರಾಪ್ನುತ ।** ಎಲೈ ಯಜ್ಞಮಾಡುವ ಯಜಮಾನರುಗಳೇ, ನೀವು ನಿಮ್ಮ ಅಭಿಲಾಷೆಗಳೆಲ್ಲವನ್ನೂ ಸಾಧಿಸಿಕೊಡುವ ಮರುದ್ದೇವತೆಗಳ ಸಂಘವನ್ನು ಐಶ್ವರ್ಯವನ್ನು ಹೊಂದುವುದಕ್ಕಾಗಿ ಆಶ್ರಯಿಸಿರಿ

॥ ವ್ಯಾಕರಣಪ್ರಕ್ರಿಯಾ ॥

**ವನಿನಮ್** —ವನಂ (ಜಲಂ) ಅಸ್ಯ ಅಸ್ತಿ ಎಂಬರ್ಥದಲ್ಲಿ **ಅತ ಇನಿಠನೌ** ಎಂಬುದರಿಂದ ಇನಿ ಪ್ರತ್ಯಯ. ದ್ವಿತೀಯಾ ಏಕವಚನದಲ್ಲಿ ವನಿನಮ್ ಎಂದು ರೂಪವಾಗುತ್ತದೆ ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಹವಸಾ** ಹ್ವೇಞ್ ಸ್ಪರ್ಧಾಯಾಂ ಶಬ್ದೇಚ ಧಾತು ಇದಕ್ಕೆ ಉಣಾದಿಸಿದ್ಧವಾದ ಅಸಿ ಪ್ರತ್ಯಯ ಪರದಲ್ಲಿರುವಾಗ **ಬಹುಲಂ ಛಂದಸಿ** ಎಂಬುದರಿಂದ ಸಂಪ್ರಸಾರಣ ಬರುತ್ತದೆ **ಸಂಪ್ರಸಾರಣಾಚ್ಚ** ಎಂಬುದರಿಂದ ಏಕಾರಕ್ಕೆ ಪೂರ್ವರೂಪ. ಹು+ಅಸ್ ಎಂದಿರುವಾಗ ಆರ್ಧಧಾತುಕ ನಿಬಂಧನವಾಗಿ ಧಾತುವಿಗೆ ಗುಣ ಅವಾದೇಶ ಹವಸ್ ಶಬ್ದವಾಗುತ್ತದೆ ತೃತೀಯಾ ಏಕವಚನದಲ್ಲಿ ಹವಸಾ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಹವಸಾ ಎಂಬುದು ಮಧ್ಯೋದಾತ್ತವಾಗುತ್ತದೆ

**ಗೃಣೀಮಸಿ**—ಗೄ ಶಬ್ದೇ ಧಾತು ಕ್ರ್ಯಾದಿ. ಲಟ್ ಮಧ್ಯಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ **ಪ್ವಾದೀನಾಂ ಹ್ರಸ್ವಃ** ಎಂಬುದರಿಂದ ಪ್ವಾದಿಯಲ್ಲಿ ಇದು ಸೇರಿರುವುದರಿಂದ ಹ್ರಸ್ವ ಬರುತ್ತದೆ ಪ್ರತ್ಯಯವು ಅಪಿತ್ತಾದುದರಿಂದ ಙಿತ್ತಾಗುತ್ತದೆ ಆದುದರಿಂದ **ಈ ಹಲ್ಯಘೋಃ** (ಪಾ. ಸೂ ೬-೪-೧೧೩) ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಈತ್ವ. ಋಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. **ಇದಂತೋಮಸಿ** (ಪಾ ಸೂ. ೭-೧-೪೬) ಎಂಬುದರಿಂದ ಪ್ರತ್ಯಯಕ್ಕೆ ಇಕಾಗಮ ಗೃಣೀಮಸಿ ಎಂದು ರೂಪವಾಗುತ್ತದೆ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ

**ರಜಸ್ತುರಮ್**—ರಜಾಂಸಿ ತುತೋರ್ತಿ ಇತಿ ರಜಸ್ತೂಃ ತುರ ತ್ವರಣೇ ಧಾತು. **ಕ್ವಿಪ್ ಚ** (ಪಾ. ಸೂ ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್ ರಜಸ್ತುರ್ ಎಂದು ರೇಫಾಂತ ಶಬ್ದವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ ರಜಸ್ತುರಂ ಎಂದು ರೂಪವಾಗುತ್ತದೆ **ಗತಿಕಾರಕೋಪಪದಾತ್ ಕೃತ್** ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಮಾರುತಮ್**—ಮರುತಾಂ ಸಮುದಾಯಃ ಮಾರುತಮ್ **ತಸ್ಯ ಸಮೂಹಃ** ಎಂಬುದರಿಂದ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ.

**ವೃಷಣಮ್**- ವೃಷನ್ ಶಬ್ದದ ಮೇಲೆ ದ್ವಿತೀಯಾ ಏಕವಚನವಿರುವಾಗ **ವಾ ಷಪೂರ್ವಸ್ಯ ನಿಗಮೇ** (ಪಾ. ಸೂ ೬-೪-೯) ಎಂಬುದರಿಂದ ಉಪಧಾದೀರ್ಘ ಬರುವುದಿಲ್ಲ. **ಅಟ್ ಕುಪ್ವಾಙ್**—ಸೂತ್ರದಿಂದ ಣತ್ವ ಬರುತ್ತದೆ

**ಸಶ್ಚತ**—ಗ್ಲುಞ್ಚ್ ಷಸ್ಜ ಗತೌ ಧಾತು. ಹೀಗೆ ಧಾತುಪಾಠವಿರುವಾಗ ಕೆಲವರು ಸಶ್ಚ ಎಂದೂ ಹೇಳುತ್ತಾರೆ ಎಂದು ಧಾತುವೃತ್ತಿಯಲ್ಲಿ ಹೇಳಿದೆ. ಗತ್ಯರ್ಥಕ ಧಾತುಗಳಲ್ಲಿ ಸಶ್ಚ ಎಂಬುದೂ ಪಠಿತವಾಗಿದೆ **ಲೋಟ್** ಮಧ್ಯಮ ಪುರುಷದ ಬಹುವಚನಕ್ಕೆ ಲಙ್ವದ್ಭಾವವಿರುವುದರಿಂದ **ತಸ್ಥಸ್ಥ**—ಸೂತ್ರದಿಂದ ತ ಎಂಬ ಆದೇಶ ಬರುತ್ತದೆ ಶಪ್ ವಿಕರಣ ಸಶ್ಚತ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ

**ಶ್ರಿಯೇ**—ಚತುರ್ಥೀ ಏಕವಚನದಲ್ಲಿ **ಅಚಿಶ್ನು ಧಾತುಭ್ರುವಾಂ**—ಸೂತ್ರದಿಂದ ಇಯಙಾದೇಶ **ಸಾವೇ-ಕಾಚಸ್ತೃತೀಯಾದಿಃ** (ಪಾ ಸೂ ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ ॥ ೧೨ ॥



॥ ಸಂಹಿತಾಪಾಠಃ ॥

ಪ್ರ ನೂ ಸ ಮರ್ತಃ ಶವಸಾ ಜನಾ ಅತಿ ತಸ್ಥೌ ವ ಊತೀ
ಮರುತೋ ಯಮಾವತ ।
ಅರ್ವದ್ಭಿರ್ವಾಜಂ ಭರತೇ ಧನಾ ನೃಭಿರಾಪೃಚ್ಛ್ಯಂ ಕ್ರತುಮಾ
ಕ್ಷೇತಿ ಪುಷ್ಯತಿ ॥ ೧೩ ॥

॥ ಪದಪಾಠಃ ॥

ಪ್ರ । ನು । ಸಃ । ಮರ್ತಃ । ಶವಸಾ । ಜನಾನ್ । ಅತಿ । ತಸ್ಥೌ । ವಃ । ಊತೀ ।
ಮರುತಃ । ಯಂ । ಆವತ ।
ಅರ್ವತ್ಽಭಿಃ । ವಾಜಂ । ಭರತೇ । ಧನಾ । ನೃಽಭಿಃ । ಆಽಪೃಚ್ಛ್ಯಂ । ಕ್ರತುಂ ।
ಆ । ಕ್ಷೇತಿ । ಪುಷ್ಯತಿ ॥ ೧೩ ॥

॥ ಸಾಯಣಭಾಷ್ಯಂ ॥

ಸ ಮರ್ತೋ ಮನುಷ್ಯಃ ಶವಸಾ ಬಲೇನ ಜನಾನ್ ಜಾತಾನನ್ಯಾನ್ಪುರುಷಾನತಿ ಅತೀತ್ಯ ನು ಕ್ಷಿಪ್ರಂ ತಸ್ಥೌ । ಪ್ರತಿಷ್ಠಿತೋ ಭವತಿ । ಹೇ ಮರುತೋ ವೋ ಯುಷ್ಮಾಕಮೂತೀ ಊತ್ಯಾ ರಕ್ಷಣೇನ ಯಂ ಪುರುಷಮಾವತ ಅರಕ್ಷತ । ಅಪಿ ಚ ಸ ಪುರುಷೋಽರ್ವದ್ಭಿರಶ್ವೈಃ ಸಾಧನಭೂತೈರ್ವಾಜಮನ್ನಂ ನೃಭಿಃ ಸ್ವಕೀಯೈರ್ಮನುಷ್ಯೈರ್ಧನಾ ಧನಾನಿ ಚ ಭರತೇ । ಸಂಪಾದಯತಿ । ತಥಾಪೃಚ್ಛ್ಯಮಾಪ್ರಷ್ಟವ್ಯಂ ಶೋಭನಂ ಕ್ರತುಮಗ್ನಿಷ್ಟೋಮಾದಿಕರ್ಮ ಕ್ಷೇತಿ । ಆಪ್ನೋತಿ । ಪುಷ್ಯತಿ । ಪ್ರಜಯಾ ಪಶುಭಿಃ ಪುಷ್ಟೋ ಭವತಿ ಚ ॥ ಊತೀ । ತೃತೀಯಾಯಾಃ ಪೂರ್ವಸವರ್ಣದೀರ್ಘತ್ವಂ । ನೃಭಿಃ । ನೃ ಚಾನ್ಯತರಸ್ಯಾಮಿತಿ ವಿಭಕ್ತ್ಯುದಾತ್ತತ್ವಪ್ರತಿಷೇಧಃ । ಆಪೃಚ್ಛ್ಯಂ । ಛಂದಸಿ ನಿಷ್ಟರ್ಕ್ಯೇತ್ಯಾದಾವಾಙ್ಪೂರ್ವಾತ್ಪೃಚ್ಛತೇಃ ಕ್ಯಪ್ಪ್ರತ್ಯಯಾಂತೋ ನಿಪಾತ್ಯತೇ । ಗ್ರಹಿಜ್ಯಾದಿನಾ ಸಂಪ್ರಸಾರಣಂ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಕೃದುತ್ತರಪದಪ್ರಕೃತಿಸ್ವರತ್ವಂ । ಕ್ಷೇತಿ । ಕ್ಷಿ ನಿವಾಸಗತ್ಯೋಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಪುಷ್ಯತಿ । ಪುಷ ಪುಷ್ಟೌ । ದಿವಾದಿತ್ವಾತ್ ಶ್ಯನ್ । ನಿತ್ತ್ವಾದಾದ್ಯುದಾತ್ತತ್ವಂ । ತಿಙಃ ಪರತ್ವಾನ್ನಿಘಾತಾಭಾವಃ ॥

॥ ಪ್ರತಿಪದಾರ್ಥ ॥

**ಮರುತಃ**—ಎಲೈ ಮರುದ್ದೇವತೆಗಳೇ । **ವಃ**—ನಿಮ್ಮ । **ಊತೀ**—ರಕ್ಷಣೆಯಿಂದ । **ಯಂ**—ಯಾವ (ಮನುಷ್ಯನನ್ನು) । **ಆವತ**—ರಕ್ಷಿಸಿದಿರೋ । **ಸಃ ಮರ್ತಃ**—ಆ ಮನುಷ್ಯನು । **ಶವಸಾ**—ಬಲದಿಂದ । **ಜನಾನ್**—(ಇತರ) ಮನುಷ್ಯರನ್ನು । **ಅತಿ**—ಮೀರಿ । **ನು**—ಶೀಘ್ರವಾಗಿ । **ತಸ್ಥೌ**—ಪ್ರತಿಷ್ಠಿತನಾಗುತ್ತಾನೆ । **ಅರ್ವದ್ಭಿಃ**—(ಸಾಧನಗಳಾದ) ಅಶ್ವಗಳಿಂದ । **ವಾಜಂ**—ಅನ್ನವನ್ನೂ । **ನೃಭಿಃ**—(ತನ್ನವರಾದ) ಪುರುಷರಿಂದ **ಧನಾ**—ದ್ರವ್ಯವನ್ನೂ । **ಭರತೇ**—ಸಂಪಾದಿಸುತ್ತಾನೆ । **ಆಪೃಚ್ಛ್ಯಂ**—ಕರ್ತವ್ಯವಾದ । **ಕ್ರತುಂ**—(ಅಗ್ನಿಷ್ಟೋಮಾದಿ) ಯಾಗಗಳನ್ನೂ । **ಆ ಕ್ಷೇತಿ**—ಹೊಂದುತ್ತಾನೆ (ಮಾಡುತ್ತಾನೆ) । **ಪುಷ್ಯತಿ**—ಪುಷ್ಟನಾಗುತ್ತಾನೆ.

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ನಿಮ್ಮಿಂದ ರಕ್ಷಿಸಲ್ಪಟ್ಟ ಪುರುಷನು, ಬಲದಲ್ಲಿ ಇತರರನ್ನು ಮೀರಿಸುತ್ತಾನೆ, ಅಶ್ವಗಳ ಮೂಲಕ ಅನ್ನವನ್ನೂ, ತನ್ನ ಪುರುಷರ ಮೂಲಕ ಧನವನ್ನೂ, ಸಂಪಾದಿಸಿ ಪುಷ್ಟನಾಗುತ್ತಾನೆ. ಕರ್ತವ್ಯವಾದ ಅಗ್ನಿಷ್ಟೋಮಾದಿಗಳನ್ನು ಮಾಡುತ್ತಾನೆ

## English Translation

The man whom, Maruts, you defend with your protection, quickly surpasses all men in strength, with his horses, he acquires food, and with his men, riches, he performs the required worship, and he prospers

॥ ವಿಶೇಷವಿಷಯಗಳು ॥

**ಸ ಮರ್ತಃ** ನು ಜನಾನತಿ **ಪ್ರತಸ್ಥೌ— ಸ ಮನುಷ್ಯಃ ಜಾತಾನ್ ಅನ್ಯಾನ್ ಪುರುಷಾನ್ ಕ್ಷಿಪ್ರಮತೀತ್ಯ ಪ್ರತಿಷ್ಠಿತೋ ಭವತಿ ।** ನು ಎಂಬುವ ಪದವು ಜಾಗ್ರತೆಯಾಗಿ ಎಂಬ ಅರ್ಥದಲ್ಲಿ (ನಿ ೩-೯) ಮಂಕ್ಷು ದ್ರವತ್ ಮೊದಲಾದ ಇಪ್ಪತ್ತಾರು ಕ್ಷಿಪ್ರ ಪದಗಳ ಮಧ್ಯದಲ್ಲಿ ಪಠಿತವಾಗಿರುವುದು ಮರುದ್ದೇವತೆಗಳ ರಕ್ಷಣೆಯನ್ನು ಅನುಭವಿಸುತ್ತಿರುವ ಮನುಷ್ಯನು ಜನ್ಮವನ್ನು ಹೊಂದಿರುವ, ತನಗಿಂತಲೂ ಬೇರೆಯಾಗಿ ಇರುವ ಇತರ ಮನುಷ್ಯರೆಲ್ಲರನ್ನೂ ಮೀರಿ ಇರುವ ಶ್ರೇಷ್ಠವಾದ ಸ್ಥಿತಿಯನ್ನು ಜಾಗ್ರತೆಯಾಗಿ ಹೊಂದುವನು

**ಅಪೃಚ್ಛ್ಯಮ್ ಕ್ರತುಮ್—ಅಪ್ರಷ್ಟವ್ಯಂ ಶೋಭನಂ ಅಗ್ನಿಷ್ಟೋಮಾದಿಕರ್ಮ ।** ಯಾವನನ್ನೂ ಲಕ್ಷೀಕರಿಸದೇ ಮಂಗಳಕರವಾದ ಅಗ್ನಿಷ್ಟೋಮವೇ ಮೊದಲಾದ ಯಾಗರೂಪವಾದ ಕರ್ಮಗಳನ್ನು ಎಂದು ಅರ್ಥವು. ಸ್ಕಂದಸ್ವಾಮಿಗಳು **ಅಪೃಚ್ಛ್ಯಂ ಕ್ರತುಂ** ಎಂಬ ಪದಕ್ಕೆ **ಸರ್ವಾರ್ಥೇಷು ಸರ್ವಮನುಷ್ಯೈರಾಪ್ರಶ್ನಾರ್ಹಾಂ ಚ ಪ್ರಜ್ಞಾಂ ।** ಎಲ್ಲಾ ವಿಷಯಗಳಲ್ಲಿಯೂ ಎಲ್ಲಾ ಮನುಷ್ಯರಿಂದಲೂ ಪ್ರಶ್ನೆಯನ್ನು ಮಾಡಿ ತಿಳಿಯದೆ ಇರುವಂತೆ ಇರುವ ಉತ್ತಮವಾದ ಜ್ಞಾನವನ್ನು ಅಥವಾ ಬುದ್ಧಿಶಕ್ತಿಯನ್ನು ಎಂದು ಅರ್ಥವನ್ನು ಹೇಳಿರುವರು

॥ ವ್ಯಾಕರಣಪ್ರಕ್ರಿಯಾ ॥

**ತಸ್ಥೌ—**ಷ್ಠಾ ಗತಿನಿವೃತ್ತೌ ಧಾತು **ಲಿಟ್ಟಿನ** ಣಲಿಗೆ **ಆತ ಔ ಣಲಃ** ಎಂಬುದರಿಂದ ಔಕಾರಾದೇಶ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಖಯ್ ವರ್ಣವಾದ ತಕಾರಕ್ಕೆ ಶೇಷ ವೃದ್ಧಿ ಬಂದರೆ ತಸ್ಥೌ ಎಂದು ರೂಪವಾಗುತ್ತದೆ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಊತೀ—**ಊತಿ ಶಬ್ದದ ಮೇಲೆ ತೃತೀಯಾ ಏಕವಚನದ ಟಾ ಪರದಲ್ಲಿರುವಾಗ **ಸುಪಾಂ ಸುಲುಕ್—**ಸೂತ್ರದಿಂದ ಪೂರ್ವಸವರ್ಣದೀರ್ಘ **ಏಕಾದೇಶ ಉದಾತ್ತೇನೋದಾತ್ತಃ** ಎಂಬುದರಿಂದ ವಿಭಕ್ತಿಗೆ ಏಕಾದೇಶವಾಗಿ ಬಂದುದೂ ಉದಾತ್ತವಾಗುತ್ತದೆ

**ಮರುತಃ**—**ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ

**ಅವತ**– ಅವ ರಕ್ಷಣೇ ಧಾತು ಲಟ್ ಮಧ್ಯಮಪುರುಷದ ಬಹುವಚನಕ್ಕೆ **ತಸ್ ಥಸ್ ಥ**—ಸೂತ್ರದಿಂದ ತಾದೇಶ **ಕರ್ತರಿ ಶಪ್** ಎಂಬುದರಿಂದ ಶಪ್ ವಿಕರಣ ಅಂಗಕ್ಕೆ ಅಡಾಗಮ. ಆವತ ಎಂದು ರೂಪವಾಗುತ್ತದೆ. ಯುಮ್ ಎಂದು ಹಿಂದೆ ಇರುವುದರಿಂದ **ಯುಷ್ಮತ್ತಾನ್ನಿತ್ಯಂ** ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ

**ಅರ್ವದ್ಭಿಃ** **ಅರ್ವಣಸ್ತ್ರಸಾವನಞಃ** ಎಂಬುದರಿಂದ ತೃತೀಯಾ ಬಹುವಚನ ಪರದಲ್ಲಿರುವಾಗ ತಕಾರಾಂತಾದೇಶ ಬರುತ್ತದೆ ಕನಿನ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ

ಧನಾ ಧನ ಶಬ್ದದ ಮೇಲೆ ಪ್ರಾಪ್ತವಾದ ಶಸಿಗೆ ಶ ಆದೇಶ ಬಂದಾಗ ನುಮಾಗಮದೀರ್ಘಗಳು ಬರುತ್ತವೆ **ಶೇಚ್ಛಂದಸಿ ಬಹುಲಂ** ಎಂಬುದರಿಂದ ಶಿಗ ಲೋಪ

ನೃಭಿಃ **ಸಾವೇಕಾಚಸ್ತೃತೀಯಾದಿಃ** ಎಂಬುದರಿಂದ ವಿಭಕ್ತಿಗೆ ಉದಾತ್ತತ್ವ ಪ್ರಾಪ್ತವಾದರೆ **ನೃಚಾನ್ಯತರಸ್ಯಾಮ್** (ಪಾ. ಸೂ ೬-೧-೧೬೪) ಎಂಬುದರಿಂದ ವಿಭಕ್ತ್ಯುದಾತ್ತತ್ವ ಪ್ರತಿಷೇಧ ಬರುತ್ತದೆ

**ಆಪೃಚ್ಛ್ಯಮ್**—ಪ್ರಚ್ಛ ಜ್ಞೀಪ್ಸಾಯಾಂ ಪಾಚಿ, ಧಾತು. **ಛಂದಸಿ ನಿಷ್ಟರ್ಕ್ಯ ದೇವಹೂಯ** (ಪಾ. ಸೂ ೩-೧-೧೨೩) ಎಂಬ ಸೂತ್ರದಲ್ಲಿ ಆಜ್ ಪೂರ್ವವಾಗಿರುವಾಗ ಈ ಧಾತುವಿಗೆ ಕ್ಯಪ್ ಪ್ರತ್ಯಯಾಂತವಾಗಿ ನಿಪಾತಿತವಾಗಿದ. **ಗ್ರಹಿಜ್ಯಾವಯಿವ್ಯಧಿ**—ಸೂತ್ರದಿಂದ ಧಾತುವಿಗೆ ಸಂಪ್ರಸಾರಣ. (ರೇಫಬರುತ್ತದೆ.) ಪ್ರತ್ಯಯವು ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತವಾಗುತ್ತದೆ ಆಗ ಧಾತುವಿನ ಅಂತೋದಾತ್ತ ಸ್ವರದಿಂದ ಋಕಾರವು ಉದಾತ್ತವಾಗುತ್ತದೆ. ಆಜ್ ಎಂಬ ಗತಿಯೊಡನೆ ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಕ್ಷೇತಿ**—ಕ್ಷಿ ನಿವಾಸಗತ್ಯೋಃ ಧಾತು. ಲಟ್ ಪ್ರಥಮ ಪುರುಷ ಏಕವಚನ ಪರದಲ್ಲಿರುವಾಗ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕಾರಕ್ಕೆ ಗುಣ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದ

**ಪುಷ್ಯತಿ**—ಪುಷ ಪುಷ್ಟೌ ಧಾತು ದಿವಾದಿ ಲಟ್ ಪ್ರಥಮ ಪುರುಷದಲ್ಲಿ ತಿಪ್ ಪ್ರತ್ಯಯ. **ದಿವಾದಿಭ್ಯಃ ಶ್ಯನ್** ಎಂಬುದರಿಂದ ಶ್ಯನ್ ವಿಕರಣ. **ಸಾರ್ವಧಾತುಕಮಪಿತ್** ಎಂಬ ಸೂತ್ರದಿಂದ ಅದು ಙಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಶ್ಯನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ ಹಿಂದೆ ತಿಙಂತ ಶಬ್ದವಿರುವುದರಿಂದ ಅತಿಙಃ ಎಂದು ನಿಷೇಧಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ‖ ೧೩ ‖



॥ ಸಂಹಿತಾಪಾಠಃ ॥

ಚರ್ಕೃತ್ಯಂ ಮರುತಃ ಪೃತ್ಸು ದುಷ್ಟರಂ ದ್ಯುಮಂತಂ ಶುಷ್ಮಂ ಮಘವತ್ಸು ಧತ್ತನ ।

ಧನಸ್ಪೃತಮುಕ್ಥ್ಯಂ ವಿಶ್ವಚರ್ಷಣಿಂ ತೋಕಂ ಪುಷ್ಯೇಮ ತನಯಂ ಶತಂ ಹಿಮಾಃ ॥ ೧೪ ॥

॥ ಪದಪಾಠಃ ॥

ಚರ್ಕೃತ್ಯಂ । ಮರುತಃ । ಪೃತ್ಽಸು । ದುಸ್ತರಂ । ದ್ಯುಽಮಂತಂ । ಶುಷ್ಮಂ । ಮಘವತ್ಽಸು । ಧತ್ತನ ।

ಧನಽಸ್ಪೃತಂ । ಉಕ್ಥ್ಯಂ । ವಿಶ್ವಽಚರ್ಷಣಿಂ । ತೋಕಂ । ಪುಷ್ಯೇಮ । ತನಯಂ । ಶತಂ । ಹಿಮಾಃ ॥ ೧೪ ॥

॥ ಸಾಯಣಭಾಷ್ಯಂ ॥

ಹೇ ಮರುತೋ ಮಘವತ್ಸು ಹವಿರ್ಲಕ್ಷಣಧನಯುಕ್ತೇಷು ಯಜಮಾನೇಷು ಪುತ್ರಂ ಧತ್ತನ । ಸ್ಥಾಪಯತ । ದತ್ತೇತಿ ಯಾವತ್ । ಕೀದೃಶಂ ಪುತ್ರಂ । ಚರ್ಕೃತ್ಯಂ ಕಾರ್ಯೇಷು ಪುನಃಪುನಃ ಪುರಸ್ಕರ್ತವ್ಯಂ । ಸರ್ವಕರ್ಮಕುಶಲಮಿತ್ಯರ್ಥಃ । ಪೃತ್ಸು ಸಂಗ್ರಾಮೇಷು ದುಷ್ಟರಂ ದುಃಖೇನ ತರಿತವ್ಯಂ । ಅಜೇಯಮಿತ್ಯರ್ಥಃ । ದ್ಯುಮಂತಂ ದೀಪ್ತಿಮಂತಂ ಶುಷ್ಮಂ ಶತ್ರೂಣಾಂ ಶೋಷಕಂ ಬಲವಂತಂ ಧನಸ್ಪೃತಂ ಧನಾನಾಂ ಸ್ಪ್ರಷ್ಟಾರಂ ಧನೈಃ ಪ್ರೀತಂ ವಾ ಉಕ್ಥ್ಯಂ । ಉಕ್ಥಂ ಸ್ತೋತ್ರಂ । ತದರ್ಹಂ । ಪ್ರಶಸ್ಯಮಿತ್ಯರ್ಥಃ । ವಿಶ್ವಚರ್ಷಣಿಂ ವಿಶೇಷೇಣ ದ್ರಷ್ಟಾರಂ ಸರ್ವಜ್ಞಂ । ಏವಂವಿಧಂ ತೋಕಂ ಪುತ್ರಂ ತನಯಂ ಪೌತ್ರಂ ಚ ಶತಂ ಹಿಮಾ ಹೇಮಂತರ್ತೂಪಲಕ್ಷಿತಾನ್ ಶತಂ ಸಂವತ್ಸರಾನ್ ಜೀವಂತಃ ಸಂತಃ ಪುಷ್ಯೇಮ । ಪೋಷಯೇಮ । ಅತ್ರ ಹಿಮಶಬ್ದೇನ ತದ್ಯುಕ್ತಾ ಹೇಮಂತರ್ತವೋಽಭಿಧೀಯಂತೇ ।

**ತಥಾಚ ಬ್ರಾಹ್ಮಣಮೇವಮಾಮ್ನಾಯತೇ । ಶತಂ ಹಿಮಾ ಇತ್ಯಾಹ ಶತಂ ತ್ವಾ ಹೇಮಂತಾನಿ ಧಿಷೀಯೇತಿ ವಾವೈತದಾಹೇತಿ ॥ ಚರ್ಕೃತ್ಯಂ । ಪ್ರಕೃತಿಗ್ರಹಣೇ ಯಙ್ಲುಗಂತಸ್ಯಾಪಿ ಗ್ರಹಣಂ । ಪರಿ ೯೩-೭ । ಇತಿ ನ್ಯಾಯೇನ ಕರೋತೇರ್ಯಙ್ಲುಗಂತಾದ್ವಿಭಾಷಾ ಕೃವೃಷೋಃ । ಪಾ. ೩-೧-೧೨೦ । ಇತಿ ಕ್ಯಪ್ । ತುಗಾಗಮಃ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಪೃತ್ಸು । ಪದಾದಿಷು ಮಾಂಸ್ಪೃತ್ಸ್ನೂನಾಮುಪಸಂಖ್ಯಾನಂ । ಪಾ. ೬-೧-೬೩-೧ । ಇತಿ ಪೃತನಾಶಬ್ದಸ್ಯ ಪೃದಾದೇಶಃ । ದುಷ್ಟರಂ । ತೄ ಪ್ಲವನತರಣಯೋಃ । ಈಷದ್ದುಃಸುಷ್ವಿತಿ ಖಲ್ । ಸುಷಾಮಾದೇರಾಕೃತಿಗಣತ್ವಾತ್ ಷತ್ವಂ । ಲಿತ್ಸ್ವರೇಣ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಧತ್ತನ । ತಪ್ತನಪ್ತನಥನಾಶ್ಚೇತಿ ತಸ್ಯ ತನಾದೇಶಃ ॥**

॥ ಪ್ರತಿಪದಾರ್ಥ ॥

**ಮರುತಃ** ಮರುತರೇ । **ಮಘವತ್ಸು**—ಹವಿರೂಪವಾದ ಧನಯುಕ್ತರಾದ ಯಜಮಾನರಲ್ಲಿ । **ಚರ್ಕೃತ್ಯಂ** –ಕರ್ಮಗಳಲ್ಲಿ ಪುನಃ ಪುನಃ ಪುರಸ್ಕೃತನಾಗುವ (ಸರ್ವಕರ್ಮಕುಶಲನಾದ) । **ಪೃತ್ಸು** ಯುದ್ಧಗಳಲ್ಲಿ **ದುಷ್ಟರಂ** -ದುಃಖದಿಂದ ದಾಟಬಹುದಾದ (ಅಜೇಯನಾದ) । **ದ್ಯುಮಂತಂ**—ತೇಜಸ್ವಿಯಾದ । **ಶುಷ್ಮಂ**--ಶತ್ರುಗಳನ್ನು ಶೋಷಿಸುವ (ನಾಶಮಾಡುವ) । **ಧನಸ್ಪೃತಂ**—ಧನವನ್ನು ಸಂಪಾದನೆಮಾಡುವ । **ಉಕ್ಥ್ಯಂ**—ಸ್ತೋತ್ರಾರ್ಹನಾದ । **ವಿಶ್ವಚರ್ಷಣಿಂ**—ಸರ್ವಜ್ಞನಾದ (ಪುತ್ರನನ್ನು) । **ಧತ್ತನ**--ಇಡಿ (ಅನುಗ್ರಹ ಮಾಡಿ) । **ತೋಕಂ**- (ಇಂತಹ) ಮಗನನ್ನೂ । **ತನಯಂ**—ಮೊಮ್ಮಗನನ್ನೂ । **ಶತಂ ಹಿಮಾಃ**—ನೂರು ಸಂವತ್ಸರಗಳವರೆಗೂ । **ಪುಷ್ಯೇಮ**—ಪೋಷಣೆಮಾಡೋಣ

॥ ಭಾವಾರ್ಥ ॥

ಎಲೈ ಮರುದ್ದೇವತೆಗಳೇ, ಹವಿಸ್ಸಿನಿಂದ ಪೂಜೆಮಾಡುವ ಯಜಮಾನರಿಗೆ, ಕರ್ಮ ಕುಶಲನಾದ, ಯುದ್ಧಗಳಲ್ಲಿ ಅಜೇಯನಾದ, ತೇಜಸ್ವಿಯಾದ, ಧನವನ್ನು ಸಂಪಾದನೆ ಮಾಡುವ, ಸ್ತೋತ್ರಾರ್ಹನಾದ, ಸರ್ವಜ್ಞನಾದ ಪುತ್ರನನ್ನು ಮೊಮ್ಮಗನನ್ನು ಅನುಗ್ರಹಮಾಡಿ ಆ ಮಕ್ಕಳು ಮೊಮ್ಮಕ್ಕಳನ್ನು ನೂರಾರು ವರ್ಷಗಳು ಪೋಷಣೆ ಮಾಡುವಂತೆಯೂ ಅನುಗ್ರಹಮಾಡಿ

## English Translation

Maruts, grant to your wealthy (worshippers, a son), eminent for good works, invincible in battle, illustrious, the annihilator (of his adversaries), the seizer of wealth, the deserver of praise, and all-discerning; may we cherish such a son and such a grandson for a hundred winters,

॥ ವಿಶೇಷವಿಷಯಗಳು ॥

**ತೋಕಂ ತನಯಂ ಶತಂ ಹಿಮಾಃ ಪುಷ್ಯೇಮ**—**ಪುತ್ರಂ ಪೌತ್ರಂ ಚ ಶತಂ ಹಿಮಾಃ ಹೇಮಂತರ್ತೂಪಲಕ್ಷಿತಾನ್ ಶತಂ ಸಂವತ್ಸರಾನ್ ಜೀವಂತಸ್ಸಂತಃ ಪೋಷಯೇಮ । ಅತ್ರ ಹಿಮಶಬ್ದೇನ**

**ತದ್ಯುಕ್ತಾ ಹೇಮಂತರ್ತವೋ ಅಭಿಧೀಯಂತೇ । "ಶತಂ ಹಿಮಾ ಇತ್ಯಾಹ ಶತಂ ತ್ವಾ ಹೇಮಂತಾನಿ ಧಿ-ಷೀಯೇತಿ ವಾ ವೈತದಾಹ" (ತೈ. ಸಂ. ೧ ೫-೮-೫) ಇತಿ ತೈತ್ತಿರೀಯ ಬ್ರಾಹ್ಮಣಮ್ ।** ಮರುದ್ದೇವತೆಗಳನ್ನು ಸ್ತೋತ್ರಮಾಡುವ ನಾವುಗಳು ಒಂದುನೂರು ವರ್ಷಗಳು ಜೀವಿಸಿರುತ್ತಾ ಅವರು ಅನುಗ್ರಹಿಸಿರುವ ಪುತ್ರರು ಮತ್ತು ಪೌತ್ರರು (ಮೊಮ್ಮಕ್ಕಳು) ಇವರುಗಳ ಪೋಷಣೆಯನ್ನು ಮಾಡೋಣ ಎಂದು ಪ್ರಾರ್ಥನೆಯು ಇಲ್ಲಿ ಉಕ್ತವಾಗಿರುವುದು ಇಲ್ಲಿ ತೈತ್ತಿರೀಯ ಬ್ರಾಹ್ಮಣ ವಾಕ್ಯದಲ್ಲಿ ಪ್ರಸಿದ್ಧವಾದ ಒಂದುನೂರು ಹೇಮಂತ ಋತುಗಳು ಕಳೆಯುವವರೆಗೂ ವೃದ್ಧಿಯನ್ನು ಹೊಂದುವ ಎಂಬ ಅರ್ಥವು. ವರ್ಷಕ್ಕೆ ಒಂದು ಸಾರಿ ಮಾತ್ರವೇ ಹೇಮಂತಋತುವು ಬರುವುದರಿಂದ ನೂರು ಸಂವತ್ಸರಗಳೆಂಬ ಅರ್ಥವು ಉಪಪನ್ನವಾಗುವುದು

**ಮಘವತ್ಸು ಚರ್ಕೃತ್ಯಂ ಶುಷ್ಮಂ ಪುತ್ರಂ ಧತ್ತನ-ಹವಿರ್ಲಕ್ಷಣಧನಯುಕ್ತೇಷು ಯಜಮಾನೇಷು-ಕಾರ್ಯೇಷು ಪುನಃ ಪುನಃ ಪುರಸ್ಕರ್ತವ್ಯಂ ಸರ್ವಕರ್ಮಕುಶಲಂ, ಶತ್ರೂಣಾಂ ಶೋಷಕಂ ಬಲವಂತಂ ದತ್ತ ।** ಹವಿಸ್ಸಿನ ರೂಪವಾದ ದ್ರವ್ಯದಿಂದ ಕೂಡಿರುವ, ಯಜ್ಞಮಾಡುವ ಯಜಮಾನರುಗಳಿಗೆ ಎಲ್ಲಾ ವಿಧವಾದ ಕಾರ್ಯಗಳನ್ನು ಆಚರಿಸಲು ನಿಪುಣನಾದ, ಶತ್ರುಗಳನ್ನು ನಿಗ್ರಹಮಾಡುವ ಶಕ್ತಿಯುಳ್ಳವನಾದ ಮಗನನ್ನು ಅನುಗ್ರಹಿಸಿರಿ ಎಂದು ಮರುದ್ದೇವತೆಗಳನ್ನು ಪ್ರಾರ್ಥಿಸಿರುವುದು ಈ ಮಂತ್ರದಲ್ಲಿ ಶುಷ್ಮಂ ದ್ಯುಮಂತಂ ಎಂ... ಇತರ ಪದಗಳು ಸ್ವಾರ್ಯಕನಾಗಿ ಪುತ್ರಂ ಎಂಬ ಪದಕ್ಕೆ ವಿಶೇಷಣಗಳಾಗಿ ಇರುತ್ತವೆ

ಸ್ಕಂದಸ್ವಾಮಿಗಳು **ಮಘವತ್ಸು ಧತ್ತನೇ ಸ್ಥಾಪಯತ । ಪೂರ್ವಮಸ್ಮಭ್ಯಂ ಧನಂ ದತ್ತ ತತೋ ಧನವದ್ಭ್ಯಃ ಸದ್ಭ್ಯೋ ಬಲಂ** ಯಜ್ಞಗಳಲ್ಲಿ ಹವಿಸ್ಸಿನ ರೂಪವಾದ ಅನ್ನವನ್ನು ಅರ್ಪಿಸುವ ಯಜಮಾನರಾದ ನಮಗೆ ಮೊದಲು ಧನವನ್ನು ಅನುಗ್ರಹಿಸಿ ಅನಂತರದಲ್ಲಿ ಆ ಧನವನ್ನು ಹೊಂದಿರುವ ನಮಗೆ ಅದನ್ನು ರಕ್ಷಿಸುವ ಪುತ್ರರೇ ಮೊದಲಾದ ಬಲವನ್ನು ಅನುಗ್ರಹಿಸಿರಿ ಎಂದು ಅರ್ಥವನ್ನು ಹೇಳಿರುವರು

ವ್ಯಾಕರಣಪ್ರಕ್ರಿಯಾ

**ಚರ್ಕೃತ್ಯಮ್ ಪ್ರಕೃತಿ ಗ್ರಹಣೇ ಯಙ್ಲುಗಂತಸ್ಯಾಪಿ ಗ್ರಹಣಂ**(ಪರಿಭಾಷಾ ೨-೯) ಯಾವುದಾದರೂ ಧಾತುಪ್ರಕೃತಿಯು ಕಾರ್ಯಾರ್ಥನಾಗಿ ತೆಗೆದುಕೊಳ್ಳುವಾಗ ಯಙ್‌ಲುಗಂತವಾದ ಆ ಧಾತುವನ್ನೂ ತೆಗೆದುಕೊಳ್ಳಬೇಕು ಎಂಬುದರಿಂದ, ಡುಕೃಞ್ ಕರಣೇ ಈ ಧಾತುವಿಗೆ ಯಙ್‌ಲುಕ್ ಬಂದಾಗ ಯಙ್‌ಲುಗಂತವಾದ ಇದಕ್ಕೆ **ವಿಭಾಷಾ ಕೃವೃಷೋಃ** (ಪಾ ಸೂ ೩-೧-೧೨೦) ಎಂಬುದರಿಂದ ವಿಧಿಸಲ್ಪಡುವ ಕ್ಯಪ್ ಪ್ರತ್ಯಯವು ಬರುತ್ತದೆ ಚರ್ಕೃ ಎಂಬುದು ಯಙ್‌ಲುಗಂತ ಇದಕ್ಕೆ ಕ್ಯಪ್ ಪರದಲ್ಲಿರುವಾಗ **ಹ್ರಸ್ವಸ್ಯ ಪಿತಿ ಕೃತಿ ತುಕ್** ಎಂಬುದರಿಂದ ತುಕಾಗಮ. ಚರ್ಕೃತ್ಯ ಎಂದು ರೂಪವಾಗುತ್ತದೆ ಪ್ರತ್ಯಯವು ಪಿತ್ತಾದುದರಿಂದ ಅನುದಾತ್ತವಾಗುತ್ತದೆ ಆಗ ಧಾತುಸ್ವರವು ಉಳಿಯುತ್ತದೆ

**ಪೃತ್ಸು**—ಪೃತನಾ ಶಬ್ದಕ್ಕೆ ಸಪ್ತಮೀ ಬಹುವಚನ ಪರದಲ್ಲಿರುವಾಗ **ಪದಾದಿಷು ಮಾಂಸ್‌ಪೃತ್‌ಸ್ನೂನಾ-ಮುಪಸಂಖ್ಯಾನಮ್** (ಪಾ ಸೂ ೬-೧-೬೩-೧) ಎಂಬುದರಿಂದ ಪೃದಾದೇಶ ಬರುತ್ತದೆ **ಸಾವೇಕಾಚಃ ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ದುಷ್ಟರಮ್**—ತೄ ಪ್ಲವನತರಣಯೋಃ ಧಾತು **ಈಷದ್ದುಃಸುಷು**—(ಪಾ. ಸೂ ೩-೩-೧೨೬) ಎಂಬುದರಿಂದ ದುಃಶಬ್ದವು ಉಪಪದವಾಗಿರುವಾಗ ಈ ಧಾತುವಿಗೆ ಖಲ್ ಪ್ರತ್ಯಯ ಪ್ರತ್ಯಯ ನಿಮಿತ್ತಕವಾಗಿ ಧಾತುವಿಗೆ ಗುಣ ಸುಷಾಮಾದಿಯು ಆಕೃತಿಗಣವಾಗಿರುವುದರಿಂದ **ಸುಷಾಮಾದಿಷು ಚ** (ಪಾ ಸೂ. ೮-೩-೯೮) ಎಂಬುದರಿಂದ ದುಸ್ ಸಕಾರಕ್ಕೆ ಷತ್ವ ಬರುತ್ತದೆ. ಅದನ್ನು ನಿಮಿತ್ತೀಕರಿಸಿ ತಕಾರಕ್ಕೆ ಷ್ಟುತ್ವ ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಧತ್ತನ**—ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಲಙ್ವದ್ಭಾವವಿರುವುದರಿಂದ **ತಸ್‌ಥಸ್‌ಥ**—ಸೂತ್ರದಿಂದ ತ ಆದೇಶ **ಜುಹೋತ್ಯಾದಿಭ್ಯಃ ಶ್ಲುಃ** ಎಂಬುದರಿಂದ ಶ್ಲು ವಿಕರಣ **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹ್ರಸ್ವ **ಅಭ್ಯಾಸೇ ಚರ್ಚ** ಎಂಬುದರಿಂದ ಜಶ್ತ್ವ ದಧಾ-ತ ಎಂದಿರುವಾಗ **ಶ್ನಾಭ್ಯಸ್ತಯೋರಾತಃ** ಎಂಬುದರಿಂದ ಆಕಾರಲೋಪ **ಖರಿ ಚ** ಸೂತ್ರದಿಂದ ಧಕಾರಕ್ಕೆ ತಕಾರಪರದಲ್ಲಿರುವುದರಿಂದ ಚರ್ತ್ವ ದತ್+ತ ಎಂದಿರುವಾಗ **ದಧಸ್ತಥೋಶ್ಚ** (ಪಾ ಸೂ ೮-೨ ೩೮) ಎಂಬುದರಿಂದ ದಕಾರಕ್ಕೆ ಧಕಾರಾದೇಶ ಧತ್ತ ಎಂದಾಗುತ್ತದೆ. ಆಗ ಮಂತ್ರದಲ್ಲಿ **ತಪ್ತನಪ್ತನಥನಾಶ್ಚ** (ಪಾ. ಸೂ ೭-೧-೪೫) ಎಂಬುದರಿಂದ ತಕಾರಕ್ಕೆ ತನಾದೇಶ ಬಂದು ಧತ್ತನ ಎಂದು ರೂಪವಾಗುತ್ತದೆ ತಿಙಂತ ನಿಘಾತಸ್ವರ ಬರುತ್ತದೆ

**ಧನಸ್ಪೃತಮ್**—**ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ

**ವಿಶ್ವಚರ್ಷಣಿಮ್**—ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ

**ಪುಷ್ಯೇಮ**—ಪುಷ ಪುಷ್ಟೌ ಧಾತು ಲಿಙುತ್ತಮಪುರುಷ ಬಹುವಚನರೂಪ ಶ್ಯನ್ ವಿಕರಣ. **ನಿತ್ಯಂ ಙಿತಃ** ಎಂಬುದರಿಂದ ಪ್ರತ್ಯಯ, ಸಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ ॥ ೧೪ ॥

---

॥ ಸಂಹಿತಾಪಾಠಃ ॥

ನೂ ಷ್ಠಿರಂ ಮರುತೋ ವೀರವಂತಮೃತೀಷಾಹಂ ರಯಿಮ-
ಸ್ಮಾಸು ಧತ್ತ ।
ಸಹಸ್ರಿಣಂ ಶತಿನಂ ಶೂಶುವಾಂಸಂ ಪ್ರಾತರ್ಮಕ್ಷೂ ಧಿಯಾ-
ವಸುರ್ಜಗಮ್ಯಾತ್ ॥ ೧೫ ॥

॥ ಪದಪಾಠಃ ॥

ನು । ಸ್ಥಿರಂ । ಮರುತಃ । ವೀರಽವಂತಂ । ಋತಿಽಸಹಂ । ರಯಿಂ । ಅಸ್ಮಾಸು । ಧತ್ತ ।

ಸಹಸ್ರಿಣಂ । ಶತಿನಂ । ಶೂಶುಽವಾಂಸಂ । ಪ್ರಾತಃ । ಮಕ್ಷು । ಧಿಯಾಽವಸುಃ । ಜಗಮ್ಯಾತ್ ॥ ೧೫ ॥

॥ ಸಾಯಣಭಾಷ್ಯಂ ॥

ಏಕಾದಶಿನಸ್ಯ ಮಾರುತಸ್ಯ ಪಶೋರ್ವಪಾಯಾಗಸ್ಯ ನೂ ಷ್ಠಿರಮಿತ್ಯೇಷಾ ಯಾಜ್ಯಾ । ಸೂತ್ರಿತಂ ಚ । ಶುಚೀ ವೋ ಹವ್ಯಾ ಮರುತಃ ಶುಚೀನಾಂ ನೂ ಷ್ಠಿರಂ ಮರುತೋ ವೀರವಂತಂ । ಆ. ೩ ೭ । ಇತಿ॥

ಹೇ ಮರುತಃ ಸ್ಥಿರಂ ಸ್ಥಾಸ್ನುಂ ವೀರವಂತಂ ವೀರ್ಯೈಃ ಪುತ್ರೈಸ್ತದ್ವಂತಂ । ಯದ್ವಾ । ವೀರ್ಯೋಪೇತಂ । ಋತೀಷಾಹಂ ಗಂತೄಣಾಂ ಶತ್ರೂಣಾಮಭಿಭವಿತಾರಂ ಏವಂವಿಧಂ ರಯಿಂ ಪುತ್ರಲಕ್ಷಣಂ ಧನಮಸ್ಮಾಸು ಧತ್ತ । ಸ್ಥಾಪಯತ । ಸಹಸ್ರಿಣಂ ಶತಿನಮೇತತ್ಸಂಖ್ಯಾಕಧನವಂತಂ ಅತ ಏವ ಶೂಶುವಾಂಸಂ ಪ್ರವೃದ್ಧಂ । ಅಪಿ ಚಾಸ್ಮಾಕಂ ರಕ್ಷಣಾಯ ಧಿಯಾ ಬುದ್ಧ್ಯಾ ಕರ್ಮಣಾ ವಾ ಪ್ರಾಪ್ತಧನೋ ಮರುದ್ಗಣಃ ಪ್ರಾತಃಕಾಲೇ ಜಗಮ್ಯಾತ್ । ಆಗಚ್ಛತು ॥ ನೂ ಷ್ಠಿರಂ । ಋಚಿ ತುನುಘೇತಿ ದೀರ್ಘಃ । ಪೂರ್ವಪದಾದಿತಿ ಷತ್ವಂ । ಋತೀಷಾಹಂ । ಋ ಗತೌ । ಕರ್ತರಿ ಕ್ತಿಚ್ । ಷಹ ಅಭಿಭವೇ । ಛಂದಸಿ ಸಹ ಇತಿ ಣ್ವಿಪ್ರತ್ಯಯಃ । ಅನ್ಯೇಷಾಮಪಿ ದೃಶ್ಯತ ಇತಿ ಪೂರ್ವಪದಸ್ಯ ದೀರ್ಘತ್ವಂ । ಸುಷಾಮಾದಿತ್ವಾತ್ ಷತ್ವಂ । ಶೂಶುವಾಂಸಂ । ಟುಓಶ್ವಿ ಗತಿವೃದ್ಧ್ಯೋಃ । ಲಿಟಃ ಕ್ವಸುಃ । ವಿಭಾಷಾ ಶ್ವೇಃ । ಪಾ. ೬-೧-೩೦ । ಇತಿ ಸಂಪ್ರಸಾರಣಂ । ದ್ವಿರ್ವಚನೇ ತುಜಾದಿತ್ವಾದಭ್ಯಾಸಸ್ಯ ದೀರ್ಘತ್ವಂ । ವಸ್ವೇಕಾಜಾದ್ಘಸಾಮಿತಿ ನಿಯಮಾದಿಡಭಾವಃ । ಪ್ರತ್ಯಯಸ್ವರಃ ॥

॥ ಪ್ರತಿಪದಾರ್ಥ ॥

**ಮರುತಃ** — ಎಲೈ ಮರುದ್ದೇವತೆಗಳೇ । **ಸ್ಥಿರಂ** — ಸ್ಥಾಯಿಯಾದ । **ವೀರವಂತಂ** — ಪುತ್ರರಿಂದ (ವೀರ್ಯದಿಂದ) ಯುಕ್ತವಾದ । **ಋತೀಷಾಹಂ** - ಶತ್ರುಗಳನ್ನು ಸೋಲಿಸುವ । **ಸಹಸ್ರಿಣಂ** — ಸಹಸ್ರಸಂಖ್ಯಾಕವಾದ । **ಶತಿನಂ** — ಶತಸಂಖ್ಯಾಕವಾದ । **ಶೂಶುವಾಂಸಂ** — ವಿಶೇಷವಾಗಿ ಪ್ರವೃದ್ಧವಾಗುವ । **ರಯಿಂ** — ಧನವನ್ನು । **ಅಸ್ಮಾಸು** — ನಮ್ಮಲ್ಲಿ । **ಧತ್ತ** — ಸ್ಥಾಪಿಸಿ (ನೀವು) । **ಧಿಯಾವಸುಃ** - ಬುದ್ಧಿಯಿಂದ, (ಕರ್ಮದಿಂದ) ಆರ್ಜಿತವಾದ ಧನವುಳ್ಳವರಾಗಿ । **ಪ್ರಾತಃ** — ಪ್ರಾತಃಕಾಲದಲ್ಲಿ । **ಮಕ್ಷೂ** - ಶೀಘ್ರವಾಗಿ । **ಜಗಮ್ಯಾತ್** - (ನಮ್ಮ ರಕ್ಷಣೆಗಾಗಿ) ಬನ್ನಿ

॥ ಭಾವಾರ್ಥ ॥

ಮರುದ್ದೇವತೆಗಳೇ, ಶತ್ರುನಾಶಕರಾದ, (ಚಿರಾಯುಗಳಾದ) ವೀರವಂತರಾದ ಪುತ್ರರನ್ನು, ಶತಸಹಸ್ರ ಸಂಖ್ಯಾಕರಾದ (ಅಸಂಖ್ಯಾಕರಾದ) (ದಿನೇ ದಿನೇ) ಅಭಿವೃದ್ಧಿಯಾಗುವ ದ್ರವ್ಯವನ್ನೂ ನಮಗೆ ಅನುಗ್ರಹಿಸಿ ಮತ್ತೂ ನಮ್ಮನ್ನು ರಕ್ಷಣೆಮಾಡಲು ಪ್ರಾತಃಕಾಲದಲ್ಲಿ ಶೀಘ್ರವಾಗಿ ಬನ್ನಿ

## English Translation

Grant us, Maruts, durable riches, attended by posterity, and mortifying to our enemies; (riches) reckoned by hundred and thousands, and ever increasing; may they who have acquired wealth by pious acts, come hither quickly in the morning.

॥ ವಿಶೇಷವಿಷಯಗಳು ॥

ಏಕಾದಶಿನವೆಂಬ ಯಾಗದಲ್ಲಿ ಮರುದ್ದೇವತೆಗಳನ್ನುದ್ದೇಶಿಸಿ ಮಾಡುವ ಪಶುವಿನ ವಪಾಹೋಮದಲ್ಲಿ **ನೂ ಷ್ಠಿರಂ** ಎಂಬ ಈ ಋಕ್ಕನ್ನು ಯಾಜ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಶುಚೀ ವೋ ಹವ್ಯಾಮರುತಃ ಶುಚೀನಾಂ ನೂ ಷ್ಠಿರಂ ಮರುತೋ ವೀರವಂತಂ** ಎಂಬ ಸೂತ್ರವು ನಿರ್ದೇಶಿಸುವುದು. (೩ ೩-೭)

ಏಕಾದಶ ಎಂದು ಹೆಸರುಳ್ಳ ಮರುದ್ದೇವತಾಕವಾದ ಪಶುವಿನ ವಪಾಯಾಗದಲ್ಲಿ "ನೂ ಷ್ಠಿರಂ" ಎಂಬ ಈ ಮಂತ್ರವು ಯಾಜ್ಯಾನುವಾಕ್ಯವಾಗಿ ಇರುವುದು. "ಶುಚೀ ವೋ ಹವ್ಯಾ ಮರುತಃ ಶುಚೀನಾಂ, ನೂ ಷ್ಠಿರಂ ಮರುತೋ ವೀರವಂತಂ' ಎಂಬದಾಗಿ (ಆಶ್ವ ಶ್ರೌ ೩-೭) ಆಶ್ವಲಾಯನ ಶ್ರೌತಸೂತ್ರದಲ್ಲಿ ಉಕ್ತವಾಗಿರುವುದು

**ಋತೀಷಾಹಂ—ಗಂತೄಣಾಂ ಶತ್ರೂಣಾಮಭಿಭವಿತಾರಂ ।** ನಮ್ಮನ್ನು ಜಯಿಸಲು ಬರುವ ಶತ್ರುಗಳನ್ನು ನಿಗ್ರಹಮಾಡುವ ಸಾಮರ್ಥ್ಯದಿಂದ ಕೂಡಿರುವ ಪುತ್ರರೂಪವಾದ ಧನವನ್ನು ನಮಗೆ ಕೊಡಿರಿ ಎಂದು ಮರುದ್ದೇವತೆಗಳನ್ನು ಕುರಿತು ಪ್ರಾರ್ಥನೆಯು ಶತಿನಂ, ಸಹಸ್ರಿಣಂ ಶೂಶುವಾಂಸಂ ಎಂಬ ದ್ವಿತೀಯಾಂತ ಪದಗಳು ರಯಿಂ ಎಂಬ ಪದಕ್ಕೆ ವಿಶೇಷಣವನ್ನಾಗಿ ಸಾಯಣರು ಅರ್ಥಮಾಡಿರುವರು ಮತ್ತು ರಯಿಂ ಎಂಬ ಪದವು ಪುತ್ರರೂಪವಾದ ಧನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದೆಂದು ಅರ್ಥವನ್ನು ಹೇಳಿರುವರು ಸ್ಕಂದಸ್ವಾಮಿಗಳು ವೀರವಂತಂ ಎಂಬ ಪದಕ್ಕೆ ಪುತ್ರಪೌತ್ರರಿಂದ ಕೂಡಿರುವ ಧನವನ್ನು ಕೊಡಿರಿ ಎಂದು ಅರ್ಥವನ್ನು ಹೇಳಿ, ಶತಿನಂ ಸಹಸ್ರಿಣಂ ಎಂಬ ಪದಗಳೂ, ಬಹಳವಾದ ಧನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುವು ಎಂದು ಅರ್ಥಮಾಡಿರುತ್ತಾರೆ

**ಧಿಯಾವಸುಃ ಪ್ರಾತಃ ಮಕ್ಷು ಜಗಮ್ಯಾತ್—ಧಿಯಾ ಬುದ್ಧ್ಯಾ ಕರ್ಮಣಾ ವಾ ಪ್ರಾಪ್ತಧನಃ ಮರುದ್ಗಣಃ ಪ್ರಾತಃಕಾಲೇ ಅಸ್ಮದ್ರಕ್ಷಣಾಯ ಆಗಚ್ಛತು ।** ಕಾರ್ಯಗಳನ್ನು ಮಾಡುವ ಕ್ರಮವನ್ನೂ ಕೂಡ

ಚೆನ್ನಾಗಿ ಬುದ್ಧಿಪೂರ್ವಕವಾಗಿ ವಿಮರ್ಶೆಮಾಡಿ ಆಯಾಯ ಕರ್ಮಗಳನ್ನು ಆಚರಿಸಿ ಧನವನ್ನು ಹೊಂದಿರುವ ಮರುದ್ದೇವತೆಗಳು ತಮ್ಮ ಸಂಘವೆಲ್ಲದರೊಡನೆ ನಮ್ಮ ರಕ್ಷಣೆಗಾಗಿ ಪ್ರಾತಃಕಾಲದಲ್ಲಿ ಬೇಗನೆ ಬರಲಿ ಎಂದು ಪ್ರಾರ್ಥನೆಯು.

ಮಕ್ಷು ಎಂಬ ಶಬ್ದವು ನು, ದ್ರವತ್ ಓಷಮ್ ಮೊದಲಾದ ಇಪ್ಪತ್ತಾರು ಕ್ಷಿಪ್ರನಾಮಗಳ (ನಿ. ೩-೯) ಮಧ್ಯದಲ್ಲಿ ಉಕ್ತವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ನೂ ಷ್ಠಿರಮ್ ಋಚಿ ತೆನುಘ**—(ಪಾ. ಸೂ. ೬-೩-೧೩೩) ಎಂಬುದರಿಂದ ನು ಎಂಬುದಕ್ಕೆ ದೀರ್ಘ ಬರುತ್ತದೆ. ನೂ ಸ್ಥಿರಂ ಎಂದಿರುವಾಗ **ಪೂರ್ವಪದಾತ್** (ಪಾ. ಸೂ. ೮-೩-೧೦೬) ಎಂಬುದರಿಂದ ಷತ್ವ ಬರುತ್ತದೆ. ಥಕಾರಕ್ಕೆ ಷ್ಟುತ್ವದಿಂದ ಠಕಾರಾದೇಶ. ನೂ ಷ್ಠಿರಮ್ ಎಂದು ರೂಪವಾಗುತ್ತದೆ.

**ಮರುತಃ**—ಆಮಂತ್ರಿತ ನಿಘಾತಸ್ವರದಿಂದ ಸರ್ವಾನುದಾತ್ತವಾಗುತ್ತದೆ.

**ಋತೀಷಾಹಮ್**- ಋ ಗತೌ ಧಾತು ಕರ್ತ್ರರ್ಥದಲ್ಲಿ ಕ್ತಿಚ್ ಪ್ರತ್ಯಯ ಋತಿ ಎಂದು ರೂಪವಾಗುತ್ತದೆ. ಷಹ ಅಭಿಭವೇ ಧಾತು **ಛಂದಸಿ ಸಹಃ** ಎಂಬ ಸೂತ್ರದಿಂದ ಣ್ವಿ ಪ್ರತ್ಯಯ ಣಿತ್ತಾದುದರಿಂದ ಧಾತುವಿನ ಉಪಧೆಗೆ ವೃದ್ಧಿ ಬರುತ್ತದೆ. **ವೇರಪೃಕ್ತಸ್ಯ** ಸೂತ್ರದಿಂದ ಉಳಿದಿರುವ ಪ್ರತ್ಯಯ ವಕಾರಕ್ಕೆ ಲೋಪ. **ಅನ್ಯೇಷಾಮಪಿ ದೃಶ್ಯತೇ** ಎಂಬ ಪಾಣಿನಿ ಸೂತ್ರದಿಂದ ಪೂರ್ವಪದಕ್ಕೆ ದೀರ್ಘ. ಋತೀಷಾಟ್ ಶಬ್ದವಾಗುತ್ತದೆ. ಇಲ್ಲಿ ಧಾತು ಸಕಾರಕ್ಕೆ **ಸುಷಾಮಾದಿಷು ಚ** ಎಂಬುದರಿಂದ ಷತ್ವ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ. ಕಾರಕಪೂರ್ವಪದಕವಾಗಿರುವುದರಿಂದ **ಗತಿಕಾರಕೋಪಪದಾತ್ ಕೃತ್** ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಆಕಾರ ಉದಾತ್ತವಾಗುತ್ತದೆ.

**ಧತ್ತ**— ಹಿಂದಿನ ಮಂತ್ರದಲ್ಲಿ ಪ್ರಕ್ರಿಯಾ ತೋರಿಸಿದೆ. ತನಾದೇಶ ಮಾತ್ರ ಇಲ್ಲಿ ಬರುವುದಿಲ್ಲ.

**ಸಹಸ್ರಿಣಂ**—**ಅತ ಇನಿಠನೌ** ಎಂಬುದರಿಂದ ಮತ್ವರ್ಥದಲ್ಲಿ ಇನಿಪ್ರತ್ಯಯ. **ಅಟ್‌ಕುಪ್ವಾಙ್**—ಸೂತ್ರದಿಂದ ನಕಾರಕ್ಕೆ ಣತ್ವ. ಪ್ರತ್ಯಯಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಶೂಶುವಾಂಸಮ್**—ಟುಓಶ್ವಿ ಗತಿವೃದ್ಧ್ಯೋಃ ಧಾತು. **ಆದಿರ್ಞಿಟುಡವಃ** ಎಂಬುದರಿಂದ ಆದಿಯ ಟು ಎಂಬುದು ಇತ್ತಾಗುತ್ತದೆ. ಓಕಾರವೂ ಇತ್ತಾಗುತ್ತದೆ. ಇದಕ್ಕೆ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಲಿಟ್‌ಸ್ಥಾನದಲ್ಲಿ ಕ್ವಸು ಪ್ರತ್ಯಯ. ಕಿತ್ತಾದುದರಿಂದ ಇದು ಪರದಲ್ಲಿರುವಾಗ **ವಿಭಾಷಾ ಶ್ವೇಃ** (ಪಾ. ಸೂ. ೬-೧-೩೦) ಎಂಬುದರಿಂದ ಧಾತುವಿಗೆ ಸಂಪ್ರಸಾರಣ ಬರುತ್ತದೆ. **ಸಂಪ್ರಸಾರಣಾಚ್ಚ** ಸೂತ್ರದಿಂದ ಏಕಾರಕ್ಕೆ ಪೂರ್ವರೂಪ. ಸಂಪ್ರಸಾರಣಂ ತದಾಶ್ರಯಕಾರ್ಯಂ ಚ ಬಲವತ್ ಎಂಬ ವಚನದಿಂದ ಮೊದಲು ಸಂಪ್ರಸಾರಣ ಬಂದಮೇಲೆ ಆಮೇಲೆ ಕ್ವಸು ನಿಮಿತ್ತಕವಾಗಿ ಧಾತುವಿಗೆ ದ್ವಿತ್ವ ಶುಶುವಸ್ ಶಬ್ದವಾಗುತ್ತದೆ. ಇದು ತುಜಾದಿಯಲ್ಲಿ ಸೇರಿರುವುದರಿಂದ **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘಬರುತ್ತದೆ. ಪ್ರತ್ಯಯವು ವಲಾದಿಯಾದರೂ ವಸುವಿನಲ್ಲಿ **ವಸ್ವೇಕಾಜಾದ್ಘಸಾಮ್** (ಪಾ. ಸೂ. ೭-೨-೬೭) ಎಂಬ ಸೂತ್ರದಿಂದ

ನಿಯಮವುಮಾಡಿರುವುದರಿಂದ ಇಲ್ಲಿ ದ್ವಿರ್ವಚನವು ಅನೇಕಾಚಾದುದರಿಂದ ಇಡಾಗವು ಬರುವುದಿಲ್ಲ. ದ್ವಿತೀಯಾ ಏಕವಚನದಲ್ಲಿ ಪ್ರತ್ಯಯವು ಉಗಿತ್ತಾದುದರಿಂದ ನುಮಾಗವು ಬರುತ್ತದೆ **ಅತ್ವಸಂತಸ್ಯ** —ಸೂತ್ರದಿಂದ ಉಪಧಾದೀರ್ಘ ಬರುತ್ತದೆ. ನುಮಿನ ನಕಾರಕ್ಕೆ **ನಶ್ಚಾಪದಾಂತಸ್ಯ ಝಲಿ** ಸೂತ್ರದಿಂದ ಅನುಸ್ವಾರ ಶೂಶುವಾಂಸಮ್ ಎಂದು ರೂಪವಾಗುತ್ತದೆ ಪ್ರತ್ಯಯದ ಆದ್ಯುದಾತ್ತಸ್ವರದಿಂದ ವಕಾರೋತ್ತರ ಅಕಾರವು ಉದಾತ್ತವಾಗುತ್ತದೆ

**ಧಿಯಾ ವಸುಃ**— ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ ಧಿಯಾ ಎಂಬಲ್ಲಿ ವ್ಯತ್ಯಯದಿಂದ ಸುಪ್ಪಿಗೆ ಲುಕ್ ಬರುವುದಿಲ್ಲ **ಸಾವೇಕಾಚಃ** ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ ಸಮಾಸದಲ್ಲಿ ಅದೇ ಉಳಿಯುತ್ತದೆ. ॥ ೧೫ ॥

ಅರವತ್ತನಾಲ್ಕನೇ ಸೂಕ್ತವು ಸಮಾಪ್ತವು



# ಅರವತ್ತೈದನೆಯ ಸೂಕ್ತವು

ದ್ವಾದಶೇಽನುವಾಕೇ ನವ ಸೂಕ್ತಾನಿ । ತತ್ರ ಪಶ್ವೇತ್ಯಾದೀನಿ ಷಟ್ ಸೂಕ್ತಾನಿ ದ್ವೈಪದಾನಿ । ತೇಷ್ವಧ್ಯಯನಸಮಯೇ ದ್ವಿಪದೇ ದ್ವೇ ದ್ವೇ ಋಚೌ ಚತುಷ್ಪದಾಮೇಕೈಕಾಮೃಚಂ ಕೃತ್ವಾ ಸಮಾಮ್ನಾಯತೇ । ಅಯುಕ್ಸಂಖ್ಯಾಸು ತು ಯಾಂತ್ಯಾತಿರಿಚ್ಯತೇ ಸಾ ತಥೈವಾಮ್ನಾಯತೇ । ಪ್ರಾಯೇಣಾರ್ಥೋಽಪಿ ದ್ವಯೋರ್ದ್ವಿಪದಯೋರೇಕ ಏವ । ಪ್ರಯೋಗೇ ತು ತಾಃ ಪೃಥಕ್ ಪೃಥಕ್ ಶಂಸನೀಯಾಃ । ಸೂತ್ರ್ಯತೇ ಹಿ । ಪಶ್ವಾ ನ ತಾಯುಮಿತಿ ದ್ವೈಪದಂ । ಆ ೮-೧೨ । ಇತಿ ॥ ತತ್ರ ಪಶ್ವೇತಿ ದಶರ್ಚಂ ಪ್ರಥಮಂ ಸೂಕ್ತಂ । ಅತ್ರಾನುಕ್ರಮ್ಯತೇ । ಪಶ್ವಾ ದಶ ಪರಾಶರಃ ಶಾಕ್ತ್ಯೋ ದ್ವೈಪದಂ ತದಿತಿ । ಶಕ್ತಿಪುತ್ರಃ ಪರಾಶರ ಋಷಿಃ । ತತ್ಪುತ್ರತ್ವಂ ಚ ಸ್ಮರ್ಯತೇ । ವಸಿಷ್ಠಸ್ಯ ಸುತಃ ಶಕ್ತಿಃ ಶಕ್ತೇಃ ಪುತ್ರಃ ಪರಾಶರ ಇತಿ । ದ್ವಿಪದಾ ವಿರಾಟ್ ಛಂದಃ । ವಿಂಶತಿಕಾ ದ್ವಿಪದಾ ವಿರಾಜಃ । ಅನು ೧೨-೮ । ಇತಿ ಹಿ ತಲ್ಲಕ್ಷಣಂ । ಅಗ್ನಿರ್ದೇವತಾ । ಪರಮಾಗ್ನೇಯಮೈಂದ್ರಾದಿತಿ ಪರಿಭಾಷಿತಂ । ಪಶ್ವಾ ನ ತಾಯುಮಿತ್ಯಾರಭ್ಯೇತ್ಥಾ ಹೀತ್ಯತಃ ಪ್ರಾಕ್ ಯತ್ಸೂಕ್ತಜಾತಂ ತತ್ಸರ್ವಮಾಗ್ನೇಯಮಿತಿ ತಸ್ಯಾರ್ಥಃ । ದ್ವೈಪದಂ ತದಿತ್ಯುಕ್ತತ್ವಾದಿದಮಾದೀನಿ ಷಟ್ ಸೂಕ್ತಾನಿ ತುಹ್ಯಾದಿಪರಿಭಾಷಯಾ ದ್ವೈಪದಾನಿ ॥ ದಶಮೇಽಹನಿ ವೈಶ್ವದೇವಶಸ್ತ್ರೇ ವೈಶ್ವದೇವಸೂಕ್ತಾತ್ಪೂರ್ವಮೇತದ್ದ್ವೈಪದಂ ಸೂಕ್ತಂ ಶಂಸನೀಯಂ । ಸೂತ್ರಮುದಾಹೃತಂ ॥

ಅನುವಾದವು--**ಪಶ್ವಾ ನ ತಾಯುಂ** ಎಂಬ ಈ ಸೂಕ್ತದಿಂದ ಪ್ರಥಮ ಮಂಡಲದ ಹನ್ನೆರಡನೆಯ ಅನುವಾಕವು ಪ್ರಾರಂಭವಾಗುವುದು ಈ ಅನುವಾಕದಲ್ಲಿ (೬೫-೭೩) ಒಂಭತ್ತು ಸೂಕ್ತಗಳಿರುವವು ಅವುಗಳಲ್ಲಿ **ಪಶ್ವಾ ನ ತಾಯುಂ** ಎಂದು ಮೊದಲಾಗುವ ಆರು ಸೂಕ್ತಗಳು ದ್ವಿಪದಾ ವಿರಾಟ್ ಎಂಬ ಛಂದಸ್ಸಿನ ಋಕ್ಕುಗಳಿಂದ ಕೂಡಿರುವವು ದ್ವಿಪದಾ ಛಂದಸ್ಸೆಂದರೆ ಎರಡು ಪಾದಗಳಿರುವ ಋಕ್ಕು ಅಧ್ಯಯನಮಾಡುವಾಗ ಎರಡೆರಡು ಪಾದಗಳುಳ್ಳ ಎರಡು ಋಕ್ಕನ್ನು ಸೇರಿಸಿ ನಾಲ್ಕು ಪಾದಗಳಿರುವ ಒಂದು ಋಕ್ಕಿನಂತೆ ಪರಿಗಣಿಸಿ ಪಠಿಸುವರು ಋಕ್ಸಂಖ್ಯೆಗಳನ್ನು ತಿಳಿಸುವಾಗ ಎರಡೆರಡು ಪಾದಗಳಂತೆ ಸೇರಿಸಿ ಆಗುವ ಅರ್ಧ ಋಕ್ಕನ್ನು ದ್ವಿಪದಾ ವಿರಾಟ್ ಎಂಬ ಛಂದಸ್ಸಿನ ಒಂದು ಋಕ್ಕೆಂದು ಕೆಲವರು ಹೇಳುವರು ಮತ್ತೆ ಕೆಲವರು ನಾಲ್ಕು ಪಾದಗಳನ್ನು ಸೇರಿಸಿ ಆಗುವ ಎರಡು ಅರ್ಧ ಋಕ್ಕುಗಳನ್ನು ಸೇರಿಸಿ ಒಂದು ಋಕ್ಕಂತೆ ಭಾವಿಸಿ ಇದರಂತೆ ಋಕ್ಸಂಖ್ಯೆಯ ಪರಿಮಾಣವನ್ನು ಹೇಳುವರು ಸಾಧಾರಣವಾಗಿ ಋಕ್ಕುಗಳಿಗೆ ಅರ್ಥಮಾಡುವಾಗ ಈ ಎರಡನೆಯ ಕ್ರಮವೇ ಅನುಸರಿಸಲ್ಪಡುವುದು. ಪ್ರಯೋಗ ಮತ್ತು ವಿನಿಯೋಗ ಕ್ರಮದಲ್ಲಿ ಎರಡು ಪಾದಗಳನ್ನು ಸೇರಿಸಿ ಆಗುವ ಅರ್ಧ ಋಕ್ಕನ್ನೇ ಒಂದು ಋಕ್ಕೆಂದು ಪರಿಗಣಿಸಲಾಗುವುದು ಆಶ್ವಲಾಯನಶ್ರೌತಸೂತ್ರದಲ್ಲಿ **ಪಶ್ವಾ ನ ತಾಯುಮಿತಿ ದ್ವೈಪದಂ** ಎಂದು ಸೂತ್ರ ವಿರುವುದು. (ಆ. ೮ ೧೨) ಹಿಂದೆ ಹೇಳಿದಂತೆ ಈ ವಿಧವಾದ ಛಂದಸ್ಸುಗಳುಳ್ಳ ಆರು ಸೂಕ್ತಗಳಲ್ಲಿ **ಪಶ್ವಾ ನ** ಎಂಬ ಮೊದಲನೆಯ ಸೂಕ್ತದಲ್ಲಿ ಹತ್ತು (ಎರಡೆರಡು ಪಾದಗಳು ಸೇರಿ ಆಗುವ ಅರ್ಧ ಋಕ್ಕುಗಳು) ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಪಶ್ವಾ ದಶ ಪರಾಶರಃ ಶಾಕ್ತ್ಯೋ ದ್ವೈಪದಂ ತದಿತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಶಕ್ತಿಪುತ್ರನಾದ ಪರಾಶರನೆಂಬುವನು ಋಷಿಯು ಅದು ಹೇಗೆಂದರೆ, ವಸಿಷ್ಠಋಷಿಯ ಪುತ್ರನಿಗೆ ಶಕ್ತಿಯೆಂದು ಹೆಸರು ಆ ಶಕ್ತಿಯ ಪುತ್ರನಿಗೆ ಪರಾಶರನೆಂದು ಹೆಸರು ಈ ಸೂಕ್ತದ ಋಕ್ಕುಗಳು ದ್ವಿಪದಾ ವಿರಾಟ್ ಎಂಬ ಛಂದಸ್ಸಿನವು ಅನುಕ್ರಮಣಿಕೆಯಲ್ಲಿ **ವಿಂಶತಿಕಾ ದ್ವಿಪದಾ ವಿರಾಜಃ ।** ಎಂದರೆ ದ್ವಿಪದಾ ವಿರಾಟ್ ಛಂದಸ್ಸಿನ ಋಕ್ಕಿನಲ್ಲಿ ಇಪ್ಪತ್ತು ಅಕ್ಷರಗಳಿರುವವು ಎಂದು ಹೇಳಿರುವುದು. (ಅನು ೧೨-೮) ಈ ಸೂಕ್ತಕ್ಕೆ ಅಗ್ನಿಯು ದೇವತೆಯು. ಮತ್ತು ಹಿಂದೆ ಹೇಳಿದಂತೆ ಈ ವಿಧವಾದ ಛಂದಸ್ಸಿನಿಂದ ಕೂಡಿದ ಆರು ಸೂಕ್ತಗಳಿಗೂ ಅಗ್ನಿಯೇ ದೇವತೆಯು. ಅದರಂತೆಯೇ ಆರು ಸೂಕ್ತಗಳೂ ದ್ವಿಪದಾ ವಿರಾಟ್ ಛಂದಸ್ಸುಗಳು. ಯಜ್ಞದ ಹತ್ತನೆಯ ದಿವಸದಲ್ಲಿ ವೈಶ್ವದೇವ ಶಸ್ತ್ರಮಂತ್ರಗಳಲ್ಲಿ ವೈಶ್ವದೇವಸೂಕ್ತಗಳನ್ನು ಪಠಿಸುವುದಕ್ಕೆ ಮೊದಲೇ ಈ ಸೂಕ್ತವನ್ನು ಪಠಿಸಬೇಕೆಂದು ಸೂತ್ರದಲ್ಲಿ ಹೇಳಿರುವುದು



## ಸೂಕ್ತ—೬೫

|| ಓಂ ||

|| ಮಂಡಲ—೧ || ಅನುವಾಕ—೧೨ || ಸೂಕ್ತ—೬೫ ||

|| ಅಷ್ಟಕ—೧ || ಅಧ್ಯಾಯ—೫ || ವರ್ಗ—೯ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೫ (೧೦) ||

|| ಋಷಿಃ—ಪಾರಾಶರಃ ಶಾಕ್ತ್ಯಃ ||

ದೇವತಾ—ಅಗ್ನಿಃ ||

ಛಂದಃ—ದ್ವಿಪದಾ ವಿರಾಟ್ ||

|| ಸಂಹಿತಾಪಾಠಃ ||

ಪಶ್ವಾ ನ ತಾಯುಂ ಗುಹಾ ಚತಂತಂ ನಮೋ ಯುಜಾನಂ
ನಮೋ ವಹಂತಂ |
ಸಜೋಷಾ ಧೀರಾಃ ಪದೈರನು ಗ್ಮನ್ನುಪ ತ್ವಾ ಸೀದನ್ವಿಶ್ವೇ
ಯಜತ್ರಾಃ || ೧ || ೨ ||

|| ಪದಪಾಠಃ ||

ಪಶ್ವಾ | ನ | ತಾಯುಂ | ಗುಹಾ | ಚತಂತಂ | ನಮಃ | ಯುಜಾನಂ | ನಮಃ |
ವಹಂತಂ |
ಸಽಜೋಷಾಃ | ಧೀರಾಃ | ಪದೈಃ | ಅನು | ಗ್ಮನ್ | ಉಪ | ತ್ವಾ | ಸೀದನ್ |
ವಿಶ್ವೇ | ಯಜತ್ರಾಃ || ೧ || ೨ ||

॥ ಸಾಯಣಭಾಷ್ಯಂ ॥

ಧೀರಾ ಮೇಧಾವಿನೋ ದೇವಾಃ ಸಜೋಷಾಃ ಸಮಾನಪ್ರೀತಯಃ ಸಂತೋ ಹೇ ಅಗ್ನೇ ತ್ವಾಂ ಪದೈರ್ಮಾರ್ಗೇ ಪಾದಕೃತೈರ್ಲಾಂಛನೈರನು ಗ್ಮನ್ । ಅನ್ವಗಮನ್ । ಕೀದೃಶಂ । ಪಶ್ವಾಪಹೃತೇನ ಪಶುನಾ ಸಹ ವರ್ತಮಾನಂ ತಾಯುಂ ನ । ತಾಯುರಿತಿ ಸ್ತೇನನಾಮ । ಯಥಾ ಸ್ತೇನಃ ಪರಕೀಯಂ ಪಶ್ವಾದಿಧನಮಪಹೃತ್ಯ ದುಷ್ಪ್ರವೇಶೇ ಗಿರಿಗಹ್ವರೇ ವರ್ತತೇ ತದ್ವದ್ಗುಹಾ ಚತಂತಂ ಅಬ್ರೂಪಾಯಾಂ ಗುಹಾಯಾಂ ಗಚ್ಛಂತಂ ವರ್ತಮಾನಂ । ಚತತಿರ್ಗತಿಕರ್ಮಾ । ತಥಾ ಚ ತೈತ್ತಿರೀಯೈರಗ್ನೇರಪ್ಸು ಪ್ರವೇಶಃ ಸಮಾಮ್ನಾಯತೇ । ಸ ನಿಲಾಯತ ಸೋಽಪಃ ಪ್ರಾವಿಶತ್ । ತೈ. ಸಂ ೨-೬-೬-೧ । ಇತಿ । ಯದ್ವಾ । ಅಶ್ವತ್ಥಗುಹಾಯಾಂ ವರ್ತಮಾನಂ । ಶ್ರೂಯತೇ ಚ । ಅಗ್ನಿರ್ದೇವೇಭ್ಯೋ ನಿಲಾಯತ । ಅಶ್ವೋ ರೂಪಂ ಕೃತ್ವಾ ಸೋಽಶ್ವತ್ಥೇ ಸಂವತ್ಸರಮತಿಷ್ಠದಿತಿ । ತಥಾ ನಮೋ ಯುಜಾನಂ ಹವಿರ್ಲಕ್ಷಣ-ಮನ್ನಮಾತ್ಮನಾ ಸಂಯುಜಾನಂ ನಮೋ ವಹಂತಂ ದೇವೇಭ್ಯಃ ಪ್ರತ್ತಂ ಹವಿರ್ವಹಂತಂ । ಯಜತ್ರಾ ಯಜನೀಯಾ ವಿಶ್ವೇ ಸರ್ವೇ ದೇವಾ ಹೇ ಅಗ್ನೇ ತ್ವಾ ತ್ವಾಮುಪ ಸೀದನ್ । ಸಮೀಪಂ ಪ್ರಾಪ್ನುವನ್ । ಪದೃಶುರಿತ್ಯರ್ಥಃ ॥ ಪಶ್ವಾ । ತೃತೀಯೈಕವಚನಸ್ಯ ಜಸಾದಿಷು ಛಂದಸಿ ವಾವಚನಮಿತಿ ನಾಭಾವಾ-ಭಾವಃ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಗುಹಾ । ಭಿದಾದಿಷು ಪಾಠಾದಙ್ಪ್ರತ್ಯಯಾಂತಃ । ವೃಷಾದಿಷು ಪಾಠಾದಾದ್ಯುದಾತ್ತತ್ವಂ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಯುಜಾನಂ । ಶಾನಚಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಸಜೋಷಾಃ । ಜುಷೀ ಪ್ರೀತಿಸೇವನಯೋಃ । ಸಮಾನಂ ಜುಷಂತ ಇತಿ ಸಜೋಷಸಃ । ಸಮಾನಸ್ಯ ಛಂದಸೀತಿ ಸಭಾವಃ । ಕೃದುತ್ತರಪದಪ್ರಕೃತಿಸ್ವರತ್ವಂ । ಸುಪಾಂ ಸುಲುಗಿತಿ ಜಸಃ ಸುಃ । ಗ್ಮನ್ । ಗಮೇರ್ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ಗಮಹನೇ-ತ್ಯಾದಿನೋಪಧಾಲೋಪಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಯಜತ್ರಾಃ । ಅಮಿನಕ್ಷೀತ್ಯಾದಿನಾತ್ರನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

(ಅಗ್ನೇ—ಅಗ್ನಿಯೇ) । **ಧೀರಾಃ**— ಧೀರರಾದ, ಮೇಧಾವಿಗಳಾದ । **ಸಜೋಷಾಃ**—ಪ್ರೀತಿಯುಕ್ತರಾದ ದೇವತೆಗಳು । **ಪಶ್ವಾ**—(ಅಪಹೃತವಾದ) ಪಶುಯುಕ್ತನಾದ । **ತಾಯುಂ ನ**—ಕಳ್ಳನಂತೆ । **ಗುಹಾ**—(ಜಲರೂಪವಾದ) ಗುಹೆಯಲ್ಲಿ (ಅಶ್ವತ್ಥರೂಪವಾದ ಗುಹೆಯಲ್ಲಿ) । **ಸಚಂತಂ**—ಇರುವ (ನಿನ್ನನ್ನು) । **ಪದೈಃ**—(ಮಾರ್ಗದಲ್ಲಿರುವ) ಪಾದಲಾಂಛನಗಳಿಂದ । **ಅನು ಗ್ಮನ್**—ಅನುಸರಿಸಿದರು । **ಯಜತ್ರಾಃ**—ಯಜ್ಞದಲ್ಲಿ ಪೂಜಾರ್ಹರಾದ । **ವಿಶ್ವೇ**—ಎಲ್ಲಾ ದೇವತೆಗಳೂ । **ನಮೋ ಯುಜಾನಂ**—(ತನಗಾಗಿ) ಹವಿಸ್ಸನ್ನು ಸ್ವೀಕರಿಸುವ । **ನಮೋ ವಹಂತಂ**— (ಇತರ ದೇವತೆಗಳಿಗಾಗಿ) ಹವಿಸ್ಸನ್ನು ಕೊಂಡುಹೋಗುವ । **ತ್ವಾ**—ನಿನ್ನನ್ನು । **ಉಪಸೀದನ್** —ಪ್ರಾಪ್ತರಾದರು

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಯಜ್ಞಗಳಲ್ಲಿ ಸ್ವತಃ ನಿನಗಾಗಿಯೂ ಮತ್ತು ಇತರ ದೇವತೆಗಳಿಗೆ ತೆಗೆದುಕೊಂಡು ಹೋಗಿ ಕೊಡುವುದಕ್ಕಾಗಿಯೂ, ಹವಿಸ್ಸನ್ನು ಸ್ವೀಕರಿಸುತ್ತೀ ಇಂತಹ ನೀನು ನೀರಿನಲ್ಲಿ ಅಡಗಿರುವಾಗ, ಧೀರರೂ ಪ್ರೀತಿಯುಕ್ತರೂ, ಯಜ್ಞದಲ್ಲಿ ಹವಿರ್ದಾನಕ್ಕೆ ಪಾತ್ರರೂ ಆದ, ದೇವತೆಗಳೆಲ್ಲರೂ, ನಿನ್ನ ಪದಲಾಂಛನಗಳಿಂದ, ಪಶುಗಳನ್ನು ಅಪಹರಿಸಿಕೊಂಡು ಹೋಗಿರುವ ಕಳ್ಳನನ್ನು ಪಶುಗಳ ಹೆಜ್ಜೆಯ ಗುರುತಿನಿಂದ ಕಂಡು ಹಿಡಿಯುವಂತೆ, ಅನುಸರಿಸಿ, ನಿನ್ನನ್ನು ಕಂಡರು.

## English Translation.

The intelligent Divinities, all equally pleased followed you Agni, by your footmarks, when hiding in the hollow (of the waters), like a thief (who has stolen) an animal ; you receiving oblations and carrying them to the Gods all the Gods, worthy of adoration, sit down near you.

॥ ವಿಶೇಷವಿಷಯಗಳು ॥

**ಪಶ್ವಾ ತಾಯುಂ ನ— ಅಪಹೃತೇನ ಪಶುನಾ ಸಹ ವರ್ತಮಾನಂ । ತಾಯುರಿತಿ ಸ್ತೇನ ನಾಮ । ಯಥಾ ಸ್ತೇನಃ ಪರಕೀಯಂ ಪಶ್ವಾದಿಧನಮಪಹೃತ್ಯ ದುಷ್ಪ್ರವೇಶೇ ಗಿರಿಗಹ್ವರೇ ವರ್ತತೇ ತದ್ವತ್ ।** ತಾಯು ಎಂಬ ಪದವು ತೃಪ್ಯತಿ. ತಸ್ಕರ, ಮೊದಲಾದ ಹದಿನಾಲ್ಕು ಸ್ತೇನ ನಾಮಗಳ (ನಿ ೩-೧೯) ಮಧ್ಯದಲ್ಲಿ ಕಳ್ಳನೆಂಬ ಅರ್ಥದಲ್ಲಿ ಉಕ್ತನಾಗಿರುವುದು ನ ಎಂಬುವುದು ಉಪಮಾರ್ಥದಲ್ಲಿ (ನಿ. ೧-೪) ಇವ, ನ, ಚಿತ್, ನು. ಎಂಬ ಶಬ್ದಗಳ ಮಧ್ಯದಲ್ಲಿ ಪಠಿತವಾಗಿರುವುದು. ಕಳ್ಳನು ಇತರರ ಧನವನ್ನು ಅಪಹರಿಸಿ ಯಾವನೂ ಪ್ರವೇಶ ಮಾಡಲು ಆಗದಿರುವ ಬೆಟ್ಟದ ಗುಹೆಯೇ ಮೊದಲಾದ ಪ್ರದೇಶದಲ್ಲಿ ವಾಸಮಾಡುವ ಹಾಗೆ ಅಗ್ನಿದೇವನು ಯಾರಿಗೂ ತಿಳಿಯದ ಹಾಗೆ ನೀರಿನಲ್ಲಿ ಗೂಢವಾಗಿದ್ದನೆಂದು ಅರ್ಥವು ಪಶ್ವಾ ನ ತಾಯುಂ ಎಂಬ ಎರಡು ಸೂಕ್ತಗಳಿಂದ ಅಗ್ನಿಯ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳುವರು. ಅಗ್ನಿಯು ವರುಣನಿಗೆ ಸಂಬಂಧಪಟ್ಟ ಮತ್ತು ಯಮನ ಯಮೀ ಎಂಬ ಸ್ತ್ರೀಯನ್ನು ಅಪೇಕ್ಷಿಸಿ ಭೋಗ ಪಡುತ್ತಿದ್ದುದರಿಂದ ಅವನಿಗೆ ಇನ್ನೊಬ್ಬರ ಸ್ತ್ರೀಯನ್ನು ಭೋಗಿಸಿದ ಕಾರಣ ಮುಪ್ಪು ಬಂದಿತು ಆಗ ಅವನು ಆ ಮುಪ್ಪಿನಿಂದ ಆ ಯಜ್ಞಗಳಲ್ಲಿ ದೇವತೆಗಳಿಗೆ ಕೊಡುವ ಹವಿಸ್ಸುಗಳನ್ನು ತೆಗೆದುಕೊಂಡು ಹೋಗಿ ಕೊಡುವ ಶಕ್ತಿಯೂ ಇಲ್ಲದವನಾಗಿರುವಾಗ ವಜ್ರಾಯುಧವ ಮತ್ತು ವಷಟ್ಕಾರದ ದೆಸೆಯಿಂದ ಅವನಿಗೆ ಭಯವು ಉಂಟಾಯಿತು ಅವನು ಆಹಾರವನ್ನು ಸ್ವೀಕರಿಸದೆ ಇರುವ ಅನಶನ ವ್ರತವನ್ನು ಆಚರಿಸುತ್ತಾ ಉದಕಗಳಲ್ಲಿಯೂ ಮತ್ತು ಮೂಲಿಕೆಗಳಲ್ಲಿಯೂ ಪ್ರವೇಶಿಸಿ ಗೂಢವಾಗಿ ಇದ್ದನು. ಉದಕಗಳು ತಮ್ಮ ಅಮೃತ ರಸದಿಂದ ಅವನನ್ನು ವೃದ್ಧಿಗೊಳಿಸಿದವು. ದೇವತೆಗಳು ಯಮ ಮತ್ತು ವರುಣ ಇವರನ್ನು ಮುಂದಿಟ್ಟುಕೊಂಡು ಅಗ್ನಿಯ ಹತ್ತಿರಕ್ಕೆ ಬಂದು ಇವನಿಗೆ ಮುಪ್ಪಿಲ್ಲದಂತೆಯೇ ಇರುವ ಆಯುಸ್ಸನ್ನು ಅನುಗ್ರಹಿಸಿದರು. ಯಜ್ಞಗಳಲ್ಲಿ ಪ್ರಯಾಜ ಮತ್ತು ಅನುಯಾಜ ಎಂಬ ಹೋಮಗಳ ಮೂಲಕ ಹವಿಸ್ಸಿನ ಭಾಗಗಳನ್ನು ಕೊಟ್ಟು ಹಿಂದಿನ ಹಾಗೆಯೇ ಹವಿಸ್ಸು

ಗಳನ್ನು ಆಯಾಯ ದೇವತೆಗಳಿಗೆ ಹೊತ್ತುಕೊಂಡು ಹೋಗಿ ಕೊಡುವ ಕೆಲಸದಲ್ಲಿ ಇವನನ್ನು ನೇಮಿಸಿದರು. ಈ ಇತಿಹಾಸವು (ಋ. ಸಂ. ೧೦-೫೧-೧) ನೆಯ ಋಕ್ಕಿನಲ್ಲಿ ವಿಸ್ತಾರವಾಗಿ ಹೇಳಲ್ಪಡುವುದು. ಸಶ್ರಾ ನ ತಾಯುಂ ಎಂಬ ಈ ಋಕ್ಕಿನಿಂದ ಸಂಕ್ಷೇಪವಾಗಿ ಇಲ್ಲಿ ವಿವರಿಸಿರುವುದು.

**ಗುಹಾ ಚತಂತಂ—ಅಬ್ರೂಪಾಯಾಂ ಗುಹಾಯಾಂ ಗಚ್ಛಂತಂ ವರ್ತಮಾನಂ। ಚತತಿರ್ಗತಿಕರ್ಮಾ । ತಥಾ ಚ ತೈತ್ತಿರೀಯೈರಪ್ಸು ಅಗ್ನೇಃ ಪ್ರವೇಶಃ ಸಮಾಮ್ನಾಯತೇ—'ಸ ನಿಲಾಯತ ಸೋಽಪಃ ಪ್ರಾವಿಶತ್' (ತೈ. ಸಂ. ೨-೬-೬-೧) ಇತಿ। ಯದ್ವಾ ಅಶ್ವತ್ಥಗುಹಾಯಾಂ ವರ್ತಮಾನಂ। ಶ್ರೂಯತೇ ಚ—'ಅಗ್ನಿರ್ದೇವೇಭ್ಯೋ ನಿಲಾಯತ । ಅಶ್ವೋ ರೂಪಂ ಕೃತ್ವಾ ಸೋಽಶ್ವತ್ಥೇ ಸಂವತ್ಸರಮತಿಷ್ಠತ್' (ತೈ. ಬ್ರಾ. ೧-೧-೩-೯) ಇತಿ।** ನೀರಿನ ರೂಪವಾದ ಗೂಢವಾದ ಪ್ರದೇಶದಲ್ಲಿ ಸಂಚರಿಸುವವನು ಅಥವಾ ವಾಸಮಾಡುವವನು. ಚತ ಧಾತುವು ಇಲ್ಲಿ ಗಮನಾರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. ತೈತ್ತಿರೀಯ ಸಂಹಿತೆಯ (೨-೬-೬-೧) ನೆಯ ಮಂತ್ರದಲ್ಲಿ ಅಗ್ನಿಯು ನೀರಿನಲ್ಲಿ ಪ್ರವೇಶಿಸಿ ಇರುವುದನ್ನು ವಿವರಿಸಿರುವುದು. ಅಥವಾ ಗುಹಾ ಎಂಬ ಶಬ್ದಕ್ಕೆ ಅಶ್ವತ್ಥವೃಕ್ಷವೆಂದು ಅರ್ಥವು. ಅಶ್ವತ್ಥ ವೃಕ್ಷದಲ್ಲಿ ಅಗ್ನಿಯು ಪ್ರವೇಶಿಸಿ ಗೂಢವಾಗಿ ಸಂವತ್ಸರ ಪರ್ಯಂತವಾಗಿಯೂ ವಾಸವಾಗಿದ್ದನು. ತೈತ್ತಿರೀಯ ಬ್ರಾಹ್ಮಣ (೧-೧-೩-೯) ನೇ ವಾಕ್ಯದಲ್ಲಿ ಈ ವಿಷಯವನ್ನು ವಿವರಿಸಿರುತ್ತದೆ ಎಂದು ಸಾಯಣರು ಹೇಳಿರುವರು.

ಸ್ಕಂದಸ್ವಾಮಿಗಳ—**ಗುಹಾ ಗೂಢಂ ಪ್ರಚ್ಛನ್ನಂ, ಚತಂತಂ ನಶ್ಯಂತಂ, ನಮೋ ವಹಂತಂ ಯುಜಾನಂ ಅನ್ನಕಾರಣೇನ ಅಬ್ಲಕ್ಷಣೇನ ಅಪ್ಸು ಪ್ರವಿಶಂತಂ, ನಮೋ ವಹಂತಂ ಅಮೃತರಸಂ ಪಿಬಂತಂ** ಎಂದು ಈ ಪದಗಳನ್ನು ಬೇರೆಯ ವಿಧವಾಗಿ ವಿವರಿಸಿರುವರು. ಈ ಕ್ರಮದಲ್ಲಿ ಅಗ್ನಿಯು ಯಾರಿಗೂ ತನ್ನ ಆಕಾರವನ್ನು ತೋರಿಸದೆ ಗೂಢನಾಗಿ ನಾಶವನ್ನು ಹೊಂದುವುದರಲ್ಲಿ ಸಿದ್ಧನಾಗಿದ್ದನು. **ತೇಭಿಷ್ಟ್ವಾ ಚಾತಯಾಮಸಿ** (ಋ. ಸಂ. ೧೦-೧೫೫-೧) ಎಂಬ ಮಂತ್ರದಲ್ಲಿ ಚತೀಧಾತುವು ನಾಶನರೂಪಾರ್ಥದಲ್ಲಿ ನಿರ್ದಿಷ್ಟವಾಗಿರುವುದು. ನಮಃ ಎಂಬ ಪದವು ಅಂಧಃ, ವಾಜಃ (೨-೯) ಎಂಬ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಉಕ್ತವಾಗಿರುವುದರಿಂದ ನಮಃ ಎಂದರೆ ಅನ್ನವೆಂದು ಅರ್ಥವು. ಅನ್ನವು ಉಂಟಾಗಲು ಕಾರಣವಾದ ನೀರುಗಳು ನಮಃ ಎಂಬ ಪದದಿಂದ ಹೇಳಲ್ಪಡುತ್ತವೆ. ಅಗ್ನಿಯು ಅನ್ನಕ್ಕೆ ಕಾರಣವಾದ ನೀರಿನರೂಪದಿಂದ ಇರುವ ಗೂಢವಾದ ಪ್ರದೇಶದಲ್ಲಿ ಪ್ರವೇಶಮಾಡಿದನು. ಮತ್ತು ಅಲ್ಲಿ ನೀರಿನ ಅಮೃತರಸರೂಪವಾದ ಅನ್ನವನ್ನು ಪಾನಮಾಡುತ್ತಿದ್ದನು ಎಂದು ಅರ್ಥವನ್ನು ಹೇಳಿರುವರು.

**ನಮೋ ವಹಂತಂ—ದೇವೇಭ್ಯಃ ಪ್ರತ್ತಂ ಹವಿರ್ವಹಂತಂ** ಯಜ್ಞಮಾಡುವ ಯಜಮಾನರುಗಳು ದೇವತೆಗಳಿಗಾಗಿ ಅರ್ಪಿಸುವ ಹವಿಸ್ಸಿನ ರೂಪದಿಂದ ಇರುವ ಅನ್ನವನ್ನು ಅವರಿಗೆ ಒಯ್ಯುವವನು.

**ಸಜೋಷಾಃ- ಸಮಾನಂ ಜುಷಂತೆ ಇತಿ ಸಜೋಷಸಃ । ಸಮಾನಪ್ರೀತಯಃ** ಸ್ತೋತ್ರಮಾಡುವವರ ವಿಷಯದಲ್ಲಿ ಒಂದೇ ಸಮನಾಗಿ ಪ್ರೀತಿಯನ್ನು ಹೊಂದಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಪಶ್ವಾ**—ಪಶು+ಟಾ ಎಂದಿರುವಾಗ ತೃತೀಯಾ ಏಕವಚನಕ್ಕೆ **ಜಸಾದಿಷು ಛಂದಸಿ ವಾವಚನಮ್** ಎಂಬುದರಿಂದ ನಭಾವ ಬರುವುದಿಲ್ಲ. **ಇಕೋ ಯಣಚಿ** ಎಂಬುದರಿಂದ ಯಣಾದೇಶ. **ಉದಾತ್ತಯಣೋ ಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ಉದಾತ್ತಸ್ಥಾನದಲ್ಲಿ ಬಂದ ಯಣ್ಣಿನ ಪರದಲ್ಲಿ ವಿಭಕ್ತಿ ಬಂದುದರಿಂದ ಉದಾತ್ತವಾಗುತ್ತದೆ

**ಗುಹಾ**—ಗುಹೂ ಸಂವರಣೇ ಧಾತು. ಭಿದಾದಿಯಲ್ಲಿ ಈ ಧಾತುವನ್ನು ಸೇರಿಸಿರುವುದರಿಂದ **ಷಿದ್ಭಿದಾದಿಭ್ಯೋಽಙ್** (ಪಾ. ಸೂ. ೩-೩-೧೦೪) ಎಂಬುದರಿಂದ ಅಙ್ ಪ್ರತ್ಯಯ ಬರುತ್ತದೆ. ಙಿತ್ತಾದುದರಿಂದ ಲಘೂಪಧ ಗುಣ ಬರುವುದಿಲ್ಲ ಸ್ತ್ರೀತ್ವದಲ್ಲಿ **ಅಜಾದ್ಯತಃ**—ಸೂತ್ರದಿಂದ **ಟಾಪ್** ಗುಹಾ ಶಬ್ದವಾಗುತ್ತದೆ ಸಪ್ತಮೀ ಏಕವಚನ ಪರದಲ್ಲಿರುವಾಗ ಸುಪಾಂ ಸುಲುಕ್—ಸೂತ್ರದಿಂದ ಆ ವಿಭಕ್ತಿಗೆ ಲುಕ್ ಬರುತ್ತದೆ, ಪ್ರತ್ಯಯಸ್ವರದಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೆ ವೃಷಾದಿಯಲ್ಲಿ ಸೇರಿರುವುದರಿಂದ **ವೃಷಾದೀನಾಂ ಚ** (ಪಾ ಸೂ ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಚತಂತಮ್**--ಚತೀ ಯಾಚನೇ ಧಾತು ಉಭಯಪದೀ. ಲಡರ್ಥದಲ್ಲಿ ಶತೃಪ್ರತ್ಯಯ ಶಪ್ ವಿಕರಣ. ಚತಚ್ಛಬ್ದವಾಗುತ್ತದೆ. ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ ದ್ವಿತೀಯಾ ಏಕವಚನದಲ್ಲಿ **ಉಗಿದಚಾಂ**—ಸೂತ್ರದಿಂದ ನುಮಾಗಮ ಬರುತ್ತದೆ

**ಯುಜಾನಮ್**—ಯುಜಿರ್ ಯೋಗೇ ಧಾತು ರುಧಾದಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಶ್ನಮ್ ವಿಕರಣಕ್ಕೆ ಲುಕ್ ದ್ವಿತೀಯಾ ಏಕವಚನದಲ್ಲಿ ಯುಜಾನಮ್ ಎಂದು ರೂಪವಾಗುತ್ತದೆ ಪ್ರತ್ಯಯ ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದೆ ಅಮ್ ಪರದಲ್ಲಿರುವಾಗ ಏಕಾದೇಶ ಬಂದಾಗ **ಏಕಾದೇಶಉದಾತ್ತೇನೋದಾತ್ತಃ** ಎಂಬುದರಿಂದ ಏಕಾದೇಶವೂ ಉದಾತ್ತವಾಗುತ್ತದೆ

**ವಹಂತಮ್**—ವಹ ಪ್ರಾಪಣೇ ಧಾತು ಹಿಂದಿನಂತೇ ಶತೃಪ್ರತ್ಯಯ. ಲಸಾರ್ವಧಾತುಕವೂ ಶಪ್ ವಿಕರಣವೂ ಅನುದಾತ್ತವಾದುದರಿಂದ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಸಜೋಷಾಃ**--ಜುಷೀ ಪ್ರೀತಿಸೇವನಯೋಃ ಧಾತು ಸಮಾನಂ ಜುಷಂತ ಇತಿ ಸಜೋಷಸಃ ಧಾತುವಿಗೆ ಅಸುನ್ ಪ್ರತ್ಯಯ ಪ್ರತ್ಯಯನಿಮಿತ್ತಕವಾಗಿ ಧಾತುವಿನ ಉಪಧೆಗೆ ಗುಣ **ಸಮಾನಸ್ಯಛಂದಸ್ಯಮೂರ್ಧ-** (ಪಾ ಸೂ ೬-೩-೮೪) ಎಂಬುದರಿಂದ ಸಮಾನಶಬ್ದಕ್ಕೆ ಸ ಭಾವ. ಸಜೋಷಸ್ ಶಬ್ದವಾಗುತ್ತದೆ ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯಚಾ**—ಸೂತ್ರದಿಂದ ಉಪಧಾದೀರ್ಘ **ಹಲ್ಙ್ಯಾಭ್ಯೋ**—ಸೂತ್ರದಿಂದ ಸುಲೋಪ ಪದಾಂತವಾದುದರಿಂದ ಸಕಾರಕ್ಕೆ ರುತ್ವ. **ಖರವಸಾನಯೋರ್ವಿಸರ್ಜನೀಯಃ** ಎಂಬುದರಿಂದ ವಿಸರ್ಗ ವಾಸ್ತವವಾಗಿ ಜಸ್ ವಿಭಕ್ತಿಯಲ್ಲಿ ರೂಪವಾಗಬೇಕು. ಆದರೆ **ಸುಪಾಂ ಸುಲುಕ್**- ಸೂತ್ರದಿಂದ ಇಲ್ಲಿ ಜಸ್ಸಿಗೆ ಸು ಆದೇಶ ಬಂದಿರುತ್ತದೆ

**ಪದ್ಯೈಃ—ಊಡಿದಂ ಪದಾದಿ**-(ಪಾ ಸೂ ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಗ್ಮನ್—**ಗಮ್ಲೃ ಗತೌ ಧಾತು ಲುಙ್ ಪ್ರಥಮಪುರುಷದ ಝಿಗೆ ಅಂತಾದೇಶ **ಇತಶ್ಚ** ಸೂತ್ರದಿಂದ ಇಕಾರಲೋಪ ವಿಕರಣವಾದ ಚ್ಲಿಗೆ **ಮಂತ್ರೇ ಘಸಹ್ವರಣ**--(ಪಾ ಸೂ ೨-೪-೮೦) ಎಂಬುದರಿಂದ ಲುಕ್ ಬರುತ್ತದೆ. ಜಿತ್ತಾದ ಪ್ರತ್ಯಯ ಪರದಲ್ಲಿರುವುದರಿಂದ. **ಗಮಹನಜನ**– (ಪಾ ಸೂ ೬-೪-೯೮) ಎಂಬ ಸೂತ್ರದಿಂದ ಧಾತುವಿನ ಉಪಧೆಗೆ ಲೋಪ ಬರುತ್ತದೆ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ತಿಙಂತನಿಘಾತಸ್ವರ ಬರುತ್ತದೆ ಗ್ಮನ್ ಎಂದು ರೂಪವಾಗುತ್ತದೆ

**ಯಜತ್ರಾಃ**- -ಯಜ ದೇವಪೂಜಾಸಂಗತಿಕರಣದಾನೇಷು ಧಾತು **ಅಮಿನಕ್ಷಿಯಜಿವಧಿ**—(ಪಾ. ಸೂ. ೨-೩೮-೫) ಎಂಬುದರಿಂದ ಅತ್ರನ್ ಪ್ರತ್ಯಯ ಪ್ರತ್ಯಯನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತವಾಗುತ್ತದ ಬಹುವಚನಾಂತರೂಪ ॥ ೧-೨ ॥



॥ ಸಂಹಿತಾಪಾಠಃ ॥

ಋತಸ್ಯ ದೇವಾ ಅನು ವ್ರತಾ ಗುರ್ಭುವತ್ಪರಿಷ್ಟಿರ್ದ್ಯೌರ್ನ
ಭೂಮ ।
ವರ್ಧಂತೀಮಾಪಃ ಪನ್ವಾ ಸುಶಿಶ್ವಿಮೃತಸ್ಯ ಯೋನಾ ಗರ್ಭೇ
ಸುಜಾತಂ ॥ ೩ ॥ ೪ ॥

॥ ಪದಪಾಠಃ ॥

ಋತಸ್ಯ । ದೇವಾಃ । ಅನು । ವ್ರತಾ । ಗುಃ । ಭುವತ್ । ಪರಿಷ್ಟಿಃ । ದ್ಯೌಃ । ನ ।
ಭೂಮ ।
ವರ್ಧಂತಿ । ಈಂ । ಆಪಃ । ಪನ್ವಾ । ಸುಽಶಿಶ್ವಿಂ । ಋತಸ್ಯ । ಯೋನಾ । ಗರ್ಭೇ ।
ಸುಽಜಾತಂ ॥ ೩ ॥ ೪ ॥

॥ ಸಾಯಣಭಾಷ್ಯಂ ॥

ಉಕ್ತ ಏವಾರ್ಥಃ ಸ್ಪಷ್ಟೀಕ್ರಿಯತೇ । ದೇವಾ ಋತಸ್ಯ ಗತಸ್ಯ ಪಲಾಯಿತಸ್ಯಾಗ್ನೇರ್ವ್ರತಾ ವ್ರತಾನಿ ಕರ್ಮಾಣಿ ಗಮನಾವಸ್ಥಾನಶಯನಾದಿರೂಪಾಣ್ಯನು ಗುಃ । ಅನ್ವೇಷ್ಟುಮಗಮನ್ । ತದನಂತರಂ ಪರಿಷ್ಟಿಃ ಪರಿತಃ ಸರ್ವತೋಽನ್ವೇಷಣಂ ಭುವತ್ । ಅಭವತ್ । ಭೂಮ ಭೂಮಿರಪ್ಯಗ್ನೇರನ್ವೇಷ್ಟೃಭಿರ್ದೇವೈ-ರ್ದ್ಯೌರ್ನ ಸ್ವರ್ಗ ಇವಾಭೂತ್ । ಇಂದ್ರಾದಯಃ ಸರ್ವೇ ದೇವಾ ಅಗ್ನೇರ್ಗವೇಷಣಾಯ ಭೂಲೋಕಂ ಪ್ರಾಪ್ತಾ ಇತ್ಯರ್ಥಃ । ಆಪೋಽಬ್ದೇವತಾ ಈಮೇನಮುದಕೇ ಪ್ರವಿಷ್ಟಮಗ್ನಿಂ ವರ್ಧಂತಿ । ಪ್ರವರ್ಧಯಂತಿ । ಯಥಾ ದೇವಾ ನ ಪಶ್ಯಂತಿ ತಥಾರಕ್ಷನ್ನಿತ್ಯರ್ಥಃ । ಕೀದೃಶಂ । ಪನ್ವಾ ಸ್ತೋತ್ರೇಣ ಸುಶಿಶ್ವಿಂ ಸುಷ್ಠು ಪ್ರವರ್ಧಿತಂ । ಋತಸ್ಯ ಯೋನಾ । ಯೋನಿರಿತ್ಯುದಕನಾಮ । ಋತಸ್ಯ ಯಜ್ಞಸ್ಯಾನ್ನಸ್ಯ ವಾ ಕಾರಣ-ಭೂತೇ ಜಲೇ ಗರ್ಭೇ ಗರ್ಭಸ್ಥಾನೇ ಮಧ್ಯೇ ಸುಜಾತಂ ಸುಷ್ಠು ಪ್ರಾದುರ್ಭೂತಂ । ಏವಮಪ್ಸು ವರ್ತ-ಮಾನಮಗ್ನಿಂ ದೇವೇಭ್ಯೋ ಮತ್ಸ್ಯಃ ಪ್ರಾವೋಚತ್ । ತದನಂತರಂ ದೇವಾಸ್ತಮಜ್ಞಾಸಿಷುರಿತಿ ಭಾವಃ । ತಥಾ ಚ ತೈತ್ತಿರೀಯಕಂ । ಸ ನಿಲಾಯತ ಸೋಽಪಃ ಪ್ರಾವಿಶತ್ತಂ ದೇವತಾಃ ಪ್ರೈಷಮೈಚ್ಛನ್ ತಂ ಮತ್ಸ್ಯಃ ಪ್ರಾಬ್ರವೀದಿತಿ ॥ ವ್ರತಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಗುಃ । ಇಣ್ ಗತೌ । ಇಣೋ ಗಾ ಲುಙೀತಿ ಗಾದೇಶಃ । ಗಾತಿಸ್ಥೇತಿ ಸಿಚೋ ಲುಕ್ । ಆತ ಇತಿ ಝೇರ್ಜುಸ್ । ಉಸ್ಯಪದಾಂತಾದಿತಿ ಪರರೂಪತ್ವಂ । ಪರಿಷ್ಟಿಃ । ಇಷು ಇಚ್ಛಾಯಾಂ । ಕ್ತಿನಿ ತಿತುತ್ರೇತೀಟ್ಪ್ರತಿಷೇಧಃ । ಶಕಂಧ್ವಾದಿತ್ವಾತ್ಪರರೂಪತ್ವಂ । ಪಾ. ೬-೧-೯೪-೪ । ತಾದೌ ಚ ನಿತೀತಿ ಗತೇಃ ಪ್ರಕೃತಿಸ್ವರತ್ವಂ । ಭೂಮ ಸುಪಾಂ ಸುಲುಗಿತಿ ಸೋರ್ಡಾದೇಶಃ । ಹ್ರಸ್ವಶ್ಛಾಂದಸಃ । ವರ್ಧಂತಿ । ಛಂದಸ್ಯುಭಯಥೇತಿ ಶಪ ಆರ್ಧ-ಧಾತುಕತ್ವಾಣ್ಣೇರನಿಟೀತಿ ಣಿಲೋಪಃ । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತು-ಕಸ್ವರೇಣ ಧಾತುಸ್ವರಃ ಶಿಷ್ಯತೇ । ಪನ್ವಾ । ಪನ ಸ್ತುತೌ । ಔಣಾದಿಕೋ ಭಾವ ಉಪ್ರತ್ಯಯಃ । ಸುಶಿಶ್ವಿಂ । ಟುಓಶ್ವಿ ಗತಿವೃದ್ಧ್ಯೋಃ । ಆದೃಗಮಹನಜನ ಇತ್ಯತ್ರೋತ್ಸರ್ಗಶ್ಛಂದಸಿ । ಪಾ. ೩-೨-೧೭೧-೨ । ಇತಿ ವಚನಾತ್ಕಿಪ್ರತ್ಯಯಃ । ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ । ಲಿಡ್ವದ್ಭಾವಾದ್ದ್ವಿರ್ಭಾವೇ ಬಹುಲಂ ಛಂದಸೀತ್ಯುಕಾರಸ್ಯೇತ್ವಂ । ಛಾಂದಸೋ ಯಣಾದೇಶಃ । ಸುಃ ಪೂಜಾಯಾಂ । ಪಾ ೧-೪-೯೪ । ಇತಿ ಸೋಃ ಕರ್ಮಪ್ರವಚನೀಯತ್ವಂ । ಸ್ವತೀ ಪೂಜಾಯಾಂ । ಪಾ. ೨-೨-೧೮ । ಇತಿ ಪ್ರಾದಿಸಮಾಸಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ದೇವಾಃ**—ದೇವತೆಗಳು । **ಋತಸ್ಯ**—ಹೊರಟುಹೋಗಿದ್ದ (ಪಲಾಯಿತನಾದ ಅಗ್ನಿಯ) । **ವ್ರತಾ**—(ಗಮನಾದಿ) ಕರ್ಮಗಳನ್ನು । **ಅನು ಗುಃ**—(ಅನ್ವೇಷಣಮಾಡಲು) ಹೊರಟರು । **ಪರಿಷ್ಟಿಃ**—ಎಲ್ಲಾ ಕಡೆ ಯಲ್ಲಿಯೂ ಅನ್ವೇಷಣವು । **ಭುವತ್**—ಆಯಿತು । **ಭೂಮ**—ಭೂಮಿಯು । **ದ್ಯೌರ್ನ**—(ಅನ್ವೇಷಣ ಮಾಡುತ್ತಿರುವ ದೇವತೆಗಳಿಂದ) ಸ್ವರ್ಗದಂತೆ । **(ಭುವತ್**—ಆಯಿತು) । **ಆಪಃ**—ಅಬ್ದೇವತೆಗಳು (ಜಲವು) **ಪನ್ವಾ**—ಸ್ತೋತ್ರಗಳಿಂದ । **ಸುಶಿಶ್ವಿಂ**—ಚೆನ್ನಾಗಿ ಪ್ರವೃದ್ಧನಾದ । **ಋತಸ್ಯ**—ಅನ್ನಕ್ಕೆ (ಯಜ್ಞಕ್ಕೆ) ।

**ಯೋನಾ**—(ಕಾರಣೀಭೂತವಾದ) ಜಲದಲ್ಲಿ । **ಗರ್ಭೇ**—ಮಧ್ಯದಲ್ಲಿ । **ಸುಜಾತಂ**—ಚೆನ್ನಾಗಿ ಪ್ರಾದುರ್ಭೂತನಾದ । **ಈಂ**—(ಉದಕ ಪ್ರವಿಷ್ಟನಾದ) ಈ (ಅಗ್ನಿಯನ್ನು) । **ವರ್ಧಂತಿ**—ಪ್ರವೃದ್ಧನನ್ನಾಗಿ ಮಾಡುತ್ತಾರೆ. (ದೇವತೆಗಳಿಗೆ ಕಾಣದಂತೆ ಮುಚ್ಚಿಡುತ್ತಾರೆ)

॥ ಭಾವಾರ್ಥ ॥

ಪಲಾಯಿತನಾಗಿದ್ದ ಅಗ್ನಿಯನ್ನು ಎಲ್ಲಾ ಕಡೆಯಲ್ಲಿಯೂ ಅನ್ವೇಷಣಮಾಡುತ್ತಾ ದೇವಾದಿಗಳು ಹೊರಟರು ಭೂಮಿಯು ದೇವತೆಗಳಿಂದ ಆವೃತವಾಗಿ ಸ್ವರ್ಗಕ್ಕೆ ಸಮಾನವಾಯಿತು. ಸ್ತೋತ್ರಾದಿಗಳಿಂದ ಪ್ರವೃದ್ಧನಾದ, ಜಲಮಧ್ಯದಲ್ಲಿರುವ ಅಗ್ನಿಯು, ಅನ್ನಾದಿಗಳಿಗೆ ಕಾರಣೀಭೂತವಾದ ಉದಕದಿಂದ ದೇವತೆಗಳಿಗೆ ಕಾಣದಂತೆ ಚೆನ್ನಾಗಿ ಮುಚ್ಚಲ್ಪಟ್ಟನು

## English Translation.

The Gods followed the traces of the fugitive, the search was made everywhere, and earth became like the celestial region; the waters swelled (to conceal him), who was much enlarged by laudation, and was manifested as it were in the womb in the waters, the source of sacrificial food.

॥ ವಿಶೇಷವಿಷಯಗಳು ॥

**ಭೂಮ ದ್ಯೌರ್ನ—ಭೂಮಿರಪಿ ಸ್ವರ್ಗ ಇವಾಭೂತ್ । ಇಂದ್ರಾದಯಃ ಸರ್ವೇ ದೇವಾಃ ಅಗ್ನೇರ್ಗವೇಷಣಾಯ ಭೂಲೋಕಂ ಪ್ರಾಪ್ತಾಃ ।** ಇಂದ್ರನೇ ಮೊದಲಾದ ದೇವತೆಗಳು ಅಗ್ನಿಯನ್ನು ಹುಡುಕುವುದಕ್ಕಾಗಿ ಭೂಲೋಕದಲ್ಲಿಯೇ ಇದ್ದ ಕಾರಣ ಭೂಲೋಕವು ಸ್ವರ್ಗಲೋಕದ ಹಾಗೆ ಕಾಣುತ್ತಿದ್ದಿತು.

**ಋತಸ್ಯ ಯೋನಾ ಗರ್ಭೇ ಸುಜಾತಂ—ಯೋನಿರಿತ್ಯುದಕ ನಾಮ । ಋತಸ್ಯ ಯಜ್ಞಸ್ಯ ಅನ್ನಸ್ಯ ವಾ ಕಾರಣಭೂತೇ ಜಲೇ ಮಧ್ಯೇ ಸುಷ್ಠು ಪ್ರಾದುರ್ಭೂತಂ । ಏವಮಪ್ಸು ವರ್ತಮಾನಮಗ್ನಿಂ ದೇವೇಭ್ಯೋ ಮತ್ಸ್ಯಃ ಪ್ರಾವೋಚತ್ । ತದನಂತರಂ ದೇವಾಸ್ತಮಜ್ಞಾಸಿಷುಃ । ತಥಾ ಚ ತೈತ್ತಿರೀಯಕಂ—'ಸ ನಿಲಾಯತ ಸೋಽಪಃ ಪ್ರಾವಿಶತ್ ತಂ ದೇವಾಃ ಪ್ರೈಷಮೈಚ್ಛನ್ ತಂ ಮತ್ಸ್ಯಃ ಪ್ರಾಬ್ರವೀತ್ (ತೈ. ಸಂ. ೨ ೬-೬-೧) ಇತಿ ।**

ಈ ವಿಷಯದಲ್ಲಿ ಋ ಸಂ. ಭಾಗ ೨ ಪೇಜು 60-61 ನೋಡಿ ಯೋನಿ ಶಬ್ದವು (ನಿರುಕ್ತ ೨ ೨೪) ಉದಕನಾಮಗಳ ಮಧ್ಯದಲ್ಲಿ ಉಕ್ತವಾಗಿರುತ್ತದೆ. ಯಜ್ಞದಲ್ಲಿ ಹವಿಸ್ಸಿಗಾಗಿ ಉಪಯುಕ್ತವಾಗುವ ಅನ್ನಕ್ಕೂ ಅಥವಾ ಎಲ್ಲರ ಜೀವನಕ್ಕೂ ಕಾರಣವಾಗಿರುವ ನೀರಿನ ಮಧ್ಯದಲ್ಲಿ ಇರುತ್ತಾ ವೃದ್ಧಿಯನ್ನು ಹೊಂದಿರುವನೆಂದು ಅರ್ಥವು

ಹೀಗೆ ನೀರಿನ ಮಧ್ಯದಲ್ಲಿ ವಾಸವಮಾಡುತ್ತಿರುವ ಅಗ್ನಿದೇವನ ವಾಸಸ್ಥಾನವನ್ನು ಮೀನುಗಳು ಅವನನ್ನು ಹುಡುಕು ತ್ತಿರುವ ದೇವತೆಗಳಿಗೆ ತಿಳಿಸಿದವು ಆಗ ದೇವತೆಗಳು ಅದನ್ನು ತಿಳಿದುಕೊಂಡರು. ತೈತ್ತಿರೀಯ ಸಂಹಿತೆಯ (೨-೬-೬-೧) ನೆಯ ಮಂತ್ರದಲ್ಲಿ ಈ ವಿಷಯವು ಹೇಳಲ್ಪಟ್ಟಿರುತ್ತದೆ

॥ ವ್ಯಾಕರಣಪ್ರಕ್ರಿಯಾ ॥

**ವ್ರತಾ**- ವ್ರತ+ಶಸ್ ಎಂದಿರುವಾಗ ನಪುಂಸಕದಲ್ಲಿ **ಜಶ್ಶಸೋಃ ಶಿಃ** ಸೂತ್ರದಿಂದ ವಿಭಕ್ತಿಗೆ ಶಿ ಆದೇಶ. **ನಪುಂಸಕಸ್ಯಝಲಚಃ** ಎಂಬುದರಿಂದ ಶಿಗೆ ಸರ್ವನಾಮಸಂಜ್ಞೆ ಇರುವುದರಿಂದ ಅಂಗಕ್ಕೆ ನುಮಾಗವು **ಸರ್ವ ನಾಮಸ್ಥಾನೇಚಾಸಂಬುದ್ಧೌ** ಸೂತ್ರದಿಂದ ಉಪಧಾದೀರ್ಘ. **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ ನಲೋಪ

**ಗುಃ** - ಇಣ್ ಗತೌ ಧಾತು. ಲುಙ್ ಪ್ರಥಮಪುರುಷ ಬಹುವಚನ ಪರದಲ್ಲಿರುವಾಗ **ಇಣೋಗಾ ಲುಙಿ** (ಪಾ ಸೂ ೨-೪-೪೫) ಎಂಬುದರಿಂದ ಧಾತುವಿಗೆ ಗಾ ಆದೇಶ **ಚ್ಲೇಃ ಸಿಚ್** ಸೂತ್ರದಿಂದ ಪ್ರಾಪ್ತವಾದ ಸಿಚ್ಚಿಗೆ **ಗಾತಿಸ್ಥಾಘುಪಾಭೂಭ್ಯಃ**— ಎಂಬುದರಿಂದ ಲುಕ್. **ಆತಃ** (ಪಾ ಸೂ ೩-೪-೧೧೦) ಸಿಚ್ ಲುಕ್ಕಾದಾಗ ಆದಂತದ ಪರದಲ್ಲಿರುವ ಝಿಗೆ ಜುಸಾದೇಶ ಎಂಬುದರಿಂದ ಜುಸಾದೇಶ **ಉಸ್ಯಪದಾಂತಾತ್** ಎಂಬುದರಿಂದ ಉಸ್ ಪರದಲ್ಲಿರುವುದರಿಂದ ಪರರೂಪ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ಗುಃ ಎಂದು ರೂಪವಾಗುತ್ತದೆ ತಿಙಂತನಿಘಾತಸ್ವರ ಬರುತ್ತದೆ •

**ಪರಿಷ್ಟಿಃ**— ಇಷು ಇಚ್ಛಾಯಾಂ ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ. **ತಿತುತ್ರ ತಥಸಿ**—(ಪಾ ಸೂ. ೭-೨-೯) ಎಂಬುದರಿಂದ ಪ್ರತ್ಯಯಕ್ಕೆ ಇಡಾಗಮ ನಿಷೇಧ ಷ್ಟುತ್ವದಿಂದ ಪ್ರತ್ಯಯಕ್ಕೆ ಟಕಾರ. ಪರಿ+ಇಷ್ಟಿ ಎಂದಿರುವಾಗ **ಶಕಂಧ್ವಾದಿಷು ಪರರೂಪಂ ವಾಚ್ಯಂ** (ಪಾ ಸೂ ೬-೧-೯೪-೪) ಎಂಬ ವಚನದಿಂದ ಪರರೂಪ ಏಕಾದೇಶವಾಗಿ ಬರುತ್ತದೆ. **ತಾದೌ ಚ ನಿತಿ**--(ಪಾ. ಸೂ. ೬-೨-೫೦) ಎಂಬುದರಿಂದ ನಿತ್ ಪ್ರತ್ಯ ಯಾಂತವಾದುದು ಪರದಲ್ಲಿರುವುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಭೂಮ**- ಭೂಮಿ+ಸು ಎಂದಿರುವಾಗ **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಡಾದೇಶ. ಡಿತ್ತಾದುದರಿಂದ ಪ್ರಾತಿಪದಿಕದ ಟಿಗೆ ಲೋಪ. ಭೂಮಾ ಎಂದಾಗುತ್ತದೆ. ಇಲ್ಲಿ ಅದಕ್ಕೆ ಹ್ರಸ್ವವು ಛಾಂದಸವಾಗಿ ಬರುತ್ತದೆ.

**ವರ್ಧಂತಿ**—ವೃಧು ವೃದ್ಧೌ ಧಾತು. **ಹೇತುಮತಿ ಚ** ಎಂಬುದರಿಂದ ಪ್ರಯೋಜಕವ್ಯಾಪಾರ ತೋರುವುದ ರಿಂದ ಣಿಚ್. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ವರ್ಧಿ ಎಂಬ ಣಿಜಂತದ ಮೇಲೆ ಲಟ್ ಪ್ರಥಮ ಪುರುಷ ಬಹುವಚನ ಝಿ ಪ್ರತ್ಯಯ **ಝೋಂತಃ** ಎಂಬುದರಿಂದ ಅದಕ್ಕೆ ಅಂತಾದೇಶ. **ಕರ್ತರಿ ಶಪ್** ಸೂತ್ರದಿಂದ ಶಪ್ ವಿಕರಣ. **ಛಂದಸ್ಯುಭಯಥಾ** ಎಂಬುದರಿಂದ ಶಪ್ಪಿಗೆ ಆರ್ಧಧಾತುಕಸಂಜ್ಞೆ ಬರುತ್ತದೆ. ಆದುದರಿಂದ **ಣೇರಣಿಟ** (ಪಾ. ಸೂ. ೬-೪-೫೧) ಎಂಬುದರಿಂದ ಶಪ್ ನಿಮಿತ್ತವಾಗಿ ಣಿಗೆ ಲೋಪ. **ಅತೋ ಗುಣೇ ಸೂತ್ರ**ದಿಂದ ಪರರೂಪ. ವರ್ಧಂತಿ ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿರು

ವುದರಿಂದ ಲಸಾರ್ವಧಾತುಕವು (ಅಂತಿ) **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತನಾಗುತ್ತದೆ ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ

**ಸನ್ಯಾ** ಷಣ ಸಂಭಕ್ತೌ ಧಾತು ಭಾವಾರ್ಥದಲ್ಲಿ ಔಣಾದಿಕವಾದ ಇಪ್ರತ್ಯಯ ಸನಿ ಶಬ್ದವಾಗುತ್ತದೆ. ತೃತೀಯಾದಲ್ಲಿ **ಜಸಾದಿಷು ಛಂದಸಿ ವಾ ವಚನಂ** ಎಂಬುದರಿಂದ ನಾಭಾವ ಬರುವುದಿಲ್ಲ ಯಣಾದೇಶ ಬಂದಾಗ **ಉದಾತ್ತಯಣಃ** ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಸುಶಿಶ್ವಿಮ್** ಟುಓಶ್ವಿ ಗತಿವೃದ್ಧ್ಯೋಃ ಧಾತು **ಆದೃಗಮಹನಜನಃ ಕಿಕಿನೌ ಲಿಟ್ ಚ** ಎಂಬಲ್ಲಿ **ಉತ್ಸರ್ಗಶ್ಛಂದಸಿ** (ಪಾ ಸೂ ೩ ೨-೧೭೧-೨) ಛಂದಸ್ಸಿನಲ್ಲಿ ಪ್ರಾಯಿಕವಾಗಿ ನಿಯಮವಿಲ್ಲದೆ ಬರುವುದು ಎಂಬುದರಿಂದ ಈ ಧಾತುವಿಗೂ ಕಿ ಪ್ರತ್ಯಯ ಬರುತ್ತದೆ ಕಿತ್ತಾದುದರಿಂದ **ವಚಿಸ್ವಪಿಯಜಾದೀನಾಂ ಕಿತಿ** ಎಂಬುದರಿಂದ ಸಂಪ್ರಸಾರಣ ಬರುತ್ತದೆ ಯಜಾದಿಯಲ್ಲಿ ಇದು ಸೇರಿರುತ್ತದೆ ಪ್ರತ್ಯಯಕ್ಕೆ **ಲಿಡ್ವದ್ಭಾವವನ್ನು** ಹೇಳಿರುವುದರಿಂದ ಧಾತುವಿಗೆ ದ್ವಿತ್ವ ಬರುತ್ತದೆ ಶುಶು ಇ ಎಂದಿರುವಾಗ **ಬಹುಲಂ ಛಂದಸಿ** (ಪಾ ಸೂ ೭-೪-೭೮) ಎಂಬುದರಿಂದ ಅಭ್ಯಾಸಕ್ಕೆ ಇಕಾರಾದೇಶ ಉವಙನ್ನು ಬಾಧಿಸಿ ಧಾತುವಿನ ಉಕಾರಕ್ಕೆ ಛಾಂದಸವಾಗಿ ಯಣಾದೇಶ ಸುಷ್ಟು ಶಿಶ್ವಿಃ ಸುಶಿಶ್ವಿಃ ತಮ್ **ಸುಃಪೂಜಾಯಾಂ** (ಪಾ ಸೂ ೧-೪-೯೪) ಎಂಬುದರಿಂದ ಪೂಜಾರ್ಥ ತೋರುವುದರಿಂದ (ಪ್ರಾಶಸ್ತ್ಯ) ಸುವಿಗೆ ಕರ್ಮಪ್ರವಚನೀಯ ಸಂಜ್ಞೆ ಬರುತ್ತದೆ **ಸ್ವತೀ ಪೂಜಾಯಾಂ** (ಪಾ. ಸೂ ೨-೨-೧೮-೪) ಎಂಬುದರಿಂದ ಪ್ರಾದಿಸಮಾಸ **ತತ್ಪುರುಷೇ ತುಲಾರ್ಥತೃತೀಯಾ**-(ಪಾ ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ ॥ ೩-೪ ॥

---

॥ ಸಂಹಿತಾಪಾಠಃ ॥

ಪುಷ್ಟಿರ್ನ ರಣ್ವಾ ಕ್ಷಿತಿರ್ನ ಪೃಥ್ವೀ ಗಿರಿರ್ನ ಭುಜ್ಮ ಕ್ಷೋದೋ ನ ಶಂಭು ।

ಅತ್ಯೋ ನಾಜ್ಮನ್ತ್ಸರ್ಗಪ್ರತಕ್ತಃ ಸಿಂಧುರ್ನ ಕ್ಷೋದಃ ಕ ಈಂ ವರಾತೇ ॥ ೫ ॥ ೬ ॥

॥ ಪದಪಾಠಃ ॥

ಪುಷ್ಟಿಃ । ನ । ರಣ್ವಾ । ಕ್ಷಿತಿಃ । ನ । ಪೃಥ್ವೀ । ಗಿರಿಃ । ನ । ಭುಜ್ಮ । ಕ್ಷೋದಃ । ನ । ಶಂಽಭು ।

ಅತ್ಯಃ । ನ । ಅಜ್ಮನ್ । ಸರ್ಗಽಪ್ರತಕ್ತಃ । ಸಿಂಧುಃ । ನ । ಕ್ಷೋದಃ । ಕಃ । ಈಂ । ವರಾತೇ ॥ ೫ ॥ ೬ ॥

॥ ಸಾಯಣಭಾಷ್ಯಂ ॥

ರಣ್ವಾ ರಮಣೀಯಾ ಸರ್ವೇಷಾಂ ಹೃದ್ಯಾ ಪುಷ್ಟಿರ್ನ ಅಭಿಮತಫಲಾನಾಮಭಿವೃದ್ಧಿರಿವಾಗ್ನಿಃ ಸರ್ವೇಷಾಂ ರಮಣೀಯಃ । ಐಹಿಕಾಮುಷ್ಮಿಕಸಕಲವ್ಯವಹಾರಸ್ಯಾಗ್ನ್ಯಧೀನತ್ವಾತ್ । ಯದ್ವಾ । ಪುಷ್ಟಿರಿವ ರಣ್ವಾ ಗಂತವ್ಯಃ ಶಬ್ದನೀಯಃ ಸ್ತುತ್ಯೋ ವಾ । ಯಥಾ ಪುಷ್ಟಿಃ ಪ್ರಾಪ್ಯತೇ ತದ್ವದಗ್ನಿಯಜ್ಞೇ ಹವಿರ್ಭಿಃ ಪ್ರಾಪ್ಯತ ಇತಿ ಭಾವಃ । ಪೃಥ್ವೀ ವಿಸ್ತೀರ್ಣಾ ಕ್ಷಿತಿರ್ನ ಭೂಮಿರಿವಾಗ್ನಿರಪಿ ವಿಸ್ತೀರ್ಣಃ ಸರ್ವೇಷು ಭೂತೇಷು ಜಾಠರರೂಪೇಣಾವಸ್ಥಾನಾತ್ । ಗಿರಿರ್ನ ಪರ್ವತ ಇವ ಭುಜ್ಮ ಸರ್ವೇಷಾಂ ಭೋಜಯಿತಾ । ಯಥಾ ಗಿರೌ ವಿದ್ಯಮಾನಂ ಫಲಮೂಲಾದಿಕಮಾಹೃತ್ಯ ಸರ್ವೇ ಭುಂಜತೇ ತದ್ವದಗ್ನಾವಪಿ ಪಚಂತಃ ಸರ್ವೇ ಭುಂಜತೇ । ಯದ್ವಾ । ಅಗ್ನಾವಾಹುತಿಂ ಹುತ್ವಾ ಯಜಮಾನಾಃ ಸ್ವರ್ಗಫಲಂ ಭುಂಜತೇ । ಅಥವಾ ಗಿರಿರ್ಯಥಾ ದುರ್ಭಿಕ್ಷೇ ಸರ್ವಾನ್ಪ್ರಾಣಿನೋ ಭುನಕ್ತಿ ಸ್ವಕೀಯಮೂಲಫಲಾದಿದಾನೇನ ಪಾಲಯತಿ । ತದ್ವದಯಮಪಿ ಪಾಪಾದನುಷ್ಠಾತೄನ್ಪ್ರಮುಂಚತಿ । ತಥಾ ಚಾಮ್ನಾಯತೇ । ಅಗ್ನಿರ್ಮಾ ತಸ್ಮಾದೇನಸಃ ಪ್ರ ಮುಂಚತ್ವಿತಿ । ಶಂಭು ಸುಖಕರಂ ಕ್ಷೋದೋ ನ ಉದಕಮಿವ । ಯಥೋದಕಂ ಸುಖಂ ಕರೋತಿ ತದ್ವದಗ್ನಿಃ ಸರ್ವೇಷಾಂ ಸುಖಕಾರೀತ್ಯರ್ಥಃ । ಅಜ್ಮನ್ । ಸಂಗ್ರಾಮನಾಮೈತತ್ । ಅಜ್ಮನಿ ಸಂಗ್ರಾಮೇಽತ್ಯೋ ನ ಸತತಗಮನಶೀಲೋ ಜಾತ್ಯಶ್ವ ಇವ ಸರ್ಗಪ್ರತಕ್ತಃ ಸರ್ಗೇಣ ವಿಸರ್ಜನೇನ ಪ್ರಗಮಿತಃ । ಯಥಾ ಸಾದಿನಾ ಪ್ರೇಷಿತೋ ಜಾತ್ಯಶ್ವೋ ಹಂತವ್ಯಸಮೀಪಮಾಶು ಗಚ್ಛತಿ ತದ್ವದಗ್ನಿರಪಿ ಸ್ತೋತೃಭಿಃ ಪ್ರೇಷಿತಃ ಸನ್ ಶತ್ರೂನ್ಹಂತುಂ ಶೀಘ್ರಂ ಗಚ್ಛತೀತಿ ಭಾವಃ । ಅಪಿ ಚ ಸಿಂಧುರ್ನ ಕ್ಷೋದಃ । ಸ್ಯಂದನಶೀಲಮುದಕಮಿವಾಯಮಪಿ ಶೀಘ್ರಗಾಮೀ । ಯಥಾ ನಿಮ್ನಪ್ರದೇಶಾಭಿಮುಖೋ ಜಲಪ್ರವಾಹೋ ದುರ್ನಿವಾರಃ । ತದ್ವದ್ದಗ್ಧವ್ಯಾಭಿಮುಖೋಽಗ್ನಿರಪೀತ್ಯರ್ಥಃ । ಅತೋ ಯಸ್ಮಾದೇವಂ ತಸ್ಮಾದೀಮೇನಮಗ್ನಿಂ ಕೋ ವರಾತೇ । ಕೋ ವಾರಯೇತ್ । ಕೋಽಪಿ ವಾರಯಿತುಂ ನ ಶಕ್ನೋತೀತ್ಯರ್ಥಃ ॥ ರಣ್ವಾ । ರವಿರ್ಗತ್ಯರ್ಥಃ । ರಣ್ವ್ಯತೇ ಪ್ರಾಪ್ಯತ ಇತಿ ರಣ್ವಃ ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾತ್ಕರ್ಮಣಿ ಪಚಾದ್ಯಚ್ । ಭುಜ್ಮ । ಭುಜ ಪಾಲನಾಭ್ಯವಹಾರಯೋಃ । ಇಷಿಯುಧೀಂಧೀತಿ ವಿಧೀಯಮಾನೋ ಮಕ್ ಬಹುಲವಚನಾದಸ್ಮಾದಪಿ ಭವತಿ । ಸುಪಾಂ ಸುಲುಗಿತಿ ಸೋರ್ಲುಕ್ ।

ಅಜ್ಮನ್ । ಅಜ ಗತಿಕ್ಷೇಪಣಯೋಃ । ಮನಿನಿ ವಲಾದಾವಾರ್ಧಧಾತುಕೇ ವಿಕಲ್ಪ ಇಷ್ಯತೇ । ಕಾ. ೨-೪-೫೬-೨ । ಇತಿ ವಚನಾದ್ವೀಭಾವಾಭಾವಃ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ಸರ್ಗಪ್ರತಕ್ತಃ । ಸೃಜ ವಿಸರ್ಗ ಇತ್ಯಸ್ಮಾದ್ಘಞಂತಃ ಸರ್ಗಶಬ್ದ ಆದ್ಯುದಾತ್ತಃ । ತನ್ಚು ಗತೌ ಅಸ್ಮಾದಂತರ್ಭಾವಿತಣ್ಯರ್ಥಾನ್ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಅನಿದಿತಾಮಿತಿ ನಲೋಪಃ । ಸರ್ಗೇಣ ಪ್ರತಕ್ತಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ವರಾತೇ । ವೃಞ್ ವರಣೇ । ಅಂತರ್ಭಾವಿತಣ್ಯರ್ಥಾಲ್ಲೇಟಿ ಲೇಟೋಽಡಾಟಾವಿತ್ಯಾಡಾಗಮಃ । ವ್ಯತ್ಯಯೇನ ಶಪ್ । ವೈತೋಽನ್ಯತ್ರ । ಪಾ. ೩-೪-೯೬ । ಇತ್ಯೈತ್ವಸ್ಯ ವಿಕಲ್ಪಿತತ್ವಾದಭಾವಃ ॥

॥ ಪ್ರತಿಪದಾರ್ಥ ॥

**ರಣ್ವಾ** - ರಮಣೀಯವಾದ (ಇಷ್ಟವಾದ) । **ಪುಷ್ಟಿರ್ನ**- ಅಭಿಮತಫಲಾಭಿವೃದ್ಧಿಯಂತೆ ಇರುವ । **(ಅಥವಾ)** ಅಭಿಮತಫಲಾಭಿವೃದ್ಧಿಯಂತೆ । **ರಣ್ವಾ**—ಸ್ತುತ್ಯನಾದ । **ಪೃಥ್ವೀ**—ವಿಸ್ತೀರ್ಣವಾದ । **ಕ್ಷಿತಿರ್ನ**—ಭೂಮಿಯಂತೆ ಇರುವ । **ಗಿರಿರ್ನ**—ಪರ್ವತದಂತೆ । **ಭುಜ್ಮ**—(ಸರ್ವರಿಗೂ) ಭೋಜನವನ್ನುಂಟು ಮಾಡುವ । **ಶಂಭು**—ಸುಖಕರವಾದ । **ಕ್ಷೋಧೋ ನ**—ಉದಕದಂತೆ ಇರುವ । **ಅಜ್ಮನ್**—ಸಂಗ್ರಾಮದಲ್ಲಿ । **ಅತ್ಯೋ ನ**—ಗಮನಶೀಲವಾದ ಉತ್ತಮಾಶ್ವದಂತೆ । **ಸರ್ಗಪ್ರತಕ್ತಃ**—ವಿಸರ್ಜಿತನಾಗಿ ಹೊರಡಿಸಲ್ಪಟ್ಟ । **ಸಿಂಧುರ್ನ** – ಪ್ರವಹಿಸುವ ಸ್ವಭಾವವುಳ್ಳ ಉದಕದಂತೆ । **ಕ್ಷೋದಃ**- ಶೀಘ್ರಗಾಮಿಯಾದ । **ಈಂ**—ಈ ಅಗ್ನಿಯನ್ನು । **ಕಃ ವರಾತೇ**—ಯಾರು ತಾನೇ ತಡೆದಾರು ?

ಭಾವಾರ್ಥ ॥

ಈ ಅಗ್ನಿಯು ಅಭಿಮತಫಲದಾಯಕನು ಆದ್ದರಿಂದ ಎಲ್ಲರಿಂದಲೂ ಸ್ತುತ್ಯನು. ಭೂಮಿಯಂತೆ (ಎಲ್ಲರ ಜಠರದಲ್ಲಿಯೂ ಇರುವುದರಿಂದ) ವಿಸ್ತೀರ್ಣನು ಪರ್ವತದಂತೆ (ಅಗ್ನಿಯಲ್ಲಿ ಪಚನಮಾಡಿ ಭೋಜನ ಮಾಡುವುದರಿಂದ) ಎಲ್ಲರಿಗೂ ಭೋಜನ ಮಾಡಿಸುವವನು, ಉದಕದಂತೆ ಎಲ್ಲರಿಗೂ ಸುಖಕರನು ಸಂಗ್ರಾಮದಲ್ಲಿ ಉತ್ತಮಾಶ್ವವು ಯಜಮಾನನಿಂದ ಪ್ರೇರಿತವಾಗಿ ಹೇಗೆ ಗಮ್ಯವಾದ ಸ್ಥಾನಕ್ಕೆ ನೇರವಾಗಿ ಹೋಗುತ್ತದೋ ಹಾಗೆ ಅಗ್ನಿಯೂ ಸ್ತೋತ್ರಗಳಿಂದ ಪ್ರಾರ್ಥಿತನಾಗಿ ಶತ್ರುಗಳನ್ನು ಎದುರಿಸುತ್ತಾನೆ ಜಲಪ್ರವಾಹವು ತಗ್ಗಾದ ಪ್ರದೇಶಕ್ಕೆ ಪ್ರವಹಿಸುವಾಗ ಹೇಗೆ ತಡೆಯಲು ಅಸಾಧ್ಯವೋ, ಹಾಗೆ ಸುಡುತ್ತಿರುವ ವಸ್ತುವನ್ನು ವ್ಯಾಪಿಸುವಾಗ ಅಗ್ನಿಯನ್ನು ಯಾರಿಂದಲೂ ನಿವಾರಿಸಲು ಸಾಧ್ಯವಿಲ್ಲ

## English Translation

Agni is beautiful as nourishment, vast as the earth, the giver of food as a mountain, and delightful as water, he is like a horse,urged to a charge in battle, and (irresistable) like flowing waters, who can arrest him ?

॥ ವಿಶೇಷವಿಷಯಗಳು ॥

**ಪುಷ್ಟಿರ್ನ ರಣ್ವಾ— ರಣ್ವಾ ರಮಣೀಯಂ । ಸರ್ವೇಷಾಂ ಹೃದ್ಯಾ । ಅಭಿಮತ ಫಲಾನಾಮಭಿವೃದ್ಧಿರಿವ ಅಗ್ನಿಃ ಸರ್ವೇಷಾಂ ರಮಣೀಯಃ । ಯದ್ವಾ ಪುಷ್ಟಿರಿವ ಗನ್ತವ್ಯಃ ಶಬ್ದನೀಯಃ ಸ್ತುತ್ಯೋ ವಾ । ಯಥಾ ಪುಷ್ಟಿಃ ಪ್ರಾಪ್ಯತೇ ತದ್ವತ್ ಅಗ್ನಿಃ ಯಜ್ಞೇ ಹವಿರ್ಭಿಃ ಪ್ರಾಪ್ಯತೇ ।** ಉಪಮಾಲಂಕಾರವನ್ನು ಹೇಳುವಾಗ ಉಪಮಾನೋಪಮೇಯಗಳಲ್ಲಿ ಉಪಮಾನದ ಧರ್ಮ ಅಥವಾ ಗುಣಗಳನ್ನು ಉಪಮೇಯದಲ್ಲಿ ಅವಶ್ಯವಾಗಿ ಹೇಳಬೇಕಾಗಿರುವುದು ಶಾಸ್ತ್ರನಿಯಮವಾಗಿರುತ್ತದೆ ನ ಎಂಬ ಪದವು ಉಪಮಾವಾಚಕವಾದ ಇವ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ ಯಾಸ್ಕರು ಈ ಶಬ್ದವನ್ನು ಇದಮಿವ, ಇದಂ ಯಥಾ ಎಂಬ ಹನ್ನೆರಡು ಉಪಮಾವಾಚಕಗಳ ಮಧ್ಯದಲ್ಲಿ (ನಿ ೧-೪) ಪಾಠಮಾಡಿರುವರು ಲೋಕದಲ್ಲಿ ಎಲ್ಲರಿಗೂ ಅವರವರ ಇಷ್ಟಪ್ರಾಪ್ತಿಯು ಹೆಚ್ಚುತ್ತಿರುವುದು ಆನಂದಕರವಾಗಿರುವ ಹಾಗೆ ಅಗ್ನಿಯು ಎಲ್ಲರನ್ನೂ ಸಂತೋಷಗೊಳಿಸುವವನಾಗಿರುವನು ಅಥವಾ ರಣ್ವಾ ಎಂಬ ಶಬ್ದವು ರಮು ಧಾತುವಿನಿಂದ ಸಿದ್ಧವಾದಾಗ ರಮಣೀಯಃ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿ ಗಂತವ್ಯಃ ಎಂಬ ಅರ್ಥವನ್ನು ಹೇಳುವುದರಿಂದ ಯಜ್ಞದಲ್ಲಿ ಹವಿಸ್ಸುಗಳನ್ನು ಅರ್ಪಿಸುವುದರಿಂದ ಇಷ್ಟಫಲ ಪ್ರಾಪ್ತಿಗಳ ಅಭಿವೃದ್ಧಿರೂಪವಾದ ಪುಷ್ಟಿಯು ಜನರಿಂದ ಹೊಂದಲ್ಪಡುವ ಹಾಗೆ ಅಗ್ನಿಯೂ ಯಾಗ ಮಾಡುವ ಯಜಮಾನರುಗಳಿಂದ ಹೊಂದಲ್ಪಡುವನಾಗಿ ಇರುವನು. ರಣ ಶಬ್ದೇ ಎಂಬ ಧಾತುವಿನಿಂದ ರಣ್ವಾ ಎಂಬ ಶಬ್ದರೂಪವು ಸಿದ್ಧವಾದಾಗ ಸ್ತುತ್ಯಃ ಹೊಗಳಿಸಿಕೊಳ್ಳಲು ಯೋಗ್ಯವಾಗಿರುವುದೆಂದು ಅರ್ಥವಾಗುವುದು. ಆಗ ಇಷ್ಟಾರ್ಥಪ್ರಾಪ್ತಿ ರೂಪವಾದ ಪುಷ್ಟಿಯು ಹಾಗೆ ಅಗ್ನಿಯೂ ಸ್ತೋತ್ರಾರ್ಹನಾಗಿರುವನು ಎಂದು ಅರ್ಥವು

**ಕ್ಷಿತಿರ್ನ ಪೃಥ್ವೀ— ಭೂಮಿರಿವ ಅಗ್ನಿಃ ವಿಸ್ತೀರ್ಣಃ ।** ಎಲ್ಲರಿಗೂ ಆಶ್ರಯವಾಗಿರುವ ಭೂಮಿಯ ಹಾಗೆ ಅಗ್ನಿಯು ಎಲ್ಲಾ ಪ್ರಾಣಿಗಳ ಆಹಾರವನ್ನೂ ಜೀರ್ಣಮಾಡುವ ಜಠರಾಗ್ನಿರೂಪದಿಂದ ಇರುವನು ಇದರಿಂದ ಭೂಮಿಯು ಎಲ್ಲಾ ಕಡೆಯಲ್ಲಿಯೂ ವಿಸ್ತಾರವಾಗಿ ಹರಡಿಕೊಂಡು ಇರುವಂತೆ ಅಗ್ನಿಯೂ ಎಲ್ಲದರಲ್ಲಿಯೂ ಹರಡಿಕೊಂಡು ಇರುವನು. ಇದರಿಂದ ಉಪಮೇಯವಾದ ಅಗ್ನಿಯಲ್ಲಿ ಸರ್ವ ವ್ಯಾಪಿತ್ವವೂ, ಪರಿಪೂರ್ಣತ್ವವು ಎಂಬ ಧರ್ಮಗಳು ಉಪಮಾನದಲ್ಲಿ ಇರುವ ಹಾಗೆ ಇರುವುವು ಎಂದು ಅರ್ಥವು.

**ಗಿರಿರ್ನ ಭುಜ್ಮ — ಪರ್ವತ ಇವ ಸರ್ವೇಷಾಂ ಭೋಜಯಿತಾ । ಯಥಾ ಗಿರೌ ವಿದ್ಯಮಾನಂ ಫಲಮೂಲಾದಿಕಂ ಆಹೃತ್ಯ ಸರ್ವೇ ಭುಂಜತೇ । ಯದ್ವಾ ಅಗ್ನಾವಾಹುತಿಂ ಹುತ್ವಾ ಯಜಮಾನಾಃ ಸ್ವರ್ಗಫಲಂ ಭುಂಜತೇ । ಅಥವಾ ಗಿರಿರ್ಯಥಾ ದುರ್ಭಿಕ್ಷೇ ಸರ್ವಾನ್ ಪ್ರಾಣಿನೋ ಭುನಕ್ತಿ ಸ್ವಕೀಯಫಲ ಮೂಲಾದಿದಾನೇನ ಪಾಲಯತಿ ತದ್ವದಯಮಪಿ ಪಾಪಾದನುಷ್ಠಾತೄನ್ ಪ್ರಮುಂಚತಿ । ತಥಾ ಚಾಮ್ನಾಯತೇ—"ಅಗ್ನಿರ್ಮಾ ತಸ್ಮಾದೇನಸಃ ಪ್ರಮುಂಚತು" (ತೈ. ಸಂ ೧-೮-೫-೩) ಇತಿ ।** ಭುಜ ಧಾತುವಿಗೆ ರಕ್ಷಣ, ಮತ್ತು ಆಹಾರವನ್ನು ತಿನ್ನುವುದು ಎಂದು ಎರಡು ವಿಧವಾದ ಅರ್ಥಗಳು ಇರುವುವು. ಇಲ್ಲಿ ಸಾಯಣರು ಇದನ್ನು ಪ್ರೇರಣಾರ್ಥದಲ್ಲಿ ಭೋಜಯಿತಾ—ಊಟಮಾಡಿಸುವವನು ಎಂದು ಅರ್ಥವನ್ನು ಬೋಧಿಸುವುದು ಎಂದು ಹೇಳಿರುತ್ತಾರೆ. ಬೆಟ್ಟದಲ್ಲಿ ಇರುವ ಹಣ್ಣು ಮೊದಲಾದವುಗಳನ್ನು ತಂದು ಎಲ್ಲರೂ ತಿನ್ನುವ ಹಾಗೆ ಬೆಟ್ಟವು ಅನುಕೂಲ ಮಾಡಿಕೊಡುವುದು. ಇದರಂತೆಯೇ ಅಗ್ನಿಯೂ ಎಲ್ಲರಿಗೂ ಆಹಾರಪದಾರ್ಥಗಳನ್ನು ತಿನ್ನುವುದಕ್ಕಾಗುವ ಹಾಗೆ

ಜೀಯಿಸಲು ತಕ್ಕವನಾಗಿರುವನು  ಪರ್ವತದ ಹಾಗೆ ಭೋಜಯಿತೃತ್ವವು ಅಗ್ನಿಗೆ ಈ ಪ್ರಕಾರವಾಗಿ ಉಪಪನ್ನವಾಗಿರುವುದು  ಅಥವಾ ಯಜ್ಞ ಮಾಡತಕ್ಕ ಯಜಮಾನರು ಅಗ್ನಿಯಲ್ಲಿ ಹವಿಸ್ಸನ್ನು ಅರ್ಪಿಸಿ ಸ್ವರ್ಗ (ಫಲವನ್ನೂ) ಸುಖವನ್ನು ಅನುಭವಿಸುವರು. ಆದ್ದರಿಂದ ಗಿರಿಯ ಹಾಗೆ ಭೋಜಯಿತೃತ್ವ ರೂಪವಾದ ಗುಣವು ಉಪಮೇಯವಾದ ಅಗ್ನಿಯಲ್ಲಿ ಯಜ್ಞಮಾಡುವ ಯಜಮಾನರ ವಿಷಯದಲ್ಲಿ ಮಾತ್ರವೇ ಉಂಟಾಗಿರುವುದು ಎಂದು ವಿಶೇಷವಾದ ಅರ್ಥವೂ ಸಂಗೃಹೀತವಾಗಿರುತ್ತದೆ  ಅಭ್ಯವಹಾರರೂಪವಾದ ಅರ್ಥವು ಎರಡುವಿಧವಾಗಿರುವುದೆಂದು ಹೇಳಿರುವ ಹಾಗೆಯೇ ಪಾಲನವೆಂಬ ಅರ್ಥವೂ ಅಗ್ನಿಯಲ್ಲಿಯೂ ಪರ್ವತದಲ್ಲಿಯೂ ಇರುವ ರೀತಿಯನ್ನು ಸಾಯಣ ಭಾಷ್ಯದಲ್ಲಿ ಹೇಳಿರುತ್ತದೆ. ಕ್ಷಾಮವು ಬಂದಾಗ ಬೆಟ್ಟವು ತನ್ನಲ್ಲಿ ಉತ್ಪನ್ನವಾಗಿರುವ ಫಲ ಮತ್ತು ಗೆಡ್ಡೆಗೆಣಸುಗಳನ್ನು ಪ್ರಾಣಿಗಳಿಗೆ ಆಹಾರವಾಗುವಂತೆ ಒದಗಿಸಿ ರಕ್ಷಿಸುವುದು  ಇದರಂತೆಯೇ ಅಗ್ನಿಯೂ ಕೂಡ ಪಾಪಕರ್ಮಗಳ ಫಲಾನುಭವವನ್ನು ಮಾಡಲು ಸಿದ್ಧರಾಗಿರುವ ಪ್ರಾಣಿಗಳನ್ನು ಅವರವರ ಪಾಪಗಳಿಂದ ಬಿಡುಗಡೆ ಮಾಡಿ ರಕ್ಷಿಸುವನು  ತೈತ್ತಿರೀಯ ಸಂಹಿತೆಯಲ್ಲಿ (೧-೮-೫-೩) ಮಂತ್ರದಲ್ಲಿ ಅಗ್ನಿಯು ನಮ್ಮನ್ನು ಆಯಾಯ ಪ್ರಕಾರದಿಂದ ಇರುವ ನಮ್ಮ ಪಾಪಗಳಿಂದ ರಕ್ಷಿಸಲಿ ಎಂದು ಪ್ರಾರ್ಥನೆಯು ಇರುತ್ತದ  ಇದರಿಂದ ಅಗ್ನಿಯು ರಕ್ಷಕನಾಗಿರುವನೆಂಬ ಅರ್ಥವು ಉಪಪನ್ನವಾಗಿರುವುದು  ಸ್ಕಂದಸ್ವಾಮಿಗಳು—ಉಪಮೇಯವಾದ ಅಗ್ನಿ ಪದವು ಪುಲ್ಲಿಂಗವಾಗಿರುವುದು  ರಣ್ವಾ ಎಂಬ ಇವೇ ಮೊದಲಾದ ಶಬ್ದಗಳು ಅಗ್ನಿಯಲ್ಲಿರುವ (ಧರ್ಮಗಳನ್ನು) ಗುಣಗಳನ್ನು ಬೋಧಿಸುವುವುಗಳಾದರೂ ವ್ಯತ್ಯಾಸದಿಂದ ಇಲ್ಲಿ ಬೇರೆಯ ಲಿಂಗಗಳಲ್ಲಿ ಪ್ರಯುಕ್ತವಾಗಿರುವುವು  ರಣ್ವಾ ಎಂಬ ಶಬ್ದಕ್ಕೆ ಎಲ್ಲರಿಗೂ ಆನಂದಕರನು, ಎಂದು ಅರ್ಥ ಹೇಳಿರುವರು. ಕ್ಷಿತಿಃ ಎಂಬ ಶಬ್ದವು ಪೃಥ್ವೀ ವಾಚಕವಾಗಿರುವುದು  ಅಗ್ನಿ ಶಬ್ದವು ಕಾಡುಕಿಚ್ಚಾಗಿರುವುದು  ಅಗ್ನಿಯು ಪೃಥಿವಿಯಂತೆ ಪೃಥು (ಬಲವುಳ್ಳವನು) ಎಂದು ಅರ್ಥವನ್ನು ಹೇಳಿರುತ್ತಾರೆ

**ಕ್ಷೋದೋ ನ ಶಂಭು ಕ್ಷೋದೋ ನ ಉದಕಮಿವ । ಯಥೋದಕಂ ಸುಖಂ ಕರೋತಿ ತದ್ವದಗ್ನಿಃ ಸರ್ವೇಷಾಂ ಸುಖಕಾರೀ ।** ಕ್ಷೋದ ಶಬ್ದವು ಉದಕಪರ್ಯಾಯ ಪದಗಳಲ್ಲಿ ಪಠಿತವಾಗಿರುವುದು (ನಿ.೨-೨೪) ನೀರುಗಳು ಸುಖವನ್ನು ಉಂಟುಮಾಡುವ ಹಾಗೆ ಅಗ್ನಿಯೂ ಎಲ್ಲರಿಗೂ ಸುಖವನ್ನು ಉಂಟು ಮಾಡುವನು

**ಅತ್ಯೋ ನ ಅಜ್ಮನ್ ಸರ್ಗಪ್ರತಕ್ತಃ—ಸಂಗ್ರಾಮೇ ಜಾತ್ಯಶ್ವ ಇವ ಸತತಗಮನಶೀಲಃ ವಿಸರ್ಜನೇನ ಪ್ರಗಮಿತಃ । ಯಥಾ ಸಾದಿನಾ ಪ್ರೇಷಿತೋ ಜಾತ್ಯಶ್ವೋ ಹಂತವ್ಯಸಮೀಪಮಾಶು ಗಚ್ಛತಿ ತದ್ವದಗ್ನಿರಪಿ ಸ್ತೋತೃಭಿಃ ಪ್ರೇಷಿತಃ ಶತ್ರೂನ್ ಹಂತುಂ ಶೀಘ್ರಂ ಗಚ್ಛತಿ ।** ಅತ್ಯ ಶಬ್ದವು ಇಪ್ಪತ್ತಾರು ಅಶ್ವನಾಮಗಳ (ನಿ ೨-೨೭) ಮಧ್ಯದಲ್ಲಿ ಪಠಿತವಾಗಿರುವುದು  ಕುದುರೆಯ ಸವಾರನು ತನ್ನ ಕುದುರೆಯನ್ನು ಶತ್ರುವಿನ ಸಂಹಾರಕ್ಕಾಗಿ ಪ್ರೇರಿಸಿದಾಗ ಅದು ಕೊಲ್ಲಬೇಕಾಗಿರುವವನ ಹತ್ತಿರಕ್ಕೆ ಬೇಗ ಹೋಗುವ ಹಾಗೆ ಅಗ್ನಿಯೂ ಕೂಡ ತನ್ನನ್ನು ಸ್ತೋತ್ರಮಾಡುವವರನ್ನು ಸಂತೋಷಪಡಿಸುವುದಕ್ಕಾಗಿ ಯುದ್ಧಮಾಡಲು ಸಿದ್ಧರಾಗಿರುವ ಯಜಮಾನರ ಶತ್ರುಗಳನ್ನು ಕೊಲ್ಲುವುದಕ್ಕಾಗಿ ಜಾಗ್ರತೆಯಾಗಿ ಹೋಗುವನು ಎಂದು ಅರ್ಥವು

**ಸಿಂಧುರ್ನ ಕ್ಷೋದಃ—ಸ್ಯಂದನಶೀಲಮುದಕಮಿವ । ನಿಮ್ನಪ್ರದೇಶಾಭಿಮುಖೋ ಜಲಪ್ರವಾಹೋ ದುರ್ನಿವಾರಃ ತಥಾ ಅಯಂ ಅಗ್ನಿಃ ದಗ್ಧವ್ಯಾಭಿಮುಖಃ ।** ಸಿಂಧು ಶಬ್ದವು ನದಿ ಎಂಬ ಅರ್ಥದಲ್ಲಿ

ರೂಢವಾಗಿದ್ದರೂ ಇಲ್ಲಿ ಕೇವಲ ಯೋಗಾರ್ಥದಲ್ಲಿ ಪ್ರಯುಕ್ತವಾಗಿರುವುದು. ನೀರುಗಳು ಯಾವಾಗಲೂ ಇಳಿಜಾರಾಗಿರುವ ಪ್ರದೇಶದಲ್ಲಿ ವೇಗವಾಗಿ ಹರಿಯುವ ಸ್ವಭಾವವುಳ್ಳವುಗಳಾಗಿರುವುವು ಇದರಂತೆ ಅಗ್ನಿಯೂ ಕೂಡ ತಾನು ಸುಡಬೇಕಾಗಿರುವುದರ ವಿಷಯದಲ್ಲಿ ವೇಗವಾಗಿ ಪ್ರವರ್ತಿಸುವನು. ಇವನನ್ನು ಆಗ ತಡೆಯಲು ಅಶಕ್ಯವಾಗಿರುವುದು ಎಂದು ಅರ್ಥವು. ಸ್ಕಂದಸ್ವಾಮಿಗಳ ಭಾಷ್ಯದಲ್ಲಿಯೂ ಕೂಡ ಇದೇ ಅರ್ಥವು ಈ ಸೂಕ್ತಗಳಿಗೆ ಹೇಳಲ್ಪಟ್ಟಿರುತ್ತದೆ

॥ ವ್ಯಾಕರಣಪ್ರಕ್ರಿಯಾ ॥

**ಪುಷ್ಟಿಃ**—ಪುಷ ಪುಷ್ಟೌ ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ ಷಕಾರಯೋಗದಿಂದ ಅದಕ್ಕೆ ಷ್ಟುತ್ವ

**ರಣ್ವಾ**- ರವಿ ಗತೌ ಧಾತು ರಣ್ವ್ಯತೇ ಪ್ರಾಪ್ಯತೇ ಇತಿ ರಣ್ವಃ **ಕೃತ್ಯಲ್ಯುಟೋ ಬಹುಲಂ** ಎಂಬಲ್ಲಿ ಬಹುಲವಚನದಿಂದ ಕರ್ತರಿಯಲ್ಲಿ ವಿಧಿಸಿರುವ ಪಚಾದಿನಿಬಂಧನವಾದ ಅಚ್ ಪ್ರತ್ಯಯವು ಇಲ್ಲಿ ಈ ಧಾತುವಿಗೆ ಕರ್ಮಣಿಯಲ್ಲಿ ಬರುತ್ತದೆ **ಇದಿತೋನುಮ್ ಧಾತೋಃ** ಸೂತ್ರದಿಂದ ನುಮಾಗಮ **ಅಟ್ ಕುಪ್ವಾಙ್**— ಸೂತ್ರದಿಂದ ಅದಕ್ಕೆ ಣತ್ವ ಸ್ತ್ರೀತ್ವದಲ್ಲಿ ಟಾಪ್ ರಣ್ವಾ ಎಂದು ರೂಪವಾಗುತ್ತದೆ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ

**ಭುಜ್ಮ**--ಭುಜ ಪಾಲನಾಭ್ಯವಹಾರಯೋಃ ಧಾತು **ಉಣಾದಯೋ ಬಹುಲಂ** ಎಂಬಲ್ಲಿ ಬಹುಲ ವಚನದಿಂದ **ಇಷಿಯುಧೀಂಧಿದಸಿ**—(ಉ. ಸೂ. ೧-೧೪೨) ಎಂಬುದರಿಂದ ವಿಧಿಸಲ್ಪಡುವ ಮಕ್ ಪ್ರತ್ಯಯವು ಈ ಧಾತುವಿಗೂ ಬರುತ್ತದೆ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ ಇದಕ್ಕೆ ಸು ಪರದಲ್ಲಿರುವಾಗ **ಸುಪಾಂ ಸುಲುಕ್** ಸೂತ್ರದಿಂದ ವಿಭಕ್ತಿಗೆ ಲುಕ್ ಬರುತ್ತದೆ

**ಅಜ್ಮನ್**—ಅಜ ಗತಿ ಕ್ಷೇಪಣಯೋಃ ಧಾತು **ಸರ್ವಧಾತುಭ್ಯೋ ಮನಿನ್** (ಉ ಸೂ ೪-೪೮೪) ಎಂಬುದರಿಂದ ಮನಿನ್ ಪ್ರತ್ಯಯ. **ಅಜೇರ್ವ್ಯಘಞಪೋಃ** ಎಂಬುದರಿಂದ ವೀಭಾವವು ಧಾತುವಿಗೆ ಪ್ರಾಪ್ತವಾದರೆ **ವಲಾದಾವಾರ್ಧಧಾತುಕೇ ವಿಕಲ್ಪ ಇಷ್ಯತೇ** (ಕಾ ೨-೪-೫೬-೨) ಎಂಬ ವಚನದಿಂದ ವೀಭಾವ ಬರುವುದಿಲ್ಲ ಅಜ್ಮನ್ ಶಬ್ದವಾಗುತ್ತದೆ ಇದಕ್ಕೆ ಸಪ್ತಮೀ ಏಕವಚನಪರದಲ್ಲಿರುವಾಗ **ಸುಪಾಂ ಸುಲುಕ್**—ಸೂತ್ರದಿಂದ ಅದಕ್ಕೆ ಲುಕ್ ಬರುತ್ತದೆ **ನಙಿ ಸಂಬುದ್ಧ್ಯೋಃ** ಎಂಬುದರಿಂದ ನಲೋಪ ಬರುವುದಿಲ್ಲ

**ಸರ್ಗಪ್ರತಕ್ತಃ**—ಸೃಜ ವಿಸರ್ಗೇ ಧಾತು ಇದಕ್ಕೆ ಘಞ್ ಪ್ರತ್ಯಯ ಬಂದಾಗ ಲಘೂಪಧಗುಣ ಬರುತ್ತದೆ. **ಚಜೋಃ ಕು ಘಿಣ್ಯತೋಃ** ಎಂಬುದರಿಂದ ಜಕಾರಕ್ಕೆ ಕುತ್ವದಿಂದ ಗಕಾರಾದೇಶ. ಸರ್ಗ ಎಂದಾಗಿ ಞಿತ್ ಪ್ರತ್ಯಯಾಂತನಾದುದರಿಂದ ಆದ್ಯುದಾತ್ತನಾಗುತ್ತದೆ ತಕಿ ಗತೌ ಧಾತು. ಣಿಜರ್ಥವು ಧಾತ್ವರ್ಥದಲ್ಲಿ ಅಂತರ್ಭೂತ ವಾಗಿದ ಇದಕ್ಕೆ ನಿಷ್ಠಾ ಕ್ತ ಪ್ರತ್ಯಯ **ಯಸ್ಯ ವಿಭಾಷಾ** ಎಂಬುದರಿಂದ ಕ್ತಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ ಕಿತ್ತಾದುದರಿಂದ ಇದು ಪರದಲ್ಲಿರುವಾಗ **ಅನಿದಿತಾಂ ಹಲ ಉಪ**—ಎಂಬುದರಿಂದ ಧಾತುವಿನ ಉಪಧೆಯಾದ ನಕಾರಕ್ಕೆ ಲೋಪ. ತಕ್ತ ಎಂದಾಗುತ್ತದೆ ಸರ್ಗೇಣ ಪ್ರತಕ್ತಃ ಸರ್ಗಪ್ರತಕ್ತಃ **ತೃತೀಯಾ ಕರ್ಮಣಿ** (ಪಾ. ಸೂ.

೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಸರ್ಗ ಎಂಬುದು ಆದ್ಯುದಾತ್ತವೆಂಬುದರಿಂದ ಆದ್ಯುದಾತ್ತವಾದ ಪದವಾಗುತ್ತದೆ

**ವರಾತೇ**—ವೃಞ್ ವರಣೇ ಧಾತು. ಇಲ್ಲಿಯೂ ಣಿಜರ್ಥವು ಧಾತ್ವರ್ಥದಲ್ಲಿ ಅಂತರ್ಭೂತವಾಗಿದೆ. ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿಗೆ ಲೇಟ್ ಪ್ರಥಮಪುರುಷದಲ್ಲಿ ತಪ್ರತ್ಯಯ. **ಟಿತ ಆತ್ಮನೇ ಪದಾನಾಂ**—ಸೂತ್ರದಿಂದ ಟಿಗೆ ಏತ್ವ **ಲೇಟೋಡಾಟೌ** ಎಂಬುದರಿಂದ ಅದಕ್ಕೆ ಆಡಾಗಮ. **ವ್ಯತ್ಯಯೋ ಬಹುಲಂ** ಎಂಬುದರಿಂದ ಶಬ್ವಿಕರಣ ಸಾರ್ವಧಾತುಕ (ಶಪ್) ನಿಮಿತ್ತವಾಗಿ ಧಾತುವಿಗೆ ಗುಣ. **ಉರಣ್‌ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ **ವೈತೋಽನ್ಯತ್ರ** (ಪಾ. ಸೂ ೩-೪-೯೬) ಎಂಬುದರಿಂದ ಲೇಟಿನ ಏಕಾರಕ್ಕೆ ಐಕಾರಾದೇಶವು ವಿಕಲ್ಪವಾಗಿ ಬರುತ್ತದೆ. ಆದುದರಿಂದ ಇಲ್ಲಿ ಐತ್ವ ಬರುವುದಿಲ್ಲ ವರಾತೇ ಎಂದು ರೂಪವಾಗುತ್ತದೆ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ ॥ ೫-೬ ॥



॥ ಸಂಹಿತಾಪಾಠಃ ॥

ಜಾಮಿಃ ಸಿಂಧೂನಾಂ ಭ್ರಾತೇವ ಸ್ವಸ್ರಾಮಿಭ್ಯಾನ್ನ ರಾಜಾ
ವನಾನ್ಯತ್ತಿ ।
ಯದ್ವಾತಜೂತೋ ವನಾ ವ್ಯಸ್ಥಾದಗ್ನಿರ್ಹ ದಾತಿ ರೋಮಾ
ಪೃಥಿವ್ಯಾಃ ॥ ೭ ॥ ೮ ॥

॥ ಪದಪಾಠಃ ॥

ಜಾಮಿಃ । ಸಿಂಧೂನಾಂ । ಭ್ರಾತಾಽಇವ । ಸ್ವಸ್ರಾಂ । ಇಭ್ಯಾನ್ । ನ । ರಾಜಾ ।
ವನಾನಿ । ಅತ್ತಿ ।
ಯತ್ । ವಾತಽಜೂತಃ । ವನಾ । ವಿ । ಅಸ್ಥಾತ್ । ಅಗ್ನಿಃ । ಹ । ದಾತಿ ।
ರೋಮ । ಪೃಥಿವ್ಯಾಃ ॥ ೭ ॥ ೮ ॥

॥ ಸಾಯಣಭಾಷ್ಯಂ ॥

ಸಿಂಧೂನಾಂ ಸ್ಯಂದನಶೀಲಾನಾಮಪಾಮಯಮಗ್ನಿರ್ಜಾಮಿರ್ಬಂಧುಃ । ತಾಸಾಮುತ್ಪಾದಕತ್ವಾತ್ । ತಥಾ ಚಾಮ್ನಾತಂ । ಅಗ್ನೇರಾಪ ಇತಿ । ಯದ್ವಾ । ದೇವೇಭ್ಯಃ ಪಲಾಯಿತೋಽಪ್ಸು ವರ್ತಮಾನಃ ಸನ್ ತಾಸಾಮಪಾಂ ಬಂಧುರ್ಬಭೂವೇತ್ಯರ್ಥಃ । ತತ್ರ ದೃಷ್ಟಾಂತಃ । ಸ್ವಸ್ರಾಂ ಸ್ವಸೄಣಾಂ ಭ್ರಾತೇವ । ಯಥಾ ಭ್ರಾತಾತಿಶಯೇನ ಹಿತಕರೋ ಭವತಿ ತದ್ವತ್ । ತಾದೃಶೋಽಗ್ನಿರ್ವನಾನಿ ಮಹಾಂತ್ಯರಣ್ಯಾನ್ಯತ್ತಿ । ಭಕ್ಷಯತಿ । ದಹತೀತ್ಯರ್ಥಃ । ತತ್ರ ನಿದರ್ಶನಂ ರಾಜೇಭ್ಯಾನ್ನ । ಭಿಯಂ ಯಂತೀತಿ ನೈರುಕ್ತವ್ಯುತ್ಪತ್ತ್ಯೇಭ್ಯಾಃ ಶತ್ರವಃ । ತಾನ್ಯಥಾ ಸಮೂಲಂ ಹಿನಸ್ತಿ ತದ್ವತ್ । ಯದ್ವಾ । ಇಭ್ಯಾ ಧನಿನಃ । ತಾನ್ಯಥಾ ಧನಮಪಹರನ್ರಾಜಾ ಹಿನಸ್ತಿ ತದ್ವದಿತ್ಯರ್ಥಃ । ಅಪಿ ಚ ಯದ್ಯದಾ ವಾತಜೂತೋ ವಾತೇನ ಪ್ರೇರಿತಃ ಸನ್ನನಾ ವನಾನ್ಯರಣ್ಯಾನಿ ವ್ಯಸ್ಥಾತ್ ಉಕ್ತಪ್ರಕಾರೇಣ ವಿವಿಧಮಾತಿಷ್ಠತಿ ದಗ್ಧುಂ ಪ್ರವರ್ತತೇ ತದಾನೀಮಗ್ನಿರ್ಹಾಸಾವಗ್ನಿರೇವ ಪೃಥಿವ್ಯಾ ಭೂಮೇಃ ಸಂಬಂಧೀನಿ ರೋಮೌಷಧಿರೂಪಾಣಿ ರೋಮಾಣಿ ದಾತಿ । ಛಿನತ್ತಿ । ಭೂಮ್ಯಾಮೋಷಧಿವನಸ್ಪತಿಜಾತಂ ಯದಸ್ತಿ ತತ್ಸರ್ವಂ ದಹತೀತಿ ಭಾವಃ ॥ ಸ್ವಸ್ರಾಂ । ಆನೋ ನುಡಭಾವಶ್ಛಾಂದಸಃ । ಅಸ್ಥಾತ್ । ಲುಙಿ ಗಾತಿಸ್ಥೇತಿ ಸಿಚೋ ಲುಕ್ । ದಾತಿ । ದಾಪ್ ಲವನೇ । ಅದಾದಿತ್ವಾಚ್ಛಪೋ ಲುಕ್ ॥

॥ ಪ್ರತಿಪದಾರ್ಥ ॥

**ಸಿಂಧೂನಾಂ**—ಹರಿಯುತ್ತಿರುವ ಈ ನೀರಿಗೆ (ಈ ಅಗ್ನಿಯು) । **ಜಾಮಿಃ**—ಬಂಧುವಿನಂತೆ ಇರುವನು । **ಸ್ವಸ್ರಾಂ**—ಸೋದರಿಯರಿಗೆ । **ಭ್ರಾತೇವ**—ಸಹೋದರನಂತೆ ಇರುವನು । **ರಾಜಾ**—ರಾಜನು । **ಇಭ್ಯಾನ್ನ**—ಶತ್ರುಗಳನ್ನು (ಧನಿಕರನ್ನು) ನಾಶಮಾಡುವಂತೆ । **ವನಾನಿ**—ಕಾಡುಗಳನ್ನು । **ಅತ್ತಿ**—ಭಕ್ಷಿಸುತ್ತಾನೆ । **ಯತ್**—ಯಾವಾಗ । **ವಾತಜೂತಃ**—ವಾಯುವಿನಿಂದ ಪ್ರೇರಿತನಾಗಿ । **ವನಾ**—ಕಾಡುಗಳನ್ನು । **ವ್ಯಸ್ಥಾತ್**—ದಹಿಸಲು ಪ್ರಾರಂಭಿಸುತ್ತಾನೋ । (**ತದಾನೀಂ**—ಆಗ) । **ಅಗ್ನಿರ್ಹ**—ಅಗ್ನಿಯೇ । **ಪೃಥಿವ್ಯಾಃ**—ಭೂಮಿಸಂಬಂಧವಾದ । **ರೋಮ**—(ಓಷಧಿರೂಪವಾದ) ರೋಮಗಳನ್ನು (ವೃಕ್ಷಗಳನ್ನು) । **ದಾತಿ**—ಕತ್ತರಿಸುತಾನೆ (ಸುಡುತ್ತಾನೆ)

॥ ಭಾವಾರ್ಥ ॥

(ಉದಕವು ಅಗ್ನಿಯಿಂದ ಉತ್ಪತ್ತಿಯಾಗುವುದರಿಂದ, ಅಥವಾ ಪಲಾಯಿತನಾದ ಅಗ್ನಿಯು ಉದಕದಲ್ಲಿ ಅಡಗಿರುವುದರಿಂದ) ಉದಕಕ್ಕೆ ಸೋದರನಂತಿರುವ ಅಗ್ನಿಯು ರಾಜನು ಶತ್ರುಗಳನ್ನು ನಾಶಮಾಡುವಂತೆ ಕಾಡುಗಳನ್ನು ಭಸ್ಮಮಾಡುತ್ತಾನೆ ವಾಯುಪ್ರೇರಿತನಾಗಿ (ಉರಿಯುತ್ತಿರುವಾಗ ಗಾಳಿಯು ಬೀಸಿದರೆ) ವನಗಳಲ್ಲಿರುವ ಓಷಧಿ ವನಸ್ಪತಿಗಳನ್ನೂ ಕೂಡ ದಹಿಸಿಬಿಡುತ್ತಾನೆ

## English Translation

He is the friend of the waters, like a brother to his sisters, he consumes the forest as a king slays his enemies, when excisted by the wind, he traverses the woods and shears the hairs (trees) of the earth.

॥ ವಿಶೇಷವಿಷಯಗಳು ॥

**ಸ್ವಸ್ರಾಂ ಭ್ರಾತಾ ಇವ ಸಿಂಧೂನಾಂ ಜಾಮಿಃ—ಸ್ವಸೄಣಾಂ ಭ್ರಾತಾ ಅತಿಶಯೇನ ಯಥಾಹಿತಕರಃ ತದ್ವತ್ ಅಯಮಗ್ನಿಃ ಸ್ಯಂದನಶೀಲಾನಾಮಪಾಂ ಬಂಧುಃ। ಅಪಾಮುತ್ಪಾದಕತ್ವಾತ್। ತಥಾಚಾಮ್ನಾತಮ್ 'ಅಗ್ನೇರಾಪಃ' (ತೈ ಆ. ೮ ೧) ಇತಿ।** ಸಹೋದರನು ತನ್ನ ಸಹೋದರಿಯರಿಗೆ ಬಹಳ ಮಟ್ಟಿಗೆ ಹಿತವನ್ನು ಉಂಟುಮಾಡುವ ಹಾಗೆ ಅಗ್ನಿದೇವನು (ಹರಿಯುವ) ಪ್ರವಹಿಸುವ ಸ್ವಭಾವವುಳ್ಳ ನೀರುಗಳಿಗೆ ಬಂಧುವಾಗಿರುವನು ಅಗ್ನಿಯಿಂದಲೇ ಉದಕವು ಉತ್ಪನ್ನವಾಗಿರುವುದು ಎಂದು ಶ್ರುತಿಯಲ್ಲಿ (ತೈ. ಆ ೮–೧) ಉಕ್ತವಾಗಿರುವುದು **ಅಥವಾ ದೇವೇಭ್ಯಃ ಪಲಾಯಿತೋ ಅಪ್ಸು ವರ್ತಮಾನಃ ಸ ತಾಸಾಮಪಾಂ ಬಂಧುರ್ಬಭೂವ।** ದೇವತೆಗಳ ಮಧ್ಯದಿಂದ ಓಡಿಹೋದ ಅಗ್ನಿಯು ನೀರುಗಳ ಮಧ್ಯದಲ್ಲಿ ವಾಸಮಾಡುತ್ತಾ ಉದಕಗಳಿಗೆ ಬಂಧುವಾಗಿರುವನು ಎಂದು ಇನ್ನೊಂದು ವಿಧವಾದ ಅರ್ಥವು ಅಗ್ನಿಗೂ ಉದಕಕ್ಕೂ ಉತ್ಪಾದ್ಯೋತ್ಪಾದಕರೂಪವಾದ ಅಥವಾ ಪೋಷ್ಯಪೋಷಕರೂಪವಾದ ಬಾಂಧವ್ಯವು ಉಕ್ತವಾಗಿರುತ್ತದೆ ಋ ಸಂ ಭಾಗ ೨ ಪೇಜು 60-61 **ನೋಡಿ.**

**ಇಭ್ಯಾನ್ನ ರಾಜಾ ವನಾನ್ಯತ್ತಿ। ರಾಜಾ ಶತ್ರೂನ್ ಯಥಾ ಸಮೂಲಂ ಹಿನಸ್ತಿ ತದ್ವತ್ ಅಯಮಗ್ನಿಃ ಮಹಾಂತ್ಯರಣ್ಯಾನಿ ಭಕ್ಷಯತಿ। ಭಯಂ ಯಂತೀತಿ ನೈರುಕ್ತವ್ಯುತ್ಪತ್ತ್ಯಾ ಇಭ್ಯಾಃ ಶತ್ರವಃ। ಯದ್ವಾ ಇಭ್ಯಾಃ ಧನಿನಃ। ಧನಮಪಹರನ್ ರಾಜಾ ಯಥಾ ತಾನ್ ಹಿನಸ್ತಿ ತದ್ವತ್ ಅಯಮಪಿ ಇತ್ಯರ್ಥಃ।** ರಾಜನು ಶತ್ರುಗಳನ್ನು ನಿಶ್ಶೇಷವಾಗಿ ನಾಶಪಡಿಸುವ ಹಾಗೆ ಅಗ್ನಿಯು ದೊಡ್ಡ ಕಾಡುಗಳನ್ನು ಸುಡುವನು ಭಯವನ್ನು ಹೊಂದುವವರಾದ್ದರಿಂದ ಇಭ್ಯರೆಂದು ಯಾಸ್ಕರು ಇಭ್ಯಶಬ್ದಕ್ಕೆ ವ್ಯುತ್ಪತ್ತಿಯನ್ನು ಹೇಳಿ ಶತ್ರುಗಳೆಂದು ಅರ್ಥವನ್ನು ಹೇಳಿರುವರು ಇಭ್ಯ ಶಬ್ದಕ್ಕೆ ಧನಿಕರೆಂದು ಅರ್ಥಮಾಡಿ ರಾಜನು ಅವರ ಧನವನ್ನು ಅಪಹರಿಸಿ ಧನಿಕರನ್ನು ನಿಗ್ರಹಮಾಡುವ ಹಾಗೆ ಅಗ್ನಿಯು ಕಾಡುಗಳ ಸಂಪತ್ತನ್ನು ನಾಶಮಾಡಿ ಅದನ್ನು ಸುಡುವನೆಂದು ಅಭಿಪ್ರಾಯವು ಎಂದು ಎರಡು ವಿಧವಾದ ಅರ್ಥವನ್ನು ಸಾಯಣರು ಹೇಳಿರುವರು ಸ್ಕಂದಸ್ವಾಮಿಗಳು ಈ ಅರ್ಥವನ್ನೇ ಹೇಳುವರು ಅವರೆ ಈ ಋಕ್ಕಿನ ಮೊದಲನೆಯ ಪಾದದಿಂದ ವೈದ್ಯುತಾಗ್ನಿಯೂ, ಎರಡನೆಯ ಪಾದದಿಂದ ದವಾಗ್ನಿಯೂ ವರ್ಣಿತವಾಗಿರುವುದೆಂದು ಅರ್ಥಮಾಡಿರುತ್ತಾರೆ

॥ ವ್ಯಾಕರಣಪ್ರಕ್ರಿಯಾ ॥

**ಸ್ವಸ್ರಾಂ—**ಸ್ವಸೃ+ಆಮ್ ಎಂದಿರುವಾಗ **ಹ್ರಸ್ವನದ್ಯಾಪೋ ನುಟ್** ಎಂಬುದರಿಂದ ಬರುವ ಆಮಿಗೆ ನುಡಾಗಮವು ಛಾಂದಸವಾಗಿ ಇಲ್ಲಿ ಬರುವುದಿಲ್ಲ **ಇಕೋ ಯಣಚಿ** ಸೂತ್ರದಿಂದ ಯಣ್

**ರಾಜಾ—**ರಾಜೃ ದೀಪ್ತೌ ಧಾತು ಕನಿನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ ಸುಪರವಾದಾಗ **ಉಪಧಾದೀರ್ಘ.** ಹಲ್‌ಙ್ಯಾದಿಸೂತ್ರದಿಂದ ಸು**ಲೋಪ** ಪದಾಂತದಲ್ಲಿ ನಲೋಪ

**ಅತ್ತಿ**-ಅದ ಭಕ್ಷಣೇ ಧಾತು ಲಟ್‌ಪ್ರಥಮಪುರುಷದಲ್ಲಿ ತಿಪ್ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್ **ಖರಿಚ** ಸೂತ್ರದಿಂದ ಚರ್ತ್ವ. ಅತಿಙಂತವ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ವಾತಜೂತಃ**—ಜು ಎಂಬುದು ಸೂತ್ರನಿರ್ದಿಷ್ಟವಾದ ಧಾತು. ಇದಕ್ಕೆ ಕ್ತ ಪ್ರತ್ಯಯ ವಾತೇನ ಜೂತಃ ವಾತಜೂತಃ **ತೃತೀಯಾಕರ್ಮಣಿ** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಅಸ್ಥಾತ್**—ಷ್ಠಾ ಗತಿ ನಿವೃತ್ತೌ ಧಾತು. ಲುಙ್ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಚ್ಲಿ ಲುಙಿ** ಎಂಬುದರಿಂದ ಪ್ರಾಪ್ತವಾದ ಚ್ಲಿಗೆ **ಚ್ಲೇಃ ಸಿಚ್** ಸೂತ್ರದಿಂದ ಸಿಚಾದೇಶ ಅದಕ್ಕೆ **ಗಾತಿಸ್ಥಾಘುಪಾ**—(ಪಾ ಸೂ. ೨-೪-೭೭) ಎಂಬುದರಿಂದ ಲುಕ್. ಲುಙ್ ನಿಮಿತ್ತವಾಗಿ ಅಂಗಕ್ಕೆ ಅಡಾಗಮ. ಅಸ್ಥಾತ್ ಎಂದು ರೂಪವಾಗುತ್ತದೆ ಯತ್ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯು-ದಾತ್ತವಾದ ಪದವಾಗುತ್ತದೆ

**ದಾತಿ**—ದಾಪ್ ಲವನೇ ಧಾತು ಅದಾದಿ ಲಟ್ಪ್ರಥಮಪುರುಷ ಏಕವಚನದಲ್ಲಿ ತಿಪ್ರತ್ಯಯ **ಅದಿಪ್ರ-ಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೭-೮ ॥



॥ ಸಂಹಿತಾಪಾಠಃ ॥

ಶ್ವಸಿತ್ಯಪ್ಸು ಹಂಸೋ ನ ಸೀದನ್ ಕ್ರತ್ವಾ ಚೇತಿಷ್ಠೋ ವಿಶಾ-
ಮುಷರ್ಭುತ್ ।
ಸೋಮೋ ನ ವೇಧಾ ಋತಪ್ರಜಾತಃ ಪಶುರ್ನ ಶಿಶ್ವಾ ವಿಭು-
ರ್ದೂರೇಭಾಃ ॥ ೯ ॥ ೧೦ ॥

॥ ಪದಪಾಠಃ ॥

**ಶ್ವಸಿತಿ । ಅಪ್ಽಸು । ಹಂಸಃ । ನ । ಸೀದನ್ । ಕ್ರತ್ವಾ । ಚೇತಿಷ್ಠಃ । ವಿಶಾಂ । ಉಷಃಽಭುತ್ ।**

ಸೋಮಃ । ನ । ವೇಧಾಃ । ಋತಽಪ್ರಜಾತಃ । ಪಶುಃ । ನ । ಶಿಶ್ವಾ । ವಿಽಭುಃ । ದೂರೇಽಭಾಃ ॥ ೯ ॥ ೧೦ ॥

॥ ಸಾಯಣಭಾಷ್ಯಂ ॥

ಅಯಮಗ್ನಿರ್ದೇವೇಭ್ಯಃ ಪಲಾಯಿತಃ ಸನ್ನಪ್ಸೂದಕೇಷು ಶ್ವಸಿತಿ । ಪ್ರಾಣಿತಿ । ನಿಗೂಢೋ ವರ್ತತ ಇತ್ಯರ್ಥಃ । ತತ್ರ ದೃಷ್ಟಾಂತಃ । ಹಂಸೋ ನ ಸೀದನ್ । ಉದಕಮಧ್ಯ ಉಪವಿಶನ್ಹಂಸ ಇವ । ಕೀದೃಶೋಽಗ್ನಿಃ । ಕ್ರತ್ವಾ ಕ್ರತುನಾ ಜ್ಞಾನಹೇತುನಾತ್ಮೀಯೇನ ಪ್ರಕಾಶೇನ ವಿಶಾಂ ಪ್ರಜಾನಾಂ ಚೇತಿಷ್ಠೋಽತಿಶಯೇನ ಚೇತಯಿತಾ ಜ್ಞಾಪಯಿತಾ । ರಾತ್ರೌ ಹಿ ಸರ್ವೇ ಜನಾ ಅಂಧಕಾರಾವೃತಂ ಸರ್ವಮಗ್ನೇಃ ಪ್ರಕಾಶಾಜ್ಜಾನಂತಿ । ಉಷರ್ಭುತ್ ಉಷಸ್ಯುಷಃಕಾಲೇಽಗ್ನಿಹೋತ್ರಾದೌ ಪ್ರಬುದ್ಧಃ ಸೋಮೋ ನ ವೇಧಾಃ ಸೋಮ ಇವ ವಿಧಾತಾ ಸ್ರಷ್ಟಾ । ಸೋಮೋ ಯಥಾ ಸಕಲಮೋಷಧಿರೂಪಂ ಭೋಗ್ಯಜಾತಂ ಸೃಜತಿ । ಸೋಮೋ ವಾ ಓಷಧೀನಾಂ ರಾಜಾ । ತೈ. ಸಂ ೬-೧-೯-೧ । ಇತಿ ಶ್ರುತೇಃ । ತಥಾ ಸಕಲಂ ಭೋಕ್ತೃಜಾತಂ ಸೃಜತಿ । ಅಗ್ನೇರೇವ ಭೋಕ್ತೃರೂಪೇಣಾವಸ್ಥಾನಾತ್ । ತಥಾ ಚ ತೈತ್ತಿರೀಯಕಂ । ಅಗ್ನಿರನ್ನಾದೋಽನ್ನಪತಿರಿತಿ । ವಾಜಸನೇಯಕೇಽಪಿ ಭೋಕ್ತೃಭೋಗ್ಯಯೋರಗ್ನೀಷೋಮಾತ್ಮಕತ್ವಮಾಮ್ನಾತಂ । ಏತಾವದ್ವಾ ಇದಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದ ಇತಿ । ಋತಪ್ರಜಾತಃ । ಋತಮಿತ್ಯುದಕನಾಮ । ಋತಾವುದಕಾತ್ಪ್ರಾದುರ್ಭೂತಃ ಪಶುರ್ನ ಶಿಶ್ವಾ । ಉದಕಮಧ್ಯೇ ವರ್ತಮಾನೋಽಗ್ನಿಃ ಶಯಾನಃ ಪಶುರಿವ ತನೂಕೃತಃ ಸಂಕುಚಿತಗಾತ್ರೋಽಭೂತ್ । ತತಃ ಪ್ರಾದುರ್ಭೂತಃ ಸನ್ವಿಭುಃ ಪ್ರಭೂತಃ ಸಂಪನ್ನಃ । ಯದ್ವಾ । ಶಿಶ್ವಾ ಶಿಶುನಾ ಗರ್ಭಸ್ಥೇನ ವತ್ಸೇನ ಸಹಿತಾ ಗೌರಿವ ವಿಭುಃ ಪ್ರಭೂತಾವಯವೋ ಜಾತ ಇತ್ಯರ್ಥಃ । ದೂರೇಭಾಃ । ದೂರೇ ವಿಪ್ರಕೃಷ್ಟದೇಶೇಽಪಿ ಭಾಃ ಪ್ರಕಾಶೋ ಯಸ್ಯ ಸ ತಥೋಕ್ತಃ । ಏವಂಭೂತೋಽಗ್ನಿರಪ್ಸು ಶ್ವಸಿತೀತಿ ಪೂರ್ವೇಣ ಸಂಬಂಧಃ ॥ ಶ್ವಸಿತಿ । ಶ್ವಸ ಪ್ರಾಣನೇ । ಅದಾದಿತ್ವಾಚ್ಛಪೋ ಲುಕ್ । ರುದಾದಿಭ್ಯಃ ಸಾರ್ವಧಾತುಕೇ । ಪಾ. ೭-೨-೭೬ । ಇತೀಡಾಗಮಃ । ತಿಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಕ್ರತ್ವಾ । ಜಸಾದಿಷು ಛಂದಸಿ ವಾವಚನಮಿತಿ ನಾಭಾವಾಭಾವಃ । ಉಷಸಿ ಬುಧ್ಯತ ಇತ್ಯುಷರ್ಭುತ್ । ಬುಧ ಅವಗಮನೇ । ಕ್ವಿಪ್ಚೇತಿ ಕ್ವಿಪ್ । ಏಕಾಚೋ ಬಶ ಇತಿ ಭಷ್ಭಾವಃ । ಅಹರಾದೀನಾಂ ಪತ್ಯಾದಿಷೂಪಸಂಖ್ಯಾನಂ । ಮ. ೮-೨-೭೦ । ಇತಿ ಸಕಾರಸ್ಯ ರೇಫಾದೇಶಃ । ಶಿಶ್ವಾ । ಶೋ ತನೂಕರಣೇ । ಆದೇಚ ಇತ್ಯಾತ್ವಂ । ಶಃ ಕಿತ್ಸನ್ವಚ್ಚ । ಉ. ೧-೨೧ । ಇತ್ಯುಪ್ರತ್ಯಯಃ । ಸನ್ವದ್ಭಾವಾದ್ದ್ವಿರ್ಭಾವೇತ್ವೇ । ಅತ ಏವ ನಿತ್ತ್ವಾದಾದ್ಯುದಾತ್ತತ್ವಂ । ಕಿದ್ವದ್ಭಾವಾದಾತೋ ಲೋಪ ಇಟಿ ಚೇತ್ಯಾಕಾರಲೋಪಃ । ಪ್ರಥಮಪಕ್ಷೇ ಸುಪಾಂ ಸುಲುಗಿತಿ ಸೋರಾಕಾರಃ । ದ್ವಿತೀಯೇ ತು ಪೂರ್ವವನ್ನಾಭಾವಾಭಾವಃ । ದೂರೇಭಾಃ । ತತ್ಪುರುಷೇ ಕೃತಿ ಬಹುಲಮಿತಿ ಬಹುವ್ರೀಹಾವಪಿ ಬಹುಲವಚನಾದಲುಕ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಕ್ರತ್ವಾ**--ಜ್ಞಾನಹೇತುವಾದ ಸ್ವಪ್ರಕಾಶದಿಂದ । **ವಿಶಾಂ**—ಪ್ರಜೆಗಳಿಗೆ । **ಚೇತಿಷ್ಠಃ**-ಜ್ಞಾನದಾತೃವಾದ (ಅಂಧಕಾರದಲ್ಲಿ ವಸ್ತುಜ್ಞಾನವುಂಟುಮಾಡುವ) । **ಉಷರ್ಭುತ್**—ಉಷಃಕಾಲದಲ್ಲಿ (ಹೋಮಾದಿಗಳಿಂದ) ಪ್ರಬುದ್ಧನಾಗಿ । **ಸೋಮೋ ನ**—ಸೋಮನಂತೆ । **ವೇಧಾಃ**—ಸೃಷ್ಟಿಮಾಡುವ । **ಋತಪ್ರಜಾತಾಃ**—ಉದಕದಿಂದ ಪ್ರಾದುರ್ಭೂತನಾಗಿ । **ಪಶುರ್ನ ಶಿಶ್ವಾ**—ವತ್ಸಯುಕ್ತವಾದ ಗೋವಿನಂತೆ (ಮಲಗಿರುವ ಪಶುವಿನಂತೆ ಸಂಕುಚಿತ ಗಾತ್ರವುಳ್ಳವನಾಗಿರುವನು) । **ವಿಭುಃ**—(ಗರ್ಭಸಹಿತವಾದ ಹಸುವಿನಂತೆ) ದೊಡ್ಡದಾಗಿಯೂ ಇರುವನು **ದೂರೇಭಾಃ**-ದೂರಪ್ರದೇಶಗಳಲ್ಲಿ ಪರಿದೃಶ್ಯಮಾನವಾದ ಕಾಂತಿಯುಳ್ಳ (ದೇವತೆಗಳಿಂದ ಪಲಾಯಿತನಾದ ಅಗ್ನಿಯು) । **ಅಪ್ಸು**—ಉದಕದಲ್ಲಿ । **ಹಂಸೋ ನ**—ಹಂಸದಂತೆ । **ಸೀದನ್**—ಉಪವಿಷ್ಟನಾಗಿ । **ಶ್ವಸಿತಿ**—ಪ್ರಾಣಧಾರಣ ಮಾಡುತ್ತಾನೆ.

॥ ಭಾವಾರ್ಥ ॥

ಅಗ್ನಿಯು ಅಂಧಕಾರಾವೃತವಾದ ಕಾಲದಲ್ಲಿ ಸ್ವಪ್ರಕಾಶದಿಂದ ಪ್ರಜೆಗಳಿಗೆ ಪದಾರ್ಥಜ್ಞಾನವನ್ನುಂಟು ಮಾಡುವನು. ಉಷಃಕಾಲದಲ್ಲಿ ಅಗ್ನಿಹೋತ್ರಾದಿಗಳಲ್ಲಿ ಪ್ರಬುದ್ಧನಾಗಿ ಜನಗಳಿಗೆ ಎಚ್ಚರಿಕೆಯನ್ನುಂಟುಮಾಡುವನು ದೇವತೆಗಳಿಂದ ಪಲಾಯಿತನಾಗಿ ಉದಕದಲ್ಲಡಗಿದ್ದಾಗ ಸಂಕುಚಿತ ಗಾತ್ರವುಳ್ಳವನಾಗಿದ್ದು, ಅನಂತರ ಮಲಗಿದ್ದ ಪಶುವು ಎಚ್ಚೆತ್ತಮೇಲೆ ಅವಯವಗಳನ್ನು ವಿಸ್ತರಿಸಿಕೊಳ್ಳುವಂತೆ, ನೀರಿನಿಂದ ಮೇಲಕ್ಕೆ ಬಂದಾಗ ಆಕಾರವನ್ನು ತಾಳುವ ಅಗ್ನಿಯು, ಉದಕದಲ್ಲಿ ಹಂಸದಂತೆ ಜೀವಿಸುತ್ತಾನೆ.

## English Translation

He breaths amidst the waters like a sitting swan; awakened at the dawn, he restores by his operations conciousness to men; he is a creator, like Soma; born from the waters, (where he lurked) like an animal with coiled-up limbs, he became enlarged, and his light (spread) afar.

॥ ವಿಶೇಷವಿಷಯಗಳು ॥

**ವಿಶಾಂ ಚೇತಿಷ್ಠಃ—ಪ್ರಜಾನಾಂ ಅತಿಶಯೇನ ಚೇತಯಿತಾ ಜ್ಞಾಪಯಿತಾ । ರಾತ್ರೌ ಸರ್ವೇ-ಜನಾಃ ಅಂಧಕಾರಾವೃತಂ ಸರ್ವಂ ಅಗ್ನೇಃ ಪ್ರಕಾಶಾತ್ ಜಾನನ್ತಿ ।** ರಾತ್ರಿಯ ಕಾಲದಲ್ಲಿ ಎಲ್ಲರೂ ಕತ್ತಲೆಯಿಂದ ಮುಚ್ಚಿಹೋಗಿರುವುದೆಲ್ಲವನ್ನೂ ಅಗ್ನಿಯ ಪ್ರಕಾಶದಿಂದ ತಿಳಿದುಕೊಳ್ಳುವರು. ಆದ್ದರಿಂದ ಅಗ್ನಿಯು ಪ್ರಜೆಗಳೆಲ್ಲರಿಗೂ ಜ್ಞಾನವನ್ನುಂಟುಮಾಡುವವನಾಗಿ ಇರುವನು

**ಉಷರ್ಭುತ್-- ಉಷಸಿ ಬುಧ್ಯತೆ ಇತಿ ಉಷರ್ಭುತ್ । ಉಷಸಿ ಉಷಃ ಕಾಲೇ ಅಗ್ನಿಹೋತ್ರಾದೌ ಪ್ರಬುದ್ಧಃ ।** ಉಷಃಕಾಲದಲ್ಲಿ ಅಗ್ನಿಹೋತ್ರವೇ ಮೊದಲಾದ ಕರ್ಮಾಚರಣೆಗಾಗಿ ಈ ಅಗ್ನಿಯನ್ನು ಯಜ್ಞಮಾಡುವ ಯೋಗಶೀಲರು ಉದ್ಬೋಧನೆ ಮಾಡುವರು ಆದ್ದರಿಂದ ಅಗ್ನಿಯು ಉಷರ್ಬುಧನೆನಿಸಿರುವನು.

**ಸೋಮೋ ನ ವೇಧಾಃ—ಸೋಮ ಇವ ವಿಧಾತಾ ಸ್ರಷ್ಟಾ । ಸೋಮೋ ಯಥಾ ಸಕಲಮೋಷಧಿ ರೂಪಂ ಭೋಗ್ಯಜಾತಂ ಸೃಜತಿ । "ಸೋಮೋ ವಾ ಓಷಧೀನಾಂ ರಾಜಾ" (ತೈ. ಸಂ. ೬-೧-೯-೧.) ಇತಿ ಶ್ರುತೇಃ । ತಥಾ ಸಕಲಂ ಭೋಕ್ತೃಜಾತಂ ಸೃಜತಿ ಅಗ್ನೇರೇವ ಭೋಕ್ತೃ ರೂಪೇ ಣಾವಸ್ಥಾನಾತ್ । ತಥಾ ಚ ತೈತ್ತಿರೀಯಕಮ್—"ಅಗ್ನಿರನ್ನಾದೋಽನ್ನಪತಿಃ" ಇತಿ । ವಾಜಸನೇಯಕೇಽಪಿ ಭೋಕ್ತೃಭೋಗ್ಯಯೋರಗ್ನೀಷೋಮಾತ್ಮಕತ್ವಮಾಮ್ನಾತಮ್—"ಏತಾವದ್ವಾ ಇದಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದಃ" ಇತಿ ।** ಸೋಮಃ--ಸೋಮದೇವನೇ, ವಿಧಾತಾ-ಸೃಷ್ಟಿಮಾಡುವನು ಎಂದರೆ ಅಗ್ನಿಯು ಸೋಮನಂತೆ ವಿಧಾತೃವಾಗಿರುವನು ಎಂದು ಅರ್ಥವಾಗುತ್ತದೆ. ಅಗ್ನಿಯು ಸೋಮನ ಹಾಗೆ ಸೃಷ್ಟಿಮಾಡುವವನಾಗಿರುವನು. ಸೋಮದೇವನು ಓಷಧಿಗಳಿಗೆಲ್ಲಕ್ಕೂ ರಾಜನಾಗಿರುವನು ಎಂದು ತೈ ಸಂ. ೬-೧-೯-೧ ನೆಯ ಮಂತ್ರದಲ್ಲಿಯೂ ತೈತ್ತಿರಿಯ ಬ್ರಾಹ್ಮಣ ೩-೯-೧೭-೧ ನೆಯ ವಾಕ್ಯದಲ್ಲಿಯೂ ಉಕ್ತವಾಗಿರುವುದರಿಂದ ಈ ಸೋಮದೇವನು ಮೂಲಿಕೆಗಳೇ ಮೊದಲಾದ ಅನೇಕ ವಿಧವಾದ ಭೋಗ್ಯವಸ್ತುಗಳೆಲ್ಲ ವನ್ನೂ ಸೃಷ್ಟಿಮಾಡುವನು. ಇದರಂತೆಯೇ ಅಗ್ನಿಯು ಭೋಗ್ಯರೂಪದಿಂದ ಇರುವ ಸರ್ವಕ್ಕೂ ಭೋಕ್ತೃ ವಾಗಿರುವನು ತೈತ್ತಿರೀಯ ಬ್ರಾಹ್ಮಣ ೨-೫-೭-೩ ನೆಯ ವಾಕ್ಯದಲ್ಲಿ ಅಗ್ನಿಯು ಅನ್ನವನ್ನು ಭೋಗಿಸುವ ಭೋಕ್ತೃ ವಾಗಿರುವನು ಅನ್ನಕ್ಕೆ ಅಧಿಪತಿಯಾಗಿರುವನು ಎಂದು ಉಕ್ತವಾಗಿರುತ್ತದೆ ವಾಜಸನೇಯ ಶಾಖೆಯಲ್ಲಿಯೂ ಕೂಡ ಇದೇ ರೀತಿಯಾಗಿ ಸೋಮನಿಗೆ ಭೋಗ್ಯರೂಪವೂ ಅಗ್ನಿಗೆ ಭೋಕ್ತೃರೂಪವೂ ಹೇಳಲ್ಪಟ್ಟಿರುತ್ತದೆ ಸೋಮ ಏವಾನ್ನಂ ಅಗ್ನಿರನ್ನಾದಃ ಎಂದು ಶ್ರುತಿಪ್ರಮಾಣವಿರುವುದರಿಂದ ಸೋಮಾಗ್ನಿಗಳು ಭೋಗ್ಯಭೋಕ್ತೃಗಳಾಗಿರುವರು.

**ಪಶು ರ್ನ ಶಿಶ್ವಾ ವಿಭುಃ-ಉದಕಮಧ್ಯೇ ವರ್ತಮಾನೋ ಅಗ್ನಿಃ ಶಯಾನಃ ಪಶುರಿವ ತನೂಕೃತಃ ಸಂಕುಚಿತಗಾತ್ರಃ ಅಭೂತ್ । ತತಃ ಪ್ರಾದುರ್ಭೂತಃ ಸನ್ನಿ ಭುಃ ಪ್ರಭೂತಃ ಸಂಪನ್ನಃ । ಯದ್ವಾ ಶಿಶುನಾ ಗರ್ಭಸ್ಥೇನ ವತ್ಸೇನ ಸಹಿತಾ ಗೌರಿವ ವಿಭುಃ ಪ್ರಭೂತಾವಯವೋ ಜಾತ ಇತ್ಯರ್ಥಃ ।** ಉದಕಗಳ ಮಧ್ಯದಲ್ಲಿ ಅಗ್ನಿ ದೇವನು ವಾಸಮಾಡುತ್ತಿರುವಾಗ ಅವನ ಶರೀರವು ಪಶುವಿನ ಶರೀರದಂತೆ (ಕುಗ್ಗಿದ್ದಿತು) ಬಹಳ ಕಡಿಮೆಯಾದ ಪ್ರಮಾಣದಿಂದ ಇದ್ದಿತು. ಉದಕಗಳ ಅಭ್ಯಂತರದಿಂದ ಪ್ರಾದುರ್ಭೂತನಾದನಂತರ ದೃಢವಾದ ಮತ್ತು ದೊಡ್ಡದಾದ ಶರೀರ ದಿಂದ ಅಗ್ನಿಯು ಹೊಳೆಯುತ್ತಿದ್ದನು ಮತ್ತು ಗರ್ಭದಲ್ಲಿರುವ ಕರುವಿನಿಂದ ಕೂಡಿರುವ ಗೋವಿನಂತೆ ಅಗ್ನಿಯು ಚೆನ್ನಾಗಿ ವೃದ್ಧಿಹೊಂದಿದ ಶರೀರವುಳ್ಳವನಾಗಿದ್ದನು. ಎಂದು ಎರಡು ವಿಧವಾದ ಅರ್ಥವು

**ದೂರೇ ಭಾಃ— ದೂರೇ ವಿಪ್ರಕೃಷ್ಟದೇಶೇಽಪಿ ಭಾಃ ಪ್ರಕಾಶೋ ಯಸ್ಯ ಸಃ** ಅಗ್ನಿಯು ದೂರದಲ್ಲಿ ದ್ದಾಗ್ಯೂ ಅವನ ತೇಜಸ್ಸಿನ ಪ್ರಕಾಶವು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವುದು ಎಂದು ಅಭಿಪ್ರಾಯವು

ಸ್ಕಂದಸ್ವಾಮಿಗಳು—**ತೃಣಾದೀನಿ ದಹನ್ನಗ್ನಿಃ ಶ್ವಸಿತಿ** ಹುಲ್ಲುಕಡ್ಡಿ ಮುಂತಾದುವುಗಳನ್ನು ಸುಡುವ ಅಗ್ನಿಯು—ವಾಯುವಿನಂತೆ ಶಬ್ದಮಾಡುವನು, **ಕ್ರತ್ವಾ ಚೇತಿಷ್ಠಃ**—ಜ್ಞಾನಿಗಳ ಮಧ್ಯದಲ್ಲಿ ಬಹಳಮಟ್ಟಿನ ಮೇಧಾವಿಯು, **ವಿಶಾಮುಷರ್ಭುತ್**—ಮನುಷ್ಯರ ಹಿತಕ್ಕಾಗಿ ಉಷಃಕಾಲದಲ್ಲಿ ಉದ್ಬುದ್ಧನಾಗುವನು, ಎಂದು ಅರ್ಥ ವನ್ನೂ **ಸೋಮೋ ನ ಮೇಧಾಃ**—ಎಂಬ ಶಬ್ದಕ್ಕೆ ಮೇಧಾವಿ ಎಂಬುದಾಗಿಯೂ, ವಿವರಿಸಿರುವರು **ಋತಪ್ರಜಾತಃ-**

ಎಂಬ ಶಬ್ದಕ್ಕೆ **ಋತಮಿತ್ಯಾದಿತ್ಯಃ ಉದಕಂ ವಾ ತತ ಉತ್ಪನ್ನಃ**---ಋತವೆಂದರೆ ಆದಿತ್ಯನು ಅಥವಾ ಸೂರ್ಯನು ಅಥವಾ ನೀರುಗಳು ಅಗ್ನಿಯು ಆದಿತ್ಯನಿಂದ ಅಥವಾ ನೀರುಗಳಿಂದ ಉತ್ಪನ್ನನಾಗಿರುವನು ಉದಕದಿಂದ ಅಗ್ನಿಯು ಉತ್ಪತ್ತಿಯು ವಿದ್ಯುತ್ (ಮಿಂಚುಗಳ) ರೂಪವಾಗಿರುವುದು ಸೂರ್ಯನ ಉತ್ತರದಿಕ್ಕಿಗೆ ತಿರುಗಿದ ಕೂಡಲೇ (ಉತ್ತರಾಯಣವು ಬಂದ ಕೂಡಲೇ) ಸೂರ್ಯಕಾಂತ ಶಿಲೆಯನ್ನು ಚೆನ್ನಾಗಿ ತೊಳದು ಅದರಮೇಲೆ ಬಿಸಿಲಿನಲ್ಲಿ ಒಣಗಿದ ಹುಲ್ಲನ್ನು ಇರಿಸಿದಲ್ಲಿ ಅಗ್ನಿಯು ಉಂಟಾಗುವುದು ಲೋಕಸಿದ್ಧವಾಗಿರುತ್ತದೆ ಇದರಿಂದಲೇ ಅಗ್ನಿಯು ಆದಿತ್ಯನಿಂದ ಉತ್ಪನ್ನನಾಗುವನು ಎಂದು ಅರ್ಥವನ್ನು ವಿವರಿಸಿರುವರು

॥ ವ್ಯಾಕರಣಪ್ರಕ್ರಿಯಾ ॥

**ಶ್ವಸಿತಿ**—ಶ್ವಸ ಪ್ರಾಣನೇ ಧಾತು. ಅದಾದಿ. ಲಟ್‌ಪ್ರಥಮಪುರುಷದಲ್ಲಿ ತಿಪ್ ಪ್ರತ್ಯಯ **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್. **ರುಧಾದಿಭ್ಯಃ ಸಾರ್ವಧಾತುಕೇ** (ಪಾ. ಸೂ ೭–೨–೭೬) ಎಂಬುದರಿಂದ ಸಾರ್ವಧಾತುಕಸಂಜ್ಞೆಯುಳ್ಳ ತಿಪ್ಪಿಗೆ ಇಡಾಗಮ ತಿಪ್ ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತ ಆಗ **ಧಾತೋಃ** ಎಂಬುದರಿಂದ ಬಂದಿರುವ ಧಾತುಸ್ವರವು ಉಳಿಯುತ್ತದೆ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ

**ಅಪ್ಸು**— ಸಪ್ತಮೀ ಬಹುವಚನಾಂತರೂಪ **ಊಡಿದಂಪದಾದಿ** ಸೂತ್ರದಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಹಂಸಃ**—ಹಸೇ ಹಸನೇ ಧಾತು ಅಚ್ ಪ್ರತ್ಯಯ ಪೃಷೋದರಾದಿಯಲ್ಲಿ ಸೇರಿರುವುದರಿಂದ ವರ್ಣಾಗಮ ಬರುತ್ತದೆ

**ಸೀದನ್**—ಷದ್ಲೃ ವಿಶರಣಗತ್ಯವಸಾದನೇಷು ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ **ಪಾಘ್ರಾಧ್ಮಾ**-- ಸೂತ್ರದಿಂದ ಧಾತುವಿಗೆ ಸೀದಾದೇಶ. ಶಪ್ ವಿಕರಣ. ಪ್ರಥಮಾ ಏಕವಚನದಲ್ಲಿ ನುಮಾಗಮ. ಹಿಂದಿನಂತೆ ಧಾತು ಸ್ವರದಿಂದ ಆದ್ಯುದಾತ್ತ

**ಕ್ರತ್ವಾ**—ಕ್ರತು+ಆ ಎಂದಿರುವಾಗ **ಜಸಾದಿಷು ಛಂದಸಿ ವಾವಚನಮ್** ಎಂಬ ವಚನದಿಂದ **ಆಙೋನಾ**—ಸೂತ್ರದಿಂದ ನಾಭಾವ ಬರುವುದಿಲ್ಲ. ಯಣಾದೇಶ ಬರುತ್ತದೆ.

**ಉಷರ್ಭುತ್**—ಉಷಸಿ ಬುಧ್ಯತೇ ಇತಿ ಉಷರ್ಭುತ್, ಬುಧ ಅವಗಮನೇ, ಧಾತು. **ಕ್ವಿಪ್ ಚ** ಎಂಬುದರಿಂದ ಇದಕ್ಕೆ ಕ್ವಿಪ್ ಪದಾಂತವಾದುದರಿಂದ **ಏಕಾಚೋಬಶೋಭಷ್**—(ಪಾ ಸೂ. ೮–೨–೩೭) ಎಂಬುದರಿಂದ ಧಾತುವಿನ ಆದಿಯ ಬಶ್ಯಾದ ಬಕಾರಕ್ಕೆ ಭಕಾರಾದೇಶ **ಅಹರಾದೀನಾಂ ಪತ್ಯಾದಿಷೂಪಸಂಖ್ಯಾನಮ್** (ಪಾ. ವಾ. ೮–೨–೭೦) ಎಂಬುದರಿಂದ ಉಷಸ್ ಶಬ್ದದ ಸಕಾರಕ್ಕೆ ರೇಫಾದೇಶ ಉಷರ್ಭುಧ್ ಶಬ್ದವಾಗುತ್ತದೆ. ಪ್ರಥಮಾ ಸು ಪರವಾದಾಗ **ಹಲ್ಙ್ಯಾಭ್ಯೋ**—ಸೂತ್ರದಿಂದ ಸುಲೋಪ. **ಝಲಾಂ ಜಶೋಂತೇ** ಎಂಬುದರಿಂದ ಜಸ್ತ್ವ. **ವಾವಸಾನೇ** ಸೂತ್ರದಿಂದ ಚರ್ತ್ವ ಉಷರ್ಭುತ್ ಎಂದು ರೂಪವಾಗುತ್ತದೆ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ

**ಶಿಶ್ವಾ** – ಶೋ ತನೂಕರಣೇ ಧಾತು **ಆದೇಚಉಪದೇಶೇಽಶಿತಿ** ಎಂಬುದರಿಂದ ಆತ್ವ ಬರುತ್ತದೆ. **ಶಃ ಕಿತ್ ಸನ್ವಚ್ಚ** (ಉ. ಸೂ. ೧–೨೦) ಎಂಬುದರಿಂದ ಉ ಪ್ರತ್ಯಯ ಇದಕ್ಕೆ ಸನ್ವದ್ಭಾವ ಹೇಳಿರುವುದರಿಂದ ಧಾತುವಿಗೆ **ಸನ್ಯಙೋಃ** ಸೂತ್ರದಿಂದ ದ್ವಿತ್ವ. **ಸನ್ಯತಃ** ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಸನ್ನಿನ ನಿತ್ವಕ್ಕೂ ಅತಿದೇಶವಿರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ ಪ್ರತ್ಯಯಕ್ಕೆ ಕಿತ್ವವನ್ನೂ ವಿಧಾನಮಾಡಿರುವುದರಿಂದ **ಆತೋ ಲೋಪ ಇಟಿಚ** ಎಂಬುದರಿಂದ ಅಜಾದಿಯಾದ ಕಿತ್ತಾದ ಪ್ರತ್ಯಯವನ್ನು ನಿಮಿತ್ತೀಕರಿಸಿ ಧಾತುವಿನ ಆಕಾರಕ್ಕೆ ಲೋಪ ಶಿಶು ಶಬ್ದವಾಗುತ್ತದೆ ಇಲ್ಲಿ ಅರ್ಥವಿವರಣಮಾಡುವಾಗ ಹೇಳಿದ ಪ್ರಥಮಪಕ್ಷದಲ್ಲಿ ಪ್ರಥಮಾ ಸ್ವವಿಗೆ **ಸುಪಾಂಸುಲುಕ್**— ಸೂತ್ರದಿಂದ ಆಕಾರಾದೇಶ ದ್ವಿತೀಯ ಪಕ್ಷದಲ್ಲಿ ಹಿಂದೆ ಹೇಳಿದಂತೆ ತೃತೀಯಾ ಏಕವಚನಕ್ಕೆ ನಾಭಾವ ಬರುವುದಿಲ್ಲ

**ದೂರೇಭಾಃ**— ದೂರೇ ಭಾಃ ಯಸ್ಯ ಸಃ ದೂರೇಭಾಃ ಬಹುವ್ರೀಹಿಸಮಾಸ **ತತ್ಪುರುಷೇಕೃತಿ ಬಹುಲಂ** (ಪಾ ಸೂ. ೬–೩–೧೪) ಎಂಬ ಅಲುಕ್ ವಿಧಾಯಕ ಸೂತ್ರದಲ್ಲಿ ಬಹುಲಗ್ರಹಣದಿಂದ ಬಹುವ್ರೀಹಿಯಲ್ಲಿಯೂ ಅಲುಕ್ ಬರುತ್ತದೆ **ಸುಪೋಧಾತು**— ಸೂತ್ರದಿಂದ ಸಮಾಸವಾದಾಗ ಸಪ್ತಮಿಗೆ ಲುಕ್ ಬರುವುದಿಲ್ಲ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಸಮಾಸಸ್ವರಕ್ಕೆ ಬಾಧಕವಾಗಿ ಬರುತ್ತದೆ ॥ ೯-೧೦ ॥

ಅರವತ್ತೈದನೆಯ ಸೂಕ್ತವು ಸಮಾಪ್ತವು



# ಅರವತ್ತಾರನೆಯ ಸೂಕ್ತವು

**ರಯಿರಿತಿ ದಶರ್ಚಂ ದ್ವೈಪದಮಧ್ಯಯನತಃ ಪಂಚರ್ಚಂ ದ್ವಿತೀಯಂ ಸೂಕ್ತಂ ಪರಾಶರಸ್ಯಾರ್ಷಮಾಗ್ನೇಯಂ । ಅನುಕ್ರಾಂತಂ ಚ । ರಯಿರಿತಿ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು—**ರಯಿರ್ನ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು ಇದರಲ್ಲಿ ದ್ವಿಪದಾ ವಿರಾಟ್ ಛಂದಸ್ಸಿನ ಹತ್ತು ಋಕ್ಕುಗಳು ಅಥವಾ ಅಧ್ಯಯನಾನುಸಾರವಾಗಿ ಐದು ಋಕ್ಕುಗಳಿರುವವು ಈ ಸೂಕ್ತಕ್ಕೆ ಪರಾಶರನು ಋಷಿಯು ಅಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ **ರಯಿರಿತಿ** ಎಂದು ಹೇಳಿರುವುದು ವಿನಿಯೋಗವು ಲೈಂಗಿಕವು.

## ಸೂಕ್ತ—೬೬

॥ ಓಂ ॥

॥ ಮಂಡಲ—೧ ॥ ಅನುವಾಕ—೧೨ ॥ ಸೂಕ್ತ—೬೬ ॥

॥ ಅಷ್ಟಕ—೧ ॥ ಅಧ್ಯಾಯ—೫ ॥ ವರ್ಗ—೧೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ (೧೦) ॥

॥ ಋಷಿಃ—ಪಾರಾಶರಃ ಶಾಕ್ತ್ಯಃ ॥

ದೇವತಾ—ಅಗ್ನಿಃ ॥

ಛಂದಃ—ದ್ವಿಪದಾ ವಿರಾಟ್ ॥

॥ ಸಂಹಿತಾಪಾಠಃ ॥

ರಯಿರ್ನ ಚಿತ್ರಾ ಸೂರೋ ನ ಸಂದೃಗಾಯುರ್ನ ಪ್ರಾಣೋ
ನಿತ್ಯೋ ನ ಸೂನುಃ ।
ತಕ್ವಾ ನ ಭೂರ್ಣಿರ್ವನಾ ಸಿಷಕ್ತಿ ಪಯೋ ನ ಧೇನುಃ ಶುಚಿ-
ರ್ವಿಭಾವಾ ॥ ೧ ॥ ೨ ॥

॥ ಪದಪಾಠಃ ॥

ರಯಿಃ । ನ । ಚಿತ್ರಾ । ಸೂರಃ । ನ । ಸಂऽದೃಕ್ । ಆಯುಃ । ನ । ಪ್ರಾಣಃ ।
ನಿತ್ಯಃ । ನ । ಸೂನುಃ ।
ತಕ್ವಾ । ನ । ಭೂರ್ಣಿಃ । ವನಾ । ಸಿಸಕ್ತಿ । ಪಯಃ । ನ । ಧೇನುಃ ।
ಶುಚಿಃ । ವಿಭಾऽವಾ ॥ ೧ ॥ ೨ ॥

|| ಸಾಯಣಭಾಷ್ಯಂ ||

ಅಯಮಗ್ನಿಃ ರಯಿರ್ನ ಧನಮಿವ ಚಿತ್ರಾ ಚಾಯನೀಯೋ ವಿಚಿತ್ರರೂಪೋ ವಾ ಸೂರೋ ನ ಸೂರ್ಯ ಇವ ಸಂದೃಕ್ ಸಂದ್ರಷ್ಟಾ ಸರ್ವೇಷಾಂ ವಸ್ತೂನಾಂ ದರ್ಶಯಿತಾ ಆಯುರ್ನ ಪ್ರಾಣ ಆಯುರ್ಮುಖೇ ಸಂಚರನ್ ಪ್ರಾಣಃ ಪ್ರಶ್ವಸನ್ವಾಯುರಿವ ಪ್ರಿಯತಮಃ । ಯದ್ವಾ । ಯಥಾ ಪ್ರಾಣವಾಯುರಾಯುರ್ಜೀವನಮವಸ್ಥಾಪಯತಿ । ತಥಾ ಚಾಮ್ನಾಯತೇ । ಯಾವದ್ಧ್ಯಸ್ಮಿನ್ ಶರೀರೇ ಪ್ರಾಣೋ ವಸತಿ ತಾವದಾಯುರಿತಿ । ಏವಮಗ್ನಿರಪಿ ಜಾಠರರೂಪೇಣಾಯುಷೋಽವಸ್ಥಾಪಯಿತಾ । ನಿತ್ಯೋ ನ ಸೂನುರ್ನಿತ್ಯೋ ಧ್ರುವಃ ಪುತ್ರ ಇವ ಪ್ರಿಯಕಾರೀ । ಯಥೌರಸಃ ಪುತ್ರಃ ಪಿತುರ್ಹಿತಮೇವಾಚರತಿ ತದ್ವದಯಮಪಿ ಹಿತಸ್ಯ ಸ್ವರ್ಗಸ್ಯ ಪ್ರಾಪಯಿತಾ । ತಥಾ ಚಾಮ್ನಾಯತೇ । ಪುತ್ರಃ ಪಿತ್ರೇ ಲೋಕಕೃಜ್ಜಾತವೇದಃ । ತೈ. ಬ್ರಾ. ೩-೭-೭-೧೦ । ಇತಿ । ತಕ್ವಾ ನ ಗತಿಮಾನಶ್ವ ಇವ ಭೂರ್ಣಿರ್ಭರ್ತಾ । ಯಥಾಶ್ವ ಉಪರ್ಯಾರೂಢಂ ಪುರುಷಂ ಬಿಭರ್ತಿ ಧಾರಯತಿ ಪೋಷಯತಿ ವಾ ತದ್ವದಯಮಪೀತ್ಯರ್ಥಃ । ಪಯೋ ನ ಧೇನುಃ ಪಯ ಇವ ಪ್ರೀಣಯಿತಾ ಶುಚಿರ್ದೀಪ್ತಃ ವಿಭಾವಾ ವಿಶಿಷ್ಟಪ್ರಕಾಶಯುಕ್ತಃ । ಏವಂಗುಣವಿಶಿಷ್ಟೋಽಗ್ನಿರ್ವನಾ ವನಾನ್ಯರಣ್ಯಾನಿ ಸಿಷಕ್ತಿ । ದಗ್ಧುಂ ಸಮವೈತಿ । ಸೇವತೇ ವಾ ॥ ಚಿತ್ರಾ । ಸುಪಾಂ ಸುಲುಗಿತಿ ಸೋಃ ಪೂರ್ವಸವರ್ಣದೀರ್ಘತ್ವಂ । ನಿತ್ಯಃ । ನೇರ್ಧ್ರುವೇ । ಮ ೪-೨-೧೦೪ । ಇತಿ ತ್ಯಪ್ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೆ ಉಪಸರ್ಗಸ್ವರ ಏವ ಶಿಷ್ಯತೇ । ತಕ್ವಾ । ತಕ ಹಸನೇ । ಗತಿಕರ್ಮಸು ಪಠಿತತ್ವಾದತ್ರ ಗತ್ಯರ್ಥಃ । ತಕತಿ ಗಚ್ಛತೀತಿ ತಕ್ವಾ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ವನಿಪ್ । ಭೂರ್ಣಿಃ । ಘೃಣಿಃ ಪೃಶ್ನಿರಿತ್ಯಾದೌ ಭರತೇರ್ನಿಪ್ರತ್ಯಯಾಂತೋ ನಿಪಾತಿತಃ ॥

॥ ಪ್ರತಿಪದಾರ್ಥ ॥

(**ಅಯಮಗ್ನಿಃ**— ಈ ಅಗ್ನಿಯು) । **ರಯಿರ್ನ**—ಧನದಂತೆ । **ಚಿತ್ರಾ**—ಇಷ್ಟನೂ (ವಿಚಿತ್ರರೂಪನು) । **ಸೂರೋ ನ**—ಸೂರ್ಯನಂತೆ । **ಸಂದೃಕ್**—ಚೆನ್ನಾಗಿ ನೋಡತಕ್ಕವನು (ಪದಾರ್ಥಗಳು ಕಾಣಿಸುವಂತೆ ಮಾಡತಕ್ಕವನು) । **ಆಯುಃ**—ಮುಖದಲ್ಲಿ (ಸಂಚರಿಸುವ) । **ಪ್ರಾಣೋ ನ**—ವಾಯುವಿನಂತೆ (ಪ್ರಿಯನೂ) । **ಪ್ರಾಣಃ**—ವಾಯುವು । **ಆಯುರ್ನ**—ಆಯುಸ್ಸಿನಂತೆ (ಆಯುಸ್ಸನ್ನು ಕೊಡುವಂತೆ ಆಯುರ್ವರ್ಧಕನೂ) । **ನಿತ್ಯಃ**—(ಪಿತೃವಿನ) ಹಿತವನ್ನಾಚರಿಸುವ । **ಪುತ್ರಃ ನ**—(ಔರಸ) ಪುತ್ರನಂತೆ (ಸ್ವರ್ಗವನ್ನು ದೊರಕಿಸುವವನೂ) । **ತಕ್ವಾ ನ**—ಸಂಚರಿಸುತ್ತಿರುವ ಅಶ್ವದಂತೆ । **ಭೂರ್ಣಿಃ**—ಧಾರಣ (ಪೋಷಣ) ಮಾಡುವವನೂ । **ಧೇನುಃ**—ಗೋವು । **ಪಯೋ ನ**—ಕ್ಷೀರವನ್ನು (ಕೊಡುವಂತೆ ಪೋಷಕನೂ) । **ಶುಚಿಃ**—ದೇದೀಪ್ಯಮಾನನೂ । **ವಿಭಾವಾ**—ಹೆಚ್ಚಾಗಿ ಪ್ರಕಾಶಯುಕ್ತನೂ (ಆಗಿ) । **ವನಾ**—ಕಾಡುಗಳನ್ನು । **ಸಿಷಕ್ತಿ**—(ದಹಿಸಲು) ಸಮೀಪಿಸುತ್ತಾನೆ (ಆಶ್ರಯಿಸುತ್ತಾನೆ) ।

॥ ಭಾವಾರ್ಥ ॥

ದ್ರವ್ಯದಂತೆ ಅಪೇಕ್ಷ್ಯನೂ, ಸೂರ್ಯನಂತೆ ಪ್ರಕಾಶಕನೂ, ವಾಯುವಿನಂತೆ ಆಯುರ್ದಾತೃವೂ, ಔರಸಪುತ್ರನಂತೆ ಸ್ವರ್ಗಕ್ಕೆ ಕರೆದುಕೊಂಡು ಹೋಗತಕ್ಕವನೂ, ಅಶ್ವವು ಯಜಮಾನನನ್ನು ಧಾರಣಮಾಡುವಂತೆ ಧಾರಣಮಾಡು

ವವನೂ, ಕ್ಷೀರವನ್ನು ಕೊಡುವ ಗೋವಿನಂತೆ ಪುಷ್ಟಿದಾಯಕನೂ, ತೇಜೋಯುಕ್ತನೂ, ವಿಶೇಷ ಕಾಂತಿಯುಕ್ತನೂ ಆದ ಅಗ್ನಿಯು ವನಗಳನ್ನು ಆಶ್ರಯಿಸಿಕೊಂಡಿರುತ್ತಾನೆ. (ದಹಿಸುತ್ತಾನೆ)

## English Translation

Agni, who is of variegated form like wealth, who is the surveyor of all like the sun, who is protector of life like the vital air (Prana), who is the doer of good like a son, who upholds the universe like a horse, who is the giver of gratification like a cow, who is pure and radiant, consumes the forests.

॥ ವಿಶೇಷವಿಷಯಗಳು ॥

**ಸೂರೋ ನ ಸಂದೃಕ್—ಸೂರ್ಯ ಇವ ಸಂದ್ರಷ್ಟಾ ಸರ್ವೇಷಾಂ ವಸ್ತೂನಾಂ ದರ್ಶಯಿತಾ ।** ಅಗ್ನಿಯು ಸೂರ್ಯನ ಹಾಗೆ ಎಲ್ಲರಿಗೂ ಎಲ್ಲಾ ವಸ್ತುಗಳನ್ನು ಚೆನ್ನಾಗಿ ಕಾಣಿಸುವಂತೆ ಮಾಡುವನು ಈ ಋಕ್ಕಿನಲ್ಲಿ ಉಪಮಾನೋಪಮೇಯಭಾವದಿಂದ ಕೂಡಿರುವ ಆರು ವಾಕ್ಯಗಳಿರುವುವು ಅವುಗಳ ಅರ್ಥವನ್ನು ಹೇಳುವ ಕ್ರಮದಿಂದ ಅಗ್ನಿಯ ಗುಣಗಳನ್ನು ವಿವರಿಸಿರುವರು. ಇದರಿಂದ ಅಗ್ನಿಯ ಸ್ವರೂಪವು ಚೆನ್ನಾಗಿ ತಿಳಿಯುವುದು

**ಆಯುರ್ನ ಪ್ರಾಣಃ—ಆಯುರ್ಮುಖೇ ಸಂಚರನ್ ಪ್ರಾಣಃ ಪ್ರಶ್ವಸ ವಾಯುರಿವ ಪ್ರಿಯತಮಃ। ಯದ್ವಾ ಯಥಾ ಪ್ರಾಣವಾಯುಃ ಆಯುಃ ಜೀವನಮವಸ್ಥಾಪಯತಿ । ತಥಾಚಾಮ್ನಾಯತೇ—'ಯಾವದ್ಧ್ಯಸ್ಮಿಕ್ಷರೀರೇ ಪ್ರಾಣೋ ವಸತಿ ತಾವದಾಯುಃ (ಕೌ. ಉ. ೩-೨) ಇತಿ । ಏವಮಗ್ನಿರಪಿ ಜಾಠರರೂಪೇಣಾಯುರವಸ್ಥಾಪಯಿತಾ ।** ನ ಎಂಬುವದು ಉಪಮಾವಾಚಕವು ಪ್ರಾಣವಾಯುವಿನ ಹಾಗೆ ಅಗ್ನಿದೇವನು ಆಯುಸ್ಸಿನ ರೂಪದಿಂದ ಪ್ರಾಣಿಗಳ ಶರೀರದಲ್ಲಿ ಮುಖ್ಯನಾಗಿ ಇರುತ್ತಾ ಜೀವಿತಕಾಲವನ್ನು ಕ್ಲಪ್ತ ಮಾಡುವನು ಮತ್ತು ಜೀವಿತ ಕಾಲದಲ್ಲಿ ಪ್ರಾಣಿಗಳಿಗೆ ಹಿತವನ್ನು ಉಂಟುಮಾಡುತ್ತಿರುವನು. ಪ್ರಾಣವಾಯುವು ಶರೀರದಲ್ಲಿ ಸಂಚರಿಸುತ್ತಿರುವವರಿಗೂ ಪ್ರಾಣಿಗಳ ಜೀವಿತಕಾಲರೂಪವಾದ ಆಯುಸ್ಸು ಕ್ಲಪ್ತವಾಗಿರುವುದೆಂದು ಕೌಷೀತಕ ಉಪನಿಷತ್ತಿನ ವಾಕ್ಯವು ನಿರ್ದೇಶಮಾಡುವುದು ಇದರಂತೆ ಅಗ್ನಿಯೂ ಕೂಡ ಶರೀರದ ಒಳಗಡೆಯಲ್ಲಿ ಪ್ರಾಣವಾಯುವಿನ ಸಂಗಡ ಸಂಚರಿಸುತ್ತಾ ಜಠರಾಗ್ನಿಯ ರೂಪದಿಂದ ಆಯುಸ್ಸನ್ನು ಕ್ಲಪ್ತಮಾಡುತ್ತಿರುವನು ಸ್ಕಂದ ಸ್ವಾಮಿಗಳು ಆಯುಶ್ಶಬ್ದವು ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಪಠಿತವಾಗಿರ ವುದರಿಂದ (ನಿ. ೨-೭) ಆಯುರ್ನ ಎಂಬ ಶಬ್ದಕ್ಕೆ ಅನ್ನಮಿವ ಎಂದು ಅರ್ಥಮಾಡಿ ಅಗ್ನಿಯು ಆಹಾರವನ್ನು ಜೀರ್ಣಮಾಡುವುದರಿಂದ, ಆಹಾರವು ಸರಿಯಾಗಿ ಜೀರ್ಣವಾಗುವುದರಿಂದ ಪ್ರಾಣವಾಯುವಿನ ಸ್ಥಿತಿಯು ಉಂಟಾಗಿ ಜೀವಿಸುವಿಕೆಯು ಪ್ರಾಣಿಗಳಿಗೆ ಉಂಟಾಗುವುದೆಂದು ಅರ್ಥವನ್ನು ಹೇಳಿರುವರು.

**ನಿತ್ಯೋ ನ ಸೂನುಃ—ನಿತ್ಯೋ ಧ್ರುವಃ ಪುತ್ರ ಇವ ಪ್ರಿಯಕಾರೀ । ಯಥೌರಸಃ ಪುತ್ರಃ ಪಿತುರ್ಹಿತಮೇವಾಚರತಿ ತದ್ವದಯಮಪಿ ಹಿತಸ್ಯ ಸ್ವರ್ಗಸ್ಯ ಪ್ರಾಪಯಿತಾ । ತಥಾಚಾಮ್ನಾಯತೇ—**

**'ಪುತ್ರಃ ಪಿತ್ರೇ ಲೋಕಕೃಜ್ಜಾತವೇದಾಃ (ತೈ. ಬ್ರಾ. ೩-೭-೭-೧೦) ಇತಿ ।** ನ ಎಂಬುವುದು ಹಿಂದಿನ ವಾಕ್ಯದ ಹಾಗೆಯೇ ಉಪಮಾವಾಚಕವಾಗಿರುವುದು, ಸೂನು ಎಂಬ ಪದವು ಉಪಮಾನವಾಚಕವು ನಿತ್ಯವೆಂಬ ಪದದ ಅರ್ಥವು ಉಪಮಾನೋಪಮೇಯಗಳೆರಡರಲ್ಲಿಯೂ ಇರುವ ಕಾರಣ ಸಮಾನಧರ್ಮವಾಗಿರುವುದು ಉಪಮಾನ, ಉಪಮೇಯ, ವಾಚಕ, ಸಮಾನಧರ್ಮಗಳೆಂಬ ಈ ನಾಲ್ಕನ್ನೂ ಇಲ್ಲಿ ಕ್ರಮವಾಗಿ ಹೇಳುವ ಕಾರಣ ಇದು ಪೂರ್ಣೋಪಮಾಲಂಕಾರವೆನಿಸಿರುತ್ತದೆ, ಸೂನುಃ ಎಂಬ ಪದವು ಪುತ್ರನೆಂಬ ಪದವನ್ನು ಬೋಧಿಸುವುದಾಗಿದ್ದರೂ ಅದರಲ್ಲಿ ವಿಶೇಷವನ್ನು ಅಂಗೀಕರಿಸಿ ಔರಸಪುತ್ರನೆಂಬ ಅರ್ಥವನ್ನು ಹೇಳಿರುವರು ಧರ್ಮಶಾಸ್ತ್ರಕಾರರು ದಶವಿಧ ಪುತ್ರರನ್ನು ಅಂಗೀಕರಿಸಿದ್ದರೂ ಔರಸಪುತ್ರನು (ಹೊಟ್ಟೆಯಲ್ಲಿ ಹುಟ್ಟಿದ ಮಗನು) ತನ್ನ ತಂದೆಗೆ ಹಿತವನ್ನು ಆಚರಿಸುವ ಹಾಗೆ ಅಗ್ನಿಯು ಸುಖಕರವಾದ ವಸ್ತುವನ್ನು ಹೊಂದಿಸುವ ಮೂಲಕ ಹಿತವನ್ನು ಉಂಟುಮಾಡುವನು ತೈತ್ತಿರೀಯ ಬ್ರಾಹ್ಮಣ ೩-೭-೭-೧೦ ನೆಯ ವಾಕ್ಯದಲ್ಲಿ ಅಗ್ನಿಗೆ ಲೋಕಹಿತಕಾರಿತ್ವವು ಪ್ರಸಿದ್ಧವಾಗಿರುವುದ

**ತಕ್ವಾ ನ ಭೂರ್ಣಿಃ—ಗತಿಮಾನಶ್ವ ಇವ ಭರ್ತಾ । ಯಥಾ ಅಶ್ವಃ ಉಪರ್ಯಾರೂಢಂ ಪುರುಷಂ ಬಿಭರ್ತಿ, ಧಾರಯತಿ, ಪೋಷಯತಿ ವಾ ತದ್ವದಯಮಪೀತ್ಯರ್ಥಃ ।** ತಕ್ವಾ ಎಂಬ ಪದವು ಹದಿನಾಲ್ಕು ಸ್ತೇನನಾಮಗಳ ಮಧ್ಯದಲ್ಲಿ (ನಿ ೩-೧೯) ಪಠಿತವಾಗಿರುವುದು ಆದರೆ ಸಾಯಣರು ಈ ಪದಕ್ಕೆ ಅಶ್ವವೆಂದು ಅರ್ಥವನ್ನು ಹೇಳಿರುತ್ತಾರೆ ಭರ್ತಾ ಎಂಬ ಪದವು ಪೋಷಿಸುವವನು ಎಂದು ಅರ್ಥವನ್ನು ಬೋಧಿಸುವುದು. ವೇಗಶಾಲಿಯಾದ ಕುದುರೆಯು ತನ್ನ ಮೇಲೆ ಇರುವ ಸವಾರನನ್ನು ಕೆಳಕ್ಕೆ ಕೆಡವದೆ ಧರಿಸುತ್ತದೆ. ಮತ್ತು ವಿಪತ್ತಿಗೆ ಸಿಕ್ಕದಂತೆ ಪೋಷಿಸುತ್ತದೆ ಇದರಂತೆ ಅಗ್ನಿಯೂ ಕೂಡ ತನ್ನನ್ನು ಆಶ್ರಯಿಸಿಕೊಂಡು ಇರುವ ಯಜ್ಞಮಾಡುವ ಯಜಮಾನರುಗಳನ್ನು ಪೋಷಿಸುತ್ತಿರುವನು

ಸ್ಕಂದಸ್ವಾಮಿಗಳು ತಕ್ವಾ ನ ಭೂರ್ಣಿಃ ವನಾ ಸಿಷಕ್ತಿ ಎಂದು ವಾಕ್ಯವನ್ನು ಮಾಡಿಕೊಂಡು ತಕ್ವಾ ಎಂಬ ಪದಕ್ಕೆ ಸ್ತೇನನೆಂಬ ಅರ್ಥವನ್ನು ಹೇಳಿರುವರು ಮತ್ತು ಭೂರ್ಣಿಃ ಎಂಬ ರೂಪವು ಭ್ರಮುಧಾತುವಿನಿಂದ ಉಂಟಾಗಿರುವುದೆಂದು ಅಂಗೀಕರಿಸಿರುವರು. ಕಳ್ಳನು ಕದ್ದು ತಿರುಗುತ್ತಾ ಕಾಡಿನಲ್ಲಿಯೇ ಓಡಾಡುತ್ತಿರುವ ಹಾಗೆ ಅಗ್ನಿಯೂ ಕೂಡ ಕಾಡಿಗಿಚ್ಚಿನ ರೂಪದಿಂದ ಕಾಡಿನಲ್ಲಿಯೇ ಇರುವನು ಎಂದು ಅರ್ಥವನ್ನು ಹೇಳುವರು

॥ ವ್ಯಾಕರಣಪ್ರಕ್ರಿಯಾ ॥

**ಚಿತ್ರಾ**- ಚಿತ್ರ+ಸು ಎಂದಿರುವಾಗ **ಸುಪಾಂಸುಲುಕ್**—ಸೂತ್ರದಿಂದ ಸುವಿಗೆ ಪೂರ್ವಸವರ್ಣದೀರ್ಘ ಬರುತ್ತದೆ

**ಸಂದೃಕ್**—ದೃಶಿರ್ ಪ್ರೇಕ್ಷಣೇ ಧಾತು ಇದಕ್ಕೆ ಕ್ವಿನ್ ಪ್ರತ್ಯಯ. **ವ್ರಶ್ಚಭ್ರಸ್ಜಸೃಜ**—ಸೂತ್ರದಿಂದ ಪದಾಂತದಲ್ಲಿ ಶಕಾರಕ್ಕೆ ಷತ್ವ **ಝಲಾಂ ಜಶೋಂತೇ** ಎಂಬುದರಿಂದ ಅದಕ್ಕೆ ಜಶ್ತ್ವದಿಂದ ಡಕಾರಾದೇಶ. **ಕ್ವಿನ್‌ಪ್ರತ್ಯಯಸ್ಯ ಕುಃ** ಎಂಬುದರಿಂದ ಕುತ್ವದಿಂದ ಗಕಾರಾದೇಶ. **ವಾವಸಾನೇ** ಎಂಬುದರಿಂದ ಚರ್ತ್ವ ಕೃದುತ್ತರ ಪದಪ್ರಕೃತಿಸ್ವರದಿಂದ ಯಕಾರ ಉದಾತ್ತವಾಗುತ್ತದೆ

**ಪ್ರಾಣಃ**—ಅನ ಪ್ರಾಣನೇ ಧಾತು. **ನಂದಿಗ್ರಹಪಚಾದಿಭ್ಯೋ**—ಸೂತ್ರದಿಂದ ಅಚ್ ಪ್ರತ್ಯಯ. **ಅನಿತೇಃ** ಸೂತ್ರದಿಂದ ಉಪಸರ್ಗದಲ್ಲಿರುವ ನಿಮಿತ್ತಪರದಲ್ಲಿ ಬಂದಿರುವುದರಿಂದ ನಕಾರಕ್ಕೆ ಣತ್ವ ಅಂತೋದಾತ್ತ ಸ್ವರವು **ಚಿತಃ** ಎಂಬುವರಿಂದ ಬರುತ್ತದೆ

**ನಿತ್ಯಃ**—**ಅವ್ಯಯಾತ್ತ್ಯಪ್** (ಪಾ. ಸೂ ೪-೨-೧೦೪) ಎಂದಿರುವಾಗ **ನೇರ್ಧ್ರುವೇ** (ಪಾ ವಾ. ೪-೨-೧೦೪) ಎಂಬುದರಿಂದ ನಿ ಎಂಬ ಅವ್ಯಯಕ್ಕೆ ನಿಶ್ಚಲ (ಅವಿನಾಶಿ) ಎಂಬರ್ಥದಲ್ಲಿ ತ್ಯಪ್ ಪ್ರತ್ಯಯ ಪ್ರತ್ಯಯವು ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಉಪಸರ್ಗಸ್ವರವೇ ಉಳಿಯುತ್ತದೆ. ಆದ್ಯುದಾತ್ತವಾದ ಪದವಾಗುತ್ತದೆ.

**ತಕ್ವಾ**—ತಕ ಹಸನೇ ಧಾತು ಗತ್ಯರ್ಥಕಗಳ ಮಧ್ಯೇ ಪಠಿತವಾದುದರಿಂದ ಇಲ್ಲಿ ಗತ್ಯರ್ಥದಲ್ಲಿ ಸ್ವೀಕೃತವಾಗಿದೆ. ತಕತಿ ಗಚ್ಛತಿ ಇತಿ ತಕ್ವಾ **ಅನ್ಯೇಭ್ಯೋಽಪಿ ದೃಶ್ಯತೇ** ಎಂಬುದರಿಂದ ವನಿಪ್ ಪ್ರತ್ಯಯ ತಕ್ವನ್ ಶಬ್ದವಾಗುತ್ತದೆ ಪ್ರಥಮಾ ಸು ಪರವಾದಾಗ **ಸರ್ವನಾಮಸ್ಥಾನೇಚಾ**—ಸೂತ್ರದಿಂದ ನಾಂತೋಪಧೆಗೆ ದೀರ್ಘ. **ಹಲ್ಜ್ಯಾಭ್ಯೋ**—ಸೂತ್ರದಿಂದ ಸುಲೋಪ **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ಪದಾಂತ ನಕಾರಕ್ಕೆ ಲೋಪ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತ. ಆಗ ಧಾತುಸ್ವರ ಉಳಿಯುತ್ತದೆ.

**ಭೂರ್ಣಿಃ**—**ಘೃಣಿ ಪೃಶ್ನಿ ಪಾರ್ಷ್ಣಿ**—(ಉ ಸೂ ೪-೪೯೨) ಎಂಬುವರಿಂದ ಭೃಞ್ ಭರಣೇ ಧಾತುವಿಗೆ ನಿಪ್ರತ್ಯಯ ಬಂದು ನಿಪಾತಿತವಾಗಿದೆ.

**ವನಾ**—**ಶೇಶ್ಛಂದಸಿ ಬಹುಲಂ** ಎಂಬುದರಿಂದ ನಪುಂಸಕದಲ್ಲಿ ಶಸ್ಸಿಗೆ ಬಂದ ಶಿಗೆ ಲುಕ್.

ವಿಭಾವಾ—ಭಾ ದೀಪ್ತೌ ಧಾತು **ಆತೋಮನಿನ್ಕ್ವನಿಪ್**-ಸೂತ್ರದಿಂದ ವನಿಪ್ ಪ್ರತ್ಯಯ ವಿಭಾವನ್ ಶಬ್ದ ಪ್ರಥಮಾ ಸುವಿನಲ್ಲಿ ನಾಂತೋಪಧಾದೀರ್ಘ. ಸುಲೋಪ. ನಲೋಪ. ಪ್ರತ್ಯಯ ಪಿತ್ತಾದುದರಿಂದ ಧಾತು ಸ್ವರ ಬರುತ್ತದೆ. ಗತಿಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ ॥ ೧-೨ ॥



॥ ಸಂಹಿತಾಪಾಠಃ ॥

ದಾಧಾರ ಕ್ಷೇಮಮೋಕೋ ನ ರಣ್ವೋ ಯವೋ ನ ಪಕ್ವೋ

ಜೇತಾ ಜನಾನಾಂ ।

ಋಷಿರ್ನ ಸ್ತುಭ್ವಾ ವಿಕ್ಷು ಪ್ರಶಸ್ತೋ ವಾಜೀ ನ ಪ್ರೀತೋ

ವಯೋ ದಧಾತಿ ॥ ೩ ॥ ೪ ॥

॥ ಪದಪಾಠಃ ॥

ದಾಧಾರ । ಕ್ಷೇಮಂ । ಓಕಃ । ನ । ರಣ್ವಃ । ಯವಃ । ನ । ಪಕ್ವಃ । ಜೇತಾ । ಜನಾನಾಂ ।

ಋಷಿಃ । ನ । ಸ್ತುಭ್ವಾ । ವಿಕ್ಷು । ಪ್ರऽಶಸ್ತಃ । ವಾಜೀ । ನ । ಪ್ರೀತಃ । ವಯಃ । ದಧಾತಿ ॥ ೩ ॥ ೪ ॥

॥ ಸಾಯಣಭಾಷ್ಯಂ ॥

ಅಯಮಗ್ನಿಃ ಕ್ಷೇಮಂ ಲಬ್ಧಸ್ಯ ಧನಸ್ಯ ರಕ್ಷಣಂ ದಾಧಾರ । ಧಾರಯತಿ । ಸ್ತೋತೃಭ್ಯೋ ದತ್ತಸ್ಯ ಧನಸ್ಯ ರಕ್ಷಣಂ ಕರ್ತುಂ ಶಕ್ನೋತೀತಿ ಭಾವಃ । ಓಕೋ ನ ನಿವಾಸಸ್ಥಾನಂ ಗೃಹಮಿವ ರಣ್ವೋ ರಮಣೀಯಃ । ಯದ್ವಾ ಗಂತವ್ಯಃ । ಗೃಹವತ್ಸರ್ವೈಃ ಪ್ರಾಪ್ಯತ ಇತ್ಯರ್ಥಃ । ಯವೋ ನ ಯವ ಇವ ಪಕ್ವಃ । ಯಥಾ ಪಕ್ವೋ ಯವ ಉಪಭೋಗಯೋಗ್ಯೋ ಭವತಿ ತದ್ವದಗ್ನಿರಪಿ ಪಾಕಾದಿ-ಕಾರ್ಯಹೇತುತಯೋಪಭೋಗ್ಯ ಇತ್ಯರ್ಥಃ । ಜನಾನಾಂ ಜೇತಾ ಶತ್ರುಜನಾನಾಂ ಮಧ್ಯೇऽಭಿಭವಿತಾ ಋಷಿರ್ನ ಮಂತ್ರದ್ರಷ್ಟಾ ಋಷಿರಿವ ಸ್ತುಭ್ವಾ ದೇವಾನಾಂ ಸ್ತೋತಾ ವಿಕ್ಷು ಯಜಮಾನಲಕ್ಷಣೇಷು ಮನುಷ್ಯೇಷು ಪ್ರಶಸ್ತಃ ಪ್ರಖ್ಯಾತಃ ವಾಜೀ ನ ಅಶ್ವ ಇವ ಪ್ರೀತೋ ಹರ್ಷಯುಕ್ತಃ। ಯಥಾಶ್ವೋ ಹರ್ಷ ಯುಕ್ತೋ ಯುದ್ಧಾಭಿಮುಖಂ ಗಚ್ಛತಿ ತದ್ವದಯಮಪಿ ದೇವಾನಾಂ ಹವಿರ್ವಹನೇ ಹರ್ಷಯುಕ್ತೋ ಭವತೀತ್ಯರ್ಥಃ । ಏವಂಭೂತೋऽಗ್ನಿರ್ವಯೋऽನ್ನಂ ದಧಾತಿ । ದಧಾತು । ಅಸ್ಮಭ್ಯಂ ದದಾತ್ವಿತ್ಯರ್ಥಃ । ವಯ ಇತ್ಯನ್ನನಾಮ । ವಯಃ ಕ್ಷದ್ಮೇತಿ ತನ್ನಾಮಸು ಪಾಠಾತ್ ॥ ದಾಧಾರ । ತುಜಾದೀನಾಮಿತ್ಯಭ್ಯಾಸಸ್ಯ ದೀರ್ಘತ್ವಂ । ಕ್ಷೇಮಂ । ಕ್ಷಿಯತಿ ನಿವಸತ್ಯನೇನೇತಿ ಕ್ಷೇಮಃ । ಅರ್ತಿಸ್ತುಸ್ವಿತ್ಯಾದಿನಾ ಮನ್ । ನಿತ್ತ್ವಾ-ದಾದ್ಯುದಾತ್ತತ್ವಂ । ರಣ್ವಃ । ರವಿ ಧವಿ ಗತ್ಯರ್ಥಾಃ । ಅಸ್ಮಾತ್ಕರ್ಮಣಿ ಕಪ್ರತ್ಯಯಃ । ಇದಿತ್ತ್ವಾನ್ನುಮ್ । ಜೇತಾ । ತೃನಂತ ಆದ್ಯುದಾತ್ತಃ । ಜನಾನಾಂ । ಯತಶ್ಚ ನಿರ್ಧಾರಣಂ । ಪಾ. ೨-೩-೪೧ । ಇತಿ ನಿರ್ಧಾರಣೇ ಷಷ್ಠೀ । ನೇಯಂ ಕರ್ಮಣಿ ಷಷ್ಠೀತಿ ನ ಲೋಕಾವ್ಯಯನಿಷ್ಠೇತಿ ಷಷ್ಠೀಪ್ರತಿಷೇಧೋ ನ ಭವತಿ । ಸ್ತುಭ್ವಾ । ಸ್ತೋಭತಿಃ ಸ್ತುತಿಕರ್ಮಾ । ಅನ್ಯೇಭ್ಯೋऽಪಿ ದೃಶ್ಯಂತ ಇತಿ ಕ್ವನಿಪ್ ॥

॥ ಪ್ರತಿಪದಾರ್ಥ ॥

**ಕ್ಷೇಮಂ**—(ಲಬ್ಧವಾದ ಧನದ) ರಕ್ಷಣವನ್ನು । **ದಾಧಾರ**—(ಅಗ್ನಿಯು) ಧರಿಸುತ್ತಾನೆ (ಮಾಡುತ್ತಾನೆ)। **ಓಕೋ ನ**—ನಿವಾಸಸ್ಥಾನದಂತೆ । **ರಣ್ವಃ**—ರಮಣೀಯನು, (ಗಮ್ಯನು.) । **ಪಕ್ವಃ**—ಪಕ್ವವಾದ । **ಯವೋ ನ**—ಯವಧಾನದಂತೆ (ಉಪಭೋಗಸಾಧನನು ) । **ಜನಾನಾಂ**—ಶತ್ರು ಜನಗಳ (ಶತ್ರುಗಳನ್ನು) । **ಜೇತಾ**—

ಜಯಕರ್ತೃವು (ಜಯಿಸತಕ್ಕವನು)। **ಋಷಿರ್ನ**—(ಮಂತ್ರದ್ರಷ್ಟೃವಾದ) ಋಷಿಯಂತೆ। **ಸ್ತುಭ್ವಾ**—ದೇವತೆಗಳನ್ನು ಸ್ತುತಿಸುವವನು। **ವಿಕ್ಷು**—ಯಜಮಾನರಲ್ಲಿ। **ಪ್ರಶಸ್ತಃ**—ಪ್ರಖ್ಯಾತನು। **ವಾಜೋ ನ**—ಅಶ್ವದಂತೆ। **ಪ್ರೀತಃ**—(ಹವಿಸ್ಸನ್ನು ದೇವತೆಗಳಿಗೆ ಕೊಡುವುದರಲ್ಲಿ ಪ್ರೀತನು) ಸಂತೋಷಯುಕ್ತನು (ಇಂತಹ ಅಗ್ನಿಯು)। **ವಯಃ**—ಅನ್ನವನ್ನು। **ದಧಾತಿ**—ದಾನಮಾಡಲಿ. (ಕೊಡಲಿ)

॥ ಭಾವಾರ್ಥ ॥

ಸ್ತೋತೃಗಳಿಗೆ ದತ್ತವಾದ ಧನವನ್ನು ರಕ್ಷಿಸುವವನೂ, ನಿವಾಸಸ್ಥಾನವು ಸಕಲರಿಂದ ಹೇಗೆ ಗಮ್ಯವೋ ಹಾಗೆ ಎಲ್ಲರಿಂದಲೂ ಪ್ರಾಪ್ಯನೂ, ಪಕ್ವವಾದ ಯವದಂತೆ ಉಪಭೋಗಸಾಧನನೂ, ಶತ್ರುನಾಶಕನೂ, ಮಂತ್ರದ್ರಷ್ಟೃಗಳಂತೆ ದೇವತೆಗಳನ್ನು ಸ್ತುತಿಸುವವನೂ, ಮನುಷ್ಯರಲ್ಲಿ ಪ್ರಖ್ಯಾತನೂ, ಉತ್ತಮಾಶ್ವದಂತೆ ತನ್ನ ಕರ್ತವ್ಯವಾದ ಹವಿರ್ವಹನ ಕಾರ್ಯದಲ್ಲಿ ಸಂತೋಷಯುಕ್ತನೂ ಆದ ಅಗ್ನಿಯು ನಮಗೆ ಅನ್ನವನ್ನು ಕೊಡಲಿ

## English Translation.

Like a beautiful mansion, he protects property, he (nourishes people), like barley, he is the conqueror of (hostile) men; he is like a Rishi, the praiser (of the Gods), eminent amongst (devout) persons, delighted like a steed, may he bestow upon us food.

॥ ವಿಶೇಷವಿಷಯಗಳು ॥

**ಕ್ಷೇಮಂ ದಾಧಾರ—ಲಬ್ಧಸ್ಯ ಧನಸ್ಯ ರಕ್ಷಣಂ ಧಾರಯತಿ।** ಪ್ರಾಪ್ತವಾದದ್ದನ್ನು ಪಾಲನೆ ಮಾಡುವುದು ರಕ್ಷಣವೆನಿಸಿರುವುದು ಆದ್ದರಿಂದ ಈ ಅಗ್ನಿಯು ಸ್ತೋತ್ರಮಾಡುವ ಯಜಮಾನರಿಗೆ ಅನುಗ್ರಹಿಸಿರುವ ಧನವನ್ನು ರಕ್ಷಿಸಲು ಸಮರ್ಥನಾಗಿರುವನು.

**ಓಕೋ ನ ರಣ್ವಃ—ಗೃಹಮಿವ ರಮಣೀಯಃ ಯದ್ವಾ ಗಂತವ್ಯಃ।** ಅಗ್ನಿದೇವನು ಪ್ರಾಣಿಗಳಿಗೆ ವಾಸಮಾಡುವ ಮನೆಯು ಹಾಗೆ ಆನಂದವನ್ನು ಉಂಟುಮಾಡುವನು. ಅಥವಾ ವಾಸಸ್ಥಾನವಾದ ಮನೆಯನ್ನು ಪ್ರಾಣಿಗಳು ಆಶ್ರಯಿಸುವ ಹಾಗೆ ಅಗ್ನಿಯನ್ನು ಎಲ್ಲರೂ ಆಶ್ರಯಿಸುವರು

**ಯವೋ ನ ಪಕ್ವಃ—ಯಥಾ ಪಕ್ವೋ ಯವ ಉಪಭೋಗಯೋಗ್ಯಃ ಭವತಿ ತದ್ವದಗ್ನಿರಪಿ ಪಾಕಾದಿಕಾರ್ಯಹೇತುತಯಾ ಉಪಭೋಗ್ಯಃ।** ಚೆನ್ನಾಗಿ ಬಲಿತು ಹಣ್ಣಾದ ಧಾನ್ಯಗಳು ಉಪಭೋಗ ಮಾಡಲು ಯೋಗ್ಯವಾಗಿರುವಂತೆ ಅಗ್ನಿಯೂ ಕೂಡ ಪಾಕವೇ ಮೊದಲಾದ ಕಾರ್ಯಗಳಿಗೆ ಕಾರಣನಾಗಿ ಎಲ್ಲರಿಗೂ ಸೇವಿಸಲು ಅರ್ಹನಾಗಿರುವನು.

**ವಾಜೀ ನ ಪ್ರೀತಃ—ಅಶ್ವ ಇವ ಹರ್ಷಯುಕ್ತಃ ।** ಕುದುರೆಯು ಸಂತೋಷವುಳ್ಳದ್ದಾಗಿ ಯುದ್ಧ ಮಾಡಲು ಹೋಗುವ ಹಾಗೆ ಅಗ್ನಿಯೂ ಕೂಡ ದೇವತೆಗಳಿಗೆ ಹರ್ಷವನ್ನು ಉಂಟುಮಾಡಲು ಹವಿಸ್ಸನ್ನು ವಹಿಸಲು ಸಂತೋಷವುಳ್ಳವನಾಗಿ ಇರುವನು

ಸ್ಕಂದಸ್ವಾಮಿಗಳು ಓಕೋ ನ ರಣ್ವಃ, ಯವೋ ನ ಪಕ್ವಃ ಎಂಬ ಎರಡು ವಾಕ್ಯಗಳಲ್ಲಿರುವ ಪದಗಳಿಗೆ ಗೃಹಮಿವ ಚ, ಯವ ಇವ ಚ ಪಕ್ವಃ ಎಂದು ಉಪಮಾನೋಪಮೇಯಭಾವದಿಂದ (ಅನ್ವಯವನ್ನು) ಸಂಬಂಧವನ್ನು ತೋರಿಸಿ, ಮನೆಯಂತೆಯೂ, ಯವಧಾನ್ಯದಂತೆಯೂ ಅಗ್ನಿಯು ರಮಣೀಯನಾಗಿ ಎಲ್ಲರಿಗೂ ಪ್ರೀತಿಯನ್ನು ಉಂಟು ಮಾಡುತ್ತಿರುವನು ಎಂದು ಅರ್ಥವನ್ನು ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ದಾಧಾರ** -ಧೃಞ್ ಧಾರಣೇ ಧಾತು ಲಿಟ್ ಪ್ರಥಮಪುರುಷ ಏಕವಚನದ ತಿಪ್ಪಿಗೆ ಣಲಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಪ್ರಸ್ವ **ಅಭ್ಯಾಸೇ ಚರ್ಚ** ಎಂಬುದರಿಂದ ಜಸ್ತ್ವ. **ತುಜಾದೀನಾಂ ದೀರ್ಘೋಽಭ್ಯಾಸಸ್ಯ** (ಪಾ ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಪ್ರತ್ಯಯ ಣಿತ್ತಾದುದರಿಂದ **ಅಚೋಞ್ಣಿತಿ** ಎಂಬುದರಿಂದ ಧಾತುವಿನ ಋಕಾರಕ್ಕೆ ವೃದ್ಧಿ **ಉರಣ್ ರಪರಃ** ಸೂತ್ರದಿಂದ ರಪರವಾಗಿ ಬರುತ್ತದೆ ದಾಧಾರ ಎಂದು ರೂಪ ವಾಗುತ್ತದೆ. ಣಲ್ ಲಿತ್ತಾದುದರಿಂದ **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ

**ಕ್ಷೇಮಮ್—**ಕ್ಷಿಯತಿ ನಿವಸತಿ ಅನೇನ ಇತಿ ಕ್ಷೇಮಃ ಕ್ಷಿ ನಿವಾಸಗತ್ಯೋಃ ಧಾತು **ಅರ್ತಿಸ್ತುಸುಹ**— (ಉ ಸೂ ೧-೧೩೭) ಎಂಬುದರಿಂದ ಮನ್ ಪ್ರತ್ಯಯ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕ್ಕಿಗೆ ಗುಣ ಕ್ಷೇಮ ಎಂದು ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತವಾಗುತ್ತದೆ

**ರಣ್ವಃ**—ರವಿ ಧವಿ ಗತ್ಯರ್ಥಾಃ. ಇದಕ್ಕೆ ಕರ್ಮಣಿಯಲ್ಲಿ ಕ ಪ್ರತ್ಯಯ ಇದಿತ್ತಾದುದರಿಂದ **ಇದಿತೋನುಮ್ ಧಾತೋಃ** ಎಂಬುದರಿಂದ ಧಾತುವಿಗೆ ನುಮಾಗಮ **ಅಟ್ ಕುಪ್ವಾಙ್**— ಸೂತ್ರದಿಂದ ನಕಾರಕ್ಕೆ ಣತ್ವ. ರಣ್ವ ಎಂದು ರೂಪವಾಗುತ್ತದೆ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಅಂತೋದಾತ್ತವಾದ ಪದವಾಗುತ್ತದೆ.

**ಪಕ್ವಃ**—ಡುಪಚಿಷ್ ಪಾಕೇ ಧಾತು ಕರ್ಮಣಿಯಲ್ಲಿ ಕ್ತಪ್ರತ್ಯಯ **ಪಚೋ ವಃ** (ಪಾ. ಸೂ. ೮-೨-೫೨) ಎಂಬುದರಿಂದ ಕ್ತಪ್ರತ್ಯಯಕ್ಕೆ ವಕಾರಾದೇಶ ಇದು ಅಸಿದ್ಧವಾದುದರಿಂದ **ಚೋಃಕುಃ** (ಪಾ ಸೂ. ೮-೨-೩೦) ಎಂಬುದರಿಂದ ಚಕಾರಕ್ಕೆ ಕುತ್ವದಿಂದ ಕಕಾರಾದೇಶ ಪಕ್ವ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತ.

**ಜೇತಾ—**ಜಿ ಜಯೇ ಧಾತು. ಕರ್ತರಿಯಲ್ಲಿ ತೃನ್ ಪ್ರತ್ಯಯ. ಆರ್ಧಧಾತುಕನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ ಜೇತೃ ಶಬ್ದವಾಗುತ್ತದೆ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಪ್ರತ್ಯಯವು ನಿತ್ತಾದುದರಿಂದ ಆದ್ಯುದಾತ್ತ ವಾಗುತ್ತದೆ ಪ್ರಥಮಾ ಸುಪರದಲ್ಲಿರುವಾಗ **ಋದುಶನಸ್ಪುರು**— ಸೂತ್ರದಿಂದ ಅನಜಾದೇಶ. **ಅಪ್ ತೃನ್ ತೃಚ್**—

ಎಂಬುದರಿಂದ ಉಪಧಾದೀರ್ಘ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಸುಲೋಪ. **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ನಲೋಪ. ಜೇತಾ ಎಂದು ರೂಪವಾಗುತ್ತದೆ

**ಜನಾನಾಂ (ಜೇತಾ)—ಯತಶ್ಚ ನಿರ್ಧಾರಣಂ** (ಪಾ. ಸೂ ೨-೩-೪೧) ಜಾತಿ, ಗುಣ, ಕ್ರಿಯಾ, ಸಂಜ್ಞೆಗಳಿಂದ ಸಮುದಾಯದಿಂದ ಬೇರ್ಪಡಿಸುವಾಗ ಅವಧಿಭೂತವಾದ ವಸ್ತುವಾಚಕಕ್ಕೆ **ಷಷ್ಠೀ** ಎಂಬುದರಿಂದ ಇಲ್ಲಿ ಷಷ್ಠೀ ಬರುತ್ತದೆ ಕರ್ಮಣಿಯಲ್ಲಿ ಷಷ್ಠೀ ಪ್ರಾಪ್ತವಾಗುತ್ತಿದ್ದರೆ **ನ ಲೋಕಾವ್ಯಯನಿಷ್ಠಾ**—ಎಂಬುದರಿಂದ ಷಷ್ಠೀ ಪ್ರತಿಷೇಧವು ಬರುತ್ತಿತ್ತು ಹಿಂದೆ ಹೇಳಿದ ಸೂತ್ರದಿಂದ ಸಾಧುವಾಗುತ್ತದೆ.

**ಸ್ತುಭ್ವಾ**—ಸ್ತುಭ ಸ್ತುತೌ ಧಾತು. **ಅನ್ಯೇಷಾಮಪಿ ದೃಶ್ಯತೇ** ಎಂಬುದರಿಂದ ಕ್ವನಿಪ್ ಪ್ರತ್ಯಯ. ಸ್ತುಭ್ವನ್ ಶಬ್ದವಾಗುತ್ತದೆ. ಪ್ರಥಮಾ ಸು ಪರವಾದಾಗ **ಸರ್ವನಾಮಸ್ಥಾನೇ ಚಾಸಂಬುದ್ಧೌ** ಎಂಬುದರಿಂದ ದೀರ್ಘ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಸುಲೋಪ **ನ ಲೋಪಃ ಪ್ರಾತಿ**—ಎಂಬುದರಿಂದ ನಲೋಪ ಸ್ತುಭ್ವಾ ಎಂದು ರೂಪವಾಗುತ್ತದೆ ಪ್ರತ್ಯಯ ಪಿತ್ತಾದುದರಿಂದ ಧಾತುಸ್ವರ ಉಳಿಯುತ್ತದೆ

**ಪ್ರಶಸ್ತಃ**—ಶಂಸು ಸ್ತುತೌ ಧಾತು. **ಕ್ತಪ್ರತ್ಯಯ** ಕಿತ್ತಾದುದರಿಂದ **ಅನಿದಿತಾಂ ಹಲ**—ಎಂಬುದರಿಂದ ಉಪಧಾನಕಾರಲೋಪ ಪ್ರತ್ಯಯಸ್ವರದಿಂದ ಅಂತೋದಾತ್ತ ಪ್ರ ಎಂಬುದರೊಡನೆ ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ

**ದಧಾತಿ**—ಡುಧಾಞ್ ಧಾರಣಪೋಷಣಯೋಃ ಧಾತು ಜುಹೋತ್ಯಾದಿ ಲಟ್ ಪ್ರಥಮಪುರುಷ ಏಕವಚನದಲ್ಲಿ ಉಕ್ತರೂಪವಾಗುತ್ತದೆ ತಿಙಂತನಿಘಾತಸ್ವರ ಬರುತ್ತದೆ. ॥ ೪-೫ ॥

॥ ಸಂಹಿತಾಪಾಠಃ ॥

ದುರೋಕಶೋಚಿಃ ಕ್ರತುರ್ನ ನಿತ್ಯೋ ಜಾಯೇವ ಯೋನಾವರಂ ವಿಶ್ವಸ್ಮೈ ।
ಚಿತ್ರೋ ಯದಭ್ರಾಟ್ಛ್ವೇತೋ ನ ವಿಕ್ಷು ರಥೋ ನ ರುಕ್ಮೀ ತ್ವೇಷಃ ಸಮತ್ಸು ॥ ೫ ॥ ೬ ॥

|| ಪದಪಾಠಃ ||

ದುರೋಕ ऽ ಶೋಚಿಃ । ಕ್ರತುಃ । ನ । ನಿತ್ಯಃ । ಜಾಯಾ ऽ ಇವ । ಯೋನೌ ।
ಅರಂ । ವಿಶ್ವಸ್ಮೈ ।
ಚಿತ್ರಃ । ಯತ್ । ಅಭ್ರಾಟ್ । ಶ್ವೇತಃ । ನ । ವಿಕ್ಷು । ರಥಃ । ನ । ರುಕ್ಮೀ ।
ತ್ವೇಷಃ । ಸಮತ್ ऽ ಸು || ೫ || ೬ ||

|| ಸಾಯಣಭಾಷ್ಯಂ ||

ದುರೋಕಶೋಚಿರ್ದುಷ್ಪ್ರಸಹತೇಜಾಃ ಕ್ರತುರ್ನ ನಿತ್ಯಃ । ಕ್ರತುಃ ಕರ್ಮಣಾಂ ಕರ್ತಾ । ಸ ಇವ ಧ್ರುವಃ । ಯಥಾ ಸ ಕರ್ಮಸು ಧ್ರುವೋಽಪ್ರಮತ್ತಃ ಸನ್ ಜಾಗರ್ತಿ ತದ್ವದಯಮಪ್ಯಗ್ನಿಃ ಕರ್ಮಸು ರಕ್ಷಸಾಂ ದಹನೇ ಧ್ರುವೋ ಜಾಗರ್ತೀತ್ಯರ್ಥಃ । ಯೋನೌ ಗೃಹೇ ವರ್ತಮಾನಾ ಜಾಯೇವ ಯೋಷಿದಿವ ಅಗ್ನಿಹೋತ್ರಾದಿಗೃಹೇ ವರ್ತಮಾನೋ ವಹ್ನಿರ್ವಿಶ್ವಸ್ಮೈ ಸರ್ವಸ್ಮೈ ಯಷ್ಟೃಜನಾಯಾರಮಲಂ ಭೂಷಣಂ ಭವತಿ । ಯಥಾ ಜಾಯಯಾ ಗೃಹಮಲಂಕೃತಂ ಭವತಿ ತದ್ವದಗ್ನಿನಾ ಯಜ್ಞಗೃಹಮಪ್ಯಲಂಕೃತಂ ಸದ್ದೃಶ್ಯತ ಇತ್ಯರ್ಥಃ । ಚಿತ್ರಶ್ಚಾಯನೀಯೋ ವಿಚಿತ್ರದೀಪ್ತಿರ್ವಾ ಯದ್ಯದಾಯಮಗ್ನಿರಭ್ರಾಟ್ ಭ್ರಾಜತೇ ತದಾನೀಂ ಶ್ವೇತೋ ನ ಶುಭ್ರವರ್ಣ ಆದಿತ್ಯ ಇವ ಭವತಿ । ರಾತ್ರೌ ಹ್ಯಹನಿ ಸೂರ್ಯ ಇವಾಗ್ನಿಃ ಪ್ರಕಾಶಕೋ ಭವತಿ । ವಿಕ್ಷು ಪ್ರಜಾಸು ರಥೋ ನ ರಥ ಇವ ರುಕ್ಮೀ ಸುವರ್ಣವದ್ರೋಚಮಾನದೀಪ್ತಿಯುಕ್ತಃ ಸಮತ್ಸು ಸಂಗ್ರಾಮೇಷು ತ್ವೇಷೋ ದೀಪ್ತಃ । ಏವಂಭೂತೋಽಗ್ನಿರ್ಯದಭ್ರಾಡಿತಿ ಪೂರ್ವೇಣಾನ್ವಯಃ ॥ ದುರೋಕಶೋಚಿಃ । ಉಚ ಸಮವಾಯೇ । ಈಷದ್ದುಃಸುಷ್ವಿತಿ ಕೃಚ್ಛ್ರಾರ್ಥೇ ಖಲ್ । ಬಹುಲವಚನಾತ್ಕುತ್ವಂ । ಲಿತ್ಸ್ವರೇಣ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ದುರೋಕಂ ಶೋಚಿಸ್ತೇಜೋ ಯಸ್ಯ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅರಂ । ಪಾಲಮೂಲೇತ್ಯಾದಿನಾ । ಮ. ೮-೨-೧೮ । ಲಕಾರಸ್ಯ ರೇಫಾದೇಶಃ । ಅಭ್ರಾಟ್ । ಭ್ರಾಜೃ ದೀಪ್ತೌ । ಲಙಿ ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ಶಪೋ ಲುಕ್ । ವ್ರಶ್ಚಾದಿಷತ್ವೇ ಜಶ್ತ್ವಂ । ಅಡಾಗಮ ಉದಾತ್ತಃ । ಯದ್ವೃತ್ತಯೋಗಾದನಿಘಾತಃ । ಸಮತ್ಸು । ಸಮಾನಂ ಮಾದ್ಯಂತ್ಯೇಷ್ವಿತಿ ಸಮದಃ ಸಂಗ್ರಾಮಾಃ । ಔಣಾದಿಕೋಽಧಿಕರಣೇ ಕ್ವಿಪ್ । ಸಮಾನಸ್ಯ ಛಂದಸೀತಿ ಸಭಾವಃ । ಯದ್ವಾ । ಸಮ್ಯಗತ್ತಿ ಭಕ್ಷಯತಿ ವೀರಾನಿತಿ ಸಮತ್ । ಸಂಪೂರ್ವಾದತ್ತೇಃ ಕ್ವಿಷ್ಟೇಚಿ ಕ್ವಿಪ್ ॥

॥ ಪ್ರತಿಪದಾರ್ಥ ॥

**ದುರೋಕಶೋಚಿಃ**— ಸಹಿಸಲಶಕ್ಯವಾದ ತೇಜಸ್ಸುಳ್ಳ (ಅಗ್ನಿಯು) । **ಕ್ರತುರ್ನ**— ಯಜ್ಞಕರ್ತೃವಿನಂತೆ **ನಿತ್ಯಃ**—(ರಾಕ್ಷಸಾದಿನಾಶದಲ್ಲಿ) ಜಾಗೃತನು । **ಯೋನಾ**— ಮನೆಯಲ್ಲಿ (ಇರುವ) । **ಜಾಯೇವ**— ಗೃಹಿಣಿಯಂತೆ । **ವಿಶ್ವಸ್ಮೈ**— ಎಲ್ಲ ಯಾಗ ಕರ್ತೃಗಳಿಗೂ । **ಅರಂ** – ಅಲಂಕಾರಪ್ರಾಯನು । **ವಿಕ್ಷು**— ಪ್ರಜೆಗಳಲ್ಲಿ । **ರಥೋ ನ**— ರಥದಂತೆ । **ರುಕ್ಮೀ**— ಸುವರ್ಣದಂತೆ ಪ್ರಕಾಶಿಸುವವನೂ । **ಸಮತ್ಸು**— ಸಂಗ್ರಾಮಗಳಲ್ಲಿ । **ತ್ವೇಷಃ**— ದೀಪ್ತನೂ ಆದ । **ಚಿತ್ರಃ**— ವಿಚಿತ್ರಕಾಂತಿಯುಳ್ಳ ಅಗ್ನಿಯು । **ಯತ್**— ಯಾವಾಗ । **ಅಭ್ರಾಟ್**— ಪ್ರಕಾಶಿಸುತ್ತಾನೆಯೋ (ಆಗ) । **ಶ್ವೇತೋ ನ**— ಶುಭ್ರವರ್ಣನಾದ (ಆದಿತ್ಯನಂತೆ ಇರುತ್ತಾನೆ)

॥ ಭಾವಾರ್ಥ ॥

ಅಗ್ನಿಯು ತೇಜಸ್ಸು ಇತರರಿಂದ ಸಹಿಸಲಶಕ್ಯವಾದುದು ಯಜ್ಞಕರ್ತೃವು ಹೇಗೆ ಕರ್ಮಗಳಲ್ಲಿ ಜಾಗೃತನೋ ಹಾಗೆ ಅಗ್ನಿಯೂ ಯಜ್ಞಘಾತುಕರನ್ನು ನಾಶಮಾಡುವುದರಲ್ಲಿ ಜಾಗೃತನು. ಪ್ರತಿಯೊಬ್ಬ ಅಗ್ನಿಹೋತ್ರಿಯ ಮನೆಗೂ ಗೃಹಿಣಿಯಂತೆ ಅಲಂಕಾರಭೂತನು. ಪ್ರಜಾಗಣದಲ್ಲಿ ಸುವರ್ಣಮಯವಾದ ರಥದಂತೆ ಪ್ರಕಾಶಿಸುವನು ಸಂಗ್ರಾಮಕಾಲದಲ್ಲಿ ವಿಚಿತ್ರದೀಪ್ತಿಯುಳ್ಳ ಅಗ್ನಿಯು ಸೂರ್ಯನಂತೆ ಶುಭ್ರಕಾಂತಿಯುಳ್ಳವನಾಗಿರುತ್ತಾನೆ

## English Translation

Agni, of unattainable effulgence, is like a vigilant sacrificer, he is an ornament to all in the sacrificial chamber), like a woman in a dwelling; when he shines with wonderful lustre, he is like the white (sun), or like a golden chariot amongst men resplendent in battle

॥ ವಿಶೇಷವಿಷಯಗಳು ॥

**ಕ್ರತುರ್ನ ನಿತ್ಯಃ— ಕ್ರತುಃ ಕರ್ಮಣಾಂ ಕರ್ತಾ ಸ ಇವ ಧ್ರುವಃ । ಯಥಾ ಸಃ ಕರ್ಮಸು ಧ್ರುವೋ ಅಪ್ರಮತ್ತಃ ಸನ್ ಜಾಗರ್ತಿ ತದ್ವದಯಮಪಿ ಅಗ್ನಿಃ ಕರ್ಮಸು ರಕ್ಷಸಾಂ ದಹನೇ ಧ್ರುವೋ ಜಾಗರ್ತಿ ।** ನ ಎಂಬ ಪದವು ಉಪಮಾವಾಚಕವಾಗಿ ಇವ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. ಕೆಲಸ ಮಾಡುವವನು ತನ್ನ ಕೆಲಸದ ವಿಷಯದಲ್ಲಿ ತಪ್ಪದೆ ಎಚ್ಚರದಿಂದ ಜಾಗರೂಕನಾಗಿರುವ ಹಾಗೆ ಅಗ್ನಿಯು ರಾಕ್ಷಸರನ್ನು ನಾಶಮಾಡುವ ಕೆಲಸದಲ್ಲಿ ಯಾವಾಗಲೂ ಜಾಗರೂಕನಾಗಿ ಇರುವನು.

**ಯೋನಾ ಜಾಯೇವ ವಿಶ್ವಸ್ಮೈ ಅರಂ— ಗೃಹೇ ವರ್ತಮಾನಾ ಯೋಷಿದಿವ ಅಗ್ನಿಹೋತ್ರಾದಿ ಗೃಹೇ ವರ್ತಮಾನೋ ಅಗ್ನಿಃ ಸರ್ವಸ್ಮೈ ಯಷ್ಟೃಜನಾಯ ಅಲಂ ಭೂಷಣಂ ಭವತಿ ।** ಯೋನಿ ಶಬ್ದವು (ನಿ ೩-೧೩) ಇಪ್ಪತ್ತೆರಡು ಗೃಹನಾಮಗಳ ಮಧ್ಯದಲ್ಲಿ ಉಕ್ತವಾಗಿರುವುದು ಮನೆಯಲ್ಲಿರುವ ಗೃಹಿಣಿಯ ಹಾಗೆ ಅಗ್ನಿ

ಹೋತ್ರವನ್ನು ಆಚರಿಸುವ ಮನೆಯಲ್ಲಿ ಇರುವ ಅಗ್ನಿಯು ಯಜ್ಞಮಾಡುವವರೆಲ್ಲರಿಗೂ ಅಲಂಕಾರವಾಗಿ ಇರುವನು ಮನೆಯಲ್ಲಿ ಇರುವ ಹೆಂಗಸಿನಿಂದ ಮನೆಯು ಚೆನ್ನಾಗಿ ಕಾಣಿಸುವ ಹಾಗೆ ಯಜ್ಞವು ನಡೆಯುವ ಮನೆಯು ಅಗ್ನಿಯಿಂದ ಅಲಂಕಾರವಾಗಿ ಕಾಣಿಸುವುದು.

**ದುರೋಕಶೋಚಿಃ—ದುರೋಕಾಃ ಶೋಚಿಃ ದೀಪ್ತಿಃ ಯಸ್ಯ ಸಃ ದುಸ್ಸಹದೀಪ್ತಿಕಃ ದುಷ್ಕರಂ ಓಕೋ ಯಸ್ಯಾಂ ಸ ದುರೋಕಾಃ ಯತ್ರ ವ್ಯವಸ್ಥಾತುಂ ನ ಶಕ್ಯಃ ಇತ್ಯರ್ಥಃ** ಅಗ್ನಿಯ ಕಾಂತಿಯು ಯಾರಿಂದಲೂ ಅಳತೆಮಾಡಿ ನಿಶ್ಚಯಮಾಡಲು ಅಶಕ್ಯನಾಗಿರುವುದು ಆದ್ದರಿಂದ ಆ ಪ್ರಕಾರವಾದ ಸಹಿಲಶಕ್ಯವಾದ ತೇಜಸ್ಸನ್ನು ಹೊಂದಿರುವವನು ಎಂದು ಸ್ಕಂದಸ್ವಾಮಿಗಳು ಅರ್ಥಮಾಡಿರುವರು. ಮತ್ತು **ಜಾಯೇವ ಯೋನೌ** ಎಂಬ ವಾಕ್ಯಕ್ಕೆ **ಯಥಾ ಸರ್ವಮನುಷ್ಯಾಣಾಂ ಭಾರ್ಯಾ ಗೃಹೇ ಸರ್ವಸ್ಮೈ ಕಾರ್ಯಾಯ ಪರ್ಯಾಪ್ತಾ ಏವಮಗ್ನಿರಲಂ ಪರ್ಯಾಪ್ತಃ ಸರ್ವಸ್ಮೈ ಕಾರ್ಯಾಯ। ಸ್ತೋತೃಣಾಂ ಸರ್ವಕಾರ್ಯಾಣಿ ಕರ್ತುಂ ಸಮರ್ಥ ಇತ್ಯರ್ಥಃ।** ಮನುಷ್ಯರೆಲ್ಲರಿಗೂ ಮನೆಯಲ್ಲಿ ಹೆಂಡತಿಯು ಎಲ್ಲಾ ಕಾರ್ಯಗಳನ್ನೂ ಆಚರಿಸಲು ಸಮರ್ಥಳಾಗಿರುವ ಹಾಗೆ ಅಗ್ನಿಯು ಯಾಗವಮಾಡುವ ಯಜಮಾನರುಗಳ ಮತ್ತು ಸ್ತೋತ್ರಮಾಡುವವರ ಕಾರ್ಯಗಳೆಲ್ಲವನ್ನೂ ಸಾಧಿಸಿಕೊಡಲು ಸಮರ್ಥನಾಗಿರುವನು ಎಂದು ಅರ್ಥವನ್ನು ಹೇಳಿರುವರು

**ಚಿತ್ರಃ ಯದಭ್ರಾಟ್ ಶ್ವೇತೋ ನ—ಚಾಯನೀಯೋ ವಿಚಿತ್ರದೀಪ್ತಿರ್ವಾ। ಯದಾಯಮಗ್ನಿರ್ಭ್ರಾಜತೇ ತದಾನೀಂ ಶುಭ್ರವರ್ಣ ಆದಿತ್ಯ ಇವ ಭವತಿ। ರಾತ್ರೌ ಹಿ ಅಹನಿ ಸೂರ್ಯ ಇವ ಅಗ್ನಿಃ ಪ್ರಕಾಶಕೋ ಭವತಿ।** ಯಜ್ಞಗಳಲ್ಲಿ ಹವಿಸ್ಸುಗಳನ್ನು ಅರ್ಪಿಸುವುದೇ ಮೊದಲಾದವುಗಳಿಂದ ಪೂಜೆಯನ್ನು ಮಾಡಲು ಅರ್ಹನಾದ ಅಗ್ನಿಯು ಅನೇಕ ವಿಧವಾದ ಕಾಂತಿಗಳಿಂದ ಪ್ರಕಾಶಿಸುವನು ಈ ಅಗ್ನಿಯು ತನ್ನ ತೇಜಸ್ಸುಗಳಿಂದ ಕೂಡಿ ಪ್ರಕಾಶಿಸುತ್ತಿರುವಾಗ ಇವನು ಶುದ್ಧವಾದ ತೇಜಸ್ಸುಳ್ಳವನಾಗಿ ಸೂರ್ಯನ ಹಾಗೆ ಹೊಳೆಯುತ್ತಿರುವನು ಹಗಲಿನಲ್ಲಿ ಸೂರ್ಯನು ಪ್ರಕಾಶಿಸುವ ಹಾಗೆ ರಾತ್ರಿಯಲ್ಲಿ ಅಗ್ನಿಯು ಪ್ರಕಾಶಿಸುವನು

**ರಥೋ ನ ರುಕ್ಮೀ ತ್ವೇಷಃ ಸಮತ್ಸು—ರುಕ್ಮಮಿತಿ ಹಿರಣ್ಯನಾಮ।** ಸ್ಕಂದಸ್ವಾಮಿಗಳು ರುಕ್ಮವಾನ್ ಎಂದು ರುಕ್ಮೀ ಎಂಬ ಪದಕ್ಕೆ ಅರ್ಥವನ್ನು ಮಾಡಿ ಅದನ್ನು ರಥಕ್ಕೆ ವಿಶೇಷಣವಾಗಿ ಹೇಳಿರುವರು ಮತ್ತು ಈ ಅಗ್ನಿಯು ಸುವರ್ಣದಿಂದ ಅಲಂಕೃತವಾದ ರಥವು ಕಾಂತಿಯುಳ್ಳದ್ದಾಗಿ ಇರುವ ಹಾಗೆ ಈ ಅಗ್ನಿದೇವನು ಮನುಷ್ಯರಲ್ಲಿಯೂ, ಯುದ್ಧಗಳಲ್ಲಿಯೂ, ರೂಪದಿಂದಲೂ, ಕಾಂತಿಗಳಿಂದಲೂ ಪ್ರಕಾಶಿಸುತ್ತಿರುವನು ಎಂದು ಅರ್ಥವನ್ನು ಮಾಡಿರುವರು ರುಕ್ಮಶಬ್ದವು ಹದಿನೈದು ಹಿರಣ್ಯನಾಮಗಳ ಮಧ್ಯದಲ್ಲಿ (ನಿ ೨-೧೦) ಪಠಿತವಾಗಿರುವುದು. ಸಮತ್ಸು ಎಂಬ ಶಬ್ದವು (ನಿ ೩-೯) ನಲವತ್ತಾರು ಸಂಗ್ರಾಮನಾಮಗಳ ಮಧ್ಯದಲ್ಲಿ **ಉಕ್ತ**ವಾಗಿರುತ್ತದೆ

॥ ವ್ಯಾಕರಣಪ್ರಕ್ರಿಯಾ ॥

**ದುರೋಕಶೋಚಿಃ**— ಉಚ ಸಮವಾಯೇ ಧಾತು. ದುಸ್ ಉಪಪದವಾಗಿರುವಾಗ **ಈಷದ್ದುಃಸುಷುಕೃ**— (ಪಾ. ಸೂ. ೩-೩-೧೨೬) ಎಂಬುದರಿಂದ ಕೃಚ್ಛ್ರಾರ್ಥದಲ್ಲಿ ಖಲ್ ಪ್ರತ್ಯಯ **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಬಹುಲಗ್ರಹಣದಿಂದ ಚಕಾರಕ್ಕೆ ಕುತ್ವದಿಂದ ಕಕಾರಾದೇಶ ದುರೋಕ

ಎಂದು ರೂಪವಾಗುತ್ತದೆ **ಲಿತ್**ಪ್ರತ್ಯಯಾಂತವಾದುದರಿಂದ **ಲಿತಿ** ಸೂತ್ರದಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತ ಸ್ವರ ಬರುತ್ತದೆ ದುರೋಕಂ ಶೋಚಿಃ ತೇಜಃ ಯಸ್ಯ ಸಃ ದುರೋಕಶೋಚಿಃ, **ಬಹುವ್ರೀಹೌ ಪ್ರಕೃತ್ಯಾ-ಪೂರ್ವಪದಮ್** ಎಂಬುದರಿಂದ ಸಮಾಸದಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ನಿತ್ಯಃ**—(೧-೫-೬೬ ೧-೨) ರಲ್ಲಿ ವ್ಯಾಖ್ಯಾತವಾಗಿದೆ.

**ಅರಮ್**—ವಾಲಮೂಲ—(ಪಾ. ಮ ೮-೨-೧೮) ಎಂಬುದರಿಂದ ಅಲಮ್ ಎಂಬಲ್ಲಿರುವ ಲಕಾರಕ್ಕೆ ರೇಫಾದೇಶ ಬರುತ್ತದೆ.

**ಅಭ್ರಾಟ್**—ಭ್ರಾಜೃ ದೀಪ್ತೌ ಧಾತು. ಲಙ್‌ನಲ್ಲಿ **ವ್ಯತ್ಯಯೋ ಬಹುಲಂ** ಎಂಬುದರಿಂದ ಪರಸ್ಮೈ ಪದದ ತಿಪ್ ಪ್ರತ್ಯಯ ಬರುತ್ತದೆ **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಬಹುಲಂ ಛಂದಸಿ** ಸೂತ್ರ ದಿಂದ ಶಪ್ಪಿಗೆ ಲುಕ್. **ವ್ರಶ್ಚಭ್ರಸ್ಜಸೃಜ**—ಎಂಬುದರಿಂದ ಜಕಾರಕ್ಕೆ ಷಕಾರಾದೇಶ. **ಹಲ್‌ಙ್ಯಾಭ್ಯೋ**—ಸೂತ್ರ ದಿಂದ ಅಪೃಕ್ತಪ್ರತ್ಯಯಕ್ಕೆ ಲೋಪ **ಝಲಾಂ ಜಶೋಂತೇ** ಎಂಬುದರಿಂದ ಪದಾಂತವಾದುದರಿಂದ ಷಕಾರಕ್ಕೆ ಜಸ್ತ್ವದಿಂದ ಡಕಾರಾದೇಶ **ವಾವಸಾನೇ** ಎಂಬುದರಿಂದ ವಿಕಲ್ಪವಾಗಿ ಚರ್ತ್ವ ಅಂಗಕ್ಕೆ ಅಡಾಗಮ ಬಂದರೆ ಅಭ್ರಾಟ್ ಎಂದು ರೂಪವಾಗುತ್ತದೆ ಯತ್ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬು ದರಿಂದ ನಿಘಾತಪ್ರತಿಷೇಧ ಬರುತ್ತದೆ ಆಗ ಅಡಾಗಮ ಉದಾತ್ತವೆಂಬುದರಿಂದ ಆದ್ಯುದಾತ್ತವಾದ ಪದವಾಗುತ್ತದೆ

**ವಿಕ್ಷು**—ವಿಶ್+ಸು ಎಂದಿರುವಾಗ **ವ್ರಶ್ಚಭ್ರಸ್ಜ**—ಸೂತ್ರದಿಂದ ಶಕಾರಕ್ಕೆ ಷತ್ವ **ಷಢೋಃ ಕಃ ಸಿ** ಎಂಬುದರಿಂದ ಷಕಾರಕ್ಕೆ ಕಕಾರಾದೇಶ **ಆದೇಶಪ್ರತ್ಯಯಯೋಃ** ಎಂಬುದರಿಂದ ಪ್ರತ್ಯಯಕ್ಕೆ ಷತ್ವ ವಿಕ್ಷು ಎಂದು ರೂಪವಾಗುತ್ತದೆ **ಸಾವೇಕಾಚಸ್ತೃತೀಯಾದಿಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಶ್ವೇಷಃ**—ತ್ವಿಷ ದೀಪ್ತೌ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ ಧಾತುವಿನ ಲಘೂ-ಪಧೆಗೆ ಗುಣ. **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದೆ

**ಸಮತ್ಸು**—ಸಮಾನಂ ಮಾದ್ಯಂತೀ ಏಷು ಇತಿ ಸಮದಃ ಸಂಗ್ರಾಮಾಃ (ಯುದ್ಧದಲ್ಲಿ ಉನ್ಮತ್ತತೆಯನ್ನು ಹೊಂದುತ್ತಾರೆ) ಅಧಿಕರಣಾರ್ಥದಲ್ಲಿ ಔಣಾದಿಕವಾದ ಕ್ವಿಪ್ ಪ್ರತ್ಯಯ **ಸಮಾನಸ್ಯ ಛಂದಸಿ**—(ಪಾ ಸೂ. ೬-೩-೮೪) ಎಂಬುದರಿಂದ ಸಮಾನ ಶಬ್ದಕ್ಕೆ ಸಭಾವ ಸಮದ್ ಶಬ್ದವಾಗುತ್ತದೆ ಅಥವಾ ಸಮ್ಯಕ್ ಅತ್ತಿ ಭಕ್ಷಯತಿ ವೀರಾನಿತಿ ಸಮತ್ (ವೀರರನ್ನು ನಾಶಮಾಡುವುದು ಎಂದು ತಾತ್ಪರ್ಯ) ಸಮ್‌ಪೂರ್ವವಾದ ಅದ ಧಾತುವಿಗೆ **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ ಸಪ್ತಮೀ ಬಹುವಚನದಲ್ಲಿ **ಖರಿಚ** ಸೂತ್ರದಿಂದ ಚರ್ತ್ವ ಬಂದು ಸಮತ್ಸು ಎಂದು ರೂಪವಾಗುತ್ತದೆ. ಕೃದುತ್ತರಪದಪ್ರಕೃತಿಸ್ವರ ಬರುತ್ತದೆ ॥ ೬-೭ ॥



॥ ಸಂಹಿತಾಪಾಠಃ ॥

ಸೇನೇವ ಸೃಷ್ಟಾಮಂ ದಧಾತ್ಯಸ್ತುರ್ನ ದಿದ್ಯುತ್ತ್ವೇಷಪ್ರ-
ತೀಕಾ ।
ಯಮೋ ಹ ಜಾತೋ ಯಮೋ ಜನಿತ್ವಂ ಜಾರಃ ಕನೀನಾಂ
ಪತಿರ್ಜನೀನಾಂ ॥ ೭ ॥ ೮ ॥

॥ ಪದಪಾಠಃ ॥

ಸೇನಾಽಇವ । ಸೃಷ್ಟಾ । ಅಮಂ । ದಧಾತಿ । ಅಸ್ತುಃ । ನ । ದಿದ್ಯುತ್ । ತ್ವೇಷಽ-
ಪ್ರತೀಕಾ ।
ಯಮಃ । ಹ । ಜಾತಃ । ಯಮಃ । ಜನಿಽತ್ವಂ । ಜಾರಃ । ಕನೀನಾಂ । ಪತಿಃ ।
ಜನೀನಾಂ ॥ ೭ ॥ ೮ ॥

॥ ಸಾಯಣಭಾಷ್ಯಂ ॥

ಸೃಷ್ಟಾ ಪ್ರೇರಿತಾ ಸೇನೇವ ಸ್ವಾಮಿನಾ ಸಹ ವರ್ತಮಾನಾ ಭಟಸಂಹತಿರಿವಾಯಮಗ್ನಿರಮಂ ಶತ್ರೂಣಾಂ ಭಯಂ ದಧಾತಿ । ವಿದಧಾತಿ । ಕರೋತೀತ್ಯರ್ಥಃ । ಯದ್ವಾ । ಸೃಷ್ಟಾ ಸೇನೇವಾಮಂ ಬಲಂ ದಧಾತಿ । ಸಾ ಯಥಾ ಬಲವತೀ ತದ್ವದಗ್ನಿರಪಿ ಬಲವಾನಿತ್ಯರ್ಥಃ । ನಿದರ್ಶನಾಂತರಮುಚ್ಯತೇ । ದಿದ್ಯುದಿತಿ ವಜ್ರನಾಮ । ತೇನ ಚಾತ್ರೇಷುರ್ಲಕ್ಷ್ಯತೇ । ತ್ವೇಷಪ್ರತೀಕಾ ದೀಪ್ತಮುಖಾಸ್ತುರ್ನ ದಿದ್ಯುತ್ ಕ್ಷೇಪ್ತುಃ ಸಂಬಂಧಿನೀಷುರಿವ । ಸಾ ಯಥಾ ಭೀಷಯತೇ ತದ್ವದಗ್ನಿರಪಿ ರಾಕ್ಷಸಾದೀನ್ ಭೀಷಯತ ಇತ್ಯರ್ಥಃ । ಅತ್ರ ನಿರುಕ್ತಂ । ಸೇನೇವ ಸೃಷ್ಟಾ ಭಯಂ ವಾ ಬಲಂ ವಾ ದಧಾತ್ಯಸ್ತುರಿವ ದಿದ್ಯುತ್ತ್ವೇಷ-ಪ್ರತೀಕೇತ್ಯಾದಿ । ನಿ ೧೦-೨೧ । ಯಚ್ಛತಿ ದದಾತಿ ಸ್ತೋತೃಭ್ಯಃ ಕಾಮಾನಿತಿ ಯಮೋಽಗ್ನಿರುಚ್ಯತೇ । ಯದ್ವಾ । ಇಂದ್ರಾಗ್ನ್ಯೋರ್ಯುಗಪದುತ್ಪನ್ನತ್ವಾದಗ್ನೇರ್ಯಮತ್ವಂ । ಅಸ್ಮಿನ್ನರ್ಥೇ ಯಾಸ್ಕೇನ ಮಂತ್ರ-ಬ್ರಾಹ್ಮಣೇ ದರ್ಶಿತೇ । ಯಮೋ ಹ ಜಾತ ಇಂದ್ರೇಣ ಸಹ ಸಂಗತಃ । ಯಮಾವಿಹೇಹ ಮಾತರೇತ್ಯಪಿ ನಿಗಮೋ ಭವತೀತಿ । ಯೋ ಜಾತ ಉತ್ಪನ್ನೋ ಭೂತಸಂಘೋ ಯಚ್ಚ ಜನಿತ್ವಂ ಜನಯಿತವ್ಯಮುತ್ಪ-

ತ್ಸ್ಯಮಾನಂ ಭೂತಜಾತಂ ತದುಭಯಮಪಿ ಯಮೋ ಹ ಅಗ್ನಿರೇವ । ಸರ್ವೇಷಾಂ ಭಾವಾನಾಮಾಹುತಿ-ದ್ವಾರಾಗ್ನ್ಯಧೀನತ್ವಾತ್ । ಕನೀನಾಂ ಕನ್ಯಕಾನಾಂ ಜಾರೋ ಜರಯಿತಾ । ಯತೋ ವಿವಾಹಸಮಯ ಅಗ್ನೌ ಲಾಜಾದಿದ್ರವ್ಯಹೋಮೇ ಸತಿ ತಾಸಾಂ ಕನ್ಯಾತ್ವಂ ನಿವರ್ತತೇ । ಅತೋ ಜರಯಿತೇತ್ಯುಚ್ಯತೇ । ತಥಾ ಜನೀನಾಂ ಜಾಯಾನಾಂ ಕೃತವಿವಾಹಾನಾಂ ಪತಿರ್ಭರ್ತಾ । ತಥಾ ಚಾಖ್ಯಾಯತೇ । ಅನುಪಜಾತ-ಪುರುಷಸಂಭೋಗೇಚ್ಛಾವಸ್ಥಾಂ ಸ್ತ್ರಿಯಂ ಸೋಮೋ ಲೇಭೇ । ಸ ಚ ಸೋಮ ಈಷದುಪಜಾತಭೋ-ಗೇಚ್ಛಾಂ ತಾಂ ವಿಶ್ವಾವಸವೇ ಗಂಧರ್ವಾಯ ಪ್ರಾದಾತ್ । ಸ ಚ ಗಂಧರ್ವೋ ವಿವಾಹಸಮಯೇಽಗ್ನಯೇ ಪ್ರದದೌ । ಅಗ್ನಿಶ್ಚ ಮನುಜಾಯ ಭರ್ತ್ರೇ ಧನಪುತ್ರೈಃ ಸಹಿತಾಮಿಮಾಂ ಪ್ರಾಯಚ್ಛದಿತಿ । ಇಮಮರ್ಥಂ ಕಾಚಿದೃಕ್ ಸ್ಪಷ್ಟಂ ಬ್ರೂತೇ । ಸೋಮೋ ದದದ್ಗಂಧರ್ವಾಯ ಗಂಧರ್ವೋ ದದದಗ್ನಯೇ । ರಯಿಂ ಚ ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಂ । ಋ. ಸಂ. ೧೦-೮೫-೪೧ । ಇತಿ । ಯಾಸ್ಕಸ್ತ್ವಾಹ । ತೃತೀಯೋ ಅಗ್ನಿಷ್ಟೇ ಪತಿರಿತ್ಯಪಿ ನಿಗಮೋ ಭವತಿ । ನಿ. ೧೦-೨೧ । ಇತಿ । ಯದ್ವಾ । ಜನೀನಾಂ ಪಾಲ-ಯಿತಾ ಯತೋಽಯಮನುಷ್ಠಿತೈರ್ಯಾಗೈಃ ಫಲಂ ಪ್ರಯಚ್ಛತಿ ॥ ಸೇನೇವ । ಇನೇನ ಸಹ ವರ್ತತ ಇತಿ ಸೇನಾ । ವೋಪಸರ್ಜನಸ್ಯೇತಿ ಸಭಾವಃ । ಬಹುವ್ರೀಹಿಸ್ವರಃ । ಜನಿತ್ವಂ । ಜನೀ ಪ್ರಾದುರ್ಭಾವೇ । ಕೃತ್ಯಾರ್ಥೇ ತವೈಕೇನಿತಿ ಕರ್ಮಣಿ ತ್ವನ್ಪ್ರತ್ಯಯಃ । ಇಡಾಗಮಃ । ನಿತ್ತ್ವಾದಾದ್ಯುದಾತ್ತತ್ವಂ । ಜಾರಃ । ಜರಯತೀತಿ ಜಾರಃ । ದಾರಜಾರೌ ಕರ್ತರಿ ಣಿಲುಕ್ಚ । ಪಾ ೩-೩-೨೦-೪ । ಇತಿ ನಿಪಾತ್ಯತೇ । ಕನೀನಾಂ । ಕನ್ಯಾಶಬ್ದಾತ್ ಷಷ್ಠ್ಯೇಕವಚನೇ ಬಹುಲಂ ಛಂದಸೀತಿ ಬಹುಲಗ್ರಹಣಾತ್ಸಂಪ್ರಸಾರಣಂ । ಪರಪೂರ್ವತ್ವಂ । ಜನೀನಾಂ । ಜನ್ಯಂತೇ ಆಸ್ವಿತಿ ಜನಯಃ ಸ್ತ್ರಿಯಃ । ಇನ್ಸರ್ವಧಾತುಭ್ಯ ಇತೀನ್ಪ್ರ-ತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಯಮಃ**—(ಸ್ತೋತೃಗಳಿಗೆ) ಇಷ್ಟಾರ್ಥಪ್ರದನಾದ ಅಥವಾ (ಇಂದ್ರ ಮತ್ತು ಅಗ್ನಿಗಳು ಯಮಳರಾದುದ ರಿಂದ) ಯಮನಾಮಕನಾದ ಅಗ್ನಿಯು । **ಜಾತಃ**—ಉತ್ಪನ್ನನಾದವನು । **ಜನಿತ್ವಂ**—ಉತ್ಪತ್ತಿಯಾಗುವ ಎಲ್ಲವೂ ಅವನೇ । **ಯಮೋಹ**—ಅಗ್ನಿಯೇ ಆದ । **ಕನೀನಾಂ**—ಕನ್ನಿಕೆಯರಿಗೆ । **ಜಾರಃ**—ಜರೆಯನ್ನುಂಟುಮಾಡುವ (ಪ್ರೌಢೆಯರನ್ನಾಗಿ ಮಾಡುವ) । **ಜನೀನಾಂ**—ಸ್ತ್ರೀಯರಿಗೆ (ಯಾಗಗಳಿಗೆ) । **ಪತಿಃ**—ಪತಿಯಾದ (ಫಲದಾಯಕ ನಾದ) ಅಗ್ನಿಯು । **ಸೃಷ್ಟಾ**—(ಸ್ವಾಮಿಯಿಂದ) ಪ್ರೇರಿತವಾದ । **ಸೇನೇವ**—ಸೇನೆಯಂತೆ । **ತ್ವೇಷಪ್ರತೀಕಾ**—ದೀಪ್ತವಾದ ಮುಖವುಳ್ಳ । **ಅಸ್ತುಃ**—ಯೋಧನ । **ದಿದ್ಯುತ್ ನ**—ಬಾಣದಂತೆ । **ಅಮಂ**—(ಶತ್ರುಗಳಿಗೆ) ಭಯವನ್ನು (ಬಲವನ್ನು) । **ದಧಾತಿ**—ಉಂಟುಮಾಡುತ್ತಾನೆ (ಆಶ್ರಯಿಸುತ್ತಾನೆ.)

॥ ಭಾವಾರ್ಥ ॥

ಅಗ್ನಿಯು ಮತ್ತು ಇಂದ್ರನು ಏಕಕಾಲದಲ್ಲಿ ಉತ್ಪನ್ನರಾದುದರಿಂದ, ಅಥವಾ ಸ್ತೋತೃಗಳ ಇಷ್ಟಾರ್ಥದಾಯಕರಾದುದರಿಂದ ಉತ್ಪನ್ನವಾದ ಮತ್ತು ಉತ್ಪನ್ನವಾಗುವ ಸಕಲ ಭೂತಸಂಘಗಳೂ

ಅಗ್ನಿಯೇ ಇವನು ಕನ್ನಿಕೆಯರ ಕನ್ಯಾತ್ವವನ್ನು ಹೋಗಲಾಡಿಸುವವನು. ಸ್ತ್ರೀಯರಿಗೆ ಪತಿದಾತೃವು ಇಂತಹ ಅಗ್ನಿಯು ಯಜಮಾನನಿಂದ ಪ್ರೇರಿತವಾದ ಸೇನೆಯಂತೆ ಅಥವಾ ಯೋಧನಿಂದ ಪ್ರಯುಕ್ತನಾದ ಬಾಣವಂತೆ, ಶತ್ರುಗಳಿಗೆ ಭಯವನ್ನುಂಟುಮಾಡಲಿ

## English Translation

He terrifies (his adversaries) like an army sent (against an enemy), or like the bright-pointed shaft of an archer Agni, as Yama, is all that is born, as Yama, all that will be born he is the lover of maidens, the husband of wives

॥ ವಿಶೇಷವಿಷಯಗಳು ॥

**ಸೃಷ್ಟಾ ಸೇನೇವ ಅಮಂ ದಧಾತಿ**– **ಇನೇನ ಸಹ ವರ್ತತ ಇತಿ ಸೇನಾ ಸ್ವಾಮಿನಾ ಸಹ ವರ್ತಮಾನಾ ಪ್ರೇರಿತಾ ಭಟಸಂಹತಿರಿವ ಅಯಮಗ್ನಿಃ ಶತ್ರೂಣಾಂ ಭಯಂ ಕರೋತಿ । ಯದ್ವಾ ಸೇನೇವ ಬಲಂ ದಧಾತಿ । ಸಾ ಯಥಾ ಬಲವತೀ ತದ್ವದಗ್ನಿರಪಿ ಬಲವಾನಿತ್ಯರ್ಥಃ ।** ಯಜಮಾನನಿಂದ ಪ್ರೇರಿತವಾದ ಸೇನೆಯು ಯಜಮಾನನೊಡನೆ ಇರುತ್ತಾ ಶತ್ರುಜನರಿಗೆ ಭಯವನ್ನು ಉಂಟುಮಾಡುವ ಹಾಗೆ ಅಗ್ನಿಯು ಶತ್ರುಗಳಿಗೆ ಭಯವನ್ನು ಉಂಟುಮಾಡುವನು ಅಥವಾ ಯಜಮಾನನೊಡನೆ ಇರುವ ಸೇನೆಯು ಶಕ್ತಿಯಿಂದ ಕೂಡಿ ಇರುವ ಹಾಗೆ ಅಗ್ನಿಯೂ ಕೂಡ ಬಲವುಳ್ಳವನಾಗಿರುವನು ಎಂದು ಅಮ ಶಬ್ದಕ್ಕೆ ಭಯ ಮತ್ತು ಬಲವೆಂಬುದಾಗಿ ಎರಡು ವಿಧವಾದ ಅರ್ಥವನ್ನು ಸಾಯಣರು ವಿವರಿಸಿರುವರು

ಸ್ಕಂದಸ್ವಾಮಿಗಳು ಅಮಶಬ್ದವು ಭಯವನ್ನು ಹೇಳುವುದಾಗಿ ಇರುತ್ತವ **ಅಮಶಬ್ದೋಽತ್ರ ಭಯವಚನಃ ದ್ಯಾವಾ ಜಜ್ಞಾನಃ ಪೃಥಿವೀ ಅಮೇ ಧಾಃ** (ಋ ವೇ ೧-೬೩-೧) ಎಂದು ಹೇಳಿ ಭಯವನ್ನು ಶತ್ರುಗಳಿಗೆ ಉಂಟುಮಾಡುವ ಸೇನೆಯಂತೆ ಅಗ್ನಿಯೂ, ರಾಕ್ಷಸರಿಗಾಗಲಿ, ಜಗತ್ತಿಗಾಗಲಿ ಭಯಜನಕನು ಎಂದು ಒಂದು ವಿಧವಾದ ಅರ್ಥವನ್ನು ಮಾತ್ರ ಹೇಳಿರುತ್ತಾರೆ

**ಅಸ್ತುರ್ನ ದಿದ್ಯುತ್ತ್ವೇಷಪ್ರತೀಕಾ**—**ದಿದ್ಯುದಿತಿ ವಜ್ರನಾಮ ।** ದಿದ್ಯುತ್ ಎಂದರೆ ವಜ್ರಾಯುಧವು ಎಂದು ಅರ್ಥವು. ದಿದ್ಯುತ್ ಎಂಬ ಅರ್ಥವು ಹದಿನೆಂಟು ವಜ್ರಾಯುಧನಾಮಗಳ ಮಧ್ಯದಲ್ಲಿ (ನಿ ೩-೧೧) ಪಠಿತವಾಗಿರುತ್ತದೆ. ದ್ಯೋತತ ಇತಿ–ಬಹಳ ಕಾಂತಿಯಿಂದ ಹೊಳೆಯುವುದರಿಂದ ಆಯುಧವು ದಿದ್ಯುತ್ ಎನಿಸಿಕೊಳ್ಳುವುದು. ಇದರಿಂದ ಯೌಗಿಕಾರ್ಥವನ್ನು ಅಂಗೀಕರಿಸಿ ಬಾಣವೆಂದು ಅರ್ಥಮಾಡಿ ಬಾಣವು ಹೊಳೆಯುತ್ತಿರುವ ಮುಖವುಳ್ಳದ್ದಾಗಿರುವುದದರಿಂದ ಯಜಮಾನನಿಂದ ಬಿಡಲ್ಪಟ್ಟ ಬಾಣವು, ಇತರರನ್ನು ಭಯಗೊಳಿಸುವುದು. ಇದರಂತೆಯೇ ಅಗ್ನಿಯೂ ಕೂಡ ರಾಕ್ಷಸರೇ ಮೊದಲಾದವರನ್ನು ಭಯಗೊಳಿಸುತ್ತಾನೆ ಎಂದು ಅರ್ಥವು ಇಲ್ಲಿ ಯಾಸ್ಕರು **'ಸೇನೇವ ಸೃಷ್ಟಾ ಭಯಂ ವಾ ಬಲಂ ವಾ ದಧಾತ್ಯಸ್ತುರಿವ ದಿದ್ಯುತ್ತ್ವೇಷಪ್ರತೀಕಾ'** (ನಿ ೧೦-೨೧) ಇತ್ಯಾದಿ ಎಂಬ ವಚನವನ್ನು ಹೇಳಿರುವರು

**ಯಮೋ ಹ ಜಾತೋ ಯಮೋ ಜನಿತ್ವಂ—ಯಚ್ಛತಿ ದದಾತಿ ಸ್ತೋತೃಭ್ಯಃ ಕಾಮಾನಿತಿ ಯಮೋಽಗ್ನಿರುಚ್ಯತೇ । ಯದ್ವಾ ಇಂದ್ರಾಗ್ನ್ಯೋರ್ಯುಗಪದುತ್ಪನ್ನತ್ವಾದಗ್ನೇರ್ಯಮತ್ವಂ ।** ಅಗ್ನಿಯು ತನ್ನನ್ನು ಸ್ತೋತ್ರಮಾಡುವವರಿಗೆ ಇಷ್ಟಾರ್ಥಗಳನ್ನು ನೆರವೇರಿಸಿಕೊಡುವುದರಿಂದ ಯಮನೆಂದು ಹೆಸರು ಹೊಂದಿರುವನು ಅಥವಾ ಇಂದ್ರನೂ, ಅಗ್ನಿಯೂ ಕೂಡ ಏಕಕಾಲದಲ್ಲಿ ಉತ್ಪನ್ನರಾದಕಾರಣ ಅಗ್ನಿಯೂ ಯಮನಾಗಿರುವನು ಯಾಸ್ಕರು ಈ ಅರ್ಥದಲ್ಲಿ ಪ್ರಮಾಣವಾಗಿ **''ಯಮೋ ಹ ಜಾತ ಇಂದ್ರೇಣ ಸಹ ಸಂಗತಃ । ಯಮಾವಿಹೇಹ ಮಾತರೇತ್ಯಪಿ ನಿಗಮೋ ಭವತಿ''** (ನಿ. ೧೦-೨೧) **ಇತಿ** ಎಂಬುದಾಗಿ ಈ ವಾಕ್ಯವನ್ನು ಉದಾಹರಿಸಿರುವರು. ಇಂದ್ರನೊಡನೆ ಏಕೀಕರಿಸಿ ಇರುವುದರಿಂದ ಅಗ್ನಿಯು ಯಮಶಬ್ದದ ಅರ್ಥವಾದ ಸರ್ವಕಾಮಪೂರಯಿತೃತ್ವರೂಪಧರ್ಮವುಳ್ಳವನಾದ ಕಾರಣ ಇಂದ್ರಾಗ್ನಿಗಳಿಬ್ಬರೂ ಯಮಶಬ್ದದಿಂದ ಬೋಧ್ಯರಾಗಿರುವರು ಮತ್ತು ಲೋಕ ನಿರ್ಮಾತೃಗಳಾಗಿರುವರು ಎಂದು ನಿರುಕ್ತದ ವಾಕ್ಯಕ್ಕೆ ಅರ್ಥವು.

ಉತ್ಪನ್ನವಾಗಿರುವ ಮತ್ತು ಮುಂದೆ ಉತ್ಪನ್ನವಾಗುವ ಪ್ರಾಣಿಗಳ ಸಮುದಾಯವು ಇವೆರಡೂ ಕೂಡ ಯಮಶಬ್ದದಿಂದ ಬೋಧ್ಯವಾದ ಅಗ್ನಿಯೇ ಆಗಿರುವುದು ಉತ್ಪತ್ತಿಯನ್ನು ಹೊಂದುವ ಪ್ರಾಣಿಗಳೆಲ್ಲಕ್ಕೂ ಕೂಡ ಅಗ್ನಿಯಲ್ಲಿ ಆಹುತಿಯನ್ನು ಅರ್ಪಿಸುವುದರ ಮೂಲಕವಾಗಿ ಉತ್ಪತ್ತಿಯು ಉಂಟಾಗುವುದು. ಅಗ್ನಿಗೆ ಅಧೀನವಾಗಿರುವುದರಿಂದ ಜಾತ ಮತ್ತು ಜಾಯಮಾನಗಳೆಂಬ ಎರಡೂ ಯಮಶಬ್ದವಾಚ್ಯನಾದ ಅಗ್ನಿಯೇ ಆಗಿರುತ್ತದೆ. ಎಂದು ಅರ್ಥವು.

**ಜಾರಃ ಕನೀನಾಂ—ಕನ್ಯಕಾನಾಂ ಜರಯಿತಾ ।** ಅಗ್ನಿಯಿಂದಲೇ ಕನ್ಯೆಯರ ಕನ್ಯಾಭಾವವು ಹೋಗುವುದು. ವಿವಾಹ ಕಾಲದಲ್ಲಿ ಅರಳುಗಳನ್ನು ಅಗ್ನಿಯಲ್ಲಿ ಹೋಮಮಾಡುವುದರಿಂದಲೂ ಇತರ ದ್ರವ್ಯಗಳನು **ಆರ್ಯಮ** ಮಂತ್ರಗಳಿಂದ ಹೋಮಮಾಡುವುದರಿಂದಲೂ ಕೂಡ ಕನ್ಯಾಭಾವವು ನಿವೃತ್ತವಾಗುವುದು. ಈ ಕಾರಣದಿಂದ ಅಗ್ನಿಯು ಕನ್ಯಾಭಾವನಿವರ್ತಕನಾಗಿರುವನು.

**ಪತಿರ್ಜನೀನಾಂ—ಜಾಯಾನಾಂ ಕೃತವಿವಾಹಾನಾಂ ಪತಿಃ ಭರ್ತಾ ।** ಅಗ್ನಿಯು ವಿವಾಹ ಕಾಲದಲ್ಲಿ ಪತಿಯಾಗುವ ಮನುಷ್ಯನಿಗೆ ಕನ್ಯೆಯನ್ನು ಅವಳಿಗೆ ಆ ಜನ್ಮದಲ್ಲಿ ಮುಂದೆ ಉಂಟಾಗುವ ಧನ ಮತ್ತು ಪುತ್ರಾದಿಗಳೊಡನೆ ಅನುಗ್ರಹಿಸುವನು. ಆದ್ದರಿಂದ ಅಗ್ನಿಯು ಕನ್ಯೆಯರಿಗೆ ಪತಿಯಾಗಿಯೂ ಇರುವನು. ಪುರುಷನ ಸಹವಾಸದಿಂದ ಇರುತ್ತಾ ಪುರುಷಸಂಭೋಗೇಚ್ಛೆಯನ್ನು ಹೊಂದದೆ ಇರುವ ಕನ್ಯೆಯನ್ನು ಸೋಮನು ಮೊದಲು ಹೊಂದುವನು. ಅವನಿಂದ ಕೊಂಚಮಟ್ಟಿನ ಭೋಗೇಚ್ಛೆಯು ಕನ್ಯೆಯರಿಗೆ ಹೋಗಿ ಯೌವನವು ಉಂಟಾಗುವುದು. ಈ ಪ್ರಕಾರವಾದ ಸ್ಥಿತಿಯುಳ್ಳ ಸ್ತ್ರೀಯನ್ನು ಸೋಮನು ವಿಶ್ವಾವಸುವೆಂಬ ಗಂಧರ್ವನಿಗೆ ಒಪ್ಪಿಸುವನು. ಆ ಗಂಧರ್ವನು ವಿವಾಹಕಾಲದಲ್ಲಿ ಅಗ್ನಿಗೆ ಕೊಡುವನು. ಅಗ್ನಿಯು ಅವಳಿಗೆ ಪತಿಯಾಗುವ ಮನುಷ್ಯನಿಗೆ ಅನುಗ್ರಹಿಸುವನು ಎಂದು ಶಾಸ್ತ್ರಸಮ್ಮತಿಯು ಇರುವುದು **" ಸೋಮೋಽದದದ್ಗಂಧರ್ವಾಯ ಗಂಧರ್ವೋಽದದದಗ್ನಯೇ । ರಯಿಂ ಚ ಪುತ್ರಾಂಶ್ಚಾದಾದಗ್ನಿರ್ಮಹ್ಯಮಥೋ ಇಮಾಂ "** (ಋ. ಸಂ. ೧೦-೮೫-೪೧) **ಇತಿ** । ಎಂಬ ಋಗ್ವೇದ ಮಂತ್ರವು ಈ ಅಭಿಪ್ರಾಯವನ್ನು ಸ್ಪಷ್ಟವಾಗಿ ಬೋಧಿಸುತ್ತದೆ

ಇದರಿಂದ ಕೃತವಿವಾಹರಾದ (ವಿವಾಹಕಾಲದಲ್ಲಿ ವಿವಾಹವೆಂಬ ಸಂಸ್ಕಾರವನ್ನು ಹೊಂದುವ ಸ್ತ್ರೀಯರಿಗೆ) ಸೋಮ, ಗಂಧರ್ವ, ಅಗ್ನಿ ಎಂಬ ಮೂರು ದೇವತೆಗಳು ಅವರ ಶರೀರದಲ್ಲಿ ಉಂಟಾಗಬಹುದಾದ ಸೌಖ್ಯಕ್ಕೆ ತಕ್ಕ ಬದಲಾವಣೆಗಳನ್ನು ಉಂಟುಮಾಡಿ ಧನಪುತ್ರಾದಿಗಳನ್ನು ಅನುಭವಿಸುವಂತೆ ಅನುಗ್ರಹಿಸುವಕಾರಣ ಪತಿಗಳಾಗುವರು ಮನುಷ್ಯನು ನಾಲ್ಕನೆಯವನಾಗುವ ಕಾರಣ **"ತುರೀಯಸ್ತೇ ಮನುಷ್ಯಜಾಃ"** ಎಂದು ಒಂದು ಮಂತ್ರವು ಹೇಳುವುದು

ಯಾಸ್ಕರು **"ತೃತೀಯೋ ಅಗ್ನಿಷ್ಟೇ ಪತಿರಿತ್ಯಪಿ ನಿಗಮೋ ಭವತಿ"** (ನಿ ೧೦-೨೧) ಎಂದು ಈ ಅಭಿಪ್ರಾಯವನ್ನೇ ಹೇಳಿರುವರು

**ಯದ್ವಾ -ಜನೀನಾಂ ಪಾಲಯಿತಾ ಯತೋಽಯಮನುಷ್ಠಿತೈಃ ಯಾಗೈಃ ಫಲಂ ಪ್ರಯಚ್ಛತಿ ।** ಪತಿ ಶಬ್ದವು ಪಾಲನಾರ್ಥದಲ್ಲಿ ಇರುವುದರಿಂದ ಅಗ್ನಿಯು ಅವರವರು ಆಚರಿಸಿದ ಯಜ್ಞಗಳಿಗೆ ಅನುಸಾರವಾದ ಫಲವನ್ನು ಅನುಗ್ರಹಿಸಿ ಆಯಾಯ ಪ್ರಾಣಿಗಳನ್ನು ರಕ್ಷಿಸುವನು ಎಂದು ಇನ್ನೊಂದು ವಿಧವಾದ ಅರ್ಥವನ್ನೂ ಹೇಳುವರು.

ಸ್ಕಂದಸ್ವಾಮಿಗಳು—**ಪತಿರ್ಜನೀನಾಂ** ಎಂಬ ವಾಕ್ಯಕ್ಕೆ **ಜನಯಂತ್ಯಪತ್ಯಾನಿ ಇತಿ ಜನಯಃ ಭಾರ್ಯಾಃ ತಾಸಾಂ ಪತಿಃ** ಮಕ್ಕಳುಗಳನ್ನು ಹೆರುವವರಾದಕಾರಣ ಭರಣಯೋಗ್ಯರಾದ ಸ್ತ್ರೀಯರು ಜನಯಃ ಎಂಬ ಶಬ್ದವಾಚ್ಯರಾಗಿರುವರು ಅಗ್ನಿಯು ಇವರಿಗೆ ಮೊದಲು ಪತಿಯಾಗಿರುವನು. ಅನಂತರದಲ್ಲಿ ಮನುಷ್ಯನು ಪತಿಯಾಗುವನು **"ಸೋಮಃ ಪ್ರಥಮೋ ವಿವಿದೇ ಗಂಧರ್ವೋ ವಿವಿದ ಉತ್ತರಃ । ತೃತೀಯೋ ಅಗ್ನಿಷ್ಟೇ ಪತಿಸ್ತುರೀಯಸ್ತೇ ಮನುಷ್ಯಜಾಃ" ।** (ಋ ವೇ ೧೦-೮೫-೪೦) **ಇತಿ ।** ಈ ಮಂತ್ರವು ಸೋಮ, ಗಂಧರ್ವ, ಅಗ್ನಿ ಎಂಬ ಮೂರು ಜನರು ಪತಿಯಾದನಂತರ ಮನುಷ್ಯನು ಪತಿಯಾಗುವನು ಎಂದು ಅರ್ಥವನ್ನು ಹೇಳುವುದು ಆದ್ದರಿಂದ ಈ ವಚನವನ್ನು ಪ್ರಮಾಣವಾಗಿ ಉದಾಹರಿಸಿರುವರು ಅಗ್ನಿಯು ಜಾರಯಿತಾ ಪಾಲಯಿತಾ ಎಂಬುದಾಗಿ ಪ್ರಸಿದ್ಧನಾಗಿರುವುದರಿಂದ ಕನಧಾತುವು ಕಾಂತಿಕರ್ಮಾರ್ಥದಲ್ಲಿ ಪ್ರಯುಕ್ತವಾಗಿ **ಕಮನೀಯಃ ಕನಯ ಓಷಧಯಃ** ಎಂದು ಅರ್ಥವನ್ನು ಬೋಧಿಸುವ ಕಾರಣ ಅಗ್ನಿಯು ಅವುಗಳ ಫಲಪರಿಪಾಕರೂಪವಾದ ಸ್ಥಿತಿಯನ್ನು ಉಂಟುಮಾಡುವ ಕಾರಣ ಜಾರನಾಗಿರುವನು. ಮತ್ತು ಪಾಲನಮಾಡುವುದರಿಂದ ಪತಿಯಾಗಿರುವನು ಎಂದು ಅರ್ಥವನ್ನು ಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಸೇನೇವ—** ಇನೇನ ಸಹ ವರ್ತತೇ ಇತಿ ಸೇನಾ. **ವೋಪಸರ್ಜನಸ್ಯ** (ಪಾ ಸೂ. ೬-೩-೮೨) ಎಂಬುದರಿಂದ ಅಪ್ರಧಾನವಿರುವುದರಿಂದ ಸಹ ಎಂಬುದಕ್ಕೆ ಸಭಾವ. ಗುಣ. ಸೇನಾ ಎಂದು ರೂಪವಾಗುತ್ತದೆ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ದಧಾತಿ—** ಡುಧಾಞ್ ಧಾರಣಪೋಷಣಯೋಃ ಧಾತು. **ಲಟ್** ಪ್ರಥಮಪುರುಷ ಏಕವಚನರೂಪ ತಿಙಂತ ನಿಘಾತಸ್ವರ ಬರುತ್ತದೆ.

**ಅಸ್ತುಃ**—ಅಸು ಕ್ಷೇಪಣೇ ಧಾತು. ಕರ್ತ್ರರ್ಥದಲ್ಲಿ ತೃನ್ ಪ್ರತ್ಯಯ ಷಷ್ಠೀಏಕವಚನದಲ್ಲಿ **ಋತಉತ್** ಎಂಬುದರಿಂದ ಉತ್ವ ಬಂದು ಅಸ್ತುಃ ಎಂದಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಕ್ಷೇಪಪ್ರತೀಕಾ**—ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ

**ಜನಿತ್ವಮ್**—ಜನೀ ಪ್ರಾದುರ್ಭಾವೇ ಧಾತು ಇದಕ್ಕೆ **ಕೃತ್ಯಾರ್ಥೇ ತವೈಕೇನ್**—(ಪಾ. ಸೂ ೩-೪-೧೪) ಕೃತ್ಯಪ್ರತ್ಯಯಾರ್ಥವಾದ ಭಾವ, ಕರ್ಮಾರ್ಥದಲ್ಲಿ ತವೈ ಮುಂತಾದ ಪ್ರತ್ಯಯಗಳು ಬರುತ್ತವೆ ಎಂಬುದರಿಂದ ಕರ್ಮಾರ್ಥದಲ್ಲಿ (ಕರ್ಮಣಿಯಲ್ಲಿ) ತ್ವನ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಪ್ರತ್ಯಯಕ್ಕೆ ಇಡಾಗಮ. ಜನಿತ್ವ ಶಬ್ದವಾಗುತ್ತದೆ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ಜಾರಃ**—ಜರಯತಿ ಇತಿ ಜಾರಃ ಜೄ ವಯೋಹಾನೌ ಧಾತು. **ದಾರಜಾರೌ ಕರ್ತರಿ ಣಿಲುಕ್ ಚ** (ಪಾ ಸೂ ೩-೩-೨೦-೪) ಎಂಬಲ್ಲಿ ಜಾರ ಎಂದು ನಿಪಾತನಮಾಡಿರುತ್ತಾರೆ. ಈ ಧಾತುವಿಗೆ ಣ್ಯಂತದಮೇಲೆ ಘಞ್ ಪ್ರತ್ಯಯ ಣಿಗೆ ಲುಕ್. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಕನೀನಾಮ್**—ಕನ್ಯಾ ಶಬ್ದಕ್ಕೆ ಷಷ್ಠೀಬಹುವಚನ ಪರದಲ್ಲಿರುವಾಗ **ಬಹುಲಂ ಛಂದಸಿ** ಎಂಬಲ್ಲಿ ಬಹುಲಗ್ರಹಣಸಾಮರ್ಥ್ಯದಿಂದ ಸಂಪ್ರಸಾರಣ ಬರುತ್ತದೆ. ಯಕಾರಕ್ಕೆ ಇಕಾರರೂಪಸಂಪ್ರಸಾರಣ ಬಂದಾಗ **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಕನಿ। ಆಮ್ ಎಂದಿರುವಾಗ ನುಟಾಗಮ **ನಾಮಿ** ಎಂಬುದರಿಂದ ದೀರ್ಘ ಕನೀನಾಮ್ ಎಂದು ರೂಪವಾಗುತ್ತದೆ

**ಜನೀನಾಮ್**—ಜನ್ಯಂತೇ ಆಸು ಇತಿ ಜನಯಃ ಸ್ತ್ರಿಯಃ. **ಸರ್ವಧಾತುಭ್ಯ ಇನ್** (ಉ. ಸೂ ೪-೫೫೭) ಎಂಬುದರಿಂದ ಜನ್ ಧಾತುವಿಗೆ ಇನ್ ಪ್ರತ್ಯಯ ಜನಿ ಶಬ್ದವಾಗುತ್ತದೆ ಷಷ್ಠೀಬಹುವಚನದಲ್ಲಿ **ಹ್ರಸ್ವನದ್ಯಾಪೋ ನುಟ್** ಎಂಬುದರಿಂದ ಆಮಿಗೆ ನುಡಾಗಮ. **ನಾಮಿ** ಸೂತ್ರದಿಂದ ಅಜಂತಾಂಗಕ್ಕೆ ದೀರ್ಘ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. ॥ ೭-೮ ॥



॥ ಸಂಹಿತಾಪಾಠಃ ॥

ತಂ ವಶ್ಚರಾಥಾ ವಯಂ ವಸತ್ಯಾಸ್ತಂ ನ ಗಾವೋ ನಕ್ಷಂತ ಇದ್ಧಂ ।

ಸಿಂಧುರ್ನ ಕ್ಷೋದಃ ಪ್ರ ನೀಚೈರೈನೋನ್ನವಂತ ಗಾವಃ ಸ್ವ೧-
ರ್ದೃಶೀಕೇ ॥ ೯ ॥ ೧೦ ॥

॥ ಪದಪಾಠಃ ॥

ತಂ । ವಃ । ಚರಾಥಾ । ವಯಂ । ವಸತ್ಯಾ । ಅಸ್ತಂ । ನ । ಗಾವಃ । ನಕ್ಷಂತೇ ।
ಇದ್ಧಂ ।

ಸಿಂಧುಃ । ನ । ಕ್ಷೋದಃ । ಪ್ರ । ನೀಚೀಃ । ಐನೋತ್ । ನವಂತ । ಗಾವಃ ।
ಸ್ವಃ । ದೃಶೀಕೇ ॥ ೯ ॥ ೧೦ ॥

॥ ಸಾಯಣಭಾಷ್ಯಂ ॥

ವ ಇತಿ ವ್ಯತ್ಯಯೇನ ಬಹುವಚನಂ । ಹೇ ಅಗ್ನೇ ತಂ ತ್ವಾಂ ಚರಾಥಾ । ಚರತೀತಿ ಚರಥಃ ಪಶುಃ । ತತ್ಪ್ರಭವೈರ್ಹೃದಯಾದಿಭಿಃ ಸಾಧ್ಯಾಹುತಿರಪಿ ಚರಥೇತ್ಯುಚ್ಯತೇ । ಉಪಚಾರಾತ್ಕಾರ್ಯೇ ಕಾರಣಶಬ್ದಃ । ಚರಾಥಾ ಚರಥಯಾ ಪಶುಪ್ರಭವಹೃದಯಾದಿಸಾಧನಯಾಹುತ್ಯಾ । ವಸತ್ಯಾ । ವಸತಿ ನಿವಸತೀತಿ ಸ್ಥಾವರೋ ವ್ರೀಹ್ಯಾದಿರ್ವಸತಿಃ । ಪೂರ್ವವತ್ತತ್ಸಾಧ್ಯಾಹುತಿರ್ಲಕ್ಷ್ಯತೇ । ವಸತ್ಯಾ ಪುರೋಡಾಶಾದ್ಯಾಹುತ್ಯಾ ಚ ವಯಮಿದ್ಧಂ ಪ್ರದೀಪ್ತಮಗ್ನಿಂ ನಕ್ಷಂತೇ । ವ್ಯಾಪ್ನುಯಾಮ । ಪುರುಷವ್ಯತ್ಯಯಃ । ತತ್ರ ದೃಷ್ಟಾಂತಃ । ಅಸ್ತಂ ನ ಗಾವಃ । ಅಸ್ತಮಿತಿ ಗೃಹನಾಮ । ಯಥಾ ಗಾವೋ ಗೃಹಂ ವ್ಯಾಪ್ನುವಂತಿ ತದ್ವತ್ । ಅತ್ರ ಯಾಸ್ಕಃ । ತಂ ವಶ್ಚರಾಥಾ ಚರಂತ್ಯಾ ಪಶ್ವಾಹುತ್ಯಾ ವಸತ್ಯಾ ಚ ನಿವಸಂತ್ಯೌಷಧಾಹುತ್ಯಾಸ್ತಂ ಯಥಾ ಗಾವ ಆಪ್ನುವಂತಿ ತಥಾಪ್ನುಯಾಮ । ನಿ. ೧೦-೨೧ । ಇತಿ । ಅಯಮಗ್ನಿಃ ಸಿಂಧುರ್ನ ಕ್ಷೋದಃ ಸ್ಯಂದನಶೀಲಮುದಕಮಿವ ನೀಚೀರ್ನಿತರಾಮಂಚತೀರಿತಸ್ತತೋ ನಿತರಾಮುದ್ಗಚ್ಛಂತೀರ್ಜ್ವಾಲಾಃ ಪ್ರೈನೋತ್ । ಪ್ರೇರಯತಿ । ಯಥಾ ಜಲಪ್ರವಾಹೋ ನಿಮ್ನದೇಶೇ ಶೀಘ್ರಂ ಗಚ್ಛತಿ ತದ್ವದಗ್ನೇರ್ಜ್ವಾಲಾ ದಗ್ಧವ್ಯಂ ಪ್ರತಿ ಗಚ್ಛಂತೀತಿ ಭಾವಃ । ಸ್ವರ್ನಭಸಿ ವರ್ತಮಾನೇ ದೃಶೀಕೇ ದರ್ಶನೀಯೇ ತಸ್ಮಿನ್ನಗ್ನೌ ಗಾವೋ ಗಮನಸ್ವಭಾವಾ ರಶ್ಮಯೋ ನವಂತ । ಸಂಗಚ್ಛಂತೇ । ನವತಿರ್ಗತಿಕರ್ಮಾ ॥ ಚರಾಥಾ । ಚರೇರೌಣಾದಿಕೋಽಥಪ್ರತ್ಯಯಃ । ದೀರ್ಘಶ್ಛಾಂದಸಃ । ಸುಪಾಂ ಸುಲುಗಿತಿ ವಿಭಕ್ತೇ-

ರಾಕಾರಃ । ವಸತ್ಯಾ । ವಹಿವಸ್ಯರ್ತಿಭ್ಯಶ್ಚಿತ್ । ಉ. ೪-೬೦ । ಇತ್ಯತಿಪ್ರತ್ಯಯಃ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಅಸ್ತಂ । ಅಸ್ಯತೇಽಸ್ಮಿನ್ಸರ್ವಮಿತ್ಯಸ್ತಂ ಗೃಹಂ । ಅಸಿಹಸೀತ್ಯಾದಿನಾ ತನ್ । ತಿತುತ್ರೇತೀಟ್ಪ್ರತಿಷೇಧಃ । ನಿತ್ತ್ವಾದಾದ್ಯುದಾತ್ತತ್ವಂ । ನಕ್ಷಂತೇ । ನಕ್ಷತಿರ್ವ್ಯಾಪ್ತಿಕರ್ಮಾ । ನಕ್ಷ ಗತೌ । ವ್ಯತ್ಯಯೇನಾತ್ಮನೇಪದಂ । ಚಾದಿಲೋಪೇ ವಿಭಾಷೇತಿ ನಿಘಾತಾಭಾವಃ । ನೀಚೀಃ । ನಿಪೂರ್ವಾದಂಚತೇಶ್ಛಂದಸ್ಯುಪಸಂಖ್ಯಾನಂ । ಪಾ. ೪-೧-೬-೨ । ಇತಿ ಙೀಪ್ । ಅಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ । ಸ್ವಧೀ ಚ । ಪಾ. ೬-೨-೫೩ । ಇತಿ ಗತೇಃ ಪ್ರಕೃತಿಸ್ವರತ್ವಂ । ಐನೋತ್ । ಇಣ್ ಗತೌ । ಅಂತರ್ಭಾವಿತಣ್ಯರ್ಥಾಚ್ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲಙ್ ವ್ಯತ್ಯಯೇನ ಶ್ನುಃ । ಆಡಾಗಮೋ ವೃದ್ಧಿಶ್ಚ । ದೃಶೀಕೇ । ದೃಶಿರ್ ಪ್ರೇಕ್ಷಣೇ । ಅನಿದೃಶಿಭ್ಯಾಂ ಚೇತಿ ಕೀಕನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

(**ಅಗ್ನೇ**—ಅಗ್ನಿಯೇ) । **ತಂ ವಃ**—ಅಂತಹ ನಿನ್ನನ್ನು । **ಚರಾಥಾ**—ಸಂಚರಿಸುವ ಪ್ರಾಣಿಸಂಬಂಧವಾದ (ಹೋಮದ್ರವ್ಯಗಳಿಂದ) । **ವಸತ್ಯಾ**—ಸ್ಥಾವರವಾದ ವ್ರೀಹ್ಯಾದಿ ಪದಾರ್ಥಸಂಬಂಧವಾದ (ಹೋಮದ್ರವ್ಯದಿಂದ) । **ವಯಂ**—ನಾವು । **ಇದ್ಧ**—ಪ್ರಜ್ವಲಿತವಾದ ಅಗ್ನಿಯನ್ನು । **ಗಾವಃ**—ಗೋವುಗಳು । **ಅಸ್ತಂ ನ**—ನಿವಾಸಸ್ಥಾನವನ್ನು ಹೇಗೋ (ಹಾಗೆ) । **ನಕ್ಷಂತೇ**—ಹೊಂದೋಣ । **ಸಿಂಧುಃ**—ಪ್ರವಹಣಶೀಲವಾದ । **ಕ್ಷೋದೋ ನ**—ಉದಕದಂತೆ । **ನೀಚೀಃ**—ಎತ್ತರವಾಗಿ ಹೊರಡುತ್ತಿರುವ (ಜ್ವಾಲೆಗಳನ್ನು) । **ಪ್ರ ಐನೋತ್**—(ದಹ್ಯಪದಾರ್ಥಗಳ ಕಡೆಗೆ) ಪ್ರೇರಿಸುತ್ತಾನೆ । **ಸ್ವಃ**—ಅಂತರಿಕ್ಷದಲ್ಲಿ । **ದೃಶೀಕೇ**—ದರ್ಶನೀಯವಾದ (ಅಗ್ನಿಯಲ್ಲಿ) । **ಗಾವಃ**—(ಗಮನಸ್ವಭಾವವುಳ್ಳ) ರಶ್ಮಿಗಳು । **ನವಂತೇ**—ಸೇರುತ್ತವೆ

॥ ಭಾವಾರ್ಥ ॥

ಎಲೈ ಅಗ್ನಿಯೇ, ನಾವು ಚರವಾದ ಪ್ರಾಣಿಸಂಬಂಧವಾದ, (ತುಪ್ಪದಿಂದಲೂ) ಮತ್ತು ಸ್ಥಾವರವಾದ ವ್ರೀಹ್ಯಾದಿಸಂಬಂಧವಾದ ಸೋಮದ್ರವ್ಯಯುಕ್ತರಾಗಿಯೂ, ಗೋವುಗಳು ಹೇಗೆ ಮನೆಯನ್ನು ಸೇರುತ್ತವೆಯೋ ಹಾಗೇ, ನಿನ್ನ ಬಳಿಗೆ ಬರುತ್ತೇವೆ ನಿಮ್ನ ಪ್ರದೇಶಕ್ಕೆ ಉದಕವು ಪ್ರವಹಿಸುವಂತೆ, ದಹ್ಯವಾದ ಪದಾರ್ಥಗಳ ಕಡೆಗೆ ಜ್ವಾಲೆಗಳು ನುಗ್ಗುತ್ತವೆ ಮತ್ತು ಹೀಗೆ ಜ್ವಲಿಸುತ್ತಿರುವ ಅಗ್ನಿಯ ಪ್ರಕಾಶವು ಅಂತರಿಕ್ಷದಲ್ಲಿ ಬಹಳದೂರ ಕಾಣಿಸುತ್ತದೆ.

## English Translation

Let us approach that blazing Agni with animal and vegetable offerings as cows hasten to their pens. He has tossed about his flames, like running streams of water ; the rays commingle (with the radiance) visible in the sky.

॥ ವಿಶೇಷವಿಷಯಗಳು ॥

**ಅಸ್ತಂ ನ ಗಾವಃ—ಅಸ್ತಮಿತಿ ಗೃಹನಾಮ ಯಥಾ ಗಾವೋ ಗೃಹಂ ವ್ಯಾಪ್ನುವಂತಿ ತದ್ವತ್ ವಯಂ ಪ್ರದೀಪ್ತಮಗ್ನಿಂ ವ್ಯಾಪ್ನುಯಾಮ ।** ಅಸ್ತ' ಶಬ್ದವು ಇಪ್ಪತ್ತೆರಡು ಗೃಹನಾಮಗಳ ಮಧ್ಯದಲ್ಲಿ (ನಿ ೩-೧೩) ಪಠಿತವಾಗಿರುವುದು. ಗೋವುಗಳು ಮನೆಯನ್ನು ಸೇರುವಂತೆ ನಾವು ಚೆನ್ನಾಗಿ ಪ್ರಕಾಶಿಸುತ್ತಿರುವ ಅಗ್ನಿಯ ಸಮೀಪಕ್ಕೆ ಹೋಗೋಣ ಎಂದು ಅರ್ಥವು.

**ಚರಾಥಾ— ಚರತೀತಿ ಚರಥಃ ಪಶುಃ । ತತ್ಪ್ರಭವೈಃ ಹೃದಯಾದಿಭಿರಾಹುತಿರಪಿ ಚರಥಾ ಇತ್ಯುಚ್ಯತೇ । ಉಪಚಾರಾತ್ ಕಾರ್ಯೇ ಕಾರಣಶಬ್ದಃ ।** ಸಂಚರಿಸುವಕಾರಣ ಚರಥ ಎಂಬ ಶಬ್ದಕ್ಕೆ ಪಶುವೆಂಬ ಅರ್ಥವು. ಪಶುವನ್ನು ಯಾಗದಲ್ಲಿ ಉಪಯೋಗಿಸುವುದರಿಂದ ಈ ಪಶುವಿನ ಹೃದಯವೇ ಮೊದಲಾದ ಆಹುತಿದ್ರವ್ಯಗಳೂ ಚರಥ ಎಂಬ ಶಬ್ದದಿಂದ ವ್ಯವಹರಿಸಲ್ಪಡುತ್ತವೆ ಆಹುತಿರೂಪವಾದ ಕಾರ್ಯಕ್ಕೆ ಕಾರಣವಾದ ಚರಥಶಬ್ದವೂ ಕೂಡ ಉಪಚಾರದಿಂದ ಇಲ್ಲಿ ಪ್ರಯುಕ್ತವಾಗಿರುವುದು.

**ವಸತ್ಯಾ—ವಸತಿ ನಿವಸತೀತಿ ಸ್ಥಾವರೋ ವ್ರೀಹ್ಯಾದಿರ್ವಸತಿಃ । ಪೂರ್ವವತ್ ತತ್ಸಾಧ್ಯಾಹುತಿರ್ಲಕ್ಷ್ಯತೇ ।** ಒಂದು ಕಡೆಯಲ್ಲಿ ಸ್ಥಿರವಾಗಿ ಇರುವುದರಿಂದ ವ್ರೀಹಿಯೇ ಮೊದಲಾದ ಧಾನ್ಯಗಳೂ ವಸತಿ ಶಬ್ದಕ್ಕೆ ಅರ್ಥವಾಗಿರುವುದು. ಚರಥ ಶಬ್ದದ ಅರ್ಥವನ್ನು ಹೇಳುವಾಗ ಹೇಳಿರುವ ಕ್ರಮದಂತೆಯೇ ಇಲ್ಲಿಯೂ ಆಹುತಿಯು ವಸತಿ ಶಬ್ದದಿಂದ ಬೋಧ್ಯವಾಗಿರುತ್ತದೆ ಪಶುವಿನ ಹೃದಯವೇ ಮೊದಲಾದ ಆಹುತಿಗಳಿಂದಲೂ ಪುರೋಡಾಶವೇ ಮೊದಲಾದ ಆಹುತಿಗಳಿಂದಲೂ ಅಗ್ನಿಯನ್ನು ಹಸುಗಳು ಆಹಾರದ ನಿಮಿತ್ತವಾಗಿ ಮನೆಯನ್ನು ಬಂದು ಸೇರುವ ಹಾಗೆ ಸೇವಿಸೋಣವೆಂದು ಅರ್ಥವು. ಯಾಸ್ಕರು **" ತಂ ವಶ್ಚರಾಥಾ ಚರಂತ್ಯಾ ಪಶ್ವಾಹುತ್ಯಾ ವಸತ್ಯಾ ಚ ನಿವಸಂತ್ಯೌಷಧಾಹುತ್ಯಾಸ್ತಂ ಯಥಾ ಗಾವ ಆಪ್ನುವಂತಿ ತಥಾಪ್ನುಯಾಮ " ।** (ನಿ. ೧೦-೨೦) ಇತಿ । ಎಂದು ವಚನವನ್ನು ಪ್ರಮಾಣವಾಗಿ ಉದಾಹರಿಸಿರುವರು

**ನೀಚೀಃ—ನಿತರಾಮಂಚಂತೀಃ ಇತಸ್ತತೋ ನಿತರಾಮುದ್ಗಚ್ಛಂತೀಃ ಜ್ವಾಲಾಃ ।** ಅಗ್ನಿಯ ಜ್ವಾಲೆಗಳು ಸರ್ವತೋಮುಖವಾಗಿ, ಹೊಳೆಯ ನೀರು ತಗ್ಗಾದ ಪ್ರದೇಶಗಳಲ್ಲಿ ಹರಿಯುವಂತೆ, ಸುಡಬೇಕಾಗಿರುವ ವಸ್ತುವಿನ ವಿಷಯದಲ್ಲಿ ಪ್ರವರ್ತಿಸುತ್ತವೆ ಎಂದು ಅರ್ಥವು.

ಸ್ಕಂದಸ್ವಾಮಿಗಳು **ನವಂತ ಗಾವಃ** ಎಂಬ ಪದಗಳಲ್ಲಿ ಗಾವಃ ಎಂಬ ಪದವು ಸ್ತುತಯಃ ಸ್ತುತಿಗಳು, ಅಥವಾ, **ಸ್ತೋತಾರಃ**-ಸ್ತೋತ್ರಮಾಡುವವರು ಎಂದು ಅರ್ಥವನ್ನು ವಿವರಿಸಿ **'ಗೋಭಿರ್ಯದೀಮನ್ಯೇ ಅಸ್ಮತ್'** (ಋ. ಸಂ ೮-೨-೬) **"ಗೋಭಿಃ ಶ್ರೀಣಾ ಅಭಿದ್ಯವಃ"** (ಋ. ಸಂ. ೧-೧೩೪-೨) ಎಂಬ ವಾಕ್ಯಗಳನ್ನು ಪ್ರಮಾಣವಾಗಿ ಉದಾಹರಿಸಿರುವರು ಮತ್ತೂ—**'ಯಲುಗ್ರಾ ಅರ್ಕಮಾನೃಚುಃ'** (ಋ ಸಂ ೧-೧೯-೪).**'ಅರ್ಚನ್ನತ್ರ ಮರುತಃ'** (ಋ. ಸಂ. ೧-೫೨-೧೫) ಎಂಬ ಋಕ್ಕುಗಳನ್ನು ಶಾಕಪಾಣಿಯೆಂಬುವರು ಉದಾಹರಣೆಯನ್ನು ಕೊಟ್ಟು ಮರುದ್ದೇ·

ವತೆಗಳೂ ಸ್ತೋತೃಗಳಾಗಿರುವ ಕಾರಣ ಗಾವಃ ಎಂಬ ಶಬ್ದಕ್ಕೆ ಮರುದ್ದೇವತೆಗಳು ಎಂದು ಅರ್ಥವನ್ನು ಹೇಳಿರುವರು. ಮರುದ್ದೇವತೆಗಳೂ ಅಗ್ನಿಯನ್ನು ಸ್ತೋತ್ರಮಾಡುವರೆಂದು ತಾತ್ಪರ್ಯವು.

॥ ವ್ಯಾಕರಣಪ್ರಕ್ರಿಯಾ ॥

**ಚರಾಥಾ**—ಚರ ಗತಿ ಭಕ್ಷಣಯೋಃ ಧಾತು ಇದಕ್ಕೆ ಉಣಾದಿನಿಷ್ಪನ್ನವಾದ ಅಥಕ್ ಪ್ರತ್ಯಯ. ಚರಥ ಎಂದಾಗುತ್ತದೆ ಆಗ ಛಾಂದಸವಾಗಿ ದೀರ್ಘ ಬರುತ್ತದೆ. ತೃತೀಯಾ ವಿಭಕ್ತಿಗೆ **ಸುಪಾಂ ಸುಲುಕ್**—ಸೂತ್ರದಿಂದ ಆಕಾರಾದೇಶ ಬರುತ್ತದೆ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ.

**ವಸತ್ಯಾ**—ವಸ ನಿವಾಸೇ ಧಾತು. **ವಹಿವಸ್ಯರ್ತಿಭ್ಯಶ್ಚಿತ್** (ಉ ಸೂ ೪-೫೦೦) ಎಂಬುದರಿಂದ ಅತಿ ಪ್ರತ್ಯಯ. ವಸತಿ ಶಬ್ದವಾಗುತ್ತದೆ ಚಿತ್ವವನ್ನು ಅತಿದೇಶಮಾಡಿರುವುದರಿಂದ ಅಂತೋದಾತ್ತವಾಗುತ್ತದೆ ತೃತೀಯಾ ಏಕವಚನ ಪರವಾದಾಗ ಯಣಾದೇಶ ಆವಾಗ **ಉದಾತ್ತಯಣೋ ಹಲ್ಪೂರ್ವಾತ್**—ಎಂಬುದರಿಂದ ಉದಾತ್ತಸ್ಥಾನಿಕಯಣಿನ ಪರದಲ್ಲಿ ಬಂದಿರುವುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಸ್ತಮ್**—ಅಸ್ಯತೇ ಅಸ್ಮಿನ್ ಸರ್ವಂ ಇತಿ ಅಸ್ತಂ ಗೃಹಮ್ (ಎಲ್ಲವನ್ನೂ ಇಡುವ ಸ್ಥಾನ) **ಅಸಿಹಸಿ**—ಎಂಬುದರಿಂದ ಅಸು ಧಾತುವಿಗೆ ತನ್ ಪ್ರತ್ಯಯ **ತಿತುತ್ರಥಸಿ**—(ಪಾ. ಸೂ ೭-೨-೯) ಎಂಬುದರಿಂದ ಅದಕ್ಕೆ ಇಣ್ನಿಷೇಧ ಅಸ್ತಂ ಎಂದು ರೂಪವಾಗುತ್ತದೆ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ

**ನಕ್ಷಂತೇ**—ನಕ್ಷ ವ್ಯಾಪ್ತೌ ಧಾತು ನಕ್ಷ ಗತೌ ಎಂದೂ ಪಠಿತವಾಗಿದೆ. **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ ಲಟ್‌ಪ್ರಥಮಪುರುಷ ಬಹುವಚನದಲ್ಲಿ ನಕ್ಷಂತೇ ಎಂದು ರೂಪವಾಗುತ್ತದೆ. ನ ಎಂದು ಹಿಂದೆ ಸಂಬಂಧವಿರುವುದರಿಂದ **ಚಾದಿಲೋಪೇ ವಿಭಾಷಾ** ಎಂಬುದರಿಂದ ನಿಘಾತಸ್ವರ ಬರುವುದಿಲ್ಲ ಶಪ್ ಪಿತ್ತಾದುದರಿಂದ ಅನುದಾತ್ತ ಲಸಾರ್ವಧಾತುಕವು **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತ. ಧಾತುಸ್ವರ ಉಳಿಯುತ್ತದೆ

**ನೀಚೀಃ**—ನಿ ಎಂಬ ಉಪಸರ್ಗವು ಪೂರ್ವದಲ್ಲಿರುವಾಗ **ಅಂಚತೇಶ್ಚೋಪಸಂಖ್ಯಾನಮ್** (ಪಾ ಸೂ. ೪-೧-೬-೨) ಎಂಬ ವಚನದಿಂದ ಉಗಿತ್ತಾದ ಅಂಚುಧಾತುವಿಗೆ ಙೀಪ್ ನಿ+ಅಂಚ್+ಈ ಎಂದಿರುವಾಗ ನಲೋಪ ಬಂದಮೇಲೆ **ಅಚಃ** ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ **ಚೌ** (ಪಾ. ಸೂ. ೬-೩-೧೩೮) ಲುಪ್ತಾಕಾರನಕಾರವುಳ್ಳ ಅಂಚುಧಾತು ಪರದಲ್ಲಿರುವಾಗ ಪೂರ್ವಕ್ಕೆ ದೀರ್ಘ ಬರುತ್ತದೆ ಎಂಬುದರಿಂದ ನಿ ಎಂಬುದಕ್ಕೆ ದೀರ್ಘ. ನೀಚೀ ಎಂದು ಶಬ್ದವಾಗುತ್ತದೆ. ದ್ವಿತೀಯಾ ಬಹುವಚನರೂಪ **ನ್ಯಧೀ ಚ** (ಪಾ ಸೂ ೬-೨-೫೩) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

**ಐನೋತ್**—ಇಣ್ ಗತೌ ಧಾತು. ಅದಾದಿ. ಣಿಜರ್ಥವೂ ಧಾತ್ವರ್ಥದಲ್ಲಿ ಅಂತರ್ಭೂತವಾಗಿದೆ. ಇದಕ್ಕೆ ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಙ್ ಪ್ರಥಮಪುರುಷ ಏಕವಚನದತಿ

ಪ್ರತ್ಯಯದ ಇಕಾರಕ್ಕೆ **ಇತಶ್ಚ** ಸೂತ್ರದಿಂದ ಲೋಪ. **ವ್ಯತ್ಯಯೋ ಬಹುಲಂ** ಎಂಬುದರಿಂದ ಶಬ್ವಿಕರಾಬಾರದೇ ಶ್ನು ವಿಕರಣ ಬರುತ್ತದೆ. ಇನು+ತ್ ಎಂದಿರುವಾಗ ಪ್ರತ್ಯಯನಿಮಿತ್ತವಾಗಿ ಉಕಾರಕ್ಕೆ ಗುಣ **ಆಡಜಾದೀನಾಂ** ಎಂಬುದರಿಂದ ಅಂಗಕ್ಕೆ ಆಡಾಗಮ ಬಂದಾಗ **ಆಟಶ್ಚ** ಸೂತ್ರದಿಂದ ವೃದ್ಧಿ. ಐನೋತ್ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ದೃಶೀಕೇ**—ದೃಶಿರ್ ಪ್ರೇಕ್ಷಣೇ ಧಾತು. **ಅನಿದೃಶಿಭ್ಯಾಂಚ** (ಉ ಸೂ ೪-೪೫೭) ಎಂಬುದರಿಂದ ಕೀಕನ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ದೃಶೀಕ ಶಬ್ದವಾಗುತ್ತದೆ. ನಿತ್‌ಪ್ರತ್ಯಯಾಂತವಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತವಾಗುತ್ತದೆ. ॥ ೯-೧೦ ॥

ಅರವತ್ತಾರನೇ ಸೂಕ್ತವು ಸಮಾಪ್ತವು



# ಅರವತ್ತೇಳನೆಯ ಸೂಕ್ತವು



**ವನೇಷ್ವಿತಿ ದ್ವ್ಯೃಚಂ ದಶರ್ಚಮಧ್ಯಯನತಃ ಪಂಚರ್ಚಂ ತೃತೀಯಂ ಸೂಕ್ತಂ ಪರಾಶರಸ್ಯಾರ್ಷಮಾಗ್ನೇಯಂ । ವನೇಷ್ವಿತ್ಯನುಕ್ರಾಂತಂ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು — **ವನೇಷು** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ದ್ವಿಪದಾವಿರಾಟ್ ಛಂದಸ್ಸಿನ ಹತ್ತು ಋಕ್ಕುಗಳು ಅಥವಾ ಅಧ್ಯಯನಾನುಸಾರವಾಗಿ ಐದು ಋಕ್ಕುಗಳು ಇರುವುವು. ಈ ಸೂಕ್ತಕ್ಕೆ ಪರಾಶರನು ಋಷಿಯು, ಅಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ **ವನೇಷು** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೬೭

॥ ಓಂ ॥

॥ ಮಂಡಲ—೧ ॥ ಅನುವಾಕ—೧೨ ॥ ಸೂಕ್ತ—೬೭ ॥

॥ ಅಷ್ಟಕ—೧ ॥ ಅಧ್ಯಾಯ—೫ ॥ ವರ್ಗ—೧೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ (೧೦) ॥

॥ ಋಷಿಃ—ಪಾರಾಶರಃ ಶಾಕ್ತ್ಯಃ ॥

ದೇವತಾ—ಅಗ್ನಿಃ ॥

ಛಂದಃ—ದ್ವಿಪದಾ ವಿರಾಟ್ ॥

॥ ಸಂಹಿತಾಪಾಠಃ ॥

ವನೇ॑ಷು ಜಾ॒ಯುರ್ಮರ್ತೇ॑ಷು ಮಿ॒ತ್ರೋ ವೃ॑ಣೀ॒ತೇ ಶ್ರು॒ಷ್ಟಿಂ
ರಾಜೇ॑ವಾಜು॒ರ್ಯಂ ।
ಕ್ಷೇಮೋ॒ ನ ಸಾ॒ಧುಃ ಕ್ರತು॒ರ್ನ ಭ॒ದ್ರೋ ಭುವ॑ತ್ಸ್ವಾ॒ಧೀರ್ಹೋತಾ
ಹವ್ಯ॒ವಾಟ್ ॥ ೧ ॥ ೨ ॥

॥ ಪದಪಾಠಃ ॥

ವನೇ॑ಷು । ಜಾ॒ಯುಃ । ಮರ್ತೇ॑ಷು । ಮಿ॒ತ್ರಃ । ವೃ॒ಣೀ॒ತೇ । ಶ್ರು॒ಷ್ಟಿಂ । ರಾಜಾ॑ऽ-
ಇವ । ಅ॒ಜು॒ರ್ಯಂ ।
ಕ್ಷೇಮಃ॑ । ನ । ಸಾ॒ಧುಃ । ಕ್ರತುಃ॑ । ನ । ಭ॒ದ್ರಃ । ಭುವ॑ತ್ । ಸು॒ऽಆ॒ಧೀಃ ।
ಹೋತಾ॑ । ಹ॒ವ್ಯ॒ऽವಾಟ್ ॥ ೧ ॥ ೨ ॥

॥ ಸಾಯಣಭಾಷ್ಯಂ ॥

**ವನೇಷು ಜಾಯುರರಣ್ಯೇಷು ಜಾಯಮಾನೋ ಮರ್ತೇಷು ಮನುಷ್ಯೇಷು ಮಿತ್ರಃ ಸಖಾ ಸೋऽಯಮಗ್ನಿಃ ಶ್ರುಷ್ಟಿಂ । ಶು ಆಶ್ವಶ್ನುತೇ ಕರ್ಮಾಣಿ ವ್ಯಾಪ್ನೋತೀತಿ ಶ್ರುಷ್ಟಿರ್ಯಜಮಾನಃ । ಕ್ಷಿಪ್ರೇಣ ಕರ್ಮಣಾಮನುಷ್ಠಾತೇತ್ಯರ್ಥಃ । ತಥಾ ಚ ಯಾಸ್ಕಃ । ಶ್ರುಷ್ಟೀತಿ ಕ್ಷಿಪ್ರನಾಮಾಶು ಅಷ್ಟೀತಿ । ನಿ. ೬-೧೨ । ಏವಂಭೂತಂ ಯಜಮಾನಂ ವೃಣೀತೇ । ಸಂಭಜತೇ । ಅನೇನ ಪ್ರತ್ತಂ ಹವಿಃ ಸ್ವೀಕೃತ್ಯ ರಕ್ಷತೀತಿ ಭಾವಃ । ತತ್ರ ದೃಷ್ಟಾಂತಃ । ರಾಜೇವಾಜುರ್ಯಂ । ಅಜುರ್ಯಂ ಜರಾರಹಿತಂ ದೃಢಾಂಗಂ ಸರ್ವಕಾರ್ಯೇಷು ಶಕ್ತಮಿತ್ಯರ್ಥಃ । ಏವಂಭೂತಂ ಪುರುಷಂ ಯಥಾ ರಾಜಾ ವೃಣೀತೇ ತದ್ವತ್ । ಕ್ಷೇಮೋ ನ ರಕ್ಷಕ ಇವ ಸಾಧುಃ ಸಾಧಯಿತಾ ಕ್ರತುರ್ನ । ಕ್ರತುಃ ಕರ್ಮಣಾಂ ಕರ್ತಾ । ಸ ಇವ ಭದ್ರೋ ಭಜನೀಯಃ ಕಲ್ಯಾಣೋ ವಾ ಹೋತಾ ದೇವಾನಾಮಾಹ್ವಾತಾ ಹವ್ಯವಾಟ್ ಹವ್ಯವಾಹನೋ ನಾಮ ದೇವಾನಾಮಗ್ನಿಃ । ತಥಾ ಚಾಮ್ನಾಯತೇ । ತ್ರಯೋ ವಾ ಅಗ್ನಯೋ ಹವ್ಯವಾಹನೋ ದೇವಾನಾಂ ಕವ್ಯವಾಹನಃ ಪಿತೄಣಾಂ ಸಹರಕ್ಷಾ ಅಸುರಾಣಾಂ । ತೈ. ಸಂ. ೨-೫-೮-೬ । ಇತಿ । ಏವಂಭೂತೋऽಗ್ನಿಃ ಸ್ವಾಧೀಃ ಶೋಭನಕರ್ಮಾ ಶೋಭನಾಧ್ಯಾನೋ ವಾ ಭುವತ್ । ಭವತು ॥ ಜಾಯುಃ । ಜಿ ಜಯೇ । ಕೃವಾಪಾಜೀತ್ಯುಣ್ । ಅಜುರ್ಯಂ । ಜ್ಯಷ್ ವಯೋಹಾನೌ । ಭಾವೇ ಣ್ಯತ್ । ವೃದ್ಧೌ ಕೃತಾಯಾಮಾಕಾರಸ್ಯ ವ್ಯತ್ಯಯೇನೋಕಾರಃ । ಜುರ್ಯಂ ಜರಾ ನಾಸ್ತ್ಯಸ್ಯೇತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಭುವತ್ । ಭವತೇರ್ಲೇಟ್ಯಡಾಗಮಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ ॥**

॥ ಪ್ರತಿಪದಾರ್ಥ ॥

**ವನೇಷು**—ಅರಣ್ಯಗಳಲ್ಲಿ । **ಜಾಯುಃ**—ಉತ್ಪನ್ನನಾದ । **ಮರ್ತೇಷು**—ಮನುಷ್ಯರಲ್ಲಿ । **ಮಿತ್ರಃ**—ಮಿತ್ರನಾದ ಅಗ್ನಿಯು । **ಶ್ರುಷ್ಟಿಂ**—ಶೀಘ್ರವಾಗಿ ಕರ್ಮಗಳನ್ನು ಮಾಡುವ ಯಜಮಾನನನ್ನು । **ಅಜುರ್ಯಂ**—(ಜರಾರಹಿತನಾದ) ದೃಢಾಂಗನಾದವನನ್ನು । **ರಾಜೇವ**—ರಾಜನಂತೆ । **ವೃಣೀತೇ**—ಪ್ರೋತ್ಸಾಹಿಸುತ್ತಾನೆ । **ಕ್ಷೇಮೋ ನ**—ರಕ್ಷಕನಂತೆ । **ಸಾಧುಃ**—(ಕಾರ್ಯಗಳನ್ನು) ಸಾಧಿಸುವ । **ಕ್ರತುರ್ನ**—ಯಜ್ಞಕರ್ತೃವಿನಂತೆ । **ಭದ್ರಃ**—ಭಜನೀಯನಾದ (ಮಂಗಳಕರನಾದ) । **ಹೋತಾ**—ದೇವತೆಗಳನ್ನು ಆಹ್ವಾನಿಸುವ । **ಹವ್ಯವಾಟ್**—ಹವ್ಯವಾಹನನೆಂಬ ಅಗ್ನಿಯು । **ಸ್ವಾಧೀಃ**—ಶೋಭನಕರ್ಮವುಳ್ಳವನಾಗಿ । **ಭುವತ್**—ಆಗಲಿ

॥ ಭಾವಾರ್ಥ ॥

ಅರಣ್ಯದಲ್ಲಿ ಉತ್ಪನ್ನನಾದ, ಮನುಷ್ಯರಿಗೆ ಮಿತ್ರನಾದ ಅಗ್ನಿಯು ಯಾಗಾದಿ ಕರ್ತೃವನ್ನು, ರಾಜನು ದೃಢಾಂಗನಾದ ಅನುಚರನನ್ನು ಪ್ರೋತ್ಸಾಹಿಸುವಂತೆ ಪ್ರೋತ್ಸಾಹಿಸುತ್ತಾನೆ ರಕ್ಷಕನಂತೆ ಸಾಧಕನೂ, ಯಜಮಾನನಂತೆ ಮಂಗಳಕರನೂ, ದೇವತೆಗಳನ್ನು ಆಹ್ವಾನಿಸುವವನೂ ಆದ ಹವ್ಯವಾಹನನಾಮಕ ಅಗ್ನಿಯು ನಮ್ಮ ಕರ್ಮಗಳನ್ನು ಮಂಗಳಕರವನ್ನಾಗಿ ಮಾಡಲಿ.

## English Translation

Born in the woods, the friend of man, Agni protects his worshipper as a king favours a man shorn of decrepitude, able as a defender, adorable as a performer of excellent works, may he the invoker of the gods, the bearer of oblations be the performer of exeellent works.

॥ ವಿಶೇಷವಿಷಯಗಳು ॥

**ಶ್ರುಷ್ಟಿಂ—ಶು ಆಶು ಅಶ್ನುತೇ ಕರ್ಮಾಣಿ ವ್ಯಾಪ್ನೋತಿ ಇತಿ ಶ್ರುಷ್ಟಿಃ ಯಜಮಾನಃ । ಕ್ಷಿಪ್ರೇಣ ಕರ್ಮಣಾಮನುಷ್ಠಾತಾ ಇತ್ಯರ್ಥಃ ।** ಯಜ್ಞವೇ ಮೊದಲಾದ ಕರ್ಮಗಳನ್ನು ಜಾಗ್ರತೆಯಾಗಿ ಮಾಡು ವವನಾದುದರಿಂದ ಯಜ್ಞಮಾಡುವ ಯಜಮಾನನಿಗೆ ಶ್ರುಷ್ಟಿ ಎಂದು ಹೆಸರು ಇರುವುದು. ಯಾಸ್ಕರು "**ಶ್ರುಷ್ಟೀತಿ ಕ್ಷಿಪ್ರನಾಮಾಶು ಅಷ್ಟೀತಿ (ನಿ. ೬-೧೩)** ಎಂದು ಹೇಳಿರುವರು. ಯಜಮಾನನಿಂದ ಅರ್ಪಿತವಾದ ಹವಿಸ್ಸನ್ನು ಸ್ವೀಕರಿಸಿ ಅಗ್ನಿಯು ರಕ್ಷಿಸುವನೆಂದು ತಾತ್ಪರ್ಯವು

**ಅಜುರ್ಯಂ—ಜರಾ ನಾಸ್ತ್ಯಸ್ಯೇತಿ ಜುರ್ಯಃ । ಜರಾರಹಿತಂ ದೃಢಾಂಗಂ ಸರ್ವಕಾರ್ಯೇಷು ಶಕ್ತಮಿತ್ಯರ್ಥಃ ।** ಮುಪ್ಪಿಲ್ಲದವನಾಗಿ ಬಲವುಳ್ಳ ಅವಯವದಿಂದ ಕೂಡಿ ಎಲ್ಲಾ ಕೆಲಸಗಳನ್ನು ಮಾಡಲು ಸಾಮರ್ಥ್ಯವುಳ್ಳವನು ಎಂದು ಅರ್ಥವು. ಈ ರೀತಿಯಾದ ಮನುಷ್ಯನನ್ನು ರಾಜನು ಹುಡುಕಿ ಇರಿಸಿಕೊಳ್ಳುವ ಹಾಗೆ ಅಗ್ನಿಯು ಯಜ್ಞಮಾಡುವ ಯಜಮಾನನನ್ನು ಪಾಲಿಸುವನು.

**ಹವ್ಯವಾಟ್—ಹವ್ಯವಾಹನೋ ನಾಮ ದೇವಾನಾಮಗ್ನಿಃ ।** ಅಗ್ನಿಯಲ್ಲಿ ದೇವತೆಗಳನ್ನುದ್ದೇಶಿಸಿ ಅರ್ಪಿಸುವುದು ಹವ್ಯವೆನಿಸಿರುವುದು. ಇದನ್ನು ದೇವತೆಗಳಿಗೆ ತಲಪಿಸುವುದಕ್ಕಾಗಿ ವಹಿಸುವುದರಿಂದ ಅಗ್ನಿಗೆ ಹವ್ಯ ವಾಹನೆಂದು ಹೆಸರು ಉಂಟಾಗಿರುವುದು ಅಗ್ನಿಯನ್ನು ಹವ್ಯವಾಹನ, ಕವ್ಯವಾಹನ, ಸಹರಕ್ಷಾ ಎಂದು ಮೂರು ವಿಧವಾಗಿ ವಿಂಗಡಿಸಿರುವರು (ತೈ ಸಂ. ೨-೫-೮-೬) ರಲ್ಲಿ "**ತ್ರಯೋ ವಾ ಅಗ್ನಯಃ ಹವ್ಯವಾಹನೋ ದೇವಾನಾಂ ಕವ್ಯವಾಹನಃ ಪಿತೃಣಾಂ ಸಹರಕ್ಷಾ ಅಸುರಾಣಾಂ**" ಇತಿ ಎಂದು ಹೇಳಿರುತ್ತದೆ.

**ಕ್ಷೇಮೋ ನ ಸಾಧುಃ, ಕ್ರತುರ್ನ ಭದ್ರಃ** ಎಂಬ ವಾಕ್ಯಗಳಲ್ಲಿ ಸಾಯಣರು ಕ್ಷೇಮ ಶಬ್ದಕ್ಕೆ ರಕ್ಷಕನೆಂದೂ ಕ್ರತು ಶಬ್ದಕ್ಕೆ ಕರ್ಮಕರ್ತನೆಂದೂ ಅರ್ಥವನ್ನು ಮಾಡಿ ಉಪಮಾನವನ್ನಾಗಿ ಹೇಳಿರುವರು. ಸ್ಕಂದಸ್ವಾಮಿಗಳು ಶ್ರುಷ್ಟಿಂ ರಾಜೇವ ಎಂಬ ವಾಕ್ಯದಲ್ಲಿ ಶ್ರುಷ್ಟಿ ಎಂಬ ಪದವು ಕ್ಷಿಪ್ರವಾಚಕವಲ್ಲವು. ಆತ್ಮೀಯಂ ದೂತಂ ಪರಕೀಯಂ ವಾ, ಎಂದು ದೂತವಾಚಕವೆಂದು ಹೇಳುವರು. ಮತ್ತು ಸಾಧುರಿವ ಕ್ಷೇಮ ಕರೋಗ್ನಿಃ, ವಿಜ್ಞಾನಮಿವ ಭದ್ರಃ ಎಂದು ಉಪಮಾನೋಪಮೇಯಭಾವವನ್ನು ಸಾಯಣರು ಹೇಳಿರುವುದಕ್ಕಿಂತ ಬೇರೆಯ ವಿಧವಾಗಿ ಉಪಪಾದನೆ ಮಾಡಿರುತ್ತಾರೆ

॥ ವ್ಯಾಕರಣಪ್ರಕ್ರಿಯಾ ॥

**ಜಾಯುಃ**—ಜಿ ಜಯೇ ಧಾತು **ಕೃವಾಪಾಜಿ ಮಿಸ್ವದಿ**—(ಉ. ಸೂ ೧. ೧) ಎಂಬುದರಿಂದ ಉಣ್-ಪ್ರತ್ಯಯ. ಣಿತ್ತಾದುದರಿಂದ **ಅಚೋಞ್ಣಿತಿ** ಸೂತ್ರದಿಂದ ಧಾತುವಿನ ಇಕಾರಕ್ಕೆ ವೃದ್ಧಿ ಬರುತ್ತದೆ. **ಏಚೋಽಯ-ವಾಯಾವಃ** ಎಂಬುದರಿಂದ ಅದಕ್ಕೆ ಆಯಾದೇಶ ಜಾಯುಃ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ವೃಣೀತೇ**– ವೃಙ್ ವರಣೇ ಧಾತು ಕ್ರ್ಯಾದಿ ಲಟ್‌ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಟಿತ ಆತ್ಮನೇ ಪದಾನಾಂ**—ಎಂಬುದರಿಂದ ಏತ್ವ **ಸಾರ್ವಧಾತುಕಮಪಿತ್** ಸೂತ್ರದಿಂದ ಇದು ಙಿತ್ತಾದುದರಿಂದ **ಈ ಹಲ್ಯಘೋಃ** ಎಂಬುದರಿಂದ, ಪ್ರಾಪ್ತವಾದ ಶ್ನಾವಿಕರಣದ ಆಕಾರಕ್ಕೆ ಈತ್ವ ಋಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ ಶ್ನಾ ಪ್ರತ್ಯಯಕ್ಕೂ ಙಿದ್ವದ್ಭಾವವಿರುವುದರಿಂದ ಧಾತುವಿಗೆ ಗುಣ ಬರುವುದಿಲ್ಲ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ **ಅನ್ಯತ್ರ ವಿಕರಣೇಭ್ಯಃ** ಎಂಬ ವಚನದಿಂದ ಇಲ್ಲಿ ತೇ ಎಂಬ ಪ್ರತ್ಯಯ ಸ್ವರವೇ ಪ್ರಬಲವಾಗುತ್ತದೆ ಆದುದರಿಂದ ಅಂತೋದಾತ್ತವಾಗುತ್ತದೆ.

**ಅಜುರ್ಯಮ್**—ಜುರ್ಯಂ ಜರಾ ನ ವಿದ್ಯತೇ ಜುರ್ಯಂ ಅಸ್ಯ ಇತಿ ಅಜುರ್ಯಃ ತಮ್ ಬಹುವ್ರೀಹಿ ಸಮಾಸ **ನಞ್‌ಸುಭ್ಯಾಂ** ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಅಮ್ ಪರವಾದಾಗ **ಅಮಿ ಪೂರ್ವಃ** ಎಂಬುದರಿಂದ ಏಕಾದೇಶವಾಗಿ ಪೂರ್ವರೂಪ ಬರುತ್ತದೆ ಏಕಾದೇಶ **ಉದಾತ್ತೇನೋದಾತ್ತಃ** ಎಂಬುದರಿಂದ ಅದೂ ಉದಾತ್ತವಾಗುತ್ತದೆ

**ಭುವತ್**—ಭೂ ಸತ್ತಾಯಾಂ ಧಾತು ಲೇಟ್‌ಪ್ರಥಮಪುರುಷದಲ್ಲಿ ತಿಪ್ ಪ್ರತ್ಯಯ **ಇತಶ್ಚಲೋಪ**—ಎಂಬುದರಿಂದ ಇಕಾರಲೋಪ **ಲೇಟೋಽಡಾಟೌ** ಎಂಬುದರಿಂದ ಅದಕ್ಕೆ ಅಡಾಗಮ **ಬಹುಲಂ ಛಂದಸಿ** ಎಂಬುದರಿಂದ ವಿಕರಣವಾದ ಶಪ್ಪಿಗೆ ಲುಕ್ **ಭೂಸುವೋಸ್ತಿಙ್** ಎಂಬುದರಿಂದ ಗುಣನಿಷೇಧ ಬರುತ್ತದೆ **ಅಚಿಶ್ನುಧಾತುಭ್ರುವಾಂ**—ಸೂತ್ರದಿಂದ ಉವಙಾದೇಶ. ಭುವತ್ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ಸರ್ವಾನುದಾತ್ತವಾಗುವುದಿಲ್ಲ. ಪ್ರತ್ಯಯವು ಪಿತ್ತಾದುದರಿಂದ ಅನುದಾತ್ತವಾಗುತ್ತದೆ ಆಗ ಧಾತುಸ್ವರ ಉಳಿವುದು

**ಸ್ವಾಧೀಃ**—ಶೋಭನಾ ಆಧೀಃ ಯಸ್ಯ ಸಃ ಸ್ವಾಧೀಃ ಬಹುವ್ರೀಹಿಯಲ್ಲಿ **ನಞ್‌ಸುಭ್ಯಾಂ** ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ॥ ೧–೨ ॥



॥ ಸಂಹಿತಾಪಾಠಃ ॥

ಹಸ್ತೇ ದಧಾನೋ ನೃಮ್ಣಾ ವಿಶ್ವಾನ್ಯಮೇ ದೇವಾನ್ಧಾದ್ಗುಹಾ
ನಿಷೀದನ್ ।

ವಿದಂತೀಮತ್ರ ನರೋ ಧಿಯಂಧಾ ಹೃದಾ ಯತ್ತಷ್ಟಾನ್ಮಂತ್ರಾಁ
ಅಶಂಸನ್ ॥ ೩ ॥ ೪ ॥

॥ ಪದಪಾಠಃ ॥

ಹಸ್ತೇ । ದಧಾನಃ । ನೃಮ್ಣಾ । ವಿಶ್ವಾನಿ । ಅಮೇ । ದೇವಾನ್ । ಧಾತ್ । ಗುಹಾ ।
ನಿಽಸೀದನ್ ।

ವಿದಂತಿ । ಈಂ । ಅತ್ರ । ನರಃ । ಧಿಯಂಽಧಾಃ । ಹೃದಾ । ಯತ್ । ತಷ್ಟಾನ್ ।
ಮಂತ್ರಾನ್ । ಅಶಂಸನ್ ॥ ೩ ॥ ೪ ॥

॥ ಸಾಯಣಭಾಷ್ಯಂ ॥

ವಿಶ್ವಾನಿ ಸರ್ವಾಣಿ ನೃಮ್ಣಾ ನೃಮ್ಣಾನಿ ಹವಿರ್ಲಕ್ಷಣಾನಿ ಧನಾನಿ ಹಸ್ತೇ ಸ್ವಕೀಯೇ ಬಾಹೌ ದಧಾನೋ ಧಾರಯನ್ನಯಮಗ್ನಿರ್ಗುಹಾ ಗುಹಾಯಾಮಪ್ಸು ಮಧ್ಯೇಽಶ್ವತ್ಥಾದೌ ವಾ ಸಂವೃತಪ್ರದೇಶೇ ನಿಷೀದನ್ ನಿಗೂಢೋ ವರ್ತಮಾನಃ ಸನ್ನಮೇ ಭಯೇ ದೇವಾನ್ಧಾತ್ । ಅಸ್ಥಾಪಯತ್ । ಅಗ್ನೌ ಹವಿರ್ಭಿಃ ಸಹ ಪಲಾಯಿತೇ ಸತಿ ಸರ್ವೇ ದೇವಾ ಅಭೈಷುರಿತ್ಯರ್ಥಃ । ನರೋ ನೇತಾರೋ ಧಿಯಂಧಾಃ ಕರ್ಮಣಾಂ ಬುದ್ಧೀನಾಂ ವಾ ಧಾರಯಿತಾರೋ ದೇವಾ ಅತ್ರಾಸ್ಮಿನ್ಕಾಲ ಈಮೇನಮಗ್ನಿಂ ವಿದಂತಿ । ಜಾನಂತಿ । ಯದ್ಯದಾ ಹೃದಾ ಹೃದಯಾವಸ್ಥಿತಯಾ ಬುದ್ಧ್ಯಾ ತಷ್ಟಾನ್ನಿರ್ಮಿತಾನಗ್ನಿಸ್ತುತಿಪರಾನ್ಮಂತ್ರಾನಶಂಸನ್ ಅಸ್ತುವನ್ । ಅವೋಚನ್ನಿತ್ಯರ್ಥಃ ॥ ನಿಷೀದನ್ । ಸದೇರಪ್ರತೇರಿತಿ ಷತ್ವಂ । ವಿದಂತಿ । ವಿದ ಜ್ಞಾನೇ । ಅದಾದಿತ್ವಾಚ್ಛಪೋ ಲುಕ್ । ಪ್ರತ್ಯಯಸ್ವರಃ । ಧಿಯಂಧಾಃ । ಆತೋಽನುಪಸರ್ಗೇ ಕ

**ಇತಿ ಕಃ । ತತ್ಪುರುಷೇ ಕೃತಿ ಬಹುಲಮಿತಿ ಬಹುಲವಚನಾದ್ದ್ವಿತೀಯಾಯಾ ಅಪ್ಯಲುಕ್ । ತ್ಸಪ್ಸಾನ್ । ತಕ್ಷೂ ತ್ವಕ್ಷೂ ತನೂಕರಣೇ । ನಿಷ್ಠಾ । ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಸ್ಕೋಃ ಸಂಯೋಗಾದ್ಯೋರಿತಿ ಕಲೋಪಃ ॥**

॥ ಪ್ರತಿಪದಾರ್ಥ ॥

**ವಿಶ್ವಾನಿ**--ಎಲ್ಲಾ । **ನೃಮ್ಣಾ**—ಹವಿರ್ಲಕ್ಷಣವಾದ ಧನವನ್ನು । **ಹಸ್ತೇ**—ತನ್ನ ಹಸ್ತದಲ್ಲಿ । **ದಧಾನಃ**—ಧರಿಸಿದವನಾದ (ಅಗ್ನಿಯು) । **ಗುಹಾ**—(ಅಬ್ರೂಪವಾದ) ಗುಹೆಯಲ್ಲಿ । **ನಿಷೀದನ್**—ಅಡಗಿದವನಾಗಿ । **ದೇವಾನ್**—ದೇವತೆಗಳನ್ನು । **ಅಮೇ**—ಭಯದಲ್ಲಿ । **ಧಾತ್**—ಇಟ್ಟನು (ಭಯಗ್ರಸ್ತರನ್ನಾಗಿ ಮಾಡಿದನು) । **ಯತ್**—ಯಾವಾಗ । **ನೇತಾರಃ**—ನೇತೃಗಳಾದ । **ಧಿಯಂ ಧಾಃ**—ಜ್ಞಾನದಾತೃಗಳಾದ ದೇವತೆಗಳು । **ಹೃದಾ**- ತಮ್ಮ ಜ್ಞಾನದಿಂದ । **ತಷ್ಟಾನ್**—ನಿರ್ಮಿತವಾದ । **ಮಂತ್ರಾನ್**—(ಅಗ್ನಿಪರವಾದ) ಮಂತ್ರಗಳನ್ನು । **ಅಶಂಸನ್**— ಉಚ್ಚರಿಸಿದರೋ । **ಅತ್ರ**—ಆ ಕಾಲದಲ್ಲಿ । **ಈಂ**—ಈ ಅಗ್ನಿಯನ್ನು । **ವಿದಂತಿ**--ತಿಳಿದರು

॥ ಭಾವಾರ್ಥ ॥

ಅಗ್ನಿಯು ದೇವತೆಗಳಿಗಾಗಿ ದತ್ತವಾದ ಹವಿರ್ಧಾನವನ್ನೆಲ್ಲಾ ತಾನೇ ಇಟ್ಟುಕೊಂಡು ಉದಕದಲ್ಲಿ ನಿಗೂಢನಾಗಿ, ದೇವತೆಗಳಿಗೆಲ್ಲಾ ಭಯವನ್ನುಂಟುಮಾಡಿದನು ನೇತೃಗಳೂ, ಜ್ಞಾನಾಶ್ರಯರೂ ಆದ ದೇವತೆಗಳೂ, ತಮ್ಮ ಜ್ಞಾನದಿಂದ ಅಗ್ನಿಪರವಾದ ಮಂತ್ರಗಳನ್ನು ರಚಿಸಿ, ಅವನಿದ್ದಸ್ಥಳವನ್ನು ತಿಳಿದರು

English Translation

Holding in his hand all (sacrificial) wealth, and hiding in the hollows (of the waters), he filled the gods with alarm, the leaders (the gods), the upholders of acts, then knew Agni when they recited the prayers conceived in the heart.

॥ ವಿಶೇಷವಿಷಯಗಳು ॥

**ಅಮೇ ದೇವಾನ್ ಧಾತ್**—**ಭಯೇ ಅಗ್ನೌ ಹವಿರ್ಭಿಸ್ಸಹ ಪಲಾಯಿತೇ ಸತಿ ಸರ್ವೇ ದೇವಾ ಅಭೈಷುಃ ।** ಅಗ್ನಿಯು ಹವಿಸ್ಸುಗಳೊಡನೆ ಗೂಢವಾದ ಪ್ರದೇಶದಲ್ಲಿ (ನೀರಿನಲ್ಲಿ ಅಥವಾ ಅಶ್ವತ್ಥವೃಕ್ಷದಲ್ಲಿ) ಅವಿತುಕೊಂಡಿರಲು ದೇವತೆಗಳು ಭಯವನ್ನು ಹೊಂದಿದರು

**ನೃಮ್ಣಾ**---**ನೃಮ್ಣಾನಿ ಧನಾನಿ ಹವಿರ್ಲಕ್ಷಣಾನಿ ।** ನೃಮ್ಣ ಶಬ್ದವು ಮಘ, ತೀಕ್ಷ್ಣಃ ಎಂಬ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ (ನಿ. ೩-೯) ಉಕ್ತವಾಗಿರುವುದು ಮತ್ತು ಬಲನಾಮಗಳ ಮಧ್ಯದಲ್ಲಿ ಈ ಶಬ್ದವು ಪಠಿತವಾಗಿದ್ದರೂ ಇಲ್ಲಿ ಧನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು. ಹವಿಸ್ಸಿನ ರೂಪವಾದ ಧನವೆಂದು ಅರ್ಥವು

**ಧಿಯಂ ಧಾಃ—ಕರ್ಮಣಾಂ ಬುದ್ಧೀನಾಂ ವಾ ಧಾರಯಿತಾರಃ ।** ಯಜ್ಞರೂಪವಾದ ಕರ್ಮಗಳನ್ನು ಆಚರಿಸುವವರು ಅಥವಾ ಪ್ರಜ್ಞಾವಂತರಾದವರು ಎಂದು ಅರ್ಥವು

॥ ವ್ಯಾಕರಣಪ್ರಕ್ರಿಯಾ ॥

**ದಧಾನಃ**—ಡುಧಾಞ್ ಧಾರಣಪೋಷಣಯೋಃ ಧಾತು ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಜುಹೋತ್ಯಾದಿಯಾದುದರಿಂದ ಶ್ಲು ವಿಕರಣ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಜಸ್ತ್ವ. ಹ್ರಸ್ವ **ಅಭ್ಯಸ್ತಾನಾಮಾದಿಃ** (ಪಾ. ಸೂ ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ನೃಮ್ಣಾ**—ನಪುಂಸಕದಲ್ಲಿ ದ್ವಿತೀಯಾ ಬಹುವಚನದಲ್ಲಿ ಶಸ್ಸಿಗೆ ಶಿ ಆದೇಶ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ

**ಧಾತ್**—ಧಾಞ್ ಧಾತುವಿಗೆ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ರತ್ಯಯ ಅದರ ಇಕಾರಕ್ಕೆ **ಇತಶ್ಚ** ಸೂತ್ರದಿಂದ ಲೋಪ ಚ್ಲಿಗೆ ಬಂದ ಸಿಚ್ಚಿಗೆ **ಗಾತಿಸ್ಥಾಘುಪಾ**—ಸೂತ್ರದಿಂದ ಲೋಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ನಿಘಾತಸ್ವರ ಬರುತ್ತದೆ

**ಗುಹಾ**—ಸಪ್ತಮೀ ಏಕವಚನಕ್ಕೆ **ಸುಪಾಂ ಸುಲುಕ್** ಸೂತ್ರದಿಂದ ಡಾ ಆದೇಶ

**ನಿಷೀದನ್**—ಷದಲ್ಲ ವಿಶರಣಗತ್ಯವಸಾದನೇಷು ಧಾತು ಲಡರ್ಥದಲ್ಲಿ ಶತೃಪ್ರತ್ಯಯ **ಪಾಘ್ರಾಧ್ಮಾಸ್ಥಾ**—ಸೂತ್ರದಿಂದ ಧಾತುವಿಗೆ ಸೀದ ದೇಶ. ಸೀದತ್ ಶಬ್ದವಾಗುತ್ತದೆ. ನಿ ಸಂಬಂಧವಿರುವಾಗ **ಸದಿರಪ್ರತೇಃ** (ಪಾ ಸೂ ೮-೩-೬೬) ಎಂಬುದರಿಂದ ಧಾತುವಿನ ಸಕಾರಕ್ಕೆ ಷತ್ವ ಬರುತ್ತದೆ ಪ್ರಥಮಾ ಸುವಿನಲ್ಲಿ ನುಮಾಗಮ ಸುಲೋಪ ಸೀದನ್ ಎಂಬಲ್ಲಿ ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ ಗತಿಸಮಾಸದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ

**ವಿದಂತಿ**—ವಿದ ಜ್ಞಾನೇ ಧಾತು ಅದಾದಿ ಲಟ್‌ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯಕ್ಕೆ ಅಂತಾದೇಶ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಧಿಯಂ ಧಾಃ**—ಧಿಯಂ ಧಾರಯಂತಿ ಇತಿ ಧಿಯಂಧಾಃ ಡುಧಾಞ್ ಧಾರಣಪೋಷಣಯೋಃ ಧಾತು. **ಆತೋಽನುಪಸರ್ಗೇಕಃ** (ಪಾ ಸೂ ೩-೨-೩) ಎಂಬುದರಿಂದ ಕ ಪ್ರತ್ಯಯ **ಆತೋ ಲೋಪಇಟಿ ಚ** ಸೂತ್ರದಿಂದ ಆಕಾರಲೋಪ. ದ್ವಿತೀಯಾ ತತ್ಪುರುಷಸಮಾಸವಾದಾಗ **ತತ್ಪುರುಷೇ ಕೃತಿ ಬಹುಲಂ** ಎಂಬಲ್ಲಿ ಬಹುಲಗ್ರಹಣದಿಂದ ದ್ವಿತೀಯಾ ವಿಭಕ್ತಿಗೂ ಅಲುಕ್ ಬರುತ್ತದೆ. **ಗತಿಕಾರಕೋಪಪದಾತ್‌ಕೃತ್** ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ

**ತಷ್ಟಾನ್**—ತಕ್ಷೂ ತ್ವಕ್ಷೂ ತನೂಕರಣೇ. ಧಾತು ಇದಕ್ಕೆ ನಿಷ್ಠಾ ಕ್ತಪ್ರತ್ಯಯ. ಊದಿತ್ತಾದುದರಿಂದ-- **ಊದಿತೋ ವಾ** ಎಂಬುದರಿಂದ ವಿಕಲ್ಪವಾಗಿ ಇಟ್ ಬರುವುದರಿಂದ **ಯಸ್ಯ ವಿಭಾಷಾ** ಸೂತ್ರದಿಂದ ಕ್ತ ಪ್ರತ್ಯಯಕ್ಕೆ ಇಡಾಗಮ ಬರುವುದಿಲ್ಲ **ಸ್ಕೋಃಸಂಯೋಗಾದ್ಯೋರಂತೇ ಚ** ಎಂಬುದರಿಂದ ಕಕಾರಲೋಪ ಷ್ಟುತ್ವದಿಂದ ಕ್ತ ಪ್ರತ್ಯಯದ ತಕಾರಕ್ಕೆ **ಟಕಾರಾದೇಶ** ದ್ವಿತೀಯಾ ಬಹುವಚನದಲ್ಲಿ ತಷ್ಟಾನ್ ಎಂದು ರೂಪವಾಗುತ್ತದೆ ಪ್ರತ್ಯಯಸ್ವರದಿಂದ ಅಂತೋದಾತ್ತ

**ಅಶಂಸನ್**—ಶಂಸು ಸ್ತುತೌ ಧಾತು. ಲಙ್ಪ್ರಥಮಪುರುಷ ಬಹುವಚನದಲ್ಲಿ ಅಶಂಸನ್ ಎಂದು ರೂಪವಾಗುತ್ತದೆ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ || ೪-೫ ||



|| ಸಂಹಿತಾಪಾಠಃ ||

ಅಜೋ ನ ಕ್ಷಾಂ ದಾಧಾರ ಪೃಥಿವೀಂ ತಸ್ತಂಭ ದ್ಯಾಂ ಮಂ-
ತ್ರೇಭಿಃ ಸತ್ಯೈಃ ।
ಪ್ರಿಯಾ ಪದಾನಿ ಪಶ್ವೋ ನಿ ಪಾಹಿ ವಿಶ್ವಾಯುರಗ್ನೇ ಗುಹಾ
ಗುಹಂ ಗಾಃ || ೫ || ೬ ||

| ಪದಪಾಠಃ

ಅಜಃ । ನ । ಕ್ಷಾಂ । ದಾಧಾರ । ಪೃಥಿವೀಂ । ತಸ್ತಂಭ । ದ್ಯಾಂ । ಮಂತ್ರೇಭಿಃ ।
ಸತ್ಯೈಃ ।
ಪ್ರಿಯಾ । ಪದಾನಿ । ಪಶ್ವಃ । ನಿ । ಪಾಹಿ । ವಿಶ್ವಽಆಯುಃ । ಅಗ್ನೇ । ಗುಹಾ
ಗುಹಂ । ಗಾಃ || ೫ || ೬ ||

॥ ಸಾಯಣಭಾಷ್ಯಂ ॥

**ಅಜೋ ನ । ಅಜತಿ ಗಚ್ಛತೀತ್ಯಜಃ ಸೂರ್ಯಃ । ಯದ್ವಾ । ನ ಜಾಯತ ಇತ್ಯಜಃ । ಜನ್ಮರಹಿತ ಇತ್ಯರ್ಥಃ । ಸ ಇವ । ಕ್ಷೇತಿ ಪೃಥಿವೀನಾಮ । ಕ್ಷಾಂ ಭೂಮಿಂ ದಾಧಾರ । ಅಯಮಗ್ನಿಃ ಪ್ರಕಾಶಕತ್ವೇನ ಧಾರಯತಿ । ಪೃಥಿವೀತ್ಯಂತರಿಕ್ಷನಾಮ । ಪೃಥಿವೀಮಂತರಿಕ್ಷಂ ಚ ಧಾರಯತೀತ್ಯೇವ । ದ್ಯಾಂ ದ್ಯುಲೋಕಂ ಸತ್ಯೈರವಿತಥಾರ್ಥೈರ್ಮಂತ್ರೇಭಿರ್ಮಂತ್ರೈಸ್ತಸ್ತಂಭ । ಸ್ತಭ್ನಾತಿ । ಯಥಾಧೋ ನ ಪತತಿ ಉಪರ್ಯೇವ ತಿಷ್ಠತಿ ತಥಾ ಕರೋತೀತ್ಯರ್ಥಃ । ಮಂತ್ರೈರ್ದಿವೋ ಧಾರಣಂ ತೈತ್ತಿರೀಯೇ ಸಮಾಮ್ನಾತಂ । ದೇವಾ ವಾ ಆದಿತ್ಯಸ್ಯ ಸುವರ್ಗಲೋಕಸ್ಯ ಪರಾಚೋಽತಿಪಾತಾದಬಿಭಯುಃ । ತಂ ಛಂದೋಭಿರದೃಹನ್ಧೃತ್ಯಾ ಇತಿ । ಯದ್ವಾ । ಸತ್ಯೈರ್ಮಂತ್ರೈಃ ಸ್ತೂಯಮಾನೋಽಗ್ನಿರ್ದ್ಯಾಂ ತಸ್ತಂಭೇತಿ । ಹೇ ಅಗ್ನೇ ವಿಶ್ವಾಯುಃ ವಿಶ್ವಂ ಸರ್ವಮಾಯುರನ್ನಂ ಯಸ್ಯ ಸ ತ್ವಂ ಪಶ್ವಃ ಪಶೋಃ ಪ್ರಿಯಾ ಪ್ರಿಯಾಣಿ ಪದಾನಿ ಶೋಭನತೃಣೋದಕೋಪೇತಾನಿ ಸ್ಥಾನಾನಿ ನಿ ಪಾಹಿ । ನಿತರಾಂ ಪಾಲಯ । ಮಾ ಧಾಕ್ಷೀರಿತ್ಯರ್ಥಃ । ತರ್ಹಿ ಕುತ್ರ ನಿವಸಾಮೀತಿ ಚೇತ್ ತತ್ರಾಹ । ಗುಹಾ ಗುಹಾಯಾ ಅಪಿ ಗುಹಂ ಗುಹಾಂ ಗವಾಂ ಸಂಚಾರಯೋಗ್ಯಸ್ಥಾನಂ ಗಾಃ । ಗಚ್ಛ । ತತ್ರೈವ ನಿವಸೇತ್ಯರ್ಥಃ ॥ ಪಶ್ವಃ । ಜಸಾದಿಷು ಛಂದಸಿ ವಾವಚನಮಿತಿ ಘೇರ್ಙಿತೀತಿ ಗುಣಾಭಾವೇ ಯಣಾದೇಶಃ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಗುಹಾ । ಸುಪಾಂ ಸುಲುಗಿತಿ ಪಂಚಮ್ಯಾ ಆಚಾದೇಶಃ । ಚಿತ್ತ್ವಾದಂತೋದಾತ್ತತ್ವಂ । ಗುಹಂ ವ್ಯತ್ಯಯೇನ ಹ್ರಸ್ವತ್ವಂ । ಗಾಃ । ಛಾಂದಸೋ ಲುಙ್ । ಇಣೋ ಗಾ ಲುಙೀತಿ ಗಾದೇಶಃ ॥**

॥ ಪ್ರತಿಪದಾರ್ಥ ॥

**ಅಜೋ ನ**—ಗಮನಶೀಲನಾದ (ಜನ್ಮರಹಿತನಾದ) ಸೂರ್ಯನಂತೆ । **ಕ್ಷಾಂ**—ಭೂಮಿಯನ್ನೂ । **ಪೃಥಿವೀಂ**—ಅಂತರಿಕ್ಷವನ್ನೂ । **ದಾಧಾರ**—(ಪ್ರಕಾಶಕನಾಗಿ) ಧಾರಣಮಾಡಿದನು । **ದ್ಯಾಂ**—ಸ್ವರ್ಗಲೋಕವನ್ನೂ । **ಸತ್ಯೈಃ**—ಅವಿತಥವಾದ । **ಮಂತ್ರೈಃ**—ಮಂತ್ರಗಳಿಂದ । **ತಸ್ತಂಭ**—ನಿಲ್ಲುವಂತೆ ಮಾಡಿದನು । **ಅಗ್ನೇ**—ಅಗ್ನಿಯೇ । **ವಿಶ್ವಾಯುಃ**—ಎಲ್ಲವೂ ಅನ್ನವಾಗಿ ಉಳ್ಳ (ನೀನು) । **ಪಶ್ವಃ**— ಪಶುಗಳಿಗೆ । **ಪ್ರಿಯಾ**—ಪ್ರಿಯವಾದ । **ಪದಾನಿ**—(ತೃಣೋದಕಯುಕ್ತವಾದ) ಸ್ಥಾನಗಳನ್ನು । **ನಿ ಪಾಹಿ**—ಚೆನ್ನಾಗಿ ರಕ್ಷಿಸು । **ಗುಹಾ**—ಗುಹೆಗಳಲ್ಲಿ । **ಗುಹಂ**—(ಸಂಚಾರಾಯೋಗ್ಯವಾದ) ಗುಹೆಯನ್ನು । **ಗಾಃ**—ಹೊಂದು.

॥ ಭಾವಾರ್ಥ ॥

ಅಗ್ನಿಯು ತನ್ನ ಪ್ರಕಾಶದಿಂದ ಸೂರ್ಯನಂತೆ, ಭೂಮ್ಯಾಕಾಶಗಳನ್ನೂ ಧಾರಣಮಾಡುತ್ತಾನೆ ವ್ಯರ್ಥವಲ್ಲದ ಮಂತ್ರಗಳ ಶಕ್ತಿಯಿಂದ ಸ್ವರ್ಗಲೋಕವನ್ನೂ ಸ್ಥಾಯಿಯಾಗಿ ನಿಲ್ಲುವಂತೆ ಮಾಡುತ್ತಾನೆ. ಎಲೈ ಅಗ್ನಿಯೇ, ಈ ಭೂಮಿಯಲ್ಲಿ ಎಲ್ಲವೂ ನಿನ್ನ ಆಹಾರಭೂತವಾದದು. ಆದರೆ, ಪಶುಗಳಿಗೆ ಪ್ರಿಯವಾದ ತೃಣೋದಕಗಳಿರುವ ಪ್ರದೇಶಗಳನ್ನು ಮಾತ್ರ ಕಾಪಾಡು ನೀನು ಪಶ್ವಾದಿಗಳ ಸಂಚಾರಕ್ಕೆ ಅಯೋಗ್ಯವಾದ ಗುಹೆಗಳಲ್ಲಿ ವಾಸಿಸು.

## English Translation.

Like the unborn (Sun) he sustains the earth and the firmament, and props up the heaven with true prayers. O Agni, the source of sustenance unto all, protect the pasture that is grateful unto animals and repair to the cave which is unfit for grazing

॥ ವಿಶೇಷವಿಷಯಗಳು ॥

**ಅಜೋ ನ ಕ್ಷಾಂ — ಅಜತಿ ಗಚ್ಛತೀತ್ಯಜಃ ಸೂರ್ಯಃ । ಯದ್ವಾ ನ ಜಾಯತ ಇತ್ಯಜಃ । ಜನ್ಮರಹಿತಃ ।** ಯಾವಾಗಲೂ ಸಂಚಾರ ಮಾಡುವವನಾದ ಕಾರಣದಿಂದ ಅಜ ಧಾತುವಿಗೆ ಗತ್ಯರ್ಥವನ್ನು ಅಂಗೀಕರಿಸಿ ಸೂರ್ಯನೆಂದು ಅಜ ಶಬ್ದಕ್ಕೆ ಅರ್ಥವು. ಜನನಮರಣಾದಿಗಳು ಯಾವುದೂ ಇಲ್ಲದಿರುವುದರಿಂದ ಸೂರ್ಯನು ಎಂದು ಇನ್ನೊಂದು ವಿಧವಾಗಿಯೂ ಅಜ ಶಬ್ದಕ್ಕೆ ಅರ್ಥವನ್ನು ಹೇಳಿರುವರು ಕ್ಷಾ ಎಂಬುದು ಇಪ್ಪತ್ತೊಂದು ಪೃಥಿವೀನಾಮಗಳ ಮಧ್ಯದಲ್ಲಿ (ನಿ. ೨-೫) ಪಠಿತವಾಗಿರುವುದು ನ ಎಂಬುವುದು ಉಪಮಾವಾಚಕವು. ಅಗ್ನಿಯು ಸೂರ್ಯನ ಹಾಗೆ ಭೂಮಿಯನ್ನು ಧರಿಸಿರುವನು ಸೂರ್ಯನು ಭೂಮಿಯಲ್ಲಿ ಪ್ರಕಾಶವನ್ನು ಬೀರುತ್ತಾ ಎಲ್ಲರಿಗೂ ಚೈತನ್ಯಾದಿಗಳನ್ನು ಉಂಟುಮಾಡಿರುವಂತೆ ಅಗ್ನಿಯೂ ಕೂಡ ತನ್ನ ಪ್ರಕಾಶಗಳಿಂದ ಭೂಲೋಕವೆಲ್ಲವನ್ನೂ ಧರಿಸಿರುವನು.

**ಪೃಥಿವೀಂ ದ್ಯಾಂ ತಸ್ತಂಭ — ಪೃಥಿವೀತ್ಯಂತರಿಕ್ಷನಾಮ । ಅಂತರಿಕ್ಷಂ ಚ ದ್ಯುಲೋಕಂ ಸ್ತಭ್ನಾತಿ ಯಥಾಽಧೋ ನ ಪತತಿ ಉಪರ್ಯೇವ ತಿಷ್ಠತಿ ತಥಾ ಕರೋತಿ ॥** ಪೃಥಿವೀ ಶಬ್ದವು ಹದಿನಾರು ಅಂತರಿಕ್ಷನಾಮಗಳ ಮಧ್ಯದಲ್ಲಿ (ನಿ ೨-೧೦) ಉಕ್ತವಾಗಿರುವುದು. ಅಂತರಿಕ್ಷವೂ ಮತ್ತು ಸ್ವರ್ಗಲೋಕವೂ ಕೆಳಕ್ಕೆ ಬೀಳದರ ಯಾವಾಗಲೂ ಮೇಲೆಯೇ ಇರುವ ಹಾಗೆ ಅಗ್ನಿಯು ಸತ್ಯಾರ್ಥಗಳಾದ ಮಂತ್ರಗಳಿಂದ ಧರಿಸಿರುವನು ಅಥವಾ ಸತ್ಯವಾದ ಅರ್ಥವನ್ನು ಹೇಳುವ ಮಂತ್ರಗಳಿಂದ ಸ್ತುತಿಸಲ್ಪಡುವ ಅಗ್ನಿಯು ಸ್ವರ್ಗಲೋಕವು ಒಂದೇ (ಸ್ಥಾನದಲ್ಲಿ) ರೀತಿಯಲ್ಲಿ ಇರುವಂತೆ ಧರಿಸಿರುವನು ಮಂತ್ರಗಳಿಂದ ಸ್ವರ್ಗವನ್ನು ಧರಿಸಿರುವ ವಿಷಯವು “ **ದೇವಾ ವಾ ಆದಿತ್ಯಸ್ಯ ಸುವರ್ಗಸ್ಯ ಲೋಕಸ್ಯ ಪರಾಚೋಽತಿಪಾದಾದಬಿಭಯುಃ । ತಂ ಛಂದೋಭಿರದೃಂಹನ್ ಧೃತ್ಯೈ** ” (ತೈ ಬ್ರಾ. ೧-೨-೪-೨) ಎಂಬ ವಾಕ್ಯದಿಂದ ಉಕ್ತವಾಗಿರುತ್ತದೆ

ಸಾಯಣರು ಪಶ್ವಃ ಪ್ರಿಯಾ ಸಿಷಾಹಿ ಎಂಬ ಈ ವಾಕ್ಯಕ್ಕೆ ಪಶುಗಳಿಗೆ ಪ್ರೀತಿಕರವಾಗಿರುವ ಉತ್ತಮವಾದ ತೃಣಗಳೂ ಉದಕವೂ ಇರುವ ಪ್ರದೇಶಗಳನ್ನು ರಕ್ಷಿಸು, ಸುಡಬೇಡ ಎಂದು ಅರ್ಥವನ್ನು ಮಾಡಿರುವರು

ಸ್ಕಂದಸ್ವಾಮಿಗಳು ಅಜ ಶಬ್ದಕ್ಕೆ ಪ್ರಜಾಪತಿ ಎಂದು ಅರ್ಥವನ್ನು ಅಂಗೀಕರಿಸಿ ಬ್ರಹ್ಮನು ಮೂರು ಲೋಕಗಳನ್ನು ಧರಿಸಿರುವಂತೆ ಅಗ್ನಿಯು ಮೂರು ಲೋಕಗಳಲ್ಲಿಯೂ (ಭೂಮಿ, ಅಂತರಿಕ್ಷ, ಸ್ವರ್ಗ) ಯಜ್ಞರೂಪವಾದ ಧರ್ಮಾಚರಣೆಯಿಂದ ಸ್ಥಿತಿಯು ಉಂಟಾಗುವಂತೆ ಧರಿಸಿರುವನು ಎಂದೂ, ಪಶುಸದೃಶನಾಗಿರುವ ನನಗೆ ಹಿತಕರ

ವಾದ ಸ್ಥಾನಗಳನ್ನು ಇಲ್ಲಿಯೂ ಪರಲೋಕದಲ್ಲಿಯೂ ನಿಯತವಾಗಿ ರಕ್ಷಿಸು ಅಥವಾ ನಿನ್ನ ಪ್ರೀತಿಗೆ ಆಸ್ಪದವಾಗಿರುವ ಸ್ಥಾನಗಳನ್ನೂ ತಿಳಿದಿರುವ ನಮ್ಮನ್ನು ರಕ್ಷಿಸು ಎಂದೂ ಅರ್ಥವನ್ನು ಹೇಳಿರುವರು. ಇದರಿಂದ ಪಶ್ವಃ ಎಂಬ ಶಬ್ದಕ್ಕೆ ಪಶುಸದೃಶಃ, ಪಶ್ವಃ ದೃಶೇರಿದಂ ರೂಪಂ ಎಂದೂ ಅರ್ಥವನ್ನು ಮಾಡಿರುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ದಧಾರ**—ಧೃಙ್ ಧಾತುವಿಗೆ ಛಾಂದಸವಾದ ಲಿಟ್ ಪ್ರಥಮಪುರುಷ ಏಕವಚನದಲ್ಲಿ ರೂಪ. **ನಿಪಾತೈರ್ಯದಿ**—ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ ಣಲ್ ಲಿತ್ತಾದುದರಿಂದ **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವವು ಉದಾತ್ತವಾಗುತ್ತದೆ.

**ತಸ್ತಂಭ**—ಷ್ಟಭಿ ಗಾತ್ರವಿನಾಮೇ ಧಾತು **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಿಟ್ ಇದಿತ್ತಾದುದರಿಂದ ನುಮಾಗಮ. **ಶರ್ಪೂರ್ವಾಃ ಖಯಃ** ಎಂಬುದರಿಂದ ತಕಾರಕ್ಕೆ ಶೇಷ ಪಾದಾದಿಯಲ್ಲಿರುವು ದರಿಂದ ನಿಘಾತಸ್ವರ ಬರುವುದಿಲ್ಲ ಹಿಂದಿನಂತೆ **ಲಿತಿ** ಸೂತ್ರದಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ

**ಮಂತ್ರೇಭಿಃ**—**ಬಹುಲಂ ಛಂದಸಿ** ಎಂಬುದರಿಂದ ತೃತೀಯಾದಲ್ಲಿ ಭಿಸ್ಸಿಗೆ ಐಸಾದೇಶ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಎಂಬುದರಿಂದ ಅಂಗಕ್ಕೆ ಏತ್ವ

**ಪ್ರಿಯಾ**—ಪ್ರಿಯಾಣಿ ಎಂದಿರುವಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ನಪುಂಸಕದಲ್ಲಿ ಆದೇಶವಾಗಿ ಬಂದ ಶಿಗೆ ಲೋಪ.

**ಪಶ್ವಃ**—**ಜಸಾದಿಷು ಛಂದಸಿ ವಾ ವಚನಮ್** ಎಂಬುದರಿಂದ, ಪಶು+ಜಸ್ ಎಂದಿರುವಾಗ **ಘೇರ್ಙಿತಿ** ಎಂಬುದರಿಂದ ಗುಣ ಬರುವುದಿಲ್ಲ **ಇಕೋ ಯಣಚಿ** ಸೂತ್ರದಿಂದ ಯಣಾದೇಶ. ಉದಾತ್ತವಾದ ಉಕಾರಕ್ಕೆ ಯಣಾದೇಶಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಯಣೋಹಲ್‌ಪೂರ್ವಾತ್** ಸೂತ್ರದಿಂದ ವಿಭಕ್ತಿಯು ಉದಾತ್ತವಾಗುತ್ತದೆ.

**ಗುಹಾ**—ಗುಹಾ+ಙಸಿ ಎಂದು ಪಂಚಮೀ ಏಕವಚನವಿರುವಾಗ **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಆಚಾದೇಶ ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದೆ.

**ಗುಹಮ್**—ಗುಹಾಶಬ್ದಕ್ಕೆ ಅಮ್ ಪರದಲ್ಲಿರುವಾಗ **ಅಮಿ ಪೂರ್ವಃ** ಸೂತ್ರದಿಂದ ಪೂರ್ವರೂಪ ಬಂದಾಗ **ವ್ಯತ್ಯಯೋ ಬಹುಲಂ** ಎಂಬುದರಿಂದ ಹ್ರಸ್ವ ಬರುತ್ತದೆ.

**ಗಾಃ**—ಇಣ್ ಗತೌ ಧಾತು. ಲೋಡರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲುಙ್. ಲುಙ್ ಮಧ್ಯಮಪುರುಷ ಏಕವಚನದ ಸಿಪ್ಪಿನ ಇಕಾರಕ್ಕೆ **ಇತಶ್ಚ** ಎಂಬುದರಿಂದ ಲೋಪ. **ಇಣೋ ಗಾ ಲುಙಿ** (ಪಾ ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾ ಆದೇಶ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ಗಾಃ ಎಂದು ರೂಪ ವಾಗುತ್ತದೆ

**ಪಾಹಿ**—ಪಾ ರಕ್ಷಣೇ ಧಾತು **ಲೋಟ್** ಮಧ್ಯಮಪುರುಷದ ಸಿಪ್ಪಿಗೆ ಹಿ ಆದೇಶ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಅಗ್ನೇ**—**ಹ್ರಸ್ವಸ್ಯ ಗುಣಃ** ಎಂಬುದರಿಂದ ಸಂಬುದ್ಧಿಯಲ್ಲಿ ಗುಣ **ಏಙ್ಹ್ರಸ್ವಾತ್ಸಂಬುದ್ಧೇಃ** ಎಂಬುದರಿಂದ ಸುಲೋಪ **ಆಮಂತ್ರಿತಸ್ಯ ಚ** (ಪಾ. ಸೂ ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ ॥ ೫-೬ ॥



॥ ಸಂಹಿತಾಪಾಠಃ ॥

ಯ ಈಂ ಚಿಕೇತ ಗುಹಾ ಭವಂತಮಾ ಯಃ ಸಸಾದ ಧಾರಾ-
ಮೃತಸ್ಯ ।
ವಿ ಯೇ ಚೃತಂತ್ಯೃತಾ ಸಪಂತ ಆದಿದ್ವಸೂನಿ ಪ್ರ ವವಾ-
ಚಾಸ್ಮೈ ॥ ೭ ॥ ೮ ॥

॥ ಪದಪಾಠಃ ॥

ಯಃ । ಈಂ । ಚಿಕೇತ । ಗುಹಾ । ಭವಂತಂ । ಆ । ಯಃ । ಸಸಾದ । ಧಾರಾಂ ।
ಋತಸ್ಯ ।
ವಿ । ಯೇ । ಚೃತಂತಿ । ಋತಾ । ಸಪಂತಃ । ಆತ್ । ಇತ್ । ವಸೂನಿ । ಪ್ರ ।
ವವಾಚ । ಅಸ್ಮೈ ॥ ೭ ॥ ೮ ॥

॥ ಸಾಯಣಭಾಷ್ಯಂ ॥

**ಯಃ ಪುಮಾನ್ ಈಮೇನಂ ಗುಹಾ ಭವಂತಂ ಗುಹಾಯಾಂ ಸಂತಮಗ್ನಿಂ ಚಿಕೇತ ಜಾನಾತಿ। ಯಶ್ಚ ಋತಸ್ಯ ಸತ್ಯಸ್ಯ ಯಜ್ಞಸ್ಯ ವಾ ಧಾರಾಂ ಧಾರಾಯಿತಾರಮೇನಮಗ್ನಿನಾ ಸಸಾದ ಆಸೀದತಿ.। ಉಪಾಸ್ತ ಇತ್ಯರ್ಥಃ। ಯೇ ಚ ಋತಾ ಋತಾನಿ ಸತ್ಯಾನಿ ಯಜ್ಞಾನ್ವಾ ಸಪಂತಃ ಸಮವಯಂತಃ ಸ್ಪೃಶಂತೋ ವಾ ಪುರುಷಾ ಏತಮಗ್ನಿಂ ವಿ ಚೃತಂತಿ ಅಗ್ನಿಮುದ್ದಿಶ್ಯ ಸ್ತುತೀರ್ಗ್ರಥ್ನಂತಿ। ಕುರ್ವಂತೀತ್ಯರ್ಥಃ। ಆದಿತ್ ಸ್ತುತ್ಯನಂತರಮೇವಾಸ್ಮೈ ಸರ್ವಸ್ಮೈ ಸ್ತೋತೃಜನಾಯ ವಸೂನಿ ಧನಾನಿ ಪ್ರ ವವಾಚ। ಪ್ರಕಥಯತಿ॥ ಚಿಕೇತ। ಕಿತ ಜ್ಞಾನೇ। ಲಿಟಿ ಣಲಿ ಲಿತ್ಸ್ವರಃ। ಚೃತಂತಿ। ಚೃತೀ ಹಿಂಸಾಗ್ರಂಥನಯೋಃ। ತೌದಾದಿಕಃ। ಲಸಾರ್ವಧಾತುಕಾನುದಾತ್ತತ್ವೇ ವಿಕರಣಸ್ವರಃ ಶಿಷ್ಯತೇ। ವವಾಚ। ಲಿಟಿ ಬ್ರುವೋ ವಚಿಃ। ಲಿಟ್ಯಭ್ಯಾಸಸ್ಯೋಭಯೇಷಾಂ। ಪಾ. ೬-೧-೧೭। ಇತ್ಯಭ್ಯಾಸಸ್ಯ ಸಂಪ್ರಸಾರಣಂ। ಸಂಪ್ರಸಾರಣಾಚ್ಚೇತಿ ಪರಪೂರ್ವತ್ವಸ್ಯ ವಾ ಛಂದಸಿ। ಪಾ. ೬-೧.೧೧೬। ಇತಿ ವಿಕಲ್ಪನಾದ್ಯಣಾದೇಶಃ॥**

॥ ಪ್ರತಿಪದಾರ್ಥ ॥

**ಯಃ**—ಯಾವನು। **ಈಂ**—ಈ ಅಗ್ನಿಯನ್ನು। **ಗುಹಾ ಭವಂತಂ**- ಗುಹೆಯಲ್ಲಿ ವಾಸಿಸುತ್ತಿರುವವನನ್ನಾಗಿ। **ಚಿಕೇತ**—ತಿಳಿಯುತ್ತಾನೆಯೋ। **ಯಃ (ಚ)**—ಯಾವನು। **ಋತಸ್ಯ**—ಸತ್ಯದ। **ಧಾರಾಂ**—ಆಶ್ರಯನನ್ನಾಗಿ। **ಆ ಸಸಾದ**—ಉಪಾಸನೆಮಾಡುತ್ತಾನೋ। **ಯೇ (ಚ)**—ಯಾರು। **ಋತಾ**—ಸತ್ಯವನ್ನು (ಯಜ್ಞಗಳನ್ನು)। **ಸಂಪಂತಃ**—ಆಶ್ರಯಿಸತಕ್ಕವರಾಗಿ (ಮಾಡತಕ್ಕವರಾಗಿ)। **ವಿ ಚೃತಂತಿ**—(ಅಗ್ನಿಯನ್ನುದ್ದೇಶಿಸಿ) ಸ್ತುತಿಗಳನ್ನು ರಚಿಸುತ್ತಾರೋ। **ಅಸ್ಮೈ**—ಈ ಸ್ತೋತೃವೃಂದಕ್ಕೆ। **ಆದಿತ್**—ಸ್ತುತಿಸಿದ ಮೇಲೆಯೇ। **ವಸೂನಿ**—ಧನವನ್ನು। **ಪ್ರ ವವಾಚ**--ದಾನಮಾಡುತ್ತಾನೆ

॥ ಭಾವಾರ್ಥ ॥

ಅಗ್ನಿಯು ಗೂಢವಾಗಿರುವವನು, ಸತ್ಯಕ್ಕೆ, ಯಜ್ಞಗಳಿಗೆ ಆಶ್ರಯನು ಎಂದು ತಿಳಿದು, ಯಜ್ಞಗಳನ್ನು ಆಚರಿಸಿದವರಾಗಿ, ಅವನನ್ನುದ್ದೇಶಿಸಿ ಸ್ತುತಿಗಳನ್ನು ರಚಿಸಿ ಸ್ತುತಿಸುವವರಿಗೆ ಮಾತ್ರ, ಅಗ್ನಿಯು ಧನಾದಿಗಳನ್ನು ಕೊಡುತ್ತಾನೆ

## English Translation

He who knows Agni hidden in the cave; he who approaches him who is the maintainer of sacrifice, those who, after performing a sacrifice, praise him, to them he, forsooth, promises affluence.

॥ ವಿಶೇಷವಿಷಯಗಳು ॥

**ಋತಸ್ಯ ಧಾರಾಂ—ಯಜ್ಞಸ್ಯ ಸತ್ಯಸ್ಯ ವಾ ಧಾರಯಿತಾರಂ ।** ಧಾರಾ ಎಂಬ ಶಬ್ದವು ಯಜ್ಞವನ್ನು ಅಥವಾ ಸತ್ಯವನ್ನು ಧರಿಸಿರುವವನು ಎಂದು ಅರ್ಥವುಳ್ಳದ್ದು ಎಂದು ಸಾಯಣರು ಹೇಳಿರುವರು ಸ್ಕಂದಸ್ವಾಮಿಗಳು ಧಾರಾ ಶಬ್ದಕ್ಕೆ ಸ್ತುತಿರೂಪವಾದ ವಾಕ್ಕು ಎಂದೂ, ಋತಸ್ಯ ಎಂಬ ಪದಕ್ಕೆ ಪರೋಕ್ಷವಲ್ಲಿರುವವನ ಎಂದೂ ಅರ್ಥವನ್ನು ಹೇಳಿರುವರು

ಸಾಯಣರು—**ಋತಾ—ಸತ್ಯಾನಿ ಯಜ್ಞಾನ್ ವಾ ಸಪನ್ತಃ—ಸಮವಯಂತಃ ಸ್ಪೃಶಂತೋ ವಾ । ಆದಿತ್ ಸ್ತುತ್ಯನಂತರಮೇವ** ಎಂಬುದಾಗಿ **ಋತಾ ಸಪಂತಃ, ಆದಿತ್** ಎಂಬ ಪದಗಳಿಗೆ ಅರ್ಥವನ್ನು ಮಾಡಿರುವರು. ಸ್ಕಂದಸ್ವಾಮಿ ಗಳು **ಸಪಂತಃ ಆದಿತ್** ಎಂಬ ಪದಗಳು ಪಾದಪೂರಣಾರ್ಥಗಳಾಗಿರುವುವು ಎಂದೂ, **ವಸೂನಿ ಪ್ರ ವವಾಚ** ಎಂಬ ಪದಕ್ಕೆ **ಯುಷ್ಮಭ್ಯಂ ಏತಾನಿ ಧನಾನಿ ಇತ್ಯೇವಂ ಪ್ರಕರ್ಷೇಣ ಬ್ರವೀತಿ** ಅಗ್ನಿಯು ತನ್ನನ್ನು ಸೇವಿಸುವವರಿಗೆ ತಾನಾಗಿ ಬಂದು ಈ ಧನವು ನಿಮಗಾಗಿ ಸಿದ್ಧವಾಗಿರುವುದು ಎಂದು ಬಲಾತ್ಕರಿಸಿ ಹೇಳುವನು ಎಂದೂ ಅರ್ಥವನ್ನು ಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಚಿಕೇತ**--ಕಿತ ಜ್ಞಾನೇ ಧಾತು ಲಿಟ್ ಪ್ರಥಮಪುರುಷ ಏಕವಚನದಲ್ಲಿ **ಪರಸ್ಮೈಪದಾನಾಂ**—ಸೂತ್ರ ದಿಂದ ಣಲಾದೇಶ ಧಾತುವಿಗೆ ಲಿಣ್ನಿಮಿತ್ತವಾಗಿ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ **ಕುಹೋಶ್ಚುಃ** ಎಂಬುದ ರಿಂದ ಚುತ್ವದಿಂದ ಚಕಾರಾದೇಶ ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ **ಚಿಕೇತ** ಎಂದು ರೂಪ ವಾಗುತ್ತದೆ ಣಲ್ ಲಿತ್ತಾದುದರಿಂದ **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವವು ಉದಾತ್ತವಾಗುತ್ತದೆ ಯಃ ಎಂದು ಹಿಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ

**ಗುಹಾ**—ಸಪ್ತಮೀ ಏಕವಚನಪರದಲ್ಲಿರುವಾಗ **ಸುಪಾಂ ಸುಲುಕ್**—ಸೂತ್ರದಿಂದ ಅದಕ್ಕೆ ಆಕಾರಾದೇಶ ಬರುತ್ತದ

**ಸಸಾದ**- ಷದ್ಲೃ ವಿಶರಣಗತ್ಯವಸಾದನೇಷು ಧಾತು ಲಿಟ್ ಪ್ರಥಮಪುರುಷ ಏಕವಚನದಲ್ಲಿ ಸಸಾದ ಎಂದು ರೂಪವಾಗುತ್ತದೆ ಇಲ್ಲಿಯೂ ಯಃ ಎಂದು ಹಿಂದೆ ಸಂಬಂಧವಿರುವುದರಿಂದ ನಿಘಾತಸ್ವರ ಪ್ರತಿಷಿದ್ಧವಾಗಿ **ಲಿತಿ** ಎಂಬುದರಿಂದ ಪ್ರತ್ಯಯಪೂರ್ವವು ಉದಾತ್ತವಾಗುತ್ತದೆ

**ಚೃತಂತಿ**—ಚೃತೀ ಹಿಂಸಾಗ್ರಂಥನಯೋಃ ಧಾತು. ತುದಾದಿ ಬಹುವಚನದಲ್ಲಿ **ಝೋಽಂತಃ** ಎಂಬುದರಿಂದ ಅಂತಾದೇಶ **ತುದಾದಿಭ್ಯಃ ಶಃ** ಎಂಬುದರಿಂದ ಶ ವಿಕರಣ **ಸಾರ್ವಧಾತುಕಮಪಿತ್** ಸೂತ್ರದಿಂದ ಅದು ಙಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ ಅದುಪದೇಶದಪರದಲ್ಲಿ ಲಸಾರ್ವಧಾತುಕ (ಅಂತಿ)ವು ಬಂದುದರಿಂದ **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ವಿಕರಣಸ್ವರ ಉಳಿಯುತ್ತದೆ ಯೇ ಎಂದು ಹಿಂದಿರುವುದರಿಂದ ನಿಘಾತಸ್ವರವು ಪ್ರತಿಷಿದ್ಧವಾಗುತ್ತದೆ.

**ಊತಾ**—ನಪುಂಸಕದಲ್ಲಿ ಶಸ್ಸಿಗೆ ಬಂದ ಶಿಗೆ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಲೋಪ ಬರುತ್ತದೆ.

**ವವಾಚ**—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು **ಲಿಟ್ಟಿನಲ್ಲಿ ಬ್ರುವೋ ವಚಿಃ** (ಪಾ. ಸೂ. ೨-೪-೫೩) ಎಂಬುದರಿಂದ ಧಾತುವಿಗೆ ವಚ್ಯಾದೇಶ ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ. **ಲಿಟ್ಯಭ್ಯಾಸಸ್ಯೋಭಯೇಷಾಂ** (ಪಾ ಸೂ. ೬-೧-೧೭) ವಚ್ಯಾದಿಗಳಿಗೂ ಗ್ರಹ್ಯಾದಿಗಳಿಗೂ ಲಿಟಿನಲ್ಲಿ ಸಂಪ್ರಸಾರಣ ಬರುತ್ತದೆ. ಎಂಬುದರಿಂದ ಅಭ್ಯಾಸಕ್ಕೆ ಸಂಪ್ರಸಾರಣ ಬರುತ್ತದೆ **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪವು ಪ್ರಾಪ್ತವಾದರೆ **ವಾ ಛಂದಸಿ** (ಪಾ. ಸೂ. ೬-೧-೧೦೬) ಎಂಬುದರಿಂದ ಛಂದಸ್ಸಿನಲ್ಲಿ ವಿಕಲ್ಪವಾದ್ದರಿಂದ ಇಲ್ಲಿ ಬರುವುದಿಲ್ಲ. ಉ+ಅ+ವಚ್+ಅ ಎಂದಿರುವಾಗ ಯಣಾದೇಶದಿಂದ ಉಕಾರಕ್ಕೆ ವಕಾರ. **ಅತ ಉಪಧಾಯಾಃ** ಸೂತ್ರದಿಂದ ಉಪಧಾವೃದ್ಧಿ ವವಾಚ ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ || ೬-೭ ||

॥ ಸಂಹಿತಾಪಾಠಃ ॥

ವಿ ಯೋ ವೀರುತ್ಸು ರೋಧನ್ಮಹಿತ್ವೋತ ಪ್ರಜಾ ಉತ ಪ್ರಸೂಷ್ವಂತಃ ।
ಚಿತ್ತಿರಪಾಂ ದಮೇ ವಿಶ್ವಾಯುಃ ಸದ್ಮೇವ ಧೀರಾಃ ಸಂಮಾಯ ಚಕ್ರುಃ || ೯ || ೧೦ ||

॥ ಪದಪಾಠಃ ॥

ವಿ । ಯಃ । ವೀರುತ್ಽಸು । ರೋಧತ್ । ಮಹಿಽತ್ವಾ । ಉತ । ಪ್ರಽಜಾಃ । ಉತ । ಪ್ರಽಸೂಷು । ಅಂತರಿತಿ ।
ಚಿತ್ತಿಃ । ಅಪಾಂ । ದಮೇ । ವಿಶ್ವಽಆಯುಃ । ಸದ್ಮಽಇವ । ಧೀರಾಃ । ಸಂಽಮಾಯ । ಚಕ್ರುಃ || ೯ || ೧೦ ||

|| ಸಾಯಣಭಾಷ್ಯಂ ||

ಯೋಽಗ್ನಿರ್ವೀರುತ್ಸ್ವೋಷಧೀಷು ಮಹಿತ್ವಾ ಯಾನಿ ಮಹತ್ತ್ವಾನಿ ಸಂತಿ ತಾನಿ ವಿ ರೋಧತ್ ವಿರುಣದ್ಧಿ ವಿಶೇಷೇಣಾವೃಣೋತಿ ನಾವಶೇಷಯತಿ। ಉತಾಪಿ ಚ ಪ್ರಜಾಃ ಪ್ರಕರ್ಷೇಣೋತ್ಪನ್ನಾಃ ಪುಷ್ಪಫಲಾದಿಲಕ್ಷಣಾಃ ಪ್ರಸೂಷೂತ್ಪಾದಯಿತ್ರೀಷು ಮಾತೃಸ್ಥಾನೀಯಾಸ್ವೋಷಧೀಷ್ವಂತರ್ಮಧ್ಯೇ ವಿರುಣದ್ಧೀತ್ಯೇವ । ದ್ವಿತೀಯ ಉತಶಬ್ದಃ ಪಾದಪೂರಣಃ। ತಥಾ ಚಿತ್ತಿಶ್ಚೇತಯಿತಾ ಜ್ಞಾಪಯಿತಾಪಾಂ ದಮೇ ಜಲಾನಾಂ ಮಧ್ಯಭೂತೇ ಗೃಹೇ ವಿಶ್ವಾಯುಃ ಸರ್ವಾನ್ನೋ ಯೋಽಗ್ನಿರ್ವರ್ತತ ಇತಿ ಶೇಷಃ। ತಮಗ್ನಿಂ ಧೀರಾ ಮೇಧಾವಿನಃ ಸಂಮಾಯ ಸಂಮಾನನಂ ಪೂಜನಂ ಕೃತ್ವಾ। ಸ್ತುತಿಭಿಃ ಸ್ತುತ್ವೇತ್ಯರ್ಥಃ। ಚಕ್ರುಃ। ಕರ್ಮಾಣಿ ಕುರ್ವಂತಿ। ತತ್ರ ದೃಷ್ಟಾಂತಃ। ಸದ್ಮೇವ। ಯಥಾ ಸದನಂ ಗೃಹಂ ಪ್ರಥಮತಃ ಸಂಪೂಜ್ಯ ಪಶ್ಚಾತ್ತತ್ರ ಕರ್ಮಾಣ್ಯಾಚರಂತಿ ತದ್ವತ್ ॥ ವೀರುತ್ಸು। ವಿಪೂರ್ವಾದ್ರೋಹತೇಃ ಕ್ವಿಪ್। ನ್ಯಂಕ್ವಾದಿಷು ವೀರುಧ್। ಪಾ. ೭-೩-೫೩। ಇತಿ ಪಠಿತತ್ವಾದುಪಸರ್ಗಸ್ಯ ದೀರ್ಘೋ ಧಕಾರಶ್ಚಾಂತಾದೇಶಃ। ಉಕ್ತಂ ಚ। ವೀರುಧ ಓಷಧಯೋ ಭವಂತಿ। ನಿ. ೬-೩। ರೋಧತ್। ರುಧಿರ್ ಆವರಣೇ। ಲೇಟ್ಯಡಾಗಮಃ। ಇತಶ್ಚ ಲೋಪ ಇತೀಕಾರಲೋಪಃ। ಸಂಮಾಯ। ಮಾಙ್ ಮಾನೇ ಶಬ್ದೇ ಚ। ಸಮಾಸೇಽನಞ್ಪೂರ್ವೇ ಕ್ತ್ವೋ ಲ್ಯಪ್। ೭-೧-೩೭। ನ ಲ್ಯಪಿ। ಪಾ ೬-೪-೬೯। ಇತೀತ್ವಪ್ರತಿಷೇಧಃ ||

। ಪ್ರತಿಪದಾರ್ಥ

**ಯಃ**—ಯಾವ ಅಗ್ನಿಯು। **ವೀರುತ್ಸು**—ಓಷಧಿಗಳಲ್ಲಿ। **ಮಹಿತ್ವಾ** (ಇರುವ) ಮಹಿಮೆಗಳನ್ನು। **ವಿ ರೋಧತ್**—ವಿಶೇಷವಾಗಿ ಮುಚ್ಚುವಂತೆ ಮಾಡುತ್ತಾನೋ। **ಉತ**-ಮತ್ತು। **ಪ್ರಜಾಃ**---ಪುಷ್ಪಫಲಾದಿಗಳನ್ನು। **ಪ್ರಸೂಷು**—ಮಾತೃಸ್ಥಾನೀಯವಾದ ಓಷಧಿಗಳಲ್ಲಿ। **ಅಂತಃ** -ಮಧ್ಯದಲ್ಲಿ। (**ವಿ ರೋಧತ್**—ಇರುವಂತೆ ಮಾಡುತ್ತಾನೋ)। **ಚಿತ್ತಿಃ**—ಜ್ಞಾನದಾಯಕನೋ। **ಅಪಾಂ ದಮೇ** ಉದಕಮಧ್ಯದಲ್ಲಿರುವ ಗೃಹದಲ್ಲಿ। **ವಿಶ್ವಾಯುಃ**—ಸರ್ವವೂ ಅನ್ನವಾಗಿ ಉಳ್ಳ ಅಗ್ನಿಯು ಇದ್ದಾನೆಯೋ। (**ತಮಗ್ನಿಂ**—ಆ ಅಗ್ನಿಯನ್ನು)। **ಸದ್ಮೇವ**—ಮನೆಯನ್ನು ಹೇಗೋ (ಹಾಗೆ)। **ಸಂಮಾಯ**—ಪೂಜಿಸಿ। **ಚಕ್ರುಃ**—(ಕರ್ಮಾದಿಗಳನ್ನು) ಮಾಡುತ್ತಾರೆ.

|| ಭಾವಾರ್ಥ ||

ಅಗ್ನಿಯು ಓಷಧಿ ವನಸ್ಪತಿಗಳಲ್ಲಿ ಇರುವ ಮಹಿಮೆಗಳಿಗೆ ಕಾರಣಭೂತನು, ಮತ್ತು ಅವುಗಳಲ್ಲಿ ಪ್ರಜಾಸ್ಥಾನೀಯ ಫಲಪುಷ್ಪಾದಿಗಳಿಗೆ ಕಾರಣನು, ಎಲ್ಲರಿಗೂ ಜ್ಞಾನದಾಯಕನು, ಜಲಮಧ್ಯದಲ್ಲಿ ವಾಸಮಾಡುವವನು ಮೊದಲು ವಾಸಗೃಹವನ್ನು ಪೂಜಿಸಿ ಅನಂತರ ಇತರ ಪೂಜಾದಿಗಳನ್ನು ಮಾಡುವಂತೆ, ಮೊದಲು ಅಗ್ನಿಯನ್ನು ಸ್ತುತಿವಾಕ್ಯಗಳಿಂದ ಸ್ತುತಿಸಿ, ಅನಂತರ ಯಜ್ಞಾದಿಗಳನ್ನು ಮಾಡುತ್ತಾರೆ.

## English Translation.

The wise (first) adoring Agni, as they do a dwelling, perform sacrifices-(Agni) who implants their (peculiar) virtues in herbs, and places flowers and fruits in mother-like herbs, and who is the giver of knowledge and substenance

॥ ವಿಶೇಷವಿಷಯಗಳು ॥

**ಚಿತ್ತಿಃ—ಅಪಾಂ ದಮೇ—ಚೇತಯಿತಾ ಜ್ಞಾಪಯಿತಾ ಅಗ್ನಿಃ ಜಲಾನಾಂ ಮಧ್ಯ ಭೂತೇ ಗೃಹೇ ।** ಚಿತಿ ಜ್ಞಾನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಚಿತ್ತಿ ಶಬ್ದಕ್ಕೆ ಜ್ಞಾನಪ್ರದನು. ಜ್ಞಾನವನ್ನು ಹೊಂದಿರುವವನು. ಎಂದು ಅರ್ಥವು ಜ್ಞಾನವಂತನಾಗಿಯೂ ಇತರರಿಗೆ ಜ್ಞಾನವನ್ನು ಅನುಗ್ರಹಿಸುವವನೂ ಆದ ಅಗ್ನಿಯು ಉದಕಗಳ ಮಧ್ಯಪ್ರದೇಶವೆಂಬ ಗೃಹದಲ್ಲಿ ವಾಸವಾಡುವವನು ಎಂದು ಅರ್ಥವನ್ನು ಸಾಯಣರು ಹೇಳಿರುವರು

ಸ್ಕಂದಸ್ವಾಮಿಗಳು—**ಸಃ ಚಿತ್ತಿಃ-ಜ್ಞಾತಾ ಅಪಾಂ ವೃಷ್ಟಿಲಕ್ಷಣಾನಾಂ ಅಥವಾ ಅಪ ಇತ್ಯಂತರಿಕ್ಷ-ನಾಮ ।** ಚಿತ್ತಿಃ ಎಂಬುವುದು ಜ್ಞಾನಿಯು ಎಂದು ಅರ್ಥವನ್ನು ಬೋಧಿಸುವುದು. ಅಗ್ನಿಯು ಜ್ಞಾನವಂತನಾಗಿ ವೃಷ್ಟಿಯ ರೂಪದಿಂದ ಇರುವ ಉದಕಗಳ ಮಧ್ಯದಲ್ಲಿ ಇರುವನು. ಅಥವಾ ಅಪಃ ಎಂಬ ಶಬ್ದವು ಅಂತರಿಕ್ಷವನ್ನು ಬೋಧಿಸುವ ಕಾರಣದಿಂದ ಅಂತರಿಕ್ಷಪದದ ಸಾಹಚರ್ಯದಿಂದ ಮೂರುಲೋಕಗಳೂ ಪರಾಮೃಷ್ಟವಾಗಿರುತ್ತವೆ ದಮಶಬ್ದದ ಅರ್ಥವು ಮಧ್ಯಪ್ರದೇಶವಾಚಕವಾಗಿರುವುದು ಮೂರುಲೋಕಗಳ ಯಜ್ಞಗೃಹಗಳ ಮಧ್ಯಪ್ರದೇಶಗಳಲ್ಲಿ ಅಗ್ನಿಯು ಹೋತೃತ್ವೇನ ಸ್ತೋತ್ರವಾಡಲ್ಪಡುವನು ಅಥವಾ ವಾಸಮಾಡುವನು ಎಂದು ಅರ್ಥವನ್ನು ಹೇಳುವರು

**ಸಂಮಾಯ—ಸಮಾನನಂ ಪೂಜಾಂ ಕೃತ್ವಾ, ಸದ್ಮೇವ—**ಮೊದಲು ಮನೆಯನ್ನು ಅಲಂಕರಿಸಿ ಅನಂತರದಲ್ಲಿ ಕರ್ಮಗಳನ್ನು ಆಚರಿಸುವ ಹಾಗೆ ಮೇಧಾವಿಗಳಾದವರು. ಮೊದಲು ಅಗ್ನಿಯನ್ನು ಸ್ತುತಿಗಳಿಂದ ಪೂಜಿಸುವರು ಎಂದು ಅರ್ಥವು

॥ ವ್ಯಾಕರಣಪ್ರಕ್ರಿಯಾ ॥

**ವೀರುತ್ಸು—**ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ, ಧಾತು ವಿ ಉಪಸರ್ಗಪೂರ್ವಕವಾಗಿರುವಾಗ ಈ ಧಾತುವಿಗೆ **ಕ್ವಿಪ್ ಚ** ಎಂಬುದರಿಂದ ಕ್ವಿಪ್ ಪ್ರತ್ಯಯ. **ನ್ಯಂಕ್ವಾದೀನಾಂ ಚ** (ಪಾ. ಸೂ ೭-೩-೫೩) ಎಂಬಲ್ಲಿ ವೀರುಧ್ ಎಂದು ಪಾಠವಾಡಿರುವುದರಿಂದ ವಿ ಎಂಬ ಉಪಸರ್ಗಕ್ಕೆ ದೀರ್ಘವೂ, ಧಾತುವಿನ ಹಕಾರಕ್ಕೆ ಧಕಾರಾ-ದೇಶವೂ ಬರುತ್ತದೆ ವೀರುಧ್ ಎಂದು ಧಕಾರಾಂತವಾದ ಶಬ್ದವಾಗುತ್ತದೆ. ಸಪ್ತಮಿಯಲ್ಲಿ ಸುಪರವಾದಾಗ ಜಶ್ತ್ವ ದಿಂದ ದಕಾರಾದೇಶವೂ **ಖರಿ ಚ** ಸೂತ್ರದಿಂದ ಚರ್ತ್ವದಿಂದ ತಕಾರಾದೇಶವೂ ಬರುತ್ತದೆ. ಕೃದುತ್ತರಪದ ಪ್ರಕೃತಿ-ಸ್ವರದಿಂದ ಉಕಾರವು ಉದಾತ್ತವಾಗುತ್ತದೆ. ಯಾಸ್ಕರೂ ಈ ಶಬ್ದದ ವಿಷಯದಲ್ಲಿ ಹೀಗೆ ಹೇಳಿರುತ್ತಾರೆ **ವೀರುಧ ಓಷಧಯೋ ಭವಂತಿ** (ನಿ ೬-೩) ವನೌಷಧಿಗಳಿಗೆ ವೀರುತ್ ಎಂದು ಹೆಸರು

**ರೋಧತ್**—ರುಧಿರ್ ಆವರಣೇ ಧಾತು ಲೇಟಿನಲ್ಲಿ ಪ್ರಥಮಪುರುಷ ಏಕವಚನದ ತಿ ಪ್ರತ್ಯಯ **ಇತಶ್ಚಲೋಪಃ ಪರಸ್ಮೈಪದೇಷು** ಎಂಬುದರಿಂದ ಅದರ ಇಕಾರಕ್ಕೆ ಲೋಪ **ಲೇಟೋಡಾಟೌ** ಸೂತ್ರದಿಂದ ಅದಕ್ಕೆ ಅಡಾಗಮ **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ ರೋಧತ್ ಎಂದು ರೂಪವಾಗುತ್ತದೆ. ಯಃ ಎಂದು ಹಿಂದೆ ಇರುವುದರಿಂದ **ಯದ್ವೃತ್ತಾನ್ನಿತ್ಯಂ** ಸೂತ್ರದಿಂದ ನಿಘಾತಪ್ರತಿಷೇಧ ಬರುತ್ತದೆ. ಧಾತುಸ್ವರ ಉಳಿಯುತ್ತದೆ.

**ಮಹಿತ್ವಾ**—ನಪುಂಸಕದಲ್ಲಿ ಆದೇಶವಾಗಿ ಬಂದ ದ್ವಿತೀಯಾ ಬಹುವಚನದ ಶಿಗೆ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಲೋಪ

**ಚಿತ್ತಿಃ**—ಚಿತೀ ಸಂಜ್ಞಾನೇ ಧಾತು. **ಸ್ತ್ರಿಯಾಂಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಪಾಂ**—ಅಪ್ ಶಬ್ದದ ಷಷ್ಠೀ ಬಹುವಚನಾಂತರೂಪ. **ಊಡಿದಂಪದಾದಿ**—(ಪಾ ಸೂ ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ವಿಶ್ವಾಯುಃ**—**ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ

**ಸಂಮಾಯ**—ಮಾಙ್ ಮಾನೇ ಶಬ್ದೇ ಚ ಧಾತು. ಪೂರ್ವಕಾಲಕ್ರಿಯಾವಾಚಕವಾದಾಗ, **ಸಮಾಸೇऽನಞ್‌ಪೂರ್ವೇ ಕ್ತ್ವೋಲ್ಯಪ್** (ಪಾ ಸೂ. ೭-೧-೩೭) ಎಂಬುದರಿಂದ ನಞ್ ಪೂರ್ವದಲ್ಲಿ ಇಲ್ಲದಿರುವುದರಿಂದ ಸಮ್ ಎಂಬುದರೊಡನೆ ಸಮಾಸವಾದುದರಿಂದ ಪ್ರಾಪ್ತವಾದ ಕ್ತ್ವಾ ಪ್ರತ್ಯಯಕ್ಕೆ ಲ್ಯಪ್ ಆದೇಶ ಬರುತ್ತದೆ ಅನುಬಂಧವಾದ ಕಕಾರವು ಸ್ಥಾನಿವದ್ಭಾವದಿಂದ ಲ್ಯಪ್ಪಿನಲ್ಲಿಯೂ ಇರುವುದರಿಂದ **ಘುಮಾಸ್ಥಾಗಾಪಾಂ** (ಪಾ ಸೂ. ೬-೪-೬೬) ಎಂಬುದರಿಂದ ಧಾತುವಿಗೆ ಈತ್ವವು ಪ್ರಾಪ್ತವಾದರೆ **ನಲ್ಯಪಿ** (ಪಾ ಸೂ ೬-೪-೬೯) ಎಂಬುದರಿಂದ ಲ್ಯಪ್ ಪರವಾದಾಗ ಈತ್ವಕ್ಕೆ ನಿಷೇಧ ಬರುತ್ತದೆ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ

**ಚಕ್ರುಃ** ಡುಕೃಞ್ ಕರಣೇ ಧಾತು ಲಿಟ್ ಪ್ರಥಮಪುರುಷ ಬಹುವಚನದಲ್ಲಿ ಉಕ್ತರೂಪವಾಗುತ್ತದೆ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ

ಅರವತ್ತೇಳನೇ ಸೂಕ್ತ ಸಮಾಪ್ತವು



# ಅರವತ್ತೆಂಟನೆಯ ಸೂಕ್ತವು

**ಶ್ರೀಣನ್ನಿತಿ ದ್ವೈಪದಂ ದಶರ್ಚಂ ಚತುರ್ಥಂ ಸೂಕ್ತಂ। ತತ್ರಾಧ್ಯಯನತಃ ಪಂಚರ್ಚಂ। ಋಷ್ಯಾದ್ಯಾಃ ಪೂರ್ವವತ್ ॥ ವಿನಿಯೋಗಸ್ತು ಲೈಂಗಿಕಃ ॥**

ಅನುವಾದವು —**ಶ್ರೀಣನ್ನುಪ** ಎಂಬ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು ಇದರಲ್ಲಿ ದ್ವಿಪದಾವಿರಾಟ್‌ಛಂದಸ್ಸಿನ ಹತ್ತು ಋಕ್ಕುಗಳು ಅಥವಾ ಅಧ್ಯಯನಾನುಸಾರವಾಗಿ ಐದು ಋಕ್ಕುಗಳು ಇರುವುವು. ಋಷಿದೇವತಾ ಛಂದಸ್ಸುಗಳು ಹಿಂದಿನ ಸೂಕ್ತದಂತೆ ವಿನಿಯೋಗವು ಲೈಂಗಿಕವು.

## ಸೂಕ್ತ—೬೮

॥ ಓಂ ॥

॥ ಮಂಡಲ—೧ ॥ ಅನುವಾಕ—೧೨ ॥ **ಸೂಕ್ತ—೬೮** ॥

॥ ಅಷ್ಟಕ—೧ ॥ ಅಧ್ಯಾಯ—೫ ॥ ವರ್ಗ—೧೨ ॥

॥ **ಸೂಕ್ತದಲ್ಲಿರುವ ಋಕ್ಸಂಖ್ಯೆ—೫ (೧೦)** ॥

॥ ಋಷಿಃ—ಪಾರಾಶರಃ ಶಾಕ್ತ್ಯಃ ॥

ದೇವತಾ—ಅಗ್ನಿಃ ॥

ಛಂದಃ—ದ್ವಿಪದಾ ವಿರಾಟ್ ॥

॥ ಸಂಹಿತಾಪಾಠಃ ॥

ಶ್ರೀಣನ್ನುಪ ಸ್ಥಾದ್ದಿವಂ ಭುರಣ್ಯುಃ ಸ್ಥಾತುಶ್ಚರಥಮಕ್ತೂ-
ನ್ವ್ಯೂರ್ಣೋತ್ ।
ಪರಿ ಯದೇಷಾಮೇಕೋ ವಿಶ್ವೇಷಾಂ ಭುವದ್ದೇವೋ ದೇವಾನಾಂ
ಮಹಿತ್ವಾ ॥ ೧ ॥ ೨ ॥

॥ ಪದಪಾಠಃ ॥

ಶ್ರೀಣನ್ । ಉಪ । ಸ್ಥಾತ್ । ದಿವಂ । ಭುರಣ್ಯುಃ । ಸ್ಥಾತುಃ । ಚರಥಂ । ಅಕ್ತೂನ್ । ವಿ । ಊರ್ಣೋತ್ ।

ಪರಿ । ಯತ್ । ಏಷಾಂ । ಏಕಃ । ವಿಶ್ವೇಷಾಂ । ಭುವತ್ । ದೇವಃ । ದೇವಾನಾಂ । ಮಹಿ ಽ ತ್ವಾ ॥ ೧ ॥ ೨ ॥

॥ ಸಾಯಣಭಾಷ್ಯಂ ॥

ಭುರಣ್ಯುರ್ಭರ್ತಾ ಧಾರಯಿತಾ ಪಯಃಪ್ರಭೃತಿನಾ ಶ್ರಯಣದ್ರವ್ಯೇಣ ಸೋಮಮಿವ ತೈರ್ಹವಿರ್ಭಿಃ ಶ್ರೀಣನ್ ಮಿಶ್ರಯನ್ದಿವಮುಪ ಸ್ಥಾತ್ ಉಪತಿಷ್ಠತಿ । ಪ್ರಾಪ್ನೋತೀತ್ಯರ್ಥಃ । ಸ್ಥಾತುಃ ಸ್ಥಾವರಂ ಚರಥಂ ಜಂಗಮಂ ತದುಭಯಾತ್ಮಕಂ ಜಗದಕ್ತೂನ್ ಸರ್ವಾ ರಾತ್ರೀಶ್ಚ ವ್ಯೂರ್ಣೋತ್ । ಸ್ವತೇಜಸಾ ವಿಶೇಷೇಣಾಚ್ಛಾದಯತಿ । ಹವಿರ್ವಹನಂ ಕುರ್ವನ್ಸರ್ವಮಪಿ ಜಗತ್ಸ್ವಭಾಸಾ ಪ್ರಕಾಶಯತೀತ್ಯರ್ಥಃ । ವಿಶ್ವೇಷಾಂ ಸರ್ವೇಷಾಂ ದೇವಾನಾಂ ದಾನಾದಿಗುಣಯುಕ್ತಾನಾಮಿಂದ್ರಾದೀನಾಂ ಮಧ್ಯೇ ದೇವೋ ದ್ಯೋತಮಾನ ಏಕ ಏವಾಯಮಗ್ನಿರೇಷಾಂ ಪೂರ್ವೋಕ್ತಾನಾಂ ಸ್ಥಾವರಾದೀನಾಂ ಮಹಿತ್ವಾ ಮಹತ್ತ್ವಾನಿ ಮಾಹಾತ್ಮ್ಯಾನಿ ಯದ್ಯಸ್ಮಾತ್ಪರಿ ಭುವತ್ ಪರಿಭವತಿ ಪರಿಗೃಹ್ಣಾತಿ ಪರಿತೋ ವ್ಯಾಪ್ಯ ವರ್ತತೇ। ಪರಿಪೂರ್ವೋ ಭವತಿಃ ಪರಿಗ್ರಹಾರ್ಥಃ । ಯದ್ವಾ । ಏಷಾಂ ವಿಶ್ವೇಷಾಂ ಸ್ಥಾವರಾದೀನಾಂ ಮಧ್ಯೇ ವರ್ತಮಾನೋಽಯಂ ದೇವೋಽಗ್ನಿರ್ದೇವಾನಾಂ ಮಹತ್ತ್ವಾನಿ ಯದ್ಯದಾ ಪರಿ ಭುವತ್ ಪರಿತೋ ವ್ಯಾಪ್ನೋತಿ । ತದಾನೀಮಿತಿ ಪೂರ್ವತ್ರಾನ್ವಯಃ ॥ ಊರ್ಣೋತ್ ಊರ್ಣುಞ್ ಆಚ್ಛಾದನೇ । ಊರ್ಣೋತೇರ್ವಿಭಾಷಾ । ಪಾ. ೭-೨-೬ । ಇತಿ ವೃದ್ಧೇರ್ವಿಕಲ್ಪಃ ॥

॥ ಪ್ರತಿಪದಾರ್ಥ ॥

**ವಿಶ್ವೇಷಾಂ**--(ದಾನಾದಿಗುಣಯುಕ್ತರಾದ ಇಂದ್ರಾದಿ) ದೇವತೆಗಳ (ಮಧ್ಯದಲ್ಲಿ) । **ದೇವಃ**—ಪ್ರಕಾಶಮಾನನಾದ । **ಏಕಃ**—ಒಬ್ಬನೇ । **ಏಷಾಂ**—(ಚರಸ್ಥಾವರಪ್ರಪಂಚದಲ್ಲಿರುವ) ದೇವತೆಗಳ । **ಮಹಿತ್ವಾ**—ಮಹಾತ್ಮ್ಯಗಳನ್ನು । **ಯತ್**—ಯಾವ ಕಾರಣ । **ಪರಿಭುವತ್**—ವ್ಯಾಪಿಸಿಕೊಂಡಿರುತ್ತಾನೆಯೋ । (**ತತ್**—ಆದಕಾರಣ) । **ಭುರಣ್ಯುಃ**—ಹವಿರ್ವಹನ ಮಾಡುವ ಅಗ್ನಿಯು । **ಶ್ರೀಣನ್**—(ಹವಿಸ್ಸನ್ನು ಇತರ ಪದಾರ್ಥಗಳೊಡನೆ) ಮಿಶ್ರಮಾಡಿ । **ದಿವಂ**—ಸ್ವರ್ಗವನ್ನು । **ಉಪ ಸ್ಥಾತ್**—ಪ್ರಾಪ್ತನಾಗುತ್ತಾನೆ । **ಸ್ಥಾತುಃ**—ಸ್ಥಾವರವಾದ (ಮತ್ತು) । **ಚರಥಂ**—ಚರವಾದ (ಜಗತ್ತೆಲ್ಲವನ್ನೂ) । **ಅಕ್ತೂನ್**—ಎಲ್ಲಾ ರಾತ್ರಿಗಳನ್ನೂ । **ವ್ಯೂರ್ಣೋತ್**--ತನ್ನ ಪ್ರಕಾಶದಿಂದ ಆವರಿಸುತ್ತಾನೆ

॥ ಭಾವಾರ್ಥ ॥

ಇಂದ್ರಾದಿದೇವತೆಗಳ ಮಧ್ಯದಲ್ಲಿ ಪ್ರಕಾಶಮಾನನಾದ, ತನ್ನಲ್ಲಿ ಎಲ್ಲ ದೇವತೆಗಳ ಅಥವಾ ಚರಾಚರಾತ್ಮಕ ಪ್ರಪಂಚದ ಮಹಾತ್ಮೆಗಳನ್ನು ಸೇರಿಸಿಟ್ಟುಕೊಂಡಿರುವ, ದೇವತೆಗಳಿಗೆ ಹವಿಸ್ಸನ್ನು ತೆಗೆದುಕೆಂಡುಹೋಗುವ ಅಗ್ನಿಯು, ಹವಿಸ್ಸನ್ನು ಇತರ ಪದಾರ್ಥಗಳೊಡನೆ ಮಿಶ್ರಮಾಡಿ, ತೆಗೆದುಕೊಂಡು ಸ್ವರ್ಗಕ್ಕೆ ಹೋಗುತ್ತಾ, ಪ್ರಪಂಚವನ್ನೆಲ್ಲಾ ತನ್ನ ಪ್ರಕಾಶದಿಂದ ಬೆಳಗುತ್ತಾನೆ

## English Translation.

The bearer (of the oblations, Agni), mixing them (with other ingredients), ascends to heaven, and clothes all things, moveable and immoveable, and the nights themselves (with light), radiant amongst the Gods, and in himself alone comprehending the virtues of all these (substances).

॥ ವಿಶೇಷವಿಷಯಗಳು ॥

**ಭುರಣ್ಯುಃ– ಹವಿಷಾಂ ಭರ್ತಾ ಧಾರಯಿತಾ ।** ಯಜ್ಞದಲ್ಲಿ ಅರ್ಪಿಸುವ ಹವಿಸ್ಸುಗಳನ್ನು ರಕ್ಷಣೆಮಾಡಿ ಅವುಗಳನ್ನು ಧರಿಸುವ ಅಗ್ನಿಯು, ಸೋಮರಸವನ್ನು ಹಾಲು ಮೊದಲಾದವುಗಳಿಂದ ಬೆರಸಿರುವ ಹಾಗೆ ಆ ಹವಿಸ್ಸುಗಳನ್ನು ಶೇಖರಿಸಿಕೊಂಡು ಅಂತರಿಕ್ಷಲೋಕವನ್ನು ಹೊಂದುವನು ಎಂದು ಸಾಯಣರು ಅರ್ಥಮಾಡಿರುವರು ಸ್ಕಂದಸ್ವಾಮಿಗಳು ಭುರಣ್ಯುಃ-ಎಂಬುವ ಪದಕ್ಕೆ ಕ್ಷಿಪ್ರಗಾಮಿ ಎಂದು ಅರ್ಥವನ್ನು ಮಾಡಿರುತ್ತಾರೆ. ಮತ್ತು ಶ್ರೀಣನ್ ಎಂಬ ಪದವನ್ನು ದಾಹವೆಂಬ ಅರ್ಥದಲ್ಲಿ ಉಪಯೋಗಿಸಿ ದಾಹರೂಪವಾದ ಅಗ್ನಿಯು ತೃಣೌಷಧಿವನಸ್ಪತಿಗಳನ್ನು ಸುಡಲಿ ಎಂದೂ ವಿವರಿಸಿರುವರು

ಸಾಯಣಭಾಷ್ಯದಲ್ಲಿ ಸ್ಥಾವರಜಂಗಮಾತ್ಮಕವಾದ ಜಗತ್ತನ್ನೂ ಮತ್ತು ಎಲ್ಲಾ ರಾತ್ರಿಗಳನ್ನೂ ಕೂಡ ಅಗ್ನಿಯು ತನ್ನ ಕಾಂತಿಗಳಿಂದ ವ್ಯಾಪಿಸಿರುವನು ಎಂದು **ಅಕ್ತೂರ್ನ ಸರ್ವಾ ರಾತ್ರೀಶ್ಚ ವ್ಯೂರ್ಣೋತ್** ಎಂಬ ಪದಕ್ಕೆ ಅರ್ಥವನ್ನು ಮಾಡಿರುವರು ದಾನಾದಿಗುಣವುಳ್ಳ ಇಂದ್ರನೇ ಮೊದಲಾದ ದೇವತೆಗಳ ಮಧ್ಯದಲ್ಲಿ ಪ್ರಕಾಶಿಸುತ್ತಿರುವ ಈ ಅಗ್ನಿಯು ಒಬ್ಬನೇ ಎಲ್ಲರನ್ನೂ ಮೀರಿ ಬಹಳ ಮಹಿಮೆಯುಳ್ಳವನಾಗಿ ಎಲ್ಲವನ್ನೂ ವ್ಯಾಪಿಸಿ ಇರುವನು ಎಂಬುವುದಾಗಿ **ಪರಿಭುವತ್ ಪರಿಭವತಿ ಪರಿಗೃಹ್ಣಾತಿ ಪರಿತೋ ವ್ಯಾಪ್ಯ ವರ್ತತೇ । ಪರಿಪೂರ್ವಃ ಭವತಿಃ ಪರಿಗ್ರಹಾರ್ಥಃ ।** ಎಂದು ಹೇಳಿರುವರು

ಸ್ಕಂದಸ್ವಾಮಿಗಳು **ರಾತ್ರೀಶ್ಚ ತಮೋರೂಪಾಸ್ಸತೀಃ ಸ್ವೇನ ಜ್ಯೋತಿಷಾ ಪ್ರಕಾಶರೂಪಾಃ ಕರೋತಿ । ಸ್ಥಾವರಂ ಜಂಗಮಂ ಚ ರಾತ್ರಿಷು ಪ್ರಕಾಶಯತೀತ್ಯರ್ಥಃ ।** ಕಗ್ಗತ್ತಲೆಯ ರೂಪದಿಂದ ಇರುವ ರಾತ್ರಿಗಳನ್ನೂ ತನ್ನ ಪ್ರಕಾಶದಿಂದ ಅಗ್ನಿಯು ಪ್ರಕಾಶವುಳ್ಳವುಗಳನ್ನಾಗಿ ಮಾಡುವನು ಮತ್ತು ಸ್ಥಿರಚರವಾದ ವಸ್ತುಗಳನ್ನೂ ರಾತ್ರಿಯಲ್ಲಿ ತನ್ನ ಪ್ರಕಾಶದಿಂದ ಎಲ್ಲರೂ ನೋಡುವಂತೆ ಮಾಡುವನು ಎಂದು ಅರ್ಥವನ್ನೂ ಮಾಡುವನು

॥ ವ್ಯಾಕರಣಪ್ರಕ್ರಿಯಾ ॥

**ಶ್ರೀಣನ್**—ಶ್ರೀಞ್ ಪಾಕೇ ಧಾತು ಉಭಯಪದಿ ಕ್ರ್ಯಾದಿ ಲಡರ್ಥದಲ್ಲಿ ಶತೃಪ್ರತ್ಯಯ **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ ಶತೃಪ್ರತ್ಯಯವು **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ತಾಗುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ ಸೂ ೬-೪-೧೧೨) ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಲೋಪ ಬರುತ್ತದೆ **ಅಟ್‌ಕುಪ್ವಾಙ್**—ಸೂತ್ರದಿಂದ ನಕಾರಕ್ಕೆ ಣತ್ವ. ಶ್ರೀಣತ್ ಶಬ್ದವಾಗುತ್ತದೆ ಪ್ರತ್ಯಯಸ್ವರದಿಂದ ಅಕಾರ ಉದಾತ್ತವಾಗುತ್ತದೆ ಪ್ರಥಮಾ ಸು ಪರವಾದಾಗ ನುಮಾಗಮ ಸುಲೋಪ ಅಂತ್ಯತಕಾರಲೋಪ ಶ್ರೀಣನ್ ಎಂದು ರೂಪವಾಗುತ್ತದೆ

**ಸ್ಥಾತ್—ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್ **ಇತಶ್ಚ** ಸೂತ್ರದಿಂದ ತಿಪ್ರತ್ಯಯದ ಇಕಾರಕ್ಕೆ ಲೋಪ **ಗಾತಿಸ್ಥಾಘುಪಾ**—ಎಂಬುದರಿಂದ ಚ್ಲಿಗೆ ಬಂದ ಸಿಚ್ಚಿಗೆ ಲೋಪ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ

**ಊರ್ಣೋತ್** ಊರ್ಣುಞ್ ಆಚ್ಛಾದನೇ ಧಾತು ಲಙ್‌ನಲ್ಲಿ ತಿಪ್ರತ್ಯಯ ಹಿಂದಿನಂತೆ ಅದರ ಇಕಾರಕ್ಕೆ ಲೋಪ ಇಲ್ಲಿ **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್ ಬಂದಮೇಲೆ **ಉತೋವೃದ್ಧಿರ್ಲುಕಿ ಹಲಿ** ಎಂಬುದರಿಂದ ವೃದ್ಧಿಯು ಬರಬೇಕಾಗುತ್ತದೆ ಆದರೆ **ಊರ್ಣೋತೇರ್ವಿಭಾಷಾ** (ಪಾ. ಸೂ ೭-೩-೯೦) ಹಲಾದಿಯಾದ ಪಿತ್ತಾದ ಸಾರ್ವಧಾತುಕ ಪರವಾದಾಗ ವಿಕಲ್ಪವಾಗಿ ವೃದ್ಧಿ ಬರುತ್ತದೆ ಎಂಬುದರಿಂದ ಇಲ್ಲಿ ವೃದ್ಧಿ ಬರುವುದಿಲ್ಲ ಆಗ **ಗುಣೋಽಪೃಕ್ತೇ** (ಪಾ ಸೂ ೭-೩-೯೧) ಎಂಬುದರಿಂದ ಹಿಂದೆ ಹೇಳಿದ ನಿಮಿತ್ತವಿರುವಾಗ ಗುಣ ಬರುತ್ತದೆ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ಊರ್ಣೋತ್ ಎಂದು ರೂಪವಾಗುತ್ತದೆ ಅಜಂತದ ಪರವಲ್ಲರುವುದರಿಂದ ನಿಘಾತಸ್ವರ ಬರುತ್ತದೆ

**ಭುವತ್** – (೧-೫-೬೭-೧, ೨) ಮಂತ್ರದಲ್ಲಿ ವ್ಯಾಖ್ಯಾತವಾಗಿದೆ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಧಾತುಸ್ವರದಿಂದ ಉಕಾರ ಉದಾತ್ತವಾಗುತ್ತದೆ

**ಮಹಿತ್ವಾ**—ಹಿಂದಿನಂತೆ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿ ಲೋಪವಾಗುತ್ತದೆ ॥ ೧-೨ ॥



॥ ಸಂಹಿತಾಪಾಠಃ ॥

ಆದಿತ್ತೇ ವಿಶ್ವೇ ಕ್ರತುಂ ಜುಷಂತ ಶುಷ್ಕಾದ್ಯದ್ದೇವ ಜೀವೋ ಜನಿಷ್ಠಾಃ ।

ಭಜಂತ ವಿಶ್ವೇ ದೇವತ್ವಂ ನಾಮ ಋತಂ ಸಪಂತೋ ಅಮೃತ-
ಮೇವೈಃ ॥ ೩ ॥ ೪ ॥

॥ ಪದಪಾಠಃ ॥

ಆತ್ । ಇತ್ । ತೇ । ವಿಶ್ವೇ । ಕ್ರತುಂ । ಜುಷಂತ । ಶುಷ್ಕಾತ್ । ಯತ್ । ದೇವ । ಜೀವಃ । ಜನಿಷ್ಠಾಃ ।

ಭಜಂತ । ವಿಶ್ವೇ । ದೇವಽತ್ವಂ । ನಾಮ । ಋತಂ । ಸಪಂತಃ । ಅಮೃತಂ । ಏವೈಃ ॥ ೩ ॥ ೪ ॥

॥ ಸಾಯಣಭಾಷ್ಯಂ ॥

ಹೇ ದೇವ ದ್ಯೋತಮಾನಾಗ್ನೇ ಜೀವೋ ಜೀವನ್ಪ್ರಜ್ವಲನ್ ಶುಷ್ಕಾನ್ನೀರಸಾದರಣಿರೂಪಾತ್ಕಾಷ್ಠಾದ್ಯದ್ಯದಾ ಜನಿಷ್ಠಾಃ ಪ್ರಾದುರ್ಭವಸಿ ಮಥನೇನೋತ್ಪದ್ಯಸೇ ಆದಿತ್ ಅನಂತರಮೇವ ವಿಶ್ವೇ ಸರ್ವೇ ಯಜಮಾನಾಸ್ತೇ ತುಭ್ಯಂ ಕ್ರತುಂ ಕರ್ಮ ಜುಷಂತ । ಸೇವಂತೇ । ಅನುತಿಷ್ಠಂತಿ । ತಥಾನುಷ್ಠಾಯ ಚ ವಿಶ್ವೇ ತೇ ಸರ್ವೇ ನಾಮ ನಾಮಕಮೃತಮವಿತಥಂ ದೇವತ್ವಂ ದೇವತಾತ್ವಂ ಭಜಂತ । ಭಜಂತೇ । ಪ್ರಾಪ್ನುವಂತಿ । ಕಿಂ ಕುರ್ವಂತಃ । ಅಮೃತಮಮರಣಂ ತ್ವಾಮೇವೈಸ್ತ್ವಾಂ ಗಂತೃಭಿಃ ಸ್ತೋತ್ರೈಃ ಸಪಂತಃ ಸಮವಯಂತಃ । ಪ್ರಾಪ್ನುವಂತ ಇತ್ಯರ್ಥಃ ॥ ಜುಷಂತೇತ್ಯಾದೀನಿ ತ್ರೀಣ್ಯಾಖ್ಯಾತಾನಿ ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನಾರ್ಥಾನಿ । ಏವೈಃ । ಯಂತಿ ಸ್ತೋತವ್ಯಾಭಿಮುಖ್ಯೇನ ಗಚ್ಛಂತೀತ್ಯೇವಾನಿ ಸ್ತೋತ್ರಾಣಿ । ಇಣ್ ಶೀಙ್ಭ್ಯಾಂ ವನ್ । ಉ. ೧-೧೫೨ ॥

॥ ಪ್ರತಿಪದಾರ್ಥ ॥

**ದೇವ**--ಪ್ರಕಾಶಮಾನನಾದ ಅಗ್ನಿಯೇ । **ಜೀವಃ**—ಜ್ವಲಿಸುತ್ತಾ । **ಶುಷ್ಕಾತ್**—ಒಣಗಿದ । **ಕಾಷ್ಠಾತ್**—ಕಟ್ಟಿಗೆಯಿಂದ (ಅರಣಿಯಿಂದ) । **ಯತ್**—ಯಾವಾಗ । **ಜನಿಷ್ಠಾಃ**—(ಮಥನದಿಂದ) ಉದ್ಭೂತನಾದೆಯೋ । **ಆದಿತ್**—ಅನಂತರವೇ । **ವಿಶ್ವೇ**--ಎಲ್ಲರೂ (ಯಜಮಾನರೂ) । **ತೇ**—ನಿನ್ನ । **ಕ್ರತುಂ**--ಕರ್ಮವನ್ನು । **ಜುಷಂತ**—ಸೇವಿಸುತ್ತಾರೆ (ಯಜ್ಞವನ್ನು ಮಾಡುತ್ತಾರೆ) । **ಅಮೃತಂ**—ಅಮರನಾದ

(ನಿನ್ನನ್ನು) । **ವಿನ್ದೈಃ**—ಪ್ರಾಪ್ತವಾಗುವ (ಸ್ತುತಿಗಳಿಂದ) । **ಸಪಂತಃ**—ಸೇರುವವರಾಗಿ (ಸ್ತುತಿಸುವವರಾಗಿ) । **ವಿಶ್ವೇ**—(ಅವರು) ಎಲ್ಲರೂ । **ನಾಮ**—ನಿಜವಾಗಿಯೂ । **ಋತಂ**—ಯಥಾರ್ಥವಾದ । **ದೇವತ್ವಂ** ದೇವತಾತ್ವವನ್ನು । **ಭಜಂತೆ**—ಹೊಂದುತ್ತಾರೆ

॥ ಭಾವಾರ್ಥ ॥

ಅರಣಿಮಥನದಿಂದ ಪ್ರಜ್ವಲಿಸುತ್ತಾ ಉತ್ಪನ್ನನಾದ ನಿನ್ನನ್ನು ಸ್ತುತಿವಾಕ್ಯಗಳಿಂದ ಸ್ತುತಿಸಿ, ನಿನ್ನ (ನಿನ್ನನ್ನು ಉದ್ದೇಶಮಾಡಿ ಮಾಡುವ) ಕರ್ಮಗಳನ್ನು ಮಾಡಿ, (ನಿನ್ನ ಪ್ರಸಾದದಿಂದ) ನಿಜವಾಗಿಯೂ ದೇವತ್ವವನ್ನು ಪಡೆಯುತ್ತಾರ

## English Translation

O divine Agni, when you are born living from the dry wood, (by attrition), then all (your worshippers) perform the sacred ceremony, and obtain verily true divinity by lauding you, who are immortal, with hymns that reach you

॥ ವಿಶೇಷವಿಷಯಗಳು ॥

**ಜೀವಃ ಪ್ರಜ್ವಲನ್ ಜೀವನ್** । ಅಗ್ನಿಯು ಪ್ರಜ್ವಲಿಸುವವನಾಗಿ ಒಣಗಿರುವ ಕಟ್ಟಿಗೆಯ ರೂಪದಿಂದ ಇರುವ ಅರಣಿಯಿಂದ ಮಥನಮಾಡುವಾಗ ಉತ್ಪನ್ನವಾಗಿ ಇರುವನು ಹೀಗೆ ಇರುವ ಈ ಅಗ್ನಿಯನ್ನು ಯಜ್ಞ ಮಾಡುವ ಯಜಮಾನರುಗಳು ಯಾಗರೂಪವಾದ ಕರ್ಮಗಳ ಆಚರಣೆಯಿಂದ ಸೇವಿಸಿ, ಸ್ತೋತ್ರಮಾಡಿ ದೇವತ್ವವನ್ನು ಹೊಂದುವರು ಅಚೇತನವಾದ ವಸ್ತುವಿನಿಂದ ಉತ್ಪನ್ನನಾಗಿ ಇರುವ ಅಗ್ನಿಯು ತನ್ನನ್ನು ಪೂಜಿಸಿದವರಿಗೆ ದೇವತಾತ್ವವನ್ನು ಅನುಗ್ರಹಿಸುವ ಮಹಿಮೆಯುಳ್ಳವನಾಗಿರುವನು ಸ್ಕಂದಸ್ವಾಮಿಗಳೂ ಈ ಅರ್ಥವನ್ನು ವಿವರಿಸಿರುವರು

ವ್ಯಾಕರಣಪ್ರಕ್ರಿಯಾ

**ತೇ**—ಯುಷ್ಮಚ್ಛಬ್ದಕ್ಕೆ ಚತುರ್ಥೀ ಏಕವಚನದಲ್ಲಿ **ತೇ ಮಯಾವೇಕವಚನಸ್ಯ** (ಪಾ ಸೂ ೮-೧-೨೨) ಎಂಬುದರಿಂದ ಅನುದಾತ್ತವಾದ ತೇ ಎಂಬ ಆದೇಶಬರುತ್ತದೆ

**ಜುಷಂತೆ**—ಜುಷೀ ಪ್ರೀತಿಸೇವನಯೋಃ ಧಾತು ಇದಕ್ಕೆ ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಙ್ ಪ್ರಥಮಪುರುಷ ಬಹುವಚನದಲ್ಲಿ **ಝೋಽಂತಃ** ಎಂಬುದರಿಂದ ಅಂತಾದೇಶ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದ.

**ಶುಷ್ಕಾತ್**—ಶುಷ ಧಾತುವಿಗೆ ನಿಷ್ಠಾತಕಾರ ಪರದಲ್ಲಿರುವಾಗ **ಶುಷಃ ಕಃ** (ಪಾ ಸೂ ೮-೨ ೫೧) ಎಂಬುದರಿಂದ ತಕಾರಕ್ಕೆ ಕಕಾರಾದೇಶ ಬರುತ್ತದೆ

**ಜನಿಷ್ಠಾಃ**—ಜನೀ ಪ್ರಾದುರ್ಭಾವೇ ಹಿಂದಿನಂತೆ ವರ್ತಮಾನಾರ್ಥದಲ್ಲಿ ಲುಙ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ. **ಚ್ಲೇಃ ಸಿಚ್** ಎಂಬುದರಿಂದ ಚ್ಲಿಗೆ ಸಿಚಾದೇಶ ಅದಕ್ಕೆ ಇಡಾಗಮ. **ಆದೇಶಪ್ರ**ಸೂತ್ರದಿಂದ ಅದಕ್ಕೆ ಷತ್ವ. ಷ್ಟುತ್ವದಿಂದ ಪ್ರತ್ಯಯ. ಥಕಾರಕ್ಕೆ ಠಕಾರಾದೇಶ. ಹಿಂದಿನಂತೆ ಅಡಾಗಮ ಬರುವುದಿಲ್ಲ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ

**ಭಜಂತೆ**—ಹಿಂದಿನಂತೆ ವರ್ತಮಾನಾರ್ಥದಲ್ಲಿ ಛಾಂದಸಿಕವಾದ ಲಙ್ ಪಾದಾದಿಯಲ್ಲಿರುವುದರಿಂದ ನಿಘಾತ ಸ್ವರ ಬರುವುದಿಲ್ಲ ಅದುಪದೇಶದ ಪರದಲ್ಲಿರುವುದರಿಂದ **ತಾಸ್ಯನುದಾತ್ತೇತ್**—ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದ

**ಏವೈಃ**—ಯಂತಿ ಸ್ತೋತವ್ಯಾಭಿಮುಖ್ಯೇನ ಗಚ್ಛಂತಿ ಇತಿ ಏವಾನಿ ಸ್ತೋತ್ರಾಣಿ. ಇಣ್ ಗತೌ ಧಾತು. **ಇಣ್ ಶೀಙ್ಭ್ಯಾಂ ವನ್** (ಉ ಸೂ ೧-೧೫೦) ಎಂಬುದರಿಂದ ವನ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿಗೆ ಗುಣ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ನಿತ್‌ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಬಹುವಚನದಲ್ಲಿ **ಏವೈಃ** ಎಂದು ರೂಪವಾಗುತ್ತದ ॥ ೩-೪ ॥



॥ ಸಂಹಿತಾಪಾಠಃ ॥

ಋತಸ್ಯ ಪ್ರೇಷಾ ಋತಸ್ಯ ಧೀತಿರ್ವಿಶ್ವಾಯುರ್ವಿಶ್ವೇ ಅಪಾಂಸಿ ಚಕ್ರುಃ ।

ಯಸ್ತುಭ್ಯಂ ದಾಶಾದ್ಯೋ ವಾ ತೇ ಶಿಕ್ಷಾತ್ತಸ್ಮೈ ಚಿಕಿತ್ವಾನ್ರಯಿಂ ದಯಸ್ವ ॥ ೫ ॥ ೬ ॥

॥ ಪದಪಾಠಃ ॥

**ಋತಸ್ಯ । ಪ್ರೇಷಾಃ । ಋತಸ್ಯ । ಧೀತಿಃ । ವಿಶ್ವಽಆಯುಃ । ವಿಶ್ವೇ । ಅಪಾಂಸಿ । ಚಕ್ರುಃ ।**

**ಯಃ । ತುಭ್ಯಂ । ದಾಶಾತ್ । ಯಃ । ವಾ । ತೇ । ಶಿಕ್ಷಾತ್ । ತಸ್ಮೈ । ಚಿಕಿತ್ವಾನ್ । ರಯಿಂ । ದಯಸ್ವ ॥ ೫ ॥ ೬ ॥**

॥ ಸಾಯಣಭಾಷ್ಯಂ ॥

**ಋತಸ್ಯ ಗತಸ್ಯ ದೇವಯಜನಂ ಪ್ರಾಪ್ತಸ್ಯಾಗ್ನೇಃ ಪ್ರೇಷಾಃ ಪ್ರಕರ್ಷೇಣೇಷ್ಯಮಾಣಾಃ ಸ್ತುತಯಃ ಕ್ರಿಯಂತೇ । ಧೀತಿಃ । ಧೀಯತೇ ಸೋಮಃ ಪೀಯತೇಽಸ್ಮಿನ್ನಿತಿ ಧೀತಿರ್ಯಾಗಃ । ಸೋಽಪಿ ಋತಸ್ಯ ದೇವಯಜನದೇಶಂ ಪ್ರಾಪ್ತಸ್ಯಾಗ್ನೇರೇವ ಕ್ರಿಯತೇ । ಅತಃ ಸೋಽಗ್ನಿರ್ವಿಶ್ವಾಯುಃ । ವಿಶ್ವಂ ಸರ್ವಮಾಯುರನ್ನಂ ಯಸ್ಯ ಸ ತಥಾವಿಧೋ ಭವತಿ । ಅಪಿ ಚಾಸ್ಮೈ ವಿಶ್ವೇ ಸರ್ವೇ ಯಜಮಾನಾ ಅಪಾಂಸಿ ದರ್ಶಪೂರ್ಣಮಾಸಾದೀನಿ ಕರ್ಮಾಣಿ ಚಕ್ರುಃ । ಕುರ್ವಂತಿ । ಹೇ ಅಗ್ನೇ ತುಭ್ಯಂ ಯೋ ದಾಶಾತ್ ಚರುಪುರೋಡಾಶಾದೀನಿ ಹವೀಂಷಿ ದದಾತಿ । ಯೋ ವಾನ್ಯೋಽಪಿ ಯೋ ಯಜಮಾನಸ್ತೇ ಶಿಕ್ಷಾತ್ ತ್ವದೀಯಂ ಕರ್ಮ ಕರ್ತುಂ ಶಕ್ತೋ ಭೂಯಾಸಮಿತೀಚ್ಛತಿ । ಉಭಯವಿಧಾಯ ತಸ್ಮೈ ಯಜಮಾನಾಯ ಚಿಕಿತ್ವಾನ್ ತತ್ಕೃತಮನುಷ್ಠಾನಂ ಜಾನಂಸ್ತ್ವಂ ರಯಿಂ ದಯಸ್ವ । ಧನಂ ದೇಹಿ ॥ ದಾಶಾತ್ । ದಾಶೃ ದಾನೇ । ಲೇಟ್ಯಾಡಾಗಮಃ । ಶಿಕ್ಷಾತ್ । ಶಕ್ಲೃ ಶಕ್ತೌ । ಇಚ್ಛಾರ್ಥೇ ಸನ್ । ಸನಿ ಮೀಮಾಘುರಭಲಭಶಕೇತ್ಯಕಾರಸ್ಯೇಸಾದೇಶಃ । ಪಾ ೭-೪-೫೪ । ಅತ್ರಲೋಪೋಽಭ್ಯಾಸಸ್ಯೇತ್ಯಭ್ಯಾಸಲೋಪಃ । ಸ್ಕೋಃ ಸಂಯೋಗಾದ್ಯೋರಿತಿ ಸಕಾರಲೋಪಃ । ಪೂರ್ವವಲ್ಲೇಟ್ಯಾಡಾಗಮಃ । ಚಿಕಿತ್ವಾನ್ । ಕಿತ ಜ್ಞಾನೇ । ಲಿಟಃ ಕ್ವಸುಃ । ದಯಸ್ವ । ದಯ ದಾನಗತಿರಕ್ಷಣಹಿಂಸಾದಾನೇಷು ॥**

॥ ಪ್ರತಿಪದಾರ್ಥ ॥

**ಋತಸ್ಯ**—(ಯಾಗ ಸ್ಥಳವನ್ನು) ಪ್ರಾಪ್ತನಾದ (ಅಗ್ನಿಯನ್ನು ದ್ದೇಶಿಸಿ) । **ಪ್ರೇಷಾಃ**—ಸ್ತುತಿವಾಕ್ಯಗಳು (ಉಚ್ಚರಿಸಲ್ಪಡುತ್ತವೆ) । **ಧೀತಿಃ**—(ಸೋಮಪಾನವಿಹಿತವಾದ) ಯಾಗವು । **ಋತಸ್ಯ**—ಯಾಗಶಾಲೆಯನ್ನು ಪ್ರಾಪ್ತನಾದ (ಅಗ್ನಿಯನ್ನುದ್ದೇಶಿಸಿಯೇ ಮಾಡುವುದು) । **(ಅತಃ**— ಆದ್ದರಿಂದಲೇ) । **ವಿಶ್ವಾಯುಃ**—ಸಮಸ್ತವೂ ಆಹಾರವಾಗಿ ಉಳ್ಳವನು । **ವಿಶ್ವೇ**—ಎಲ್ಲರೂ (ಯಜಮಾನರು) । **ಅಪಾಂಸಿ**—(ದರ್ಶಪೂರ್ಣಮಾಸಾದಿ) ಕರ್ಮಗಳನ್ನು । **ಚಕ್ರುಃ** ಮಾಡುತ್ತಾರೆ । **ತುಭ್ಯಂ**—(ಅಗ್ನಿಯೇ) ನಿನಗೆ । **ಯಃ**- ಯಾವನು । **ದಾಶಾತ್**- ಪುರೋಡಾಶಾದಿಗಳನ್ನು ಕೊಡುತ್ತಾನೋ । **ಯೋ ವಾ**- ಬೇರೆ ಯಾವನು । **ತೇ** - ನಿನ್ನ । **ಶಿಕ್ಷಾತ್**- ಕರ್ಮಗಳನ್ನು ಮಾಡಲು ಶಕ್ತನಾಗಬೇಕೆಂದು ಇಚ್ಛಿಸುತ್ತಾನೋ । **ತಸ್ಮೈ**- ಅಂತಹ ಯಜಮಾನನಿಗೆ । **ಚಿಕಿತ್ವಾನ್**—ತತ್ಕೃತವಾದ ಕರ್ಮಗಳನ್ನು ತಿಳಿದ ನೀನು । **ರಯಿಂ**— ಧನವನ್ನು । **ದಯಸ್ವ**—ಕೊಡು

। ಭಾವಾರ್ಥ ।

ಯಜ್ಞಶಾಲೆಗೆ ಪ್ರಾಪ್ತನಾದ ನಿನ್ನನ್ನು ಉದ್ದೇಶಿಸಿಯೇ ಸ್ತೋತ್ರಗಳೂ, ಯಜ್ಞಗಳೂ ಮಾಡಲ್ಪಡುವುವು. ಆದರಿಂದಲೇ ನಿನಗೆ ವಿಶ್ವಾಯು (ಸಮಸ್ತವೂ ಆಹಾರವಾಗಿ ಉಳ್ಳವನು) ಎಂದು ಹೆಸರು. ನಿನಗೋಸ್ಕರವೇ ದರ್ಶಪೂರ್ಣಮಾಸಾದಿಗಳನ್ನು ಯಜಮಾನರು ಮಾಡುವುದು ನಿನಗೆ ಚರ್ವಾದಿಗಳನ್ನು ಕೊಡುವವರಿಗೂ, ನಿನ್ನನ್ನುದ್ದೇಶಿಸಿ ಕರ್ಮಮಾಡಬೇಕೆಂದು ಇಚ್ಛಿಸುವವರಿಗೂ ಕೂಡ ನೀನು ಧನಾದಿಗಳನ್ನು ಕೊಡು

## English Translation.

Laudatory hymns are addressed to him when he comes (to the sacrifice); oblations are offered when he comes; he is the source of sustenance unto all, all (worshippers) perform all rites (for him) Do you, Agni, knowing (the thoughts of the worshipper), grant riches to him who presents to you oblations, or who wishes (to be able to present them).

॥ ವಿಶೇಷವಿಷಯಗಳು ॥

**ಪ್ರೈಷಃ—ಪ್ರಕರ್ಷೇಣೇಷ್ಯಮಾಣಾಃ ಸ್ತುತಯಃ ।** ಪ್ರ ಎಂಬ ಉಪಸರ್ಗದ ಸಂಗಡ ಇರುವ ಇಷು ಧಾತುವಿಗೆ ಅತಿಶಯಿತವಾದ ಇಚ್ಛೆಯೆಂದು ಅರ್ಥವಾಗುವುದು. ಅಗ್ನಿಯು ಉದ್ದೇಶ್ಯವಾಗಿ ಆಚರಿಸಲ್ಪಡುವ ಯಜ್ಞರೂಪವಾದ ಕರ್ಮದಲ್ಲಿ ಈ ವಿಧವಾದ ಇಚ್ಛೆಯು ಸ್ತೋತ್ರದಲ್ಲಿ ಪರ್ಯವಸಿತವಾಗುವುದಾದ್ದರಿಂದ ಸ್ತುತಿಗಳು ಎಂದು ಅರ್ಥವು

**ಧೀತಿಃ—ಧೀಯತೇ ಸೋಮಃ ಪೀಯತೇ ಅಸ್ಮಿನ್ನಿತಿ ಧೀತಿಃ । ಯಾಗಃ ।** ಸೋಮಲತೆಯ ರಸವು ಪಾನಮಾಡಲ್ಪಡುವುದರಿಂದ ಯಾಗವು ಧೀತಿಯೆನಿಸಿರುವುದು. ಧೇಟ್ ಪಾನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಸಾಮಾನ್ಯವಾಗಿ ಪೇಯದ್ರವ್ಯವೆಂದೂ ಅರ್ಥವಾಗುವುದಾದರೂ ಇಲ್ಲಿ ವಿಶೇಷಾರ್ಥರೂಪವಾಗಿ ಯಾಗವೆಂಬ ಅರ್ಥವನ್ನು ನಿರ್ದೇಶಮಾಡಿರುತ್ತವೆ

**ವಿಶ್ವಾಯುಃ—ವಿಶ್ವಂ ಸರ್ವಂ ಆಯುರನ್ನಂ ಯಸ್ಯ ।** ಎಲ್ಲಾ ಯಜ್ಞಗಳಲ್ಲಿಯೂ ಹವಿಸ್ಸುಗಳು ಅಗ್ನಿಯಲ್ಲಿಯೇ ಅರ್ಪಿಸಲ್ಪಡುವ ಕಾರಣ ಅಗ್ನಿಯು ವಿಶ್ವಾಯುವೆನಿಸಿರುವನು. ಪ್ರಾಣಿಗಳ ಜೀವಿತಕಾಲವನ್ನು ಬೋಧಿಸುವ ಆಯುಶ್ಶಬ್ದವು ಪ್ರಾಣಧಾರಣರೂಪವಾದ ತತ್ಸಾಧನವೆಂಬ ಅರ್ಥದಲ್ಲಿ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ (ನಿ ೩-೯) ಪಠಿತವಾಗಿರುವುದು. ಎಲ್ಲಾ ಅನ್ನವನ್ನೂ ಸ್ವೀಕರಿಸುವ ಕಾರಣ ಯಾಗವನ್ನು ಮಾಡುವವರಿಗೂ, ದರ್ಶಪೂರ್ಣಮಾಸವೇ ಮೊದಲಾದ ಯಾಗಗಳಲ್ಲಿ ಚರುಪುರೋಡಾಶಾದಿಗಳನ್ನು ಅರ್ಪಿಸುವವರಿಗೂ, ಈ ಪ್ರಕಾರವಾದ ಕರ್ಮಗಳನ್ನು ಆಚರಿಸಲು ಇಚ್ಛೆಯುಳ್ಳ ಯಜಮಾನರಿಗೂ ಧನವನ್ನು ಕೊಡು ಎಂಬುದಾಗಿ **ಅಪಾಂಸಿ, ಶಿಕ್ಷಾತ್** ಎಂಬ ಪದಗಳಿಗೆ ಅರ್ಥವು

॥ ವ್ಯಾಕರಣಪ್ರಕ್ರಿಯಾ ॥

**ಚಕ್ರುಃ**—ಡುಕೃಞ್ ಕರಣೇ ಧಾತು ಲಿಟ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಉಸಾದೇಶ. ಕಿತ್ತಾದುದರಿಂದ ಗುಣಾದಿಗಳು ಬರುವುದಿಲ್ಲ ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಾಶಾತ್**—ದಾಶೃ ದಾನೇ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ರತ್ಯಯ. **ಇತಶ್ಚ ಲೋಪಃ ಪರಸ್ಮೈಪದೇಷು** ಸೂತ್ರದಿಂದ ಇಕಾರಕ್ಕೆ ಲೋಪ **ಲೇಟೋಽಡಾಟೌ** ಎಂಬುದರಿಂದ ಪ್ರತ್ಯಯಕ್ಕೆ ಆಡಾಗಮ. ದಾಶಾತ್ ಎಂದು ರೂಪವಾಗುತ್ತದೆ. ಹಿಂದೆ ಯಃ ಎಂದು ಯಚ್ಛಬ್ದವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ ಲಸಾರ್ವಧಾತುಕವು ಅನುದಾತ್ತವಾದುದರಿಂದ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಶಿಕ್ಷಾತ್** -ಶಕ್ಲೃ ಶಕ್ತೌ ಧಾತು ಇಚ್ಛಾರ್ಥೋರುವಾಗ **ಧಾತೋಃ ಸಮಾನಕರ್ತೃಕಾದಿಚ್ಛಾಯಾಂ ವಾ** ಸೂತ್ರದಿಂದ ಸನ್ ಸನ್ನಂತದಮೇಲೆ ಲೇಟ್‌ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಸನ್ಯಙೋಃ** ಎಂಬುದರಿಂದ ಧಾತುವಿನ ಏಕಾಚಿಗೆ ದ್ವಿತ್ವ. **ಸನಿ ಮೀಮಾ**—(ಪಾ. ಸೂ ೭-೪-೫೪) ಎಂಬುದರಿಂದ ಧಾತುವಿನ ಉತ್ತರಖಂಡದಲ್ಲಿರುವ ಅಕಾರಕ್ಕೆ ಇಸಾದೇಶ **ಅತ್ರಲೋಪೋಽಭ್ಯಾಸಸ್ಯ** (ಪಾ ಸೂ ೭-೪-೫೮) ಎಂಬುದರಿಂದ ಇಸಾದೇಶ ಬಂದಾಗ ಅಭ್ಯಾಸಕ್ಕೆ ಲೋಪ ಶಿಸ್‌ಕ್ ಸ ಎಂದಿರುವಾಗ **ಸ್ಕೋಃ ಸಂಯೋಗಾದ್ಯೋರಂತೇ ಚ** ಎಂಬುದರಿಂದ ಸ ನಿಮಿತ್ತವಾಗಿ ಸಂಯೋಗಾದಿಯಾದ ಸಕಾರಕ್ಕೆ ಲೋಪ. ಕಕಾರವನ್ನು ನಿಮಿತ್ತೀಕರಿಸಿ ಸನ್ನಿನ ಸಕಾರಕ್ಕೆ ಷತ್ವ. (ಕಕಾರಷಕಾರಯೋಗದಿಂದ ಕ್ಷಕಾರ) ಶಿಕ್ಷ ಎಂಬುದು ಸನ್ನಂತವಾಗುತ್ತದೆ. **ಲೇಟೋಽಡಾಟೌ** ಎಂಬುದರಿಂದ ಪ್ರತ್ಯಯಕ್ಕೆ ಆಡಾಗಮ. ಇಲ್ಲಿಯೂ ಯಃ ಎಂಬುದು ಹಿಂದೆ ಇರುವುದರಿಂದ ನಿಘಾತಸ್ವರ ಬರುವುದಿಲ್ಲ ಸನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಚಿಕಿತ್ವಾನ್** – ಕಿತ ಜ್ಞಾನೇ ಧಾತು **ಕ್ವಸುಶ್ಚ** (ಪಾ ಸೂ. ೩-೨-೧೦೭) ಎಂಬುದರಿಂದ ಲಿಟಿಗೆ ಕ್ವಸು ಆದೇಶ ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ **ಕುಹೋಶ್ಚುಃ** ಎಂಬುದರಿಂದ ಚುತ್ವದಿಂದ ಚಕಾರಾದೇಶ. ಚಿಕಿತ್ವಸ್ ಶಬ್ದವಾಗುತ್ತದೆ ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯ ಚಾಽಧಾತೋಃ** ಸೂತ್ರದಿಂದ ಅಸಂತೋಪಧೆಗೆ ದೀರ್ಘ. ಕ್ವಸುವಿನಲ್ಲಿ ಉಗಿತ್ತಾದುದರಿಂದ **ಉಗಿದಚಾಂ**— ಸೂತ್ರದಿಂದ ನುಮಾಗಮ. **ಹಲ್‌ಙ್ಯಾಭ್ಯೋ**— ಸೂತ್ರದಿಂದ ಸುಲೋಪ ಸಂಯೋಗಾಂತಲೋಪದಿಂದ ಸಕಾರಲೋಪ. ಪ್ರತ್ಯಯಸ್ವರದಿಂದ ವಸ್ಸಿನ ಅಕಾರವು ಉದಾತ್ತವಾಗುತ್ತದೆ

**ದಯಸ್ವ**— ದಯ ದಾನಗತಿರಕ್ಷಣಹಿಂಸಾದಾನೇಷು, ಧಾತು ಅನುದಾತ್ತೇತ್ತಾದುದರಿಂದ ಆತ್ಮನೇಪದಿ ಲೋಟ್‌ಮಧ್ಯಮಪುರುಷ ಏಕವಚನದಲ್ಲಿ **ಸವಾಭ್ಯಾಂ ವಾಮೌ** ಎಂಬುದರಿಂದ ಏತ್ವಕ್ಕೆ ವ ಆದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೫-೬ ॥



॥ ಸಂಹಿತಾಪಾಠಃ ॥

ಹೋತಾ ನಿಷತ್ತೋ ಮನೋರಪತ್ಯೇ ಸ ಚಿನ್ನ್ವಾಸಾಂ ಪತೀ
ರಯೀಣಾಂ ।
ಇಚ್ಛಂತ ರೇತೋ ಮಿಥಸ್ತನೂಷು ಸಂ ಜಾನತ ಸ್ವೈರ್ದಕ್ಷೈ-
ರಮೂರಾಃ ॥ ೭ ॥ ೮ ॥

॥ ಪದಪಾಠಃ ॥

ಹೋತಾ । ನಿऽಸತ್ತಃ । ಮನೋಃ । ಅಪತ್ಯೇ । ಸಃ । ಚಿತ್ । ನು । ಆಸಾಂ ।

ಪತಿಃ । ರಯೀಣಾಂ ।

ಇಚ್ಛಂತ । ರೇತಃ । ಮಿಥಃ । ತನೂಷು । ಸಂ । ಜಾನತ । ಸ್ವೈಃ । ದಕ್ಷೈಃ ।

ಅಮೂರಾಃ ॥ ೭ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ಮನೋರಪತ್ಯೇ ಯಜಮಾನಸ್ವರೂಪಾಯಾಂ ಪ್ರಜಾಯಾಂ ಹೋತಾ ದೇವಾನಾಮಹ್ವಾತಾ ಸನ್ ನಿಷತ್ತೋ ನಿಷಣ್ಣಃ । ಮಾನವ್ಯೋ ಹಿ ಪ್ರಜಾಃ । ತೈ ಸಂ. ೫-೧-೫-೬ । ಇತಿ ಹಿ ಬ್ರಾಹ್ಮಣಂ । ಸ ಚಿನ್ನು ಸ ಏವ ತ್ವಮಾಸಾಂ ಪ್ರಜಾನಾಂ ರಯೀಣಾಂ ಗವಾದೀನಾಂ ಧನಾನಾಮಪಿ ಪತಿಃ ಸ್ವಾಮೀ । ಅತಸ್ತಾಃ ಪ್ರಜಾಸ್ತನೂಷ್ವಾತ್ಮೀಯೇಷು ಶರೀರೇಷು ಮಿಥಃ ಸಂಸೃಷ್ಟಮೇಕೀಭೂತಂ ಪುತ್ರರೂಪೇಣ ಪರಿಣತಂ ರೇತೋ ವೀರ್ಯಮಿಚ್ಛಂತ । ಐಚ್ಛನ್ । ತ್ವದನುಗ್ರಹೇಣ ಪುತ್ರಮಲಭಂತೇತಿ ಯಾವತ್ । ಲಬ್ಧಪುತ್ರಾಶ್ಚ ತಾಃ ಪ್ರಜಾ ಅಮೂರಾ ಅಮೂಢಾಃ ಸತ್ಯಃ ಸ್ವೈಃ ಸ್ವಕೀಯೈರ್ದಕ್ಷೈಃ ಸಮರ್ಥೈಃ ಪುತ್ರೈಃ ಸಹ ಸಂ ಜಾನತ । ಸಮ್ಯಗವಗಚ್ಛಂತಿ । ಚಿರಕಾಲಂ ಜೀವಂತೀತ್ಯರ್ಥಃ । ಯದ್ವಾ । ದಕ್ಷಶಬ್ದಃ ಪ್ರಾಣವಾಚೀ । ಪ್ರಾಣೋ ವೈ ದಕ್ಷೋಽಪಾನಃ ಕ್ರತುರಿತಿ ಶ್ರುತೇಃ । ಸ್ವೈರ್ದಕ್ಷೈಃ ಸ್ವಕೀಯೈಃ ಪ್ರಾಣೈರಮೂರಾಃ ಸಂಗತಾಸ್ತ್ವಯೈವ ಸರ್ವಂ ಜಾನಂತಿ ॥ ಇಚ್ಛಂತ । ವ್ಯತ್ಯಯೇನಾತ್ಮನೇಪದಂ । ಜಾನತ । ಛಾಂದಸೋ ಲಙ್ । ಝಸ್ಯಾದಾದೇಶೇ ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಅಮೂರಾಃ । ಮೂರಾ ಅಮೂರೇತ್ಯತ್ರ ಯಾಸ್ಕ ಏವಂ ವ್ಯಾಚಖ್ಯೌ । ಮೂಢಾ ವಯಂ ಸ್ಮೋಽಮೂಢಸ್ತ್ವ-ಮಸಿ । ನಿ. ೬-೮ । ಇತಿ । ಅತೋಽತ್ರಾಪ್ಯಮೂರಶಬ್ದೇನಾಮೂಢತ್ವಮುಚ್ಯತೇ । ವರ್ಣವ್ಯಾಪತ್ತ್ಯಾ ಢಕಾರಸ್ಯ ರೇಫಃ । ಯದ್ವಾ । ಮುರ್ಛಾ ಮೋಹಸಮುಚ್ಛ್ರಾಯಯೋಃ । ಅಸ್ಮಾತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ರಾಲ್ಲೋಪ ಇತಿ ಛಲೋಪಃ । ರೋ ಮತ್ವರ್ಥೀಯಃ । ನ ಮೂರಾ ಅಮೂರಾಃ । ಅಥವಾ । ಅಮ ಗತ್ಯಾದಿಷು । ಅಸ್ಮಾದೌಣಾದಿಕ ಊರನ್ಪ್ರತ್ಯಯಃ ॥

॥ ಪ್ರತಿಪದಾರ್ಥ ॥

(**ಅಗ್ನೇ**--ಅಗ್ನಿಯೇ ನೀನು) । **ಮನೋರಪತ್ಯೇ**—ಯಜಮಾನರೂಪರಾದ ಪ್ರಜೆಗಳಲ್ಲಿ । **ಹೋತಾ**--ದೇವತೆಗಳನ್ನು ಆಹ್ವಾನಿಸುವವನಾಗಿ । **ನಿಷತ್ತಃ**—ಇರುವವನು । **ಸ ಚಿನ್ನು**—ಅದೇ ನೀನು । **ಆಸಾಂ**—ಈ ಪ್ರಜೆಗಳ । **ರಯೀಣಾಂ**--ಧನಾದಿಗಳಿಗೆ । **ಪತಿಃ**—ಸ್ವಾಮಿಯು । **ತನೂಷು**—ಸ್ವಕೀಯ ಶರೀರಗಳಲ್ಲಿ । **ಮಿಥಃ**—ಏಕೀಭೂತವಾದ (ಪುತ್ರರೂಪನಾಗಿ ಪರಿಣತವಾಗುವ) । **ರೇತಃ**—ವೀರ್ಯವನ್ನು । **ಇಚ್ಛಂತ**—ಅಪೇಕ್ಷಿಸುತ್ತಾರೆ । **ಅಮೂರಾಃ**—ಜ್ಞಾನಿಗಳಾಗಿ । **ಸ್ವೈಃ**—ತಮ್ಮ । **ದಕ್ಷೈಃ**—ಸಮರ್ಥರಾದ (ಪುತ್ರರೊಡನೆ) । **ಸ ಜಾನತ**--ಚೆನ್ನಾಗಿ ತಿಳಿದುಕೊಳ್ಳುತ್ತಾರೆ (ಚಿರಕಾಲ ಬಾಳುತ್ತಾರೆ) । (**ಸ್ವೈರ್ದಕ್ಷೈಃ**—ತಮ್ಮ ಪ್ರಾಣಗಳಿಂದ । **ಅಮೂರಾಃ**--ಯುಕ್ತರಾಗಿ । **ಸಂ ಜಾನಂತಿ**—ನಿನ್ನಿಂದ ಎಲ್ಲವನ್ನೂ ತಿಳಿಯುತ್ತಾರೆ)

॥ ಭಾವಾರ್ಥ ॥

ಎಲೈ ಅಗ್ನಿಯೇ ನೀನೇ ಯಜಮಾನರಿಗಾಗಿ ದೇವತೆಗಳನ್ನು ಆಹ್ವಾನಿಸುವವನು ನೀನೇ ಅವರ ಧನಾದಿಗಳಿಗೆ ಸ್ವಾಮಿಯು ನಿನ್ನಿಂದಲೇ ಸಂತಾನಪ್ರದವಾದ ವೀರ್ಯವನ್ನು ಪಡೆಯುತ್ತಾರೆ ತಮ್ಮ ಸಮರ್ಥರಾದ ಪುತ್ರರಿಂದ ಕೂಡಿ (ನಿನ್ನ ಪ್ರಸಾದದಿಂದ) ಚಿರಕಾಲ ಬಾಳುತ್ತಾರೆ

## English Translation

You have abided with the descendants of Manu as the invoker (of the gods), you are indeed the lord of their possessions, They have desired (of you) procreative vigour in their bodies, and associated with their own excellant offsping, they contemplate (all things) undisturbed

॥ ವಿಶೇಷ ವಿಷಯಗಳು ॥

**ಮನೋರಪತ್ಯೇ—ಯಜಮಾನಸ್ವರೂಪಾಯಾಂ ಪ್ರಜಾಯಾಂ** । ತುಕ್, ತೋಕಂ, ತನಯಃ, ಎಂಬ ಹದಿನೈದು ಪುತ್ರನಾಮಗಳ ಮಧ್ಯದಲ್ಲಿ (ನಿ ೨-೨) ಅಪತ್ಯಶಬ್ದವು ಪಠಿತವಾಗಿರುವುದರಿಂದ ಇಲ್ಲಿ ಮನುವಿನ ಅಪತ್ಯವು ಮನುವಿನಿಂದ ಉತ್ಪನ್ನರಾದ ಪ್ರಜೆಗಳು ಮನುಷ್ಯರು ಎಂದು ಅರ್ಥವು **ಮಾನವ್ಯೋ ಹಿ ಪ್ರಜಾಃ** (ತೈ. ಸಂ ೫-೧-೫ ೬) ಎಂದು ಶ್ರುತಿಯು ಬೋಧಿಸುವುದು. ಈ ವಿಧವಾದ ಪ್ರಜೆಯು ಯಜ್ಞಮಾಡುವ ಯಜಮಾನರೂಪದಿಂದ ಇರುವನು. ಇವನು ಯಜ್ಞಮಾಡುವಾಗ ದೇವತೆಗಳನ್ನು ಅವರವರ ಹವಿರ್ಭಾಗದ ಸ್ವೀಕಾರಕ್ಕಾಗಿ ಅಗ್ನಿಯು ರೂಪದಿಂದಲೇ ಆಹ್ವಾನಮಾಡುವನು. ಇದೇ ಅರ್ಥವನ್ನು **ಪ್ರಜಾಯಾಂ ಹೋತಾ ದೇವಾನಾಮಾಹ್ವಾತಾ ಸನ್ ಅಗ್ನಿಃ ನಿಷತ್ತಃ ನಿಷಣ್ಣಃ** ಎಂದು ಹೇಳಿರುತ್ತದೆ

**ಮಿಥಸ್ತನೂಷು ರೇತಃ ಇಚ್ಛಂತ—ಆತ್ಮೀಯೇಷು ಶರೀರೇಷು ಸಂಸೃಷ್ಟಮೇಕೀಭೂತಂ ಪುತ್ರ-ರೂಪೇಣ ಪರಿಣತಂ ವೀರ್ಯಮೈಚ್ಛನ್ ।** ಅಗ್ನಿದೇವನು ಎಲ್ಲಾ ವಿಧವಾದ ಧನಗಳನ್ನೂ ಅನುಗ್ರಹಿಸುವವನಾದಕಾರಣ ಯಜ್ಞಮಾಡುವವರು ತಮ್ಮ ತಮ್ಮ ಶರೀರಗಳಲ್ಲಿ ಸೇರಿಕೊಂಡಿರುವ ಪುತ್ರರ ರೂಪದಿಂದ ಪರಿಣಾಮವನ್ನು ಹೊಂದುವ, ಉದಕರೂಪದಿಂದ ಇರುವ ವೀರ್ಯವನ್ನು ನಿನ್ನ ಅನುಗ್ರಹದಿಂದ ಹೊಂದಲು ಅಪೇಕ್ಷಿಸಿದರು. ಮತ್ತು ಅದನ್ನು ಹೊಂದಿದರು ಎಂದು ಅರ್ಥವು. ರೇತಃ ಶಬ್ದವು ನೂರು ಉದಕನಾಮಗಳ ಮಧ್ಯದಲ್ಲಿ (ನಿ ೨-೨೪) ಉಕ್ತವಾಗಿರುವುದು. ರೇತಸ್ಸೆಂದರೆ ಉದಕವೆಂದು ಅರ್ಥವು **ರೀಯತೇ ಸ್ರವತಿ ಇತಿ ರೇತಃ, ಯದ್ವಾ ವೃಷ್ಟಿಲಕ್ಷಣಾನಾಂ ಅಪಾಂ ದೇವಾನಾಂ ರೇತಸ್ತ್ವಾತ್ ರೇತ ಉಚ್ಯತೇ ।** ಈ ಉದಕವು ಸ್ರವಿಸುವ ಕಾರಣ ರೇತಸ್ಸೆಂಬುದಾಗಿಯೂ, ವೃಷ್ಟಿರೂಪವಾಗಿರುವ ಉದಕಗಳು ದೇವತೆಗಳ ರೇತಸ್ಸಾಗಿರುವುದೆಂಬುದಾಗಿಯೂ ಅರ್ಥವನ್ನು ವಿವರಿಸಿರುವರು. ಈ ಶಬ್ದವು—

**ರಾಜಂತೀ ಅಸ್ಯ ಭುವನಸ್ಯ ರೋದಸೀ ಅಸ್ಮೇ ರೇತಃ ಸಿಂಚತಂ ಯನ್ಮನುರ್ಹಿತಂ ।**

(ಋ. ಸೂ. ೬-೭೦-೨)

**ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ ।**

(ಋ ಸಂ ೧-೧೬೪-೩೬)

ಎಂಬ ಋಕ್ಕುಗಳಲ್ಲಿ ಉದಕವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ

**ದಕ್ಷೈಃ ಅಮೂರಾಃ ಸಂಜಾನಂತ—ಸಮರ್ಥೈಃ ಪುತ್ರೈಃ ಸಹ ಸಮ್ಯಗವಗಚ್ಛಂತಿ ಚಿರಕಾಲಂ ಜೀವಂತೀತ್ಯರ್ಥಃ । ಯದ್ವಾ ದಕ್ಷಶಬ್ದಃ ಪ್ರಾಣ ವಾಚೀ । ಪ್ರಾಣೋ ವೈ ದಕ್ಷೋಽಪಾನಃ ಕ್ರತುಃ (ತೈ. ಸಂ. ೨-೫-೨-೪) ಇತಿ ಶ್ರುತೇಃ । ಸ್ವೈಃ ದಕ್ಷೈಃ ಪ್ರಾಣೈಃ ಅಮೂರಾಃ ಸಂಗತಾಸ್ತ್ವಯ್ಯೈವ ಸರ್ವಂ ಜಾನಂತಿ ।** ಯಜ್ಞಮಾಡುವ-ಯಜಮಾನರುಗಳು ಸಮರ್ಥರಾದ ಮಕ್ಕಳುಗಳೊಡನೆ ಬಹಳ ಕಾಲದವರಿಗೂ ಜೀವಿಸಿರುವರೆಂದು ಅರ್ಥವು. ಅಥವಾ ದಕ್ಷ ಎಂಬ ಶಬ್ದವು **ಪ್ರಾಣೋ ವೈ ದಕ್ಷಃ** ಎಂಬ ತೈತ್ತಿರಿಯ ಶ್ರುತಿಯಲ್ಲಿ ಉಕ್ತವಾಗಿರುವ ಪ್ರಕಾರ ಪ್ರಾಣವಾಚಿಯಾಗಿರುವುದು. ಅಜ್ಞರಾಗಿರುವ ಯಜಮಾನರುಗಳು ತಮ್ಮ ಪ್ರಾಣಗಳೊಡನೆ ಕೂಡಿದವರಾಗಿ ಬಹಳಕಾಲದವರಿಗೂ ನಿನ್ನ ಅನುಗ್ರಹದಿಂದ ಎಲ್ಲವನ್ನೂ ತಿಳಿದು ಇರುವ ಸರ್ವಜ್ಞರಾಗಿರುವರು ಎಂದು ಅರ್ಥವು

**ಅಮೂರಾಃ—ಅಮೂಢಾಃ ।** ಯಾಸ್ಕರು **ಮೂರಾ, ಅಮೂರಾ** ಎಂಬ ಪದಗಳಿಗೆ "**ಮೂಢಾ ವಯಂ ಸ್ಮೋ ಅಮೂಢಸ್ತ್ವಮಸಿ**" (ನಿ ೬-೮) ಎಂಬದಾಗಿ ವ್ಯಾಖ್ಯಾನಮಾಡಿ-ನಾವು ಮೂಢರಾಗಿರುವೆವು ನೀನು ಎಲ್ಲರನ್ನೂ **ತಿಳಿದಿರುವವನಾಗಿ** ಇರುತ್ತೀಯೆ **ಎಂದು** ಅರ್ಥವನ್ನು ಹೇಳಿರುವರು. ಮುರ್ಛಾ **ಮೋಹ ಸಮುಚ್ಛ್ರಾಯಯೋಃ** ಎಂಬದಾಗಿ ಮೋಹವೆಂಬ ಅರ್ಥವುಳ್ಳ ಮುರ್ಛಾಧಾತುವಿನಿಂದ ನಿಷ್ಪನ್ನವಾದ **ಮೂರಾ** ಎಂಬ ಶಬ್ದಕ್ಕೆ ಮೂಢರೆಂದು ಅರ್ಥವು **ನಮೂರಾಃ** ಎಂದರೆ ಮೂಢರಲ್ಲದವರ ಅಮೂರರು ಎಂದು **ಅರ್ಥವು**

ಸ್ಕಂದಸ್ವಾಮಿಗಳು **ಇಚ್ಛಂತ ರೇತಃ** ಎಂಬ ಪದಕ್ಕೆ ಅರ್ಥವನ್ನು ಹೇಳುವಾಗ **ಮಿಥಸ್ತನೂಷು** ಎಂಬ ಪದಕ್ಕೆ **ಸಹಭೂತಾಯಾ ಅಪಿ ನಕೇವಲಾಯಾ ಏವ, ಆತ್ಮೀಯೇಷು ಶರೀರೇಷು, ಸ್ವಶರೀರಂ ವಾ ರೇತಃ ।** ಎಂದು ವ್ಯಾಖ್ಯಾನಮಾಡಿರುವರು

ಪುತ್ರರನ್ನು ಅಪೇಕ್ಷಿಸುವವರು ತಮ್ಮ ಪತ್ನಿಯರ ಮತ್ತು ತಮ್ಮ ಶರೀರದಲ್ಲಿ ರೇತಸ್ಸು ಉಂಟಾಗಲಿ ಎಂದು ಇಚ್ಛಿಪಡುವರು. ಅಗ್ನಿಯಲ್ಲಿ ಹವಿಸ್ಸನ್ನು ಅರ್ಪಣೆಮಾಡಿ ಔರಸಪುತ್ರರನ್ನು ಅಪೇಕ್ಷಿಸುವರು ಇವರು ಅಗ್ನಿಯ ಪ್ರಭಾವವನ್ನು ಚೆನ್ನಾಗಿ ತಿಳಿದಿರುತ್ತಾರೆ. ಆದ್ದರಿಂದಲೇ ಅಗ್ನಿ ಪರಿಚರಣವನ್ನು ಸಮುದಿತರಾಗಿಯೇ ಆಚರಿಸುವರು ಎಂದು ಅರ್ಥವು ಮತ್ತು ದಕ್ಷ ಶಬ್ದವು—**"ಚಿತ್ತಿಂ ದಕ್ಷಸ್ಯ ಸುಭಗತ್ವಂ"** (ಋ ಸಂ. ೨-೨೧-೬) **"ಶ್ರೇಯಾಂಸಂ ದಕ್ಷಂ"** (ಋ. ಸಂ. ೧೦-೩೧-೨) ಎಂಬ ಋಕ್ಕುಗಳಲ್ಲಿ ಉದಾಹರಿಸಿರುವುದರಿಂದ ಮನಸ್ಸು, ಆತ್ಮಾ ಎಂಬ ಅರ್ಥದಲ್ಲಿ ಪ್ರಸಿದ್ಧವಾಗಿರುವುದು ಮನಸ್ಸಿನ ಸಂಬಂಧವಿರುವುದರಿಂದ ಜ್ಞಾನವೆಂಬ ಅರ್ಥದಲ್ಲಿ ಪ್ರಯುಕ್ತವಾಗಿ ತನ್ನ ಮನಸ್ಸಿನಿಂದ ಉತ್ಪನ್ನವಾದ, ಅಥವಾ ತನ್ನಿಂದ ಉಂಟಾದ ಜ್ಞಾನವೆಂದು ಅರ್ಥವು ಎಂದು ವಿವರಿಸಿರುತ್ತಾರೆ **ಅಮೂರಾಃ, ವಿವಿಕ್ತಪ್ರಜ್ಞಾವಂತಃ** ಎಂಬ ಶಬ್ದಕ್ಕೆ ವಿವೇಚನೆಮಾಡುವ ಜ್ಞಾನವುಳ್ಳವರು ಎಂಬುದಾಗಿ ಅರ್ಥವನ್ನು ಹೇಳಿರುವರು

॥ ವ್ಯಾಕರಣಪ್ರಕ್ರಿಯಾ ॥

**ಇಚ್ಛಂತೆ**—ಇಷು ಇಚ್ಛಾಯಾಂ ಧಾತು ಲಟ್‌ನಲ್ಲಿ **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ ಪ್ರಥಮಪುರುಷ ಬಹುವಚನದಲ್ಲಿ **ಝೋಂತಃ** ಎಂಬುದರಿಂದ ಅಂತಾದೇಶ **ಇಷುಗಮಿಯಮಾಂ ಛಃ** (ಪಾ. ಸೂ. ೭-೩-೭೭) ಎಂಬುದರಿಂದ ಧಾತುವಿಗೆ ಛಾದೇಶ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣ ಸ್ವರದಿಂದ ಮಧ್ಯೋದಾತ್ತವಾದ ಶಬ್ದವಾಗುತ್ತದೆ

**ಜಾನತ—**ಜ್ಞಾ ಅವಬೋಧನೇ ಧಾತು **ಛಂದಸಿ ಲುಙ್ ಲಙ್ ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ **ಜ್ಞಾಜನೋರ್ಜಾ** (ಪಾ. ಸೂ ೭-೩-೭೯) ಎಂಬುದರಿಂದ ಧಾತುವಿಗೆ ಜಾ ದೇಶ. ದೀರ್ಘಾಕಾರದ ಪರದಲ್ಲಿರುವುದರಿಂದ **ಆತ್ಮನೇಪದೇಷ್ವನತಃ** ಸೂತ್ರದಿಂದ ಝಪ್ರತ್ಯಯಕ್ಕೆ ಅತಾದೇಶ **ಸಾರ್ವಧಾತುಕಮಪಿತ್** ಸೂತ್ರದಿಂದ ಇದಕ್ಕೆ ಙಿತ್ವ ಅತಿದೇಶಮಾಡಿರುವುದರಿಂದ **ಶ್ನಾಭ್ಯಸ್ತಯೋರಾತಃ** (ಪಾ ಸೂ ೬-೪-೧೧೨) ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಲೋಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಸೂತ್ರದಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಮೂರಾಃ**—ಮೂರಾ ಅಮೂರಾ ಎಂಬಲ್ಲಿ ಯಾಸ್ಕರು ಈ ರೀತಿಯಾಗಿ ವ್ಯಾಖ್ಯಾನಮಾಡಿರುತ್ತಾರೆ-**ಮೂಢಾ ವಯಂ ಸ್ಮೋಽಮೂಢಸ್ತ್ವಮಸಿ** (ನಿರು. ೬-೮) ಢಕಾರಕ್ಕೆ ರೇಫ ಬಂದಿದೆ ಎಂದು ತಾತ್ಪರ್ಯ. ಆದುದರಿಂದ ಇಲ್ಲಿಯೂ ಕೂಡ ಅಮೂರ ಶಬ್ದದಿಂದ ಅಮೂಢತ್ವವು ಉಕ್ತವಾಗುತ್ತದೆ. ವರ್ಣವ್ಯತ್ಯಯದಿಂದ ಢಕಾರಕ್ಕೆ ರೇಫಾದೇಶ. ಅಥವಾ ಮುರ್ಛಾ ಮೋಹಸಮುಚ್ಛ್ರಾಯಯೋಃ ಧಾತು. ಸಂಪದಾದಿಯಲ್ಲಿ ಸೇರಿರುವುದರಿಂದ ಭಾವಾರ್ಥದಲ್ಲಿ **ಸಂಪದಾದಿಭ್ಯಃ ಕ್ವಿಪ್** ಎಂಬುದರಿಂದ ಕ್ವಿಪ್. ಮುರ್ಛ್ ಎಂದಿರುವಾಗ **ರಾಲ್ಲೋಪಃ**

ಎಂಬುದರಿಂದ ಸಂಯೋಗಾಂತ ಛಕಾರಕ್ಕೆ ಲೋಪ ಉಪಧಾ ದೀರ್ಘ ಮತ್ವರ್ಥದಲ್ಲಿ ರ ಬರುತ್ತದೆ. ನ ಮೂರಾ ಅಮೂರಾಃ ಅಥವಾ ಅಮ ಗತ್ಯಾದಿಷು ಧಾತು **ಉಣಾದಯೋಬಹುಲಂ** ಎಂದು ಬಹುಲಗ್ರಹಣಮಾಡಿರುವುದರಿಂದ ಇದಕ್ಕೆ ಉಣಾದಿಸಿದ್ಧವಾದ ಊರನ್ ಪ್ರತ್ಯಯ. ಅಮೂರಾ ಎಂದಾಗುತ್ತದೆ ನಿತ್‌ಪ್ರತ್ಯಯಾಂತವಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೭-೮ ॥



| ಸಂಹಿತಾಪಾಠಃ ||

ಪಿತುರ್ನ ಪುತ್ರಾಃ ಕ್ರತುಂ ಜುಷಂತ ಶ್ರೋಷನ್ಯೇ ಅಸ್ಯ ಶಾಸಂ
ತುರಾಸಃ ।
ವಿ ರಾಯ ಔರ್ಣೋದ್ದುರಃ ಪುರುಕ್ಷುಃ ಪಿಪೇಶ ನಾಕಂ ಸ್ತೃಭಿ-
ರ್ದಮೂನಾಃ ॥ ೯ ॥ ೧೦ ॥

| ಪದಪಾಠಃ ||

ಪಿತುಃ । ನ । ಪುತ್ರಾಃ । ಕ್ರತುಂ । ಜುಷಂತ । ಶ್ರೋಷನ್ । ಯೇ । ಅಸ್ಯ
ಶಾಸಂ । ತುರಾಸಃ ।
ವಿ । ರಾಯಃ । ಔರ್ಣೋತ್ । ದುರಃ । ಪುರುಽಕ್ಷುಃ । ಪಿಪೇಶ । ನಾಕಂ ।
ಸ್ತೃಭಿಃ । ದಮೂನಾಃ ॥ ೯ ॥ ೧೦ ॥

॥ ಸಾಯಣಭಾಷ್ಯಂ ॥

ಅಸ್ಯಾಗ್ನೇಃ ಶಾಸಂ ಶಾಸನಂ ತುರಾಸಸ್ತ್ವರಮಾಣಾಃ ಸಂತೋ ಯೇ ಯಜಮಾನಾಃ ಶ್ರೋಷನ್ ಶೃಣ್ವಂತಿ ತೇ ಸರ್ವೇ ತೇನಾನುಶಿಷ್ಟಂ ಕ್ರತುಂ ಕರ್ಮ ಜುಷಂತ । ಸೇವಂತೇ । ತತ್ರ ದೃಷ್ಟಾಂತಃ । ಪಿತುರ್ನ ಪುತ್ರಾಃ । ಯಥಾ ಪುತ್ರಾಃ ಪುರು ಬಹುಲಂ ತ್ರಾಯಕಾಃ ಪುನ್ನಾಮ್ನೋ ನರಕಾದ್ವಾ ರಕ್ಷಕಾಸ್ತನಯಾಃ ಪಿತುರಾಜ್ಞಾಂ ಕುರ್ವಂತಿ ತದ್ವತ್ । ಪುತ್ರಃ ಪುರು ತ್ರಾಯತೇ ನಿಪರಣಾದ್ವಾ ಪುನ್ನರಕಂ ತತಸ್ತ್ರಾಯತ ಇತಿ ವಾ । ನಿ. ೨-೧೧ । ಇತಿ ಯಾಸ್ಕಃ । ಪುರುಕ್ಷುಃ । ಕ್ಷು ಇತ್ಯನ್ನನಾಮ । ಬಹ್ವನ್ನಃ ಸೋಽಗ್ನಿರೇಷಾಂ ಯಜಮಾನಾನಾಂ ದುರೋ ದ್ವಾರಾಣಿ ಯಜ್ಞಸ್ಯ ದ್ವಾರಭೂತಾನಿ ರಾಯೋ ಧನಾನಿ ವ್ಯೃಣೋರ್ತ್ । ವಿವೃಣೋತಿ । ಪ್ರಕಾಶಯತಿ । ದದಾತೀತಿ ಯಾವತ್ । ಅಪಿ ಚ ದಮೂನಾ ದಮೇ ಯಜ್ಞಗೃಹೇ ಮನೋ ಯಸ್ಯ ಸೋಽಗ್ನಿಃ । ನಾಸ್ಮಿನ್ನಕಂ ದುಃಖಮಸ್ತೀತಿ ನಾಕೋ ದ್ಯುಲೋಕಃ । ತಂ । ಸ್ತೃಭಿರಿತಿ ನಕ್ಷತ್ರನಾಮ । ಸ್ತೃಭಿರ್ನಕ್ಷತ್ರೈಃ ಪಿಪೇಶ । ಅವಯವೀಚಕಾರ । ನಕ್ಷತ್ರೈರ್ಯುಕ್ತಮಕರೋದಿತ್ಯರ್ಥಃ ॥ ಶ್ರೋಷನ್ । ಶ್ರು ಶ್ರವಣೇ । ಲೇಟ್ಯಡಾಗಮಃ । ಸಿಬ್ಬಹುಲಂ ಲೇಟೀತಿ ಸಿಪ್ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಇತಶ್ಚ ಲೋಪ ಇತೀಕಾರಲೋಪಃ । ಸಂಯೋಗಾಂತಸ್ಯ ಲೋಪಃ । ಪಿಪೇಶ । ಪಿಶ ಅವಯವೇ ॥

॥ ಪ್ರತಿಪದಾರ್ಥ ॥

**ಅಸ್ಯ**—ಈ ಅಗ್ನಿಯ । **ಶಾಸಂ**—ಶಾಸನವನ್ನು । **ತುರಾಸಃ**—ತ್ವರಾಯುಕ್ತರಾಗಿ । **ಯೇ**—ಯಾವ (ಯಜಮಾನರು) । **ಪುತ್ರಾಃ**—ಪುತ್ರರು । **ಪಿತುರ್ನ**—ತಂದೆಯ (ಅಪ್ಪಣೆಯನ್ನು ಹೇಗೆ) । **ಶ್ರೋಷನ್**—ಕೇಳುತ್ತಾರೋ ಹಾಗೆ । **ಕ್ರತುಂ**—ಅಗ್ನ್ಯುದ್ದಿಷ್ಟಕನಾದ ಕರ್ಮವನ್ನು । **ಜುಷಂತೇ**—ಸೇವಿಸುತ್ತಾರೋ (ಮಾಡುತ್ತಾರೋ) । **(ತೇಷಾಂ**—ಅವರಿಗೆ) । **ಪುರುಕ್ಷುಃ**—ಬಹ್ವನ್ನಪ್ರದನಾದ (ಅಗ್ನಿಯು) । **ದುರಃ**—(ಯಜ್ಞಕ್ಕೆ) ದ್ವಾರಭೂತವಾದ । **ರಾಯಃ**—ಧನಾದಿಗಳನ್ನು । **ವಿ ಔರ್ಣೋತ್**—ಪ್ರಕಾಶಪಡಿಸುತ್ತಾನೆ (ಕೊಡುತ್ತಾನೆ) । **ದಮೂನಾಃ**—ಯಾಗಶಾಲೆಯಲ್ಲೇ ಮನಸ್ಸುಳ್ಳ (ಅಗ್ನಿಯು) । **ನಾಕಂ**—ದ್ಯುಲೋಕವನ್ನು । **ಸ್ತೃಭಿಃ**—ನಕ್ಷತ್ರಗಳಿಂದ । **ಪಿಪೇಶ**—ಅವಯವವುಳ್ಳದ್ದನ್ನಾಗಿ ಮಾಡಿದನು (ಯುಕ್ತವಾದದ್ದನ್ನಾಗಿ ಮಾಡಿದನು)

॥ ಭಾವಾರ್ಥ ॥

ತಂದೆಯ ಆಜ್ಞೆಯನ್ನು ಪುತ್ರರು ಪಾಲಿಸುವಂತೆ ಯಾರು ಅಗ್ನಿಯ ಅಪ್ಪಣೆಗಳಿಗನುಸಾರವಾಗಿ ಯಾಗಾದಿಗಳನ್ನು ಮಾಡುತ್ತಾರೋ ಅವರಿಗೆ ಬಹ್ವನ್ನಪ್ರದನಾದ ಅಗ್ನಿಯು ಯಾಗಸಾಧನವಾದ ಧನಾದಿಗಳನ್ನು ಒದಗಿಸುತ್ತಾನೆ ಯಾಗಶಾಲೆಯಲ್ಲೇ ನೆಟ್ಟಮನಸ್ಸುಳ್ಳ ಇವನು ಆಕಾಶವನ್ನು ನಕ್ಷತ್ರಗಳಿಂದ ತುಂಬುತ್ತಾನೆ

## English Translation

Hastening to obey the commands of Agni, like sons (obedient to the orders) of a father, they celebrate his workship: abounding , in food, Agni sets open before them treasurers that are at the doors of sacrifice, and he who delights in the sacrificial chamber has studded the sky with constellations

। ವಿಶೇಷವಿಷಯಗಳು ।

**ಪಿತುಃ ನ ಪುತ್ರಾಃ—ಯಥಾ ಪುತ್ರಾಃ ಪುರು ಬಹುಲಂ ತ್ರಾಯಕಾಃ ಪುನ್ನಾಮ್ನೋ ನರಕಾದ್ವಾ ರಕ್ಷಕಾಃ ಪಿತುರಾಜ್ಞಾಂ ಕುರ್ವಂತಿ । ಪುತ್ರಃ ಪುರು ತ್ರಾಯತೇ ನಿಪರಣಾದ್ವಾ ಪುನ್ನರಕಂ ತತಸ್ತ್ರಾಯತ ಇತಿ ವಾ (ನಿ. ೨-೧೧) ಇತಿ ಯಾಸ್ಕಃ ।** ಪುತ್ರ ಶಬ್ದವು ಬಹಳವಟ್ಟಿಗೆ ತ್ರಾಣವನ್ನೂ ಉಂಟುಮಾಡುವುದು ಅಥವಾ ಪುತ್ ಎಂಬ ನರಕದಿಂದ ರಕ್ಷಿಸುವುದು ಎಂಬ ಅರ್ಥವನ್ನು ಬೋಧಿಸುವುದು ಈ ಕಾರ್ಯವನ್ನು ಆಚರಿಸುವವರು ಪುತ್ರರೆನಿಸಿರುವರು ಇವರು ಪಿತೃಗಳ ಅಪ್ಪಣೆಯನ್ನು ತಪ್ಪದೆ ನಡೆಸುವವರು ಯಾಸ್ಕರು ಇದೇ ಅರ್ಥವನ್ನು ವಿವರಿಸಿರುವರು ಯಜ್ಞಮಾಡುವವರು ಅಗ್ನಿಯ ಅಪ್ಪಣೆಯನ್ನು ಜಾಗ್ರತೆಯಾಗಿ ಪಾಲಿಸುತ್ತಾ ಅಗ್ನಿಯು ಪ್ರೇರಿಸುವ ಕರ್ಮಗಳೆಲ್ಲವನ್ನೂ ತಂದೆಯ ಅಪ್ಪಣೆಯನ್ನು ಮಕ್ಕಳು ತಪ್ಪದೆ ಪಾಲಿಸುವಂತೆ ಆಚರಿಸುವರು

**ಪುರುಕ್ಷುಃ—ಕ್ಷು ಇತ್ಯನ್ನನಾಮ ।** ಕ್ಷು ಎಂಬ ಶಬ್ದವು ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ (ನಿ ೨-೭) ಪಠಿತವಾಗಿರುವುದು ಪುರು ಬಹಳವಾದ ಕ್ಷು ಅನ್ನವುಳ್ಳವನು, ಅನ್ನವನ್ನು ಕೊಡುವವನು

**ದುರಃ ರಾಯಃ ವಿ ಔರ್ಣೋತ್—ದ್ವಾರಾಣಿ ಧನಾನಿ ದದಾತಿ ।** ಬಹಳ ಅನ್ನವುಳ್ಳ ಅಗ್ನಿಯು ಯಜಮಾನರಿಗೆ ಯಜ್ಞಮಾಡಲು ಸಾಧನವಾದ ಧನವೇ ಮೊದಲಾದವುಗಳನ್ನು ಕೊಡುವನು ವಿ ಎಂಬ ಉಪಸರ್ಗ ಜೊತೆನೆ ಇರುವ ಊರ್ಣುಧಾತುವು ಇಲ್ಲಿ ಪ್ರಕಾಶಪಡಿಸುವುದು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು ಇದರಿಂದ ಕೊಡುವುದು ಎಂಬ ಅರ್ಥವು ಪರ್ಯವಸಿತವಾಗುತ್ತದೆ. ರಾಯಃ ಎಂಬ ಶಬ್ದವು ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ (ನಿ ೨-೧೦) ಉಕ್ತವಾಗಿರುತ್ತದೆ

**ದಮೂನಾಃ--ದಮೇ ಯಜ್ಞಗೃಹೇ ಮನೋ ಯಸ್ಯ—** ದಮ ಎಂದರೆ ಯಜ್ಞ ನಡೆಯುವ ಯಾಗಶಾಲೆಯು ಅಲ್ಲಿ ಮನಸ್ಸನ್ನು ಇರಿಸುವವನು ಅಗ್ನಿಯು ಎಂದು ಅರ್ಥವು

**ನಾಕಂ--ನ ಅಕಂ ದುಃಖಂ ಯಸ್ಮಿನ್ ಅಸ್ತಿ ಇತಿ ನಾಕಂ ದ್ಯುಲೋಕಃ ।** ದುಃಖವು ಇಲ್ಲದಿರುವ ಸ್ಥಳವು, ಸ್ವರ್ಗವು ಎಂದು ಅರ್ಥವು

ಸ್ಕಂದಸ್ವಾಮಿಗಳು, ಕ್ರತು ಶಬ್ದವು ಹನ್ನೊಂದು ಪ್ರಜ್ಞಾನಾಮಗಳ ಮಧ್ಯದಲ್ಲಿ (ನಿ ೩-೧೩) ಉಕ್ತವಾಗಿರುವುದರಿಂದ, ಈ ಶಬ್ದವು ಪ್ರಜ್ಞಾನವೆಂಬ ಅರ್ಥವನ್ನು ಹೇಳುವುದು ಇದರಿಂದ-ತಂದೆಯಿಂದ ಜ್ಞಾನವನ್ನು ಹೊಂದುವ ಹಾಗೆ ಯಜ್ಞಮಾಡುವವರು ಅಗ್ನಿಯಿಂದ ಪ್ರಜ್ಞಾನವಂತರಾಗುತ್ತಾರೆ, **ತುರಾ ಸಃ** ಎಂಬ ಪದವು ಹಿಂಸಾರ್ಥದಲ್ಲಿ ಇರುವ ಕಾರಣಶತ್ರುಗಳನ್ನು ಹಿಂಸೆಮಾಡುತ್ತಾರೆ ಎಂದು ಅರ್ಥವನ್ನು ವಿವರಿಸಿರುವರು ಮತ್ತು **"ಕೃಧಿ ಕ್ಷುಮನ್ತಂ ಜಾಜಂ (ಋ. ವೇ ೨-೪-೮)** ಎಂಬ ಋಕ್ಕಿನಲ್ಲಿ ಹೇಳಿರುವಂತೆ ಕೀರ್ತಿಯುಳ್ಳವನು, ಎಂದೂ **ದಮೂನಾಃ** ಎಂಬ ಪದವು **ದಾಂತೇ ಪುರುಷೇ ವಾ, ದಮೇ ಯಜ್ಞಗೃಹೇ ಮನೋ ಯಸ್ಯೇತಿ ವಾ** ಎಂಬ (ನಿ ೪-೪) ಅರ್ಥದಲ್ಲಿ ಉಕ್ತವಾಗಿರುವುದರಿಂದ ಅಗ್ನಿಯು ಉಪಶಾಂತಿಯುಳ್ಳ ದಾನ್ತಪುರುಷನೆಂದೂ ಧರ್ಮಗಳೆಲ್ಲವೂ ಅಗ್ನಿಯ ಮೂಲಕವಾಗಿರುವ ಕಾರಣ ಧರ್ಮಮೂಲಕಾರಣನಾದ ಅಗ್ನಿಯು ದ್ಯುಲೋಕವನ್ನು ಅಲಂಕರಿಸಿ ಇರುವವನೆಂದೂ **ಪಿಪೇಶ ನಾಕಂ** ಎಂಬ ಶಬ್ದಗಳಿಗೆ ಅರ್ಥವನ್ನು ಹೇಳಿರುವರು

॥ ವ್ಯಾಕರಣಪ್ರಕ್ರಿಯಾ ॥

**ಜುಷಂತ**— ಜುಷೀ ಪ್ರೀತಿಸೇವನಯೋಃ ಧಾತು. ಲಟ್ ಪ್ರಥಮಪುರುಷ ಬಹುವಚನಕ್ಕೆ **ಝೋಂತಃ** ಸೂತ್ರದಿಂದ ಅಂತಾದೇಶ. **ಸರ್ವೇ ವಿಧಯಃ ಛಂದಸಿ ವಿಕಲ್ಪ್ಯಂತೇ** ಎಂಬುದರಿಂದ ಏತ್ವ ಬರುವುದಿಲ್ಲ ಅಥವಾ ಛಾಂದಸವಾಗಿ ಲಙ್ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ತಿಙಂತನಿಘಾತಸ್ವರವೂ ಬರುವುದಿಲ್ಲ

**ಶ್ರೋಷನ್**—ಶ್ರು ಶ್ರವಣೇ ಧಾತು ಲೇಟ್ ಪ್ರಥಮಪುರುಷಬಹುವಚನಕ್ಕೆ ಅಂತಾದೇಶ **ಇತಶ್ಚ ಲೋಪಃ ಪರಸ್ಮೈಪದೇಷು** ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ. ಸಂಯೋಗಾಂತಲೋಪದಿಂದ ತಕಾರ ಲೋಪ ಅಡಾಗಮ **ಸಿಬ್ಬಹುಲಂ ಲೇಟಿ** (ಪಾ. ಸೂ ೩-೧-೩೪) ಎಂಬುದರಿಂದ ಸಿಪ್ **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್ **ಸಾರ್ವಧಾತುಕಾರ್ಧಧಾತುಕಯೋಃ** ಸೂತ್ರದಿಂದ ಧಾತುವಿನ ಇಕ್ಕಿಗೆ ಗುಣ **ಆದೇಶಪ್ರತ್ಯಯಯೋಃ** ಎಂಬುದರಿಂದ ಸಿಪ್ಪಿನ ಸಕಾರಕ್ಕೆ ಷತ್ವ ಶ್ರೋಷನ್ ಎಂದು ರೂಪವಾಗುತ್ತದೆ. **ತಿಙ್ಙತಿಙಃ** ಸೂತ್ರದಲ್ಲಿ ಅತಿಙಃ ಎಂದು ಪರ್ಯುದಾಸಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ

**ಶಾಸಮ್**— ಶಾಸು ಅನುಶಿಷ್ಟೌ ಧಾತು ಶಾಸ್ಯತೇ ಇತಿ ಶಾಸಃ ಘಙ್ ಪ್ರತ್ಯಯ. ಆದ್ಯುದಾತ್ತಸ್ವರ ಬರುತ್ತದೆ

**ಔರ್ಣೋತ್**—ಊರ್ಣುಞ್ ಆಚ್ಛಾದನೇ ಧಾತು ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ **ಗುಣೋಽಪೃಕ್ತೇ** (ಪಾ ಸೂ ೭-೩-೯೧) ಎಂಬುದರಿಂದ ವೃದ್ಧಿಗೆ ಅಪವಾದವಾಗಿ ಉಕಾರಕ್ಕೆ ಗುಣ ಬರುತ್ತದೆ ತಿಙಂತ ನಿಘಾತಸ್ವರ ಬರುತ್ತದೆ

**ಪಿಪೇಶ**—ಪಿಶ ಅವಯವೇ ಧಾತು ಲಿಟ್ ಪ್ರಥಮಪುರುಷ ಏಕವಚನದಲ್ಲಿ **ಪರಸ್ಮೈಪದಾನಾಂ**— ಸೂತ್ರದಿಂದ ಣಲಾದೇಶ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ **ಪುಗಂತಲಘೂಪಧಸ್ಯಚ** ಎಂಬುದರಿಂದ ಧಾತುವಿನ ಉಪಧೆಗೆ ಗುಣ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಣಲ್ ಲಿತ್ತಾದುದರಿಂದ **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಮಧ್ಯೋದಾತ್ತವಾದ ಪದವಾಗುತ್ತದೆ ॥ ೯-೧೦ ॥

ಅರವತ್ತೆಂಟನೇ ಸೂಕ್ತವು ಸಮಾಪ್ತವು



# ಅರವತ್ತೊಂಭತ್ತನೆಯ ಸೂಕ್ತವು

**ಶುಕ್ರ ಇತಿ ದ್ವೈಪದಂ ದಶರ್ಚಮಧ್ಯಯನತಃ ಪಂಚರ್ಚಂ ಪಂಚಮಂ ಸೂಕ್ತಂ ಪರಾಶರಸ್ಯಾರ್ಷಮಾಗ್ನೇಯಂ । ಶುಕ್ರ ಇತ್ಯನುಕ್ರಾಂತಂ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು— **ಶುಕ್ರಃ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ದ್ವಿಪದಾ ವಿರಾಟ್ ಛಂದಸ್ಸಿನ ಹತ್ತು ಋಕ್ಕುಗಳು ಅಥವಾ ಅಧ್ಯಯನಾನುಸಾರವಾಗಿ ಐದು ಋಕ್ಕುಗಳು ಇರುವುವು. ಈ ಸೂಕ್ತಕ್ಕೆ ಪರಾಶರನು ಋಷಿಯು, ಅಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ **ಶುಕ್ರ**— ಎಂದು ಹೇಳಿರುವುದು ವಿನಿಯೋಗವು ಲೈಂಗಿಕವು

## ಸೂಕ್ತ—೬೯

॥ ಓಂ ॥

॥ ಮಂಡಲ—೧ ॥ ಅನುವಾಕ—೧೨ ॥ ಸೂಕ್ತ—೬೯ ॥
॥ ಅಷ್ಟಕ- ೧ ॥ ಅಧ್ಯಾಯ- ೫ ॥ ವರ್ಗ—೧೩ ॥
॥ **ಸೂಕ್ತದಲ್ಲಿರುವ ಋಕ್ಸಂಖ್ಯೆ—೫ (೧೦)** ॥
॥ **ಋಷಿಃ—ಪಾರಾಶರಃ ಶಾಕ್ತ್ಯಃ** ॥
**ದೇವತಾ—ಅಗ್ನಿಃ** ॥
ಛಂದಃ—ದ್ವಿಪದಾ ವಿರಾಟ್ ॥

॥ **ಸಂಹಿತಾಪಾಠಃ** ॥

ಶುಕ್ರಃ ಶುಶುಕ್ವಾँ ಉಷೋ ನ ಜಾರಃ ಪಪ್ರಾ ಸಮೀಚೀ ದಿವೋ ನ ಜ್ಯೋತಿಃ ।
ಪರಿ ಪ್ರಜಾತಃ ಕ್ರತ್ವಾ ಬಭೂಥ ಭುವೋ ದೇವಾನಾಂ ಪಿತಾ ಪುತ್ರಃ ಸನ್ ॥ ೧ ॥ ೨ ॥

|| ಪದಪಾಠಃ ||

ಶುಕ್ರಃ | ಶುಶುಕ್ವಾನ್ | ಉಷಃ | ನ | ಜಾರಃ | ಪಪ್ರಾ | ಸಮೀಚೀ ಇತಿ ಸಂऽಈಚೀ | ದಿವಃ | ನ | ಜ್ಯೋತಿಃ |

ಪರಿ | ಪ್ರऽಜಾತಃ | ಕ್ರತ್ವಾ | ಬಭೂಥ | ಭುವಃ | ದೇವಾನಾಂ | ಪಿತಾ | ಪುತ್ರಃ ಸನ್ || ೧ || ೨ ||

|| ಸಾಯಣಭಾಷ್ಯಂ ||

ಶುಕ್ರಃ ಶುಭ್ರವರ್ಣೋऽಯಮಗ್ನಿರುಷೋ ನ ಜಾರ ಉಷಸೋ ಜರಯಿತಾ ಸೂರ್ಯ ಇವ ಶುಶುಕ್ವಾನ್ ಶೋಚಯಿತಾ ಸರ್ವಸ್ಯ ಪ್ರಕಾಶಯಿತಾ ಭವತಿ | ತಥಾ ಸಮೀಚೀ ಸಂಗತೇ ದ್ಯಾವಾಪೃಥಿವ್ಯೌ ದಿವೋ ನ ಜ್ಯೋತಿರ್ದ್ಯೋತಮಾನಸ್ಯ ಸೂರ್ಯಸ್ಯ ಜ್ಯೋತಿರಿವ ಪಪ್ರಾ | ಸ್ವತೇಜಸಾ ಪೂರಯಿತಾ | ಹೇ ಅಗ್ನೇ ಅತಸ್ತ್ವಂ ಪ್ರಜಾತಃ ಪ್ರಾದುರ್ಭೂತಃ ಸನ್ ಕ್ರತ್ವಾ ಕರ್ಮಣಾ ಯದ್ವಾ ಜ್ಞಾನಹೇತುನಾ ಪ್ರಕಾಶೇನೋಕ್ತಪ್ರಕಾರೇಣ ಸರ್ವಂ ಜಗತ್ಪರಿ ಬಭೂವ | ಪರಿತೋ ವ್ಯಾಪ್ನೋಷಿ | ದಿವ್ಯಂತೀತಿ ದೇವಾ ಋತ್ವಿಜಃ | ತೇಷಾಂ ಪುತ್ರಃ ಸನ್ ಪುನ್ನಾಮ್ನೋ ನರಕಾತ್ತ್ರಾಯಕಃ ಸನ್ ಪಿತಾ ಭುವಃ | ಪಾಲಯಿತಾ ಭವಸಿ | ಯದ್ವಾ | ದೇವಾನಾಮಿಂದ್ರಾದೀನಾಮೇವ ಪುತ್ರಃ ಸನ್ ಪುತ್ರ ಇವ ದೂತೋ ಭೂತ್ವಾ ಪಿತಾ ಹವಿರ್ಭಿಃ ಪಾಲಯಿತಾ ಭವಸಿ || ಶುಶುಕ್ವಾನ್ | ಶುಚ ದೀಪ್ತೌ | ಲಿಟಃ ಕ್ವಸುಃ | ವ್ಯತ್ಯಯೇನ ಕುತ್ವಂ | ಪಪ್ರಾ | ಪ್ರಾ ಪಾಲನಪೂರಣಯೋರಿತ್ಯಸ್ಮಾದಾದೃಗಮಹನಜನ ಇತಿ ಕಿಪ್ರತ್ಯಯಃ | ಸುಪಾಂ ಸುಲುಗಿತಿ ಸೋರ್ಡಾದೇಶಃ | ಸಮೀಚೀ | ಸಂಪೂರ್ವಾದಂಚತೇರ್ಋತ್ವಿಗಿತ್ಯಾದಿನಾ ಕ್ವಿನ್ | ಸಮಃ ಸಮಿ | ಪಾ. ೬-೩-೯೩ | ಇತಿ ಸಮ್ಯಾದೇಶಃ | ಅಂಚತೇಶ್ಚೋಪಸಂಖ್ಯಾನಮಿತಿ ಙೀಪ್ | ಅಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ | ಉದಾತ್ತನಿವೃತ್ತಿಸ್ವರೇಣ ಙೀಪ ಉದಾತ್ತತ್ವಂ | ವಾ ಛಂದಸೀತಿ ಪೂರ್ವಸವರ್ಣ-ದೀರ್ಘತ್ವಂ | ಯದಿ ತು ಸಂऽಈಚೀ ಇತಿ ಪದವಿಭಾಗಃ ಕ್ರಿಯತೇ ತರ್ಹ್ಯದ ಈತ್ | ಪಾ ೬-೪-೧೩೮ | ಇತಿ ವಿಧೀಯಮಾನಮೀತ್ವಂ ಸಮ ಉತ್ತರಸ್ಯಾಪಿ ದ್ರಷ್ಟವ್ಯಂ | ಬಭೂಥ | ಬಭೂಥಾ ತತಂಥ | ಪಾ ೭-೨-೬೪ | ಇತಿ ನಿಪಾತನಾದಿಡಭಾವಃ ||

|| ಪ್ರತಿಪದಾರ್ಥ ||

**ಶುಕ್ರಃ**—ಶುಭ್ರವರ್ಣನಾದ (ಅಗ್ನಿಯು) | **ಉಷಃ**· ಉಷಸ್ಸಿಗೆ | **ಜಾರಃ ನ**—ಜರೆಯನ್ನುಂಟು ಮಾಡುವ ಸೂರ್ಯನಂತೆ | **ಶುಶುಕ್ವಾ**—ಪ್ರಕಾಶಕನು | **ಸಮೀಚೀ**—ಏಕತ್ರಸಂಗತವಾದ ಭೂವ್ಯಾಕಾಶ ಗಳನ್ನು | **ದಿವಃ**—ದೇದೀಪ್ಯಮಾನನಾದ ಸೂರ್ಯನ | **ಜ್ಯೋತಿರ್ನ**—ಪ್ರಕಾಶದಂತೆ | **ಪ್ರಪಾ**—(ತನ್ನ

ತೇಜಸ್ಸಿನಿಂದ) ಪೂರಣಮಾಡುವವನು (ಆದುದರಿಂದ ನೀನು) । **ಪ್ರಜಾತಃ**—ಪ್ರಾದುರ್ಭೂತನಾಗಿ । **ಕ್ರತ್ವಾ**—ಕರ್ಮದಿಂದ (ಜ್ಞಾನಸಾಧನವಾದ ಪ್ರಕಾಶದಿಂದ) । **ಪರಿ ಬಭೂಥ**—(ಜಗತ್ತನ್ನೆಲ್ಲಾ) ವ್ಯಾಪಿಸಿದ್ದೀಯೆ । **ದೇವಾನಾಂ**—(ಇಂದ್ರಾದಿ) ದೇವತೆಗಳಿಗೆ । **ಪುತ್ರಃ ಸನ್**—ಪುತ್ರನಾಗಿ । **ಪಿತಾ ಭುವಃ**—ಪಾಲಕನಾಗಿದ್ದೀಯೆ.

॥ ಭಾವಾರ್ಥ ॥

ಉಷಸ್ಸನ್ನು ನಾಶಮಾಡುವ (ಉಷಃಕಾಲವಾದಮೇಲೆ ಉದಯಿಸುವ) ಸೂರ್ಯನಂತೆ ಎಲ್ಲ ಪದಾರ್ಥಗಳನ್ನೂ ಪ್ರಕಾಶಗೊಳಿಸುವ (ಕಾಣುವಂತೆ ಮಾಡುವ), ಭೂಮ್ಯಾಕಾಶಗಳನ್ನು ತನ್ನ ತೇಜಸ್ಸಿನಿಂದ ಸೂರ್ಯನ ಪ್ರಕಾಶದಂತೆ, ಬೆಳಗುವ, ಎಲೈ ಅಗ್ನಿಯೇ, ಜ್ವಲಿತನಾದ ನೀನು ಜ್ಞಾನಸಾಧನವಾದ ಕಾಂತಿಯಿಂದ ಜಗತ್ತನ್ನೆಲ್ಲಾ ವ್ಯಾಪಿಸಿದ್ದೀಯೇ. ದೇವಾದಿಗಳಿಗೆ ಪುತ್ರನಂತೆ, ಹವಿರಾದಿಗಳನ್ನು ತೆಗೆದುಕೊಂಡುಹೋಗಿ ಕೊಟ್ಟು, ರಕ್ಷಣಮಾಡುತ್ತೀಯೆ.

## English Translation

White shining (Agni), like(the sun), the extinguisher of the dawn, is the illuminator of all, and fills united (heaven and earth with light), like the luste of the radiant (sun). As soon as you manifest, you pervade all the world with devout acts, being (both) the father and son of the Gods.

॥ ವಿಶೇಷವಿಷಯಗಳು ॥

**ಶುಕ್ರಃ—ಶುಭ್ರವರ್ಣಃ** । ಶುಕ್ರ ಎಂಬ ಶಬ್ದವು ಇಲ್ಲಿ ಶುಭ್ರವಾದ ಅಂದರೆ ಬಿಳಿಯದಾದ, ಅಥವಾ ಇನ್ನೊಂದು ಬಣ್ಣವೂ ಬೆರಕೆ ಇಲ್ಲದಿರುವ ವರ್ಣವುಳ್ಳವನು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು- ಶುಕ್ಲ ಶಬ್ದವು ಬಿಳಿಯ ಬಣ್ಣವನ್ನು ಬೋಧಿಸುವುದು. ರಲಯೋರಭೇದಃ ಎಂಬ ನ್ಯಾಯದಿಂದ ಶುಕ್ಲ ಶಬ್ದವು ಶುಕ್ರಃ ಎಂದು ಪ್ರಯುಕ್ತವಾಗಿರುತ್ತದೆ. ಶುಕ್ರ ಶಬ್ದವು ನೂರೊಂದು ಉದಕನಾಮಗಳಲ್ಲಿ (ನಿ ೨-೨೪) ಪಠಿತವಾಗಿರುವುದಾದರೂ ಇಲ್ಲಿ ಶುಭ್ರವರ್ಣವಿಶಿಷ್ಟಃ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ.

**ಉಷೋ ನ ಜಾರಃ— ಉಷಸಃ ಜರಯಿತಾ ಸೂರ್ಯ ಇವ** । ಅಗ್ನಿಯು ಉಷಃ ಕಾಲದಲ್ಲಿ ಯಜ್ಞಮಾಡುವವರು ಅರ್ಪಿಸುವ ಹವಿಸ್ಸುಗಳಿಗಾಗಿ ಉದ್ದೀಪ್ತನಾಗಿ ತನ್ನ ಪ್ರಕಾಶವನ್ನು ಹರಡುವುದರಿಂದ ಉಷೋದೇವಿಗೆ ವಾರ್ಧಕ್ಯವನ್ನು (ಮುಪ್ಪನ್ನು) ಉಂಟುಮಾಡುವ ಸೂರ್ಯನಂತೆ ಅಗ್ನಿಯು ಪ್ರಕಾಶದಿಂದ ಕೂಡಿರುವನು. ಉಷಃಕಾಲದ ಪ್ರಕಾಶವು ಕಡಿಮೆಯಾಗುವುದು ಈ ಕಾಲದಲ್ಲಿಯೇ ಸೂರ್ಯನೂ ಕೂಡ ತನ್ನ ಕಿರಣಗಳ ಕಾಂತಿಯಿಂದ ಉಷಃಕಾಲದ ಕಾಂತಿಯನ್ನು ಕಡಿಮೆಮಾಡುವಕಾರಣ ಜರಯಿತೃತ್ವ (ಮುಪ್ಪನ್ನು ಉಂಟುಮಾಡುವಿಕೆ) ಎಂಬ ಧರ್ಮವನ್ನು ಹೊಂದಿರುವನು. ಜಾರ ಇವ ಎಂಬ ಉಪಮಾನದಿಂದ ಅಗ್ನಿಯೂ, ಸೂರ್ಯನೂ ಕೂಡ ಉಷಸ್ಸಿಗೆ ಮುಪ್ಪನ್ನು ಉಂಟುಮಾಡುವವರೆಂದು ಅರ್ಥವಾಗುತ್ತದೆ. ಆದರೆ “ **ಪುನಃ ಪುನಃ........ಜರಯಂತ್ಯಾಯುಃ** ”

ಎಂಬ (ಋ. ಸಂ. ೧-೯೨-೧೦) ಋಕ್ಕಿನಲ್ಲಿ ಹೇಳುವಂತೆ ಉಷಃಕಾಲವೂ ಕೂಡ ಪ್ರಾಣಿಗಳ ಆಯುಸ್ಸನ್ನು ಅವರವರ ಅನುಭವದಿಂದ ಕಡಿಮೆಮಾಡುವಹಾಗೆ ಅಗ್ನಿಯೂ, ಆದಿತ್ಯನೂ ಕಡಿಮೆಮಾಡುವರು ಎಂದು ಉಷ ಇವ, ಅಗ್ನಿಃ, ಆದಿತ್ಯಃ ಜಾರಃ ಎಂಬ ಅರ್ಥವೂ ಇಲ್ಲಿ ತೋರುತ್ತದೆ ಇದರಿಂದ ಅಲಂಕಾರಾಂತರವೂ ಕಾವ್ಯಶೈಲಿಯಿಂದ ಈ ವೇದ ಭಾಷೆಯಲ್ಲಿ ಉಕ್ತವಾಗಿರುತ್ತದೆ

**ಶುಶುಕ್ವಾನ್—ಸೂರ್ಯ ಇವ ಶೋಚಯಿತಾ ಸರ್ವಸ್ಯ ಪ್ರಕಾಶಯಿತಾ ಭವತಿ** ಶುಚ ದೀಪ್ತೌ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದದಿಂದ ಬಹಳ ಪ್ರಕಾಶವೆಂಬ ಅರ್ಥವೂ, ಆ ಪ್ರಕಾಶದಿಂದ ಕೂಡಿದವನು ಎಂದು ಅರ್ಥವೂ ಆಗುವುದರಿಂದ ಸೂರ್ಯನ ಹಾಗೆ ಈ ಅಗ್ನಿಯು ಎಲ್ಲವನ್ನೂ ತನ್ನ ಪ್ರಕಾಶದಿಂದ ಪ್ರಕಾಶವುಳ್ಳವರನ್ನಾಗಿ ಮಾಡುವನು ಎಂದು ಅರ್ಥವು ಈ ಅರ್ಥವು ಈ ಶಬ್ದದಿಂದ ಉಂಟಾಗಲು ಯಙಂತವಾದ ಶುಚಧಾತುವನ್ನು ಉಪಯೋಗಿಸಿರುವುದೇ ಕಾರಣವಾಗಿರುತ್ತದೆ

**ದಿವೋ ನ ಜ್ಯೋತಿಃ ಪಪ್ರಾ—ದ್ಯೋತಮಾನಸ್ಯ ಸೂರ್ಯಸ್ಯ ಜ್ಯೋತಿರಿವ ದ್ಯಾವಾಪೃಥಿವ್ಯೌ ಸ್ವತೇಜಸಾ ಪೂರಯಿತಾ ।** ಒಟ್ಟಿಗೆ ಇರುವ ಭೂಮ್ಯಂತರಿಕ್ಷದ್ಯುಲೋಕಗಳನ್ನು ತನ್ನ ತೇಜಸ್ಸುಗಳಿಂದ ಬೆಳಗಿಸುವ ಆದಿತ್ಯನ ಹಾಗೆ ಅಗ್ನಿಯೂ ತನ್ನ ಪ್ರಕಾಶಗಳಿಂದ ವ್ಯಾಪಿಸಿ ತುಂಬುವನು ಎಂದು ಅರ್ಥವು.

**ದೇವಾನಾಂ ಪುತ್ರಸ್ಸನ್ ಭುವಃ ಪಿತಾ—ದೇವಾಃ ಋತ್ವಿಜಃ ತೇಷಾಂ ಪುನ್ನಾಮ್ನೋ ನರಕಾತ್ ತ್ರಾಯಕಸ್ಸನ್ ಭುವಃ ಪಾಲಯಿತಾ ಪಿತಾ ಭವಸಿ । ಯದ್ವಾ—ದೇವಾನಾಂ ಇಂದ್ರಾದೀನಾಮೇವ ಪುತ್ರ ಇವ ದೂತೋ ಭೂತ್ವಾ ಪಿತಾ ಹವಿರ್ಭಿಃ ಪಾಲಯಿತಾ ಭವಸಿ ।** ದಿವು ಧಾತುವಿಗೆ ಇರುವ ಅನೇಕವಾದ ಅರ್ಥಗಳಲ್ಲಿ ಪ್ರಕಾಶ, ಮತ್ತು ಸ್ತೋತ್ರಮಾಡುವುದು ಎಂಬ ಎರಡರ್ಥಗಳನ್ನು ಅಂಗೀಕರಿಸಿ ದೀವ್ಯಂತಿ ಪ್ರಕಾಶಿಸುವರು ಅಥವಾ ಪ್ರಕಾಶಗೊಳಿಸುವರು ಅಗ್ನಿಯನ್ನು ಸ್ತೋತ್ರಮಾಡುವವರಾದಕಾರಣ ಋತ್ವಿಜರೆನಿಸುವರು ಪುತ್ರ ಶಬ್ದವು ಪುತ್ ಎಂಬ ನರಕದಿಂದ ತ್ರಾಣವನ್ನು ಉಂಟುಮಾಡಿ ರಕ್ಷಿಸುವುದು ಎಂದು ಪುತ್ರ ಶಬ್ದಕ್ಕೆ ಅರ್ಥವು ಅಗ್ನಿಯು ಯಜ್ಞವನ್ನು ಮಾಡುವ ಯಜಮಾನರನ್ನು ಪುತ್ರವಂತರನ್ನಾಗಿ ಮಾಡುವುದರಿಂದಲೂ, ತನ್ನನ್ನು ಸ್ತುತಿ ಮಾಡುವ ದೇವತೆಗಳಿಗೆ ಹವಿರ್ಭಾಗಗಳನ್ನು ಕೊಡುವುದರಿಂದಲೂ ಇಬ್ಬರಿಗೂ ಪುತ್ರರ ಕಾರ್ಯವನ್ನು ಮಾಡುತ್ತಿರುವನು. ಪಾಲನ, ರಕ್ಷಣವೆಂಬ ಅರ್ಥವುಳ್ಳ ಪ್ಯಾಧಾತುವಿನಿಂದ ನಿಷ್ಪನ್ನವಾದ ಪಿತಾ ಎಂಬ ಶಬ್ದದಿಂದ ಪಾಲಕನು ಎಂದು ಅರ್ಥವಾಗುವುದು, ಭೂಮಿಯಲ್ಲಿ (ವೃಷ್ಟಿಪ್ರದಾನ) ಮಳೆಯನ್ನು ಹುಯ್ಯುವುದೇ ಮೊದಲಾದವುಗಳಿಂದ ಸಸ್ಯಾಭಿವೃದ್ಧಿಯನ್ನೂ ಅನ್ನವನ್ನೂ ಉಂಟುಮಾಡಿ, ಪಿತೃವಿನ ಕಾರ್ಯವನ್ನು ಈ ಅಗ್ನಿಯು ಮಾಡುತ್ತಿರುವನು, ಎಂದು ಅರ್ಥವು ಇಂದ್ರನೇ ಮೊದಲಾದ ದೇವತೆಗಳಿಗೆ ವಿಧೇಯನಾಗಿ ಅವರು ಅಪೇಕ್ಷಿಸುವ ಕರ್ಮಗಳನ್ನು ಪುತ್ರನು ಆಚರಿಸುವ ಹಾಗೆ (ದೂತನಾಗಿ) ಸೇವಕವಾಗಿ ಅಗ್ನಿಯು ಹವಿಸ್ಸುಗಳನ್ನು ಒಯ್ಯುವುದರಿಂದ (ರಕ್ಷಿಸುವ) ಪಾಲನೆಮಾಡುವವನಾದಕಾರಣ ಇವನು ದೇವತೆಗಳಿಗೆ ಪುತ್ರಸದೃಶನಾದ ದೂತನೂ, ಪಾಲನೆಮಾಡುವ ತಂದೆಯೂ ಆಗಿರುವನೆಂದು ಇನ್ನೊಂದು ಅರ್ಥವು.

‖ ವ್ಯಾಕರಣಪ್ರಕ್ರಿಯಾ ‖

**ಶುಶುಕ್ವಾನ್**—ಶುಚ ದೀಪ್ತೌ ಧಾತು. ಲಿಟ್ಟಿನ ಸ್ಥಾನದಲ್ಲಿ **ಕ್ವಸುಶ್ಚ**—ಎಂಬುದರಿಂದ ಕ್ವಸು ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ವ್ಯತ್ಯಯೋ ಬಹುಲಂ** ಎಂಬುದರಿಂದ ಧಾತುವಿನ ಚಕಾರಕ್ಕೆ ಕುತ್ವ. ಶುಶುಕ್ವಸ್ ಶಬ್ದವಾಗುತ್ತದೆ. ಪ್ರಥಮಾ ಸು ಪರವಾದಾಗ ಉಗಿತ್ತಾದುದರಿಂದ **ಉಗಿದಚಾಂ**—ಸೂತ್ರದಿಂದ ನುಮ್. ಉಪಧಾದೀರ್ಘ. ಸುಲೋಪ. ಸಲೋಪ. ಅದಕ್ಕೆ ಉಪರದಲ್ಲಿರುವಾಗ **ದೀರ್ಘಾದಟಿಸಮಾನಪಾದೇ** ಎಂಬುದರಿಂದ ರುತ್ವ. **ಆತೋಽಟಿನಿತ್ಯಂ** ಸೂತ್ರದಿಂದ ಅನುನಾಸಿಕತ್ವ. ಪ್ರತ್ಯಯ-ಸ್ವರ ಬರುತ್ತದೆ.

**ಪಪ್ರಾ**—ಪ್ರಾ ಪಾಲನಪೂರಣಯೋಃ ಧಾತು ಇದಕ್ಕೆ **ಆದೃಗಮಹನಜನಃ**—(ಪಾ ಸೂ. ೩-೨-೧೭೧) ಎಂಬುದರಿಂದ ಕಿ ಪ್ರತ್ಯಯ. ಇದಕ್ಕೆ ಲಿಡ್ವದ್ಭಾವವಿರುವುದರಿಂದ ಧಾತುವಿಗೆ ದ್ವಿತ್ವ **ಉರತ್** ಸೂತ್ರದಿಂದ ಅಭ್ಯಾಸಕ್ಕೆ ಅತ್ವ ರಪರವಾಗಿ ಬಂದಾಗ ಹಲಾದಿಶೇಷ **ಇಕೋ ಯಣಚಿ** ಸೂತ್ರದಿಂದ ಧಾತುವಿನ ಋಕಾರಕ್ಕೆ ಯಣಾದೇಶ. ಪಪ್ರಿ ಶಬ್ದವಾಗುತ್ತದೆ. ಪ್ರಥಮಾ ಸು ಪರವಾದಾಗ **ಸುಪಾಂ ಸುಲುಕ್**— ಸೂತ್ರದಿಂದ ವಿಭಕ್ತಿಗೆ ಡಾದೇಶ ಡಿತ್ತಾದುದರಿಂದ ಸಾಮರ್ಥ್ಯದಿಂದ **ಟಿ**ಲೋಪ. **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಆಕಾರಕ್ಕೆ ಉದಾತ್ತಸ್ವರ ಬರುತ್ತದೆ.

**ಸಮೀಚೀ**—ಅಂಚು ಗತಿಪೂಜನಯೋಃ ಧಾತು. ಸಮ್ ಉಪಸರ್ಗ ಪೂರ್ವದಲ್ಲಿರುವಾಗ **ಋತ್ವಿಕ್-ದಧೃಕ್**—(ಪಾ. ಸೂ. ೩-೨-೫೯) ಸೂತ್ರದಿಂದ ಕ್ವಿನ್ ಪ್ರತ್ಯಯ **ಅನಿದಿತಾಂ ಹಲಉಪ**--ಸೂತ್ರದಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. **ಸಮಃ ಸಮಿ** (ಪಾ. ಸೂ ೬-೩-೯೩) ಎಂಬುದರಿಂದ ಸಮಿಗೆ ಸಮ್ಯಾದೇಶ **ಅಂಚತೇಶ್ಚೋಪಸಂಖ್ಯಾನಮ್**

**ಅಂಚತೇಶ್ಚೇತಿವಕ್ತವ್ಯಮ್** ಎಂಬ ವಚನದಿಂದ ಸ್ತ್ರೀತ್ವ ತೋರುವಾಗ ಙೀಪ್. ಆಗ **ಅಚಃ** ಸೂತ್ರದಿಂದ ಧಾತುವಿನ ಅಕಾರಕ್ಕೆ ಲೋಪ. ಲುಪ್ತಾಕಾರ ಅಂಚುಧಾತು ಪರದಲ್ಲಿರುವುದರಿಂದ **ಚೌ** ಎಂಬ ಸೂತ್ರದಿಂದ ಪೂರ್ವ-ಪದಕ್ಕೆ ದೀರ್ಘ ಸಮೀಚೀ ಎಂದು ರೂಪವಾಗುತ್ತದೆ. ಙೀಪ್ ನಿಮಿತ್ತವಾಗಿ ಧಾತುವಿನ ಉದಾತ್ತ ಅಕಾರ ಲೋಪವಾದುದರಿಂದ ಙೀಪ್ ಪಿತ್ತಾದುದರಿಂದ ಅನುದಾತ್ತವಾದರೂ **ಅನುದಾತ್ತಸ್ಯಚ ಯತ್ರೋದಾತ್ತಲೋಪಃ** ಎಂಬುದರಿಂದ ಉದಾತ್ತವಾಗುತ್ತದೆ ಸಮೀಚೀ+ಔ ಎಂದಿರುವಾಗ **ವಾ ಛಂದಸಿ** ಎಂಬುದರಿಂದ ಪೂರ್ವಸವರ್ಣ-ದೀರ್ಘ ಏಕಾದೇಶವಾಗಿ ಬರುತ್ತದೆ ಪದವಿಭಾಗಮಾಡುವಾಗ ಸಮ್+ಈಚೀ ಎಂದು ವಿಭಾಗಮಾಡುವುದಾದರೆ ಆಗ **ಉದ ಈತ್** (ಪಾ ಸೂ. ೬-೪-೧೩೯) ಎಂಬುದರಿಂದ ವಿಧೀಯಮಾನವಾದ ಈತ್ವವು ಸಮ್ಮಿನ ಪರದಲ್ಲಿಯ ಛಾಂದಸವಾಗಿ ಬರುತ್ತದೆ.

**ದಿವಃ**—**ಊಡಿದಂಪದಾದಿ**— ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಬಭೂಥ**—ಭೂ ಸತ್ತಾಯಾಂ ಧಾತು. ಲಿಟ್ ಮಧ್ಯಮಪುರುಷ ಏಕವಚನದ ರೂಪ. **ಬಭೂಥಾ-ತತಂಥ**—(ಪಾ. ಸೂ. ೭-೨-೬೪) ಎಂಬುದರಿಂದ ನಿಪಾತಮಾಡಿರುವುದರಿಂದ **ಆರ್ಧಧಾತುಕಸ್ಯೇಡ್ವಲಾದೇಃ** ಸೂತ್ರದಿಂದ ಥಲಿಗೆ ಇಡಾಗಮ ಬರುವುದಿಲ್ಲ ‖ ೧-೨ ‖

|| ಸಂಹಿತಾಪಾಠಃ ||

ವೇಧಾ ಅದೃಪ್ತೋ ಅಗ್ನಿರ್ವಿಜಾನನ್ನೂಧರ್ನ ಗೋನಾಂ ಸ್ವಾದ್ಮಾ
ಪಿತೂನಾಂ |
ಜನೇ ನ ಶೇವ ಆಹೂರ್ಯಃ ಸನ್ಮಧ್ಯೇ ನಿಷತ್ತೋ ರಣ್ವೋ
ದುರೋಣೇ || ೩ || ೪ ||

|| ಪದಪಾಠಃ ||

ವೇಧಾಃ | ಅದೃಪ್ತಃ | ಅಗ್ನಿಃ | ವಿऽಜಾನನ್ | ಊಧಃ | ನ | ಗೋನಾಂ |
ಸ್ವಾದ್ಮ | ಪಿತೂನಾಂ |
ಜನೇ | ನ | ಶೇವಃ | ಆऽಹೂರ್ಯಃ | ಸನ್ | ಮಧ್ಯೇ | ನಿऽಸತ್ತಃ | ರಣ್ವಃ |
ದುರೋಣೇ || ೩ || ೪ ||

|| ಸಾಯಣಭಾಷ್ಯಂ ||

ವೇಧಾಃ | ಮೇಧಾವಿನಾಮೈತತ್ | ಮೇಧಾವೀ | ಯದ್ವಾ | ವಿಧಾತಾ ಸರ್ವಸ್ಯ ಕರ್ತಾ | ಅದೃಪ್ತೋ ದರ್ಪರಹಿತೋ ವಿಜಾನನ್ ಕರ್ತವ್ಯಾಕರ್ತವ್ಯವಿಭಾಗಂ ಜಾನನ್ನಗ್ನಿರ್ಗೋನಾಂ ಗವಾಮೂಧರ್ನ ಗೋಸಂಬಂಧಿಪಯಸ ಆಶ್ರಯಭೂತಂ ಸ್ಥಾನಮಿವ ಪಿತೂನಾಮನ್ನಾನಾಂ ಸ್ವಾದ್ಮ ಸ್ವಾದಯಿತಾ ರಸಯಿತಾ | ಯಥಾ ಗೋರೂಧಃ ಪಯಃಪ್ರದಾನೇನ ಸರ್ವಾಣ್ಯನ್ನಾನಿ ಸ್ವಾದೂನಿ ಕರೋತಿ ತದ್ವದಗ್ನಿರಪಿ ಸಮ್ಯಕ್ಪಾಕೇನ ಸರ್ವಾಣ್ಯನ್ನಾನಿ ಸ್ವಾದೂನಿ ಕರೋತೀತ್ಯರ್ಥಃ | ಅಪಿ ಚೈವಂಭೂತೋಽಗ್ನಿರ್ಜನೇ ನ ಶೇವೋ ಜನಪದೇ ಲೋಕಸುಖಕರಃ ಪುರುಷ ಇವ ಮಧ್ಯೇ ಯಜ್ಞೇಷು ಮಧ್ಯ ಆಹೂರ್ಯ ಆಹ್ವಾತವ್ಯಃ ಸನ್ ದುರೋಣೇ ಯಜ್ಞಗೃಹೇ ನಿಷತ್ತೋ ನಿಷಣ್ಣೋ ರಣ್ವೋ ರಮಯಿತಾ ಸ್ತುತ್ಯೋ ವಾ ಭವತಿ || ಗೋನಾಂ | ಗೋಃ ಪಾದಾಂತೇ | ಪಾ. ೭-೧-೫೭ | ಇತ್ಯಪಾದಾಂತೇಽಪಿ ನುಟ್ | ಸ್ವಾದ್ಮ | ಸ್ವಾದ ಆಸ್ವಾದನೇ | ಅಂತರ್ಭಾವಿತಣ್ಯರ್ಥಾದನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ | ಸುಪಾಂ ಸುಲು-

**ಗಿತಿ ಸೋರ್ಲುಕ್ । ಪಿತೂನಾಂ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ । ಆಹೂರ್ಯಃ । ಅಜ್-ಪೂರ್ವಾತ್ ಹ್ವಯತೇರಚೋ ಯದಿತಿ ಯತ್ । ಬಹುಲಂ ಛಂದಸೀತಿ ಸಂಪ್ರಸಾರಣಂ । ಹಲ ಇತಿ ದೀರ್ಘಃ । ರೇಫೋಪಜನಶ್ಛಾಂದಸಃ । ಯತೋಽನಾವ ಇತ್ಯಾದ್ಯುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ವೇಧಾಃ**—ಮೇಧಾವಿಯಾದ (ಸರ್ವಕರ್ತೃವಾದ) । **ಅದೃಪ್ತಃ**—ದರ್ಪರಹಿತನಾದ । **ವಿಜಾನನ್**—ಕರ್ತವ್ಯಾಕರ್ತವ್ಯಜ್ಞಾನವುಳ್ಳ । **ಅಗ್ನಿಃ**—ಅಗ್ನಿಯು । **ಗೋನಾಂ**—ಗೋವುಗಳ । **ಊಧರ್ನ**—ಕೆಚ್ಚಲಿನಂತೆ । **ಪಿತೂನಾಂ**—ಅನ್ನಗಳಿಗೆ । **ಸ್ವಾದ್ಮ**—ರುಚಿಯನ್ನುಂಟುಮಾಡುತ್ತಾನೆ (ಮತ್ತೂ) । **ಜನೇ**—ದೇಶದಲ್ಲಿ । **ಶೇವಃ ನ**—(ಜನಗಳಿಗೆ) ಸುಖಕರವಾದ ಕೆಲಸಗಳನ್ನು ಮಾಡುವವನಂತೆ । **ಮಧ್ಯೇ**—(ಯಜ್ಞಗಳ) ಮಧ್ಯದಲ್ಲಿ । **ಆಹೂರ್ಯಃ**—ಕರೆಯಲ್ಪಡುವವನಾಗಿ । **ದುರೋಣೇ**—ಯಜ್ಞಗೃಹದಲ್ಲಿ । **ನಿಷಣ್ಣಃ**—ಆಸೀನನಾಗಿ । **ರಣ್ವಃ**—ಸುಖಕರನು (ಸ್ತುತ್ಯನು) (ಆಗುತ್ತಾನೆ)

॥ ಭಾವಾರ್ಥ ॥

ಸರ್ವಕರ್ತೃವಾದರೂ ಗರ್ವವಿಲ್ಲದ, ಕರ್ತವ್ಯಾಕರ್ತವ್ಯಜ್ಞಾನವುಳ್ಳ ಅಗ್ನಿಯು, ಹಾಲು ಬೆಣ್ಣೆಗಳಿಗೆ ರುಚಿ ಕೊಡುವಂತೆ, (ಅನ್ನವನ್ನು ಪಚನಮಾಡುವುದರಿಂದ) ರುಚಿಕರವಾಗಿ ಮಾಡುತ್ತಾನೆ ಜನರಿಗೆ ಉಪಕಾರಮಾಡುವ ಮನುಷ್ಯನು ಹೇಗೆ ಆಹೂತನಾಗಿ ಪೂಜಿತನೋ ಹಾಗೆ, ಆಹೂತನಾಗಿ, ಯಜ್ಞಗೃಹದಲ್ಲಿ ಆಸೀನನಾಗಿ, ಸ್ತುತ್ಯನಾಗುತ್ತಾನೆ

## English Translation.

The wise, the humble and discriminating Agni, is the giver of flavour to food, as the udder of cows (gives sweetness to the milk); invited (to the ceremony), he sits in the sacrificial chamber, diffusing happiness, ike a benevolent man, amongst mankind.

॥ ವಿಶೇಷವಿಷಯಗಳು ॥

**ವೇಧಾಃ**—**ಮೇಧಾವಿ ನಾಮೈತತ್ । ಮೇಧಾವೀ ಯದ್ವಾ । ವಿಧಾತಾ ಸರ್ವಸ್ಯ ಕರ್ತಾ ।** ವೇಧಸ್ ಶಬ್ದವು ಇಪ್ಪತ್ತುನಾಲ್ಕು ಮೇಧಾವಿ ನಾಮಗಳಲ್ಲಿ (ನಿ ೩-೧೫) ಉಕ್ತವಾಗಿರುತ್ತದೆ ಉಪಸರ್ಗವು ಧಾತುವಿನ ಸಂಗಡ ಪ್ರಯುಕ್ತವಾಗಿರುವುದರಿಂದ ಧಾರಣಾರ್ಥವಾದ ಧಾತುವು ಬೇರೆಯ ಅರ್ಥವನ್ನು ಬೋಧಿಸುವುದು ಇದರಿಂದ ಮೇಧಾವಿಯು-ಜ್ಞಾನವಂತನೆಂಬ ಅರ್ಥವಾಗುವುದು ಈ ಅರ್ಥದಲ್ಲಿ ಪ್ರಯುಕ್ತವಾಗಿರುವ ಉದಾಹರಣೆಯನ್ನು ಕೊಟ್ಟಿರುವರು.

**ಅಭ್ರಾಜಿ ಶರ್ಧೋ ಮರುತೋ ಯದರ್ಣಸಂ ಮೋಷಥಾ ವೃಕ್ಷಂ ಕಪನೇವ ವೇಧಸಃ ।**

(ಋ. ಸಂ. ೫-೫೪-೬)

**ಸೋಮೋ ನ ವೇಧಾ ಋತಪ್ರಜಾತಃ ಪಶುರ್ನ ಶಿಶ್ವಾ ವಿಭುರ್ದೂರೇಭಾಃ ।**

(ಋ ಸಂ ೧-೬೫-೧೦ )

**ದಿವಕ್ಷಿತ್ಪೂರ್ವೋ ನ್ಯಸಾದಿ ಹೋತಾಪೃಚ್ಛ್ಯೋ ವಿಶ್ವತಿರ್ವಿಕ್ಷು ವೇಧಾಃ**

(ಋ ಸಂ ೧-೬೦-೨)

ಅಗ್ನಿಯು ಪ್ರಜ್ಞಾವಂತನಾಗಿರುವನು ಎಂದು ಅರ್ಥವು ಮತ್ತು ಯಜ್ಞಮಾಡುವವರೇ ಮೊದಲಾದವರೆಲ್ಲರಿಗೂ ಅವರವರ ಇಷ್ಟಾರ್ಥಗಳನ್ನ ಅನುಗ್ರಹಿಸಿ ಎಲ್ಲವನ್ನೂ (ಸೃಷ್ಟಿ) ಹೊಸದಾಗಿ ಉಂಟುಮಾಡುವ ಕಾರಣ ವಿಧಾತೃ ಶಬ್ದವಾಚ್ಯನಾದ ಬ್ರಹ್ಮನೂ ಆಗಿರುವನೆಂದು ತಾತ್ಪರ್ಯವು

**ಗವಾಂ ಊಧರ್ನ ಪಿತೂನಾಂ ಸ್ವಾದ್ಮ—ಗೋ ಸಂಬಂಧಿ ಪಯಸಃ ಆಶ್ರಯಭೂತಂ ಸ್ಥಾನಮಿವ ಅನ್ನಾನಾಂ ಸ್ವಾದಯಿತಾ ರಸಯಿತಾ ।** ನ ಎಂಬುವ ಪದವು ಉಪಮಾವಾಚಕವು, ಇವ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುವುದು ಗೋವುಗಳ ಕೆಚ್ಚಲುಗಳು ರುಚಿಕರವಾಗಿ ಮಾಡುವ ಹಾಲನ್ನು ಕೊಡುವುದರಿಂದ ಪದಾರ್ಥಗಳನ್ನು ರಸವತ್ತಾಗಿ ಮಾಡುವಂತೆ ಅಗ್ನಿಯೂ ಕೂಡ ಚೆನ್ನಾಗಿ ಪದಾರ್ಥಗಳನ್ನು ಪಚನಮಾಡುವುದರಿಂದ ಅವುಗಳು ರುಚಿಕರವಾಗಿಯೂ ರಸವತ್ತಾಗಿಯೂ ಇರುವಂತೆ ಮಾಡುವವನೆಂದು ಅರ್ಥವು ಪಿತು ಶಬ್ದವು ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ (ನಿ. ೩-೯) ಉಕ್ತವಾಗಿರುವುದು ಓಪ್ಯಾಯಿ ಎಂಬ ಧಾತುವಿನಿಂದಲಾಗಲಿ, ಪಾಧಾತುವಿನಿಂದಲಾಗಲಿ ನಿಷ್ಪನ್ನವಾದ ಪಿತು ಶಬ್ದವು ಅನ್ನವೆಂಬ ಅರ್ಥದಲ್ಲಿ ಇಲ್ಲಿ ಪ್ರಯುಕ್ತವಾಗಿರುವಂತೆಯೇ **"ಪಿತುಂ ನು ಸ್ತೋಷಂ"** (ಋ ಸಂ. ೧-೧೮೭-೧) **ಪ್ರಮಂದಿನೇ ಪಿತುಮದರ್ಚತಾ ವಚಃ** (ಋ ಸಂ. ೧-೧೦೧-೧) ಎಂಬ ಋಕ್ಕುಗಳಲ್ಲಿಯೂ ಈ ಅರ್ಥದಲ್ಲಿಯೇ ಪ್ರಯುಕ್ತವಾಗಿರುವುದು

**ಜನೇ ನ ಶೇವಃ—ಜನಪದೇ ಲೋಕಸುಖಕರಃ ಪುರುಷ ಇವ ।** ಶಿಂಬಾತಾ, ಶತರಾ, ಮೊದಲಾದ ಇಪ್ಪತ್ತು ಸುಖನಾಮಗಳ ಮಧ್ಯದಲ್ಲಿ (ನಿ ೩-೧೩) ಶೇವಪದವು ಪಠಿತವಾಗಿರುವುದು ಇಲ್ಲಿ ಸುಖಕರ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವ ಕಾರಣದಿಂದಲೂ, ಜನಶಬ್ದಕ್ಕೆ ಲೋಕವೆಂದು ಅರ್ಥಮಾಡಿರುವುದರಿಂದಲೂ ಅಗ್ನಿಯು ಲೋಕಕ್ಕೆ ಹಿತಕಾರಿಯಾದ ಮನುಷ್ಯನ ಹಾಗೆ ಯಜ್ಞಮಾಡುವವರೇ ಮೊದಲಾದ ಎಲ್ಲರಿಗೂ ಮತ್ತು ಲೋಕಕ್ಕೂ ಕೂಡ ಸುಖವನ್ನು ಉಂಟುಮಾಡುವವನೆಂದು ಅರ್ಥವು.

ಸ್ಕಂದಸ್ವಾಮಿಗಳು—**ಜನೇನ ಶೇವಃ ಜನಯಿತೃತ್ವಾತ್ ಜನಃ ಪಿತಾ । ಪಿತೇವ ಸುಖಕರೋ ಅಗ್ನಿಃ ।** ಜನಶಬ್ದವು ಉತ್ಪತ್ತಿಗೆ ಕಾರಣನಾಗಿರುವುದರಿಂದ ತಂದೆಯು ಎಂಬ ಅರ್ಥವನ್ನು ಬೋಧಿಸುವುದು. ಅಗ್ನಿಯು ತಂದೆಯ ಹಾಗೆ ಸುಖವನ್ನು ಉಂಟುಮಾಡುವವನು ಎಂದು ಅರ್ಥವನ್ನು ಹೇಳುವರು ಮತ್ತು **ಜನಶಬ್ದೋ ಲೋಕವಚನಃ, ದುರೋಣೇ ಮಧ್ಯೇ ಯಜ್ಞಗೃಹೇ ವೇದ್ಯಾಂ ನಿಷತ್ತಃ**

**ರಣ್ವಃ ರಮಣೀಯಃ ಸುಖಃ ।** ದುರೋಣ ಶಬ್ದದ ಅರ್ಥವಾದ ಯಜ್ಞಗೃಹಕ್ಕೂ ಲೋಕವೆಂಬ ಅರ್ಥವುಳ್ಳ ಜನಶಬ್ದಕ್ಕೂ ಉಪಮಾನೋಪಮೇಯಭಾವವನ್ನು ಅಂಗೀಕರಿಸಿ ಲೋಕದಲ್ಲಿ ಅಗ್ನಿಯು ಸುಖವಾಗಿಯೂ, ಸುಖಕರನಾಗಿಯೂ ಇರುವಂತೆ, ಯಜ್ಞಗೃಹದ ವೇದಿಯ ಮಧ್ಯದಲ್ಲಿ ಸುಖವಾಗಿ ಕೂತುಕೊಂಡು ಎಲ್ಲರಿಗೂ ಸುಖಕರನಾಗಿರುವನು ಎಂಬ ಅರ್ಥವನ್ನು ಉಪಪಾದನೆ ಮಾಡಿರುವರು

**ದುರೋಣೆ**—ದುರೋಣ ಶಬ್ದವು ಇಪ್ಪತ್ತೆರಡು ಗೃಹನಾಮಗಳ ಮಧ್ಯದಲ್ಲಿ (ನಿ. ೩-೧೩) ಉಕ್ತವಾಗಿರುವುದರಿಂದ ಇಲ್ಲಿ ಯಜ್ಞಗೃಹವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು.

ಸ್ಕಂದಸ್ವಾಮಿಗಳು—**ಅಹುರ್ಯಃ—ಚಂಚಲತ್ವಾತ್ ಜ್ವಾಲಾನಾಂ ಕುಟಿಲಃ** ಅಗ್ನಿಯ ಜ್ವಾಲೆಗಳು ಕುಟಿಲವಾಗಿ (ವಕ್ರವಾಗಿ) ಸ್ಥಿರವಾಗಿಲ್ಲವಾದಕಾರಣ ಅಗ್ನಿಯೂ ಕುಟಿಲನಾಗಿ ಇರುವನು ಎಂದೂ, ಸಾಯಣರು **ಅಹುರ್ಯಃ—ಯಜಮಾನೈರಾಹ್ವಾತವ್ಯಃ** ಯಜ್ಞಮಾಡುವವರಿಂದ ಅಗ್ನಿಯು ಕರೆಯಲ್ಪಡತಕ್ಕವನೆಂದೂ ಅರ್ಥಮಾಡುವರು.

॥ ವ್ಯಾಕರಣಪ್ರಕ್ರಿಯಾ ॥

**ಅದೃಪ್ತಃ**—ದೃಪ ಹರ್ಷಮೋಹನಯೋಃ ಧಾತು. ಇದಕ್ಕೆ ಕ್ತಪ್ರತ್ಯಯ ಮೋಹನ ಎಂದರೆ ಗರ್ವ. ನ ದೃಪ್ತಃ ಅದೃಪ್ತಃ. ನಞ್‌ತತ್ಪುರುಷ ಸಮಾಸವಾದಾಗ **ತತ್ಪುರುಷೇ ತುಲ್ಯಾರ್ಥ**— ಸೂತ್ರದಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

**ವಿಜಾನನ್**—ಜ್ಞಾ ಅವಬೋಧನೇ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. **ಜ್ಞಾಜನೋರ್ಜಾ**—ಸೂತ್ರದಿಂದ ಜಾದೇಶ. **ಕ್ರ್ಯಾದಿಭ್ಯಃ ಶ್ನಾ** ಸೂತ್ರದಿಂದ ಶ್ನಾ ವಿಕರಣ. ಶತೃ ಜಿತ್ತಾದುದರಿಂದ **ಶ್ನಾಭ್ಯಸ್ತಯೋರಾತಃ** ಎಂಬುದರಿಂದ ಶ್ನಾ ವಿಕರಣದ ಆಕಾರಕ್ಕೆ ಲೋಪ ಪ್ರತ್ಯಯಸ್ವರ ಬರುತ್ತದೆ

**ಗೋನಾಮ್**—ಗೋ ಶಬ್ದಕ್ಕೆ ಷಷ್ಠೀ ಬಹುವಚನ ಪರವಾದಾಗ **ಗೋಃ ಪಾದಾಂತೇ** (ಪಾ. ಸೂ ೭-೧-೫೭) ಎಂಬುದರಿಂದ ಪಾದಾಂತದಲ್ಲಿ ವಿಧಿಸಿರುವ ನುಡಾಗಮವು ಛಾಂದಸವಾಗಿ ಅಪಾದಾಂತದಲ್ಲಿಯೂ ಬರುತ್ತದೆ.

**ಸ್ವಾದ್ಮ**—ಸ್ವಾದ ಆಸ್ವಾದನೆ ಧಾತು. ಣಿಜರ್ಥ (ಪ್ರೇರಣಾರ್ಥ)ವು ಧಾತ್ವರ್ಥದಲ್ಲಿ ಅಂತರ್ಭೂತವಾಗಿದೆ. **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ ಸ್ವಾದ್ಮನ್ ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ ಸ್ವಾದ್ಮನ್+ಸು ಎಂದಿರುವಾಗ **ಸುಪಾಂ ಸುಲುಕ್**—ಸೂತ್ರದಿಂದ ಸುವಿಗೆ ಲುಕ್. ಪದಾಂತವಾದುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ಪ್ರಾತಿಪದಿಕದ ಕೊನೆಯ ನಕಾರಕ್ಕೆ ಲೋಪ.

**ಪಿತೂನಾಮ್**—ಪಿತು ಶಬ್ದದ ಷಷ್ಠೀ ಬಹುವಚನರೂಪ. **ನಾಮನ್ಯತರಸ್ಯಾಮ್** (ಪಾ ಸೂ ೬-೧-೧೭೭) ಎಂಬುದರಿಂದ ನಾಮಿಗೆ (ನುಟ್‌ಸಹಿತವಾದ ವಿಭಕ್ತಿ) ಉದಾತ್ತಸ್ವರ ಬರುತ್ತದೆ

**ಆಹೂರ್ಯಃ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು. ಆಙ್ ಉಪಸರ್ಗ ಪೂರ್ವದಲ್ಲಿರುವಾಗ **ಅಚೋ ಯತ್** (ಪಾ ಸೂ. ೩-೧-೯೭) ಎಂಬುದರಿಂದ ಅಜಂತಧಾತುವಾದುದರಿಂದ ಯತ್ ಪ್ರತ್ಯಯ **ಬಹುಲಂ ಛಂದಸಿ** ಎಂಬುದರಿಂದ ನಿಮಿತ್ತವಿಲ್ಲದಿದ್ದರೂ ಧಾತುವಿಗೆ (ವಕಾರಕ್ಕೆ) ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ **ಹಲಃ** (ಪಾ. ಸೂ ೬-೪-೨) ಅಂಗಾವಯವ ಹಲಿನ ಪರದಲ್ಲಿರುವ ಸಂಪ್ರಸಾರಣಕ್ಕೆ ದೀರ್ಘ. ಮಧ್ಯದಲ್ಲಿ ರೇಫಾಧಿಕ್ಯವು ಛಾಂದಸವಾಗಿ ಬರುತ್ತದೆ. **ಯತೋಽನಾವಃ** (ಪಾ ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಊಕಾರವು ಉದಾತ್ತವಾಗುತ್ತದೆ.

**ನಿಷತ್ತಃ**—ಷದ್ಲೃ ವಿಶರಣಗತ್ಯವಸಾದನೇಷು ಧಾತು. ಇದಕ್ಕೆ ನಿಷ್ಠಾ ಪ್ರತ್ಯಯ. **ರದಾಭ್ಯಾಂ**—ಸೂತ್ರದಿಂದ ನತ್ವವು ಪ್ರಾಪ್ತವಾದರೆ **ನಸತ್ತ ನಿಷತ್ತ**—(ಪಾ. ಸೂ ೮-೨-೬೧) ಎಂಬುದರಿಂದ ನತ್ವಾಭಾವವು ನಿಪಾತಿತವಾಗಿದೆ. ಪ್ರತ್ಯಯಸ್ವರದಿಂದ ಅಂತೋದಾತ್ತ. ॥ ೩-೪ ॥



॥ ಸಂಹಿತಾಪಾಠಃ ॥

ಪುತ್ರೋ ನ ಜಾತೋ ರಣ್ವೋ ದುರೋಣೇ ವಾಜೀ ನ ಪ್ರೀತೋ
ವಿಶೋ ವಿ ತಾರೀತ್ ।
ವಿಶೋ ಯದಹ್ವೇ ನೃಭಿಃ ಸನೀಳಾ ಅಗ್ನಿರ್ದೇವತ್ವಾ ವಿಶ್ವಾ-
ನ್ಯಶ್ಯಾಃ ॥ ೫ ॥ ೬ ॥

॥ ಪದಪಾಠಃ ॥

**ಪುತ್ರಃ । ನ । ಜಾತಃ । ರಣ್ವಃ । ದುರೋಣೇ । ವಾಜೀ । ನ । ಪ್ರೀತಃ । ವಿಶಃ । ವಿ । ತಾರೀತ್ ।**

**ವಿಶಃ । ಯತ್ । ಅಹ್ವೇ । ನೃಽಭಿಃ । ಸಽನೀಳಾಃ । ಅಗ್ನಿಃ । ದೇವಽತ್ವಾ । ವಿಶ್ವಾನಿ । ಅಶ್ಯಾಃ ॥ ೫ ॥ ೬ ॥**

॥ ಸಾಯಣಭಾಷ್ಯಂ ॥

**ಪುತ್ರೋ ನ ಪುತ್ರ ಇವ ಜಾತಃ ಪ್ರಾದುರ್ಭೂತೋಽಗ್ನಿರ್ದುರೋಣೇ ಗೃಹೇ ರಣ್ವೋ ರಮಯಿತಾ ಭವತಿ । ವಾಜೀ ನ ಅಶ್ವ ಇವ ಪ್ರೀತೋ ಹರ್ಷಯುಕ್ತಃ ಸನ್ವಿಶಃ ಸಂಗ್ರಾಮೇ ವರ್ತಮಾನಾಃ ಶತ್ರುಭೂತಾಃ ಪ್ರಜಾ ವಿ ತಾರೀತ್ । ವಿಶೇಷೇಣ ತರತಿ । ಅತಿಕ್ರಾಮತಿ । ಅಪಿ ಚ ನೃಭಿರ್ಋತ್ವಿಗ್ಲಕ್ಷಣೈರ್ಮನುಷ್ಯೈಃ ಸಹಿತೋಽಹಂ ಸನೀಳಾಃ ಸಮಾನನಿವಾಸಸ್ಥಾನಾ ವಿಶೋ ದೈವೀಃ ಪ್ರಜಾ ಯದ್ಯದಾಹ್ವೇ ಆಹ್ವಯಾಮಿ ತದಾನೀಮಯಮಗ್ನಿರ್ವಿಶ್ವಾನಿ ಸರ್ವಾಣಿ ದೇವತ್ವಾ ದೇವತ್ವಾನ್ಯಶ್ಯಾಃ । ಅಶ್ನುತೇ । ಪ್ರಾಪ್ನೋತಿ । ಸ್ವಯಮೇವ ತತ್ತದ್ದೇವತಾರೂಪೋ ಭವತೀತ್ಯರ್ಥಃ । ತಥಾ ಚ ಮಂತ್ರಾಂತರಮಾಮ್ನಾಯತೇ । ತ್ವಮಗ್ನೇ ವರುಣೋ ಜಾಯಸೇ ಯತ್ತ್ವಂ ಮಿತ್ರೋ ಭವಸಿ ಯತ್ಸಮಿದ್ಧ ಇತ್ಯಾದಿ । ಋಗ್ವೇ. ೫-೩-೧ ॥ ಅಶ್ಯಾಃ । ಅಶೂ ವ್ಯಾಪ್ತೌ । ಲಿಙಿ ವ್ಯತ್ಯಯೇನ ಪರಸ್ಮೈಪದಮಧ್ಯಮೌ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥**

॥ ಪ್ರತಿಪದಾರ್ಥ ॥

**ಪುತ್ರೋ ನ**—ಪುತ್ರನಂತೆ । **ಜಾತಃ**—(ಅರಣಿಯಿಂದ) ಉದ್ಭೂತನಾದ (ಅಗ್ನಿಯು) । **ದುರೋಣೇ**—ಮನೆಯಲ್ಲಿ । **ರಣ್ವಃ**—ಸುಖಕರನು (ಆಗುತ್ತಾನೆ) । **ವಾಜೀ ನ**—ಅಶ್ವದಂತೆ । **ಪ್ರೀತಃ**—ಹರ್ಷಯುಕ್ತನಾಗಿ । **ವಿಶಃ**—ಸಂಗ್ರಾಮದಲ್ಲಿ ಶತ್ರುಭೂತರಾದವರನ್ನು । **ವಿ ತಾರೀತ್**—ವಿಶೇಷವಾಗಿ ದಾಟುತ್ತಾನೆ (ಅತಿಕ್ರಮಿಸುತ್ತಾನೆ) । **ನೃಭಿಃ**—ಋತ್ವಿಜರಿಂದ (ಯುಕ್ತನಾದ ನಾನು) । **ಸನೀಳಾಃ**—ಸಮಾನನಿವಾಸಸ್ಥಾನವುಳ್ಳ । **ವಿಶಃ**—ದೇವತೆಗಳನ್ನು । **ಯತ್**—ಯಾವಾಗ । **ಅಹ್ವೇ**—ಆಹ್ವಾನಿಸುತ್ತೇನೆಯೋ (ಆಗ) । **ಅಗ್ನಿಃ**—ಅಗ್ನಿಯು । **ವಿಶ್ವಾನಿ**—ಎಲ್ಲಾ । **ದೇವತ್ವಾ**—ದೇವತ್ವವನ್ನೂ । **ಅಶ್ಯಾಃ**—ಹೊಂದುತ್ತಾನೆ

॥ ಭಾವಾರ್ಥ ॥

ಅರಣಿಯಿಂದುದ್ಭೂತನಾದ ಅಗ್ನಿಯು ಯಾಗಗೃಹವನ್ನು ಸುಖಕರವನ್ನಾಗಿ ಮಾಡುತ್ತಾನೆ. ಸಂಗ್ರಾಮದಲ್ಲಿ ಉತ್ತಮಾಶ್ವದಂತೆ (ಶತ್ರುಗಳನ್ನೆದುರಿಸಿ) ಅವರನ್ನು ಪರಾಜಿತರನ್ನಾಗಿ ಮಾಡುತ್ತಾನೆ ಋತ್ವಿಜರಿಂದ ಯುಕ್ತನಾಗಿ, ಏಕತ್ರಸಂಗತರಾದ ಯಾವದೇವತೆಗಳನ್ನು ಆಹ್ವಾನಿಸಿದರೂ, ಅಗ್ನಿಯು ಅವರೆಲ್ಲರ ದೇವತ್ವವನ್ನು ತಾನೇ ವಹಿಸಿಕೊಳ್ಳುತ್ತಾನೆ (ಅವರಪರವಾಗಿ ಬಂದು ಪೂಜಾದಿಗಳನ್ನು ಸ್ವೀಕರಿಸುತ್ತಾನೆ)

## English Translation

He diffuses happiness in a dwelling, like a son (newly) born; he overcomes enemies in battle, like an animated charger; when I, along with other men, invoke gods living in one place, you, Agni, assume all (their) celestial natures.

॥ ವಿಶೇಷವಿಷಯಗಳು ॥

**ವಾಜೀ ನ ವಿಶಃ ವಿತಾರೀತ್—ಅಶ್ವ ಇವ ಸಂಗ್ರಾಮೇ ವರ್ತಮಾನಾಃ ಶತ್ರುಭೂತಾಃ ವಿಶೇಷೇಣ ಅತಿಕ್ರಾಮತಿ ।** ವಿಶಃ ಎಂಬ ಪದವು ಇಪ್ಪತ್ತೈದು ಮನುಷ್ಯನಾಮಗಳ ಮಧ್ಯದಲ್ಲಿ (ನಿ. ೩-೭) ಪಠಿತವಾಗಿರುತ್ತದೆ. ಅಗ್ನಿಯು ಕುದುರೆಯು ಹಾಗೆ ಶತ್ರುಜನರನ್ನು ಯುದ್ಧಗಳಲ್ಲಿ ಬಹಳ ಮಟ್ಟಿಗೆ ಜಯಿಸುವನು ಎಂದು ಸಾಯಣರು ಅರ್ಥಮಾಡಿರುವರು

ಸ್ಕಂದಸ್ವಾಮಿಗಳು—**ವಿಪೂರ್ವಸ್ತರತಿಃ ಸರ್ವತ್ರ ವೃದ್ಧ್ಯರ್ಥಃ** ವಿ ಉಪಸರ್ಗದಿಂದ ಕೂಡಿದ ತೄಧಾತುವಿಗೆ ವೃದ್ಧಿ ಎಂದು ಅರ್ಥವು ಕುದುರೆಯು ಯುದ್ಧದಲ್ಲಿ ಜಯಶೀಲವಾಗಿರುವಂತೆ, ಅಗ್ನಿಯು ಯಾಗಮಾಡುವವರನ್ನೂ, ಸ್ತೋತ್ರಮಾಡುವವರನ್ನೂ ಅನೇಕವಿಧವಾಗಿ ವೃದ್ಧಿಗೊಳಿಸುವನು ಎಂದು ಅರ್ಥವನ್ನು ಹೇಳಿರುತ್ತಾರೆ.

**ವಿಶ್ವಾನಿ ದೇವತ್ವಾ ಅಶ್ಯಾಃ—ಸರ್ವಾಣಿ ದೇವತ್ವಾನಿ ಪ್ರಾಪ್ನೋತಿ ।** ಅಗ್ನಿಯು ಯಜ್ಞಮಾಡುವ ಯಜಮಾನರುಗಳಿಂದ ಯಾಗದಲ್ಲಿ ಹವಿರ್ಭಾಗಗಳನ್ನು ಸ್ವೀಕರಿಸುವುದಕ್ಕಾಗಿ ತನಗೆ ಸಮಾನವಾದ ಸ್ಥಾನಮಾನಗಳುಳ್ಳ ದೇವತೆಗಳನ್ನು ಕರೆಯಲ್ಪಟ್ಟ ಕಾಲದಲ್ಲಿ ತಾನೇ ಆಯಾಯ ದೇವತೆಗಳನ್ನು ವ್ಯಾಪಿಸಿ ಆಯಾಯ ದೇವತಾ ರೂಪದಿಂದ ಇರುವನು **"ತ್ವಮಗ್ನೇ ವರುಣೋ ಜಾಯಸೇ ಯತ್ತ್ವಂ ಮಿತ್ರೋ ಭವಸಿ ಯತ್ಸಮಿದ್ಧಃ"** (ಋ. ಸಂ. ೫-೩-೧) ಇತ್ಯಾದಿ ಎಲೈ ಅಗ್ನಿಯೇ, ನೀನು ಯಜ್ಞವೇದಿಯಲ್ಲಿ ಚೆನ್ನಾಗಿ ಉದ್ದೀಪ್ತನಾಗಿ ವರುಣನೂ ಮತ್ತು ಮಿತ್ರನೂ ಆಗುತ್ತೀಯೆ. ವರುಣ ಮತ್ತು ಮಿತ್ರ ಎಂಬುವುದು ದೇವತೆಗಳು ಇಬ್ಬರ ಹೆಸರುಗಳು ಎಂಬುದಾಗಿ ಈ ಮಂತ್ರದ ಅರ್ಥವು. ಇದರಿಂದ ಅಗ್ನಿಯು ಸರ್ವದೇವತಾ ಸ್ವರೂಪದಿಂದ ಇರುವನೆಂದೂ ಅಗ್ನಿಯ ಮಹಿಮೆಯು ವರ್ಣನಾತೀತವೆಂದೂ ತಿಳಿಯುವುದು

॥ ವ್ಯಾಕರಣಪ್ರಕ್ರಿಯಾ ॥

**ಜಾತಃ**—ಜನೀ ಪ್ರಾದುರ್ಭಾವೇ ಧಾತು. ಇದಕ್ಕೆ ಕ್ತಪ್ರತ್ಯಯ **ಜನಸನಖನಾಂ ಸಂಝಲೋಃ** ಎಂಬುದರಿಂದ ಧಾತುವಿಗೆ ಜಾ ಆದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತ.

**ವಾಜೀ**—ವಾಜಂ ಅಸ್ಯ ಅಸ್ತಿ ಇತಿ ವಾಜೀ **ಅತ ಇನಿಠನೌ** ಸೂತ್ರದಿಂದ ಮತ್ವರ್ಥದಲ್ಲಿ ಇನಿಪ್ರತ್ಯಯ ವಾಜಿನ್ ಶಬ್ದವಾಗುತ್ತದೆ ಪ್ರಥಮಾಏಕವಚನಾಂತರೂಪ.

**ಪ್ರೀತಃ**—ಪ್ರೀಞ್ ತರ್ಪಣೇ ಧಾತು ನಿಷ್ಠಾಪ್ರತ್ಯಯಸ್ವರದಿಂದ ಅಂತೋದಾತ್ತ

**ತಾರೀತ್**—ತೄ ಪ್ಲವನತರಣಯೋಃ ಧಾತು. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ರತ್ಯಯ **ಇತಶ್ಚ** ಸೂತ್ರದಿಂದ ಇಕಾರಲೋಪ. **ಅಸ್ತಿ ಸಿಚೋಽಪೃಕ್ತೇ** ಎಂಬುದರಿಂದ ಅದಕ್ಕೆ ಈಡಾಗಮ ಚ್ಲಿಗೆ ಸಿಚಾದೇಶ ಅದಕ್ಕೆ ಇಡಾಗಮ **ಸಿಚಿ ವೃದ್ಧಿಃ**-ಸೂತ್ರದಿಂದ ವೃದ್ಧಿ **ಇಟಈಟಿ** ಎಂಬುದರಿಂದ ಸಿಚ್ಚಿಗೆ ಲೋಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ತಿಙಂತನಿಘಾತಸ್ವರ ಬರುತ್ತದೆ

**ಅಹ್ವೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಛಾಂದಸವಾಗಿಲಙ್ ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ. **ಬಹುಲಂ ಛಂದಸಿ** ಸೂತ್ರದಿಂದ ಶಪ್ಪಿಗೆ ಲುಕ್. **ಆದೇಚಉಪದೇಶೇऽಶಿತಿ** ಎಂಬುದರಿಂದ ಧಾತುವಿಗೆ ಆತ್ವ. ಗುಣ. ಯತ್ ಎಂದು ಹಿಂದೆ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗವ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ದೇವತ್ರಾ**—**ಶೇಶ್ಛಂದಸಿ ಬಹುಲಂ** ಎಂಬುದರಿಂದ ನಪುಂಸಕದಲ್ಲಿ ಆದೇಶವಾಗಿ ಬಂದ ಶಿಗೆ ಲೋಪ.

**ಅಶ್ಯಾಃ**—ಅಶೂ ವ್ಯಾಪ್ತೌ ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಲಿಙ್‌ನಲ್ಲಿ ಪರಸ್ಮೈಪದ ಪ್ರತ್ಯಯವೂ ಪ್ರಥಮಪುರುಷದ ಸಿಪ್ ಪ್ರತ್ಯಯವೂ ಬರುತ್ತದೆ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಶ್ನು) ಲುಕ್ **ಯಾಸುಟ್ ಪರಸ್ಮೈ**—ಸೂತ್ರದಿಂದ ಲಿಙ್‌ಗೆ ಯಾಸುಟಾಗಮ ಸಿಪ್ಪಿನ ಇಕಾರಕ್ಕೆ **ಇತಶ್ಚ** ಎಂಬುದರಿಂದ ಲೋಪ. ಸಕಾರಕ್ಕೆ ರುತ್ವವಿಸರ್ಗ **ಅಶ್ಯಾಃ** ಎಂದು ರೂಪವಾಗುತ್ತದೆ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ ॥ ೬-೭ ॥



॥ ಸಂಹಿತಾಪಾಠಃ ॥

ನಕಿಷ್ಟ ಏತಾ ವ್ರತಾ ಮಿನಂತಿ ನೃಭ್ಯೋ ಯದೇಭ್ಯಃ ಶ್ರುಷ್ಟಿಂ
ಚಕರ್ಥ ।
ತತ್ತು ತೇ ದಂಸೋ ಯದಹನ್ತ್ಸಮಾನೈರ್ನೃಭಿರ್ಯದ್ಯುಕ್ತೋ
ವಿವೇ ರಪಾಂಸಿ ॥ ೭ ॥ ೮ ॥

|| ಪದಪಾಠಃ ||

ನಕಿಃ | ತೇ | ಏತಾ | ವ್ರತಾ | ಮಿನಂತಿ | ನೃऽಭ್ಯಃ | ಯತ್ | ಏಭ್ಯಃ | ಶ್ರುಷ್ಟಿಂ | ಚಕರ್ಥ |

ತತ್ | ತು | ತೇ | ದಂಸಃ | ಯತ್ | ಅಹನ್ | ಸಮಾನೈಃ | ನೃऽಭಿಃ | ಯತ್ | ಯುಕ್ತಃ | ವಿವೇಃ | ರಪಾಂಸಿ || ೭ || ೮ ||

|| ಸಾಯಣಭಾಷ್ಯಂ ||

ಹೇ ಅಗ್ನೇ ತೇ ತವ ಸಂಬಂಧೀನ್ಯೇತಾ ವ್ರತಾ ಏತಾನಿ ಪರಿದೃಶ್ಯಮಾನಾನಿ ದರ್ಶಪೂರ್ಣಮಾಸಾದೀನಿ ಕರ್ಮಾಣಿ ನಕಿರ್ಮಿನಂತಿ | ರಾಕ್ಷಸಾದಯೋ ಬಾಧಕಾ ನ ಹಿಂಸಂತಿ | ಯದ್ಯಸ್ಮಾತ್ತ್ವಮೇಭ್ಯಃ ಕರ್ಮಸು ವರ್ತಮಾನೇಭ್ಯೋ ನೃಭ್ಯೋ ಯಜ್ಞಸ್ಯ ನೇತೃಭ್ಯೋ ಯಜಮಾನೇಭ್ಯಃ ಶ್ರುಷ್ಟಿಂ | ಶು ಆಶ್ವಶ್ನುತೇ ವ್ಯಾಪ್ನೋತೀತಿ ಶ್ರುಷ್ಟಿರ್ಯಜ್ಞಫಲರೂಪಂ ಸುಖಂ | ತಚ್ಚಕರ್ಥ ಕೃತವಾನಸಿ | ಸತಿ ಹಿ ತವ ವ್ರತಾನಾಂ ಬಾಧಕ ಏತನ್ನೋಪಪದ್ಯತೇ | ಅತೋಽವಗಮ್ಯತೇ ತವ ವ್ರತಾನಾಂ ಹಿಂಸಕಾ ನ ಸಂತೀತಿ | ಹೇ ಅಗ್ನೇ ತೇ ತ್ವದೀಯಂ ತತ್ತು ದಂಸಸ್ತದೇವ ಕರ್ಮ ಯದ್ಯದಿ ರಾಕ್ಷಸಾದಿರಹನ್ ಹಂತಿ ನಾಶಯತಿ ಕದಾನೀಂ ಸಮಾನೈಃ ಸಪ್ತಗಣರೂಪೇಣ ಸದೃಶೈರ್ನೃಭಿರ್ನೇತೃಭಿರ್ಮರುದ್ಭಿಃ ಯುಕ್ತಸ್ತ್ವಂ ರಪಾಂಸಿ ಬಾಧಕಾನಿ ರಾಕ್ಷಸಾದೀನಿ ಯದ್ಯಸ್ಮಾತ್ತ್ವಂ ವಿವೇಃ ಗಮಯಸಿ ಪಲಾಯನಂ ಪ್ರಾಪಯಸಿ | ತಸ್ಮಾತ್ತವ ವ್ರತಾನಿ ನ ಹಿಂಸಂತೀತಿ ಯೋಜ್ಯಂ || ಮಿನಂತಿ | ಮೀಞ್ ಹಿಂಸಾಯಾಂ | ಕ್ರ್ಯಾದಿಕಃ | ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ | ವಿವೇಃ | ಛಂದಸಿ ಲುಙ್‌ಲಙ್‌ಲಿಟ ಇತಿ ವರ್ತಮಾನೇ ಲಙ್ | ವೀ ಗತ್ಯಾದಿಷು | ಸಿಪ್ಯದಾದಿತ್ವಾಚ್ಛಪೋ ಲುಕಿ ಪ್ರಾಪ್ತೇ ಬಹುಲಂ ಛಂದಸೀತಿ ಶಪಃ ಶ್ಲುಃ ||

|| ಪ್ರತಿಪದಾರ್ಥ ||

**ಅಗ್ನೇ**—ಎಲೈ ಅಗ್ನಿಯೇ | **ತೇ**—ನಿನ್ನ ಸಂಬಂಧವಾದ | **ತತ್ತು ದಂಸಃ**- ಅದೇ ಕರ್ಮವನ್ನು | **ಯತ್ ಅಹನ್**—ಯಾವಾಗ ರಾಕ್ಷಸಾದಿಗಳು ಹಾನಿಮಾಡುತ್ತಾರೋ (ಆಗ) | **ಸಮಾನೈಃ**—ನಿನಗೆ ಸದೃಶರಾದ | **ನೃಭಿಃ**—(ಮನುಷ್ಯರಿಗೆ) ನೇತೃಗಳಾದ (ಮರುದ್ದೇವತೆಗಳಿಂದ) | **ಯುಕ್ತಃ**—ಯುಕ್ತನಾದ (ನೀನು) | **ರಪಾಂಸಿ**—ಬಾಧಕರಾದ ರಾಕ್ಷಸಾದಿಗಳನ್ನು | **ಯತ್**—ಯಾವ ಕಾರಣ | **ವಿವೇಃ**—ಹೊರಡಿಸುತ್ತೀಯೋ (ಓಡಿಸುತ್ತೀಯೋ) | **ಯತ್**—ಯಾವ ಕಾರಣ | **ಏಭ್ಯಃ**—(ಕರ್ಮಗಳಲ್ಲಿ ನಿರತರಾದ) ಈ | **ನೃಭ್ಯಃ**—

ಯಜಮಾನರುಗಳಿಗೆ । **ಶ್ರುಷ್ಟಿಂ**—ಯಜ್ಞರೂಪವಾದ ಸುಖವನ್ನು । **ಚಕರ್ಥ**—ಉಂಟುಮಾಡುತ್ತೀಯೋ । (**ತತ್**—ಆದಕಾರಣ) । **ತೇ**—ನಿನ್ನ ಉದ್ದಿಶ್ಯಕವಾದ । **ಏತಾ ವ್ರತಾ**—ಈ (ದರ್ಶಪೂರ್ಣಮಾಸಾದಿ) ಕರ್ಮಗಳನ್ನು । **ನಕಿಃ ಮಿನಂತಿ**—ರಾಕ್ಷಸಾದಿಗಳು ಹಿಂಸಿಸುವುದಿಲ್ಲ

॥ ಭಾವಾರ್ಥ ॥

ಮನುಷ್ಯರು ನಿನ್ನನ್ನುದ್ದೇಶಿಸಿ ಪ್ರಾರಂಭಿಸಿದ ಯಾಗಾದಿಗಳಿಗೆ ರಾಕ್ಷಸಾದಿಗಳಿಂದ ಬಾಧೆ ಬಂದರೆ, ಕೂಡಲೇ, ನಿನಗೆ ಸಮಾನರಾದ ಮರುದ್ದೇವತೆಗಳಿಂದ ಯುಕ್ತನಾಗಿ ಬಂದು ಅವರನ್ನು ಓಡಿಸುತ್ತೀಯೆ ಮತ್ತು ಯಾಗನಿರತರಾದವರಿಗೆ ತತ್ಫಲರೂಪವಾದ ಸುಖವನ್ನು ಶೀಘ್ರವಾಗಿ ಕೊಡುವುದರಿಂದ, ನಿನ್ನ ಸಂಬಂಧವಾದ ಯಜ್ಞಗಳಿಗೆ ರಾಕ್ಷಸಾದಿ ಬಾಧೆಯಿಲ್ಲವೆಂಬುದು ಸ್ಪಷ್ಟವಾಗಿದೆ.

## English Translation.

Never may (The Rakshasas) interrupt the rites performed for you, since you confer on the sacrificers happiness (as a reward), for should (such spirits) disturb your sacrifice, then assisted by leaders (Maruts), equally (competent) like yourself, you put the intruders to flight.

॥ ವಿಶೇಷವಿಷಯಗಳು ॥

**ನೃಭ್ಯಃ ಶ್ರುಷ್ಟಿಂ ಚಕರ್ಥ—ಯಜ್ಞಸ್ಯ ನೇತೃಭ್ಯೋ ಯಜಮಾನೇಭ್ಯಃ ಶು ಆಶು ಅಶ್ನುತೇ ವ್ಯಾಪ್ನೋತೀತಿ ಶ್ರುಷ್ಟಿರ್ಯಜ್ಞಫಲರೂಪಸುಖಂ ತತ್ ಕೃತವಾನಸಿ । ತತ್ ನಕಿಃ ಮಿನಂತಿ—ರಾಕ್ಷಸಾದಯೋ ಬಾಧಕಾ ನ ಹಿಂಸಂತಿ ।** ನಕಿಃ ಎಂಬ ಶಬ್ದವು (ನಿ ೩-೧೪) ಹಿಕಮ್, ನುಕಮ್ ಎಂಬ ಒಂಭತ್ತು ಪದಗಳು ಸರ್ವಪದಾರ್ಥಗಳನ್ನು ಬೋಧಿಸುವುವು ಎಂದು ನಿಪಾತಿತವಾಗಿರುತ್ತದೆ ಶ್ರುಷ್ಟಿ ಶಬ್ದವು (ನಿ. ೬-೧೩) ಸುಖಾಭಿಮುಖಃ, ಧಾನ್ಯಶಲಾಕಾಯಾಶ್ಚ ಎಂಬುದಾಗಿ ನಿಪಾತಿತವಾಗಿರುವುದು. ಅಗ್ನಿಯು ಯಜ್ಞವನ್ನು ಆಚರಿಸುವ ಯಜಮಾನರಿಗೆ ಜಾಗ್ರತೆಯಾಗಿ ಯಜ್ಞಫಲಾನುಭವರೂಪವಾದ ಸುಖವನ್ನು ಅನುಗ್ರಹಿಸುವವನಾದುದರಿಂದ ಯಜ್ಞಕರ್ತರುಗಳು ಆಚರಿಸುವ ಕರ್ಮಗಳಿಗೆ ಬಾಧಕವನ್ನು ಮಾಡುವ ರಾಕ್ಷಸಾದಿಗಳೂ ನಿನ್ನಿಂದ ಬಾಧಿಸಲ್ಪಡುವರೆಂದು ಕಾರ್ಯದಿಂದ ಕಾರಣವು ಸ್ಪಷ್ಟವಾಗಿ ತಿಳಿಯಬರುತ್ತದೆ ಯಜ್ಞಮಾಡುವ ಯಜಮಾನರುಗಳಿಗೆ ಯಜ್ಞಫಲಾನುಭವವು ನಿರ್ವಿಘ್ನವಾಗಿ ಆಚರಿಸಿದ ಯಜ್ಞದಿಂದ ಉಂಟಾಗುವುದು ರಾಕ್ಷಸರೇ ಮೊದಲಾದ ಯಜ್ಞವಿಘ್ನಕರ್ತರ ವಿನಾಶವು ಅಗ್ನಿಯಿಂದ ಆಚರಿಸಲ್ಪಡುವಕಾರಣ ಯಜ್ಞ ಮತ್ತು ಯಜಮಾನರುಗಳ ರಕ್ಷಣೆಯು ಅಗ್ನಿಯಿಂದಲೇ ಆಗುತ್ತಿರುವುದೆಂದು ತಾತ್ಪರ್ಯವು.

॥ ವ್ಯಾಕರಣಪ್ರಕ್ರಿಯಾ ॥

**ಏತಾ, ವೃತಾ** - ನಪುಂಸಕ ಬಹುವಚನದಲ್ಲಿ ಆದೇಶವಾಗಿ ಬಂದ ಶಿಗೆ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಲೋಪ

**ಮಿನಂತಿ**—ಮೀಞ್ ಹಿಂಸಾಯಾಂ ಧಾತು. ಕ್ರ್ಯಾದಿ. ಪ್ವಾದಿಯಲ್ಲಿ ಸೇರಿರುವುದರಿಂದ **ಪ್ವಾದೀನಾಂ ಹ್ರಸ್ವಃ** (ಪಾ ಸೂ ೭-೩-೮೦) ಎಂಬುದರಿಂದ ಹ್ರಸ್ವ **ಕ್ರ್ಯಾದಿಭ್ಯಃ ಶ್ನಾ** ಸೂತ್ರದಿಂದ ಶ್ನಾ ವಿಕರಣ ಲಟ್ ಪ್ರಥಮಪುರುಷ ಬಹುವಚನಕ್ಕೆ ಅಂತಾದೇಶ. ಇದಕ್ಕೆ **ಸಾರ್ವಧಾತುಕಮಪಿತ್** ಸೂತ್ರದಿಂದ ಙಿದ್ವದ್ಭಾವವಿರುವುದರಿಂದ **ಶ್ನಾಭ್ಯಸ್ತಯೋರಾತಃ** ಎಂಬುದರಿಂದ ವಿಕರಣದ ಆಕಾರಕ್ಕೆ ಲೋಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಚಕರ್ಥ**—ಡುಕೃಞ್ ಕರಣೇ ಧಾತು ಲಿಟ್ ಮಧ್ಯಮಪುರುಷ ಏಕವಚನದಲ್ಲಿ ಥಲಾದೇಶ ಕ್ರಾದಿ ನಿಯಮದಿಂದ ಇಟ್ ಬರುವುದಿಲ್ಲ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಥಲ್ ಲಿತ್ತಾದುದರಿಂದ **ಲಿತಿ** ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಅಹನ್**—ಹನ ಹಿಂಸಾಗತ್ಯೋಃ ಧಾತು ಲಙ್ ಪ್ರಥಮಪುರುಷ ಏಕವಚನರೂಪ ಯದ್ಯೋಗವಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಮತ್ತು ಅಡಾಗಮ ಉದಾತ್ತವಾದದುರಿಂದ ಆದ್ಯುದಾತ್ತವಾಗುತ್ತದೆ

**ವಿವೇಃ**—ವೀ ಗತ್ಯಾದಿಷು ಧಾತು **ಛಂದಸಿ ಲುಙ್ ಲಙ್ ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ **ಅದಿಪ್ರಭೃತಿಭ್ಯಃ**-ಸೂತ್ರದಿಂದ ಶಪಿಗೆ ಲುಕ್ ಪ್ರಾಪ್ತವಾದರೆ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ **ಹ್ರಸ್ವಃ** ಸೂತ್ರದಿಂದ ಹ್ರಸ್ವಃ ಸಿಪ್ ನಿಮಿತ್ತಕವಾಗಿ ಧಾತುವಿನ ಇಕಾರಕ್ಕೆ ಗುಣ ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗ. **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುಸ್ವರದಿಂದ ಏಕಾರ ಉದಾತ್ತವಾಗುತ್ತದೆ

**ರಪಾಂಸಿ**—ರಪ ವ್ಯಕ್ತಾಯಾಂ ವಾಚಿ. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಬಾಧಾರ್ಥದಲ್ಲಿ ಪ್ರಯುಕ್ತವಾಗಿವೆ. ಸರ್ವಧಾತು ನಿಬಂಧನವಾದ ಅಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ದ್ವಿತೀಯಾ ಬಹುವಚನಾಂತರೂಪ. ॥ ೮-೯ ॥



॥ ಸಂಹಿತಾಪಾಠಃ ॥

ಉಷೋ ನ ಜಾರೋ ವಿಭಾವೋಸ್ರಃ ಸಂಜ್ಞಾತರೂಪಶ್ಚಿಕೇತ-
ದಸ್ಮೈ ।
ತ್ಮನಾ ವಹಂತೋ ದುರೋ ವ್ಯೃಣ್ವನ್ನವಂತ ವಿಶ್ವೇ ಸ್ವರ್ದೃ-
ಶೀಕೇ ॥ ೯ ॥ ೧೦ ॥

॥ ಪದಪಾಠಃ ॥

ಉಷಃ । ನ । ಜಾರಃ । ವಿಭಾಽವಾ । ಉಸ್ರಃ । ಸಂಜ್ಞಾತಽರೂಪಃ । ಚಿಕೇತತ್ ।
ಅಸ್ಮೈ ।
ತ್ಮನಾ । ವಹಂತಃ । ದುರಃ । ವಿ । ಋಣ್ವನ್ । ನವಂತ । ವಿಶ್ವೇ । ಸ್ವಃ ।
ದೃಶೀಕೇ ॥ ೯ ॥ ೧೦ ॥

॥ ಸಾಯಣಭಾಷ್ಯಂ ॥

ಉಷೋ ನ ಜಾರ ಉಷಸೋ ಜರಯಿತಾದಿತ್ಯ ಇವ ವಿಭಾವಾ ವಿಶಿಷ್ಟಪ್ರಕಾಶಯುಕ್ತ ಉಸ್ರೋ ನಿವಾಸಯಿತಾ ಸಂಜ್ಞಾತರೂಪಃ ಸರ್ವೈಃ ಪ್ರಾಣಿಭಿರವಗತಸ್ವರೂಪಃ । ದೇವತಾಂತರವದಪ್ರತ್ಯಕ್ಷೋ ನ ಭವತೀತ್ಯರ್ಥಃ । ಏವಂಭೂತೋಽಗ್ನಿರಸ್ಮೈ ಯಜಮಾನಾಯ ಚಿಕೇತತ್ । ಜಾನಾತು । ಅಭಿಮತಫಲಂ ದದಾತ್ವಿತ್ಯರ್ಥಃ । ಯದ್ವಾ । ವಿಭಕ್ತಿವ್ಯತ್ಯಯಃ । ಅಸ್ಯ ಇದಂ ಸೂಕ್ತರೂಪಂ ಸ್ತೋತ್ರಂ ಚಿಕೇತತ್ । ಜಾನಾತು । ತಥಾಸ್ಯ ರಶ್ಮಯಸ್ತ್ಮನಾತ್ಮನೈವ ಸ್ವಯಮೇವ ವಹಂತೋ ಹವಿರ್ವಹನಂ ಕುರ್ವಂತೋ ದುರೋ ಯಜ್ಞಗೃಹದ್ವಾರಾಣಿ ವ್ಯೃಣ್ವನ್ । ವಿಶೇಷೇಣ ಗಚ್ಛಂತಿ । ವ್ಯಾಪ್ನುವಂತೀತ್ಯರ್ಥಃ । ತದನಂತರಂ ದೃಶೀಕೇ ದರ್ಶನೀಯೇ ಸ್ವರ್ನಭಸಿ ವಿಶ್ವೇ ಸರ್ವೇ ತೇ ರಶ್ಮಯೋ ನವಂತ । ಗಚ್ಛಂತಿ । ನವತಿರ್ಗತಿಕರ್ಮಾ । ದೇವಾನ್ಪ್ರಾಪ್ನುವಂತೀತ್ಯರ್ಥಃ ॥ ಉಸ್ರಃ । ವಸ ನಿವಾಸೇ । ಸ್ಫಾಯಿತಂಚೀತ್ಯಾದಿನಾ ರಕ್ । ಯಜಾದಿತ್ವಾತ್ಸಂಪ್ರಸಾರಣಂ । ಚಿಕೇತತ್ । ಕಿತ ಜ್ಞಾನೇ । ಜೌಹೋತ್ಯಾದಿಕಃ । ಲೇಟ್ಯಡಾಗಮಃ ।

**ಬಹುಲಂ ಛಂದಸೀತಿ ವಕ್ತವ್ಯಂ । ಕಾ. ೭-೩-೮೭-೧ । ಇತಿ ವಚನಾನ್ನಾಭ್ಯಸ್ತಸ್ಯಾಚಿ ಪಿತೀತಿ ಲಘೂಪಧಗುಣಪ್ರತಿಷೇಧಾಭಾವಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಋಣ್ವನ್ । ಇವಿ ರಿವಿ ರವಿ ಧವಿ ಗತ್ಯರ್ಥಾಃ । ಇದಿತ್ತ್ವಾನ್ನುಮ್ । ಛಾಂದಸೋ ಲಜ್ । ವ್ಯತ್ಯಯೇನ ರೇಫಸ್ಯ ಸಂಪ್ರಸಾರಣಂ । ಯದ್ವಾ ಋಣು ಗತೌ । ತನೋತ್ಯಾದಿಃ ॥**

॥ ಪ್ರತಿಪದಾರ್ಥ ॥

**ಉಷೋ ನ ಜಾರಃ**—ಉಷಸ್ಸನ್ನು ಜರಾಯುಕ್ತವನ್ನಾಗಿ ಮಾಡುವ ಸೂರ್ಯನಂತೆ । **ವಿಭಾವಾ**—ವಿಶೇಷ ಕಾಂತಿಯುಕ್ತನಾದ । **ಉಸ್ರಃ**—ವಾಸಸ್ಥಳವನ್ನೊದಗಿಸುವ । **ಸಂಜ್ಞಾತರೂಪಃ**—(ಎಲ್ಲರಿಂದಲೂ) ಜ್ಞಾತವಾದ ರೂಪವುಳ್ಳ (ಅಗ್ನಿಯು) । **ಅಸ್ಮೈ**—ಯಜಮಾನನ (ಈ ಸ್ತುತಿಯನ್ನೂ) । **ಚಿಕೇತತ್**—ತಿಳಿಯಲಿ (ಅಭಿಮತಫಲವನ್ನು ಕೊಡಲಿ) । **ತ್ಮನಾ**—(ರಶ್ಮಿಗಳು) ತಾವಾಗಿಯೇ । **ವಹಂತಃ**—ಹವಿರ್ವಹನ ಕಾರ್ಯವನ್ನು ಮಾಡುವವುಗಳಾಗಿ । **ದುರಃ**—ಯಜ್ಞಗೃಹದ್ವಾರಗಳನ್ನು । **ವ್ಯೃಣ್ವನ್**—ವಿಶೇಷವಾಗಿ ಹೋಗುತ್ತವೆ । **ದೃಶೀಕೇ**—ಸಂದೃಶ್ಯಮಾನವಾದ । **ಸ್ವಃ**-ಆಕಾಶದಲ್ಲಿ । **ವಿಶ್ವೇ**—ಎಲ್ಲ ರಶ್ಮಿಗಳು । **ನವಂತ**—ಹೋಗುತ್ತವೆ

॥ ಭಾವಾರ್ಥ ॥

ಉಷಃಕಾಲದ ಕಾಂತಿಯನ್ನು ಕಡಮೆಮಾಡುವ ಸೂರ್ಯನಂತೆ ವಿಶೇಷಕಾಂತಿಯುಳ್ಳ, ವಾಸಗೃಹವನ್ನು ಒದಗಿಸುವ, ಎಲ್ಲರಿಗೂ ಪ್ರತ್ಯಕ್ಷನಾದ (ಇತರ ದೇವತೆಗಳಂತೆ ಅಪ್ರತ್ಯಕ್ಷನಲ್ಲದ) ಅಗ್ನಿಯು ಯಜಮಾನನಿಗೆ ಅಭಿಮತ ಫಲವನ್ನು ಅನುಗ್ರಹಿಸಲಿ ಅಗ್ನಿಯ ರಶ್ಮಿಗಳೇ ಹವಿಸ್ಸನ್ನು ತೆಗೆದುಕೊಂಡು ಯಜ್ಞಗೃಹದ್ವಾರಗಳಿಂದ ಹೊರಟು, ನಭೋಮಂಡಲವನ್ನು ಬೆಳಗುತ್ತಾ, ದ್ಯುಲೋಕಕ್ಕೆ ಹೋಗುತ್ತವೆ (ಹವಿಸ್ಸನ್ನು ಇತರ ದೇವತೆಗಳಿಗೆ ತೆಗೆದುಕೊಂಡು ಹೋಗಿ ಕೊಡುತ್ತವೆ)

## English Translation

May Agni, who is possessed of manifold light, like the extinguisher of the dawn, the granter of habitation, and of cognizable form, know (the desires of) this, (his worshipper), '(his rays), spontaneously bearing the oblation, open the doors (of the sacrificial chamber), and all spread through the visible heaven.

॥ ವಿಶೇಷವಿಷಯಗಳು ॥

**ಉಷೋ ನ ಜಾರಃ ವಿಭಾವಾ—ಉಷಸಃ ಜಾರಯಿತಾ ಆದಿತ್ಯ ಇವ ವಿಶಿಷ್ಟಪ್ರಕಾಶಯುಕ್ತಃ ।** ನ ಎಂಬ ಪದವು ಇವ ಎಂಬ ಅರ್ಥದಲ್ಲಿ ಉಪಮಾವಾಚಕಗಳ ಮಧ್ಯದಲ್ಲಿ (ನಿ ೩-೧೩) ಉಕ್ತವಾಗಿರುತ್ತದೆ ಉಷಃಕಾಲದ ಕಾಂತಿಯನ್ನು ಕಡಿಮೆಮಾಡುವ ಸೂರ್ಯನಹಾಗೆ ಅಗ್ನಿಯು ಬಹಳವಾದ ಪ್ರಕಾಶವುಳ್ಳವನಾಗಿ ಇರುತ್ತಾನೆ

**ಉಸ್ರಃ—ನಿವಾಸಯಿತಾ ।** ಯಜ್ಞಮಾಡುವ ಯಜಮಾನರುಗಳನ್ನು ಸುಖದಿಂದ ಇರಿಸುವವನು. ಉಸ್ರ ಶಬ್ದವು ಗೌಃ ಎಂಬ ಅರ್ಥದಲ್ಲಿ (ನಿ. ೨-೭) ಒಂಭತ್ತು ಗೋನಾಮಗಳ ಮಧ್ಯದಲ್ಲಿ ಉಕ್ತವಾಗಿರುತ್ತದೆ. ಮತ್ತು ರಶ್ಮಿ ಎಂಬ ಅರ್ಥದಲ್ಲಿ (ನಿ. ೨-೧೫) ಹದಿನೈದು ಪದಗಳ ಮಧ್ಯದಲ್ಲಿ ಪಠಿತವಾಗಿರುವುದು. ಸ್ಕಂದಸ್ವಾಮಿಗಳು ಇದರಿಂದ ಅಗ್ನಿಯು ಗೋವಿಶೇಷವಾದ ವೃಷಭಸದೃಶನಾಗಿ ಗೂಳಿಯಂತೆ ಇರುವನು ಎಂದು ಅರ್ಥಮಾಡಿರುವರು

**ಚಿಕೇತತ್ ಅಸ್ಮೈ** ಎಂಬಲ್ಲಿ ಅಸ್ಮೈ ಎಂಬ ಪದವು ಅಮುಂ ಎಂದು ದ್ವಿತೀಯಾಂತವಾಗಿರುವುದೆಂದೂ **ಚಿಕೇತತ್** ಎಂಬ ಪದವು ಬಹುವಚನಕ್ಕೆ ಬದಲಾಗಿ ಏಕವಚನದಲ್ಲಿ ಪ್ರಯುಕ್ತವಾಗಿರುವುದೆಂದೂ ವಿವರಿಸಿ ಅಗ್ನಿಯ ಸ್ವರೂಪವನ್ನು ಸರಿಯಾಗಿ ತಿಳಿದುಕೊಂಡಿರುವ ಯಜಮಾನರುಗಳು ಅಗ್ನಿಗೋಸ್ಕರವಾಗಿ ಸ್ತುತಿಯನ್ನೂ ಮಾಡುವರು. ಮತ್ತು ಹವಿಸ್ಸುಗಳನ್ನು ಅರ್ಪಿಸುವರು. ಇವರು ಅಗ್ನಿಯ ಉದ್ದೇಶವಾಗಿ ಸ್ತುತಿಯನ್ನು ಮಾಡುವಾಗಲೂ ಹವಿಸ್ಸನ್ನು ಅರ್ಪಿಸುವಾಗಲೂ ತಮ್ಮಲ್ಲಿ ಅಗ್ನಿಯ ಸ್ವರೂಪ ಭಾವನೆಯಿಂದ ಇರುತ್ತಾ ದ್ರವ್ಯವು ದೊರೆಯುವ ಅನೇಕ ವಿಧವಾದ (ದಾರಿಗಳನ್ನು) ಉಪಾಯಗಳನ್ನು ತಿಳಿದುಕೊಂಡು ಧನವನ್ನು ಹೊಂದುವರು ಎಂಬೂ. ಸಾಯಣರು **ಅಸ್ಮೈ-ಯಜಮಾನಾಯ ಚಿಕೇತತ್-ಜಾನಾತು, ಅಭಿಮತಫಲಂ ದದಾತ್ವಿತ್ಯರ್ಥಃ । ಯದ್ವಾ ಇದಂ ಸೂಕ್ತರೂಪಂ ಸ್ತೋತ್ರಂ ಜಾನಾತು ।** ಅಗ್ನಿಯು ಯಜಮಾನನಿಗಾಗಿ ಅವನ ಇಷ್ಟವನ್ನು ನೆರವೇರಿಸಲಿ ಅಥವಾ ಈ ಸೂಕ್ತರೂಪವಾದ ಸ್ತೋತ್ರವನ್ನು ತಿಳಿದುಕೊಳ್ಳುವ ಹಾಗೆ ಅನುಗ್ರಹವನ್ನು ಕೊಡಲಿ ಎಂದು ಅರ್ಥವನ್ನು ಮಾಡಿರುವರು. ಮತ್ತು ಈ ಅಗ್ನಿಯ ಕಿರಣಗಳು ತಮ್ಮಷ್ಟಕ್ಕೆ ತಾವಾಗಿಯೇ ಹವಿಸ್ಸನ್ನು ವಹಿಸುವವುಗಳಾಗಿ ಯಜ್ಞಗೃಹಗಳನ್ನು ವ್ಯಾಪಿಸುವುವು. ಅನಂತರ ಅಂತರಿಕ್ಷದಲ್ಲಿ ದೇವತೆಗಳನ್ನು ವ್ಯಾಪಿಸುವುವು ಎಂದು ನವಧಾತುವಿಗೆ ಗಮನವೆಂದು ಅರ್ಥಮಾಡಿರುವರು

ಸ್ಕಂದಸ್ವಾಮಿಗಳು—**ನವಂತೇಃ** ಎಂಬ ಪದಕ್ಕೆ ಸ್ತೋತ್ರಮಾಡುವ ಎಲ್ಲಾ ಮನುಷ್ಯರೂ ಅಗ್ನಿಯು ಯಜ್ಞವೇದಿಯ ಮಧ್ಯದಲ್ಲಿ ಪ್ರಕಾಶಿಸುತ್ತಿರುವಾಗ ಅವನ ಪ್ರಕಾಶವೆಲ್ಲವನ್ನೂ ನೋಡುವರು. ಮತ್ತು ಸ್ವರ್ಗದಲ್ಲಿಯೂ ಅವನ ಪ್ರಕಾಶವನ್ನು ನೋಡುವುದಕ್ಕಾಗಿ ಅಗ್ನಿಯನ್ನು ಸ್ತುತಿಸುವರು ಎಂದು ವಿವರಣೆ ಮಾಡಿರುವರು. ಎರಡು ಭಾಷ್ಯಗಳಲ್ಲಿ ಒಂದು ಪದಕ್ಕೆ ಇಬ್ಬರೂ ಬೇರೆ ಬೇರೆಯಾದ ರೀತಿಯಲ್ಲಿ ಬೇರೆಯ ಪದದೊಡನೆ ಸಂಬಂಧಮಾಡಿ ಅರ್ಥದಲ್ಲಿರುವ ವ್ಯತ್ಯಾಸವನ್ನು ವಿಶದಪಡಿಸಿರುವರು

॥ ವ್ಯಾಕರಣಪ್ರಕ್ರಿಯಾ ॥

**ವಿಭಾವಾ**—ಭಾ ದೀಪ್ತೌ ಧಾತು **ಆತೋಮನಿನ್‌ಕ್ವನಿಪ್‌ವನಿಪಶ್ಚ** ಸೂತ್ರದಿಂದ ವನಿಪ್ ಪ್ರತ್ಯಯ. ವಿಭಾವನ್ ಶಬ್ದವಾಗುತ್ತದೆ. ವನಿಪ್ ಪಿತ್ತಾದುದರಿಂದ ಅನುದಾತ್ತ.

**ಉಸ್ರಃ**—ವಸ ನಿವಾಸೇ ಧಾತು. ಇದಕ್ಕೆ **ಸ್ಫಾಯಿತಂಚಿ**—(ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ. ಈ ಧಾತುವು ಯಜಾದಿಯಲ್ಲಿ ಸೇರಿರುವುದರಿಂದ ಇದಕ್ಕೆ ಕಿತ್ತಾದ ಪ್ರತ್ಯಯವು ಪರದಲ್ಲಿರುವುದರಿಂದ

**ವಚಿಸ್ವಪಿಯಜಾದೀನಾಂ ಕಿತಿ** (ಪಾ. ಸೂ. ೬-೧-೧೫) ಎಂಬುದರಿಂದ ಸಂಪ್ರಸಾರಣ **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಚಿಕೇತತ್**—ಕಿತ ಜ್ಞಾನೇ ಧಾತು. ಜುಹೋತ್ಯಾದಿ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚಲೋಪಃ**—ಸೂತ್ರದಿಂದ ಇಕಾರಲೋಪ. ಶ್ಲು ವಿಕರಣ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ **ಕುಹೋಶ್ಚುಃ** ಎಂಬುದರಿಂದ ಚುತ್ವ **ಲೇಟೋಽಡಾಟೌ** ಸೂತ್ರದಿಂದ ಪ್ರತ್ಯಯಕ್ಕೆ ಅಡಾಗಮ **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಯದ್ಯಪಿ ಇಲ್ಲಿ ಅಭ್ಯಸ್ತ ಸಂಜ್ಞೆ (ದ್ವಿತ್ವವನ್ನು ಹೊಂದಿದ ಎರಡೂ ಖಂಡಗಳು) ಇರುವುದರಿಂದ **ನಾಭ್ಯಸ್ತಸ್ಯಾಚಿ ಪಿತಿ ಸಾರ್ವಧಾತುಕೇ** (ಪಾ. ಸೂ. ೭-೩-೮೭) ಎಂಬುದರಿಂದ ಲಘೂಪಧಗುಣಪ್ರತಿಷೇಧ ಪ್ರಾಪ್ತವಾಗುತ್ತದೆ ಆದರೆ **ಬಹುಲಂ ಛಂದಸೀತಿ ವಕ್ತವ್ಯಮ್** (ಕಾ ೭-೩-೮೭ ೧) ಎಂಬ ವಚನದಿಂದ ಇಲ್ಲಿ ನಿಷೇಧ ಬರುವುದಿಲ್ಲ **ಅಭ್ಯಸ್ತಾನಾಮಾದಿಃ** (ಪಾ ಸೂ ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ತ್ಮನಾ**—ಆತ್ಮನ್ ಶಬ್ದ ತೃತೀಯಾ ಏಕವಚನ ಪರವಾದಾಗ **ಮಂತ್ರೇಷ್ವಾಙ್ಯಾದೇರಾತ್ಮನಃ** (ಪಾ ಸೂ ೬-೪-೧೪೧) ಎಂಬುದರಿಂದ ಆದಿಯ ಆಕಾರಕ್ಕೆ ಲೋಪ

**ಋಣ್ವನ್**— ಇವಿ ರಿವಿ ರವಿ ಧವಿ ಗತ್ಯರ್ಥಾಃ ಧಾತು **ಇದಿತೋನುಮ್ ಧಾತೋಃ** ಎಂಬುದರಿಂದ ನುಮಾಗಮ ವರ್ತಮಾನಾರ್ಥದಲ್ಲಿ ಛಾಂದಸವಾದ ಲಙ್ ಪ್ರಥಮಪುರುಷ ಬಹುವಚನದಲ್ಲಿ ಅಂತಾದೇಶ **ವ್ಯತ್ಯಯೋ ಬಹುಲಂ** ಎಂಬುದರಿಂದ ರೇಫಕ್ಕೆ ಸಂಪ್ರಸಾರಣ ಆದೇಶ **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಋವರ್ಣಾನ್ನಸ್ಯ ಣತ್ವಂ ವಾಚ್ಯಂ** ಎಂಬ ವಚನದಿಂದ ನುಮ್ಮಿನ ನಕಾರಕ್ಕೆ ಣತ್ವ ಋಣ್ವನ್ ಎಂದಾಗುತ್ತದೆ ಅಥವಾ ಋಣಿ ಗತೌ ಧಾತು ತನೋತ್ಯಾದಿ **ತನಾದಿಕೃಞ್ಭ್ಯ ಉಃ** ಎಂಬುದರಿಂದ ಉ ವಿಕರಣ ಹಿಂದಿನಂತೆ ರೂಪಸಿದ್ಧಿಯಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ನವಂತ**—ನವ ಗತೌ ಧಾತು ಇಲ್ಲಿಯೂ ಛಾಂದಸವಾದ ಲಙ್ **ಬಹುಲಂ ಛಂದಸ್ಯಮಾಙ್-ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತದ ಪರದಲ್ಲಿರುವುದರಿಂದಲೂ ಪಾದಾದಿಯಲ್ಲಿರುವುದರಿಂದಲೂ ನಿಘಾತಸ್ವರ ಬರುವುದಿಲ್ಲ ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ ॥ ೯-೧೦ ॥

ಅರವತ್ತೊಂಭತ್ತನೇ ಸೂಕ್ತವು ಸಮಾಪ್ತವು



*

# ಎಪ್ಪತ್ತನೆಯ ಸೂಕ್ತವು

**ವನೇಮೇತಿ ದ್ವೈಪದಮೇಕಾದಶರ್ಚಮಧ್ಯಯನತಃ ಷಡೃಚಂ ಷಷ್ಠಂ ಸೂಕ್ತಂ । ಋಷ್ಯಾದ್ಯಾಃ ಪೂರ್ವವತ್ । ಅನುಕ್ರಾಂತಂ ಚ । ವನೇಮ್ಯೈಕಾದಶೇತಿ ॥ ವಿನಿಯೋಗೋ ಲೈಂಗಿಕಃ ॥**

ಅನುವಾದವು—**ವನೇಮ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಆರನೆಯ ಸೂಕ್ತವು ಇದರಲ್ಲಿ ಆರು ಋಕ್ಕುಗಳಿರುವುವು ಋಷಿದೇವತಾಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ ಅನುಕ್ರಮಣಿಕೆಯಲ್ಲಿ **ವನೇಮ್ಯೈಕಾದಶ** ಎಂದು ಹೇಳಿರುವುದು ವಿನಿಯೋಗವು ಲೈಂಗಿಕವು

## ಸೂಕ್ತ—೭೦

॥ ಓಂ ॥

॥ ಮಂಡಲ—೧ ॥ ಅನುವಾಕ—೧೨ ॥ ಸೂಕ್ತ—೭೦ ॥

॥ ಅಷ್ಟಕ—೧ ॥ ಅಧ್ಯಾಯ—೫ ॥ ವರ್ಗ—೧೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ (೧೧) ॥

॥ ಋಷಿಃ—ಪಾರಾಶರಃ ಶಾಕ್ತ್ಯಃ ॥

ದೇವತಾ—ಅಗ್ನಿಃ ॥

ಛಂದಃ—ದ್ವಿಪದಾ ವಿರಾಟ್ ॥

॥ ಸಂಹಿತಾಪಾಠಃ ॥

ವನೇಮ ಪೂರ್ವೀರರ್ಯೋ ಮನೀಷಾ ಅಗ್ನಿಃ ಸುಶೋಕೋ
ವಿಶ್ವಾನ್ಯಶ್ಯಾಃ ।
ಆ ದೈವ್ಯಾನಿ ವ್ರತಾ ಚಿಕಿತ್ವಾನಾ ಮಾನುಷಸ್ಯ ಜನಸ್ಯ
ಜನ್ಮ ॥ ೧ ॥ ೨ ॥

|| ಪದಪಾಠಃ ||

ವನೇಮ । ಪೂರ್ವೀಃ । ಅರ್ಯಃ । ಮನೀಷಾ । ಅಗ್ನಿಃ । ಸುऽಶೋಕಃ । ವಿಶ್ವಾನಿ । ಅಶ್ಯಾಃ ।

ಆ । ದೈವ್ಯಾನಿ । ವ್ರತಾ । ಚಿಕಿತ್ವಾನ್ । ಆ । ಮಾನುಷಸ್ಯ । ಜನಸ್ಯ । ಜನ್ಮ ॥ ೧ ॥ ೨ ॥

|| ಸಾಯಣಭಾಷ್ಯಂ ||

ಪೂರ್ವೀಃ ಪ್ರಭೂತಾ ಇಷೋऽನ್ನಾನಿ ವನೇಮ । ಸಂಭಜೇಮಹಿ । ಅಗ್ನಿಸ್ತಾದೃಶಾನ್ಯನ್ನಾನಿ ದದಾತ್ವಿತ್ಯರ್ಥಃ । ಮನೀಷಾ ಮನೀಷಯಾ ಬುದ್ಧ್ಯಾ ಯೋऽರ್ಯೋ ಗಂತವ್ಯಃ ಪ್ರಾಪ್ತವ್ಯಃ । ಯದ್ವಾ । ಮನೀಷಯಾರ್ಯಃ ಸ್ವಾಮೀ । ಸುಶೋಕಃ ಶೋಭನದೀಪ್ತಿಃ । ಏವಂಭೂತೋऽಗ್ನಿರ್ವಿಶ್ವಾನಿ ಸರ್ವಾಣಿ ಕರ್ಮಾಣ್ಯಶ್ಯಾಃ । ಅಶ್ನುತೇ । ವ್ಯಾಪ್ನೋತಿ । ಕಿಂ ಕುರ್ವನ್ । ದೈವ್ಯಾನಿ ದೇವೇಷು ಭವಾನಿ ವ್ರತಾ ವ್ರತಾನಿ ಕರ್ಮಾಣಿ ಚಿಕಿತ್ವಾನ್ ಆ ಸಮಂತಾಜ್ಜಾನನ್ । ತಥಾ ಮಾನುಷಸ್ಯ ಜನಸ್ಯ ಮನುಷ್ಯಜಾತಸ್ಯ ಜನ್ಮೋತ್ಪತ್ತಿರೂಪಂ ಕರ್ಮ ಚಿಕಿತ್ವಾನ್ ಆಭಿಮುಖ್ಯೇನ ಜಾನನ್ । ದ್ಯಾವಾಪೃಥಿವ್ಯೋಃ ಸಂಬಂಧೀನಿ ಯಾನಿ ಕರ್ಮಾಣಿ ತಾನಿ ಸರ್ವಾಣ್ಯವಗಚ್ಛನ್ ಅವಗತ್ಯ ವ್ಯಾಪ್ನೋತೀತ್ಯರ್ಥಃ ॥ ವನೇಮ । ವನ ಷಣ ಸಂಭಕ್ತೌ । ಶಪಿ ಪ್ರಾಪ್ತೇ ವ್ಯತ್ಯಯೇನ ಶಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ವಿಕರಣಸ್ವರಃ ಶಿಷ್ಯತೇ । ಪೂರ್ವೀಃ । ಪುರುಶಬ್ದಾದ್ವೋತೋ ಗುಣವಚನಾದಿತಿ ಙೀಷ್ । ಹಲಿ ಚೇತಿ ದೀರ್ಘಃ । ಮನೀಷಾ । ಈಷಾಅಕ್ಷಾದಿತ್ವಾತ್ಪ್ರಕೃತಿಭಾವಃ । ಪಾ. ೬-೧ ೧೨೭-೭ । ಸುಶೋಕಃ । ಶುಚ ದೀಪ್ತೌ । ಭಾವೇ ಘಞ್ । ಚಜೋಃ ಕು ಘಿಣ್ಯತೋರಿತಿ ಕುತ್ವಂ । ಶೋಭನಃ ಶೋಕೋ ಯಸ್ಯ । ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ಅಶ್ಯಾಃ । ದೇವತ್ವಾ ವಿಶ್ವಾನ್ಯಶ್ಯಾಃ । ಋಗ್ವೇ ೧-೬೯-೬ । ಇತಿವತ್ । ಚಿಕಿತ್ವಾನ್ । ಕಿತ ಜ್ಞಾನೇ । ಲಿಟಃ ಕ್ವಸುಃ ॥

|| ಪ್ರತಿಪದಾರ್ಥ ||

**ಪೂರ್ವೀಃ**—ಹೆಚ್ಚಾದ ಅನ್ನವನ್ನು । **ವನೇಮ** –(ಅಗ್ನಿಪ್ರಸಾದದಿಂದ) ಪಡೆಯೋಣ । **ಮನೀಷಾ**—ಬುದ್ಧಿಯಿಂದ । **ಅರ್ಯಃ**—ಪ್ರಾಪ್ಯನಾದ (ಸ್ವಾಮಿಯಾದ) । **ಸುಶೋಕಃ**—ಮಂಗಳಕರವಾದ ಕಾಂತಿಯುಳ್ಳ । **ಅಗ್ನಿಃ**—ಅಗ್ನಿಯು । **ದೈವ್ಯಾನಿ**—ದೇವತೆಗಳ ಸಂಬಂಧವಾದ । **ವ್ರತಾ**—ಕರ್ಮಗಳನ್ನೂ । **ಮಾನುಷಸ್ಯ ಜನಸ್ಯ**—ಮನುಷ್ಯರ । **ಜನ್ಮ**--ಉತ್ಪತ್ತಿರೂಪವಾದ ಕರ್ಮಗಳನ್ನೂ । **ಆ ಚಿಕಿತ್ವಾನ್**- -ಸಂಪೂರ್ಣವಾಗಿ ತಿಳಿದಿರುವವನಾಗಿ । **ವಿಶ್ವಾ**--ಎಲ್ಲಾ ಕರ್ಮಗಳನ್ನೂ । **ಅಶ್ಯಾಃ**—ವ್ಯಾಪಿಸುತ್ತಾನೆ.

|| ಭಾವಾರ್ಥ ||

ಧ್ಯಾನದಿಂದ ಪ್ರಾಪ್ಯನಾದವನೂ ಶೋಭನಕಾಂತಿಯುಕ್ತನಾದವನೂ ಆದ ಅಗ್ನಿಯು ದೇವತಾಸಂಬಂಧವಾದ ಮತ್ತು ಮನುಷ್ಯರ ಉತ್ಪತ್ತಿಸಂಬಂಧವಾದ ವಿಷಯಗಳೆಲ್ಲವನ್ನೂ ತಿಳಿದಿರುವುದರಿಂದಲೇ ಎಲ್ಲಾ ಕರ್ಮಗಳನ್ನೂ ವ್ಯಾಪಿಸುತ್ತಾನೆ. ಅಂತಹ ಅಗ್ನಿಯು ನಮಗೆ ಯಥೇಚ್ಛವಾಗಿ ಅನ್ನವನ್ನು ಅನುಗ್ರಹಿಸಲಿ.

## English Translation.

We solicit abundant (food). Agni, who is to be approached by meditation, and shines with pure light, pervades all holy rites, knowing well the acts that are addressed to the Dieties, and (those which regulate) the birth of the human race,

|| ವಿಶೇಷವಿಷಯಗಳು ||

**ಪೂರ್ವೀಃ—ಪ್ರಭೂತಾ ಇಷೋ ಅನ್ನಾನಿ**—ಅಗ್ನಿಯು ಯಜ್ಞಮಾಡುವ ಯಜಮಾನರುಗಳು ಅಪೇಕ್ಷಿಸುವ ಆಯಾಯ ವಿಧವಾಗಿರುವ ಅನ್ನಗಳನ್ನು ಅನುಗ್ರಹಿಸಲಿ ಎಂದು ಸಾಯಣರೂ, **ಚಿರಂತನೀಃ— ಸಾಮರ್ಥ್ಯಾತ್ ಸಮೃದ್ಧೀರಾಶಿಷೋ ವಾ** ಪೂರ್ವಿಕರು ಅನುಭವಿಸಿರುವ ಪುರಾತನವಾದ ಎಲ್ಲಾ ವಿಧವಾದ ಮಹಿಮೆಯೇ ಮೊದಲಾದವುಗಳ ಅತಿಶಯವನ್ನು ಅಥವಾ ಅವುಗಳನ್ನು ಉಂಟುಮಾಡುವ ಆಶೀರ್ವಾದಗಳನ್ನು ಅಗ್ನಿಯು ಕೊಡಲಿ ಎಂದು ಸ್ಕಂದಸ್ವಾಮಿಗಳೂ ಅರ್ಥವನ್ನು ಮಾಡಿರುತ್ತಾರೆ

**ಮನೀಷಾ ಅರ್ಯಃ—ಬುದ್ಧ್ಯಾ ಗಂತವ್ಯಃ ಪ್ರಾಪ್ತವ್ಯಃ ಯದ್ವಾ ಅರ್ಯಃ ಸ್ವಾಮೀ**—ಅಗ್ನಿಯು ಸರಿಯಾದ ತಿಳುವಳಿಕೆಯುಳ್ಳ ಮತ್ತು ಧೃಡವಾದ ನಿಶ್ಚಯವುಳ್ಳ ಬುದ್ಧಿಯಿಂದ ತಿಳಿಯಲು ತಕ್ಕವನಾಗಿರುವನು ಅಥವಾ ಸರಿಯಾದ ಬುದ್ಧಿಯಿಂದ ಭಾವನೆ ಮಾಡಿದವರಿಂದ ಹೊಂದಲು ಅರ್ಹನಾಗಿರುವನು. ಅಥವಾ ಅಗ್ನಿಯು ತನ್ನ ಬುದ್ಧಿಯ ವೈಭವದಿಂದ ಹವಿರ್ಭಾಗಗಳನ್ನು ಸ್ವೀಕರಿಸುವ ಪೂಜಾರ್ಹನಾದ ಒಡೆಯನಾಗಿರುವನು ಎಂದು ಸಾಯಣಭಾಷ್ಯದಲ್ಲಿ ವಿವೃತವಾಗಿರುವುದು ಮನೀಷಾ ಶಬ್ದಕ್ಕೆ ಸ್ತುತಿಯೆಂಬುವುದಾಗಿ ಅರ್ಥವನ್ನು ಹೇಳಿ ಅಗ್ನಿಯು ಇತರರು ಮಾಡುವ ಸ್ತುತಿಗಳಿಂದ ಕೂಡಿದವನಾಗಿ ಬಹಳ ಕಾಂತಿಯುಳ್ಳವನಾಗಿ ಇರುವನೆಂದು ಸ್ಕಂದಸ್ವಾಮಿಗಳು ಅರ್ಥವನ್ನು ವಿವರಿಸಿರುವರು.

**ಮಾನುಷಸ್ಯ ಜನಸ್ಯ ಜನ್ಮ ಆ ಚಿಕಿತ್ವಾನ್—ಮನುಷ್ಯಜಾತಸ್ಯ ಉತ್ಪತ್ತಿರೂಪಂ ಕರ್ಮ ಅಭಿಮುಖ್ಯೇನ ಜಾನನ್ ತಾನಿ ಸರ್ವಾಣಿ ಅಪಗತ್ಯ ವ್ಯಾಪ್ನೋತಿ |** ಮನುಷ್ಯರ ಉತ್ಪತ್ತಿಯು ಆಗಲು ಕರ್ಮವು ಯಾವುದೆಂಬುವುದನ್ನೂ, ಆ ಕರ್ಮಗಳು ಭೂವ್ಯಂತರಿಕ್ಷಗಳಿಗೆ ಸಂಬಂಧಪಟ್ಟಿರುವುದನ್ನೂ ಚೆನ್ನಾಗಿ ತಿಳಿದು ಅವುಗಳಲ್ಲಿ ಅಗ್ನಿಯು ವ್ಯಾಪಿಸುವನು.

**ಸುಶೋಕಃ—ಶೋಭನಃ ಶೋಕೋ ಯಸ್ಯ** ಒಳ್ಳೆಯದಾದ ಅಥವಾ ಉತ್ತಮವಾದ ಕಾಂತಿಯುಳ್ಳವನು ಎಂದು ಅರ್ಥವು.

ಸ್ಕಂದಸ್ವಾಮಿಗಳು—**ವಿಶ್ವಾನಿ** ಎಂಬ ಶಬ್ದಕ್ಕೆ ಯಜಮಾನರುಗಳು ಅರ್ಪಿಸುವ ಹವಿಸ್ಸುಗಳೆಂದೂ, **ಆ ಮಾನುಷಸ್ಯ ಜನಸ್ಯ ಜನ್ಮ** ಎಂಬ ಪದಗಳಿಗೆ—ಅಗ್ನಿಯು ಹವಿಸ್ಸುಗಳು ಆಯಾಯ ದೇವತೆಗಳ ಉದ್ದೇಶದಿಂದ ತನ್ನಲ್ಲಿ ಅರ್ಪಿಸಲ್ಪಡುವ ಕಾರಣ, ಅದನ್ನು ಆಯಾಯ ದೇವತೆಗಳಿಗೆ ತಾನು ಒಯ್ಯುವ ಕಾರಣ, ಆಯಾಯ ಯಜಮಾನರುಗಳ ಉತ್ಪತ್ತಿಯನ್ನು ತಿಳಿಯುವನು ಎಂದು ವಿವರಿಸಿರುವರು

॥ ವ್ಯಾಕರಣಪ್ರಕ್ರಿಯಾ ॥

**ವನೇಮ**—ವನ ಷಣ ಸಂಭಕ್ತೌ ಧಾತು ವಿಧಿಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ **ನಿತ್ಯಂ ಙಿತಃ** ಎಂಬುದರಿಂದ ಸಕಾರಲೋಪ. **ವ್ಯತ್ಯಯೋ ಬಹುಲಂ** ಸೂತ್ರದಿಂದ ಶಪ್ಪಿಗೆ ಶ ವಿಕರಣ. ಲಙಿಗೆ ಯಾಸುಟಾಗಮ. **ಅತೋ ಯೇಯಃ** (ಪಾ. ಸೂ ೭-೨-೮೦) ಎಂಬುದರಿಂದ ಅಕಾರದ ಪರದಲ್ಲಿರುವುದರಿಂದ ಯಾಸಿಗೆ ಇಯಾದೇಶ ಗುಣ **ಲೋಪೋವ್ಯೋರ್ವಲಿ** ಎಂಬುದರಿಂದ ಯಕಾರಕ್ಕೆ ಲೋಪ. ಅದುಪದೇಶದ ಪರದಲ್ಲಿ ಲ ಸಾರ್ವಧಾತುಕವು (ಮ) ಬಂದುದರಿಂದ **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುತ್ತದೆ ಆಗ ವಿಕರಣ (ಶ) ಸ್ವರ ಉಳಿಯುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ

**ಪೂರ್ವೀಃ**—ಪುರು ಶಬ್ದದ ಮೇಲೆ **ವೋತೋ ಗುಣವಚನಾತ್** (ಪಾ ಸೂ ೪-೧-೪೪) ಎಂಬುದರಿಂದ ಇದು ಗುಣವಾಚಕವಾದುದರಿಂದ ಸ್ತ್ರೀತ್ವದಲ್ಲಿ ಙೀಷ್ **ಹಲಿ ಚ** ಎಂಬುದರಿಂದ ರೇಫಾಂತದ ಉಪಧೆಗೆ ದೀರ್ಘ ದ್ವಿತೀಯಾ ಬಹುವಚನಾಂತರೂಪ, ಪ್ರತ್ಯಯಸ್ವರದಿಂದ ಅಂತೋದಾತ್ತ.

**ಮನೀಷಾ** ಇದಕ್ಕೆ ಅಗ್ನಿಃ ಎಂದು ಪರದಲ್ಲಿರುವುದರಿಂದ ಸವರ್ಣದೀರ್ಘವು ಪ್ರಾಪ್ತವಾಗುತ್ತದೆ. ಆದರೆ ಈಷಾ ಅಕ್ಷಾದಿಯಲ್ಲಿ ಸೇರಿರುವುದರಿಂದ **ಈಷಾ ಅಕ್ಷಾದೀನಾಂ**—(ಪಾ. ಸೂ ೬-೧-೧೨೭-೨) ಎಂಬ ವಚನದಿಂದ ಪ್ರಕೃತಿಭಾವ ಬರುತ್ತದೆ.

**ಸುಶೋಕಃ**—ಶುಚ ದೀಪ್ತೌ ಧಾತು. ಭಾವಾರ್ಥದಲ್ಲಿ ಘಞ್ ಪ್ರತ್ಯಯ **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. **ಚಜೋಃ ಕು ಘಿಣ್ಯತೋಃ** (ಪಾ ಸೂ ೭-೩-೫೨) ಎಂಬುದರಿಂದ ಚಕಾರಕ್ಕೆ ಕುತ್ವ ಶೋಭನಃ ಶೋಕೋ ಯಸ್ಯ ಸಃ ಸುಶೋಕಃ **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ ಸೂ ೬-೨-೧೧೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ

**ಅಶ್ಯಾಃ—ದೇವತ್ವಾ ವಿಶ್ವಾನ್ಯಶ್ಯಾಃ** (ಋ ಸ ೧-೬೯-೭) ಎಂಬಲ್ಲಿ ಇದು ವ್ಯಾಖ್ಯಾತವಾಗಿದೆ.

**ವ್ರತಾ**—ವ್ರತಾನಿ ಎಂದಿರುವಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ

**ಚಿಕಿತ್ವಾನ್**—ಕಿತ ಜ್ಞಾನೇ ಧಾತು ಲಿಟಿಗೆ **ಕ್ವಸುಶ್ಚ** ಸೂತ್ರದಿಂದ ಕ್ವಸು ಆದೇಶ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಚುತ್ವ ಕಿತ್ತಾದುದರಿಂದ ವಸ್‌ನಿಮಿತ್ತವಾಗಿ ಗುಣ ಬರುವುದಿಲ್ಲ

ಚಿಕಿತ್ವಸ್ ಶಬ್ದವಾಗುತ್ತದೆ. ಪ್ರಥಮಾ ಸು ಪರವಾದಾಗ ಉಪಧಾದೀರ್ಘ. ನುಮಾಗಮ. ಸುಲೋಪ ಸಂಯೋಗಾಂತಲೋಪ. ಪ್ರತ್ಯಯಸ್ವರದಿಂದ ಅಕಾರ ಉದಾತ್ತವಾಗುತ್ತದೆ

**ಮಾನುಷಸ್ಯ—ಮನೋರ್ಜಾತಾವಞ್ಯತೌ ಷುಕ್ ಚ** (ಪಾ. ಸೂ. ೪-೧-೧೬೧) ಎಂಬುದರಿಂದ ಮನು ಶಬ್ದಕ್ಕೆ ಅಞ್‌ಪ್ರತ್ಯಯ. ತತ್ಸಂನಿಯೋಗದಿಂದ ಪೂರ್ವಕ್ಕೆ ಷುಕಾಗಮ. **ತದ್ಧಿತೇಷ್ವಚಾ**—ಸೂತ್ರದಿಂದ ಆದಿವೃದ್ಧಿ. ಷಷ್ಠೀಏಕವಚನಾಂತರೂಪ. ಞಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೧-೨ ॥



॥ ಸಂಹಿತಾಪಾಠಃ ॥

ಗರ್ಭೋ ಯೋ ಅಪಾಂ ಗರ್ಭೋ ವನಾನಾಂ ಗರ್ಭಶ್ಚ
ಸ್ಥಾತಾಂ ಗರ್ಭಶ್ಚರಥಾಂ ।
ಅದ್ರೌ ಚಿದಸ್ಮಾ ಅಂತರ್ದುರೋಣೇ ವಿಶಾಂ ನ ವಿಶ್ವೋ
ಅಮೃತಃ ಸ್ವಾಧೀಃ ॥ ೩ ॥ ೪ ॥

॥ ಪದಪಾಠಃ ॥

ಗರ್ಭಃ । ಯಃ । ಅಪಾಂ । ಗರ್ಭಃ । ವನಾನಾಂ । ಗರ್ಭಃ । ಚ । ಸ್ಥಾತಾಂ ।
ಗರ್ಭಃ । ಚರಥಾಂ ।
ಅದ್ರೌ । ಚಿತ್ । ಅಸ್ಮೈ । ಅಂತಃ । ದುರೋಣೇ । ವಿಶಾಂ । ನ । ವಿಶ್ವಃ । ಅಮೃ-
ತಃ । ಸುಽಆಧೀಃ ॥ ೩ ॥ ೪ ॥

|| ಸಾಯಣಭಾಷ್ಯಂ ||

ಯೋಽಗ್ನಿರಪಾಂ ಗರ್ಭೋ ಗರ್ಭವದಂತರ್ವರ್ತೀ ಅಪಾಂನಪಾತ್ಸಂಜ್ಞಃ । ಯಶ್ಚ ವನಾನಾಮರಣ್ಯಾನಾಂ ಗರ್ಭೋ ದಾವಾಗ್ನಿರೂಪೇಣ ತನ್ಮಧ್ಯೇ ವರ್ತತೇ । ಯಶ್ಚ ಸ್ಥಾತಾಂ ಸ್ಥಾವರಾಣಾಂ ಕಾಷ್ಠಾದೀನಾಂ ಗರ್ಭೋಽಂತರವಸ್ಥಾತಾ । ಚರಥಾಂ ಚರಣವತಾಂ ಜಂಗಮಾನಾಂ ಗರ್ಭೋ ಜಾಠರರೂಪೇಣ ದೇಹಮಧ್ಯೇಽವತಿಷ್ಠತೇ । ಏವಂಭೂತಾಯಾಸ್ಮಾ ಅಗ್ನಯೇ ದುರೋಣೇ ದುಸ್ತರ್ಯೇಗೃಹೇಽದ್ರೌ ಚಿತ್ ಪರ್ವತೇಽಪ್ಯಂತರ್ಮಧ್ಯೇ ಹವಿಃ ಪ್ರಯಚ್ಛಂತೀತಿ ಶೇಷಃ । ಸೋಽಯಮಮೃತೋಽಮರಣಧರ್ಮಾಗ್ನಿಃ ಸ್ವಾಧೀಃ ಶೋಭನಕರ್ಮಯುಕ್ತಃ ಶೋಭನಾಧ್ಯಾನೋ ವಾ । ಅಸ್ಮಾಕಂ ಭವತ್ವಿತಿ ಶೇಷಃ । ತತ್ರ ದೃಷ್ಟಾಂತಃ । ವಿಶ್ವೋ ನಿವೇಶಯಿತಾ ಸುಖೇನಾವಸ್ಥಾಪಯಿತಾ ರಾಜಾ ವಿಶಾಂ ನ । ಪ್ರಜಾನಾಂ ಯಥಾ ರಕ್ಷಣರೂಪಶೋಭನಕರ್ಮಯುಕ್ತೋ ಭವತಿ ತದ್ವತ್ ॥ ಸ್ಥಾತಾಂ । ತಿಷ್ಠತೇಃ ಕ್ವಿಪಿ ಛಾಂದಸಸ್ತುಕ್ । ಯದ್ವಾ । ಔಣಾದಿಕಸ್ತುಪ್ರತ್ಯಯಃ । ಆಮ್ಯಂತ್ಯಲೋಪಶ್ಛಾಂದಸಃ । ಚರಥಾಂ । ಶೀಙ್‌ಶಪಿರುಗಮಿ । ಉ. ೩-೧೧೩ । ಇತಿ ವಿಧೀಯಮಾನೋಽಥಪ್ರತ್ಯಯೋ ಬಹುಲವಚನಾಚ್ಚರೇರಪಿ ದ್ರಷ್ಟವ್ಯಃ । ಆಗಮಾನುಶಾಸನಸ್ಯಾನಿತ್ಯತ್ವಾದಾಮೋ ನುಡಭಾವೇ ಸವರ್ಣದೀರ್ಘಃ । ವಿಶ್ವಃ । ವಿಶ ಪ್ರವೇಶನೇ । ಅಸ್ಮಾದಂತರ್ಭಾವಿತಣ್ಯರ್ಥಾದಶಿಪ್ರುಷೀತ್ಯಾದಿನಾ ಕ್ವನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ ॥

|| ಪ್ರತಿಪದಾರ್ಥ ||

**ಯಃ**—ಯಾವ ಅಗ್ನಿಯು । **ಅಪಾಂ ಗರ್ಭಃ**—ಉದಕ ಮಧ್ಯದಲ್ಲಿರುವವನೋ (ಅಪಾಂನಪಾತ್ ಎಂಬ ಹೆಸರುಳ್ಳವನೋ) । **ವನಾನಾಂ ಗರ್ಭಃ**—(ದವಾಗ್ನಿರೂಪದಿಂದ) ಅರಣ್ಯದಲ್ಲಿರುವವನೋ । **ಚ**—ಮತ್ತು । **ಸ್ಥಾತಾಂ ಗರ್ಭಃ**—ಸ್ಥಾವರವಾದ ಕಾಷ್ಠಾದಿಗಳಲ್ಲಿರುವವನೋ । **ಚರಥಾಂ ಗರ್ಭಃ**—ಜಂಗಮವಾದ ಪ್ರಾಣಿಗಳಲ್ಲಿ (ಜಠರದಲ್ಲಿ) ಇರುವವನೋ । **ಅಸ್ಮೈ**—ಅಂತಹ ಅಗ್ನಿಗೆ । **ದುರೋಣೇ**—ಯಾಗ ಗೃಹಗಳಲ್ಲಿ । **ಅದ್ರೌ ಚಿತ್**—ಪರ್ವತಗಳಲ್ಲಿಯೂ । **ಅಂತಃ**—ಮಧ್ಯದಲ್ಲಿ (ಹವಿಸ್ಸನ್ನು ಅರ್ಪಿಸುತ್ತಾರೆ) । **ಅಮೃತಃ**—ಅಮರನಾದ ಅಗ್ನಿಯು । **ವಿಶ್ವಃ**—ಪ್ರಜೆಗಳಿಗೆ ಸುಖಕರನಾದ ರಾಜನು । **ವಿಶಾಂ ನ**—ಪ್ರಜೆಗಳ ವಿಷಯದಲ್ಲಿ ಹೇಗೋ ಹಾಗೆ । **ಸ್ವಾಧೀಃ**- (ನಮ್ಮ ವಿಷಯದಲ್ಲಿ) ಸುಖಕರವಾದ ಕರ್ಮವುಳ್ಳವನಾಗಲಿ .

|| ಭಾವಾರ್ಥ ||

ಉದಕಮಧ್ಯದಲ್ಲಿಯೂ ಅರಣ್ಯಗಳಲ್ಲಿಯೂ ಚರಾಚರ ವಸ್ತುಗಳಲ್ಲಿಯೂ ಇರುವ ಅಗ್ನಿಗೆ ಯಾಗಗೃಹಗಳಲ್ಲಿಯೂ ಪರ್ವತಪ್ರದೇಶದಲ್ಲಿಯೂ ಸಹ ಹವಿಸ್ಸನ್ನು ಅರ್ಪಿಸುತ್ತಾರೆ ಈ ಅಮರನಾದ ಅಗ್ನಿಯು, ಪ್ರಜಾಹಿತೈಷಿಯಾದ ರಾಜನು ಪ್ರಜೆಗಳ ವಿಷಯದಲ್ಲಿ ಹೇಗೆ ಹಿತವಾದ ರೀತಿಯಲ್ಲಿ ವರ್ತಿಸುತ್ತಾನೋ ಹಾಗೆ ನಮ್ಮ ವಿಷಯದಲ್ಲಿ ಹಿತವಾದ ಕರ್ಮವುಳ್ಳವನಾಗಲಿ (ಹಿತವನ್ನುಂಟುಮಾಡಲಿ)

## English Translation

(They offer oblations) on the mountain, or in the mansion, to that Agni, who is within the waters, within woods, and within all movable and immovable things, immortal, and performing pious acts, like a benevolent (prince) among his people

॥ ವಿಶೇಷವಿಷಯಗಳು ॥

**ಅಪಾಂ ಗರ್ಭಃ—ಗರ್ಭವದಂತರ್ವರ್ತೀ ಅಪಾಂನಪಾತ್ ಸಂಜ್ಞಃ** । ಅಗ್ನಿಯು ನೀರುಗಳ ಮಧ್ಯದಲ್ಲಿ ಇರುವವನಾಗಿ ಅಪಾನ್ನಪಾತ್ ಎಂದು ಹೆಸರನ್ನು ಹೊಂದಿರುವನು. ಈ ಅಪಾನ್ನಪಾತ್ ಎಂಬ ದೇವನು ಮಧ್ಯಸ್ಥಾನದೇವತೆಗಳಲ್ಲಿ ಸೇರಿರುವನು ನಿರುಕ್ತದಲ್ಲಿ ಅಪಾನ್ನಪಾತ್ ಎಂಬ ಶಬ್ದವು (ನಿ. ೧೦–೧೮) ಪಠಿತವಾಗಿರುತ್ತದೆ ಈ ಶಬ್ದದಲ್ಲಿ ಇರುವ ನಪಾತ್ ಎಂಬ ಪದಕ್ಕೆ ಅಪತ್ಯವೆಂದು ಅರ್ಥಮಾಡಿರುವರು. ಇಲ್ಲಿ ಆ ಶಬ್ದವು ಪೌತ್ರನೆಂದು ಪ್ರಯುಕ್ತವಾಗಿರುತ್ತದೆ. ಅಗ್ನಿಯು ಉದಕಗಳ ಪೌತ್ರನೆಂದು ವಿವರಿಸಿ **ಅಪಾನ್ನಪಾನ್ಮಧುಮತೀರಪೋ ದಾ ಯೋಭಿರಿಂದ್ರೋ ವೃವಧೇ ವೀರ್ಯಾಯ** ಎಂಬ ಋಕ್ಕನ್ನು (ಋ ಸಂ ೧೦–೩೦–೪) ಉದಾಹರಿಸಿರುವರು ಉದಕಗಳ, ಅರಣ್ಯಗಳ, ಸ್ಥಾವರವಸ್ತುಗಳಾದ ಕಾಷ್ಠಾದಿಗಳ ಮತ್ತು ಜಂಗಮಪ್ರಾಣಿಗಳ ಮಧ್ಯದಲ್ಲಿ ಆಯಾಯ ಹೆಸರುಗಳಿಂದ ಪ್ರಸಿದ್ಧನಾಗಿರುವ ಅಗ್ನಿಗೆ ಯಾಗಮಾಡುವ ಯಜಮಾನರುಗಳು ಪರ್ವತಗಳ ಮಧ್ಯದಲ್ಲಿಯೂ ದುಷ್ಪ್ರವೇಶ್ಯವಾದ ಸ್ಥಾನದಲ್ಲಿಯೂ ಹವಿಸ್ಸುಗಳನ್ನು ಅರ್ಪಿಸುವರು ಎಂದು ಸಾಯಣರು ವ್ಯಾಖ್ಯಾನಮಾಡಿರುವರು. ಸ್ಕಂದಸ್ವಾಮಿಗಳು—ಈ ಪ್ರಕಾರದಿಂದ ಇರುವ ಅಗ್ನಿಗೆ ಪರ್ವತದ ಮಧ್ಯದಲ್ಲಿಯೂ ಸ್ಥಾನವಿರುವುದು ಮತ್ತು ಯಜ್ಞವು ನಡೆಯುವ ಯಾಗಶಾಲೆಯ ಮಧ್ಯದಲ್ಲಿಯೂ ಸ್ಥಾನವಿರುವುದು ಎಂದು ಅರ್ಥಮಾಡಿರುವರು

**ವಿಶಾಂ ನ ವಿಶ್ವಃ ಅಮೃತಃ ಸ್ವಾಧೀಃ—ಸುಖೇನಾವ ಸ್ಥಾಪಯಿತಾ ರಾಜಾ ಪ್ರಜಾನಾಂ ರಕ್ಷಣರೂಪಶೋಭನಕರ್ಮಯುಕ್ತೋ ಭವತಿ ತಥಾ ಅಮರಣಧರ್ಮಾ ಅಗ್ನಿಃ ಶೋಭನಾಧ್ಯಾನೋ ವಾ ಅಸ್ಮಾಕಂ ಭವತು**—ಪ್ರಜೆಗಳನ್ನೂ ಎಲ್ಲರನ್ನೂ ಸುಖವಾಗಿರುವಂತೆ ಅವರವರಿಗೆ ಅನುಕೂಲವಾಗುವ ಕರ್ಮಗಳನ್ನು ಆಚರಿಸುವ ಆಲೋಚನೆಯನ್ನು ಮಾಡುವ ರಾಜನ ಹಾಗೆ ಅಗ್ನಿಯು ದೇವತಾರೂಪದಿಂದ ಇರುತ್ತಾ ನಮ್ಮೆಲ್ಲರಿಗೂ ಸುಖವಾಗುವ ಹಾಗೆ (ಸಂಕಲ್ಪವನ್ನು) ಅನುಗ್ರಹಿಸಲಿ ಎಂದು ನ ಎಂಬ ನಿರುಕ್ತದಲ್ಲಿ ಉಕ್ತವಾಗಿರುವ ಉಪಮಾರ್ಥವನ್ನು ಸ್ವೀಕರಿಸಿ ಸಾಯಣರು ಅರ್ಥಮಾಡಿರುವರು

ಸ್ಕಂದಸ್ವಾಮಿಗಳು—ವಿಶಾಂ ಎಂಬುದಕ್ಕೆ **ಯಷ್ಟೄಣಾಂ, ಸ್ತೋತೄಣಾಂ** ಯಾಗಮಾಡುವವರು, ಅಥವಾ ಸ್ತೋತ್ರಮಾಡುವವರು ಎಂಬ ಅರ್ಥವನ್ನೂ, **ವಿಶ್ವಃ** ಎಂಬ ಪದವು ಎಲ್ಲಾ ಕಾರ್ಯಗಳನ್ನೂ ಆಚರಿಸುವವನಾದ ಕಾರಣ ಸರ್ವನೆಂದು ಅಗ್ನಿಯು ವ್ಯಪದಿಷ್ಟನಾಗಿರುವನು ಎಂದೂ, ನ ಎಂಬುವುದು ಉಪಮಾರ್ಥವಾಗಿದ್ದಾಗ್ಯೂ (ನಿ ೭–೩೧) ಸಂಪ್ರತಿ ಎಂಬರ್ಥದಲ್ಲಿ ಪ್ರಯುಕ್ತವಾಗಿರುವುದೆಂದೂ **ಯೂವನ್ಮಾತ್ರಮುಷಸೋ ನ ಪ್ರತೀಕಂ** (ಋ ಸಂ. ೧೦–೮೮–೧೯) ಎಂದು ಹೇಳಿ ಈ ವಾಕ್ಯಕ್ಕೆ ಮುಂದಿನ ವಾಕ್ಯದ ಸಂಗಡ ಅರ್ಥವನ್ನು ಹೇಳುತ್ತಾರೆ

॥ ವ್ಯಾಕರಣಪ್ರಕ್ರಿಯಾ ॥

**ಅಪಾಂ**—ಅಪ್ ಶಬ್ದ ಷಷ್ಠೀಬಹುವಚನಾಂತರೂಪ. **ಊಡಿದಂಪದಾದಿ**—ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸ್ಥಾತಾಮ್**—ಷ್ಠಾ ಗತಿ ನಿವೃತ್ತೌ ಧಾತು **ಕ್ವಿಪ್ ಚ** (ಪಾ ಸೂ. ೩-೨-೭೬) ಎಂಬುದರಿಂದ ಕ್ವಿಪ್ ಧಾತ್ವಾದಿಗೆ ಸಕಾರಾದೇಶ. ಹ್ರಸ್ವನಿಮಿತ್ತವಿಲ್ಲದಿದ್ದರೂ ಛಾಂದಸವಾಗಿ ತುಕಾಗಮ ಬರುತ್ತದೆ. ಸ್ಥಾತ್ ಎಂದು ಶಬ್ದವಾಗುತ್ತದೆ. ಅಥವಾ ಬಹುಲಗ್ರಹಣದಿಂದ ಉಣಾದಿಸಿದ್ಧವಾದ ತು ಪ್ರತ್ಯಯ. ಸ್ಥಾತು ಶಬ್ದವಾಗುತ್ತದೆ. ಆಮ್ ಪರವಾದಾಗ ಅಂತ್ಯ (ಉಕಾರ) ಲೋಪವು ಛಾಂದಸವಾಗಿ ಬರುತ್ತದೆ. **ಸಾವೇಕಾಚಸ್ತೃತೀಯಾದಿಃ** (ಪಾ ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಚರಥಾಮ್**—ಚರ ಗತಿಭಕ್ಷಣಯೋಃ ಧಾತು **ಶೀಙ್‌ಶಪಿರುಗಮಿ**—(ಉ. ಸೂ. ೩-೫೯೩) ಎಂಬುದರಿಂದ ವಿಧಿಸಲ್ಪಡುವ ಅಥ ಪ್ರತ್ಯಯವು **ಉಣಾದಯೋ ಬಹುಲಂ** ಎಂಬಲ್ಲಿ ಬಹುಲಗ್ರಹಣದಿಂದ ಈ ಧಾತುವಿಗೂ ಬರುತ್ತದೆ. ಷಷ್ಠೀಬಹುವಚನದಲ್ಲಿ ಚರಥ+ಆಮ್ ಎಂದಿರುವಾಗ **ಆಗಮಶಾಸ್ತ್ರಮನಿತ್ಯಂ** ಎಂಬ ವಚನದಿಂದ **ಹ್ರಸ್ವನದ್ಯಾಪೋನುಟ್** ಎಂಬುದರಿಂದ ಬರಬೇಕಾದ ನುಡಾಗಮ ಇಲ್ಲಿ ಬರುವುದಿಲ್ಲ ಆಗ ಸವರ್ಣದೀರ್ಘ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ರೇಫೋತ್ತರಾಕಾರವು ಉದಾತ್ತವಾಗುತ್ತದೆ

**ವಿಶಾಮ್**—ಷಷ್ಠೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿಶ್ವಃ**—ವಿಶ ಪ್ರವೇಶನೇ ಧಾತು ಣಿಜರ್ಥವು (ಪ್ರೇರಣಾ) ಧಾತ್ವರ್ಥಾಂತರ್ಭೂತವಾಗಿರುವಾಗ **ಅಶಿಪ್ರುಷಿಲಟಿಕಣಿ**—(ಉ ಸೂ ೧-೧೪೯) ಎಂಬುದರಿಂದ, ಕ್ವನ್ ಪ್ರತ್ಯಯ ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತವಾಗುತ್ತದೆ ॥ ೩-೪ ॥

॥ ಸಂಹಿತಾಪಾಠಃ ॥

ಸ ಹಿ ಕ್ಷಪಾವಾ ಅಗ್ನೀ ರಯೀಣಾಂ ದಾಶದ್ಯೋ ಅಸ್ಮಾ ಅರಂ ಸೂಕ್ತೈಃ ।
ಏತಾ ಚಿಕಿತ್ವೋ ಭೂಮಾ ನಿ ಪಾಹಿ ದೇವಾನಾಂ ಜನ್ಮ ಮರ್ತಾಂಶ್ಚ ವಿದ್ವಾನ್ ॥ ೫ ॥ ೬ ॥

॥ ಪದಪಾಠಃ ॥

ಸಃ । ಹಿ । ಕ್ಷಪಾऽವಾನ್ । ಅಗ್ನಿಃ । ರಯೀಣಾಂ । ದಾಶತ್ । ಯಃ । ಅಸ್ಮೈ ।
ಅರಂ । ಸುऽಉಕ್ತೈಃ ।

ಏತಾ । ಚಿಕಿತ್ವಃ । ಭೂಮ । ನಿ । ಪಾಹಿ । ದೇವಾನಾಂ । ಜನ್ಮ । ಮರ್ತಾನ್ ।
ಚ । ವಿದ್ವಾನ್ ॥ ೫ ॥ ೬ ॥

॥ ಸಾಯಣಭಾಷ್ಯಂ ॥

ಸ ಹ್ಯಗ್ನಿಃ ಕ್ಷಪಾವಾನ್ । ಕ್ಷಪೇತಿ ರಾತ್ರಿನಾಮ । ರಾತ್ರಿಮಾನ್ । ಆಗ್ನೇಯೀ ವೈ ರಾತ್ರಿಃ । ತೈ. ಬ್ರಾ. ೨-೧-೨-೭ । ಇತಿ ಶ್ರುತೇಃ । ರಾತ್ರೇರಗ್ನಿಸಂಬಂಧೋಽಪ್ಯಗ್ನಿರ್ಜ್ಯೋತಿರ್ಜ್ಯೋತಿರಗ್ನಿಃ ಸ್ವಾಹೇತಿ ಹೂಯಮಾನತ್ವಾತ್ । ತೈ. ಬ್ರಾ. ೨-೧-೨-೧೦ । ಯದ್ವಾ । ರಾಕ್ಷಸಾದೀನಾಂ ಕ್ಷಪಣೇನ ನಾಶನೇನ ಯುಕ್ತಃ । ಏವಂಭೂತೋಽಗ್ನಿಃ ಸ್ತೋತ್ರೇ ಯಜಮಾನಾಯ ರಯೀಣಾಂ ಧನಾನಿ ದಾಶತ್ । ದಾಶತಿ ಪ್ರಯಚ್ಛತಿ । ಯೋ ಯಜಮಾನೋಽಸ್ಮಾ ಅಗ್ನಯೇ ಸೂಕ್ತೈಃ ಸುಷ್ಠೂಕ್ತೈರ್ಯಥಾಶಾಸ್ತ್ರಂ ಪ್ರಯುಕ್ತೈರ್ಮಂತ್ರೈರರಮಲಂ ಪರ್ಯಾಪ್ತಂ ಸ್ತೋತ್ರಂ ಕರೋತಿ ತಸ್ಮಾ ಇತ್ಯರ್ಥಃ । ಹೇ ಚಿಕಿತ್ವಃ । ಚಿಕಿತ್ವಾಂಶ್ಚೇತನಾವಾನ್ । ನಿ. ೨-೧೧ । ಇತಿ ಯಾಸ್ಕಃ । ಹೇ ಚೇತನಾವಾನ್ ಸರ್ವಜ್ಞಾಗ್ನೇ ತ್ವಂ ದೇವಾನಾಮಿಂದ್ರಾದೀನಾಂ ಜನ್ಮ ಜನ್ಮಾನಿ ಮರ್ತಾನ್ಮನುಷ್ಯಾಂಶ್ಚ ವಿದ್ವಾನ್ ಜಾನನ್ನೇತೈತಾನಿ ಭೂಮ ಭೂಮ್ಯುಪಲಕ್ಷಿತಾನಿ ಭೂತಜಾತಾನಿ ನಿ ಪಾಹಿ । ನಿತರಾಂ ಪಾಲಯ । ಯತಸ್ತ್ವಂ ದೇವಮನುಷ್ಯಾದೀನ್ಸರ್ವಾನ್ ಜಾನಾಸಿ ಅತ ಏವಮುಚ್ಯತ ಇತ್ಯರ್ಥಃ ॥ ರಯೀಣಾಂ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ । ದಾಶತ್ । ದಾಶೃ ದಾನೇ । ಲೇಟ್ಯಡಾಗಮಃ । ಅರಂ । ವಾಲಮೂಲೇತ್ಯಾದಿನಾ ಲತ್ವವಿಕಲ್ಪಃ । ಸೂಕ್ತೈಃ । ಸೂಪಮಾನಾತ್ ಕ್ತಃ । ಪಾ. ೬-೨-೧೪೫ । ಇತ್ಯುತ್ತರಪದಾಂತೋದಾತ್ತತ್ವಂ । ಚಿಕಿತ್ವಃ । ಮತುವಸೋ ರುರಿತಿ ನಕಾರಸ್ಯ ರುತ್ವಂ । ಭೂಮ । ಸುಪಾಂ ಸುಲುಗಿತಿ ಭೂಮಿಶಬ್ದಾದುತ್ತರಸ್ಯಾ ದ್ವಿತೀಯಾಯಾ ಡಾದೇಶಃ । ಪದಕಾಲೇ ಹ್ರಸ್ವಶ್ಛಾಂದಸಃ ॥

॥ ಪ್ರತಿಪದಾರ್ಥ ॥

**ಯಃ**—ಯಾವ ಯಜಮಾನನು । **ಅಸ್ಮೈ**—(ಅಗ್ನಿಗೆ) ಇವನಿಗೆ । **ಸೂಕ್ತೈಃ**—ಚೆನ್ನಾಗಿ ಉಪಚರಿಸಲ್ಪಟ್ಟ (ಶಾಸ್ತ್ರೋಕ್ತವಾದ) ಮಂತ್ರಗಳಿಂದ । **ಅರಂ**—ಚೆನ್ನಾಗಿ (ಸ್ತೋತ್ರಮಾಡುತ್ತಾನೋ) । (**ತಸ್ಮೈ**—ಅಂತಹ ಯಜಮಾನನಿಗೆ) । **ಕ್ಷಪಾವಾನ್**—ರಾತ್ರಿಸಂಬಂಧವುಳ್ಳ (ರಾಕ್ಷಸಾದಿಗಳ ನಾಶಯುಕ್ತನಾದ) । **ಸ ಅಗ್ನಿಃ**—

ಆ ಅಗ್ನಿಯು । **ರಯೀಣಾಂ**—ಧನವನ್ನು । **ದಾಶತ್ ಹಿ**—ಕೊಡುತ್ತಾನೆಯಷ್ಟೆ । **ಚಿಕಿತ್ವಃ**—ಜ್ಞಾನಿಯಾದ (ಸರ್ವಜ್ಞನಾದ) ಎಲೈ ಅಗ್ನಿಯೇ । **ದೇವಾನಾಂ**—ಇಂದ್ರಾದಿ ದೇವತೆಗಳ । **ಜನ್ಮ**—ಜನ್ಮವನ್ನು । **ಮರ್ತಾನ್-ಚ**—ಮನುಷ್ಯರನ್ನೂ । **ವಿದ್ವಾನ್**—ತಿಳಿದ (ನೀನು) । **ಏತಾ**—ಈ । **ಭೂಮ**—ಭೂಮಿಯಲ್ಲಿರುವ (ಭೂತ ಜಾತಗಳನ್ನು) । **ನಿ ಪಾಹಿ**—ಚೆನ್ನಾಗಿ ರಕ್ಷಿಸು

॥ ಭಾವಾರ್ಥ ॥

ರಾತ್ರಿಗೆ ಯಜಮಾನನೂ ರಾಕ್ಷಸನಾಶಕನೂ ಆದ ಅಗ್ನಿಯು ತನ್ನನ್ನು ಸೂಕ್ತಗಳಿಂದ ಸ್ತುತಿಸುವವರಿಗೆ ಧನಾದಿಗಳನ್ನು ಅನುಗ್ರಹಿಸುತ್ತಾನೆ ಇಂದ್ರಾದಿ ದೇವತೆಗಳ ಮತ್ತು ಮನುಷ್ಯರ ಜನನಾದಿಗಳೆಲ್ಲವನ್ನೂ ತಿಳಿದ ಸರ್ವಜ್ಞನಾದ ಎಲೈ ಅಗ್ನಿಯೇ, ಈ ಭೂಮಿಯಲ್ಲಿರುವ ಭೂತಜಾತಗಳೆಲ್ಲವನ್ನೂ ರಕ್ಷಿಸು

English Translation

Agni, the lord of night, grants riches to (the worshipper) who adores him with sacred hymns. Agni, who are omniscient, and know the origin of Gods and men, protect all these (beings dwelling) upon earth.

॥ ವಿಶೇಷವಿಷಯಗಳು ॥

**ಅಗ್ನಿಃ ಕ್ಷಪಾವಾನ್**—**ಕ್ಷಪಾ ಇತಿ ರಾತ್ರಿನಾಮ । ಆಗ್ನೇಯೀ ವೈ ರಾತ್ರಿಃ (ತೈ. ಬ್ರಾ. ೨-೧-೨-೭) "ಅಗ್ನಿರ್ಜ್ಯೋತಿರ್ಜ್ಯೋತಿರಗ್ನಿಃ ಸ್ವಾಹಾ" (ತೈ. ಬ್ರಾ. ೨-೧-೨-೧೦) ಯದ್ವಾ ರಾಕ್ಷಸಾನಾಂ ಕ್ಷಪಣೇನ ನಾಶನೇನ ಯುಕ್ತಃ**—ಅಗ್ನಿಯು ರಾತ್ರಿಯ ಸಂಬಂಧವನ್ನು ಹೆಚ್ಚಾಗಿ ಹೊಂದಿ ಇರುವನು ಕ್ಷಪಾಶಬ್ದವು ಇಪ್ಪತ್ತುಮೂರು ರಾತ್ರಿನಾಮಗಳ ಮಧ್ಯದಲ್ಲಿ (ನಿ. ೨-೧೮) ಉಕ್ತವಾಗಿರುತ್ತದೆ ಕ್ಷಪಾ ಶಬ್ದವು ಅಂತೋದಾತ್ತವಾಗಿರುವಾಗ ರಾತ್ರಿವಾಚಕವಾಗಿರುತ್ತದೆ ಆದ್ಯುದಾತ್ತವಾಗಿರುವಾಗ ಕ್ಷಪಣವನ್ನು ಬೋಧಿಸುವುದು **ನೃಣಾಂ ನರ್ಯೋ ನೃತಮಃ ಕ್ಷಪಾವಾನ್ (ಋ. ಸಂ. ೧೦-೨೯-೧) ತ್ವಮಿದಸಿ ಕ್ಷಪಾವಾನ್ (ಋ. ಸಂ. ೮-೭೧-೨)** ಎಂದು ಎರಡು ವಿಧವಾದ ಅರ್ಥಗಳಿಗೂ ಉದಾಹರಣೆಯಿರುವುದು ತೈತ್ತಿರೀಯ ಬ್ರಾಹ್ಮಣದಲ್ಲಿಯೂ ರಾತ್ರಿಯು ಅಗ್ನಿಗೆ ಸಂಬಂಧಪಟ್ಟಿರುವುದು ಎಂದು ಹೇಳಿರುತ್ತದೆ ಯಜ್ಞಮಾಡುವವರೂ ಕೂಡ **"ಅಗ್ನಿರ್ಜ್ಯೋತಿಃ"** ಎಂಬ ಮಂತ್ರದಿಂದ ಆಹುತಿಯನ್ನು ಅಗ್ನಿಗೆ ಅರ್ಪಿಸುವರು ರಾಕ್ಷಸರನ್ನು ಬಹಳವಾಗಿ ನಾಶಮಾಡುವವನಾದ್ದರಿಂದಲೂ, ಕ್ಷಪ ಧಾತುವಿಗೆ ನಾಶವೆಂದು ಅರ್ಥವಿರುವುದರಿಂದಲೂ, ಅಗ್ನಿಯು ಕ್ಷಪಾವಂತನಾಗಿರುವನು.

ಸ್ಕಂದಸ್ವಾಮಿಗಳು—**ಕ್ಷಪಾ ಇತಿ ರಾತ್ರಿನಾಮ** ಕ್ಷಪಾ ಶಬ್ದವು ರಾತ್ರಿವಾಚಕವಾಗಿರುತ್ತದೆ ಅಹೋ ರಾತ್ರಿಗಳೆರಡರಲ್ಲಿಯೂ ಅಗ್ನಿಯ ಸಂಬಂಧವು ಇದ್ದಾಗ್ಯೂ ರಾತ್ರಿಯಲ್ಲಿ ಅಗ್ನಿಯ ಸಂಬಂಧವು ವಿಶೇಷವಾಗಿದ್ದು ಅಗ್ನಿಯು ಬಹಳ ಪ್ರಕಾಶವುಳ್ಳವನಾದುದರಿಂದ ಅವಶ್ಯಕವಾಗಿರುವುದು. ಈ ಪ್ರಕಾಶದ ಸಂಬಂಧದಿಂದ ಅಗ್ನಿಯು ಕ್ಷಪಾವಂತನೆಂದು ವ್ಯಪದಿಷ್ಟನಾಗಿರುವನು ಅಥವಾ ಸ್ತುತಿಗಳುಶಕ್ತಿಯನ್ನು ಹೆಚ್ಚುಮಾಡುತ್ತಾ ದರ್ಬಲತ್ವವನ್ನು ನಾಶಮಾಡುವವು

ಆದ್ದರಿಂದ **"ಕ್ಷಪಯಂತಿ ನಿರ್ವೀರ್ಯಕಾಂ"** ಎಂಬ ವ್ಯಾಖ್ಯಾನದಿಂದ ಕ್ಷಪಾ ಶಬ್ದಕ್ಕೆ ಸ್ತುತಿ ಎಂದು ಅರ್ಥವು. ದೇವತೆಗಳನ್ನು ಸ್ತೋತ್ರಮಾಡುವುದರಿಂದ ಅವರ ದುರ್ಬಲತ್ವವು ನಾಶವಾಗಿ ಅವರ ಸಾಮರ್ಥ್ಯವು ವೃದ್ಧಿಯಾಗುವುದು. ಈ ಪ್ರಕಾರವಾದ ಸ್ತೋತ್ರಗಳಿಗೆ ಕಾರಣನಾಗಿರುವ ಕಾರಣ ಅಗ್ನಿಯು ಕ್ಷಪಾವಂತನಾಗುವನೆಂದು ಅರ್ಥಮಾಡಿರುವರು

**ಚಿಕಿತ್ವಃ—ಚೇತನಾವನ್ ಸರ್ವಜ್ಞ "ಚಿಕಿತ್ವಾನ್ ಚೇತನಾವಾನ್"** (ನಿ. ೨-೧೧) **ಇತಿಯಾಸ್ಕಃ।** ಜ್ಞಾನವಂತನು ಎಲ್ಲವನ್ನೂ ತಿಳಿದು ಇರುವ ಕಾರಣ ಅಗ್ನಿಯು ಸರ್ವಜ್ಞನೆನಿಸಿರುವನು **ಕಿತಿ ಜ್ಞಾನೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಚಿಕಿತ್ವಾನ್ ಎಂಬ ಶಬ್ದಕ್ಕೆ ಚೇತನಾವಾನ್ ಜ್ಞಾನವಂತನು ಎಂದು ಅರ್ಥವನ್ನು ಮಾಡಿರುತ್ತಾರೆ

॥ ವ್ಯಾಕರಣಪ್ರಕ್ರಿಯಾ ॥

**ಕ್ಷಪಾವಾನ್**—ಕ್ಷಪಾ ಅಸ್ಯ ಅಸ್ತಿ ಇತಿ ಕ್ಷಪಾವಾನ್. **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** ಸೂತ್ರದಿಂದ ಮತುಪ್ ಪ್ರತ್ಯಯ **ಮಾದುಪಧಾಯಾಃ**—ಸೂತ್ರದಿಂದ ಆಕಾರದ ಪರದಲ್ಲಿರುವುದರಿಂದ ಮತುಪಿನ ಮಕಾರಕ್ಕೆ ವಕಾರಾದೇಶ ಮತುಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

ರಯೀಣಾಂ—**ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಮ್** ಎಂಬ ಸೂತ್ರದಲ್ಲಿ **ಕ್ರಿಯಾಗ್ರಹಣಂ ಕರ್ತವ್ಯಂ** ಎಂಬ ವಚನವಿರುವುದರಿಂದ ಕರ್ಮಕ್ಕೆ ಸಂಪ್ರದಾನ ಸಂಜ್ಞೆ ಇರುವುದರಿಂದ ಚತುರ್ಥ್ಯರ್ಥದಲ್ಲಿ ಷಷ್ಠೀ ಬಂದಿದೆ. **ನಾಮನ್ಯತರಸ್ಯಾಂ**—(ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

**ದಾಶತ್**—ದಾಶೃ ದಾನೇ ಧಾತು ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್‌ಪ್ರತ್ಯಯ. **ಇತಶ್ಚ ಲೋಪಃ**—ಸೂತ್ರದಿಂದ ಇಕಾರಲೋಪ **ಲೇಟೋಽಡಾಟೌ** ಸೂತ್ರದಿಂದ ಅದಕ್ಕೆ ಅಡಾಗಮ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಲಸಾರ್ವಧಾತುಕವು **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ

**ಅರಮ್**—ಅಲಮ್ ಎಂದಿರುವಾಗ **ವಾಲಮೂಲ**—ಎಂಬ ವಚನದಿಂದ ಲತ್ವ ವಿಕಲ್ಪಿತವಾಗುತ್ತದೆ. ಲತ್ವ ಬಾರದಿರುವಾಗ ರೇಫ ಶ್ರವಣವಾಗುತ್ತದೆ.

**ಸೂಕ್ತೈಃ**—ವಚ ಪರಿಭಾಷಣೇ ಧಾತು ಇದಕ್ಕೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ **ವಚಿಸ್ವಪಿಯಜಾದೀನಾಂ**—(ಪಾ. ಸೂ ೬-೧-೧೫) ಎಂಬುದರಿಂದ ಸಂಪ್ರಸಾರಣ. ಪೂರ್ವರೂಪ. ಸುಷ್ಠು ಉಕ್ತಾನಿ **ಸೂಪಮಾನಾತ್ ಕ್ತಃ** (ಪಾ. ಸೂ ೬-೨-೧೪೫) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ಏನಾ**—ನಪುಂಸಕ ದ್ವಿತೀಯಾ ಬಹುವಚನದಲ್ಲಿ ಶಿ ಆದೇಶ ಬಂದಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ

**ಚಿಕಿತ್ವಃ**—ಚಿಕಿತ್ವಾನ್ ಎಂದಿರುವಾಗ ಸಂಬುದ್ಧಿಯಲ್ಲಿ **ಮತುವಸೋರುಃ ಸಂಬುದ್ಧೌ** (ಪಾ ಸೂ. ೮-೩-೧) ಎಂಬುದರಿಂದ ನಕಾರಕ್ಕೆ ರುತ್ವ.

**ಭೂಮ**—ಭೂಮಿಶಬ್ದ ಇಕಾರಾಂತ ಸ್ತ್ರೀಲಿಂಗ. ಇದಕ್ಕೆ ದ್ವಿತೀಯಾ ವಿಭಕ್ತಿ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಡಾದೇಶ ಡಿತ್ವಸಾಮರ್ಥ್ಯದಿಂದ ಭಸಂಜ್ಞಾ ಇಲ್ಲದಿದ್ದರೂ ಪ್ರಕೃತಿಯು ಟಿಗೆ (ಇ) ಲೋಪ. ಪದಕಾಲದಲ್ಲಿ ಛಾಂದಸವಾಗಿ ಹ್ರಸ್ವ ಬರುತ್ತದೆ

**ಪಾಹಿ** —ಪಾ ರಕ್ಷಣೇ ಧಾತು. ಲೋಟ್ ಮಧ್ಯಮಪುರುಷ ಏಕವಚನರೂಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೫–೬ ॥



॥ ಸಂಹಿತಾಪಾಠಃ ॥

ವರ್ಧಾನ್ಯಂ ಪೂರ್ವೀಃ ಕ್ಷಪೋ ವಿರೂಪಾಃ ಸ್ಥಾತುಶ್ಚ ರಥಮೃತ-
ಪ್ರವೀತಂ ।
ಅರಾಧಿ ಹೋತಾ ಸ್ವರ್ನಿಷತ್ತಃ ಕೃಣ್ವನ್ವಿಶ್ವಾನ್ಯಪಾಂಸಿ
ಸತ್ಯಾ ॥ ೭ ॥ ೮ ॥

॥ ಪದಪಾಠಃ ॥

ವರ್ಧಾನ್ । ಯಂ । ಪೂರ್ವೀಃ । ಕ್ಷಪಃ । ವಿಽರೂಪಾಃ । ಸ್ಥಾತುಃ । ಚ । ರಥಂ ।
ಋತಽಪ್ರವೀತಂ ॥
ಅರಾಧಿ । ಹೋತಾ । ಸ್ವಃ । ನಿಽಸತ್ತಃ । ಕೃಣ್ವನ್ । ವಿಶ್ವಾನಿ । ಅಪಾಂಸಿ ।
ಸತ್ಯಾ ॥ ೭ ॥ ೮ ॥

॥ ಸಾಯಣಭಾಷ್ಯಂ ॥

ಪೂರ್ವೀರ್ಬಹ್ವ್ಯ ಉಷಸಃ ಕ್ಷಪೋ ನಿಶಾಶ್ಚ ವಿರೂಪಾಃ ಶುಕ್ಲಕೃಷ್ಣತಯಾ ವಿವಿಧರೂಪಾಃ ಸತ್ಯೋ ಯಮಗ್ನಿಂ ವರ್ಧಾನ್ ವರ್ಧಯಂತಿ । ತಥಾ ಸ್ಥಾತುಃ ಸ್ಥಾವರಂ ವೃಕ್ಷಾದಿಕಂ ರಥಂ ರಮಮಾಣಂ ಜಂಗಮಂ ಮನುಷ್ಯಾದಿಕಂ ಚ ಋತಪ್ರವೀತಮೃತೇನೋದಕೇನ ಸತ್ಯೇನ ಯಜ್ಞೇನ ವಾ ಪ್ರಕರ್ಷೇಣ ವೇಷ್ಟಿತಂ ಯಮಗ್ನಿಂ ವರ್ಧಯಂತಿ । ಸೋಽಗ್ನಿಃ ಸ್ವಃ ಸುಷ್ಠ್ವರಣೀಯೇ ದೇವಯಜನೇ ನಿಷತ್ತೋ ನಿಷಣ್ಣ ಉಪವಿಷ್ಟಃ ಸನ್ ಹೋತಾ ದೇವಾನಾಮಾಹ್ವಾತಾರಾಧಿ । ಸಂಸಿದ್ಧೋಽಭೂತ್ । ಯದ್ವಾ । ಋತ್ವಿಗ್ಭಿರರಾಧಿ । ಆರಾಧಿತ ಇತ್ಯರ್ಥಃ । ಕಿಂ ಕುರ್ವನ್ । ವಿಶ್ವಾನಿ ಸರ್ವಾಣಿ ಸತ್ಯಾ ಸತ್ಸು ಯಜಮಾನೇಷು ಭವಾನಿ ಯದ್ವಾ ಸತ್ಯಫಲಾನ್ಯಪಾಂಸಿ ಕರ್ಮಾಣಿ ಕೃಣ್ವನ್ ಕುರ್ವನ್ ॥ ವರ್ಧಾನ್ । ವೃಧೇರ್ಣ್ಯಂತಾಲ್ಲೇಟ್ಯಾಡಾಗಮಃ । ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾತ್ ಣಿಲೋಪಃ । ಇತಶ್ಚ ಲೋಪ ಇತೀಕಾರಲೋಪೇ ಸಂಯೋಗಾಂತಲೋಪಃ । ಋತಪ್ರವೀತಂ । ವ್ಯೇಞ್ ಸಂವರಣೇ । ಅಸ್ಮಾತ್ಕರ್ಮಣಿ ನಿಷ್ಠಾ । ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ । ಕೃದ್ಗ್ರಹಣೇ ಗತಿಕಾರಕಪೂರ್ವಸ್ಯ ಗ್ರಹಣಾತ್ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಅರಾಧಿ । ರಾಧ ಸಾಧ ಸಂಸಿದ್ಧೌ । ಕರ್ತರಿ ಲುಙಿ ವ್ಯತ್ಯಯೇನ ಚ್ಲೇಶ್ಚಿಣ್ ॥

॥ ಪ್ರತಿಪದಾರ್ಥ ॥

**ಪೂರ್ವೀಃ**—ಅನೇಕಗಳಾದ (ಉಷಸ್ಸುಗಳು) । **ಕ್ಷಪಃ**—ರಾತ್ರಿಗಳೂ । **ವಿರೂಪಾಃ**—(ಶುಕ್ಲಕೃಷ್ಣಾದಿ) ನಾನಾರೂಪಗಳಾಗಿ । **ಯಂ**—ಯಾವ ಅಗ್ನಿಯನ್ನು । **ವರ್ಧಾನ್**—ಅಭಿವೃದ್ಧಿಪಡಿಸುತ್ತವೋ । **ಸ್ಥಾತುಃ**—ಸ್ಥಾವರವಾದ ವೃಕ್ಷಾದಿಗಳೂ । **ರಥಂ ಚ**—ಚರವಾದ ಮನುಷ್ಯಾದಿಪ್ರಾಣಿಗಳೂ । **ಋತಪ್ರವೀತಂ**—ಉದಕದಿಂದ (ಸತ್ಯದಿಂದ, ಯಜ್ಞದಿಂದ) (ಆವೃತನಾದ ಅಗ್ನಿಯನ್ನು) । **ವರ್ಧಾನ್**—ಅಭಿವೃದ್ಧಿಪಡಿಸುತ್ತವೋ । **(ಸಃ—ಆ ಅಗ್ನಿಯು)** । **ಸ್ವಃ**—ಯಾಗಗೃಹದಲ್ಲಿ । **ವಿಶ್ವಾನಿ**—ಎಲ್ಲಾ । **ಸತ್ಯಾ**—ಯಜಮಾನಸ್ಥಿತವಾದ । **ಅಪಾಂಸಿ**—ಕರ್ಮಗಳನ್ನು । (**ವಿಶ್ವಾ ಅಪಾಂಸಿ**—ಎಲ್ಲಾ ಕರ್ಮಗಳನ್ನೂ । **ಸತ್ಯಾ**—ಸತ್ಯಫಲಗಳನ್ನಾಗಿ) । **ಕೃಣ್ವನ್**—ಮಾಡುತ್ತಾ । **ನಿಷತ್ತಃ**—ಆಸೀನನಾಗಿ । **ಹೋತಾ**—ದೇವತೆಗಳನ್ನು ಆಹ್ವಾನಿಸುವವನಾಗಿ । **ಅರಾಧಿ**—(ಋತ್ವಿಜರಿಂದ) ಆರಾಧಿಸಲ್ಪಟ್ಟನು.

॥ ಭಾವಾರ್ಥ ॥

ಶುಕ್ಲಕೃಷ್ಣವರ್ಣಗಳಾದ ಅನೇಕ ಉಷಸ್ಸು ಮತ್ತು ರಾತ್ರಿ ಕಾಲಗಳಲ್ಲಿ ಪ್ರವರ್ಧಮಾನನಾದ, ಸ್ಥಾವರವಾದ ವೃಕ್ಷಾದಿಗಳಿಂದ (ದಹ್ಯಪದಾರ್ಥಗಳಾದುದರಿಂದ) ಮತ್ತು ಚರವಾದ ಮನುಷ್ಯಾದಿಗಳಿಂದ (ಪೂಜಾದಿಗಳಿಂದ) ಅಭಿವೃದ್ಧನಾದ, ಉದಕಸ್ಥನಾದ ಅಗ್ನಿಯು, ಯಾಗಗೃಹದಲ್ಲಿ ಋತ್ವಿಜರಿಂದ ಆರಾಧಿತನಾಗಿ, ಇತರ ದೇವತೆಗಳನ್ನು ಯಾಗಕ್ಕೆ ಆಹ್ವಾನಿಸುತ್ತಾ, ಯಜಮಾನಕೃತವಾದ ಕರ್ಮಗಳೆಲ್ಲವನ್ನೂ ಸತ್ಯಫಲಗಳನ್ನಾಗಿ ಮಾಡಲಿ

## English Translation.

Agni, whom many variously-tinted (mornings) and nights increase, whom, invested with truth, all movable and immovable things augment, has been propitiated, and is kindly seated at the holy rite, as the invoker (of the Gods), and rendering all (pious) acts (productive) of reward.

॥ ವಿಶೇಷವಿಷಯಗಳು ॥

**ಪೂರ್ವೀಃ ವಿರೂಪಾಃ ಕ್ಷಪಃ ಯಂ ವರ್ಧಾನ್-ಬಹ್ವ್ಯಃ ಉಷಸಃ ನಿಶಾಶ್ಚ ಶುಕ್ಲಕೃಷ್ಣತಯಾ ವಿವಿಧ-ರೂಪಾಃ ಸತ್ಯಃ ಅಗ್ನಿಂ ವರ್ಧಯಂತಿ ।** ಕತ್ತಲೆ ಮತ್ತು ಬೆಳಕು ಇವುಗಳಿಂದ ಬೇರೆಯದಾದ ರೂಪವನ್ನು ಹೊಂದುತ್ತಿರುವ ಉಷಃಕಾಲಗಳಲ್ಲಿಯೂ, ರಾತ್ರಿಗಳಲ್ಲಿಯೂ ಕೂಡ ಅಗ್ನಿಯಲ್ಲಿ ಹೋಮವನ್ನು ಮಾಡುವುದರಿಂದ ಉಷಃಕಾಲಗಳೂ ಮತ್ತು ರಾತ್ರಿಯೂ ಕೂಡ ಅಗ್ನಿಯನ್ನು ವೃದ್ಧಿಗೊಳಿಸುತ್ತವೆ ಎಂದು ರಾತ್ರಿಗಳಿಗೂ ಉಷಃಕಾಲಗಳಿಗೂ ಕರ್ತೃತ್ವವನ್ನು ಸಾಯಣಭಾಷ್ಯದಲ್ಲಿ ಹೇಳಿರುತ್ತದೆ ಸ್ಕಂದಸ್ವಾಮಿಗಳು ಕ್ಷಪಾಶಬ್ದಕ್ಕೆ ರಾತ್ರಿ ಮತ್ತು ಸ್ತುತಿ ಎಂಬ ಎರಡು ವಿಧವಾದ ಅರ್ಥವನ್ನು ಹೇಳಿರುತ್ತಾರೆ.

**ಋತಪ್ರವೀತಂ—ಋತೇನ ಉದಕೇನ ಸತ್ಯೇನ ಯಜ್ಞೇನ ವಾ ಪ್ರಕರ್ಷೇಣ ವೇಷ್ಟಿತಂ ।** ಋತಶಬ್ದಕ್ಕೆ ಉದಕಗಳಿಂದಲೂ, ಸತ್ಯದಿಂದಲೂ, ಯಜ್ಞರೂಪವಾದ ಕರ್ಮಗಳಿಂದಲೂ ಅಗ್ನಿಯು ಕೂಡಿರುವನೆಂದು ಅರ್ಥವು. ಸ್ಕಂದಸ್ವಾಮಿಗಳು ಋತಶಬ್ದವು ಯಜ್ಞವಾಚಿಯಾಗಿರುವುದು. ಯಜ್ಞಕ್ಕಾಗಿ ಯಜಮಾನರುಗಳಿಂದ ಯಜ್ಞದಲ್ಲಿ ಬಹಳಮಟ್ಟಿಗೆ ತಿಳಿಯಲ್ಪಟ್ಟಿರುವವನು ಅಥವಾ ಯಜ್ಞವನ್ನು ಆಚರಿಸುವವರಿಗಾಗಿ ಅರಣಿಯಲ್ಲಿ ಉತ್ಪನ್ನನಾದವನು, ಅಥವಾ ಯಜ್ಞಕರ್ಮಗಳಲ್ಲಿ ಹವಿರ್ಭಾಗಸ್ವೀಕಾರಕ್ಕಾಗಿ ನಿಯತವಾಗಿ ಇರುವವನು ಎಂದು ಋತಪ್ರವೀತಶಬ್ದಕ್ಕೆ ಅರ್ಥವನ್ನು ವಿವರಿಸಿರುವರು ಮತ್ತು ಈ ಪ್ರಕಾರವಾಗಿರುವ ಅಗ್ನಿಯು ಎಲ್ಲಾ ಯಜ್ಞಕರ್ಮಗಳಲ್ಲಿಯೂ ವೇದಿಯಲ್ಲಿ ಸುಖವಾಗಿ ಉಪವಿಷ್ಟನಾಗಿ ಹವಿರ್ಭಾಗಗಳಿಂದ ದೇವತೆಗಳನ್ನು ಸೇವಿಸುವನು ಎಂದೂ ಅರ್ಥವನ್ನು ಹೇಳಿರುವರು

**ಸ್ವಃ ನಿಷತ್ತಃ ಹೋತಾ ಅರಾಧಿ—ಅರಣೀಯೋಃ ದೇವಯಜನೇ ಸುಷ್ಠು ನಿಷಣ್ಣ ಉಪವಿಷ್ಟಸ್ಸನ್ ದೇವಾನಾಂ ಆಹ್ವಾತಾ ಸಂಸಿದ್ಧೋ ಅಭೂತ್ । ಯದ್ವಾ ಋತ್ವಿಗ್ಭಿರರಾಧಿ ಆರಾಧಿತ ಇತ್ಯರ್ಥಃ ।** ಅಗ್ನಿಯು ಅರಣಿಯಲ್ಲಿ ಉತ್ಪನ್ನನಾಗಿ ದೇವತೆಗಳಿಗಾಗಿ ಹವಿಸ್ಸನ್ನು ಅರ್ಪಿಸುವ ವೇದಿಯಲ್ಲಿ ಉಪವಿಷ್ಟನಾಗಿ ದೇವತೆಗಳನ್ನು ಹವಿರ್ಭಾಗಸ್ವೀಕಾರಕ್ಕಾಗಿ ಆಹ್ವಾನಮಾಡುವದರಲ್ಲಿ ಸಿದ್ಧನಾಗಿರುವನು. ಅಥವಾ ಯಜ್ಞಗಳಲ್ಲಿ ಋತ್ವಿಕ್ಕುಗಳಾದ ಜನರಿಂದ ಸೇವಿಸಲ್ಪಟ್ಟಿರುವನು ಎಂದು ಸಾಯಣರು ಅರ್ಥಮಾಡಿರುತ್ತಾರೆ

॥ ವ್ಯಾಕರಣಪ್ರಕ್ರಿಯಾ ॥

**ವರ್ಧಾನ್—**ವೃಧು ವೃದ್ಧೌ ಧಾತು. ಇದಕ್ಕೆ ಪ್ರಯೋಜಕ ವ್ಯಾಪಾರತೋರುವುದರಿಂದ **ಹೇತುಮತಿ ಚ** ಎಂಬುದರಿಂದ ಣಿಚ್. **ಸನಾದ್ಯಂತಾಧಾತವಃ** ಎಂಬುದರಿಂದ ಣಿಜಂತಕ್ಕೆ ಧಾತುಸಂಜ್ಞಾ. ಣಿಚ್ ನಿಮಿತ್ತವಾಗಿ

ಧಾತುವಿನ ಲಘೂಪಧೆಗೆ ಗುಣ. ಣಿಜಂತದ ಮೇಲೆ ಲೇಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ **ಝೋಽಂತಃ** ಎಂಬುದರಿಂದ ಅಂತಾದೇಶ. **ಇತಶ್ಚ ಲೋಪಃ ಪರಸ್ಮೈಪದೇಷು** ಎಂಬುದರಿಂದ ಅದರ ಅಂತ್ಯ ಇಕಾರಕ್ಕೆ ಲೋಪ **ಲೇಟೋಽಡಾಟೌ** ಎಂಬುದರಿಂದ ಅಡಾಗಮ **ಛಂದಸ್ಯುಭಯಥಾ** (ಪಾ ಸೂ ೩-೪-೧೧೭) ಎಂಬುದರಿಂದ ಶಪ್ಪಿಗೆ ಆರ್ಧಧಾತುಕ ಸಂಜ್ಞೆ ಇರುವುದರಿಂದ ತನ್ನಿಮಿತ್ತವಾಗಿ ಣಿಚ್ಚಿಗೆ **ಣೇರನಿಟಿ** (ಪಾ ಸೂ. ೬-೪ ೫೧) ಎಂಬುದರಿಂದ ಲೋಪ. **ಸಂಯೋಗಾಂತಸ್ಯ ಲೋಪಃ** ಸೂತ್ರದಿಂದ ಪ್ರತ್ಯಯದ ಅಂತ್ಯ ತಕಾರಕ್ಕೆ ಲೋಪ. ವರ್ಧಾನ್ ಎಂದು ರೂಪವಾಗುತ್ತದೆ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದು ಧಾತು ಸ್ವರದಿಂದ ಆದ್ಯುದಾತ್ತವಾಗುತ್ತದೆ.

**ಋತಪ್ರವೀತಮ್**—ವ್ಯೇಞ್ ಸಂವರಣೇ ಧಾತು ಇದಕ್ಕೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ **ವಚಿಸ್ವಪಿಯಜಾದೀನಾಂ ಙ್ಕಿತಿ** (ಪಾ ಸೂ. ೬-೧-೫೬) ಎಂಬುದರಿಂದ ಸಂಪ್ರಸಾರಣ ಇಲ್ಲಿ ಸಂಪ್ರಸಾರಣವನ್ನು ಹೊಂದುವ ವರ್ಣಗಳು ಎರಡು ಇರುವುದರಿಂದ **ನ ಸಂಪ್ರಸಾರಣೇ ಸಂಪ್ರಸಾರಣಮ್** ಎಂಬುದರಿಂದ ಪೂರ್ವಕ್ಕೆ ಸಂಪ್ರಸಾರಣ ನಿಷೇಧ ಬರುತ್ತದೆ ಯಕಾರಕ್ಕೆ ಇಕಾರರೂಪ ಸಂಪ್ರಸಾರಣ ಬಂದಾಗ **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಹಲಃ** (ಪಾ ಸೂ ೬-೪-೨) ಎಂಬುದರಿಂದ ಅದಕ್ಕೆ ದೀರ್ಘ. ಋತೇನ ಪ್ರಕರ್ಷೇಣ ವೀತವ್ ಋತಪ್ರವೀತವ್ **ಕೃದ್ಗ್ರಹಣೇ ಗತಿಕಾರಕ ಪೂರ್ವಸ್ಯಾಪಿ ಗ್ರಹಣಮ್** ಎಂಬ ಪರಿಭಾಷೆಯಿಂದ (ಕೃದಂತಕ್ಕೆ ಗ್ರಹಣ ಅಂದರೆ ಉಪಾದಾನವಿರುವಾಗ ಗತಿ ಅಥವಾ ಕಾರಕ ಪೂರ್ವದಲ್ಲಿ ಇದ್ದರೆ ತದ್ವಿಶಿಷ್ಟಕ್ಕೂ ಉಪಾದಾನವಿದೆ ಎಂದು ಪರಿಭಾಷೆಯ ತಾತ್ಪರ್ಯ) ಇಲ್ಲಿ ವೀತವೆಂಬ ಕೃದಂತದಿಂದ ಪ್ರ ಎಂಬ ಗತಿವಿಶಿಷ್ಟವಾದ ಪ್ರವೀತವೆಂಬುದಕ್ಕೂ ಗ್ರಹಣ ವಿರುವುದರಿಂದ **ತೃತೀಯಾಕರ್ಮಣಿ** (ಪಾ ಸೂ ೬-೨-೪೮) ಎಂಬುದರಿಂದ ಸಮಾಸದಲ್ಲಿ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ.

**ಅರಾಧಿ**—**ರಾಧ** ಸಾಧ ಸಂಸಿದ್ಧೌ ಧಾತು. ಕರ್ತರಿಯಲ್ಲೇ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ **ವ್ಯತ್ಯಯೋ ಬಹುಲಮ್** ಎಂಬುದರಿಂದ ಲುಙಿನಲ್ಲಿ ಪ್ರಾಪ್ತವಾದ ಚ್ಲಿಗೆ ಚಿಣಾದೇಶ **ಚಿಣೋ ಲುಕ್** (ಪಾ. ಸೂ ೬-೪-೧೦೪) ಎಂಬುದರಿಂದ ಚಿಣ್ಣಿನ ಪರದಲ್ಲಿರುವ ತ ಶಬ್ದಕ್ಕೆ ಲುಕ್. ಅಂಗಕ್ಕೆ ಅಡಾಗಮ ಅರಾಧಿ ಎಂದು ರೂಪವಾಗುತ್ತದೆ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ನಿಷತ್ತಃ**—ಷದ್ಲೃ ವಿಶರಣಗತ್ಯವಸಾದನೇಷು, ಧಾತು ಇದಕ್ಕೆ ಕ್ತ ಪ್ರತ್ಯಯ **ರದಾಭ್ಯಾಂ ನಿಷ್ಠಾತಃ** - (ಪಾ ಸೂ. ೮-೨-೪೨) ಸೂತ್ರದಿಂದ ಕ್ತ ಪ್ರತ್ಯಯಕ್ಕೆ ನತ್ವವು ಪ್ರಾಪ್ತವಾದರೆ **ನಸತ್ತ ನಿಷತ್ತಾನುತ್ತ**—(ಪಾ ಸೂ ೮-೨-೬೧) ಎಂಬುದರಿಂದ ನತ್ವಾಭಾವವು ನಿಪಾತಿತವಾಗಿದೆ.

**ಕೃಣ್ವನ್**—ಕೃವಿ ಧಾತುವು ಹಿಂಸಾರ್ಥದಲ್ಲಿದೆ ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಕರಣಾರ್ಥ ದಲ್ಲಿದೆ ಇದಿತ್ತಾದುದರಿಂದ ನುಮಾಗಮ ಲಡರ್ಥದಲ್ಲಿ ಶತೃಪ್ರತ್ಯಯ. ಅಥವಾ ಡುಕೃಞ್ ಕರಣೇ ಧಾತು. ಇದಕ್ಕೆ ಶತೃ ವಿವಕ್ಷಾಮಾಡಿದಾಗ ವ್ಯತ್ಯಯದಿಂದ ಶ್ನು ವಿಕರಣ ಪ್ರಥಮಾ ಏಕವಚನಾಂತರೂಪ. ॥ ೭-೮ ॥



॥ ಸಂಹಿತಾಪಾಠಃ ॥

ಗೋಷು ಪ್ರಶಸ್ತಿಂ ವನೇಷು ಧಿಷೇ ಭರಂತ ವಿಶ್ವೇ ಬಲಿಂ ಸ್ವರ್ಣಃ ।
ವಿ ತ್ವಾ ನರಃ ಪುರುತ್ರಾ ಸಪರ್ಯನ್ಪಿತುರ್ನ ಜಿವ್ರೇರ್ವಿ ವೇದೋ ಭರಂತ ॥ ೯ ॥ ೧೦ ॥

॥ ಪದಪಾಠಃ ॥

ಗೋಷು । ಪ್ರ ऽ ಶಸ್ತಿಂ । ವನೇಷು । ಧಿಷೇ । ಭರಂತ । ವಿಶ್ವೇ । ಬಲಿಂ । ಸ್ವಃ । ನಃ ।
ವಿ । ತ್ವಾ । ನರಃ । ಪುರು ऽ ತ್ರಾ । ಸಪರ್ಯನ್ । ಪಿತುಃ । ನ । ಜಿವ್ರೇಃ । ವಿ । ವೇದಃ । ಭರಂತ ॥ ೯ ॥ ೧೦ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಂ ವನೇಷು ವನನೀಯೇಷು ಸಂಭಜನೀಯೇಷು ಗೋಷ್ವಸ್ಮದೀಯೇಷು ಪಶುಷು ಪ್ರಶಸ್ತಿಂ ಪಶಂಸಾಂ ಧಿಷೇ । ದಧಿಷೇ । ಸ್ಥಾಪಯಸಿ । ಅಸ್ಮಾಕಂ ಪ್ರಶಸ್ತಾ ಗವಾದಿಪಶವೋ ಭವಂತ್ವಿತ್ಯರ್ಥಃ । ವಿಶ್ವೇ ಸರ್ವೇ ಜನಾ ನೋಽಸ್ಮಭ್ಯಂ ಸ್ವಃ ಸುಷ್ಠ್ವರಣೀಯಂ ಬಲಿಮುಪಾಯನರೂಪಂ ಧನಂ ಭರಂತ । ಆಹರಂತು । ಹೇ ಅಗ್ನೇ ತ್ವಾ ತ್ವಾಂ ನರೋ ಮನುಷ್ಯಾಃ ಪುರುತ್ರಾ ಬಹುಷು ದೇವಯಜನದೇಶೇಷು ವಿ ಸಪರ್ಯನ್ । ವಿವಿಧಂ ಪೂಜಯಂತಿ । ಪೂಜಯಿತ್ವಾ ಚ ವೇದೋ ಧನಂ ವಿ ಭರಂತ । ತ್ವತ್ತೋ ವಿಶೇಷೇಣ ಹರಂತಿ । ಗೃಹ್ಣಂತೀತ್ಯರ್ಥಃ । ತತ್ರ ದೃಷ್ಟಾಂತಃ । ಜಿವ್ರೇರ್ಜೀರ್ಣಾದ್ವೃದ್ಧಾತ್ಪಿತುರ್ನ ಪಿತುರಿವ । ಯಥಾ ಪುತ್ರಾ ವೃದ್ಧಾತ್ಪಿತುಃ ಸಕಾಶಾದ್ಧನಂ ಹರಂತಿ ತದ್ವತ್ ॥ ಧಿಷೇ । ಛಾಂದಸೋ ವರ್ತಮಾನೇ ಲಿಟ್ । ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಂ । ಕಾ ೬-೧-೮-೧ । ಇತಿ ದ್ವಿರ್ವ-

**ಚನಾಭಾವಃ । ಭರಂತೆ । ಹೃಞ್ ಹರಣೇ । ಕೇವಲೋಽಪಿ ಸೋಪಸರ್ಗಾರ್ಥೋ ದ್ರಷ್ಟವ್ಯಃ । ಛಾಂದ ಸೋಲಜ್ । ಹೃಗ್ರಹೋರ್ಭ ಇತಿ ಭತ್ವಂ । ಪುರುತ್ರಾ । ದೇವಮನುಷ್ಯಪುರುಷಪುರುಮರ್ತ್ಯೇಭ್ಯೋ ದ್ವಿತೀಯಾ ಸಪ್ತಮ್ಯರ್ಥೇ ತ್ರಾಪ್ರತ್ಯಯಃ । ಜಿವ್ರೇಃ । ಜ್ಯಾಷ್ ವಯೋಹಾನೌ । ಜ್ಯಶ್ಯಾಸ್ತ್ಯಾಜಾಗೃಭ್ಯಃ ಕ್ವಿನ್ । ಉ. ೪-೫೪ । ಋತ ಇದ್ಧಾತೋರಿತೀತ್ವಂ । ಉಣಾದಯೋಽವ್ಯುತ್ಪನ್ನಾನಿ ಪ್ರಾತಿಪದಿಕಾನೀತಿ ಜಿವ್ರಿಃ ಕಿರ್ಯೋರ್ಗಿರ್ಯೋರಿತ್ಯೇವಮಾದಿಷು ದೀರ್ಘೋ ನ ಭವತಿ । ಕಾ. ೮-೨-೭೮ । ಇತ್ಯುಕ್ತತ್ವಾತ್ ಹಲಿ ಚೇತಿ ದೀರ್ಘಸ್ಯಾಭಾವಃ । ರೇಫವಕಾರಯೋರ್ವಿಪರ್ಯಯಃ । ಉಕ್ತಂ ಚ । ವರ್ಣಾಗಮೋ ವರ್ಣವಿಪರ್ಯಯಶ್ಚ । ಕಾ. ೬-೩-೧೦೯ । ಇತಿ । ನಿತ್ಯಾದಾದ್ಯುದಾತ್ತತ್ವಂ । ವೇದ ಇತಿ ಧನನಾಮ । ವಿದ್ಯತೇ ಲಭ್ಯತ ಇತಿ ವೇದಃ । ವಿದ್ಲೃ ಲಾಭೇ । ಕರ್ಮಣ್ಯಸುನ್ ।**

॥ ಪ್ರತಿಪದಾರ್ಥ ॥

(**ಅಗ್ನೇ**—ಅಗ್ನಿಯೇ ನೀನು) । **ವನೇಷು**—ಪೂಜ್ಯವಾದ (ನಮ್ಮ ಸಂಬಂಧವಾದ) । **ಗೋಷು ಪಶುಷು**—ಗೋವೇ ಮೊದಲಾದ ಪಶುಗಳಲ್ಲಿ । **ಪ್ರಶಸ್ತಿಂ**—ಪ್ರಶಂಸೆಯನ್ನು । **ಧಿಷೇ**—ಸ್ಥಾಪಿಸುತ್ತೀ । **ವಿಶ್ವೇ**—ಎಲ್ಲರೂ । **ನಃ**—ನಮಗೆ । **ಸ್ವಃ**—ಅಪೇಕ್ಷಿತವಾದ । **ಬಲಿಂ**—ಉಪಾಯನರೂಪವಾದ (ಧನವನ್ನು) । **ಭರಂತೆ**—ಒದಗಿಸಲಿ । (**ಅಗ್ನೇ**—ಅಗ್ನಿಯೇ) । **ತ್ವಾ**—ನಿನ್ನನ್ನು । **ನರಃ**—ಮನುಷ್ಯರು । **ಪುರುತ್ರಾ**—ಅನೇಕ ಯಾಗಶಾಲೆಗಳಲ್ಲಿ । **ವಿ ಸಪರ್ಯನ್**—ಚೆನ್ನಾಗಿ ಪೂಜೆಮಾಡುತ್ತಾರೆ (ಮತ್ತು) **ಜಿವ್ರೇಃ**—ವೃದ್ಧನಾದ । **ಪಿತುರ್ನ**—ತಂದೆಯಿಂದ ಹೇಗೆ (ಮಕ್ಕಳು ಧನವನ್ನು ಪಡೆಯುತ್ತಾರೋ ಹಾಗೆ) । **ವೇದಃ**—ಧನವನ್ನು । **ವಿ ಭರಂತೆ**—ವಿಶೇಷವಾಗಿ ಪಡೆಯುತ್ತಾರೆ ॥

॥ ಭಾವಾರ್ಥ ॥

ಅಗ್ನಿಯೇ. (ನಿನ್ನ ಪ್ರಸಾದದಿಂದ) ನಮಗೆ ಉತ್ತಮವಾದ ಗವಾದಿ ಪಶುಗಳೂ, ಎಲ್ಲಾ ಜನಗಳಿಂದ ಉಪಾಯನರೂಪವಾಗಿ ದ್ರವ್ಯವೂ ಪ್ರಾಪ್ತವಾಗಲಿ. ಮನುಷ್ಯರು ಅನೇಕ ಯಾಗಶಾಲೆಗಳಲ್ಲಿ ನಿನ್ನನ್ನು ವಿಶೇಷವಾಗಿ ಹವಿರಾದಿಗಳಿಂದ ಪೂಜೆಮಾಡಿ, ವೃದ್ಧನಾದ ತಂದೆಯಿಂದ ಪುತ್ರರು ಧನವನ್ನು ಪಡೆಯ ವಂತೆ, ನಿನ್ನಿಂದ ಧನವನ್ನು ವಿಶೇಷವಾಗಿ ಪಡೆಯುತ್ತಾರೆ.

## English Translation.

Agni, confer excellence upon our valued cattle, and may all men bring us acceptable tribute; offering in many places sacrifices to you, men receive riches from you, as (sons) from an aged father.

॥ ವಿಶೇಷವಿಷಯಗಳು ॥

**ಜಿವ್ರೇಃ ಪಿತುರ್ನ ವೇದಃ ವಿಭರಂತ— ಜೀರ್ಣಾತ್ ವೃದ್ಧಾತ್ ಪಿತುರಿವ ತ್ವತ್ತೋ ವಿಶೇಷೇಣ ಧನಂ ಗೃಹ್ಣಂತಿ । ಯಥಾ ಪುತ್ರಾಃ ವೃದ್ಧಾತ್ ಪಿತುಸ್ಸಕಾಶಾತ್ ಧನಂ ಹರಂತಿ ।** ಅಗ್ನಿಯು ಯಜಮಾನರೂ ಋತ್ವಿಜರೂ ಮತ್ತು ಸರ್ವರಿಂದಲೂ ಪೂಜಿಸಲ್ಪಟ್ಟವನಾಗಿ ಅವರಿಗೆ ಎಲ್ಲವನ್ನೂ ಅನುಗ್ರಹಿಸುವ ಕಾರಣ ಅಗ್ನಿಯಿಂದ ಅನೇಕ ವಿಧವಾದ ಧನವೇ ಮೊದಲಾದವುಗಳನ್ನು ಹೊಂದುವರು ಲೋಕದಲ್ಲಿ ತಂದೆಯು ಮುದುಕನಾದನಂತರ ಮಕ್ಕಳುಗಳು ಅವನ ಧನವೆಲ್ಲವನ್ನೂ ಸಮ್ಮತಿಯಿಂದ ಸ್ವೀಕರಿಸುವರು. ಇದರಂತೆಯೇ ಅಗ್ನಿಯ ಸೇವೆಯಿಂದ ಋತ್ವಿಗಾದಿಗಳು ಧನವನ್ನು ಸ್ವೀಕರಿಸುವರು ಎಂದು ಅರ್ಥವು

ಸ್ಕಂದಸ್ವಾಮಿ ಭಾಷ್ಯದಲ್ಲಿ ವೇದಶಬ್ದಕ್ಕೆ ಹವಿಸ್ಸಿನ ರೂಪವಾದ ಧನವೆಂದು ಅರ್ಥವನ್ನು ಹೇಳಿ, ಮುದುಕನಾದ ತಂದೆಗೆ ಮಕ್ಕಳುಗಳು ರುಚಿಕರವಾದ ನಾನಾವಿಧವಾದ ಅನ್ನವೇ ಮೊದಲಾದವುಗಳನ್ನು ತಂದುಕೊಡುವ ಹಾಗೆ ಅಗ್ನಿಗೂ ಕೂಡ ಯಜ್ಞಮಾಡುವವರು ಅನೇಕವಿಧವಾದ ಹವಿಸ್ಸುಗಳನ್ನು ಅರ್ಪಿಸುವರೆಂದು ವಿವರಿಸಿರುತ್ತಾರೆ

**ವನೇಷು—ವನನೀಯೇಷು ಚಾಶ್ವಾದಿಷು । ಉದಕನಾಮ ವಾ ವನಶಬ್ದಃ ಉದಕೇಷು ।** (ಸ್ಕಂ ಭಾ)ವನ ಶಬ್ದವು ನೂರೊಂದು ಉದಕನಾಮಗಳಲ್ಲಿ (ನಿ ೧-೧೨) ಪಠಿತವಾಗಿರುವುದು. ಅಶ್ವರೂಪಾರ್ಥದಲ್ಲಿ ಈ ಶಬ್ದವು ಉಪಚಾರದಿಂದ ಪ್ರಯುಕ್ತವಾಗಿ ಅತ್ಯಂತ ವೇಗವಾಗಿ ಸಂಚರಿಸುವ ಪ್ರಾಣಿಗಳು ಎಂಬ ಅರ್ಥವನ್ನು ಹೇಳುವುದು ಅಗ್ನಿಯು ಇವುಗಳಿಗೆ ಈ ಸಾಮರ್ಥ್ಯವನ್ನು ಅನುಗ್ರಹಿಸುತ್ತಿರುವನು ಎಂದು ತಾತ್ಪರ್ಯವು.

**ವೇದಃ— ವಿದ್ಯತೇ ಲಭ್ಯತೇ ಇತಿ ವೇದಃ । ವೇದ ಇತಿ ಧನನಾಮ ।** ಇರುವುದು ಮತ್ತು ಎಲ್ಲಿರಿಂದಲೂ ಹೊಂದಲ್ಪಡುವುದು. ಆದ್ದರಿಂದ ವೇದ ಎಂದರೆ ಧನವೆಂದು ಅರ್ಥವು ಮಘಂ ರೇಕ್ಣಃ, ಇವೇ ಮೊದಲಾದ ಇಪ್ಪತ್ತೆಂಟು ಧನನಾಮಗಳಲ್ಲಿ ವೇದ ಶಬ್ದವು (ನಿ ೨-೯) ಉಕ್ತವಾಗಿರುವುದು ನಿರುಕ್ತವ್ಯಾಖ್ಯಾನದಲ್ಲಿ ವಿದಲೃ ಲಾಭೇ ಎಂಬ ಧಾತುವಿನಿಂದ ನಿಷ್ಪನ್ನವಾದ ವೇದ ಶಬ್ದಕ್ಕೆ **ವಿದ್ಯತೇ ಧರ್ಮಾದಿಃ ಅನೇನ** ಇದರಿಂದ ಧರ್ಮವೇ ಮೊದಲಾದವುಗಳು ಹೊಂದಲ್ಪಡುವವು ಎಂದು ಅರ್ಥವನ್ನು ಮಾಡಿ, **''ಹೋತಾರಂ ವಿಶ್ವವೇದಸಂ''** (ಋ ಸಂ ೧-೧೨-೧) ಎಂದು ಉದಾಹರಣೆಯನ್ನು ಕೊಟ್ಟಿರುವರು.

**ಗೋಷು- ಅಸ್ಮದೀಯೇಷು ಪಶುಷು.** ಗೋ ಶಬ್ದವು ದ್ಯೌ, ಆದಿತ್ಯ, ಅಶ್ವ, ವಾಕ್ಸು, ಸೀತಾ, ರಶ್ಮಿ, ಎಂಬ ಅರ್ಥಗಳಲ್ಲಿ ನಿರುಕ್ತದಲ್ಲಿ ಆಯಾಯಾ ಶಬ್ದಗಳ ಮಧ್ಯದಲ್ಲಿ ಪಠಿತವಾಗಿದ್ದರೂ ಇಲ್ಲಿ ಪಶು (ಹಸು) ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ ಯಜ್ಞಾದಿಗಳಿಗೆ ಅನುಕೂಲವಾಗಿರುವಂತೆ ಉತ್ತಮವಾದ ಪಶುಗಳು ನಮಗೆ ದೊರಕಲಿ ಎಂದು ಅಗ್ನಿಯನ್ನು ಯಜಮಾನರುಗಳು ಪ್ರಾರ್ಥಿಸುವರು

॥ ವ್ಯಾಕರಣಪ್ರಕ್ರಿಯಾ ॥

**ಧಿಷೇ**—ಡುಧಾಞ್ ಧಾರಣಪೋಷಣಯೋಃ ಧಾತು ವರ್ತಮಾನಾರ್ಥದಲ್ಲಿ **ಛಂದಸಿ ಲುಙ್ ಲಙ್-ಲಿಟಃ** ಎಂಬುದರಿಂದ ಲಿಟ್. ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಬಂದಾಗ **ಥಾಸಃ ಸೇ** (ಪಾ. ಸೂ.

೩-೪-೮೦) ಎಂಬುದರಿಂದ ಸೇ ಆದೇಶ **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಇಡಾಗಮ. **ದ್ವಿರ್ವಚನ ಪ್ರಕರಣೇ ಛಂದಸಿ ವೇತಿ ವಕ್ತವ್ಯಮ್** (ಕಾ. ೬-೧-೮-೧) ಎಂಬುದರಿಂದ ಲಿಟನಲ್ಲಿ ದ್ವಿತ್ವ ಬರುವುದಿಲ್ಲ. **ಅಸಂಯೋಗಾಲ್ಲಿಟ್ ಕಿತ್**(ಪಾ. ಸೂ. ೧-೨-೫) ಎಂಬುದರಿಂದ ಪ್ರತ್ಯಯಕ್ಕೆ ಕಿತ್ವವಿರುವುದರಿಂದ **ಅತೋಲೋಪ ಇಟಿ ಚ** (ಪಾ ಸೂ. ೬-೪-೬೪) ಎಂಬುದರಿಂದ ಪ್ರತ್ಯಯ ನಿಮಿತ್ತವಾಗಿ ಧಾತುವಿನ ಅಕಾರಕ್ಕೆ ಲೋಪ. **ಆದೇಶ ಪ್ರತ್ಯಯಯೋಃ** ಎಂಬುದರಿಂದ ಪ್ರತ್ಯಯಸಕಾರಕ್ಕೆ ಷತ್ವ. ಧಿಷೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** (ಪಾ. ಸೂ. ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಭರಂತೆ**—ಹೃಞ್ ಹರಣೇ ಧಾತು. ಧಾತುವು ಉಪಸರ್ಗಸಮಭಿವ್ಯಾಹಾರದಿಂದ ವಿಶೇಷಾರ್ಥವನ್ನು ಪ್ರಕಾಶಪಡಿಸುವುದಾದರೂ ಇಲ್ಲಿ ಕೇವಲ ಧಾತುವಿನಿಂದ ಉಪಸರ್ಗ (**ಆಙ್**) ವಿಶಿಷ್ಟವಾದುವರಿಂದ ತೋರುವ ಅರ್ಥವು ಅಭಿವ್ಯಕ್ತವಾಗುತ್ತದೆ. ಇಲ್ಲಿಯೂ ಹಿಂದಿನಂತೆಯೇ ವರ್ತಮಾನಾರ್ಥದಲ್ಲಿ ಛಾಂದಸವಾದ ಲಙ್ ಬರುತ್ತದೆ ಪ್ರಥಮ ಪುರುಷ ಬಹುವಚನದಲ್ಲಿ ಝ ಪ್ರತ್ಯಯಕ್ಕೆ **ಝೋಂತಃ** ಎಂಬುದರಿಂದ ಅಂತಾದೇಶ. ಶಪ್ ವಿಕರಣ. ತನ್ನಿಮಿತ್ತ ವಾಗಿ ಧಾತುವಿನ ಇಕ್ಕಿಗೆ ಗುಣ **ಅತೋ ಗುಣೇ** ಎಂಬುದರಿಂದ ಪರರೂಪ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** (ಪಾ. ಸೂ. ೬-೪-೭೫) ಎಂಬುದರಿಂದ ಅಡಾಗಮ ಬರುವುದಿಲ್ಲ. **ಹೃಗ್ರಹೋರ್ಭಶ್ಛಂದಸಿ** ಎಂಬುದರಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ. ಭರಂತ ಎಂದು ರೂಪವಾಗುತ್ತದೆ. **ಅತಿಙಃ** ಎಂದು ನಿಷೇಧ ಮಾಡಿರುವುದ ರಿಂದ ಇಲ್ಲಿ ಧಿಷೇ ಎಂಬ ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್, ಲಸಾರ್ವಧಾತುಕವೂ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ

**ಪುರುತ್ರಾ**—ಪುರು ಎಂಬ ಶಬ್ದಕ್ಕೆ ಸಪ್ತಮ್ಯರ್ಥದಲ್ಲಿ **ದೇವಮನುಷ್ಯಪುರುಷಪುರುಮರ್ತ್ಯ—** (ಪಾ. ಸೂ ೫-೪-೫೬) ಎಂಬುದರಿಂದ ತ್ರಾ ಪ್ರತ್ಯಯ.

**ಜಿವ್ರೇಃ**—ಜೄಷ್ ವಯೋಹಾನೌ ಧಾತು. ಇದಕ್ಕೆ **ಜ್ಯಾ ಶ್ಯ ಸ್ತ್ರಾ ಜಾಗೃಭ್ಯಃ ಕ್ವಿನ್** (ಉ. ಸೂ. ೪-೪೯೪) ಎಂಬುದರಿಂದ ಕ್ವಿನ್ ಪ್ರತ್ಯಯ **ಋೂತ ಇದ್ಧಾತೋಃ** (ಪಾ. ಸೂ ೭-೧-೧೦೦) ಎಂಬುದರಿಂದ ಧಾತುವಿನ ಋೂಕಾರಕ್ಕೆ ಇತ್ವ. **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ಜಿರ್+ವಿ ಎಂದಿರುವಾಗ **ಹಲಿಚ** ಎಂಬುದರಿಂದ ದೀರ್ಘವು ಪ್ರಾಪ್ತವಾದರೆ **ಉಣಾದಯೋಽವ್ಯುತ್ಪನ್ನಾನಿ ಪ್ರಾತಿಪದಿಕಾನೀತಿ ಜಿವ್ರಿಃ ಕಿರ್ಯೋರ್ಗಿರ್ಯೋರಿತ್ಯೇವಮಾದಿಷು ದೀರ್ಘೋ ನ ಭವತಿ** (ಕಾ ೮-೨-೭೮) ಎಂಬ ವಚನದಿಂದ ಬರುವು ದಿಲ್ಲ. (ಉಣಾದಿಯಲ್ಲಿ ವ್ಯುತ್ಪತ್ತಿಪಕ್ಷ ಅವ್ಯುತ್ಪತ್ತಿಪಕ್ಷವೆಂದು ಎರಡು ಪ್ರಕಾರವಿರುವಾಗ ಇಂಥಾ ಸ್ಥಳದಲ್ಲಿ ಅವ್ಯುತ್ಪತ್ತಿ ಪಕ್ಷವನ್ನು ಸ್ವೀಕರಿಸುವುದರಿಂದ ಪ್ರಕೃತಿಪ್ರತ್ಯಯ ವಿವೇಚನ ಯಾವಾಗ ಇಲ್ಲವೋ ಆಗ ಧಾತುವಿನ ಉಪಧಾ ಇಲ್ಲದಿರು ವುದರಿಂದ ಸೂತ್ರದಿಂದ ಕಾರ್ಯ ಬರುವುದಿಲ್ಲವೆಂದು ತಾತ್ಪರ್ಯ.) ಛಾಂದಸವಾಗಿ ರೇಫ ವಕಾರಗಳಿಗೆ ವ್ಯತ್ಯಯ ಬರುವುದರಿಂದ ಉಕ್ತರೂಪ ಸಿದ್ಧಿಯಾಗುತ್ತದೆ ಕ್ವಿನ್ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ವೇದಃ**— ವೇದ ಎಂಬುದು ದ್ರವ್ಯದ ಹೆಸರು (ಹಣ). ವಿದ್ಯತೇ ಲಭ್ಯತೇ ಇತಿ ವೇದಃ (ಹೊಂದಲ್ಪಡು ವುದು) ವಿದ್ಲೃ ಲಾಭೇ ಧಾತು. ಕರ್ಮಣಿಯಲ್ಲಿ ಅಸುನ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ

ಲಘೂಪಧೆಗೆ ಗುಣ. ವೇದಸ್ ಎಂಬುದು ಸಕಾರಾಂತ ನಪುಂಸಕಲಿಂಗ ಶಬ್ದವಾಗುತ್ತದೆ. ಇಲ್ಲಿ ದ್ವಿತೀಯಾ ಏಕ ವಚನಾಂತರೂಪ.

**ಭರಂತೆ**—ಹಿಂದೆ ಪ್ರಕ್ರಿಯಾ ಉಕ್ತವಾಗಿದೆ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ ॥ ೯-೧೦ ॥



॥ ಸಂಹಿತಾಪಾಠಃ ॥

ಸಾಧುರ್ನ ಗೃಧ್ನುರಸ್ತೇವ ಶೂರೋ ಯಾತೇವ ಭೀಮಸ್ತ್ವೇಷಃ ಸಮತ್ಸು ॥ ೧೧ ॥

॥ ಪದಪಾಠಃ ॥

ಸಾಧುಃ । ನ । ಗೃಧ್ನುಃ । ಅಸ್ತಾಽಇವ । ಶೂರಃ । ಯಾತಾಽಇವ । ಭೀಮಃ । ತ್ವೇಷಃ । ಸಮತ್ಽಸು ॥ ೧೧ ॥

॥ ಸಾಯಣಭಾಷ್ಯಂ ॥

ದ್ವಿಪದಾಸ್ವಯುಕ್ಸಂಖ್ಯಾಸು ಯಾಂತ್ಯಾತಿರಿಚ್ಯತೇ ಸಾ ತಥೈವ ಪಠಿತವ್ಯೇತ್ಯುಕ್ತಂ । ಉತ್ತರಾ ತಾದೃಶೀ ದ್ವಿಪದಾ ॥

ಅಯಮಗ್ನಿಃ ಸಾಧುರ್ನ ಸಾಧಕ ಇವ ಗೃಧ್ನುರ್ಗೃಹೀತಾ । ಯಥಾ ಸಾಧಕಃ ಸಾಧ್ಯಫಲಮಾಶು ಗೃಹ್ಣಾತಿ ತದ್ವದಗ್ನಿರಪಿ ಸರ್ವಂ ಸ್ವೀಕರೋತೀತ್ಯರ್ಥಃ । ತಥಾಯಮಗ್ನಿರಸ್ತೇವ ಶೂರಃ । ಯಥೇಷೂಣಾಂ ಕ್ಷೇಪ್ತಾ ಧಾನುಷ್ಕಃ ಶತ್ರೂನ್ಪ್ರೇರಯತಿ ತದ್ವದಗ್ನಿರಪಿ ದಹನ್ ಸರ್ವಂ ಪ್ರಾಣಿಜಾತಂ ಪ್ರೇರಯತಿ । ತಥಾ ಯಾತೇವ ಭೀಮಃ । ಯಾತಾ ಯಾತಯಿತಾ ಹಿಂಸಕೋ ಭೀಮಃ ಸರ್ವೇಷಾಂ ಭಯಂಕರೋ ಭವತಿ । ತದ್ವದಗ್ನಿರಪಿ ದೃಷ್ಟಮಾತ್ರೇಣ ಸರ್ವೇಷಾಂ ಭಯಮುತ್ಪಾದಯತಿ । ಅತ ಏವಂವಿಧೋಽಗ್ನಿಃ ಸಮತ್ಸು ಸಂಗ್ರಾಮೇಷು ತ್ವೇಷೋ ದೀಪ್ತಃ ಸನ್ ಅಸ್ಮಾಕಂ ಸಹಾಯೋ ಭವತ್ವಿತ್ಯರ್ಥಃ ॥ ಗೃಧ್ನುಃ । ಗೃಧು

**ಅಭಿಕಾಂಕ್ಷಾಯಾಂ । ತ್ರಸಿಗೃಧಿಧೃಷಿಕ್ಷಿಪೇಃ ಕ್ನುಃ । ಶೂರಃ । ಶು ಗತೌ । ಅಂತರ್ಭಾವಿತಣ್ಯರ್ಥಾದಸ್ಮಾತ್ ಶುಸಿಚಿಮೀನಾಂ ದೀರ್ಘಶ್ಚ । ಉ. ೨–೨೫ । ಇತಿ ಕ್ರನ್ ॥**

॥ ಪ್ರತಿಪದಾರ್ಥ ॥

**ಸಾಧುರ್ನ**—(ಹಿಡಿದ ಕಾರ್ಯಗಳನ್ನು ಬಿಡದೇ) ಸಾಧಿಸುವವನಂತೆ । **ಗೃಧ್ನುಃ**—ಎಲ್ಲವನ್ನೂ ಗ್ರಹಿಸ ತಕ್ಕವನೂ । **ಅಸ್ತೇವ**—(ಬಾಣವನ್ನು) ಎಸೆಯುವ ಯೋಧನಂತೆ । **ಶೂರಃ**—ಶೂರನಾದವನೂ । **ಯಾತೇವ**—ಹಿಂಸಕನಂತೆ । **ಭೀಮಃ**—ಭಯಂಕರನಾದವನೂ ಆದ (ಅಗ್ನಿಯು) । **ಸಮತ್ಸು**—ಸಂಗ್ರಾಮಗಳಲ್ಲಿ । **ತ್ವೇಷಃ**—ದೀಪ್ತನಾಗಿ (ನಮಗೆ ಸಹಾಯಕನಾಗಲಿ) ॥

॥ ಭಾವಾರ್ಥ ॥

ಕೈಗೊಂಡ ಕಾರ್ಯಗಳನ್ನು ಸಾದಿಸತಕ್ಕವನೂ, ಯೋಧನು ಬಾಣದಿಂದ ಹೇಗೆ ಶತ್ರುಗಳನ್ನು ಓಡಿಸು ತ್ತಾನೋ ಹಾಗೆ ದಹನಶಕ್ತಿಯಿಂದ ಎಲ್ಲವನ್ನೂ ಹೆದರಿಸಿ ಓಡಿಸುವವನೂ, ಹಿಂಸಕನಾದ ಮನುಷ್ಯನು ಹೇಗೆ ಭಯಂಕರಾಕಾರನೋ ಹಾಗೆ (ದೃಷ್ಟಮಾತ್ರನಾಗಿಯೇ ಶತ್ರುಗಳಿಗೆ) ಭಯವನ್ನುಂಟುಮಾಡುವವನೂ ಆದ ಅಗ್ನಿಯು ಸಂಗ್ರಾಮಗಳಲ್ಲಿ ದೀಪ್ತನಾಗಿ ನಮಗೆ ಸಹಾಯಕನಾಗಲಿ

## English Translation.

(May Agni), who is like one who succeeds (in his undertakings), and aquires (what he wishes for), who is like a warrior casting a dart, and resembles a fearful adversary, who is brilliant in combats, (be to us a friend),

॥ ವಿಶೇಷವಿಷಯಗಳು ॥

ಇದುವರೆಗೆ ಹೇಳಿದ ದ್ವಿಪದಾವಿರಾಟ್ ಛಂದಸ್ಸಿನ ಋಕ್ಕುಗಳನ್ನು ಪಠಿಸಿದಂತೆಯೇ ಈ ಋಕ್ಕನ್ನು ಪಠಿಸ ಬೇಕು. ಹಿಂದಿನ ಸೂಕ್ತಗಳಲ್ಲಿ ದ್ವಿಪದಾವಿರಾಟ್ ಛಂದಸ್ಸಿನ ಹತ್ತೇ ಹತ್ತು ಋಕ್ಕುಗಳಿರುವುವು ಈ ಸೂಕ್ತದಲ್ಲಿ ಈ ಋಕ್ಕೂ ಸೇರಿ ಹನ್ನೊಂದು ಋಕ್ಕುಗಳಿರುವವು. ಇದೇ ಕೊನೆಯ ಋಕ್ಕು

**ಸಾಧುರ್ನ ಗೃಧ್ನುಃ—ಸಾಧಕಃ ಸಾಧ್ಯಫಲಮಾಶು ಯಥಾ ಗೃಹ್ಣಾತಿ ತಥಾ ಅಯಮಗ್ನಿರಪಿ ಸರ್ವಂ ಸ್ವೀಕರೋತೀತ್ಯರ್ಥಃ ।** ನ ಎಂಬುವುದು ಉಪಮಾವಾಚಕವಾಗಿರುವುದು. ಲೋಕದಲ್ಲಿ ಕಾರ್ಯವನ್ನು ಸಾಧಿಸಿದವನು, ಸಾಧ್ಯವಾದ ಫಲವನ್ನು ಬೇಗನೆ ಹೊಂದುವ ಹಾಗೆ ಅಗ್ನಿಯು ತನಗೆ ಅರ್ಪಿತವಾದುವುಗಳೆಲ್ಲವನ್ನೂ ಜಾಗ್ರತೆಯಾಗಿ ಸ್ವೀಕರಿಸುವನು.

ಸ್ಕಂದಸ್ವಾಮಿಗಳು **ಗೃಧ್ನುಃ—ಅಭಿಕಾಂಕ್ಷಿತಾ**=ಅಪೇಕ್ಷಿಸುವವನು. **ಯಥಾ ಸಾಧುಃ ಪುರುಷಃ ನ್ಯಾಯೇನೈವ ಅರ್ಥಾನಭಿಕಾಂಕ್ಷತಿ ಏವಮಗ್ನಿಃ ಸ್ತುತೀರ್ಹವೀಂಷಿ ಚ ಅಭಿಕಾಂಕ್ಷತಿ**. ಸಾಧುವಾದವನು, ಸರಿಯಾದ ರೀತಿಯಿಂದ ಕಾರ್ಯಗಳನ್ನು ಸಾಧಿಸಿ ಪ್ರಯೋಜನಗಳನ್ನು ಹೊಂದಲು ಅಪೇಕ್ಷಿಸುವಹಾಗೆ ಈ ಅಗ್ನಿಯೂ ಕೂಡ ನ್ಯಾಯವಾದ ರೀತಿಯಿಂದಲೇ ಯಜಮಾನರುಗಳಿಂದ ಸ್ತುತಿಗಳನ್ನೂ, ಹವಿಸ್ಸುಗಳನ್ನೂ ಅಪೇಕ್ಷಿಸುತ್ತಿರುವನು ಎಂದು ಅರ್ಥವನ್ನು ಹೇಳಿರುವರು

**ಅಸ್ತೇವ ಶೂರಃ--ಅಸ್ತಾ ಕ್ಷೇಪಣಶೀಲಃ** "ಅಸು ಕ್ಷೇಪಣೇ" ಎಂಬ ಧಾತುವಿನಿಂದ ನಿಷ್ಪನ್ನವಾದ ಅಸ್ತಾ ಎಂಬ ಶಬ್ದವು ಅಸ್ಯತೀತ್ಯಸ್ತಾ ಎಸೆಯುವವನು ಎಂದು ಅರ್ಥವನ್ನು ಬೋಧಿಸುವುದು ಶೂರನಾದವನು ಬಾಣವನ್ನಾಗಲಿ ಇತರ ಆಯುಧವನ್ನಾಗಲಿ ಶತ್ರುಗಳನ್ನು ಕೊಲ್ಲುವುದಕ್ಕಾಗಿ ಎಸೆಯುವಂತೆ ಅಗ್ನಿಯೂ ಕೂಡ ಶತ್ರುಗಳನ್ನು ನಿಗ್ರಹಿಸುವನು ಎಂದರ್ಥವು

**ಯಾತೇವ ಭೀಮಃ**— ಯಾ ಧಾತುವು ಹಿಂಸಾರ್ಥದಲ್ಲಿ ಪ್ರಯುಕ್ತವಾಗಿರುವುದೆಂದು (ಸಾ. ಭಾ) ಸಾಯಣರು ಹೇಳಿರುವರು ಸ್ಕಂದಸ್ವಾಮಿಗಳು **ಯಾತಿರತ್ರ ವಧಾರ್ಥಃ** ಎಂದು ಹೇಳಿ "**ಆಹೇಯಾರ್ತಕಾರಂ**" (ಋ ಸಂ. ೧-೩೨-೧೪) ಎಂದು ಉದಾಹರಿಸಿರುವರು ಯಾತಾ ಎಂದರೆ ಹಿಂಸೆಮಾಡುವವನು ಎಂದು ಅರ್ಥವಾಗುವುದರಿಂದ ಅಗ್ನಿಯು ಹಿಂಸೆಮಾಡುವವನ ಹಾಗೆ ಕಂಡಕೂಡಲೆ ಭಯವನ್ನು ಉಂಟುಮಾಡುವವನು

**ಸಮತ್ಸು—ಸಂಗ್ರಾಮೇಷು** ಯುದ್ಧಗಳಲ್ಲಿ ಎಂದು ಅರ್ಥವು ಸಮತ್ಸು ಎಂಬ ಶಬ್ದವು (ನಿ ೩-೯) ನಲವತ್ತಾರು ಸಂಗ್ರಾಮನಾಮಗಳಲ್ಲಿ ಉಕ್ತವಾಗಿರುತ್ತದೆ

॥ ವ್ಯಾಕರಣಪ್ರಕ್ರಿಯಾ ॥

**ಗೃಧ್ನುಃ**—ಗೃಧು ಅಭಿಕಾಂಕ್ಷಾಯಾಂ ಧಾತು ಇದಕ್ಕೆ **ತ್ರಸಿಗೃಧಿಧೃಷಿಕ್ಷಿಪೇಃ ಕ್ನುಃ** (ಪಾ ಸೂ ೩ ೨ ೧೪೦) ಎಂಬುದರಿಂದ ಕ್ನು ಪ್ರತ್ಯಯ ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಅಸ್ತಾ**—ಅಸು ಕ್ಷೇಪಣೇ ಧಾತು ಇದಕ್ಕೆ ಕರ್ತ್ರರ್ಥದಲ್ಲಿ ತೃನ್ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ಪ್ರಥಮಾ ಸು ಪರವಾದಾಗ **ಋದುಶನಸ್ಪು—**ಸೂತ್ರದಿಂದ ಅನಜಾದೇಶ. **ಅಪ್‌ತೃನ್**-ಸೂತ್ರದಿಂದ ಉಪಧಾದೀರ್ಘ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಸುಲೋಪ. **ನಲೋಪಃ ಪ್ರಾ**—ಎಂಬುದರಿಂದ ನಲೋಪ

**ಶೂರಃ**—ಶು ಗತೌ ಧಾತು ಣ್ಯರ್ಥವು (ಪ್ರೇರಣಾ) ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿನ ಮೇಲೆ **ಶುಷಿಚಿಮೀನಾಂ ದೀರ್ಘಶ್ಚ** (ಉ ಸೂ ೨-೧೮೩) ಎಂಬುದರಿಂದ ಕ್ರನ್ ಪ್ರತ್ಯಯ **ಲಶಕ್ವತದ್ಧಿತೇ** ಎಂಬುದರಿಂದ ಆದಿ ಕಕಾರಕ್ಕೆ ಇತ್‌ಸಂಜ್ಞಾ ಬರುವುದರಿಂದ ಲೋಪ ಧಾತುವಿಗೆ ದೀರ್ಘವೆಂದುದರಿಂದ ಶೂರ ಎಂದು ರೂಪವಾಗುತ್ತದೆ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ತ್ವೇಷಃ**—ದೀಪ್ತ್ಯರ್ಥವಾದ ತ್ವಿಷ ಧಾತುವಿಗೆ **ನಂದಿಗ್ರಹಪಚಾದಿಭ್ಯಃ**— (ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ **ಲಘೂಪಧೆಗೆ** ಗುಣ. ಪ್ರತ್ಯಯ **ಚಿತ್ತಾದುದರಿಂದ** **ಚಿತಃ**—(ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಸ್ವರ ಬರುತ್ತದೆ.

ಎಪ್ಪತ್ತನೆಯ ಸೂಕ್ತವು ಸಮಾಪ್ತವು



# ಎಪ್ಪತ್ತೊಂದನೆಯ ಸೂಕ್ತವು

**ಉಪ ಪ್ರೇತಿ ದಶರ್ಚಂ ಸಪ್ತಮಂ ಸೂಕ್ತಂ । ಅತ್ರಾನುಕ್ರಮ್ಯತೇ । ಉಪ ಪ್ರ ದಶೇತಿ । ಋಷಿ-ಶ್ಚಾನ್ಯಸ್ಮಾದಿತಿ ಪರಿಭಾಷಯಾ ಶಕ್ತಿಪುತ್ರಃ ಪರಾಶರ ಋಷಿಃ । ಅನಾದೇಶಪರಿಭಾಷಯಾ ತ್ರಿಷ್ಟುಪ್ । ಪರಮಾಗ್ನೇಯಮೈಂದ್ರಾದಿತಿ ಪರಿಭಾಷಿತತ್ವಾದಗ್ನಿರ್ದೇವತಾ ॥ ಪ್ರಾತರನುವಾಕಸ್ಯಾಗ್ನೇಯೇ ಕ್ರತೌ ತ್ರೈಷ್ಟುಭೇ ಛಂದಸೀದಮಾದೀನಿ ತ್ರೀಣಿ ಸೂಕ್ತಾನಿ । ಅಥೈತಸ್ಯಾ ಇತಿ ಖಂಡೇ ತಥೈವ ಸೂತ್ರಿತಂ । ಉಪ ಪ್ರ ಜಿನ್ವನ್ನಿತಿ ತ್ರೀಣಿ ಕಾ ತ ಉಪೇತಿರಿತಿ ಸೂಕ್ತೇ । ಆ. ೪-೧೩। ಇತಿ॥ ಆಶ್ವಿನಶಸ್ತ್ರೇಽಪಿ ಪ್ರಾತರನುವಾ-ಕಾತಿದೇಶಾದಿದಮಾದೀನಿ ತ್ರೀಣಿ ಸೂಕ್ತಾನಿ । ತಥೈವ ಸೂತ್ರ್ಯತೇ । ಏತಯಾಗ್ನೇಯಂ ಗಾಯತ್ರಮುಪ-ಸಂತನುಯಾತ್ । ಪ್ರಾತರನುವಾಕನ್ಯಾಯೇನ । ಆ. ೬-೫॥ ಇತಿ ॥**

ಅನುವಾದವು—**ಉಪ ಪ್ರ ಜಿನ್ವನ್** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ **ಉಪ ಪ್ರ ದಶೇತಿ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಶಕ್ತಿಪುತ್ರನಾದ ಪರಾಶರನು ಋಷಿಯು ತ್ರಿಷ್ಟುಪ್ ಛಂದಸ್ಸು. ಅಗ್ನಿಯು ದೇವತೆಯು. ಪ್ರಾತರನು ವಾಕಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ತ್ರಿಷ್ಟುಪ್ ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತವೂ ಮುಂದಿನ ಎರಡು ಸೂಕ್ತಗಳೂ ಉಪಯೋಗಿಸಲ್ಪಡುವವು ಎಂದು ಆಶ್ವಲಾಯನಶ್ರೌತ ಸೂತ್ರದ **ಅಥೈತಸ್ಯಾ** ಎಂಬ ಖಂಡದಲ್ಲಿ **ಉಪ ಪ್ರ ಜಿನ್ವನ್ನಿತಿ ತ್ರೀಣಿ ಕಾ ತ ಉಪೇತಿರಿತಿ ಸೂಕ್ತೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೩) ಪ್ರಾತರನುವಾಕಸಂಬಂಧವಾದ ಆಶ್ವಿನಶಸ್ತ್ರಮಂತ್ರಪಠನಕ್ಕಾಗಿಯೂ ಈ ಮೂರು ಸೂಕ್ತಗಳ ವಿನಿಯೋಗ ವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಏತಯಾಗ್ನೇಯಂ ಗಾಯತ್ರಮುಪಸಂತನುಯಾತ್ ಪ್ರಾತರನು-ವಾಕನ್ಯಾಯೇನ** ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು. (ಆ. ೬-೫).

## ಸೂಕ್ತ—೭೧

|| ಓಂ ||

|| ಮಂಡಲ—೧ || ಅನುವಾಕ—೧೨ || ಸೂಕ್ತ—೭೧ ||

|| ಅಷ್ಟಕ—೧ || ಅಧ್ಯಾಯ—೫ || ವರ್ಗ—೧೫, ೧೬ ||

|| ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ||

|| ಋಷಿಃ—ಪಾರಾಶರಃ ಶಾಕ್ತ್ಯಃ ||

ದೇವತಾ—ಅಗ್ನಿಃ ||

ಛಂದಃ—ತ್ರಿಷ್ಟುಪ್ ||

|| ಸಂಹಿತಾಪಾಠಃ ||

ಉಪ ಪ್ರ ಜಿನ್ವನ್ನುಶತೀರುಶಂತಂ ಪತಿಂ ನ ನಿತ್ಯಂ ಜನಯಃ
ಸನೀಳಾಃ |
ಸ್ವಸಾರಃ ಶ್ಯಾವೀಮರುಷೀಮಜುಷ್ರಞ್ಚಿತ್ರಮುಚ್ಛಂತೀಮುಷಸಂ
ನ ಗಾವಃ || ೧ ||

|| ಪದಪಾಠಃ ||

ಉಪ | ಪ್ರ | ಜಿನ್ವನ್ | ಉಶತೀಃ | ಉಶಂತಂ | ಪತಿಂ | ನ | ನಿತ್ಯಂ | ಜನಯಃ |
ಸಽನೀಳಾಃ |
ಸ್ವಸಾರಃ | ಶ್ಯಾವೀಂ | ಅರುಷೀಂ | ಅಜುಷ್ರನ್ | ಚಿತ್ರಂ | ಉಚ್ಛಂತೀಂ |
ಉಷಸಂ | ನ | ಗಾವಃ || ೧ ||

॥ ಸಾಯಣಭಾಷ್ಯಂ ॥

ಉಶತೀರುಶತ್ಯಃ ಕಾಮಯಮಾನಾಃ ಸನೀಳಾಃ । ನೀಳೋ ನಿವಾಸಸ್ಥಾನಂ । ಸಮಾನನಿವಾಸಸ್ಥಾನಾಃ । ಏಕಪಾಣ್ಯವಸ್ಥಾನಾತ್ । ಸ್ವಸಾರ ಇತ್ಯಂಗುಲಿನಾಮ । ಏವಂಭೂತಾ ಅಂಗುಲಯ ಉಶಂತಂ ಕಾಮಯಮಾನಮಗ್ನಿಂ ಜನಯೋ ಜಾಯಾ ನಿತ್ಯಮಸಾಧಾರಣಂ ಪತಿಂ ನ ಭರ್ತಾರಮಿವೋಪ ಪ್ರ ಜಿನ್ವನ್ । ಉಪೇತ್ಯ ಹವಿಷ್ಪ್ರದಾನಾದಿಕರ್ಮಣಾ ಪ್ರೀಣಯಂತಿ । ಪ್ರೀಣಯಿತ್ವಾ ಚ ಚಿತ್ರಂ ಚಾಯನೀಯಂ ಪೂಜನೀಯಂ ತಮಗ್ನಿಮಂಜಲಿಬಂಧನೇನಾಜುಷ್ರನ್ । ಅಸೇವಂತ । ತತ್ರ ದೃಷ್ಟಾಂತಃ । ಶ್ಯಾವೀಂ ಶ್ಯಾವವರ್ಣಾಂ ರಾತ್ರಿಸಂಬಂಧಾತ್ಕೃಷ್ಣಾಂ ತತ ಉಚ್ಛಂತೀಂ ಸೂರ್ಯಕಿರಣಸಂಬಂಧಾತ್ತಮೋ ವರ್ಜಯಂತೀಂ ಅತ ಏವಾರುಷೀಮಾರೋಚಮಾನಾಂ ಯದ್ವಾ ಶುಭ್ರರೂಪಯುಕ್ತಾಮುಷಸಂ ನ ಉಷೋದೇವತಾಂ ಗಾವೋ ರಶ್ಮಯೋ ಯಥಾ ಸೇವಂತೇ ತದ್ವತ್ । ಯಥಾ ರಶ್ಮಯ ಉಷಸಾ ನಿತ್ಯಸಂಬದ್ಧಾ ಏವಂ ಸರ್ವೇಷು ಯಜ್ಞೇಷ್ವಗ್ನಿಪರಿಚರಣೇನಾಂಗುಲಯೋ ನಿತ್ಯಸಂಬದ್ಧಾ ಇತಿ ತಾತ್ಪರ್ಯಾರ್ಥಃ ॥ ಜಿನ್ವನ್ । ಜಿವಿ ಪ್ರೀಣನಾರ್ಥಃ । ಇದಿತ್ವಾನ್ನುಮ್ । ಲೇಟ್ಯಡಾಗಮಃ । ಉಶತೀಃ । ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ । ಶತುರನುಮ ಇತಿ ನದ್ಯಾ ಉದಾತ್ತತ್ವಂ । ಸ್ವಸಾರಃ । ಅಸು ಕ್ಷೇಪಣ ಇತ್ಯಸ್ಮಾತ್ಸುಞ್ಯಸೇರ್‍ಋನ್ । ಉ. ೨-೯೭ । ಇತಿ ಋನ್ । ನ ಷಟ್‌ಸ್ವಸ್ರಾದಿಭ್ಯಃ । ಪಾ. ೪-೧-೧೦ । ಇತಿ ಙೀಪ್ಪ್ರತಿಷೇಧಃ । ನಿತ್ತ್ವಾದಾದ್ಯುದಾತ್ತತ್ವಂ । ಅರುಷೀಂ । ಅರುಷಮಿತಿ ರೂಪನಾಮ । ಋ ಗತೌ । ಋಹನಿಭ್ಯಾಮುಷಚ್ । ಉ. ೪-೭೩ । ಛಂದಸೀವನಿಪಾವಿತಿ ಮತ್ವರ್ಥೀಯ ಈಕಾರಃ । ವ್ಯತ್ಯಯೇನಾದ್ಯುದಾತ್ತತ್ವಂ । ಅಜುಷ್ರನ್ । ಜುಷೀ ಪ್ರೀತಿಸೇವನಯೋಃ । ತೌದಾದಿಕಃ । ಲಙಿ ವ್ಯತ್ಯಯೇನ ಪರಸ್ಮೈಪದಂ । ರುಡಿತ್ಯನುವೃತ್ತೌ ಬಹುಲಂ ಛಂದಸೀತ್ಯಂತಾದೇಶಸ್ಯ ರುಡಾಗಮಃ ॥

॥ ಪ್ರತಿಪದಾರ್ಥ ॥

**ಉಶತೀಃ**--ಪ್ರೀತಿಯುಕ್ತವಾದ । **ಸನೀಳಾಃ**—(ಒಂದೇ ಕೈಯಲ್ಲಿರುವುದರಿಂದ) ಸಮಾನವಾಸಸ್ಥಾನವುಳ್ಳ । **ಸ್ವಸಾರಃ**—ಕೈಬೆರಳುಗಳು । **ಉಶಂತಂ**—ವಿಶ್ವಾಸಯುಕ್ತನಾದ (ಅಗ್ನಿಯನ್ನು) । **ಜನಯಃ**—ಪತ್ನಿಯರು । **ನಿತ್ಯಂ**—ಅಸಾಧಾರಣನಾದ । **ಪತಿಂ ನ**—ಭರ್ತೃವಿನಂತೆ । **ಉಪ ಪ್ರ ಜಿನ್ವನ್**—ಸಮೀಪಿಸಿ (ಹವಿರಾದಿಗಳಿಂದ) ಪೂಜಿಸುತ್ತವೆ । **ಚಿತ್ರಂ**--ಪೂಜ್ಯನಾದ (ಅಗ್ನಿಯನ್ನು) । **ಶ್ಯಾವೀಂ**—(ಮೊದಲು) ಶ್ಯಾಮವರ್ಣಯುಕ್ತವಾದ । **ಉಚ್ಛಂತೀಂ**—(ಅನಂತರ ಸೂರ್ಯಕಿರಣ ಸಂಬಂಧದಿಂದ) ತಮಸ್ಸನ್ನು ತ್ಯಜಿಸುತ್ತಿರುವ । **ಅರುಷೀಂ**—(ಅದುದರಿಂದಲೇ) ಪ್ರಕಾಶಿಸುತ್ತಿರುವ (ಶುಭ್ರವಾದ) । **ಉಷಸಂ**—ಉಷಸ್ಸನ್ನು । **ಗಾವಃ ನ**—ಕಿರಣಗಳಂತೆ । **ಅಜುಷ್ರನ್**—(ಅಂಜಲಿಬಂಧಾದಿಗಳಿಂದ) ಸೇವಿಸಿದವು ॥

॥ ಭಾವಾರ್ಥ ॥

ಕೈಬೆರಳುಗಳು ವಿಶ್ವಾಸಯುಕ್ತನಾದ, ಪೂಜ್ಯನಾದ, ಅಗ್ನಿಯನ್ನು, ಪ್ರೇಮ-(ಭಕ್ತಿ) ಪುರಸ್ಸರವಾಗಿ ಹವಿರಾದಿಗಳಿಂದ ಪೂಜಿಸಿ, ಮೊದಲು ಶ್ಯಾಮವರ್ಣವಾಗಿದ್ದು, (ಅನಂತರ ಸೂರ್ಯಕಿರಣಸಂಬಂಧದಿಂದ) ಮಂದಪ್ರಕಾಶವುಳ್ಳ

ದ್ದಾಗಿ, ಕಡೆಗೆ ಶುಭ್ರವರ್ಣವನ್ನು ಪಡೆಯುವ ಉಷಸ್ಸನ್ನು ಕಿರಣಗಳು ಹೇಗೆ ಸತತವಾಗಿ ಸೇವಿಸುತ್ತವೋ ಹಾಗೆ, ಅಗ್ನಿಯನ್ನು, ಅಂಜಲಿಬಂಧಾದಿಗಳಿಂದ ಸೇವಿಸುತ್ತವೆ.

## English Translation

The contiguous fingers, loving the affectionate Agni, as wives love their own husbands, please him (with offered oblations), and honour him, who is entitled to honour (with gesticulations) as the rays of light (are assiduous in the service) of the dawn, which is (at first) dark, then glimmering, and (finally) radiant.

॥ ವಿಶೇಷವಿಷಯಗಳು ॥

ಭಕ್ತಿಶ್ರದ್ಧೆಗಳಿಂದ ಕೂಡಿದ ಬೆರಳುಗಳ, ಅಗ್ನಿಗೆ ಮಾಡುವ ಪೂಜೆಯನ್ನೂ ಅಗ್ನಿಯೊಂದಿಗೆ ಅವಕ್ಕಿರುವ ನಿತ್ಯವೂ ಶ್ರೇಷ್ಠವಾದುದೂ ಆದ ಸಂಬಂಧವನ್ನು ವಿವರಿಸಿದೆ. ಇವನ್ನು ಪ್ರೇಮಾತಿಶಯದಿಂದ ಕೂಡಿದ ಪತ್ನಿಯು ಪತಿಗೆ ಮಾಡುವ ಉಪಚಾರಕ್ಕೂ, ಸ್ವತೇಜಸ್ಸಿನಿಂದಲೇ ಬೆಳಗುತ್ತಿರುವ ಉಷಸ್ಸಿಗೆ ಕಿರಣಗಳು ಇನ್ನು ಹೆಚ್ಚು ಕಾಂತಿಯನ್ನು ಕೊಡುತ್ತಾ ಅವಳಿಗೆ ಮಾಡುವ ಸೇವೆಗೂ ಹೋಲಿಸಿದೆ **ಯಥಾ ರಶ್ಮಯ ಉಷಸಾ ನಿತ್ಯಸಂಬದ್ಧಾ ಇತಿ ತಾತ್ಪರ್ಯಾರ್ಥಃ ।** ಯಾವ ರೀತಿ ಉಷಸ್ಸಿಗೂ ಕಿರಣಗಳಿಗೂ ನಿತ್ಯಸಂಬಂಧವಿದೆಯೋ ಅದರಂತೆಯೇ ಬೆರಳುಗಳಿಗೂ ಅಗ್ನಿಗೂ ಸಹ ಯಜ್ಞಗಳಲ್ಲಿ ನಿತ್ಯವಾಗಿ ಉಪಚಾರಾದಿಗಳನ್ನು ಸಮರ್ಪಿಸುವುದರಿಂದ ನಿತ್ಯಸಂಬಂಧವಿದೆಯೆಂದು ತಾತ್ಪರ್ಯಾರ್ಥವು ಎಂದು ಸಾಯಣರು ವಿವರಿಸುತ್ತಾರೆ

**ಸನೀಳಾಃ**—**ಗಯಃ, ಕೃದರಃ,** ಇತ್ಯಾದಿ ೨೨ **ಗೃಹನಾಮ**ಗಳಲ್ಲಿ ಪಠಿತವಾಗಿರುವುದರಿಂದ (ನಿ ೩-೧೩) **ನೀಳ** ಶಬ್ದಕ್ಕೆ ಗೃಹವೆಂದರ್ಥ ಗೃಹಕ್ಕೆ ಪರ್ಯಾಯವಾಗಿರುವ ವಾಸಸ್ಥಾನಗಳನ್ನು ಹೇಳುವ ಸನ್ನಿವೇಶಗಳಲ್ಲೂ **ನೀಳ**ವೆಂಬ ಪದವನ್ನೇ ಅನೇಕಕಡೆ ಉಪಯೋಗಿಸಿದೆ ಇಲ್ಲಿ **ಸನೀಳಾಃ** ಎಂದರೆ ಸಮಾನವಾದ ವಾಸಸ್ಥಾನವುಳ್ಳವು ಎಂದು ಅಂಗುಲಿಗಳಿಗೆ ವಿಶೇಷಣವಾಗಿ ಉಪಯೋಗಿಸಿದೆ ಎಲ್ಲಕ್ಕೂ ಸಾಧಾರಣವಾದ ಒಂದೇ ಕೈಯಿನಲ್ಲಿ ಜೊತೆಯಾಗಿರುವುವು ಎಂದರ್ಥ. ಹೀಗೆಯೇ ಋ. ಸಂ ೮-೭೨-೨. ಇತ್ಯಾದಿ ಋಕ್ಕುಗಳಲ್ಲಿ **ಸನೀಳಾಭಿಃ, ಸನೀಳಾಃ,** ಎಂದು ಅಂಗುಲಿಗಳಿಗೆ ವಿಶೇಷಣವಾಗಿ ಉಪಯೋಗಿಸಿದೆ. ಸಾಧಾರಣವಾಗಿ **ಮರುತ್ತುಗಳು** ಯಾವಾಗಲೂ ಜೊತೆಯಲ್ಲಿಯೇ ವಾಸಮಾಡುವುದರಿಂದ ಅವರಿಗೂ ವಿಶೇಷಣವಾಗಿ ಪ್ರಯೋಗಿಸಿದೆ ೧-೧೬೫-೧ ೭-೫೬-೧ ಇತ್ಯಾದಿ ಸ್ಥಳಗಳಲ್ಲಿ **ಮರುತ್ತು**ಗಳನ್ನು ವರ್ಣಿಸುತ್ತದೆ

**ಸ್ವಸಾರಃ**—ಅಗ್ರುವಃ, ಅಣ್ವ್ಯಃ ಇತ್ಯಾದಿ ೨೨ ಅಂಗುಲಿನಾಮಗಳಲ್ಲಿ ಪಠಿತವಾಗಿರುವುದರಿಂದ (೨-೮) **ಬೆರಳು**ಗಳೆಂದರ್ಥ. **ಸ್ವಯಮೇವ ಸರಂತ್ಯಂಗುಲಯಃ ।** ಅಗ್ನಿಕಾರ್ಯಕ್ಕಾಗಿ ತಾವಾಗಿಯೇ ಚಲಿಸುತ್ತವೆಯಾದ್ದರಿಂದ

**ಸ್ವಸಾರಃ** ಎಂದಾಗಿದೆ. **ಸನೀಳಾಃ, ಸ್ವಸಾರಃ** ಎಂಬ ಪದಗಳೂ ಬೆರಳುಗಳಿಗೆ ಸಾಧಾರಣವಾಗಿ ಜೊತೆಯಲ್ಲಿಯೇ ಉಪಯೋಗಿಸುವ ವಿಶೇಷಣಗಳು.

**ಜನಯಃ—ಜನಯಃ ಇತಿ ದೇವಾನಾಂ ಪತ್ನ್ಯ ಉಚ್ಯಂತೇ–ದೇವಾನಾಂ ವೈ ಪತ್ನೀರ್ಜನಯಃ–ಇತಿ ಶ್ರುತೇಃ।** ದೇವಪತ್ನಿಯರಿಗೆ **ಜನಯಃ** ಎಂದು ಪ್ರಸಿದ್ಧವಾಗಿದೆಯೆಂದು ಸಾಯಣರು ೧–೬೨–೧೦ ನೇ ಋಕ್ಕನ್ನು ವಿವರಿಸುವಾಗ ತಿಳಿಸುತ್ತಾರೆ. ಆದರೆ ಅವರು ಕೊಡುವ ಉದಾಹರಣೆಯು ಯಾವ ಶ್ರುತಿವಾಕ್ಯವೆಂದು ತಿಳಿಸಲು ಸರಿಯಾದ ಆಧಾರವನ್ನು ಕೊಟ್ಟಿಲ್ಲ. **ಜನಯಃ** ಎಂದರೆ ದೇವಪತ್ನಿಯರೇ ಆಗಬೇಕೆಂಬ ನಿಯಮವಿಲ್ಲ. ಋಕ್ಸಂಹಿತೆಯಲ್ಲಿ **ಉತ್ಪಾದಯಿತ್ರ್ಯಃ ಪತ್ನ್ಯಃ** ಸಂತಾನವನ್ನು ಪಡೆಯತಕ್ಕ ಪತ್ನಿಯರು ಎಂದು ಸಾಧಾರಣವಾಗಿ ದೇವಮಾನವರೆಲ್ಲರಿಗೂ ಸಮಾನವಾಗಿ ಉಪಯೋಗಿಸಿದೆ ಉದಾಹರಣೆಗೆ—

**ಅಭ್ರಾತರೋ ನ ಯೋಷಣೋ ವ್ಯಂತಃ ಪತಿರಿಪೋ ನ ಜನಯೋ ದುರೇವಾಃ ।**

(ಋ. ಸಂ. ೪–೫–೫)

**ಅನಶ್ರವೋಽನಮೀವಾಃ ಸುರತ್ನಾ ಆ ರೋಹಂತು ಜನಯೋ ಯೋನಿಮಗ್ರೇ ।**

(ಋ ಸಂ. ೧೦–೧೮–೭)

ಇತ್ಯಾದಿ ಸ್ಥಳಗಳಲ್ಲೆಲ್ಲಾ ಮಾನವಸ್ತ್ರೀಗಳ ಪರ್ಯಾಯವಾಗಿಯೇ **ಜನಯಃ** ಎಂಬ ಪದದ ಉಪಯೋಗವಿದೆ. ಇಲ್ಲಿಯೂ ಸಹ **ಜನಯಃ–ಜಾಯಾಃ** ಎಂದು ಸಾಮಾನ್ಯವಾಗಿ ಪತ್ನಿಯರು ಎಂದರ್ಥ.

**ಜಿನ್ವನ್—ಜಿನ್ವತಿಃ ಪ್ರೀತಿಕರ್ಮಾ**—ಪ್ರೀತಿಸು ಎನ್ನುವ ಅರ್ಥದಲ್ಲಿ ಉಪಯೋಗಿಸಿದೆ. (ನಿ. ೬–೨೨) ಯಾವ ರೀತಿ ಪತ್ನಿಯು ಪತಿಯನ್ನು ಪ್ರೀತಿಸುತ್ತಾ ಪ್ರೇಮದಿಂದ ಸಮೀಪಿಸಿ ಉಪಚರಿಸುತ್ತಾಳೆಯೋ ಆದರಂತೆ ಅಂಗುಲಿಗಳು ಭಕ್ತಿಯಿಂದ ಅಗ್ನಿಯನ್ನು ಸಮೀಪಿಸಿ ಉಪಚರಿಸುತ್ತವೆಯೆಂದರ್ಥ ಆದರೆ ಇದು ಬರೀ ಸಾಧಾರಣವಾದ ಪ್ರೀತಿಯಲ್ಲ ಇದರಲ್ಲಿ ಪೋಷಣಾರ್ಥವೂ ಅಡಕವಾಗಿದೆ ಒಟ್ಟಿನಲ್ಲಿ ಹರ್ಷದಾಯಕವಾದುದೂ ಪುಷ್ಟಿದಾಯಕವಾದುದೂ ಆದ ಪ್ರೀತಿಯೆಂದು ತೋರಿಸಲು ನಿರುಕ್ತಕಾರರು ಅತ್ಯಂತ ಋಚಿತವಾದ ಉದಾಹರಣೆಯನ್ನು ಕೊಡುತ್ತಾರೆ. (ನಿ. ೬–೨೨) ಋಕ್ಸಂಹಿತೆಯ —

**ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ।**

(ಋ ಸಂ. ೧–೧೬೪–೫೧)

ಎಂಬ ಋಕ್ಕನ್ನು ಉದಹರಿಸಿ ಯಾವ ರೀತಿ ವೃಷ್ಟಿಯು ಭೂಮಿಗೆ,ಹರ್ಷದಾಯಕವೂ ಪುಷ್ಟಿದಾಯಕವೂ ಆಗಿರುವುದೋ, ಯಾವ ರೀತಿ ಅಗ್ನಿಗಳು ದ್ಯುಲೋಕಕ್ಕೆ ಪ್ರೀತಿಕರಗಳಾಗಿರುವುವೋ, ಆರೀತಿಯ ಪ್ರೀತಿಯನ್ನು ತೋರಿಸುವಾಗ **ಜಿನ್ವಂತಿ** ಎಂಬ ಪದಪ್ರಯೋಗವು ಸಾಧುವಾಗುತ್ತದೆಂದು ತೋರಿಸುತ್ತಾರೆ. ಇಲ್ಲಿಯೂ ಸಹ ಅಂಗುಲಿಗಳು ಅಗ್ನಿಗೆ ಹರ್ಷದಾಯಕವೂ ಪುಷ್ಟಿದಾಯಕವೂ ಆದ ಪ್ರೀತಿಯುಳ್ಳವು ಎಂದರ್ಥ. ಪತಿಪತ್ನಿಯರ ಪ್ರೀತಿಯ ಉದಾಹರಣೆಯೂ ಅತ್ಯಂತ ಸಮಂಜಸವಾಗಿದೆ.

**ಉಚ್ಛಂತೀಂ—ನೈಶಂ ತಮಃ ವರ್ಜಯಂತೀಂ।** ರಾತ್ರಿಯ ಕತ್ತಲೆಯನ್ನು ದೂರಕ್ಕೆ ಓಡಿಸುತ್ತಾ ಇರುವ ಉಷಸ್ಸನ್ನು **ಗಾವೋ ನ** ಕಿರಣಗಳು ಸೇವಿಸುವಂತೆ ಎಂದು ಅಂಗುಳಿಗಳ ಸೇವೆಗೆ ಉಪಮಾನವಾಗಿವೆ (**ಉಚ್ಛಂತೀಂ** ಎಂಬ ಪದದ ವಿವರಣೆಯನ್ನು ೧-೯೨-೬ ನೇ ಋಕ್ಕಿನ ವಿಶೇಷವಿಷಯದಲ್ಲಿ ನೋಡಿ )

॥ ವ್ಯಾಕರಣಪ್ರಕ್ರಿಯಾ ॥

**ಜಿನ್ವನ್—**ಜಿವಿ ಧಾತುವು ಪ್ರೀಣನ (ಸಂತೋಷ) ಎಂಬರ್ಥದಲ್ಲಿದೆ **ಇದಿತೋ ನುಮ್ ಧಾತೋಃ** ಎಂಬುದರಿಂದ ನುಮಾಗಮ ಲೇಟ್‌ಪ್ರಥಮಪುರುಷ ಬಹುವಚನದಲ್ಲಿ **ಝೋಽಂತಃ** ಎಂಬುದರಿಂದ ಅಂತಾದೇಶ **ಇತಶ್ಚಲೋಪಃ**— ಸೂತ್ರದಿಂದ ಅಂತ್ಯ ಇಕಾರಕ್ಕೆ ಲೋಪ ಸಂಯೋಗಾಂತಲೋಪದಿಂದ ಅಂತ್ಯ ತಕಾರಲೋಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಉಶತೀಃ** -ವಶ ಕಾಂತೌ ಧಾತು ಶತೃಪ್ರತ್ಯಯ. ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. ಇದಕ್ಕೆ ಜಸ್ ಪರವಾದಾಗ **ವಾ ಛಾಂದಸಿ** ಎಂಬುದರಿಂದ ಪೂರ್ವಸವರ್ಣದೀರ್ಘ ನುಮ್‌ರಹಿತವಾದ ಶತೃವಿನ ಪರದಲ್ಲಿ ಙೀಪ್ ಬಂದುದರಿಂದ **ಶತುರನುಮೋನದ್ಯಜಾದೀ** (ಪಾ ಸೂ ೬-೬-೧೭೩) ಎಂಬುದರಿಂದ ನದೀ ಸಂಜ್ಞೆಯುಳ್ಳ ಈಕಾರಕ್ಕೆ ಉದಾತ್ತಸ್ವರ ಬರುತ್ತದೆ

**ನಿತ್ಯಂ—ಅವ್ಯಯಾತ್ತ್ಯಪ್** (ಪಾ. ಸೂ ೪-೨-೧೦೪) ಎಂದು ಅಧಿಕೃತವಾಗುವಾಗ **ತ್ಯಬ್ನೇರ್ಧ್ರುವ ಇತಿ ವಕ್ತವ್ಯಮ್** (ವಾ. ೨೭೮೦) ಎಂಬ ವಚನದಿಂದ ಶಾಶ್ವತ ಎಂಬರ್ಥದಲ್ಲಿ ನಿ ಎಂಬ ಅವ್ಯಯಕ್ಕೆ ತ್ಯಪ್ ಪ್ರತ್ಯಯ ಪಿತ್ತಾದುದರಿಂದ ಅದು ಅನುದಾತ್ತವಾಗುವುದರಿಂದ ಅವ್ಯಯ ಸ್ವರ ಉಳಿಯುತ್ತದೆ

**ಸ್ವಸಾರಃ**—ಅಸು ಕ್ಷೇಪಣೇ ಧಾತು ದಿವಾದಿ ಇದಕ್ಕೆ **ಸುಞ್ಯಸೇಋರ್ನ್** (ಉ. ಸೂ ೨-೨೫೩) ಎಂಬುದರಿಂದ ಸುಞ್ ಉಪಪದವಾಗಿರುವಾಗ ಋನ್ ಪ್ರತ್ಯಯ ಸ್ವಸೃ ಶಬ್ದವಾಗುತ್ತದ ಸ್ತ್ರೀತ್ವದಲ್ಲಿ ಋದಂತ ವಾದುದರಿಂದ ಙೀಪ್ ಪ್ರಾಪ್ತವಾದರೆ **ನ ಷಟ್ ಸ್ವಸ್ರಾದಿಭ್ಯಃ** (ಪಾ. ಸೂ. ೪-೧-೧೦) ಎಂಬುದರಿಂದ ಙೀಪ್ ಪ್ರತಿಷೇಧ ಬರುತ್ತದೆ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಪ್ರಥಮಾ ಬಹುವಚನದಲ್ಲಿ ಜಸ್ ಪರವಾದಾಗ **ಋತೋಙಿ ಸರ್ವನಾಮಸ್ಥಾನಯೋಃ** (ಪಾ ಸೂ. ೭-೩-೧೧೦) ಎಂಬುದರಿಂದ ಗುಣ **ಅಪ್‌ತೃನ್‌ತೃಚ್**—ಸೂತ್ರದಿಂದ ಉಪಧಾದೀರ್ಘ ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ ಸ್ವಸಾರಃ ಎಂದು ರೂಪವಾಗುತ್ತದ.

**ಅರುಷೀಮ್**—ಅರುಷ ಎಂಬುದು ರೂಪದ ಹೆಸರು ಋ ಗತೌ ಧಾತು **ಋಹನಿಭ್ಯಾಮುಷಚ್** (ಉ ಸೂ. ೪-೫೭೩) ಎಂಬುದರಿಂದ ಇದಕ್ಕೆ ಉಷಚ್ ಪ್ರತ್ಯಯ ಅರುಷಮಸ್ಯ ಅಸ್ತಿ ಎಂದು ಮತ್ವರ್ಥ ವಿವಕ್ಷಾ ಮಾಡುವಾಗ **ಛಂದಸೀವನಿಪೌ** ಎಂಬುದರಿಂದ ಮತ್ವರ್ಥಕವಾದ ಈಕಾರ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವು ಬರುತ್ತದೆ ಪ್ರತ್ಯಯಸ್ವರದಿಂದ ಅಂತೋದಾತ್ತವು ಪ್ರಾಪ್ತವಾದರೂ **ವ್ಯತ್ಯಯೋ ಬಹುಲಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದ.

**ಅಜುಷ್ರನ್**—ಜುಷೀ ಪ್ರೀತಿಸೇವನಯೋಃ ಧಾತು. ತುದಾದಿ. ಲಙ್ ಪ್ರಥಮಪುರುಷ ಬಹುವಚನ ವಿವಕ್ಷಾ ಮಾಡಿದಾಗ **ವ್ಯತ್ಯಯೋ ಬಹುಲಂ** ಎಂಬುದರಿಂದ ಪರಸ್ಮೈಪದಪ್ರತ್ಯಯು ಬರುತ್ತದೆ. **ಝೋಂತಃ** ಎಂಬುದರಿಂದ ಅಂತಾದೇಶ. **ಇತಶ್ಚ** ಸೂತ್ರದಿಂದ ಅಂತ್ಯ ಇಕಾರಕ್ಕೆ ಲೋಪ **ಶೀಙೋ ರುಟ್** (ಪಾ ಸೂ.೭-೧-೬) ಎಂಬುದರಿಂದ ರುಟ್ ಎಂಬುದು ಅನುವೃತ್ತವಾಗುವಾಗ **ಬಹುಲಂ ಛಂದಸಿ** (ಪಾ.ಸೂ.೭-೧-೮) ಎಂಬುದರಿಂದ ಈ ಧಾತುವಿನ ಪರದಲ್ಲಿರುವ ಅಂತಾದೇಶಕ್ಕೂ ರುಟಾಗಮ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ



॥ ಸಂಹಿತಾಪಾಠಃ ॥

ವೀಳು ಚಿದ್ದೃಳ್ಹಾ ಪಿತರೋ ನ ಉಕ್ಥೈರದ್ರಿಂ ರುಜನ್ನಂಗಿರಸೋ ರವೇಣ ।
ಚಕ್ರುರ್ದಿವೋ ಬೃಹತೋ ಗಾತುಮಸ್ಮೇ ಅಹಃ ಸ್ವರ್ವಿವಿದುಃ ಕೇತುಮುಸ್ರಾಃ ॥ ೨ ॥

॥ ಪದಪಾಠಃ ॥

ವೀಳು । ಚಿತ್ । ದೃಳ್ಹಾ । ಪಿತರಃ । ನಃ । ಉಕ್ಥೈಃ । ಅದ್ರಿಂ । ರುಜನ್ । ಅಂಗಿರಸಃ । ರವೇಣ ।
ಚಕ್ರುಃ । ದಿವಃ । ಬೃಹತಃ । ಗಾತುಂ । ಅಸ್ಮೇ ಇತಿ । ಅಹರಿತಿ । ಸ್ವಃ । ವಿವಿದುಃ । ಕೇತುಂ । ಉಸ್ರಾಃ ॥ ೨ ॥

॥ ಸಾಯಣಭಾಷ್ಯಂ ॥

ನೋಽಸ್ಮಾಕಂ ಪಿತರೋಽಂಗಿರಸ ಏತತ್ಸಂಜ್ಞಾ ಋಷಯ ಉಕ್ಥೈಃ ಶಸ್ತ್ರೈರಗ್ನಿಂ ಸ್ತುತ್ವಾ ವೀಳು ಚಿದ್ದೃಳ್ಹಾ । ವೀಳ್ವಿತಿ ಬಲನಾಮ । ಬಲವಂತಂ ದೃಢಾಂಗಮಪ್ಯದ್ರಿಮತ್ತಾರಂ ಪಣಿನಾಮಾನಮಸುರಂ ರವೇಣ ಸ್ತುತಿಶಬ್ದಮಾತ್ರೇಣೈವ ರುಜನ್ । ಅಭಂಜನ್ । ತೈಃ ಸ್ತುತೋಽಗ್ನಿಸ್ತಮಸುರಂ ಹತವಾನಿತ್ಯರ್ಥಃ । ಕಿಂಚ ಬೃಹತೋ ಮಹತೋ ದಿವೋ ದ್ಯುಲೋಕಸ್ಯ ಗಾತುಂ ಮಾರ್ಗಮಸ್ಮೇ ಅಸ್ಮಾಕಂ ಚಕ್ರುಃ । ಕೃತವಂತಃ । ಅವರಕಸ್ಯಾಸುರಸ್ಯಾಗ್ನಿನಾ ಹತತ್ವಾತ್ । ಮಾರ್ಗಂ ಕೃತ್ವಾ ಚ ಸ್ವಃ ಸುಷ್ಠ್ವರಣೀಯಮಸುರರಾಹಿತ್ಯೇನ ಸುಖೇನ ಪ್ರಾಪ್ಯಮಹರ್ದಿವಸಂ ವಿವಿದುಃ । ಅಜಾನನ್ ಲಬ್ಧವಂತೋ ವಾ । ತಥಾ ಕೇತುಮಸ್ಮಾಂ ಕೇತಯಿತಾರಂ ಜ್ಞಾಪಯಿತಾರಮಾದಿತ್ಯಮುಸ್ರಾಃ ಪಣಿನಾಪಹೃತಾ ಗಾಶ್ಚ ವಿವಿದುರಿತ್ಯನುಷಂಗಃ ॥ ವೀಳು । ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ । ದೃಳ್ಹಾ । ದೃಢಃ ಸ್ಥೂಲಬಲಯೋಃ । ಪಾ. ೭-೨-೨೦ । ಇತಿ ನಿಪಾತಿತಃ । ಸುಪಾಂ ಸುಲುಗಿತಿ ಡಾದೇಶಃ । ರುಜನ್ । ರುಜೋ ಭಂಗೇ । ತೌದಾದಿಕಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ವಿವಿದುಃ । ವಿದ ಜ್ಞಾನೇ ವಿದ್ಲೃ ಲಾಭ ಇತಿ ವಾ । ಲಿಟ್ಯುಸಿ ರೂಪಂ ॥

॥ ಪ್ರತಿಪದಾರ್ಥ ॥

**ನಃ**—ನಮ್ಮ । **ಪಿತರಃ, ಅಂಗಿರಸಃ**—ಪಿತೃಗಣಕ್ಕೆ ಸೇರಿದ ಅಂಗಿರಸರೆಂಬ ಋಷಿಗಳು । **ಉಕ್ಥೈಃ**—ಶಸ್ತ್ರಗಳಿಂದ (ಸ್ತುತಿಗಳಿಂದ ಅಗ್ನಿಯನ್ನು ಸ್ತುತಿಸಿ) । **ವೀಳು**—ಬಲಿಷ್ಠನಾದ । **ಅದ್ರಿಂ**—ಭಕ್ಷಕನಾದ (ಪಣಿನಾಮಕ ಅಸುರನನ್ನು) । **ದೃಳ್ಹಾ ಚಿತ್**—ದೃಢಾಂಗನಾಗಿದ್ದರೂ । **ರವೇಣ**—(ಸ್ತೋತ್ರದ) ಶಬ್ದ(ಮಾತ್ರ)ದಿಂದ । **ರುಜನ್**—ನಾಶಮಾಡಿದರು । **ಬೃಹತಃ**—ದೊಡ್ಡದಾದ (ಮಹಿಮೋಪೇತವಾದ) । **ದಿವಃ**—ಸ್ವರ್ಗಕ್ಕೆ । **ಗಾತುಂ**—ಮಾರ್ಗವನ್ನು । **ಅಸ್ಮೇ**—ನಮಗಾಗಿ । **ಚಕ್ರುಃ**—ಮಾಡಿದರು । **ಸ್ವಃ**—ಸುಖವಾಗಿ ಪ್ರಾಪ್ಯವಾದ । **ಅಹಃ**—ದಿವಸವನ್ನು । **ವಿವಿದುಃ**—ತಿಳಿದರು । **ಕೇತುಂ**—ದಿವಸವನ್ನು ಜ್ಞಾಪಿಸುವ (ಆದಿತ್ಯನನ್ನು) । **ಉಸ್ರಾಃ**—(ಪಣಿಯಿಂದ ಅಪಹೃತವಾದ) ಗೋವುಗಳನ್ನೂ । (**ವಿವಿದುಃ**—ಪಡೆದರು)

॥ ಭಾವಾರ್ಥ ॥

ನಮ್ಮ ಪಿತೃಗಣಕ್ಕೆ ಸೇರಿದ ಅಂಗಿರಸರೆಂಬ ಋಷಿಗಳು ಅಗ್ನಿಯನ್ನು ಉಕ್ಥಗಳಿಂದ ಸ್ತುತಿಸಿ, ಬಲಿಷ್ಠನೂ, ದೃಢಾಂಗನೂ, ಆದ ಪಣಿಯೆಂಬ ಅಸುರನನ್ನು ವಧೆಮಾಡಿಸಿ, ಸ್ವರ್ಗಮಾರ್ಗವನ್ನು ನಮಗೆ ಸುಲಭಮಾಡಿಕೊಟ್ಟರು, ಮತ್ತು ಸುಖವಾಗಿ ಪ್ರಾಪ್ಯವಾದ ದಿವಸವನ್ನೂ, (ಅಂತರಿಕ್ಷವನ್ನೂ ಆವರಿಸಿದ್ದ ಪಣಿಯು ನಾಶವಾದುದರಿಂದ) ಆದಿತ್ಯನನ್ನೂ ಮತ್ತು (ಅವರಿಂದ ಅಪಹೃತವಾದ) ಗೋವುಗಳನ್ನೂ ಸಂಪಾದಿಸಿಕೊಟ್ಟರು

## English Translation.

Our forefathers, the Angirasas, by their praises (of Agni), terrified the strong and daring devourer, (Pani) by the sound; they made for us a

path to the vast heaven, and obtained accessible day, the ensign of day, (Aditya), and the cows (that had been stolen).

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ **ಪಣಿ**ಯೆಂಬ ಅಸುರನನ್ನು ಕೊಂದ **ಅಗ್ನಿಯ** ಪ್ರಭಾವವು ವರ್ಣಿತವಾಗಿದೆ. ಸಾಧಾರಣವಾಗಿ ಈ ಮಹತ್ಕಾರ್ಯವು ಇಂದ್ರನ ಮಹಿಮೆಗೆ ಸೇರಿದುದೆಂದು ಪ್ರಸಿದ್ಧವಾಗಿದ್ದರೂ ಸಹ ಒಂದೊಂದು ಸಲ ಅಗ್ನಿಯೂ ಈ ಮಹತ್ಕಾರ್ಯವನ್ನು ಸಾಧಿಸಿ ಆರ್ಯರಿಗೆ ಸುಖವಾದ ಜೀವನವನ್ನು ಕಲ್ಪಿಸಿದನು ಎಂದು ವರ್ಣಿಸಿದೆ. ಉದಾಹರಣೆಗೆ—

**ನ್ಯಕ್ರತೂನ್ಗ್ರಥಿನೋ ಮೃಧ್ರವಾಚಃ ಪಣೀँರಶ್ರದ್ಧಾँ ಅವೃಧಾँ ಅಯಜ್ಞಾನ್ ।**
**ಪ್ರಪ್ರ ತಾನ್ದಸ್ಯೂँರಗ್ನಿರ್ವಿವಾಯ ಪೂರ್ವಶ್ಚಕಾರಾಪರಾँ ಅಯಜ್ಯೂನ್ ॥**

(ಋ. ಸಂ ೭-೬-೩)

ಎಂಬ ಋಕ್ಕಿನಲ್ಲಿ ಪಣಿಗಳನ್ನು ನಾಶಮಾಡಿದ ಪರಾಕ್ರಮವನ್ನು ವರ್ಣಿಸಿ, ಮುಂದಕ್ಕೆ ಆ ಸಂಹಾರದಿಂದ ಯಜ್ಞಕರ್ತ ರಾದ ಋಷಿಗಳಿಗೆ ಆದ ಉಪಕಾರವನ್ನು ವರ್ಣಿಸಿದೆ ಈ ಋಕ್ಕಿನಲ್ಲಿಯೂ ಅದೇ ಸಂದರ್ಭದ ಸ್ತುತಿಯಿದೆ.

**ವೀಳು—ಓಜಃ, ಪಾಜಃ, ಶವಃ** —ಇತ್ಯಾದಿ ೨೮ ಬಲನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೩-೯) **ವೀಳು ಶಬ್ದ**ಕ್ಕೆ ಬಲವೆಂದು ಹೆಸರು.

**ದೃಳ್ಹಾ—ದೃಢಸ್ಥೂಲಬಲಯೋಃ ।** ದೃಢವಾದುದೂ ಸಾಮಾನ್ಯವಾಗಿ ಕುಗ್ಗದಿರುವುದೂ ಆದ ಶಕ್ತಿ. **ವೀಳು ದೃಳ್ಹಾ ಚಿತ್**—ಎಂದರೆ ಅತ್ಯಂತ ಬಲಿಷ್ಠನಾಗಿದ್ದಾಗ್ಯೂ ಸಹ ನಮ್ಮ ಪಿತೃಗಳು ಅಗ್ನಿಯ ಸಹಾಯದಿಂದ ರಾಕ್ಷಸನನ್ನು ಸಂಹರಿಸಿದರು ಎಂದರ್ಥ

**ಅದ್ರಿಂ—ಅದ್ರಿರಾದೃಣಾತ್ಯೇತೇನ ಅಪಿ ವಾ ಅತ್ತೇಃ ಸ್ಯಾತ್** (ನಿ.೪-೪)ತಿನ್ನು ಎಂದರ್ಥವನ್ನು ಕೊಡುವ **ಅದ್** ಧಾತುವಿನಿಂದ **ಅದ್ರಿ** ಶಬ್ದದ ನಿಷ್ಪತ್ತಿಯಾಗಬಹುದೆಂದು ನಿರುಕ್ತಕಾರರು ವಿವರಿಸುತ್ತಾರೆ ಆ ನಿರ್ವಚನದ ಆಧಾರದ ಮೇಲೆ ಭಾಷ್ಯಕಾರರೂ ಸಹ **ಅದ್ರಿಂ—ಅತ್ತಾರಂ ಪಣಿನಾಮಾನಮಸುರಂ ।** ಸರ್ವಭಕ್ಷಕನಾದ ಪಣಿ ಯೆಂಬ ರಾಕ್ಷಸನನ್ನು ಎಂದು ವಿವರಿಸುತ್ತಾರೆ. ಇದೇ ಅರ್ಥದಲ್ಲಿ—

**ಸಸೇನ ಚಿದ್ವಿಮದಾಯಾವಹೋ ವಸ್ವಾಜಾವದ್ರಿಂ ವಾವಸಾನಸ್ಯ ನರ್ತಯನ್ ।**

(ಋ. ಸಂ. ೧-೫೧-೩)

ಎಂಬ ಋಕ್ಕಿನಲ್ಲಿ **ಅದ್ರಿ** ಶಬ್ದಕ್ಕೆ ಶತ್ರುಭಕ್ಷಕವಾದ ವಜ್ರಾಯುಧವೆಂದು ಅರ್ಥಮಾಡುತ್ತಾರೆ. ಆದರೆ ಇಂತಹ ಅರ್ಥ ಬರುವಂತೆ **ಅದ್ರಿ** ಶಬ್ದವನ್ನು ಪ್ರಯೋಗಿಸಿರುವುದು ಅಪರೂಪ. **ಪರ್ವತ** ಅಥವಾ **ಮೇಘ** ಎಂಬ ಅರ್ಥಗಳಲ್ಲಿ ಉಪ ಯೋಗಿಸಿರುವುದೇ ಹೆಚ್ಚು ಸ್ಕಂದಸ್ವಾಮಿಗಳು ಈ ಋಕ್ಕಿನಲ್ಲಿರುವ **ಅದ್ರಿ** ಶಬ್ದಕ್ಕೂ **ಪರ್ವತ**ವೆಂದೇ ಅರ್ಥಮಾಡುತ್ತಾ **ಅದ್ರಿಂ—ದುರ್ಗಪರ್ವತಂ ಚಾಸುರಾಣಾಂ ಸ್ವಭೂತಂ ।** ಅಸುರರ ನಿವಾಸಸ್ಥಾನವಾದ ಪರ್ವತವು ಎಷ್ಟು ದೃಢ ವಾದ ಬಲವುಳ್ಳದ್ದಾಗಿದ್ದರೂ ಸಹ ಅದನ್ನು **ಅಗ್ನಿಯ** ಸಹಾಯದಿಂದ ಸೀಳಿದರು ಎಂದು ವಿವರಿಸುತ್ತಾರೆ.

· **ಕೇತುಂ—ಅಹ್ನಾಂ ಕೇತಯಿತಾರಂ ಜ್ಞಾಪಯಿತಾರಮಾದಿತ್ಯಂ** ಅಹಸ್ಸನ್ನು ತನ್ನ ಪ್ರಕಾಶದಿಂದ ತಿಳಿಸಿ ಕೊಡುವ ಸೂರ್ಯನನ್ನು ಎಂದರ್ಥ. ಸೂರ್ಯಚಂದ್ರಾದಿಗಳಿಗೆ ಪರ್ಯಾಯವಾದುದೂ ಅವರ ಸ್ವರೂಪವನ್ನು ತಿಳಿಸು ವುದೂ ಆದ ಈ ವಿಶೇಷಣವು ಆಗಾಗ್ಗೆ ಉಪಯೋಗಿಸಲ್ಪಟ್ಟಿದೆ. ಉದಾಹರಣೆಗೆ—

**ನವೋ ನವೋ ಭವತಿ ಜಾಯಮಾನೋಽಹ್ನಾಂ ಕೇತುರುಷಸಾಮೇತ್ಯಗ್ರಂ ।**

(ಋ ಸಂ. ೧೦-೮೫-೧೯)

ಎಂಬ ಋಕ್ಕಿನಲ್ಲಿ ಅಹಸ್ಸಿಗೆ **ಕೇತು**ವಾದ ಚಂದ್ರನೆಂದು ನಿರುಕ್ತಕಾರರು ವಿವರಿಸಿರುತ್ತಾರೆ (ನಿ. ೧೧-೫) ಹೀಗೆ ಋಕ್ಸಂಹಿತೆಯಲ್ಲಿ ಧ್ವಜ, ಪ್ರಜ್ಞೆ, ಕರ್ಮ ಇತ್ಯಾದಿ ನಾನಾರ್ಥಗಳಲ್ಲಿ ಕೇತುಶಬ್ದವನ್ನು ಸೂರ್ಯನ ಮತ್ತು ಚಂದ್ರನ ಪರ್ಯಾಯವಾಗಿಯೂ ಉಪಯೋಗಿಸಲಾಗಿದೆ

**ಉಸ್ರಾಃ—ಗಾಃ** । ಗೋವುಗಳನ್ನು. ಈ ಪದದ ವಿವರಣೆಗೆ ಋ ಸಂ ೧-೯೨-೪ ನೇ ಋಕ್ಕಿನ ವಿಶೇಷ ವಿಷಯಗಳನ್ನು ನೋಡಿ

ಅಗ್ನಿಯ ಅನುಗ್ರಹದಿಂದ ಅತ್ಯಂತ ಪ್ರಬಲನಾದ ಶತ್ರುನಾಶವಾಗಿ, ತಮಸ್ಸಿನ ನಿವಾರಕನಾದ ಸೂರ್ಯನು ಬೆಳಗಿ ಲೋಕಕ್ಕೆ ಉಪಕಾರವಾಯಿತೆಂದು ಋಕ್ಕಿನ ಮುಖ್ಯಾಭಿಪ್ರಾಯವು

॥ ವ್ಯಾಕರಣಪ್ರಕ್ರಿಯಾ ॥

**ವೀಳು** – ಇದಕ್ಕೆ ದ್ವಿತೀಯಾ ವಿಭಕ್ತಿ ಪರವಾದಾಗ ಅದಕ್ಕೆ **ಸುಪಾಂ ಸುಲುಕ್**—ಎಂಬುದರಿಂದ ಲುಕ್

**ದೃಳ್ಹಾ—ದೃಢಃ ಸ್ಥೂಲಬಲಯೋಃ**(ಪಾ. ಸೂ ೭-೨-೨೦) ಎಂಬ ಸೂತ್ರದಿಂದ ಇದು ನಿಪಾತಿತವಾಗಿದೆ. ಇದಕ್ಕೆ ದ್ವಿತೀಯಾ ವಿಭಕ್ತಿ ಅಮ್ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಡಾದೇಶ

**ಪಿತರಃ— ಅಪ್‌ತೃನ್‌ತೃಚ್**––ಸೂತ್ರದಲ್ಲಿ ಉಣಾದಿನಿಷ್ಪನ್ನವಾದ ತೃನ್ ತೃಜಂತಗಳಿಗೆ ದೀರ್ಘಬರುವು ದಾದರೆ ನಪ್ತ್ರಾದಿಗಳಿಗೆ ಮಾತ್ರವೆಂದು ನಿಯಮಮಾಡಿರುವುದರಿಂದ ಉಪಧಾದೀರ್ಘ ಬರುವುದಿಲ್ಲ.

**ರುಜನ್**—ರುಜೋ ಭಂಗೇ ಧಾತು ತುದಾದಿ. ಲಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. ಅದಕ್ಕೆ **ಝೋಂತಃ** ಎಂಬುದರಿಂದ ಅಂತಾದೇಶ **ಇತಶ್ಚ** ಎಂಬುದರಿಂದ ಅಂತ್ಯ ಇಕಾರಕ್ಕೆ ಲೋಪ **ತುದಾದಿಭ್ಯಃ ಶಃ** (ಪಾ. ಸೂ. ೩-೧-೭೭) ಎಂಬುದರಿಂದ ಶ ವಿಕರಣ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ಸಂಯೋಗಾಂತ ಲೋಪದಿಂದ ಪ್ರತ್ಯಯದ ಅಂತ್ಯತಕಾರಕ್ಕೆ ಲೋಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಚಕ್ರುಃ—**ಡುಕೃಞ್ ಕರಣೇ ಧಾತು. ಲಿಟ್ ಪ್ರಥಮಪುರುಷ ಬಹುವಚನರೂಪ ಪಾದಾದಿಯಲ್ಲಿರುವುದ ರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ದಿವಃ—ಊಡಿದಂ ಪದಾದಿ**—(ಪಾ. ಸೂ. ೬–೧–೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಬೃಹತಃ—ಬೃಹನ್ಮಹತೋರುಪಸಂಖ್ಯಾನಮ್** ಎಂಬ ವಚನದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿವಿದುಃ**—ವಿದ ಜ್ಞಾನೇ ಧಾತು ಅದಾದಿ. ಅಥವಾ ವಿದ್‌ಲೃ ಲಾಭೇ ಧಾತು ತುದಾದಿ ಇದಕ್ಕೆ ಲಿಟ್ ಪ್ರಥಮಪುರುಷ ಬಹುವಚನದಲ್ಲಿ **ಪರಸ್ಮೈಪದಾನಾಂ**—(ಪಾ ಸೂ. ೩–೪–೮೨) ಎಂಬುದರಿಂದ ಉಸಾದೇಶ. ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಅಸಂಯೋಗಾಲ್ಲಿಟ್ ಕಿತ್** ಎಂಬುದರಿಂದ ಕಿದ್ವದ್ಭಾವವಿರುವುದರಿಂದ ಪ್ರತ್ಯಯ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ವಿವಿದುಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ ॥ ೨ ॥

॥ ಸಂಹಿತಾಪಾಠಃ ॥

ದಧನ್ನೃತಂ ಧನಯನ್ನಸ್ಯ ಧೀತಿಮಾದಿದರ್ಯೋ ದಿಧಿಷ್ವೋ೩ -
ವಿಭೃತ್ರಾಃ ।
ಅತೃಷ್ಯಂತೀರಪಸೋ ಯಂತ್ಯಚ್ಛಾ ದೇವಾಞ್ಜನ್ಮ ಪ್ರಯಸಾ
ವರ್ಧಯಂತೀಃ ॥ ೩ ॥

॥ ಪದಪಾಠಃ ॥

ದಧನ್ । ಋತಂ । ಧನಯನ್ । ಅಸ್ಯ । ಧೀತಿಂ । ಆತ್ । ಇತ್ । ಅರ್ಯಃ ।
ದಿಧಿಷ್ವಃ । ವಿಽಭೃತ್ರಾಃ ।
ಅತೃಷ್ಯಂತೀಃ । ಅಪಸಃ । ಯಂತಿ । ಅಚ್ಛ । ದೇವಾನ್ । ಜನ್ಮ । ಪ್ರಯಸಾ ।
ವರ್ಧಯಂತೀಃ ॥ ೩ ॥

|| ಸಾಯಣಭಾಷ್ಯಂ ||

ಋತಂ ದೇವಯಜನದೇಶಂ ಪ್ರಾಪ್ತಮಗ್ನಿಮಂಗಿರಸೋ ಮಹರ್ಷಯೋ ದಧನ್ । ಗಾರ್ಹಪತ್ಯಾದಿರೂಪೇಣಾಧಾರಯನ್ । ಧಾರಯಿತ್ವಾ ಚಾಸ್ಯಾಗ್ನೇರ್ಧೀತಿಂ ಕರ್ಮಾಗ್ನಿಹೋತ್ರಾದಿಲಕ್ಷಣಂ ಧನಯನ್ । ಧನಮಕುರ್ವನ್ । ಯಥಾ ಪುರುಷಾ ಧನಂ ಸಂಪಾದಯಂತಿ ತದ್ವದಗ್ನಿದೇವತ್ಯಂ ಕರ್ಮಾನ್ವತಿಷ್ಠನ್ನಿತ್ಯರ್ಥಃ । ಆದಿತ್ ಅಂಗಿರಸಾಮನುಷ್ಠಾನಾನಂತರಮೇವಾರ್ಯೋಽರ್ಯೋ ಧನಸ್ಯ ಸ್ವಾಮಿನ್ಯೋ ದಿಧಿಷ್ವಸ್ತೇನ ಧನೇನ ದಿಧಿಷ್ವೋಽಗ್ನೀನಾಂ ಧಾರಣಂ ಕುರ್ವತ್ಯಃ । ಕೃತಾಗ್ನ್ಯಾಧಾನಾ ಇತ್ಯರ್ಥಃ । ವಿಭೃತ್ರಾ ಆಹಿತಾನಗ್ನೀನಗ್ನಿಹೋತ್ರಾದಿಕರ್ಮಣಿ ವಿಹರಂತ್ಯೋಽತೃಷ್ಯಂತೀರ್ವಿಷಯಾಂತರತೃಷ್ಣಾರಹಿತಾ ಅತ ಏವಾಪಸೋಽಪಸಾ ಕರ್ಮಣಾ ಯುಕ್ತಾ ಏವಂಭೂತಾ ಯಜಮಾನಲಕ್ಷಣಾಃ ಪ್ರಜಾಃ ಪ್ರಯಸಾ ಹವಿರ್ಲಕ್ಷಣೇನಾನ್ನೇನ ದೇವಾನಿಂದ್ರಾದೀಞ್ಜನ್ಮ ಜಾತಾನ್ಮನುಷ್ಯಾಂಶ್ಚ ವರ್ಧಯಂತೀರ್ವರ್ಧಯಂತ್ಯಃ ಸತ್ಯ ಏನಮಗ್ನಿಮಚ್ಛಾಭಿಮುಖ್ಯೇನ ಯಂತಿ । ಪ್ರಾಪ್ನುವಂತಿ । ಪರಿಚರಂತೀತಿ ಯಾವತ್ ॥ ದಧನ್ । ದಧ ಧಾರಣೇ । ಲಙಿ ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಧನಯನ್ । ಧನಶಬ್ದಾತ್ತತ್ಕರೋತೀತಿ ಣಿಚ್ । ಇಷ್ಠವಣ್ಣೌ ಪ್ರಾತಿಪದಿಕಸ್ಯೇತೀಷ್ಠವದ್ಭಾವಾಟ್ಟಿಲೋಪಃ । ಲಙಿ ಪೂರ್ವವತ್ । ಅರ್ಯಃ । ಅರ್ಯಃ ಸ್ವಾಮಿವೈಶ್ಯಯೋಃ । ಪಾ. ೩-೧-೧೦೩ । ಇತಿ ನಿಪಾತಿತಃ । ಲಿಂಗವಚನವ್ಯತ್ಯಯೌ । ಅರ್ಯಃ ಸ್ವಾಮ್ಯಾಖ್ಯಾ ಚೇತ್ । ಫಿ. ೧-೧೮ । ಇತ್ಯಂತೋದಾತ್ತತ್ವಂ । ದಿಧಿಷ್ವಃ ಡುದಾಞ್ ಧಾರಣಪೋಷಣಯೋಃ ಸೋ ಅಂತಕರ್ಮಣೀತ್ಯಾಭ್ಯಾಮಂದೂದೃಂಭೂಜಂಬೂಕಫೇಲೂಕರ್ಕಂಧೂದಿಧಿಷೂಃ । ಉ. ೧-೯೫ । ಇತಿ ಕೂಪ್ರತ್ಯಯಾಂತೋ ನಿಪಾತಿತಃ । ಪ್ರತ್ಯಯಸ್ವರಃ । ಉದಾತ್ತಸ್ವರಿತಯೋರ್ಯಣ ಇತಿ ಜಸಃ ಸ್ವರಿತತ್ವಂ । ವಿಭೃತ್ರಾಃ । ಹೃಞ್ ಹರಣೇ । ವಿಪೂರ್ವಾದಸ್ಮಾದೌಣಾದಿಕಃ ಕ್ತ್ರಪ್ರತ್ಯಯಃ । ಹೃಗ್ರಹೋರ್ಭ ಇತಿ ಭತ್ವಂ । ಅತೃಷ್ಯಂತೀಃ । ಞಿತೃಷಾ ಪಿಪಾಸಾಯಾಂ । ಜಸಿ ವಾ ಛಂದಸೀತಿ ಪೂರ್ವಸವರ್ಣದೀರ್ಘಸ್ಯ ವಿಕಲ್ಪಿತತ್ವಾತ್ಪೂರ್ವಸವರ್ಣದೀರ್ಘಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಅಪಸಃ । ಅಪಸ್ಶಬ್ದಾದುತ್ಪನ್ನಸ್ಯ ಮತ್ವರ್ಥೀಯಸ್ಯ ವಿನೋ ಬಹುಲಂ ಛಂದಸೀತಿ ಬಹುಲವಚನಾಲ್ಲುಕ್ । ಪಾ. ೫-೨-೧೨೨ । ವಿನಂತಸ್ಯ ತ್ರಿಲಿಂಗತ್ವೇನ ನಬ್ವಿಷಯತ್ವಾಭಾವಾತ್ಪ್ರಾತಿಪದಿಕಸ್ವರೇಣಾಂತೋದಾತ್ತತ್ವಂ । ಜನ್ಮ । ಜಾಯಂತ ಇತಿ ಜನ್ಮಾನೋ ಮನುಷ್ಯಾಃ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ । ಸುಪಾಂ ಸುಲುಗಿತಿ ಶಸೋ ಲುಕ್ ॥

|| ಪ್ರತಿಪದಾರ್ಥ ||

**ಋತಂ**— ಯಾಗಶಾಲೆಯನ್ನು (ಪ್ರಾಪ್ತನಾದ ಅಗ್ನಿಯನ್ನು) । **ದಧನ್**- (ಅಂಗಿರಸರು) ಗಾರ್ಹಪತ್ಯಾದಿ ರೂಪದಿಂದ) ಸ್ಥಾಪಿಸಿದರು । **ಅಸ್ಯ**—(ಸ್ಥಾಪಿಸಿ) ಈ ಅಗ್ನಿಗೆ । **ಧೀತಿಂ**—(ಅಗ್ನಿಹೋತ್ರಾದಿ) ಕರ್ಮವನ್ನು । **ಧನಯನ್**—ಧನವನ್ನು ಸಂಪಾದಿಸುವಂತೆ ಅನುಷ್ಠಾನಮಾಡಿದರು । **ಆದಿತ್**—(ಅಂಗಿರಸರ) ಅನುಷ್ಠಾನವಾದ ಮೇಲೆಯೇ । **ಅರ್ಯಃ**—(ಧನದ) ಸ್ವಾಮಿಗಳಾದ । **ದಿಧಿಷ್ವಃ**- ಅಗ್ನಿಸ್ಥಾಪನಾದಿಗಳನ್ನು ಮಾಡುವ । **ವಿಭೃತ್ರಾಃ**—ಆಹಿತಾಗ್ನಿಯಲ್ಲಿ ಅಗ್ನಿಹೋತ್ರಾದಿಕರ್ಮಗಳನ್ನು ಆಚರಿಸುವ । **ಅತೃಷ್ಯಂತೀಃ** -ಇತರ ವಿಷಯಗಳಲ್ಲಿ

ಆಸಕ್ತಿಯಿಲ್ಲದ । **ಅಪಸಃ**—ಕರ್ಮಯುಕ್ತರಾದ (ಯಜಮಾನರೂಪರಾದ) ಪ್ರಜೆಗಳು । **ಪಯಸಾ**—ಹವಿಸ್ಸಿನರೂಪ ವಾದ ಅನ್ನದಿಂದ । **ದೇವಾನ್**—ಇಂದ್ರಾದಿದೇವತೆಗಳನ್ನೂ । **ಜನ್ಮ**—ಜನನಶೀಲರಾದ ಮನುಷ್ಯರನ್ನೂ । **ವರ್ಧಯಂತೀಃ**—ಅಭಿವೃದ್ಧಿಪಡಿಸುತ್ತಾ । **ಅಚ್ಛ**—(ಅಗ್ನಿಯನ್ನು) ಅಭಿಮುಖವಾಗಿಟ್ಟುಕೊಂಡು । **ಯಂತಿ**—ಪ್ರಾಪ್ತರಾಗುತ್ತಾರೆ.

॥ ಭಾವಾರ್ಥ ॥

ಅಂಗಿರಸರು ಯಾಗಶಾಲೆಯಲ್ಲಿ ಅಗ್ನಿಯನ್ನು ಸ್ಥಾಪಿಸಿ ಅಗ್ನಿಹೋತ್ರಾದಿ ಕರ್ಮಗಳನ್ನಾಚರಿಸಿದಮೇಲೆಯೇ, ಧನಿಕರಾದ ಯಾಗಕರ್ತೃಗಳು ಅಗ್ನಿಯನ್ನು ಸ್ಥಾಪಿಸಿ, ವಿಷಯಾಂತರಗಳಲ್ಲಿ ಆಸಕ್ತಿರಹಿತರಾಗಿ, ಹವಿಸ್ಸಿನರೂಪವಾದ ಅನ್ನದಿಂದ ದೇವತೆಗಳಿಗೂ ಮನುಷ್ಯರಿಗೂ ಪೋಷಕರಾಗಿ, ಅಗ್ನಿಗಭಿಮುಖರಾಗಿ, ಅವನ ಸಂಬಂಧವಾದ ಅಗ್ನಿಹೋತ್ರಾದಿ ಗಳನ್ನು ಮಾಡುತ್ತಾರೆ.

## English Translation

They secured him, (Agni, in the sacrificial chamber), they made his worship the source of wealth; whence opulent votaries preserve his fires and practise his rites Free from all (other) desire, assiduous in his adoration, and sustaining gods and men, by their offerings, they come into his presence.

॥ ವಿಶೇಷವಿಷಯಗಳು ॥

**ಧಾರಣಾದ್ಧರ್ಮಃ**—ಎಂಬ ನಿಯಮದಂತೆ ಲೋಕವನ್ನೆಲ್ಲಾ ರಕ್ಷಣಾರೂಪದಿಂದ ಧಾರಣಮಾಡುವುದು **ಧರ್ಮ**ವಾದುದರಿಂದಲೂ, ಈ **ಧರ್ಮ**ದ ರಕ್ಷಣೆಗೆ ಯಜ್ಞಯಾಗಾದಿಗಳೇ ಮೂಲವಾದುದರಿಂದಲೂ, **ಅಗ್ನಿಯೇ** ಸಕಲ ಯಜ್ಞಗಳ ನೇತೃವೂ, ಪ್ರಭುವೂ ಆದುದರಿಂದಲೂ ಪರಂಪರೆಯಾಗಿ ದೇವಮನುಷ್ಯಾದಿ ಸಕಲ ಭೂತಗಳ ಧಾರಣವೂ ಅಗ್ನಿಯ ಅನುಗ್ರಹದಿಂದಲೇ ಸಾಧ್ಯವೆಂದೂ ತಿಳಿಸಿ ಅಂತಹ ಅಗ್ನಿಯ ಪರಿಚರಣವು ಎಷ್ಟು ಅಗತ್ಯವೆಂದು ತೋರಿಸುತ್ತಾ ಅಗ್ನಿಪೂಜೆಯನ್ನು ವರ್ಣಿಸುತ್ತಾರೆ.

**ಋತಂ—ದೇವಯಜನದೇಶಂ ಪ್ರಾಪ್ತಂ ಅಗ್ನಿಂ** । ಯಜ್ಞಪ್ರದೇಶದಲ್ಲಿ ಪ್ರತಿಷ್ಠನಾದ ಅಗ್ನಿಯನ್ನು

**ದಧನ್**—ಸ್ಥಾಪಿಸಿದರು ಗಾರ್ಹಪತ್ಯಾದಿರೂಪದಿಂದ ಮಹರ್ಷಿಗಳು ಸ್ಥಾಪಿಸಿದರೆಂದರ್ಥವು. ಅನಂತರ,

**ಧೀತಿಂ—ಅಗ್ನಿಹೋತ್ರಾದಿಲಕ್ಷಣಂ ಕರ್ಮ** । ಎಂದು ಸಾಯಣರು **ಧೀತಿ** ಶಬ್ದಕ್ಕೆ ಕರ್ಮವನ್ನು ಎಂದೂ, **ಅಪರಿಮಿತಮಪಿ ಪ್ರಜ್ಞಾನಾಮ ಏತತ್** । ಎಂದು ಸ್ಕಂದಸ್ವಾಮಿಗಳು ಪ್ರಜ್ಞೆ ಅಥವಾ ಮನಸ್ಸು ಎಂದೂ ವಿವರಿಸಿದ್ದಾರೆ. **ಧೀತಿ** ಶಬ್ದವು ಋಕ್ಸಂಹಿತೆಯಲ್ಲಿ ಈ ಎರಡು ಅರ್ಥಗಳಲ್ಲಿಯೂ ಬೇರೆಬೇರೆ ಸಂದರ್ಭಗಳಲ್ಲಿ ಉಪ ಯೋಗಿಸಲ್ಪಟ್ಟಿದೆ. ನಿರುಕ್ತಕಾರರು ಸಂಹಿತೆಯಲ್ಲಿ—

**ಪಾರಾವತಘ್ನೀಮವಸೇ ಸುವೃಕ್ತಿಭಿಃ ಸರಸ್ವತೀಮಾ ವಿವಾಸೇಮ ಧೀತಿಭಿಃ ।**

(ಋ ಸಂ. ೬-೬೧-೨)

ಎಂಬ ಋಕ್ಕನ್ನು ಉದಹರಿಸಿ ಇಲ್ಲಿ **ಧೀತಿಭಿಃ** ಎಂಬ ಶಬ್ದಕ್ಕೆ **ಕರ್ಮಭಿಃ** ಎಂದೂ (ನಿ. ೨-೨೪), ಮತ್ತು,

**ಋತಸ್ಯ ಹಿ ಶುರುಧಃ ಸಂತಿ ಪೂರ್ವೀರ್ಋತಸ್ಯ ಧೀತಿರ್ವೃಜಿನಾನಿ ಹಂತಿ ।**

(ಋ ಸಂ. ೪-೨೩-೮)

ಎಂಬ ಸೂಕ್ತವನ್ನು ಉದಹರಿಸಿ ಅಲ್ಲಿರುವ **ಧೀತಿ**ಶಬ್ದಕ್ಕೆ **ಪ್ರಜ್ಞಾ** ಎಂದೂ ನಿರ್ವಚನವನ್ನು ಮಾಡುತ್ತಾರೆ. (ನಿ ೧೦-೪೧.)

**ಧನಯೌನ್**— ಆಚರಿಸಿದರು. ಕರ್ಮವನ್ನಾಚರಿಸಿದರು ಅಥವಾ ಧ್ಯಾನವನ್ನು ಮಾಡಿದರು ಎಂದಾಗುತ್ತದೆ

**ಅರ್ಯಃ**—ರಾಷ್ಟ್ರೀ, ಅರ್ಯಃ, ನಿಯುತ್ವಾನ್, ಇನಇನ- ಈ ನಾಲ್ಕೂ ಈಶ್ವರನಾಮಗಳು. (ನಿ. ೩-೧೧.) ಈಶ್ವರನೆಂದರೆ ಸ್ವಾಮಿ, ಪ್ರಭು, ಒಡೆಯ ಎಂದರ್ಥ ಇಂದ್ರನಿಗೂ ಇತರ ದೇವತೆಗಳಿಗೂ ಈ ವಿಶೇಷಣವು ಪದೇ ಪದೇ ಉಪಯೋಗಿಸಲ್ಪಟ್ಟಿದೆ. ಈ ವಿಶೇಷಣವು ಬರೀ ಪ್ರಭುತ್ವವನ್ನು ಮಾತ್ರ ತೋರಿಸದೇ ಅನೇಕಸಲ ಪ್ರಭುವಿನ ಆದರ ಮತ್ತು ಅನುಗ್ರಹವನ್ನು ಸೂಚಿಸುವುದಾಗಿಯೂ ಇರುತ್ತದೆ ಇಲ್ಲಿ ಮಾತ್ರ **ಧನಸ್ಯ ಸ್ವಾಮಿನ್ಯಃ** ಎಂದು ಯಜ್ಞಕರ್ತರ ಪರವಾಗಿ ಧನಕ್ಕೆ ಸ್ವಾಮಿ ಎಂದು ಅರ್ಥವನ್ನು ಕೊಡುತ್ತದೆ (ಋ. ಸಂ. ೧-೬೩-೫ ಇತ್ಯಾದಿ ಕೆಲವು ಕಡೆಗಳಲ್ಲಿ **ಅರ್ಯಃ** ಎನ್ನುವುದಕ್ಕೆ **ಅರೇಃ ಸಂಬಂಧಿನಂ** । ಶತ್ರುವಿಗೆ ಸೇರಿದುದು ಎಂದಾಗುತ್ತದೆ )

**ಅತೃಷ್ಯಂತೀಃ —ವಿಷಯಾಂತರತೃಷ್ಣಾರಹಿತಾಃ ।** ಅಗ್ನಿಪೂಜೆಯನ್ನು ಬಿಟ್ಟು ಇತರ ವಿಷಯಗಳಲ್ಲಿ ಆಸಕ್ತರಾಗಿಲ್ಲದೇ, ತದೇಕಚಿತ್ತರಾಗಿ,

**ಅಪಸಃ— ಅಪಃ, ಅಪ್ನಃ, ದಂಸಃ** ಇತ್ಯಾದಿ ೨೬ ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧) ಕರ್ಮವೆಂದರ್ಥ **ಅಪಸಃ** ಎಂದರೆ **ಅಪಸಾ ಕರ್ಮಣಾ ಯುಕ್ತಾಃ ಯಜಮಾನಲಕ್ಷಣಾಃ ಪ್ರಜಾಃ ।** ಯಾಗಾದಿಕರ್ಮಗಳಿಂದ ಯುಕ್ತರಾದ ಯಜಮಾನರೂಪರಾದ ಪ್ರಜೆಗಳೆಂದರ್ಥ

**ಪ್ರಯಸಾ— ಅಂಧಃ, ವಾಜಃ, ಪಯಃ, ಪ್ರಯಃ** ಇತ್ಯಾದಿ ೨೮ ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೩-೯) **ಪ್ರಯಃ** ಎಂದರೆ ಅನ್ನವೆಂದರ್ಥ **ಪ್ರಯಸಾ** -ಹವಿಸ್ಸಿನರೂಪದ ಅನ್ನದಿಂದ

**ದೇವಾನ್ ಜನ್ಮ ಪ್ರಯಸಾ ವರ್ಧಯಂತೀಃ** -ದೇವತೆಗಳನ್ನು ಉತ್ಪನ್ನರಾದ ಮಾನವರನ್ನೂ ವೃದ್ಧಿಯಾಗುವಂತೆ ಮಾಡುತ್ತಾ ಅಗ್ನಿಯನ್ನು ಉಪಚರಿಸುತ್ತಾರೆ

**ಅಗ್ನಿನಾ ರಯಿಮಶ್ನವತ್ಪೋಷಮೇವ ದಿವೇದಿವೇ । ಯಶಸಂ ವೀರವತ್ತಮಂ ॥**

(ಋ. ಸಂ. ೧-೧ ೩)

**ಅಗ್ನೇ ಯಂ ಯಜ್ಞಮಧ್ವರಂ ವಿಶ್ವತಃ ಪರಿಭೂರಸಿ । ಸ ಇದ್ದೇವೇಷು ಗಚ್ಛತಿ ।**

(ಋ. ಸಂ ೧-೧-೪)

ಇತ್ಯಾದಿ ನೂರಾರು ಸನ್ನಿವೇಶಗಳಲ್ಲಿ ದೇವಮಾನವಾದಿ ಸಕಲ ಭೂತಗಳ ವೃದ್ಧಿಗೂ ಅಗ್ನಿಯೇ ಕಾರಣನು, ಯಜ್ಞದಿಂದಲೇ ದೇವತೆಗಳ ತೃಪ್ತಿ, ಯಜ್ಞದಿಂದಲೇ ಮಾನವರ ಸಂಪತ್ತು—ಆ ಯಜ್ಞಕ್ಕೆ ಆತ್ಮನು ಅಗ್ನಿ. ಆದುದರಿಂದ ಸಕಲರ ಸ್ಥಿತಿಗೂ ಬೆಳೆವಣಿಗೆಗೂ ಅಗ್ನಿಯೇ ಕಾರಣನು ಆದುದರಿಂದ ಅಗ್ನಿಯನ್ನು ಉಪಚರಿಸುತ್ತಾರೆ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ದಧನ್**—ದಧ ಧಾರಣೇ ಧಾತು ಭ್ವಾದಿ ಅನುದಾತ್ತೇತ್. ಇದಕ್ಕೆ ಲಙ್ ಪ್ರಥಮಪುರುಷ ಬಹುವಚನದಲ್ಲಿ **ವ್ಯತ್ಯಯೋ ಬಹುಲಂ** ಎಂಬುದರಿಂದ ಝಿ ಪ್ರತ್ಯಯ. ಅದಕ್ಕೆ ಅಂತಾದೇಶ ಅಂತ್ಯಲೋಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿ ಇರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್, ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ಧನಯನ್**—ಧನ ಶಬ್ದದ ಮೇಲೆ **ತತ್ಕರೋತಿ ತದಾಚಷ್ಟೇ** ಎಂಬ ವಾರ್ತಿಕದಿಂದ ಧಾತ್ವರ್ಥ ವಿವಕ್ಷಾಮಾಡಿದಾಗ ಣಿಚ್. **ಇಷ್ಠವಣ್ಣೌ ಪ್ರಾತಿಪದಿಕಸ್ಯ** ಎಂಬ ವಚನದಿಂದ ಣಿಚ್ ಪರವಾದಾಗ ಯಾವ ಯಾವ ಕಾರ್ಯ ಬರುವುದೋ ಅವುಗಳನ್ನು ಅತಿದೇಶಮಾಡಿರುವುದರಿಂದ ಆ ಕಾರ್ಯಗಳೆಲ್ಲವೂ ಬರುತ್ತವೆ. ಪ್ರಕೃತದಲ್ಲಿ **ಟಿ**ಲೋಪ ಬರುತ್ತದೆ. ಧನಿ ಎಂಬ ಣಿಜಂತವು **ಸನಾದ್ಯಂತಾ ಧಾತವಃ** ಎಂಬುದರಿಂದ ಧಾತುಸಂಜ್ಞೆ ಬರುವುದರಿಂದ ಇದರಮೇಲೆ ಲಙಿನಲ್ಲಿ ಹಿಂದೆ ದಧನ್ ಎಂಬಲ್ಲಿ ಹೇಳಿರುವ ಕಾರ್ಯಗಳು ಬರುತ್ತವೆ ಹಿಂದಿನಂತೆ ಅಡಾಗಮ ಬರುವುದಿಲ್ಲ. **ಣಿಚ್** ಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಅರ್ಯಃ—ಅರ್ಯಃ ಸ್ವಾಮಿವೈಶ್ಯಯೋಃ** (ಪಾ. ಸೂ ೩-೧-೧೦೩) ಎಂಬುದರಿಂದ ಸ್ವಾಮಿ ಎಂಬರ್ಥದಲ್ಲಿ ನಿಪಾತಿತವಾಗಿದೆ. ಇಲ್ಲಿ ಪ್ರಕರಣಾನುಸಾರವಾಗಿ ಸ್ತ್ರೀಲಿಂಗವೂ ಬಹುವಚನವೂ ಬರಬೇಕಾದುದು ವ್ಯತ್ಯಯದಿಂದ ವಿಪರ್ಯಯ ಬಂದಿದೆ (ಪುಲ್ಲಿಂಗ ಏಕವಚನ ಬಂದಿದೆ) **ಅರ್ಯಃ ಸ್ವಾಮ್ಯಾಖ್ಯಾ ಚೇತ್** (ಫಿ. **ಸೂ** ೧೭) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ

**ದಿಧಿಷ್ವಃ—**ಡುಧಾಞ್ ಧಾರಣಪೋಷಣಯೋಃ ಧಾತು. ಷೋ ಅಂತಕರ್ಮಣಿ, ಧಾತು. ಈ ಎರಡು ಧಾತುಗಳಿಗೆ **ಅಂದೂ ದೃಂಭೂಜಂಬೂಕಫೇಲೂ ಕರ್ಕಂಧೂ ದಿಧಿಷೂಃ** (ಉ. ಸೂ. ೧-೯೩) ಎಂಬುದರಿಂದ **ಕೂ**ಪ್ರತ್ಯಯ ಬಂದು ನಿಪಾತಿತವಾಗಿದೆ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಇದಕ್ಕೆ ಜಸ್ ಪರವಾದಾಗ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣ್ ಬಂದು ಅದರ ಪರದಲ್ಲಿ ಜಸ್ ಇರುವುದರಿಂದ **ಉದಾತ್ತಸ್ವರಿತಯೋರ್ಯಣಃ**— (ಪಾ. ಸೂ. ೮-೨-೪) ಎಂಬುದರಿಂದ ಜಸ್ಸಿಗೆ ಸ್ವರಿತಸ್ವರ ಬರುತ್ತದೆ

**ವಿಭೃತ್ರಾಃ**— ಹೃಞ್ ಹರಣೇ ಧಾತು ಇದಕ್ಕೆ ವಿ ಎಂಬ ಉಪಸರ್ಗವು ಪೂರ್ವದಲ್ಲಿರುವಾಗ ಔಣಾದಿಕವಾದ ಕ್ತ್ರಪ್ರತ್ಯಯ. **ಲಶಕ್ವತದ್ಧಿತೇ** ಎಂಬುದರಿಂದ ಕಕಾರಕ್ಕೆ ಇತ್ ಸಂಜ್ಞೆಯಿಂದ ಲೋಪ. ಕಿತ್ತಾದುದರಿಂದ ಧಾತುವಿನ ಇಕ್ಕೆಗೆ ಗುಣ ಬರುವುದಿಲ್ಲ **ಹೃಗ್ರಹೋರ್ಭಶ್ಛಂದಸಿ** ಎಂಬುದರಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ ದ್ವಿತೀಯಾ ಬಹುವಚನಾಂತ ರೂಪ.

**ಅತೃಷ್ಯಂತೀಃ**— ಞಿ ತೃಷಾ ಪಿಪಾಸಾಯಾಮ್ ಧಾತು. ಇದಕ್ಕೆ ಶತೃಪ್ರತ್ಯಯ ಬಂದಾಗ ಶ್ಯನ್ ವಿಕರಣ ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. ನ ತೃಷ್ಯಂತೀ ಅತೃಷ್ಯಂತೀ ಇದಕ್ಕೆ ಜಸ್ ಪರವಾದಾಗ **ವಾ ಛಂದಸಿ** ಎಂದು ಪೂರ್ವಸವರ್ಣದೀರ್ಘವು ವಿಕಲ್ಪಿತವಾದುದರಿಂದ ಇಲ್ಲಿ ಪೂರ್ವಸವರ್ಣದೀರ್ಘ. **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ

**ಅಪಸಃ**— ಅಪಸ್ ಎಂಬುದು ಕರ್ಮವಾಚಕವಾದ ಸಾಂತಶಬ್ದ. ಇದಕ್ಕೆ ಮತ್ವರ್ಥದಲ್ಲಿ **ಅಸ್ಮಾಯಾಮೇಧಾ ಸ್ರಜೋ ವಿನಿಃ** (ಪಾ. ಸೂ ೫-೨-೧೨೨) ಎಂಬುದರಿಂದ ಬಹುಲಗ್ರಹಣಸಾಮರ್ಥ್ಯದಿಂದ ವಿನ್ನಿಗೆ ಲುಕ್. ವಿನ್ನಂತಕ್ಕೆ ಲಿಂಗನಿಯಮವಿಲ್ಲದಿರುವುದರಿಂದ ತ್ರಿಲಿಂಗದಲ್ಲಿಯೂ ಸಂಭವಿಸುವುದರಿಂದ ಕೇವಲ ನಪ್ ಅಂದರೆ ನಪುಂಸಕ ವಿಷಯವಾಗದಿರುವುದರಿಂದ ಪ್ರಾತಿಪದಿಕಸ್ವರದಿಂದ ಅಂತೋದಾತ್ತವಾಗುತ್ತದೆ.

**ಯಂತಿ**- ಇಣ್ ಗತೌ ಧಾತು. ಅದಾದಿ ಝಿಗೆ ಅಂತಾದೇಶ ಬಂದಾಗ ಅಜಾದಿಪ್ರತ್ಯಯ ಪರದಲ್ಲಿರುವುದರಿಂದ **ಇಣೋಯಣ್** ಎಂಬುದರಿಂದ ಧಾತುವಿನ ಇಕಾರಕ್ಕೆ ಯಣಾದೇಶ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಜನ್ಮ**— ಜಾಯಂತೇ ಇತಿ ಜನ್ಮಾನೋ ಮನುಷ್ಯಾಃ ಜನೀ ಪ್ರಾದುರ್ಭಾವೇ ಧಾತು ಇದಕ್ಕೆ **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ ಸೂ ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ಜನ್ಮನ್ ಶಬ್ದವಾಗುತ್ತದೆ. ಇದಕ್ಕೆ ದ್ವಿತೀಯಾ ಬಹುವಚನ ಶಸ್ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಶಸ್ಸಿಗೆ ಲುಕ್. **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ನಲೋಪ ॥ ೩ ॥



। ಸಂಹಿತಾಪಾಠಃ ।

ಮಥೀದ್ಯದೀಂ ವಿಭೃತೋ ಮಾತರಿಶ್ವಾ ಗೃಹೇಗೃಹೇ ಶ್ಯೇತೋ ಜೇನ್ಯೋ ಭೂತ್ ।

ಆದೀಂ ರಾಜ್ಞೇ ನ ಸಹೀಯಸೇ ಸಚಾ ಸನ್ನಾ ದೂತ್ಯಂ ಭೃಗವಾಣೋ ವಿವಾಯ ॥ ೪ ॥

॥ ಪದಪಾಠಃ ॥

ಮಥೀತ್ । ಯತ್ । ಈಂ । ವಿಽಭೃತಃ । ಮಾತರಿಶ್ವಾ । ಗೃಹೇಽಗೃಹೇ ।
ಶ್ಯೇತಃ । ಜೇನ್ಯಃ । ಭೂತ್ ।

ಆತ್ । ಈಂ । ರಾಜ್ಞೇ । ನ । ಸಹೀಯಸೇ । ಸಚಾ । ಸನ್ । ಆ । ದೂತ್ಯಂ ।
ಭೃಗವಾಣಃ । ವಿವಾಯ ॥ ೪ ॥

॥ ಸಾಯಣಭಾಷ್ಯಂ ॥

ಮಾತರಿಶ್ವಾ ವ್ಯಾನವೃತ್ತಿರೂಪೇಣಾವಸ್ಥಿತೋ ಮುಖ್ಯಪ್ರಾಣ ಈಮೇನಮಗ್ನಿಂ ಯದ್ಯದಾ ಮಥೀತ್ ಅಮಥ್ನಾತ್ । ಅಗ್ನೇರ್ಮಂಥನಸ್ಯ ವ್ಯಾನವಾಯುಸಾಧ್ಯತ್ವಮಥ ಯಃ ಪ್ರಾಣಾಪಾನಯೋಃ ಸಂಧಿಃ ಸ ವ್ಯಾನ ಇತ್ಯುಪಕ್ರಮ್ಯ ಛಂದೋಗೈರಾಮ್ನಾತಂ । ಅತೋ ಯಾನ್ಯನ್ಯಾನಿ ವೀರ್ಯವಂತಿ ಕರ್ಮಾಣಿ ಯಥಾಗ್ನೇರ್ಮಂಥನಮಾಜೇಃ ಸರಣಂ ದೃಢಸ್ಯ ಧನುಷ ಆಯಮನಮಪ್ರಾಣನ್ನನಪಾನಂಸ್ತಾನಿ ಕರೋತಿ । ಛಾಂ. ಉ. ೧-೩-೩ ರಿಂದ ೫ । ಇತಿ ಮಂತ್ರಾಂತರಂಚ ಭವತಿ । ಆನ್ಯಂ ದಿವೋ ಮಾತರಿಶ್ವಾ ಜಭಾರಾಮಥ್ನಾದನ್ಯಂ ಪರಿ ಶ್ಯೇನೋ ಅದ್ರೇಃ । ಋಗ್ವೇ. ೧-೯೩-೬ । ಇತಿ । ಕೀದೃಶೋ ಮಾತರಿಶ್ವಾ । ವಿಭೃತಃ ಪ್ರಾಣಿಷು ಪ್ರಾಣಾಪಾನಾದಿಪಂಚವೃತ್ತಿರೂಪೇಣ ವಿಹೃತೋ ವಿಭಜ್ಯ ಸ್ಥಿತಃ । ತದಪಿ ಪ್ರಾಣಸಂವಾದೇ ತೈರೇವಾಮ್ನಾತಂ । ತಾನರಿಷ್ಟಃ ಪ್ರಾಣ ಉವಾಚ । ಮಾ ಮೋಹಮಾಪದ್ಯಥಾಹಮೇವೈತತ್ ಪಂಚಧಾತ್ಮಾನಂ ಪ್ರವಿಭಜ್ಯೈತತ್ ವಾಣಮವಷ್ಟಭ್ಯ ವಿಧಾರಯಾಮೀತಿ । ಮಂಥನೇನೋತ್ಪನ್ನೋಽಯಮಗ್ನಿಃ ಶ್ವೇತಃ ಶುಭ್ರವರ್ಣೋ ಭೂತ್ವಾ ಗೃಹೇ ಗೃಹೇ ಸರ್ವಸ್ಮಿನ್ಯಜ್ಞಗೃಹೇ ಯದಾ ಜೇನ್ಯಃ ಪ್ರಾದುರ್ಭೂತೋ ಭೂತ್ । ಯದ್ವಾ । ರಕ್ಷಸಾಂ ಜೇನ್ಯೋ ಜೇತಾಭಿಭವಿತಾ ಭೂತ್ । ತಥಾ ಚ ತೈತ್ತಿರೀಯಕಂ । ದೇವಾಸುರಾಃ ಸಂಯತ್ತಾ ಆಸನ್ ತೇ ದೇವಾ ಬಿಭ್ಯತೋಽಗ್ನಿಂ ಪ್ರಾವಿಶನ್ ತಸ್ಮಾದಾಹುರಗ್ನಿಃ ಸರ್ವಾ ದೇವತಾ ಇತಿ ತೇಽಗ್ನಿಮೇವ ವರೂಥಂ ಕೃತ್ವಾಸುರಾನಭ್ಯಭವನ್ । ತೈ. ಸಂ. ೬-೨-೨-೬ । ಇತಿ । ಐತರೇಯಿಣೋಽಪ್ಯಾಮನಂತಿ । ತೇ ದೇವಾಃ ಪ್ರತಿಬುಧ್ಯಾಗ್ನಿಂ ಪುರಸ್ತಾತ್ಪ್ರಾತಃಸವನೇ ಪರ್ಯೌಹಂಸ್ತೇಽಗ್ನಿನೈವ ಪುರಸ್ತಾತ್ಪ್ರಾತಃಸವನೇಽಸುರರಕ್ಷಾಂಸ್ಯಪಾಘ್ನತ । ಐ. ಬ್ರಾ ೬-೪ । ಇತಿ । ಆತ್ ಯಜ್ಞಗೃಹೇ ಪ್ರಾದುರ್ಭಾವಾನಂತರಮೀಮೇನಮಗ್ನಿಂ ಭೃಗವಾಣಃ । ಭೃಗುರ್ಋಷಿಃ । ಸ ಇವಾಚರನ್ಯಜಮಾನೋ ದೂತ್ಯಂ ದೂತಸ್ಯ ಕರ್ಮ ವಿವಾಯ । ಶಾಸ್ತ್ರಮರ್ಯಾದಯಾ ಪ್ರಾಪಯಾಮಾಸ । ತತ್ರ ದೃಷ್ಟಾಂತಃ । ಸಚಾ ಸನ್ । ಸಖಾಭವನ್ನನ್ಯೋ ರಾಜಾ ಸಹೀಯಸೇಽಭಿಭವಿತ್ರೇ

ಪ್ರಬಲಾಯ ರಾಜ್ಞೇ ನ । ಯಥಾ ರಾಜ್ಞೇ ಸ್ವಪುರುಷಂ ದೂತಕರ್ಮ ಪ್ರಾಪಯತಿ ತದ್ವತ್ ॥ ಮಥೀತ್ । ಮಥೇ ವಿಲೋಡನೇ । ಲುಙಿ ಹ್ಮ್ಯಂತಕ್ಷಣೇತಿ ವೃದ್ಧಿಪ್ರತಿಷೇಧಃ । ಜೇನ್ಯಃ । ಜನೀ ಪ್ರಾದುರ್ಭಾವೇ । ಅಸ್ಮಾದೌಣಾದಿಕ ಏನ್ಯಪ್ರತ್ಯಯಸ್ತ್ವಿಲೋಪಶ್ಚೇತಿ ಭಟ್ಟಭಾಸ್ಕರಮಿಶ್ರಃ । ಯದ್ವಾ । ಜಿ ಜಯ ಇತ್ಯಸ್ಮಾತ್ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾತ್ಕರ್ತರ್ಯಚೋ ಯದಿತಿ ಯತ್ । ತಸ್ಯ ನುಡಾಗಮಶ್ಚ । ಯತೋऽನಾವ ಇತ್ಯಾದ್ಯುದಾತ್ತತ್ವಂ । ದೂತ್ಯಂ । ದೂತಸ್ಯ ಕರ್ಮ ದೂತ್ಯಂ । ದೂತಸ್ಯ ಭಾಗಕರ್ಮಣೀ ಇತಿ ಯತ್ । ತಿತ್ಸ್ವರಿತ ಇತಿ ಸ್ವರಿತತ್ವಂ । ಯತೋऽನಾವ ಇತ್ಯಾದ್ಯುದಾತ್ತತ್ವಂ ತ್ವನಿತ್ಯಮಿತಿ ವೀರವೀರ್ಯೌ ಚೇತ್ಯತ್ರ ಜ್ಞಾಪಿತಂ । ಭೃಗವಾಣಃ । ಭೃಗುರಿವಾಚರನ್ ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಕ್ತವ್ಯಃ । ಮ. ೩-೧-೧೧-೩ । ಇತಿ ವಚನಾತ್ ಕ್ವಿಪ್ । ತದಂತಾಲ್ಲಟೋ ವ್ಯತ್ಯಯೇನ ಶಾನಚ್ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಪ್ರತ್ಯಯಾಂತಧಾತೋರಂತೋದಾತ್ತತ್ವೇ ಪ್ರಾಪ್ತೇ ವೃಷಾದೇರಾಕೃತಿಗಣತ್ವಾದಾದ್ಯುದಾತ್ತತ್ವಂ । ವಿವಾಯ । ವೀ ಗತ್ಯಾದಿಷು । ಅಸ್ಮಾದಂತರ್ಭಾವಿತಣ್ಯರ್ಥಾಲ್ಲಿಟ್ ॥

॥ ಪ್ರತಿಪದಾರ್ಥ ॥

ವಿಭೃತಃ - ಪ್ರಾಣಾಪಾನಾದಿ ಪಂಚವಿಧವಾಗಿ ಸ್ಥಿತನಾದ । ಮಾತರಿಶ್ವಾ- ವಾಯುವು । ಈಂ—ಈ ಅಗ್ನಿಯನ್ನು । ಯತ್ —ಯಾವಾಗ । ಮಥೀತ್- ಮಥನಮಾಡಿದನೋ (ಆಗ) । ಶ್ವೇತಃ—ಶುಭ್ರವರ್ಣನಾಗಿ ಗೃಹೇಗೃಹೇ-- ಪ್ರತಿ ಯಾಗಶಾಲೆಯಲ್ಲಿಯೂ । ಜೇನ್ಯಃ ಭೂತ್— ಪ್ರಾದುರ್ಭೂತನಾದನು (ರಾಕ್ಷಸನಾಶಕನಾದನು) । ಆತ್—ಪ್ರಾದುರ್ಭಾವಾನಂತರದಲ್ಲಿ । ಈಂ--ಈ ಅಗ್ನಿಗೆ । ಭೃಗವಾಣಃ—ಭೃಗುಋಷಿಯಂತೆ ಆಚರಿಸುವ ಯಜಮಾನನು । ಸಚಾ ಸನ್—ಸ್ನೇಹಿತನಾಗಿ (ರಾಜನು) । ಸಹೀಯಸೇ - (ತನ್ನನ್ನು) ಪರಾಜಯಗೊಳಿಸಿದ । ರಾಜ್ಞೇ ನ-- ರಾಜನಿಗೆ ಹೇಗೋ (ಹಾಗೆ) । ದೂತ್ಯಂ—ದೂತಕರ್ಮವನ್ನು । ಆ ವಿವಾಯ— ಹೊಂದಿಸಿದನು (ಮಾಡಿಸಿದನು) ।

॥ ಭಾವಾರ್ಥ ॥

(ಎಲ್ಲ ಪ್ರದೇಶವನ್ನೂ) ಆವರಿಸಿರುವ ವಾಯುವು ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡಿದಾಗ, ಅಗ್ನಿಯು ಎಲ್ಲ ಯಾಗಶಾಲೆಗಳಲ್ಲಿಯೂ ಶುಭ್ರವರ್ಣನಾಗಿ ಆವಿರ್ಭೂತನಾಗುತ್ತಾನೆ ಯಾಗಕರ್ತೃವು ಭೃಗುಋಷಿಯಂತೆ, ಪರಾಜಿತನಾದ ರಾಜನು, ಸ್ನೇಹಭಾವದಿಂದ ಪರಾಜಯಗೊಳಿಸಿದ ರಾಜನಲ್ಲಿಗೆ ದೂತನನ್ನು ಕಳುಹಿಸುವಂತೆ, ಅಗ್ನಿಯು ದೌತ್ಯಕರ್ಮವನ್ನು (ಮಾಡುವಂತೆ) ಮಾಡುತ್ತಾನೆ

## English Translation

When the diffusive vital air excites Agni, he becomes bright and manifest in every mansion, and the institutor of the rite, imitating Bhrigu, prevails on him to perform the function of messenger, as a prince who has become a friend sends an ambassador to his more powerful (conqueror).

॥ ವಿಶೇಷವಿಷಯಗಳು ॥

**ಮಾತರಿಶ್ವಾ ಮಥೀತ್**—**ಮಾತರಿಶ್ವಾ** ಎಂಬ ಪದದ ವಿವರಣೆಗೆ ಋ ಸಂ. ೧-೯೩-೬ ನೇ ಋಕ್ಕಿನ ವಿಶೇಷವಿಷಯಗಳನ್ನು ನೋಡಿ. **ಕೀದೃಶಃ ಮಾತರಿಶ್ವಾ । ವಿಭೃತಃ । ಪ್ರಾಣಿಷು ಪ್ರಾಣಾಪಾನಾದಿ ಪಂಚ ವೃತ್ತಿರೂಪೇಣ ವಿಹೃತೋ ವಿಭಜ್ಯ ಸ್ಥಿತಃ ।** ಪ್ರಾಣಿಗಳಲ್ಲಿ ಪ್ರಾಣ, ಅಪಾನ, ವ್ಯಾನ, ಉದಾನ ಮತ್ತು ಸಮಾನ ಎಂದು ಐದು ವಿಭಾಗವಾಗಿ ವ್ಯಾಪಿಸಿರುವವನು ಎಂದು **ವಿಭೃತಃ** ಎಂಬ ಪದಕ್ಕೆ ಅರ್ಥವನ್ನು ಹೇಳಿ ಅವುಗಳಲ್ಲಿ, ಈ ಸಂದರ್ಭಕ್ಕೆ **ಮಾತರಿಶ್ವಾ** ಎಂದರೆ **ವ್ಯಾನವೃತ್ತಿರೂಪೇಣಾವಸ್ಥಿತೋ ಮುಖ್ಯಪ್ರಾಣಃ।** ವ್ಯಾನವೃತ್ತಿರೂಪದಲ್ಲಿರುವ ಮುಖ್ಯಪ್ರಾಣನಾದ ವಾಯುವೆಂದು ಭಾಷ್ಯಕಾರರು ವಿವರಿಸುತ್ತಾರೆ ಈ ರೂಪದಲ್ಲಿರುವ ವಾಯುವೇ ಅಗ್ನಿಮಥನಕ್ಕೆ ಸಮರ್ಥನೆಂದೂ ಈ ಕಾರ್ಯವನ್ನು ನಿರ್ವಹಿಸಿದನೆಂದೂ ಸಮರ್ಥಿಸುವುದಕ್ಕೆ ಛಾಂದೋಗ್ಯೋಪನಿಷತ್ತಿನ—**ಅಥ ಯಃ ಪ್ರಾಣಾಪಾನಯೋಃ ಸಂಧಿಃ ಸ ವ್ಯಾನಃ । ಅತೋ ಯಾನ್ಯನ್ಯಾನಿ ವೀರ್ಯವಂತಿ ಕರ್ಮಾಣಿ ಯಥಾಗ್ನೇರ್ಮಂಥನಮಾಜೇಃ ಸರಣಂ ದೃಢಸ್ಯ ಧನುಷ ಆಯಮನಮಪ್ರಾಣನ್ನನಪಾನಂಸ್ತಾನಿ ಕರೋತಿ ।** ಎಂಬ ವ್ಯಾನರೂಪದ ವಾಯುವಿನ ಪ್ರಶಂಸೆಯನ್ನು ಉದಹರಿಸುತ್ತಾರೆ ಪ್ರಾಣಾಪಾನಗಳ ಶಕ್ತಿಗೆ ಮೀರಿದ ಅಗ್ನಿಮಂಥನಾದಿ ಪರಾಕ್ರಮಕಾರ್ಯಗಳನ್ನೆಲ್ಲಾ ವ್ಯಾನರೂಪದ ವಾಯುವು ಮಾತ್ರ ಮಾಡಬಲ್ಲದು ಎಂದು ಈ ಶ್ರುತಿವಾಕ್ಯದ ತಾತ್ಪರ್ಯ (ಛಾ ಉ ೧-೩-೩-೫.)

ಅಗ್ನಿಮಥನಕ್ಕೆ ಪೂರ್ವಪ್ರಸಿದ್ಧವಾದ ಒಂದು ಕಥೆಯಿದೆ ಅದರಲ್ಲಿ ಹೇಳುವಂತೆ **ಸರ್ವಮಿದಮಂಧಂ ತಮ ಆಸೀತ್ । ಅಥ ಮಾತರಿಶ್ವಾಕಾಶೇ ಸೂಕ್ಷ್ಮಮಗ್ನಿಮಪಶ್ಯತ್ । ತಮಮಥ್ನಾತ್ । ಮಥಿತ್ವಾಚಾನಯದಿತಿ ।** ಹಿಂದೆ ಲೋಕವೆಲ್ಲವೂ ಕಗ್ಗತ್ತಲೆಯಿಂದ ಆವೃತವಾಯಿತು ಆಗ ಮಾತರಿಶ್ವನು ಸೂಕ್ಷ್ಮರೂಪದ ಅಗ್ನಿಯನ್ನು ಗುರ್ತಿಸಿ ಮಥನ ಮಾಡಿದನು ಅನಂತರ ಯಜ್ಞಕ್ಕೆ ಅನುಕೂಲವಾಗುವಂತೆ ಪೃಥ್ವಿಗೆ ಕರೆತಂದನು ಎಂದು ಪ್ರಸಿದ್ಧವಾದ ಕಥೆಯು ಸೂಕ್ಷ್ಮವಾಗಿ ಋಕ್ಸಂಹಿತೆಯಲ್ಲಿಯೂ ಅನೇಕಕಡೆ ಹೇಳಲ್ಪಟ್ಟಿದೆ. ಉದಾಹರಣೆಗೆ —

**ಆನ್ಯಂ ದಿವೋ ಮಾತರಿಶ್ವಾ ಜಭಾರಾಮಥ್ನಾದನ್ಯಂ ಪರಿ ಶ್ಯೇನೋ ಅದ್ರೇಃ ।**

(ಋ ಸಂ ೧-೯೩-೬)

**ಆ ದೂತೋ ಅಗ್ನಿಮಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ।**

(ಋ ಸಂ ೬-೮-೪)

ಎಂಬ ಋಕ್ಕುಗಳಲ್ಲಿಯೂ ಸಹ ಇಲ್ಲಿ ಪ್ರಶಂಸಿಸುವಂತೆಯೇ ಅಗ್ನಿಪ್ರಶಂಸೆಯನ್ನು ಪೂರ್ವಕಥಾಸಂದರ್ಭದೊಡನೆ ವಿವರಿಸಿರುತ್ತೆ ಹೀಗೆ ಮಾತರಿಶ್ವನು ಕರೆತಂದನಂತರವೇ ಅಗ್ನಿಯು ಯಜ್ಞಗೃಹದಲ್ಲಿ ಬೆಳಗಿದನು ಎಂದರ್ಥ.

**ಶ್ಯೇತಃ—ಶುಭ್ರವರ್ಣೋ ಭೂತ್ವಾ ।** ಶುಭ್ರವಾಗಿ ಪ್ರಕಾಶಿಸುತ್ತಾ,

**ಜ್ಯೇನಃ । ಪ್ರಾದುರ್ಭೂತಃ ಭೂತ್ । ಯದ್ವಾ । ರಕ್ಷಣಂ ತಮಸಾಂ ವಾ ಜೇತಾ । ಅಭವತ್ ।** ಮಾತರಿಶ್ವನು ಯಜ್ಞಗೃಹಕ್ಕೆ ಕರೆತಂದ ಅಗ್ನಿಯು ಮೇಲೆ ಪ್ರಾದುರ್ಭೂತನಾದನು. ಅಥವಾ ತಮಸ್ಸಿಗೂ ಶತ್ರುಗಳಿಗೂ

ನಾಶಕನಾಗಿ ಜಯಶೀಲನಾಗಿ ಬೆಳಗಿದನು ಎಂಬ ಎರಡರ್ಥವನ್ನೂ ಹೇಳಬಹುದು ಆದರೆ **ಜೇನ್ಯಃ** ಎಂಬ ಪದವು ಋಕ್ಸಂಹಿತೆಯಲ್ಲಿ ಹೆಚ್ಚಾಗಿ ಜಯಶೀಲನಾಗು ಎನ್ನುವ ಅರ್ಥದಲ್ಲಿಯೇ ಪ್ರಯುಕ್ತವಾಗಿದೆ ೧-೧೨೮-೭, ೧-೧೩೦-೬, ೧-೧೪೦-೨, ೨-೫-೧; ೧೦-೪-೩ ಇತ್ಯಾದಿ ನಾನಾ ಋಕ್ಕುಗಳಲ್ಲಿ **ಜಯಶೀಲಃ** ಎಂಬರ್ಥವೇ ಸರಿಯಾಗಿದೆ. ಇಲ್ಲಿಯೂ ಸಹ ಅದರಂತೆಯೇ ಜಯಶೀಲನೆಂಬ ಅರ್ಥವೇ ಸಹಜವಾಗಿದೆ.

**ಸಚಾ ಸನ್**--**ಸಖಾ ಭವನ್** । ಸ್ನೇಹಿತನಾಗಿ । **ದೂತಸ್ಯ ಕರ್ಮ ಆವಿವಾಯ** । ದೂತಕೃತ್ಯವನ್ನು ವಹಿಸುವಂತೆ ಮಾಡಿದನು. ಯಜ್ಞಕರ್ತನಿಗೂ ದೇವತೆಗಳಿಗೂ ಅತ್ಯಂತ ಪ್ರಿಯನಾದ ಮಿತ್ರನೆಂದು ಅಗ್ನಿಯನ್ನು ಅನೇಕ ಕಡೆ ವರ್ಣಿಸಿದೆ. ಉದಾಹರಣೆಗೆ—

**ಆ ಹಿಷ್ಮಾ ಸೂನವೇ ಪಿತಾಪಿರ್ಯಜತ್ಯಾಪಯೇ । ಸಖಾ ಸಖ್ಯೇ ವರೇಣ್ಯಃ ।**
(ಋ ಸಂ. ೧-೨೬-೩)

**ತ್ವಂ ಜಾಮಿರ್ಜನಾನಾಮಗ್ನೇ ಮಿತ್ರೋ ಅಸಿ ಪ್ರಿಯಃ । ಸಖಾ ಸಖಿಭ್ಯ ಈಡ್ಯಃ ।**
(ಋ ಸಂ ೧-೭೫-೪)

**ತ್ವಂ ಪುತ್ರೋ ಭವಸಿ ಯಸ್ತೇಽವಿಧತ್ತ್ವಂ ಸಖಾ ಸುಶೇವಃ ಪಾಸ್ಯಾಧೃಷಃ ।**
(ಋ ಸಂ ೨-೧-೯)

**ತ್ವಂ ತ್ರಾತಾ ತರಣೇ ಚೇತ್ಯೋ ಭೂಃ ಪಿತಾ ಮಾತಾ ಸದಮಿನ್ಮಾನುಷಾಣಾಂ ।**
(ಋ ಸಂ ೬-೧-೫)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯ ಸಖ್ಯವೂ ಸಹಾಯವೂ ಹೇಳಿರುವಂತೆ ಇಲ್ಲಿಯೂ ಸಹ ಅಂತಹ ಸಖನಾಗಿ ದೂತ ಕರ್ಮವನ್ನು ವಹಿಸಿದನೆಂದು ಪ್ರಶಂಸಿಸಿದೆ ೧೦ ನೇ ಮಂಡಲದ ೫೧ ನೇ ಸೂಕ್ತದಲ್ಲಿ ಅಗ್ನಿಯು ದೂತಕೃತ್ಯವನ್ನು ವಹಿಸುವಂತೆ ಪ್ರಾರ್ಥಿಸುವ ಅಗ್ನಿಗೂ ಇತರ ದೇವತೆಗಳಿಗೂ ನಡೆಯುವ ಸಂವಾದವು ಈ ಸನ್ನಿವೇಶವನ್ನು ಚೆನ್ನಾಗಿ ವಿವರಿಸುತ್ತದೆ. ಅದಲ್ಲದೇ,

**ಅಗ್ನಿಂ ದೂತಂ ವೃಣೀಮಹೇ ಹೋತಾರಂ ವಿಶ್ವವೇದಸಂ ।**
(ಋ. ಸಂ. ೧-೧೨-೧)

**ದೇವಾಸಸ್ತ್ವಾ ವರುಣೋ ಮಿತ್ರೋ ಅರ್ಯಮಾ ಸಂ ದೂತಂ ಪ್ರತ್ನಮಿಂಧತೇ ।**
(ಋ ಸಂ ೧-೩೬-೪)

**ಜುಷ್ಟೋ ಹಿ ದೂತೋ ಅಸಿ ಹವ್ಯವಾಹನೋಽಗ್ನೇ ರಥೀರಧ್ವರಾಣಾಂ ।**
(ಋ ಸಂ ೧-೪೪-೨).

ಎಂಬುದಾಗಿ ದೇವತೆಗಳಿಗೂ ಮಾನವರಾದ ಯಜ್ಞಕರ್ತರಿಗೂ ಅಗ್ನಿಯು ಸಮಾನವಾದ ದೂತನಾಗಿರುವುದು ಸಹಜ ವಾದರೂ ಸಹ ಈ ವಿಧವಾಗಿ ದೂತನಾಗಬೇಕಾದರೆ ಯಜ್ಞಕರ್ತನ ಯೋಗ್ಯತೆಯು ಬಹಳ ಶ್ರೇಷ್ಠವಾಗಿರಬೇಕು ಎಂದು ತೋರಿಸಲು

**ಭೃಗವಾಣಃ**—ಎಂಬ ವಿಶೇಷಣವನ್ನು ಸೂಚಿಸಿ ಭೃಗು ಋಷಿಯಂತೆ ಅತ್ಯಂತ ಶ್ರೇಷ್ಠವಾದ ಕರ್ಮಾಚರಣೆಯಲ್ಲಿ ನಿರತನಾದ ಯಜಮಾನನಿಗೆ ಮಾತ್ರ ಅಗ್ನಿಯ ಈ ವಿಧವಾದ ಸಖ್ಯವು ದೊರೆಯುವುದೆಂದೂ ಸೂಚಿಸಿದೆ. ಅಂತಹ ಸಂದರ್ಭದಲ್ಲಿ ಒಬ್ಬ ರಾಜನಿಗೆ ಇನ್ನೊಬ್ಬ ರಾಜನ ಸಹಾಯವಿದ್ದರೆ ಇಬ್ಬರ ಶಕ್ತಿಯೂ ಹೇಗೆ ಪ್ರಕಾಶಮಾನವಾಗಿಯೂ ಜಯವನ್ನು ಸಂಪಾದಿಸುವುದಾಗಿಯೂ ಆಗುವುದೋ ಹಾಗೆ ಅಗ್ನಿಯಜಮಾನರ ಸಖ್ಯವು ದೇವಮಾನವಾದಿ ಸಕಲರ ಹಿತಕ್ಕೂ ಸಾಧಕವಾಗುವುದೆಂದಭಿಪ್ರಾಯವು ಅಥವಾ ಯಾಗಾದಿಕರ್ಮಗಳಲ್ಲಿ ನಿರತನಾದ ಯಜಮಾನನು ಶ್ರೇಷ್ಠವಾದ ಸ್ಥಾನವನ್ನಾಕ್ರಮಿಸುವುದರಿಂದ ತನ್ನ ಸ್ಥಾನಮಹಿಮೆಯಿಂದ ಒಬ್ಬ ರಾಜನು ತನ್ನ ಸ್ನೇಹಿತನೂ ತನಗಿಂತಲೂ ಹೆಚ್ಚು ಪರಾಕ್ರಮಿಯಾದವನೂ ಆದ ಇನ್ನೊಬ್ಬ ದೊರೆಗೆ ಯಾವ ರೀತಿ ತನ್ನ ದೂತನನ್ನು ಕಳುಹಿಸುವನೋ ಆರೀತಿ ಅಗ್ನಿಯನ್ನು ದೇವತೆಗಳಲ್ಲಿಗೆ ಕಳುಹಿಸುವನು ಎಂದರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಮಥೀತ್**—ಮಥೇ ವಿಲೋಡನೇ ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚ** ಎಂಬುದರಿಂದ ಇಕಾರಲೋಪ. **ಚ್ಲೇಃ ಸಿಚ್** ಎಂಬುದರಿಂದ ಚ್ಲಿಗೆ ಸಿಚಾದೇಶ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಇಡಾಗಮ **ಅಸ್ತಿಸಿಚೋಽಪೃಕ್ತೇ** (ಪಾ. ಸೂ. ೭-೩-೯೬) ಅಪೃಕ್ತವಾದ ತಿಪ್ಪಿಗೆ ಈಡಾಗಮ. **ಹ್ಮ್ಯಂತಕ್ಷಣಶ್ವಸ**—(ಪಾ ಸೂ. ೭-೨-೫) ಎಂಬುದರಿಂದ ಧಾತುವು ಏದಿತ್ತಾದುದರಿಂದ ವೃದ್ಧಿ ಬರುವುದಿಲ್ಲ **ಇಟ ಈಟಿ** (ಪಾ ಸೂ ೮-೨-೨೮) ಎಂಬುದರಿಂದ ಸಿಚ್ಚಿಗೆ ಲೋಪ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಆಗಮ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ

**ಜೇನ್ಯಃ**—ಜನೀ ಪ್ರಾದುರ್ಭಾವೇ ಧಾತು. ಇದಕ್ಕೆ ಔಣಾದಿಕವಾದ ಏನ್ಯ ಪ್ರತ್ಯಯವೂ ಟಿಲೋಪವೂ ಬರುತ್ತವೆ ಎಂದು ಭಟ್ಟಭಾಸ್ಕರಮಿಶ್ರರ ಮತ. ಅಥವಾ ಜಿ ಜಯೇ ಧಾತು ಇದಕ್ಕೆ **ಕೃತ್ಯಲ್ಯುಟೋ ಬಹುಲಂ** (ಪಾ ಸೂ ೩-೩-೧೧೩) ಎಂಬಲ್ಲಿ ಬಹುಲವಚನವಿರುವುದರಿಂದ ಕರ್ತರಿಯಲ್ಲಿ **ಅಚೋಯತ್** (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ ಅದಕ್ಕೆ ನುಡಾಗಮ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಜೇನ್ಯ ಎಂದು ರೂಪವಾಗುತ್ತದೆ. **ಯತೋಽನಾವಃ** (ಪಾ ಸೂ. ೬-೧-೨೧೩) ಎಂಬುದರಿಂದ ಸ್ವರಿತವು ಬಾಧಿತವಾಗಿ ಆದ್ಯುದಾತ್ತಸ್ವರ ಬರುತ್ತದ.

**ಸಹೀಯಸೇ**—ಸಹಃ ಎಂಬುದು ಬಲದ ಹೆಸರು. ಅತಿಶಯೇನ ಸಹಃ ಅಸ್ಯ ಅಸ್ತಿ ಎಂಬರ್ಥ ವಿವಕ್ಷಾ ಮಾಡಿದಾಗ ಈಯಸುನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ ಚತುರ್ಥೀ ಏಕವಚನಾಂತರೂಪ.

**ದೂತ್ಯಮ್**—ದೂತಸ್ಯ ಕರ್ಮ ದೂತ್ಯಮ್ **ದೂತ್ಯಸ್ಯ ಭಾವಕರ್ಮಣೀ** ಎಂಬುದರಿಂದ ಇಲ್ಲಿ ಕರ್ಮಾರ್ಥದಲ್ಲಿ ಯತ್ ಪ್ರತ್ಯಯ. **ಯಸ್ಯೇತಿ ಚ** ಎಂಬುದರಿಂದ ದೂತ ಎಂಬಲ್ಲಿರುವ ಅಕಾರಕ್ಕೆ ಲೋಪ ಪ್ರತ್ಯಯ ತಿತ್ತಾದುದರಿಂದ **ತಿತ್ ಸ್ವರಿತಂ** (ಪಾ. ಸೂ ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ. ಯದ್ಯಪಿ ಇದಕ್ಕೆ ಬಾಧಕವಾಗಿ **ಯತೋ ನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರಬೇಕಾಗುತ್ತದೆ,

ದರೆ ಅದರಿಂದ ಬರುವ ಆದ್ಯುದಾತ್ತಸ್ವರವು ಅನಿತ್ಯವೆಂದು **ನೀರವೀರಯೋಶ್ಚ** (ಪಾ ಸೂ ೬-೨-೧೨೦) ಎಂಬ ಸೂತ್ರದಲ್ಲಿ ಜ್ಞಾಪಿತವಾದುದರಿಂದ ಇಲ್ಲಿ ಬರುವುದಿಲ್ಲ.

**ಭೃಗವಾಣಃ**--ಭೃಗುರಿವ ಆಚರನ್ ಭೃಗವಾಣಃ **ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಕ್ತವ್ಯಃ** (ಪಾ. ವಾ. -೧-೧೧-೩) ಎಂಬ ವಚನದಿಂದ ಭೃಗು ಎಂಬ ಪ್ರಾತಿಪದಿಕದ ಮೇಲೆ ಆಚಾರಾರ್ಥವಿವಕ್ಷಾ ಮಾಡಿದಾಗ ಕ್ವಿಪ್. ಚಾರಾರ್ಥ ಕ್ವಿಪ್ ಆದುದರಿಂದ **ಸನಾದ್ಯಂತಾ ಧಾತವಃ** ಎಂಬುದರಿಂದ ಭೃಗು ಎಂಬ ಕ್ವಿಬಂತಕ್ಕೆ ಧಾತುಸಂಜ್ಞೆ ರುತ್ತದೆ. **ವ್ಯತ್ಯಯೋ ಬಹುಲಂ** ಎಂಬುದರಿಂದ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ ತನ್ನಿಮಿತ್ತ ಾಗಿ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಇಕ್ಕಿಗೆ ಗುಣ. ಅವಾದೇಶ. ಋಕಾರದ ಪರದಲ್ಲಿ ಡಾದಿವ್ಯವಹಿತವಾಗಿ ನಕಾರ ಬಂದುದರಿಂದ ಶಾನಚಿನ ನಕಾರಕ್ಕೆ ಣತ್ವ. ಅದುಪದೇಶದ ಪರದಲ್ಲಿ ಲಸಾರ್ವಧಾತು ವು (ಶಾನಚ್) ಬಂದುದರಿಂದ **ತಾಸ್ಯನುದಾತ್ತೇತ್**-ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಪ್ರತ್ಯಯಾಂತ ಾತುವಿನ (ಭೃಗು) ಅಂತೋದಾತ್ತಸ್ವರವು ಪ್ರಾಪ್ತವಾದಾಗ ವೃಷಾದಿಗಣವು ಆಕೃತಿಗಣವಾದುದರಿಂದ ಅಲ್ಲಿ ಇದನ್ನು ೇರಿಸುವುದರಿಂದ **ವೃಷಾದೀನಾಂ ಚ** (ಪಾ ಸೂ ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ವಿವಾಯ**—ವೀ ಗತ್ಯಾದಿಷು. ಧಾತು ಪ್ರೇರಣಾರ್ಥೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಾತುವಿಗೆ ಲಿಟ್ ಪ್ರಥಮಪುರುಷ ಏಕವಚನದಲ್ಲಿ **ಪರಸ್ಮೈಪದಾನಾಂ**-ಎಂಬುದರಿಂದ ತಿಪ್ಪಿಗೆ ಣಲಾದೇಶ ಸ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಹ್ರಸ್ವ. ಣಿತ್‌ಪ್ರತ್ಯಯವಾದುದರಿಂದ **ಅಚೋಞ್ಣಿತಿ** ಎಂಬುದರಿಂದ ಈಕಾರಕ್ಕೆ ೃದ್ಧಿ. ಆಯಾದೇಶ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೪ ॥



॥ ಸಂಹಿತಾಪಾಠಃ ॥

ಮಹೇ ಯತ್ಪಿತ್ರ ಈಂ ರಸಂ ದಿವೇ ಕರವ ತ್ಸರತ್ಪೃಶನ್ಯಶ್ಚಿಕಿ-
ತ್ವಾನ್ ।

ಸೃಜದಸ್ತಾ ಧೃಷತಾ ದಿದ್ಯುಮಸ್ಮೈ ಸ್ವಾಯಾಂ ದೇವೋ ದುಹಿತರಿ
ತ್ವಿಷಿಂ ಧಾತ್ ॥ ೫ ॥

॥ ಪದಪಾಠಃ ॥

ಮಹೇ । ಯತ್ । ಪಿತ್ರೇ । ಈಂ । ರಸಂ । ದಿವೇ । ಕಃ । ಅವ । ತ್ಸರತ್ ।
ಪೃಶನ್ಯಃ । ಚಿಕಿತ್ವಾನ್ ।
ಸೃಜತ್ । ಅಸ್ತಾ । ಧೃಷತಾ । ದಿದ್ಯುಂ । ಅಸ್ಮೈ । ಸ್ವಾಯಾಂ । ದೇವಃ । ದುಹಿತರಿ ।
ತ್ವಿಷಿಂ । ಧಾತ್ ॥ ೫ ॥

॥ ಸಾಯಣಭಾಷ್ಯಂ ॥

ಮಹೇ ಮಹತೇ ಪಿತ್ರೇ ಪಾಲಯಿತ್ರೇ ದಿವೇ ದ್ಯೋತಮಾನಾಯ ದೇವಗಣಾಯೇಮಿಮಂ ರಸಂ ಪೃಥಿವ್ಯಾಃ ಸಾರಭೂತಂ ಹವಿರ್ಯದ್ಯದಾ ಯಜಮಾನಃ ಕಃ ಕರೋತಿ ತದಾನೀಂ ಪೃಶನ್ಯಃ ಸ್ಪರ್ಶನ-ಕುಶಲೋ ರಾಕ್ಷಸಾದಿಶ್ಚಿಕಿತ್ವಾನ್ ಹವೀಂಷಿ ವಹಂತಂ ಹೇ ಅಗ್ನೇ ತ್ವಾಂ ಜಾನನ್ ಅವ ತ್ಸರತ್ । ತ್ವದ್ಭಯಾತ್ಪಲಾಯತೇ । ಅಸ್ತೇಷುಕ್ಷೇಪಣಶೀಲೋಽಗ್ನಿರ್ಧೃಷತಾ ಧರ್ಷಕೇಣ ಧನುಷಾಸ್ಮೈ ಪಲಾಯ-ಮಾನಾಯ ರಾಕ್ಷಸಾದಯೇ ದಿದ್ಯುಂ ದೀಪ್ಯಮಾನಂ ಬಾಣಂ ಸೃಜತ್ । ವಿಸೃಜತಿ । ದೇವೋ ದೀಪ್ಯಮಾನ ಉಷಃಕಾಲಂ ಪ್ರಾಪ್ತೋಽಗ್ನಿಃ ಸ್ವಾಯಾಂ ಸ್ವಕೀಯಾಯಾಂ ದುಹಿತರಿ ದುಹಿತೃವತ್ಸಮನಂತರಭಾವಿನ್ಯಾ-ಮುಷಸಿ ತ್ವಿಷಿಂ ಸ್ವಕೀಯಾಂ ದೀಪ್ತಿಂ ಧಾತ್ । ಸ್ಥಾಪಯತಿ । ಉಷಃಕಾಲೇ ಹಿ ಸೂರ್ಯಕಿರಣಾಃ ಪ್ರಾದುರ್ಭವಂತಿ । ತೈಃ ಸ್ವಕೀಯಂ ಪ್ರಕಾಶಮೇಕೀಕರೋತಿ । ತಥಾ ಚ ತೈತ್ತಿರೀಯಕಂ । ಉದ್ಯಂತಂ ವಾವಾದಿತ್ಯಮಗ್ನಿರನುಸಮಾರೋಹತಿ ತಸ್ಮಾದ್ಧೂಮ ಏವಾಗ್ನೇರ್ದಿವಾ ದದೃಶೇ । ತೈ. ಬ್ರಾ. ೨-೧-೨-೧೦ । ಇತಿ । ಅತ ಉಷಸಿ ದೀಪ್ತಿಂ ನಿದಧಾತೀತ್ಯುಚ್ಯತೇ ॥ ಕಃ । ಕರೋತೇರ್ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ । ತ್ಸರತ್ । ತ್ಸರ ಛದ್ಮಗತೌ । ಲೇಟ್ಯಡಾಗಮಃ । ಇತಶ್ಚ್ಲೋಪ ಇತೀಕಾರಲೋಪಃ । ಪೃಶನ್ಯಃ । ಸ್ಪೃಶ ಸಂಸ್ಪರ್ಶನೇ । ಕ್ಯಪ್ರತ್ಯಯೋ ಬಹುಲ-ವಚನಾದಸ್ಮಾದಪಿ ಭವತಿ । ಸ್ಪೃಶನಂ ಸ್ಪರ್ಶಃ । ತತ್ರ ಸಾಧುರಿತಿ ಯತ್ । ಸಲೋಪಶ್ಛಾಂದಸಃ । ತಿತ್ಸ್ವರಿತಮಿತಿ ಸ್ವರಿತತ್ವಂ । ದಿದ್ಯುಂ । ದಿದ್ಯುದಿತಿ ವಜ್ರನಾಮ । ಅಂತ್ಯಲೋಪಶ್ಛಾಂದಸಃ । ಧಾತ್ । ಛಾಂದಸೋ ವರ್ತಮಾನೇ ಲುಙ್ ॥

॥ ಪ್ರತಿಪದಾರ್ಥ ॥

ಮಹೇ—ಮಹನೀಯನಾದ । ಪಿತ್ರೇ—ಪಾಲಕನಾದ । ದಿವೇ—ಪ್ರಕಾಶಿಸುತ್ತಿರುವ (ದೇವಗಣಕ್ಕೆ) । ಈಂ ರಸಂ—ಈ (ಭೂಮಿಯ) ಸಾರಭೂತವಾದ (ಹವಿಸ್ಸನ್ನು) । ಯತ್—ಯಾವಾಗ (ಯಜಮಾನನು) । ಕಃ—ಮಾಡುತ್ತಾನೋ (ಆಗ) । ಪೃಶನ್ಯಃ—ಸ್ಪರ್ಶನಕುಶಲರಾದ (ರಾಕ್ಷಸರು) । ಚಿಕಿತ್ವಾನ್—(ನೀನು ದೇವತೆ-

ಗಳಿಗೆ ಹವಿಸ್ಸನ್ನು ವಹಿಸುತ್ತಿರುವುದನ್ನು ತಿಳಿದವರಾಗಿ । **ಅವ ತ್ಸರತ್**—ಹಿಂದಕ್ಕೆ ಸರಿದರು । **ಅಸ್ತಾ**— ಬಾಣ ಬಿಡುವುದೇ ಸ್ವಭಾವವಾಗಿ ಉಳ್ಳ ಅಗ್ನಿಯು । **ಧೃಷತಾ**—ಧನುಸ್ಸಿನಿಂದ । **ಅಸ್ಮೈ**—(ಓಡಿಹೋಗುತ್ತಿರುವ) ಈ ರಾಕ್ಷಸರಮೇಲೆ । **ದಿದ್ಯುಂ**—ದೀಪ್ತವಾದ (ಬಾಣವನ್ನು) । **ಸೃಜತ್**—ಬಿಡುತ್ತಾನೆ । **ದೇವಃ—**ಪ್ರಕಾಶ-ಮಾನನಾದ ಅಗ್ನಿಯು । **ಸ್ವಾಯಾಂ**—ಸ್ವಕೀಯಳಾದ । **ದುಹಿತರಿ**—ಮಗಳಂತೆ ಇರುವ ಉಷಸ್ಸಿನಲ್ಲಿ । **ದೀಪ್ತಿಂ**—ತೇಜಸ್ಸನ್ನು । **ಧಾತ್**—ಇಡುತ್ತಾನೆ. ।

॥ ಭಾವಾರ್ಥ ॥

ಯಜಮಾನನು ಹವಿಸ್ಸನ್ನು ಮಹಾತ್ಮನೂ, ಪಾಲಕನೂ ಆದ ಅಗ್ನಿಗೆ ಅರ್ಪಿಸುತ್ತಲೂ, ಅದನ್ನು ಸ್ವೀಕರಿಸಲು ಕಾದಿರುವ ರಾಕ್ಷಸರು ಹಿಂದಕ್ಕೆ ಸರಿಯುತ್ತಾರೆ. ಆದರೆ, ಧನುರ್ಧರನಾದ ಅಗ್ನಿಯು ಅವರಮೇಲೆ ಬಾಣವನ್ನು ಎಸೆಯುತ್ತಾನೆ ಅನಂತರ ಸಮೀಪಿಸಿರುವ ಮಗಳಂತಿರುವ ಉಷಸ್ಸಿಗೆ ಪ್ರಕಾಶವನ್ನು ಉಂಟುಮಾಡುತ್ತಾನೆ

English Translation.

When (the worshipper) offers an oblation to his great and illustrious protector, the grasping (Rakshas), recognizing you Agni, retires, but Agni, the archer, sends after him a blazing arrow from his dreadful bow, and the God bestows light upon his own daughter, (the dawn)

॥ ವಿಶೇಷವಿಷಯಗಳು ॥

ಅಗ್ನಿಯು ದೇವತೆಗಳ ಮತ್ತು ಮಾನವರಾದ ಯಜ್ಞಕರ್ತರ ದೂತಕೃತ್ಯವನ್ನು ವಹಿಸಿ ಅವರಿಗೆ ಉಪಕಾರಕನಾಗಿರುವುದು ಮಾತ್ರವಲ್ಲದೇ, ದಾರಿಯಲ್ಲಿ ಒದಗುವ ಸಕಲವಾದ ವಿಘ್ನಗಳನ್ನೂ ಪರಿಹರಿಸಲು ಸಮರ್ಥನಾಗಿದ್ದಾನೆ. ರಾಕ್ಷಸರ ಹಾವಳಿಯನ್ನು ತಪ್ಪಿಸಿ, ತಮಸ್ಸನ್ನು ನಾಶಮಾಡಿ, ತನ್ನ ಆವಿರ್ಭಾವಾನಂತರ ಉದಯಿಸುವ ತನ್ನ ದುಹಿತೃವಾದ ಉಷಸ್ಸಿಗೆ ತನ್ನ ಕಾಂತಿಯನ್ನು ಕೊಟ್ಟು ಬೆಳಗುವಂತೆ ಮಾಡುತ್ತಾನೆ

**ಈಂ**—ಈ ಪದದ ಸ್ವರೂಪವನ್ನೂ ವೈಶಿಷ್ಟ್ಯವನ್ನೂ ಹಿಂದೆಯೇ ವಿಶದವಾಗಿ ವಿವರಿಸಿದೆ

**ಕಃ**—**ಕೃ** ಧಾತುವಿನಿಂದ ನಿಷ್ಪನ್ನವಾಗಿ **ಕಃ** ಎಂದರೆ ಮಾಡುತ್ತಾನೆ ಎಂದರ್ಥವಾಗಿದೆ.

**ರಸಂ**—**ಅಂಧಃ, ವಾಜಃ ಪಯಃ** ಇತ್ಯಾದಿ ೨೮ ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) **ರಸಂ** ಎಂದರೆ ಇಲ್ಲಿ ಹವಿಸ್ಸಿನ ರೂಪದ ಅನ್ನವನ್ನು ಎಂದರೆ ಪೃಥ್ವಿಯ ಸಾರಭೂತವಾದ ಹವಿಸ್ಸನ್ನು ಎಂದರ್ಥ

**ಸ್ಪೃಶನ್ಯಃ—ಸ್ಪೃಶ—ಸಂಸ್ಪರ್ಶನೇ** । ಸ್ಪರ್ಶನಮಾಡು, ಮುಟ್ಟಿಸಿಕೊ ಎನ್ನುವ ಅರ್ಥವನ್ನು ಕೊಡುವ **ಸ್ಪೃಶ** ಧಾತುವಿನಿಂದ **ಸ್ಪೃಶನ್ಯಃ** ಎಂಬ ರೂಪನಿಷ್ಪತ್ತಿಯಾಗಿದೆ. **ಸ್ಪರ್ಶನಕುಶಲೋ** ರಾಕ್ಷಸಾದಿಃ ಎಂದರೆ ಕೊಳ್ಳಿ

ಹೊಡೆಯುವುದರಲ್ಲಿ ಸಮರ್ಥರಾದ ರಾಕ್ಷಸಾದಿಗಳು ಎಂದರ್ಥವಾಗುತ್ತದೆ. ಇದೇ ರೀತಿಯಲ್ಲಿ **ಪೃತನ್ಯಯಃ** (೧-೮೪-೧೧), **ಪೃತನೀ** (೧೦-೭೩-೨); **ಪೃತನೇ** (೯-೯೭-೫೪) ಇತ್ಯಾದಿ ರೂಪಗಳೂ ಆಗಿವೆ. **ಪೃತನ್ಯಃ ।** ಎಂಬ ಪದವೇ ಪುನಃ ೧೦-೬೧-೮ ನೇ ಋಕ್ಕಿನಲ್ಲಿ ಪ್ರಯೋಗಿಸಿದಾಗ ಇದೇ ಅರ್ಥವುಳ್ಳದ್ದಾಗಿ **ರುದ್ರನಿಗೆ** ವಿಶೇಷಣವಾಗಿದೆ

**ಸರತ್ಪದಾ ನ ದಕ್ಷಿಣಾ ಪರಾವೃಙ್ ನ ತಾ ನು ಮೇ ಪೃತನ್ಯೋ ಜಗೃಭ್ರೇ ।**

(ಋ ಸಂ ೧೦-೬೧-೮).

**ಅವ ತ್ಸರತ್—**ತಪ್ಪಿಸಿಕೊಂಡು ಓಡಿಹೋದನು **ವರ್ತತೇ, ಅಯತೇ, ಲೋಟತೇ—**(ಇತ್ಯಾದಿ) ೧೨೨ ಗತಿ ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) ಸಂಚರಿಸು ಚಲಿಸು ಎಂದರ್ಥವಾಗುತ್ತದೆ. ಆದರೆ ಈ ಧಾತುವನ್ನು ಒಂದು ವಿಶೇಷಾರ್ಥದಲ್ಲಿ ಉಪಯೋಗಿಸಿದೆ. **ತ್ಸರುಃ, ತ್ಸರೀ, ತ್ಸರತ್** ಎಂಬ ಪ್ರಯೋಗಗಳು ಬಂದಾಗಲೆಲ್ಲಾ **ಛದ್ಮಗತಿ** ಎಂದರ್ಥವಾಗುತ್ತದೆ ವಕ್ರವಾಗಿ ಚಲಿಸು ಅಥವಾ ಮೋಸದಿಂದ ಸಂಚರಿಸು ಎಂದಭಿಪ್ರಾಯವು ಉದಾಹರಣೆಗೆ—

**ವಹತ್ಕುತ್ಸಮಾರ್ಜುನೇಯಂ ಶತಕ್ರತುಃ ತ್ಸರದ್ಗಂಧರ್ವಮಸ್ತೃತಂ ।**

(ಋ ಸಂ. ೮-೧-೧೧)

ಎಂಬ ಋಕ್ಕಿನಲ್ಲಿ ಬರುವ **ತ್ಸರತ್** ಶಬ್ದಕ್ಕೆ **ಛದ್ಮಗತ್ಯಾ ಗಚ್ಛೇತ್ ।** ಮೋಸದಿಂದ ಹೋದನು ಎಂದರ್ಥ. ಅದರಂತೆಯೇ ಇಲ್ಲಿಯೂ ಸಹ ರಾಕ್ಷಸನು ಇತರರನ್ನು ಕೊಲ್ಲೆಹೊಡೆಯಲು ಸಮರ್ಥನಾದರೂ ಸಹ ಅಗ್ನಿಗೆ ಬೆದರಿ ತಪ್ಪಿಸಿಕೊಂಡು ಮೋಸದಿಂದ ಓಡಿಹೋದನು ಎಂದರ್ಥ ಅಗ್ನಿಯ ಸಾಮರ್ಥ್ಯವೂ ಕೌಶಲ್ಯವೂ ಇದಕ್ಕೆ ಕಾರಣವೆಂದು ಹೇಳಿದೆ.

**ಅಸ್ತಾ—ಇಷುಕ್ಷೇಪಣಕುಶಲಃ ಅಗ್ನಿಃ ।** ಬಾಣವನ್ನು ಬಿಡುವುದರಲ್ಲಿ ಕುಶಲನಾದ ಅಗ್ನಿಯು

**ದಿದ್ಯುಂ ಸೃಜತ್—**ದಿದ್ಯುವನ್ನು ಬಿಟ್ಟಾಗ **ದಿದ್ಯುತ್, ನೇಮಿಃ, ಹೇತಿಃ** ಇತ್ಯಾದಿ ೧೮ ವಜ್ರನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೩-೧೧) **ದಿದ್ಯು**ವೆಂದರೆ ಸಾಮಾನ್ಯವಾಗಿ ಇಂದ್ರನ ವಜ್ರಾಯುಧವಾಗುತ್ತದೆ. ಆದರೆ ಕೆಲವೆಡೆಗಳಲ್ಲಿ ಪ್ರಕಾಶಮಾನವಾದ ಬಾಣವೆಂದೂ ಆಗುತ್ತದೆ. **ದಿದ್ಯುತ್, ದ್ಯತೇರ್ವಾ, ದ್ಯುತೇರ್ವಾ, ದ್ಯೋತತೇರ್ವಾ ।** ಎಂದರೆ, ಪರಿತಾಪವನ್ನುಂಟುಮಾಡು ಎಂಬರ್ಥದ **ದೊ** ಧಾತುವಿನಿಂದಾಗಲಿ, ಆಕ್ರಮಣಮಾಡು, ಮೇಲೆ ಬೀಳು ಎಂಬರ್ಥವನ್ನು ಕೊಡುವ **ದ್ಯು** ಧಾತುವಿನಿಂದಾಗಲಿ ಅಥವಾ ಕಾಂತಿಯನ್ನು ಬೀರು ಎಂದಾಗುವ **ದ್ಯುತ** ಧಾತುವಿನಿಂದಾಗಲಿ **ದಿದ್ಯುತ್** ಎನ್ನುವ ಪದವು ನಿಷ್ಪನ್ನವಾಗುತ್ತದೆ ಎಂದು ನಿರುಕ್ತಕಾರರ ನಿರ್ವಚನವಿದೆ (ನಿ. ೧೦-೭) ಈ ಸಂದರ್ಭದಲ್ಲಿ ನಿರುಕ್ತಕಾರರು ಋಕ್ಸಂಹಿತೆಯ—

**ಯಾ ತೇ ದಿದ್ಯುದವಸೃಷ್ಟಾ ದಿವಸ್ಪರಿ ಕ್ಷ್ಮಯಾ ಚರತಿ ಪರಿ ಸಾ ವೃಣಕ್ತು ನಃ ।**

(ಋ. ಸಂ. ೭-೪೬-೩ )

ಎಂಬ ಋಕ್ಕನ್ನು ಉದಹರಿಸುತ್ತಾರೆ. ಇಲ್ಲಿ **ದಿದ್ಯುತ್** ಎಂಬ ಪದಕ್ಕೆ **ಹೇತಿಃ** ಬಾಣವೆಂದರ್ಥ ಇದು ರುದ್ರನ ಬಾಣಕ್ಕೆ ವಿಶೇಷಣವು. ಇದರಂತೆಯೇ ೧-೬೬-೪, ೧-೧೬೬-೬, ೫-೮೬-೩, ೭-೫೫-೧. ಇತ್ಯಾದಿ ಅನೇಕ ಋಕ್ಕುಗಳಲ್ಲಿ ಬಾಣವೆಂಬ ಅರ್ಥದಲ್ಲಿ ಈ ಪದದ ಪ್ರಯೋಗವಿದೆ. ಆದರೆ, ೬-೬೬-೧೦ ನೇ ಋಕ್ಕಿನಲ್ಲಿ **ಮರುತ್ತು**ಗಳಿಗೆ ವಿಶೇಷಣವಾಗಿ ಬಂದಾಗ **ದಿದ್ಯುತ್—ದ್ಯೋತಮಾನಾಃ ।** ಪ್ರಕಾಶಮಾನರಾದ ಮರುತ್ತುಗಳು ಎಂದು ವಿವರಿಸಿದೆ. ಪ್ರಕೃತ ೭೧ನೇ ಸೂಕ್ತದ ಈ ಋಕ್ಕಿನಲ್ಲಿ **ದಿದ್ಯುತ್** ಎಂದರೆ ಅಗ್ನಿಯು ಪ್ರಕಾಶಮಾನವಾದ ಬಾಣವೆಂದರ್ಥ.

**ಸ್ವಾಯಾಂ ದುಹಿತರಿ ತ್ವಿಷಿಂ ಧಾತ್—ದ್ಯುಹಿತೃವತ್ ಸಮನಂತರಭಾವಿನ್ಯಾಮುಷಸಿ ಸ್ವಕೀಯಾಂ ದೀಪ್ತಿಂ ಸ್ಥಾಪಯತಿ ।** ತನಗಿಂತ ಚಿಕ್ಕವಳಾಗಿ ತಾನು ಆವಿರ್ಭವಿಸಿದನಂತರ ಉತ್ಪನ್ನಳಾದುದರಿಂದ ತನ್ನ ಮಗಳಂತಿರುವ ಉಷಸ್ಸಿಗೆ ತನ್ನ ರಶ್ಮಿಗಳನ್ನು ಹರಡಿ ಅವಳನ್ನು ಕಾಂತಿಯುತಳನ್ನಾಗಿ ಮಾಡಿದನೆಂದು ಸಾಯಣರು ವಿವರಿಸುತ್ತಾರೆ. ಆದರೆ **ಅಗ್ನಿಗೂ ಉಷಸ್ಸಿಗೂ** ಪಿತೃದುಹಿತೃಸಂಬಂಧವು ಎಲ್ಲಿಯೂ ಹೇಳಿದಂತೆ ಕಾಣುವುದಿಲ್ಲ ಇವರಿಬ್ಬರೂ ಪ್ರಿಯಪ್ರೇಯಸಿಯರ ಸಂಬಂಧವನ್ನು ತೋರಿಸುತ್ತಾರೆಂದು ಅನೇಕಸಲ ಹೇಳಿದೆ. ಆದುದರಿಂದ ಈ ವಿವರಣೆಗಿಂತ ಸ್ಕಂದಸ್ವಾಮಿಗಳ ವಿವರಣೆಯು ಹೆಚ್ಚು ಸಮಂಜಸವಾಗಿರುವಂತೆ ಕಾಣುತ್ತದೆ. ಅವರ ವ್ಯಾಖ್ಯಾನದಂತೆ ಅಗ್ನಿಯು ರಾಕ್ಷಸರ ಮೇಲೆ ಬಾಣವನ್ನು ಎಸೆದೊಡನೆಯೇ, **ತದೈವ ಚ ಸ್ವಾಯಾಂ ದೇವಃ ಇಂದ್ರಃ । ದುಹಿತರಿ । ವೃಷ್ಟ್ಯಾ ಸಸ್ಯರೂಪೇಣ ಜನ್ಯಮಾನತ್ವಾದ್ದುಹಿತಾ ಕ್ಷಿತಿರತ್ರಾಭಿಪ್ರೇತಾ । ತಸ್ಯಾಂ ತ್ವಿಷಿಂ ಸಸ್ಯಸಂಪತ್ತಿಲಕ್ಷಣಾಂ ದೀಪ್ತಿಂ । ಆ ಧಾತ್ ದಧಾತಿ ।** ಆ ಒಡನೆಯೇ ದೇವನಾದ ಇಂದ್ರನು ಭೂಮಿಯ ಮೇಲೆ ಸಸ್ಯಸಂಪತ್ತಿನ ರೂಪವಾದ ಪ್ರಕಾಶವನ್ನು ಹರಡಿದನು. ಮಳೆಯಿಂದ ಸಸ್ಯರೂಪದಲ್ಲಿ ಹುಟ್ಟುವುದರಿಂದಲೂ, ಇಂದ್ರನು ಮಳೆಗೆ ಕಾರಣನಾದುದರಿಂದಲೂ ಪೃಥ್ವಿಯು ಇಂದ್ರನ ಮಗಳು ಎಂದು ವಿವರಿಸಿದ್ದಾರೆ ಈ ಅಂಶದ ವಿವರಣೆಯು ಕೊಂಚ ತೊಡಕಿನ ಭಾಗವಾಗಿರುತ್ತೆ

॥ ವ್ಯಾಕರಣಪ್ರಕ್ರಿಯಾ ॥

**ಮಹೇ**—ಮಹತ್ ಶಬ್ದ. ಇದಕ್ಕೆ ಚತುರ್ಥೀವಿಭಕ್ತಿ ಪರವಾದಾಗ ಛಾಂದಸವಾಗಿ ತಕಾರ ಲೋಪವಾಗುತ್ತದೆ.

**ದಿವೇ**—ಚತುರ್ಥೀವಿಭಕ್ತಿಗೆ **ಊಡಿದಂಪದಾದಿ**—ಎಂಬುದರಿಂದ ಉದಾತ್ತಸ್ವರ ಬರುತ್ತದೆ

**ಕಃ**—ಡುಕೃಞ್ ಕರಣೇ ಧಾತು. ಇದಕ್ಕೆ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಚ್ಲಿ ಲುಙಿ** ಎಂಬುದರಿಂದ ಚ್ಲಿ ವಿಕರಣ. ಅದಕ್ಕೆ **ಮಂತ್ರೇ ಘಸ**—(ಪಾ ಸೂ ೨-೪-೮೦) ಎಂಬುದರಿಂದ ಲುಕ್ ತಿಪ್ ನಿಮಿತ್ತವಾಗಿ ಧಾತುವಿಗೆ ಗುಣ **ಉರಣ್ರಪರಃ** ಎಂಬುದರಿಂದ ರಪರವಾಗಿ ಬರುತ್ತದೆ. ಹಲಂತದ ಪರದಲ್ಲಿ ಅಪೃಕ್ತ ತಿಪ್ ಬಂದುದರಿಂದ **ಹಲ್ಙ್ಯಾಭ್ಯೋ**—ಸೂತ್ರದಿಂದ ತಕಾರಕ್ಕೆ ಲೋಪ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಧಾತುಸ್ವರದಿಂದ ಉದಾತ್ತವಾಗುತ್ತದೆ

**ತ್ಸರತ್**—ತ್ಸರ ಛದ್ಮ ಗತೌ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃ**—ಎಂಬುದರಿಂದ ಇಕಾರಲೋಪ **ಲೇಟೋಽಡಾಟೌ** ಎಂಬುದರಿಂದ ಅದಕ್ಕೆ ಅಡಾಗಮ. ತ್ಸರತ್ ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ಪಶನ್ಯಃ**—ಸ್ಪೃಶ ಸಂಸ್ಪರ್ಶನೇ ಧಾತು **ಕ್ಯಾ ಪ್ಯಾ ವ್ಯ ಜಿ**—(ಉ ಸೂ. ೨-೨೪೯) ಎಂಬುದರಿಂದ ವಿಧಿಸಲ್ಪಡುವ ಕ್ಯುಪ್ರತ್ಯಯವು ಉಣಾದಿಯಲ್ಲಿ ಬಹುಲಗ್ರಹಣವಿರುವುದರಿಂದ ತತ್ಸಾಮರ್ಥ್ಯದಿಂದ ಈ ಧಾತುವಿಗೂ ಬರುತ್ತದೆ. ಪ್ರತ್ಯಯದಲ್ಲಿ ಯು ಎಂದು ಉಳಿಯುವಾಗ ಅದಕ್ಕೆ **ಯುವೋರನಾಕೌ** ಎಂಬುದರಿಂದ ಅನಾದೇಶ. ಅದು ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ ಸ್ಪೃಶನಂ ಅಂದರೆ ಸ್ಪರ್ಶ. ಇದಕ್ಕೆ **ತತ್ರ ಸಾಧುಃ** ಎಂಬುದರಿಂದ ಯತ್ ಪ್ರತ್ಯಯ **ಯಸ್ಯೇತಿ ಚ** ಸೂತ್ರದಿಂದ ನಕಾರೋತ್ತರಾಕಾರಕ್ಕೆ ಲೋಪ. ಆದಿಯ ಸಕಾರಕ್ಕೆ ಛಾಂದಸವಾಗಿ ಲೋಪಬರುತ್ತದೆ. ಪೃಶನ್ಯ ಎಂದು ರೂಪವಾಗುತ್ತದೆ **ತಿತ್ ಸ್ವರಿತಮ್** (ಪಾ ಸೂ ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

**ಸೃಜತ್**—ಸೃಜ ವಿಸರ್ಗೇ ಧಾತು ಲೇಟ್ ಪ್ರಥಮಪುರುಷ ಏಕವಚನದರೂಪ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶವಿಕರಣಸ್ವರ ಉಳಿಯುತ್ತದೆ

**ಅಸ್ತಾ**—ಅಸು ಕ್ಷೇಪಣೇ ಧಾತು. ತೃನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಏಕವಚನಾಂತರೂಪ.

**ದಿದ್ಯುಮ್**—ದಿದ್ಯುತ್ ಎಂಬುದು ವಜ್ರದ ಹೆಸರು. ದ್ವಿತೀಯಾ ಏಕವಚನದಲ್ಲಿ ಛಾಂದಸವಾಗಿ ತಕಾರ ಲೋಪಬರುವುದರಿಂದ ದಿದ್ಯುಂ ಎಂದು ರೂಪವಾಗುತ್ತದೆ.

**ಧಾತ್**—ಡುಧಾಞ್ ಧಾರಣಪೋಷಣಯೋಃ ಧಾತು ವರ್ತಮಾನಾರ್ಥದಲ್ಲಿ **ಛಂದಸಿ ಲುಙ್ಲಙ್ಲಿಟಃ** ಎಂಬುದರಿಂದ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರ ಲೋಪ. **ಚ್ಲೇಃ ಸಿಚ್** ಸೂತ್ರದಿಂದ ಚ್ಲಿಗೆ ಸಿಚಾದೇಶ. **ಗಾತಿಸ್ಥಾಘು**—(ಪಾ. ಸೂ. ೨-೪-೭೭) ಎಂಬುದರಿಂದ ಸಿಚಿಗೆ ಲೋಪ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೫ ॥

॥ ಸಂಹಿತಾಪಾಠಃ ॥

ಸ್ವ ಆ ಯಸ್ತುಭ್ಯಂ ದಮ ಆ ವಿಭಾತಿ ನಮೋ ವಾ ದಾಶಾದು-
ಶತೋ ಅನು ದ್ಯೂನ್ ।
ವರ್ಧೋ ಅಗ್ನೇ ವಯೋ ಅಸ್ಯ ದ್ವಿಬರ್ಹಾ ಯಾಸದ್ರಾಯಾ
ಸರಥಂ ಯಂ ಜುನಾಸಿ ॥ ೬ ॥

॥ ಪದಪಾಠಃ ॥

ಸ್ವೇ । ಆ । ಯಃ । ತುಭ್ಯಂ । ದಮೇ । ಆ । ವಿಽಭಾತಿ । ನಮಃ । ವಾ ।
ದಾಶಾತ್ । ಉಶತಃ । ಅನು । ದ್ಯೂನ್ ।
ವರ್ಧೋ ಇತಿ । ಅಗ್ನೇ । ವಯಃ । ಅಸ್ಯ । ದ್ವಿಽಬರ್ಹಾಃ । ಯಾಸತ್ ।
ರಾಯಾ । ಸಽರಥಂ । ಯಂ । ಜುನಾಸಿ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತುಭ್ಯಂ ತ್ವಾಂ ಸ್ವೇ ದಮೇ ಸ್ವಕೀಯೇ ಯಜ್ಞಗೃಹೇ ಯೋ ಯಜಮಾನಃ । ಏಕ ಆಕಾರೋ ಮರ್ಯಾದಾಯಾಂ । ಯಥಾಶಾಸ್ತ್ರಮಾ ವಿಭಾತಿ ಆ ಸಮಂತಾತ್ಸಮಿದಾದಿಭಿಃ ಕಾಷ್ಠೈಃ ಪ್ರಜ್ವಲಯತಿ ಅನು ದ್ಯೂನ್ ಅನುದಿವಸಮುಶತಃ ಕಾಮಯಮಾನಾಯ ತುಭ್ಯಂ ನಮೋ ವಾ ದಾಶಾತ್ ಹವಿರ್ಲಕ್ಷಣಮನ್ನಂ ವಾ ದದ್ಯಾತ್ । ಅಸ್ಯ ಯಜಮಾನಸ್ಯ ಹೇ ಅಗ್ನೇ ದ್ವಿಬರ್ಹಾ ದ್ವಯೋ-ರ್ಮಧ್ಯಮೋತ್ತಮಸ್ಥಾನಯೋರ್ವೃಂಹಿತೋ ವರ್ಧಿತಸ್ತ್ವಂ ವಯೋಽನ್ನಂ ವರ್ಧೋ । ವರ್ಧಯೈವ । ಸರಥಂ ರಥೇನ ಸಹಿತಂ ಯುಯುತ್ಸುಂ ಯಂ ಪುರುಷಂ ಜುನಾಸಿ ಯುದ್ಧೇ ಪ್ರೇರಯಸಿ ಸ ಪುರುಷೋ ರಾಯಾ ಧನೇನ ಯಾಸತ್ । ಸಂಗಚ್ಛತೇ ॥ ತುಭ್ಯಂ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ । ದಾಶಾತ್ । ದಾಶೃ ದಾನೇ । ಲೇಟ್ಯಾಡಾಗಮಃ । ಉಶತಃ । ಶತುರನುಮ

ಇತಿ ವಿಭಕ್ತೇರುದಾತ್ತತ್ವಂ । ಚತುರ್ಥ್ಯರ್ಥೇ ಬಹುಲಂ ಛಂದಸೀತಿ ಷಷ್ಠೀ । ಅನು ದ್ಯೂನ್ । ದ್ಯುರಿತ್ಯಹರ್ನಾಮ । ಲಕ್ಷಣೇಽನೋಃ ಕರ್ಮಪ್ರವಚನೀಯತ್ವಂ । ಕರ್ಮಪ್ರವಚನೀಯಯುಕ್ತೇ ಇತಿ ದ್ವಿತೀಯಾ । ವರ್ಧೋ । ವರ್ಧ ಉ । ವೃಧೇರ್ಣ್ಯಂತಾಲ್ಲೋಟಿ ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ । ಶಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಉಞಃ ಸಹೈಕಾದೇಶ ಉಞಃ । ಪಾ. ೧-೧-೧೭ । ಇತಿ ಪ್ರಗೃಹ್ಯತ್ವಂ । ಯಾಸತ್ । ಯಾ ಪ್ರಾಪಣೇ । *ಸಿಬ್ಬಹುಲಂ ಲೇಟೀತಿ ಸಿಪ್ । ಲೇಟೋಽಡಾಟಾವಿತ್ಯಡಾಗಮಃ । ಜುನಾಸಿ । ಜು ಇತಿ ಗತ್ಯರ್ಥಃ ಸೌತ್ರೋ ಧಾತುಃ । ಶಪಿ ಪ್ರಾಪ್ತೇ ವ್ಯತ್ಯಯೇನ ಶ್ನಾ ॥

॥ ಪ್ರತಿಪದಾರ್ಥ ॥

(**ಅಗ್ನೇ**—ಅಗ್ನಿಯೇ) । **ತುಭ್ಯಂ**—ನಿನ್ನನ್ನು । **ಸ್ವೇ ದಮೇ**—ತನ್ನ ಮನೆಯಲ್ಲಿ । **ಯಃ**-ಯಾವನು (ಯಜಮಾನನು) । **ಆ**—ಶಾಸ್ತ್ರಪ್ರಕಾರವಾಗಿ । **ಆ ವಿಭಾತಿ**—ಸುತ್ತಲೂ (ಸಮಿದಾದಿಗಳಿಂದ) ಪ್ರಜ್ವಲಿಸುವಂತೆ ಮಾಡುತ್ತಾನೋ । **ಅನು ದ್ಯೂನ್**—ಪ್ರತಿದಿವಸವೂ । **ಉಶತಃ**—ವಿಶ್ವಾಸಯುಕ್ತನಾದ (ನಿನಗೆ) । **ನಮೋ ವಾ ದಾಶಾತ್**—ಹವಿರ್ಲಕ್ಷಣವಾದ ಅನ್ನವನ್ನಾದರೂ ಕೊಡುತ್ತಾನೋ । **ಅಸ್ಯ**—ಅಂತಹ ಯಜಮಾನನಿಗೆ । **ಅಗ್ನೇ**—ಅಗ್ನಿಯೇ । **ದ್ವಿ ಬರ್ಹಾಃ**—ಎರಡುತರಹ (ಮಧ್ಯಮ, ಉತ್ತಮಗಳೆಂಬ) ವರ್ಧಿತನಾದ (ನೀನು) । **ವಯಃ**—ಅನ್ನವನ್ನು । **ವರ್ಧೋ** ಅಭಿವೃದ್ಧಿಪಡಿಸಿಯೇ ಪಡಿಸುತ್ತೀ । **ಸರಥಂ**—ರಥಯುಕ್ತನಾದ (ಯುದ್ಧಾಪೇಕ್ಷಿಯಾದ) । **ಯಂ**—ಯಾವ ಪುರುಷನನ್ನು । **ಜುನಾಸಿ**- (ಯುದ್ಧದಲ್ಲಿ) ಪ್ರೇರಿಸುತ್ತೀಯೋ (ಅವನು) **ರಾಯಾ**--ಧನದಿಂದ । **ಯಾಸತ್**---ಪ್ರಾಪ್ತನಾಗುತ್ತಾನೆ (ಯುಕ್ತನಾಗುತ್ತಾನೆ )

॥ ಭಾವಾರ್ಥ ॥

ಯಾವ ಯಜಮಾನನು ಪ್ರತಿನಿತ್ಯವೂ ನಿನ್ನನ್ನು ತನ್ನ ಮನೆಯಲ್ಲಿ ಶಾಸ್ತ್ರೋಕ್ತರೀತ್ಯಾ ಸಮಿದಾದಿಗಳಿಂದ ಪ್ರಜ್ವಲಿತನನ್ನಾಗಿ ಮಾಡಿ, ವಿಶ್ವಾಸಯುಕ್ತನಾದ ನಿನಗೆ ಹವಿಸ್ಸನ್ನು ಅರ್ಪಿಸುತ್ತಾನೋ ಅವನಿಗೆ ಅನ್ನವನ್ನು ಅಭಿವೃದ್ಧಿಪಡಿಸು. ಯಾವನು ರಥಯುಕ್ತನಾಗಿ ಯುದ್ಧಕ್ಕೆ ಸನ್ನದ್ಧನಾಗುತ್ತಾನೋ ಅವನು ಧನವನ್ನು ಪಡೆದು (ಹಿಂತಿರುಗಲಿ )

## English Translation.

When (the worshipper) kindles you in his own dwelling and presents an oblation to you, daily desiring it, do you, Agni, augmented in two ways (as middling and as best), increase his means of sustenance, may he whom you send with his car to battle, return with wealth.

॥ ವಿಶೇಷವಿಷಯಗಳು ॥

**ನಮಃ**— **ಅಂಧಃ, ವಾಜಃ, ಪಯಃ** ಇತ್ಯಾದಿ ೨೮ ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ.೨-೯) ಅನ್ನವೆಂದರ್ಥ. ಇಲ್ಲಿ ಹವಿಸ್ಸಿನ ರೂಪದ ಅನ್ನವೆಂದಭಿಪ್ರಾಯ.

**ದ್ವಿಬರ್ಹಾಃ—ದ್ವಯೋಃ ಸ್ಥಾನಯೋಃ ಪರಿವೃಢೋ ಮಧ್ಯಮೇ ಚ ಸ್ಥಾನೇ ಉತ್ತಮೇ ಚ |** (ನಿ. ೬–೧೭). ಪೃಥಿವ್ಯಂತರಿಕ್ಷಲೋಕಗಳಲ್ಲಿ ಉಲ್ಬಣವಾಗಿಯೂ ದೃಢವಾಗಿಯೂ ವೃದ್ಧಿಹೊಂದಿದವನು, ಎಂದಾಗಲಿ ಅರ್ಥವಾಗುತ್ತದೆ ಈ ವಿಶೇಷಣವು ಇಂದ್ರ, ರುದ್ರ, ಅಗ್ನಿ, ಉಷಸ್ಸು ಈ ದೇವತೆಗಳ ಪರವಾದ ಸೂಕ್ತಗಳಲ್ಲಿ ಆ ದೇವತೆಗಳ ಸ್ಥಾನ ಮತ್ತು ಸ್ವರೂಪಗಳನ್ನು ತಿಳಿಸುತ್ತದೆ ಉದಾಹರಣೆಗೆ—

**ಏಷಾ ವ್ಯೇನೀ ಭವತಿ ದ್ವಿಬರ್ಹಾ ಆವಿಷ್ಕೃಣ್ವಾನಾ ತನ್ವಂ ಪುರಸ್ತಾತ್ ।**

(ಋ. ಸಂ ೫–೮೦–೪)

**ಮಹಾಁ ಇಂದ್ರೋ ನೃವದಾ ಚರ್ಷಣಿಪ್ರಾ ಉತ ದ್ವಿಬರ್ಹಾ ಅಮಿನಃ ಸಹೋಭಿಃ ।**

(ಋ. ಸಂ ೬–೧೯–೧)

ಎಂಬ ಋಕ್ಕುಗಳಲ್ಲಿ ಉಷಸ್ಸು ಮತ್ತು ಇಂದ್ರನ ಸ್ವರೂಪವನ್ನು ಹೇಳಿದೆ. ಹೀಗೆಯೇ ೪–೫–೩, ೭–೮–೬, ೭–೨೪–೨, ೯–೪ ೭, ೯–೪೦–೬, ೧೦–೧೧೬–೪ ಇತ್ಯಾದಿ ಸ್ಥಳಗಳಲ್ಲಿ ಈ ವಿಶೇಷಣದ ಪ್ರಯೋಗವಿದೆ ೯–೧೦೦–೨ನೇ ಋಕ್ಕಿನಲ್ಲಿ **ದ್ವಿಬರ್ಹಸಂ ರಯಿಂ ।** ಎರಡು ಲೋಕಗಳಲ್ಲಿಯೂ ವೃದ್ಧಿಯನ್ನು ಹೊಂದುವ ಧನವನ್ನು ಎಂದು ಸಂಪತ್ತಿಗೆ ವಿಶೇಷಣವಾಗಿದೆ ಪ್ರಕೃತವಾದ ಈ ಋಕ್ಕಿನಲ್ಲಿ ಅಗ್ನಿಗೆ ವಿಶೇಷಣವಾದದ್ದರಿಂದ ಪೃಥಿವ್ಯಂತರಿಕ್ಷಗಳಲ್ಲಿ **ಪರಿವೃಢ**ನಾದವನು ಎಂದರ್ಥ

**ವಯಃ--ಅಂಧಃ, ವಾಜಃ, ಪಯಃ** ಇತ್ಯಾದಿ ೨೮ ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೩–೯) **ವಯಃ** ಎಂದರೆ ಇಲ್ಲಿ ಅನ್ನವೆಂದರ್ಥ

**ಜುನಾಸಿ**— ಇದು ಅಪರೂಪವಾದ ಪ್ರಯೋಗ. **ಜು ಇತಿ ಗತ್ಯರ್ಥಃ** ಸಂಚರಿಸು ಎನ್ನುವ ಅರ್ಥವನ್ನು ಕೊಡುವುದರಿಂದ ಹೋಗುತ್ತೀಯೆ ಎಂದು ಸ್ಥೂಲವಾಗಿ ಅರ್ಥವಾಗುತ್ತದೆ. ಇಲ್ಲಿ ಅನ್ವಯವನ್ನು ಬೇರೆ ಬೇರೆ ರೀತಿಯಲ್ಲಿ ಮಾಡಬಹುದು ಮೊದಲನೆಯದಾಗಿ,

**ಸರಥಂ ಯಂ ಜುನಾಸಿ ರಾಯಾ ಯಾಸತ್ ।** ಎಂಬ ಅನ್ವಯದಿಂದ **ರಥೇನ ಸಹಿತಂ ಯುಯುತ್ಸುಂ ಯಂ ಪುರುಷಂ ಯುದ್ಧೇ ಪ್ರೇರಯಸಿ ಸ ಪುರುಷಃ ಧನೇನ ಸಂಗಚ್ಛತೇ ।** ಯುದ್ಧಮಾಡಲಿಚ್ಛೆಯುಳ್ಳವನಾಗಿ ಯಾವ ಪುರುಷನು ರಥದೊಡನೆ ಯುದ್ಧಕ್ಕೆ ಹೋಗುತ್ತಾನೆಯೋ ಅವನು ಧನದೊಡನೆ ಸೇರುತ್ತಾನೆ ಎಂದರೆ ಧನವನ್ನು ಪಡೆದೇ ಪಡೆಯುತ್ತಾನೆ ಎಂದಾಗುತ್ತದೆ. **ರಾಯಾ ಧನೇನ ಸಹ ಯಂ ಸ್ತೋತಾರಂ ಯಷ್ಟಾರಂ ಪ್ರತಿ ಜುನಾಸಿ । ಗಚ್ಛಸಿ । ತಸ್ಮಿನ್ನೇವ ರಥೇ ಸ್ವಂ ಆರೋಹಸಿ ಧನಾನ್ಯಪಿ ತತ್ರೈವಾರೋಪ್ಯ ಗಚ್ಛೇರಿತ್ಯರ್ಥಃ ।** ನೀನು ಯಾವ ರಥದಲ್ಲಿ ಕುಳಿತುಕೊಂಡು ಯಜ್ಞಕರ್ತನಲ್ಲಿ ಹೋಗುತ್ತೀಯೋ ಅದೇ ರಥದಲ್ಲಿ ಅವನಿಗೆ ಧನವನ್ನು ತೆಗೆದುಕೊಂಡು ಹೋಗುತ್ತೀಯೆ ಎಂದು ಅನ್ವಯಮಾಡಿ ಸ್ಕಂದಸ್ವಾಮಿಗಳು ವಿವರಿಸುತ್ತಾರೆ. ಆದರೆ ಮೊದಲನೆಯ ಸಾಯಣರ ಅನ್ವಯವೇ ಈ ಸಂದರ್ಭಕ್ಕೆ ಹೆಚ್ಚು ಹೊಂದಿಕೊಳ್ಳುವಂತೆ ಕಾಣುತ್ತದೆ ಏತಕ್ಕೆಂದರೆ, ಯಾವ ಪುರುಷನನ್ನು ಅಗ್ನಿಯು ಯುದ್ಧಕ್ಕೆ ಪ್ರೇರಿಸಿ ಯುದ್ಧದಲ್ಲಿ ಸಹಾಯವನ್ನು

ಮಾಡುತ್ತಾನೆಯೋ ಅವನು ಯುದ್ಧದಲ್ಲಿ ಜಯಿಸಿ ಅಪಾರವಾದ ಧನಸಂಪತ್ತನ್ನು ಪಡೆಯುತ್ತಾನೆಂದು ಅನೇಕಸಲ ಹೇಳಿರುವುದು ಉದಾಹರಣೆಗೆ—

**ಯಮಗ್ನೇ ಪೃತ್ಸು ಮರ್ತ್ಯಮವಾ ವಾಜೇಷು ಯಂ ಜುನಾಃ । ಸ ಯಂತಾ ಶಶ್ವತೀರಿಷಃ ।**

(ಋ. ಸಂ. ೧-೨೭-೭)

ಎಂಬ ಋಕ್ಕಿನಲ್ಲಿ ಯುದ್ಧದಲ್ಲಿ ಅಗ್ನಿಸಹಾಯವಿದ್ದವನು ಖಂಡಿತವಾಗಿಯೂ ಜಯಿಸಿ ಅಧಿಕವಾದುದೂ ಶಾಶ್ವತವಾದುದೂ ಆದ ಅನ್ನಸಂಪತ್ತನ್ನು ಪಡೆಯುತ್ತಾನೆಂದು ಪ್ರಶಂಸಿಸಿದೆ. ಅದೂ ಅಲ್ಲದೆ **ಜುನಾಃ** ಎಂಬ ಪದಕೆ) **ಪ್ರೇರಯಸಿ** ಎಂದು ಈ ಉದಾಹರಣಾ ಋಕ್ಕಿನಲ್ಲಿಯೂ ಹೊಂದಿಕೊಳ್ಳುವುದರಿಂದ ಸಾಯಣರ ವಿವರಣೆಯಂತೆ ಪ್ರಕೃತವಾದ ಈ ಋಕ್ಕಿನಲ್ಲಿಯೂ **ಜುನಾಸಿ** ಎನ್ನುವುದಕ್ಕೆ **ಪ್ರೇರಯಸಿ** ಎನ್ನುವುದೇ ಸರಿಯಾಗಿ, ಅಗ್ನಿಯು ಯಾವನನ್ನು ಯುದ್ಧದಲ್ಲಿ ಪ್ರೇರಿಸುತ್ತಾನೆಯೋ ಅವನು ಧನವನ್ನು ಪಡೆಯುತ್ತಾನೆ ಎಂದರ್ಥ.

ಅಗ್ನಿಯು ಯಜ್ಞದಲ್ಲಿ ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗೆ ಮನೆಯಲ್ಲಿದ್ದರೂ ಅತ್ಯಧಿಕವಾದ ಅನ್ನವನ್ನು ಒದಗಿಸುತ್ತಾನೆ ಮತ್ತು ಯುದ್ಧದಲ್ಲಿಯೂ ಸಹ ಜಯವನ್ನೂ ಧನವನ್ನೂ ಸಂಪಾದಿಸಿ ಕೊಡುತ್ತಾನೆಂದು ಅಭಿಪ್ರಾಯವು

॥ ವ್ಯಾಕರಣಪ್ರಕ್ರಿಯಾ ॥

**ತುಭ್ಯಮ್**– ಯುಷ್ಮಚ್ಛಬ್ದ ಚತುರ್ಥ್ಯಂತರೂಪ ಸಂಪ್ರದಾನಸೂತ್ರದಲ್ಲಿ **ಕ್ರಿಯಾಗ್ರಹಣಂ ಕರ್ತವ್ಯಂ** ಎಂಬ ವಚನವಿರುವುದರಿಂದ ಇಲ್ಲಿ ಕರ್ಮಕ್ಕೆ ಸಂಪ್ರದಾನ ಸಂಜ್ಞೆ ಬರುವುದರಿಂದ **ಚತುರ್ಥೀ ಸಂಪ್ರದಾನೇ** ಎಂಬುದರಿಂದ ಚತುರ್ಥೀ ವಿಭಕ್ತಿ ಬರುತ್ತದೆ

**ವಿಭಾತಿ**—ಭಾ ದೀಪ್ತೌ ಧಾತು ಲಟ್ ಪ್ರಥಮಪುರುಷ ಏಕವಚನರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಧಾತುಸ್ವರ ಉಳಿಯುತ್ತದೆ.

**ದಾಶಾತ್**— ದಾಶೃ ದಾನೇ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚ ಲೋಪಃಪರ**—ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ಉಶತಃ**—ವಶ ಕಾಂತೌ ಧಾತು. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ ಇದಕ್ಕೆ **ಸಾರ್ವಧಾತುಕಮಪಿತ್** ಸೂತ್ರದಿಂದ ಙಿತ್ವ ಬರುವುದರಿಂದ ಧಾತುವಿಗೆ ಸಂಪ್ರಸಾರಣ ಪೂರ್ವರೂಪ ಬರುತ್ತದೆ. ಷಷ್ಠೀಏಕವಚನರೂಪ ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ ಇದಕ್ಕೆ **ಶತುರನುಮೋ ನದ್ಯಜಾದೀ** (ಪಾ. ಸೂ. ೬-೧-೧೭೩) ಎಂಬುದರಿಂದ ಉದಾತ್ತಸ್ವರ ಬರುವುದಿಲ್ಲ ಇಲ್ಲಿ ಚತುರ್ಥೀ ಅರ್ಥವು ಅಭಿಪ್ರೇತವಾದರೂ **ಚತುರ್ಥ್ಯರ್ಥೇ ಬಹುಲಂ ಛಂದಸಿ** (ಪಾ. ಸೂ ೨-೩-೬೨) ಎಂಬುದರಿಂದ ಷಷ್ಠೀ ಬಂದಿದೆ.

**ಅನು ದ್ಯೂನ್**—ದ್ಯು ಎಂಬುದು ಹಗಲಿಗೆ ಹೆಸರು ಅನು ಎಂಬುದಕ್ಕೆ **ಅನುರ್ಲಕ್ಷಣೇ** (ಪಾ ಸೂ ೧-೪-೮೪) ಎಂಬುದರಿಂದ ಕರ್ಮಪ್ರವಚನೀಯ ಸಂಜ್ಞಾ. ತದ್ಯೋಗ ದ್ಯು ಎಂಬುದಕ್ಕೆ ಇರುವುದರಿಂದ **ಕರ್ಮ-ಪ್ರವಚನೀಯಯುಕ್ತೇ ದ್ವಿತೀಯಾ** (ಪಾ ಸೂ. ೨-೩-೮) ಸೂತ್ರದಿಂದ ದ್ವಿತೀಯಾ ಬರುತ್ತದೆ

**ವರ್ಧೋ—**ವರ್ಧ।ಉ ಎಂದು ಪದಚ್ಛೇದ ವೃಧು ವರ್ಧನೇ ಧಾತು. ಇದಕ್ಕೆ ಣಿಜಂತದ ಮೇಲೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ಪಿಗೆ ಹಿ ಆದೇಶ. **ಛಂದಸ್ಯುಭಯಥಾ** ಎಂಬುದರಿಂದ ವಿಕರಣವಾಗಿ ಬಂದ ಶಪ್ಪಿಗೆ ಆರ್ಧಧಾತುಕಸಂಜ್ಞೆ ಇರುವುದರಿಂದ **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಣಿಚ್ಚಿಗೆ ಲೋಪ. ಧಾತುವಿನ ಲಘೂಪಧೆಗೆ ಗುಣ **ಅತೋಃ ಹೇಃ** ಎಂಬುದರಿಂದ ಹಿಗೆ ಲುಕ್ ಇಲ್ಲಿ ಶಪ್ ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ ವರ್ಧ+ಉ ಎಂದಿರುವಾಗ **ಆದ್ಗುಣಃ** ಸೂತ್ರದಿಂದ ಏಕಾದೇಶ ಬಂದಮೇಲೆ **ಉಞಃ** (ಪಾ ಸೂ ೧-೧-೧೭) ಎಂಬುದರಿಂದ ಅದಕ್ಕೆ ಪ್ರಗೃಹ್ಯ ಸಂಜ್ಞಾ ಬರುತ್ತದೆ ಆದುದರಿಂದ ವರ್ಧೋ ಎಂಬುದಕ್ಕೆ ಅಗ್ನೇ ಎಂಬಲ್ಲಿರುವ ಅಕಾರ ಪರವಾದರೂ ಅವಾದೇಶ ಬರುವುದಿಲ್ಲ **ಪ್ಲುತಪ್ರಗೃಹ್ಯಾ ಅಚಿ ನಿತ್ಯಮ್** (ಪಾ ಸೂ ೬-೧-೧೨೫) ಎಂಬುದರಿಂದ ಪ್ರಕೃತಿಭಾವ ಸಂಧಿಬರುತ್ತದೆ

**ಯಾಸತ್—**ಯಾ ಪ್ರಾಪಣೇ ಧಾತು ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚ ಲೋಪಃ ಪರ**— ಎಂಬುದರಿಂದ ಇಕಾರಲೋಪ **ಸಿಬ್ಬಹುಲಂ ಲೇಟಿ** (ಪಾ. ಸೂ ೩-೧-೩೪) ಎಂಬುದರಿಂದ ಸಿಪ್ **ಲೇಟೋಽಡಾಟೌ** ಎಂಬುದರಿಂದ ಅಡಾಗಮ ಯಾಸತ್ ಎಂದು ರೂಪವಾಗುತ್ತದೆ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಧಾತುಸ್ವರ ಉಳಿಯುತ್ತದೆ

**ರಾಯಾ**—ರೈ ಶಬ್ದ. ತೃತೀಯಾ ಏಕವಚನಾಂತರೂಪ. **ಊಡಿದಂಪದಾದಿ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದ.

**ಜುನಾಸಿ**—ಜು ಎಂಬ ಧಾತುವು ಸೂತ್ರನಿರ್ದಿಷ್ಟವಾಗಿ ಗತ್ಯರ್ಥದಲ್ಲಿದೆ ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಕರ್ತರಿ ಶಪ್** ಎಂಬುದರಿಂದ ಶಪ್ ಪ್ರಾಪ್ತವಾದರೆ **ವ್ಯತ್ಯಯೋ ಬಹುಲಂ** ಎಂಬುದರಿಂದ ಶ್ನಾ ವಿಕರಣ ಬರುತ್ತದೆ **ಸಾರ್ವಧಾತುಕಮಪಿತ್** ಎಂಬುದರಿಂದ ವಿಕರಣಕ್ಕೆ ಙಿತ್ವ ಬರುವುದರಿಂದ ತನ್ನಿಮಿತ್ತವಾಗಿ ಧಾತುವಿಗೆ ಗುಣ ಬರುವುದಿಲ್ಲ ಯಮ್ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಆಗ ವಿಕರಣಸ್ವರ ಉಳಿಯುತ್ತದೆ ॥ ೬ ॥



॥ ಸಂಹಿತಾಪಾಠಃ ॥

ಅಗ್ನಿಂ ವಿಶ್ವಾ ಅಭಿ ಪೃಕ್ಷಃ ಸಚಂತೇ ಸಮುದ್ರಂ ನ ಸ್ರವತಃ ಸಪ್ತ ಯಹ್ವೀಃ ।

ನ ಜಾಮಿಭಿರ್ವಿ ಚಿಕಿತೇ ವಯೋ ನೋ ವಿದಾ ದೇವೇಷು ಪ್ರಮತಿಂ ಚಿಕಿತ್ವಾನ್ ॥ ೭ ॥

॥ ಪದಪಾಠಃ ॥

ಅಗ್ನಿಂ । ವಿಶ್ವಾಃ । ಅಭಿ । ಪೃಕ್ಷಃ । ಸಚಂತೇ । ಸಮುದ್ರಂ । ನ । ಸ್ರವತಃ । ಸಪ್ತ । ಯಹ್ವೀಃ ।

ನ । ಜಾಮಿಽಭಿಃ । ವಿ । ಚಿಕಿತೇ । ವಯಃ । ನಃ । ವಿದಾಃ । ದೇವೇಷು । ಪ್ರಽಮತಿಂ । ಚಿಕಿತ್ವಾನ್ ॥ ೭ ॥

॥ ಸಾಯಣಭಾಷ್ಯಂ ॥

ವಿಶ್ವಾಃ ಪೃಕ್ಷಶ್ಚರುಪುರೋಡಾಶಾದೀನಿ ಸರ್ವಾಣ್ಯನ್ನಾನ್ಯಗ್ನಿಮಂಗನಾದಿಗುಣಯುಕ್ತಮೇನಮಭಿ ಸಚಂತೇ । ಆಭಿಮುಖ್ಯೇನ ಸಮವಯಂತಿ । ಪ್ರಾಪ್ನುವಂತಿ । ತತ್ರ ದೃಷ್ಟಾಂತಃ । ಸ್ರವಂತಃ ಸಮುದ್ರಂ ನ । ಯಥಾ ಸ್ರವಂತ್ಯೋ ನದ್ಯಃ ಸಮುದ್ರಮಭಿಗಚ್ಛಂತಿ ತದ್ವತ್ । ಕೀದೃಶ್ಯೋ ನದ್ಯಃ । ಸಪ್ತ ಸಪ್ತ-ಸಂಖ್ಯಾಕಾಃ । ಇಮಂ ಮೇ ಗಂಗ ಇತ್ಯಸ್ಯಾಮೃಚಿ ಸಪ್ತ ಹಿ ನದ್ಯಃ ಪ್ರಾಧಾನ್ಯೇನ ಶ್ರೂಯಂತೇ । ಯಹ್ವೀಃ । ಮಹನ್ನಾಮೈತತ್ । ಮಹತ್ಯಃ । ಜಮಂತ್ಯೇಕಸ್ಮಿನ್ಪಾತ್ರೇ ಸಹ ಭುಂಜತ ಇತಿ ಜಾಮಯೋ ಜ್ಞಾತಯಃ । ತೈರ್ನೋಽಸ್ಮದೀಯಂ ವಯೋಽನ್ನಂ ನ ವಿ ಚಿಕಿತೇ । ನ ಜ್ಞಾಯತೇ । ತೇಭ್ಯೋ ದಾತುಮಸ್ಮಾಕಮನ್ನಂ ಪ್ರಭೂತಂ ನಾಸ್ತೀತಿ ಭಾವಃ । ಅತೋ ಹೇ ಅಗ್ನೇ ತ್ವಂ ದೇವೇಷು । ದೀವ್ಯಂ-ತೀತಿ ದೇವಾ ಧನಪತಯಃ । ತೇಷು ಪ್ರಮತಿಂ ಪ್ರಕರ್ಷೇಣ ಮನನೀಯಂ ಧನಂ ಚಿಕಿತ್ವಾನವಗಚ್ಛನ್ವಿದಾಃ । ಅಸ್ಮಭ್ಯಂ ಲಂಭಯ । ಯದ್ವಾ । ಪ್ರಮತಿಂ ಪ್ರಕೃಷ್ಟಂ ಸ್ತೋತ್ರಂ ದೇವೇಷು ವಿದಾಃ । ವೇದಯ ।

ಜ್ಞಾಪಯ ॥ ಪೃಕ್ಷಃ । ಅನ್ನನಾಮೈತತ್ । ಪೃಚೀ ಸಂಪರ್ಕೇ ಇತ್ಯಸ್ಮಾದ್ಔಣಾದಿಕಃ ಕರ್ಮಣಿ ಕ್ವಿಪ್ ಧಾತೋಃ ಷುಗಾಗಮಶ್ಚ । ಯದ್ವಾ । ಅಸುನಿ ಸುಪಾಂ ಸುಲುಗಿತಿ ಜಸೋ ಲುಕ್ । ಸ್ರವತಃ । ಸ್ರು ಗತೌ । ಸ್ರವಣಂ ಸ್ರವಃ । ತತ್ಕುರ್ವಂತಿ । ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಕ್ತವ್ಯ ಇತಿ ಕ್ವಿಪ್ । ಏತದಂತಾದ್ಧಾತೋಃ ಕ್ವಿಪ್ಚೇತಿ ಕ್ವಿಪ್ । ಹ್ರಸ್ವಸ್ಯ ಪಿತೀತಿ ತುಕ್ । ಕ್ವಿಬಂತಾದ್ಧಾತೋಃ ಸತಿ ಶಿಷ್ಟತ್ವಾದ್ಧಾತುಸ್ವರೇಣಾಂತೋದಾತ್ತತ್ವಂ । ಯಹ್ವೀಃ । ಪಿಪ್ಪಲ್ಯಾದಿಭ್ಯಶ್ಚೇತಿ ಗೌರಾದಿಷು ಪಠಿತತ್ವಾತ್ತಸ್ಯ ಚಾಕೃತಿಗಣತ್ವಾದತ್ರಾಪಿ ಙೀಷ್ । ಪಾ. ೪-೧-೪೧ । ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ । ಚಿಕಿತೇ । ಛಾಂದಸೋ ವರ್ತಮಾನೇ ಕರ್ಮಣಿ ಲಿಟ್ । ವಿದಾಃ । ವಿದ್ಲೃ ಲಾಭೇ । ಅಂತರ್ಭಾವಿತಣ್ಯರ್ಥಾಲ್ಲೇಟ್ಯಾಡಾಗಮಃ ತುದಾದಿತ್ವಾಚ್ಛಃ । ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ । ವಿಕರಣಸ್ವರಃ ಶಿಷ್ಯತೇ । ಯದ್ವಾ । ವಿದೇರ್ಜ್ಞಾನಾರ್ಥಸ್ಯ ಲೇಟಿ ವ್ಯತ್ಯಯೇನ ಶಃ ॥

॥ ಪ್ರತಿಪದಾರ್ಥ ॥

**ವಿಶ್ವಾಃ ಪೃಕ್ಷಃ**—ಎಲ್ಲಾ (ಪುರೋಡಾಶಾದಿ) ಅನ್ನಗಳೂ । **ಸಪ್ತ**—ಸಪ್ತಸಂಖ್ಯಾಕಗಳಾದ । **ಯಹ್ವೀಃ**—ಮಹಾತ್ಮೆಯುಳ್ಳ । **ಸ್ರವತಃ**—ನದಿಗಳು । **ಸಮುದ್ರಂ ನ**—ಸಮುದ್ರವನ್ನು ಹೇಗೋ ಹಾಗೆ । **ಅಗ್ನಿಂ**—ಅಗ್ನಿಯನ್ನು । **ಅಭಿ ಸಚಂತೇ**—ಪ್ರಾಪ್ತವಾಗುತ್ತವೆ । **ಜಾಮಿಭಿಃ**—ಜ್ಞಾತಿಗಳೊಡನೆ । **ನಃ**—ನಮ್ಮ । **ವಯಃ**—ಅನ್ನವು । **ನ ವಿ ಚಿಕಿತೇ**—ತಿಳಿಯುವುದಿಲ್ಲ (ಆದುದರಿಂದ ಅಗ್ನಿಯೇ) । **ದೇವೇಷು**—ಧನಾಧಿಪತಿಗಳಾದ ದೇವತೆಗಳಲ್ಲಿ । **ಪ್ರಮತಿಂ**—ವಿಶೇಷವಾಗಿ ಅಪೇಕ್ಷ್ಯವಾದ ಧನವನ್ನು (ಉತ್ತಮವಾದ ಸ್ತುತಿಯನ್ನು) । **ಚಿಕಿತ್ವಾನ್**—ತಿಳಿದ (ನೀನು) । **ವಿದಾಃ**—(ನಮಗೆ) ದೊರಕಿಸು (ದೇವತೆಗಳಿಗೆ ತಿಳಿಸು)

॥ ಭಾವಾರ್ಥ ॥

ಪುರೋಡಾಶಾದಿ ಎಲ್ಲಾ ಹವಿರ್ದ್ರವ್ಯಗಳೂ, ಏಳು ಉತ್ತಮ ನದಿಗಳು ಸಮುದ್ರವನ್ನೇ ಸೇರುವಂತೆ, ಅಗ್ನಿಯನ್ನು ಸೇರುತ್ತವೆ. ನಮ್ಮ ಜ್ಞಾತಿಗಳು ನಮ್ಮ ಅನ್ನವನ್ನು ಸ್ವೀಕರಿಸಿಲ್ಲ. ಆದುದರಿಂದ, ಸರ್ವಜ್ಞನಾದ ಎಲೈ ಅಗ್ನಿಯೇ, ನೀನು, ನಮ್ಮ ಅಭಿಲಾಷೆಯನ್ನೂ, ಸ್ತುತಿಗಳನ್ನೂ, ದೇವತೆಗಳಿಗೆ ತಿಳಿಸು

English Translation.

All (sacrificial) viands concentrate in Agni, as the seven great rivers flow into the ocean . our food is not partaken of by our kinsmen, therefore do you, who know (all things), make our desires known to the Gods

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಚರುಪುರೋಡಾಶಾದಿಗಳನ್ನು ಮಹಾನದಿಗಳಿಗೂ, ಅಗ್ನಿಯನ್ನು ಸಮುದ್ರಕ್ಕೂ ಹೋಲಿಸಿವ ಸಪ್ತಮಹಾನದಿಗಳು ತಮ್ಮ ಏಕಮಾತ್ರ ಪತಿಯಾದ ಸಮುದ್ರರಾಜನಲ್ಲಿಗೇ ಹೋಗಿ ಸೇರುವಂತೆ ಚರುಪುರೋಡಾಶಾದಿ

ಗಳೂ ಸಹ ತಮ್ಮ ಏಕಮಾತ್ರ ಪ್ರಭುವಾದ ಅಗ್ನಿಯನ್ನು ಸೇರುತ್ತವೆ. ಇವುಗಳ ಸತ್ತ್ವವೆಲ್ಲವೂ ಅಗ್ನಿಯ ಮೂಲಕ ದೇವತೆಗಳಿಗೆ ವಿಭಕ್ತವಾಗಿ ತತ್ಪ್ರತಿಫಲವಾಗಿ ಯಜಮಾನನಿಗೆ ಬೇಕಾದುದೂ ಅವನನ್ನೂ ಅವನ ಬಂಧುವರ್ಗದವರನ್ನೂ ಪುಷ್ಕಲವಾದ ಜೀವನದಿಂದ ಬೆಳೆಸುವುದೂ ಆದ ಅನ್ನವನ್ನು ಒದಗಿಸಬೇಕೆಂದು ಅಗ್ನಿಯನ್ನು ಪ್ರಾರ್ಥಿಸಿದೆ.

**ಪೃಕ್ಷಃ**—೨೮ ಅನ್ನನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೯) **ಪೃಕ್ಷ** ಶಬ್ದಕ್ಕೆ ಅನ್ನವೆಂದು ಅರ್ಥ ಇಲ್ಲಿ ಚರುಪುರೋಡಾಶಾದ್ಯನ್ನಗಳೆಂದು ಅಭಿಪ್ರಾಯ.

**ಯಹ್ವೀಃ—ಯಹ್ವ ಇತಿ ಮಹತೋ ನಾಮಧೇಯಂ** (ನಿ. ೮-೮) ದೊಡ್ಡದು, ಪೂಜ್ಯವಾದುದು. ಇತ್ಯಾದ್ಯರ್ಥದಲ್ಲಿ **ಯಹ್ವೀಃ** ಎಂಬ ಪದದ ಪ್ರಯೋಗವಿವೆ. ಉದಾಹರಣೆಗೆ—

**ತ್ವಂ ದೇವಾನಾಮಸಿ ಯಹ್ವ ಹೋತಾ ಸ ಏನಾನ್ಯಕ್ಷೀಷಿತೋ ಯಜೀಯಾನ್ ।**

(ಋ ಸಂ ೧೦-೧೧೦-೩)

ಈ ಸೂಕ್ತವನ್ನು ನಿರುಕ್ತಕಾರರು ಉದಹರಿಸಿ **ಯಹ್ವ** ಪದಕ್ಕೆ ಮೇಲೆ ವಿವರಿಸಿದಂತೆ ಅರ್ಥವನ್ನು ಮಾಡುತ್ತಾರೆ ಇಲ್ಲಿಯೂ ಸಹ **ಯಹ್ವೀಃ** ಎಂಬುದು **ಸಪ್ತ** ನದಿಗಳಿಗೆ ವಿಶೇಷಣವಾದುದರಿಂವ **ಮಹತ್ತಾದ** ಅಥವಾ **ಪೂಜ್ಯವಾದ** ಎಂದರ್ಥ

ಇಂತಹ **ಯಹ್ವೀಃ ಸಪ್ತ ಸ್ರವತಃ**—ಏಳು ಮಹಾನದಿಗಳು. ಋಕ್ಸಂಹಿತೆಯಲ್ಲಿಯೇ—

**ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ ।**
**ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥**

(ಋ ಸಂ. ೧೦-೭೫-೫)

ಎಂಬ ಋಕ್ಕಿನಲ್ಲಿ ವಿವರಿಸಿರುವಂತೆ ಸಪ್ತ ಮಹಾನದಿಗಳು, ಗಂಗಾ, ಯಮುನಾ, ಸರಸ್ವತೀ, ಶುತುದ್ರೀ, ಪರುಷ್ಣೀ, ಮರುದ್ವೃಧಾ, ಋಜೀಕೀ ಎಂಬ ನಾಮಧೇಯವುಳ್ಳವು. ಈ ಮಹಾನದಿಗಳು ಸಮುದ್ರರಾಜನನ್ನು ಸೇರುವಂತೆ ಹವಿಸ್ಸುಗಳೆಲ್ಲವೂ ಅಗ್ನಿಯನ್ನು ಸೇರುತ್ತವೆ. ಅಗ್ನಿಯು ಸಕಲ ಹವಿಸ್ಸುಗಳಿಗೂ ಪ್ರಭುವಾಗಿ,

**ಅಗ್ನಿರೀಶೇ ಬೃಹತೋ ಅಧ್ವರಸ್ಯಾಗ್ನಿರ್ವಿಶ್ವಸ್ಯ ಹವಿಷಃ ಕೃತಸ್ಯ ।**

(ಋ. ಸಂ ೭-೧೧-೪)

ಎಂಬ ಋಕ್ಕಿನಲ್ಲಿ ವರ್ಣಿತವಾದಂತೆ **ವಿಶ್ವಸ್ಯ ಹವಿಷಃ** ಸಕಲ ಹವಿಸ್ಸುಗಳಿಗೂ ಒಡೆಯ ನಾದುದರಿಂವ ಎಲ್ಲಾ ಹವಿಸ್ಸುಗಳೂ ಅಗ್ನಿಯನ್ನೇ ಸೇರುತ್ತವೆ. ಇಲ್ಲಿ ಉಪಮಾನವು ಅತ್ಯಂತ ಉಚಿತವಾಗಿಯೂ ಶುದ್ಧವಾಗಿಯೂ ಇದೆ

**ಜಾಮಿಭಿಃ—ಜಮಂತಿ ಏಕಸ್ಮಿನ್ ಪಾತ್ರೇ ಸಹ ಭುಂಜತೇ ಇತಿ ಜಾಮಯಃ ಜ್ಞಾತಯಃ ।** ಎಲ್ಲರೂ ಒಟ್ಟಿಗೆ ಕುಳಿತುಕೊಂಡು ಭೋಜನವನ್ನು ಮಾಡುವುದರಿಂದ ಜ್ಞಾತಿಗಳಿಗೂ ಬಂಧುಗಳಿಗೂ **ಜಾಮಯಃ**ಎಂಬ ಹೆಸರು ಬಂದಿದೆ. **ಜಾಮಿಭಿಃ** ಎಂದರೆ ನಮ್ಮ ಬಂಧುಗಳೊಡನೆ ಎಂದರ್ಥ.

**ಜಾಮಿ**—ಶಬ್ದವು ಪ್ರಥಮತಃ ಸಹೋದರಿಯೆನ್ನುವುದಕ್ಕೆ ಪರ್ಯಾಯವಾಗಿದ್ದು ಅನಂತರ ಅದರ ಅರ್ಥವು ಕೊಂಚ ವಿಸ್ತಾರವಾಗಿ **ಬಂಧು** ಎಂಬ ಸಾಧಾರಣವಾದ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ನಿರುಕ್ತಕಾರರು ಋಕ್ಸಂಹಿತೆಯು—

**ನ ಜಾಮಯೇ ತಾನ್ವೋ ರಿಕ್ಥಮಾರೈಕ್ಚಕಾರ ಗರ್ಭಂ ಸನಿತುರ್ನಿಧಾನಂ ।**

(ಋ ಸಂ ೩-೩೧-೨).

ಎಂಬ ಋಕ್ಕನ್ನು ಉದಹರಿಸಿ **ಜಾಮಯೇ ಭಗಿನ್ಯೈ ।** ಸಹೋದರಿಗೆ ಎಂದು **ಜಾಮಿ** ಶಬ್ದಕ್ಕೆ ಸಹೋದರಿಯೆಂಬ ಅರ್ಥವು ಹೇಗೆ ಸಾಧ್ಯ ಎನ್ನುವುದನ್ನು ವಿವರಿಸುತ್ತಾ **ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ । ಜಮತೇರ್ವಾ ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ ।** ಇತರನು ಇವಳಲ್ಲಿ ಪುತ್ರನು ಜನಿಸುವಂತೆ ಮಾಡುತ್ತಾನೆ ಆದುದರಿಂದ **ಸಂತತಿ** ಎಂಬರ್ಥವನ್ನು ಕೊಡುವ **ಜಾ** ಎಂಬ ಮೂಲದಿಂದಲಾಗಲಿ ಅಥವಾ, ಗಂಡನ ಮನೆಗೆ ಹೊರಟುಹೋಗುವಳಾದ್ದರಿಂದ **ಗತಿಕರ್ಮಾರ್ಥ**ವನ್ನು ಕೊಡುವ **ಜಮ್** ಎಂಬ ಧಾತುವಿನಿಂದಲಾಗಲಿ ನಿಷ್ಪನ್ನವಾಗಿದೆಯೆಂದು ತಿಳಿಸಿ ಸಹೋದರಿಗೆ ಎಂದು ವಿವರಿಸುತ್ತಾರೆ (ನಿ ೩-೬) ಈ ಅರ್ಥವು ಸಂದರ್ಭಕ್ಕೆ ಸರಿಯಾಗಿ ಹೊಂದಿಕೊಂಡಿದೆ. ಇದೂ ಅಲ್ಲದೆ,

**ಭಗಸ್ಯ ಸ್ವಸಾ ವರುಣಸ್ಯ ಜಾಮಿರುಷಃ ಸೂನೃತೇ ಪ್ರಥಮಾ ಜರಸ್ವ ।**

(ಋ. ಸಂ ೧-೧೨೩-೫)

ಎಂಬ ಋಕ್ಕಿನಲ್ಲಿ ಉಪಯೋಗಿಸುವ **ಜಾಮಿ** ಶಬ್ದಕ್ಕೂ ಸಹೋದರಿಯೆಂದೇ ಅರ್ಥ ಕ್ರಮೇಣ ಈ ಪದಕ್ಕೆ ಬರೀ ಸಹೋದರಿಯೆಂದೇ ಆಗದೇ **ಬಂಧುಗಳು** ಎಂಬ ವಿಸ್ತಾರವಾದ ಅರ್ಥವಾಗುತ್ತದೆ. ಋಕ್ಸಂಹಿತೆಯ ೧-೬೫-೪, ೧-೭೫-೩, ೧-೧೦೦-೧ ಇತ್ಯಾದಿ ಅನೇಕ ಋಕ್ಕುಗಳಲ್ಲಿ **ಬಂಧು** ಎಂಬ ಸಾಮಾನ್ಯವಾದ ಅರ್ಥವಾಗುತ್ತದೆ.

ಇಷ್ಟೇ ಅಲ್ಲದೇ, ಸೋಮಯಾಗದ ಸಂದರ್ಭದಲ್ಲಿ ಕೈಬೆರಳುಗಳ ಪರಿಚರಣಕಾರ್ಯವು ಅತ್ಯವಶ್ಯವಾಗಿ ಬೇಕಾದುದರಿಂದ ಆ ಬೆರಳುಗಳ ಸೇವಾಕಾರ್ಯವನ್ನು ವರ್ಣಿಸುವಾಗ ಅವಕ್ಕೆ ಪರ್ಯಾಯವಾಗಿ **ಜಾಮಿ** ಶಬ್ದದ ಪ್ರಯೋಗವಿದೆ. ಉದಾಹರಣೆಗೆ—

**ಏಷ ವೃಷಾ ಕನಿಕ್ರದದ್ದಶಭಿರ್ಜಾಮಿಭಿರ್ಯತಃ ।**

(ಋ ಸಂ ೯-೨೮-೪).

**ಅಂಶುರ್ಯೇನ ಪಿಪಿಶೇ ಯತೋ ನೃಭಿಃ ಸಂ ಜಾಮಿಭಿರ್ನಸತೇ ರಕ್ಷತೇ ಶಿರಃ ।**

(ಋ ಸಂ. ೯-೬೮-೪)

ಎಂಬ ಋಕ್ಕುಗಳಲ್ಲಿ **ಜಾಮಿಭಿಃ** ಎಂದರೆ ಬಂಧುಗಳಂತೆ ಅನ್ಯೋನ್ಯವಾಗಿ ಸೇರಿಕೊಂಡು ಯಾಗಕ್ರಿಯೆಗಳನ್ನು ನೆರವೇರಿಸುವ **ಕೈಬೆರಳುಗಳು** ಎಂದರ್ಥವಾಗುತ್ತದೆ ಇಲ್ಲಿಯೂ ಬಾಂಧವ್ಯವನ್ನೇ ಸೂಚಿಸುತ್ತದೆ

ಪ್ರಕೃತವಾದ ೧-೭೧-೭ ನೇ ಋಕ್ಕಿನಲ್ಲಿ **ಜಾಮಿಭಿಃ** ಎಂದರೆ ಬಂಧುಗಳೊಡನೆ ಎಂದರ್ಥ. ನಮ್ಮ ಬಂಧುಗಳೊಡನೆ ಕೂಡಿಕೊಂಡು ಭೋಜನಮಾಡಲು ಅನ್ನವನ್ನು ಕೊಡು ಎಂದು ಅಗ್ನಿಯನ್ನು ಪ್ರಾರ್ಥಿಸಿದೆ. ಅಗ್ನಿಯು **ಜಾತವೇದಸ್ಸಾದ್ದರಿಂದಲೂ ದೇವದೂತ**ನಾದ್ದರಿಂದಲೂ ದೇವತೆಗಳಿಗೆಲ್ಲಾ ಮಿತ್ರನಾದ್ದರಿಂದಲೂ ದೇವತೆಗಳಿಂದ ಮಾನವರಿಗೆ ಲಭಿಸಬೇಕಾದ ಸಕಲ ಧನಸಂಪತ್ತನ್ನೂ ಯಜಮಾನರಿಗೆ ತಂದೊಗಿಸಬೇಕೆಂದು ಪ್ರಾರ್ಥಿತನಾಗಿದ್ದಾನೆ

॥ ವ್ಯಾಕರಣಪ್ರಕ್ರಿಯಾ ॥

**ಪೃಕ್ಷಃ**—ಪೃಕ್ಷ ಎಂಬುದು ಅನ್ನದ ಹೆಸರು. ಪೃಚೀ ಸಂಪರ್ಕೇ ಧಾತು ಇದಕ್ಕೆ ಔಣಾದಿಕವಾದ ಕ್ವಿಪ್ ಪ್ರತ್ಯಯವು ಕರ್ಮಣಿಯಲ್ಲಿ ಬರುತ್ತದೆ; **ತತ್ಸಂನಿಯೋಗದಿಂದ** ಧಾತುವಿಗೆ ಸುಕಾಗಮ. ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. **ಚೋಃಕುಃ** ಎಂಬುದರಿಂದ ಧಾತುವಿನ ಚಕಾರಕ್ಕೆ ಕಕಾರಾದೇಶ. ಕಕಾರ ಷಕಾರಯೋಗದಿಂದ ಕ್ಷಕಾರವಾಗುತ್ತದೆ ಅಥವಾ ಸರ್ವಧಾತುನಿಬಂಧನವಾಗಿ ಬರುವ ಅಸುನ್ ಪ್ರತ್ಯಯ ಪ್ರಥಮಾ ಬಹುವಚನಕ್ಕೆ **ಸುಪಾಂ ಸುಲುಕ್** ಎಂಬುದರಿಂದ ಲುಕ್.

**ಸಚಂತೇ**--ಷಚ ಸಮವಾಯೇ ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಸಕಾರಾದೇಶ ಲಟ್ ಪ್ರಥಮಪುರುಷ ಬಹುವಚನರೂಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸ್ರವತಃ**—ಸ್ರು ಗತೌ ಧಾತು. ಸ್ರವಣಂ ಸ್ರವಃ ತತ್ ಕುರ್ವಂತಿ ಎಂದು ಅರ್ಥವಿವಕ್ಷಾ ಮಾಡಿದಾಗ **ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಕ್ತವ್ಯಃ** ಎಂಬುದರಿಂದ ಕ್ವಿಪ್. ಕ್ವಿಪಿನಲ್ಲಿ ಸರ್ವಲೋಪವಾಗುತ್ತದೆ **ಸನಾದ್ಯಂತಾಧಾತವಃ** ಎಂಬುದರಿಂದ ಸ್ರವ ಎಂಬುದಕ್ಕೆ ಧಾತುಸಂಜ್ಞಾ ಈ ಧಾತುವಿಗೆ **ಕ್ವಿಪ್ ಚ** (ಪಾ ಸೂ ೩-೨-೭೬) ಎಂಬುದರಿಂದ ಕ್ವಿಪ್ ಕೃತ್ ಪ್ರತ್ಯಯ ಪಿತ್ ಪ್ರತ್ಯಯ ಪರದಲ್ಲಿರುವುದರಿಂದ **ಹ್ರಸ್ವಸ್ಯ ಪಿತಿಕೃತಿ ತುಕ್** ಎಂಬುದರಿಂದ ಪೂರ್ವಕ್ಕೆ ತುಕಾಗಮ ಸ್ರವತ್ ಎಂದು ರೂಪವಾಗುತ್ತದೆ. ಕ್ವಿಬಂತಧಾತುವು ಸತಿಶಿಷ್ಟವಾಗುವುದರಿಂದ **ಧಾತೋಃ** (ಪಾ ಸೂ ೬-೧-೧೬೨) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ ಪ್ರಥಮಾ ಬಹುವಚನಾಂತರೂಪ.

**ಯಹ್ವೀಃ—ಪಿಪ್ಪಲ್ಯಾದಿಭ್ಯಶ್ಚ** (ಪಾ. ಸೂ. ೪-೧-೪೧) **(ಗಣಸೂತ್ರ)** ಎಂಬುದು ಗೌರಾದಿಯಲ್ಲಿ ಪಠಿತವಾಗಿದೆ ಇದು ಆಕೃತಿಗಣವಾಗಿರುವುದರಿಂದ ಈ ಶಬ್ದವು ಅಲ್ಲಿ ಸೇರಿದೆಯೆಂದು ಙೀಷ್ ಬರುತ್ತದೆ ಯಹ್ವೀ+ಜಸ್ ಎಂದಿರುವಾಗ **ವಾ ಛಂದಸಿ** ಎಂಬುದರಿಂದ ಪೂರ್ವಸವರ್ಣ ದೀರ್ಘ ಸಕಾರಕ್ಕೆ ರುತ್ವ ವಿಸರ್ಗ

**ಚಿಕಿತೇ**—ಕಿತ ಜ್ಞಾನೇ ಧಾತು. ವರ್ತಮಾನಾರ್ಥವಿವಕ್ಷಾ ಮಾಡಿದಾಗ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಕರ್ಮಣಿಯಲ್ಲಿ ಲಿಟ್. **ಲಿಟಸ್ತಝಯೋರೇಶಿರೇಚ್** ಎಂಬುದರಿಂದ ತ ಪ್ರತ್ಯಯಕ್ಕೆ ಇರೇಚ್ ಆದೇಶ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ **ಕುಹೋಶ್ಚುಃ** ಸೂತ್ರದಿಂದ ಚುತ್ವ. ಪ್ರತ್ಯಯಕ್ಕೆ ಕಿದ್ವದ್ಭಾವವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ವಿದಾಃ**—ವಿದ್ಲೃ ಲಾಭೇ ಧಾತು. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿನ ಮೇಲೆ ಲೇಟ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ **ಇತಶ್ಚಲೋಪಃ ಪರಸ್ಮೈಪದೇಷು** ಎಂಬುದರಿಂದ ಇಕಾರ ಲೋಪ. **ಲೇಟೋಽಡಾಟೌ** ಸೂತ್ರದಿಂದ ಅದಕ್ಕೆ ಅಡಾಗಮ ತುದಾದಿ ಪಠಿತವಾದುದ ರಿಂದ **ತುದಾದಿಭ್ಯಃ ಶಃ** (ಪಾ ಸೂ. ೩-೧-೭೭) ಎಂಬುದರಿಂದ ಶ ವಿಕರಣ. ಇದು **ಸಾರ್ವಧಾತುಕಮಪಿತ್** ಸೂತ್ರದಿಂದ ಙಿತ್ವವನ್ನು ಹೊಂದುವುದರಿಂದ ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. **ಆಗಮಶಾಸ್ತ್ರಮನಿತ್ಯಮ್** ಎಂಬುದರಿಂದ **ಶೇಮುಚಾದೀನಾಮ್** (ಪಾ ಸೂ ೭-೧-೫೯) ಎಂಬುದರಿಂದ ಬರಬೇಕಾದ ನುಮಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ವಿಕರಣಸ್ವರ ಉಳಿಯುತ್ತದೆ ಅಥವಾ ವಿದ ಜ್ಞಾನೇ ಧಾತು ಅದಾದಿ ಲೇಟ್ ಮಧ್ಯಮಪುರುಷದ ರೂಪ. **ವ್ಯತ್ಯಯೋ ಬಹುಲಂ** ಎಂಬುದರಿಂದ ಶಪ್ಪಿಗೆ ಲುಕ್ ಬಾರದೆ ಶ ವಿಕರಣಬರುತ್ತದೆ ॥ ೭ ॥



॥ ಸಂಹಿತಾಪಾಠಃ ॥

ಆ ಯದಿಷೇ ನೃಪತಿಂ ತೇಜ ಆನಟ್ಛುಚಿ ರೇತೋ ನಿಷಿಕ್ತಂ ದ್ಯೌರಭೀಕೇ ।
ಅಗ್ನಿಃ ಶರ್ಧಮನವದ್ಯಂ ಯುವಾನಂ ಸ್ವಾಧ್ಯಂ ಜನಯತ್ಸೂದಯಚ್ಚ ॥ ೮ ॥

॥ ಪದಪಾಠಃ ॥

**ಆ । ಯತ್ । ಇಷೇ । ನೃಽಪತಿಂ । ತೇಜಃ । ಆನಟ್ । ಶುಚಿ । ರೇತಃ । ನಿಽಸಿಕ್ತಂ । ದ್ಯೌಃ । ಅಭೀಕೇ ।**
**ಅಗ್ನಿಃ । ಶರ್ಧಂ । ಅನವದ್ಯಂ । ಯುವಾನಂ । ಸುಽಆಧ್ಯಂ । ಜನಯತ್ । ಸೂದಯತ್ । ಚ ॥ ೮ ॥**

॥ ಸಾಯಣಭಾಷ್ಯಂ ॥

ಅಗ್ನೇರ್ಯತ್ತೇಜೋ ನೃಪತಿಂ ನೄಣಾಮೃತ್ವಿಜಾಂ ಪಾಲಕಂ ಯಜಮಾನಮಾನಟ್ ಜಾಠರರೂಪೇಣ ಆ ಸಮಂತಾದ್ವ್ಯಾಪ್ನೋತ್ । ಕಿಮರ್ಥಂ । ಇಷ ಅನ್ನಾಯ । ಕೀದೃಶಂ । ಶುಚಿ ಶುದ್ಧಂ ದ್ಯೌರ್ದೀಪ್ತಂ । ತೇನ ತೇಜಸಾ ಪರಿಪಕ್ವಮನ್ನಂ ರಸರೂಪಂ ರೇತೋ ವೀರ್ಯಮಭೀಕೇಽಭ್ಯಕ್ತೇಽಭಿಗತೇಽಭಿಪ್ರಾಪ್ತೇ ಗರ್ಭಸ್ಥಾನೇ ನಿಷಿಕ್ತಂ ನಿತರಾಂ ಸಿಕ್ತಮಗ್ನಿರ್ವಕ್ಷ್ಯಮಾಣಗುಣವಿಶಿಷ್ಟಪುತ್ರರೂಪೇಣ ಜನಯತ್ । ಜನಯತು । ಶರ್ಧಂ ಬಲವಂತಮನವದ್ಯಮವದ್ಯರಹಿತಂ ಯುವಾನಂ ತರುಣಂ । ಜರಾರಹಿತಮಿತ್ಯರ್ಥಃ । ಸ್ವಾಧ್ಯಂ ಶೋಭನಕರ್ಮಾಣಂ ಶೋಭನಪ್ರಜ್ಞಂ ವೋತ್ಪನ್ನಂ ಪುತ್ರಂ ಸೂದಯಚ್ಚ । ಯಾಗಾದಿಕರ್ಮಸು ಪ್ರೇರಯತು ಚ । ಯದ್ವಾ । ರೇತ ಇತ್ಯುದಕನಾಮ । ನಿಷಿಕ್ತಂ ಮೇಘೇನ ವೃಷ್ಟಮುದಕಮಿಷೇಽನ್ನಾಯ ಸಸ್ಯಾದಿನಿಷ್ಪತ್ತ್ಯೇಽಗ್ನೇರ್ಯತ್ತೇಜ ಆನಟ್ ವ್ಯಾಪ್ನೋತ್ । ವೃಷ್ಟ್ಯುದಕೇನ ಭೌಮಾಗ್ನೇಃ ಸಂಯೋಗೇ ಸತಿ ಹಿ ಸಸ್ಯಾನ್ಯುತ್ಪದ್ಯಂತೇ । ಕೀದೃಶಂ ತೇಜಃ । ನೃಪತಿಂ ನೃಣಾಂ ರಕ್ಷಕಂ ಶುಚಿ ದೀಪ್ತಂ । ತಾದೃಶೇನ ತೇಜಸಾ ಯುಕ್ತೋ ದ್ಯೌರ್ದೀಪ್ತೋಽಗ್ನಿರಭೀಕ ಆಸನ್ನಕಾಲ ಏವ ಶರ್ಧಾದಿಗುಣವಿಶಿಷ್ಟಂ ಪುತ್ರಂ ಜನಯತು ತಂ ಚ ಪ್ರೇರಯತು ಯಜ್ಞಾದೌ ॥ ಇಷೇ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ನೃಪತಿಂ ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಆನಟ್ । ಅಶೂ ವ್ಯಾಪ್ತೌ । ಲಙಿ ವ್ಯತ್ಯಯೇನ ಪರಸ್ಮೈಪದಶ್ನಮೌ । ಆಡಾಗಮಃ । ವ್ರಶ್ಚಾದಿಷತ್ವೇ ಷ್ಟುತ್ವಂ । ನಿಷಿಕ್ತಂ । ಷಿಚಿರ್ ಕ್ಷರಣೇ । ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಉಪಸರ್ಗಾತ್ಸುನೋತೀತಿ ಷತ್ವಂ । ಅಭೀಕೇ । ಅಭಿಪೂರ್ವಾದಂಚತೇಃ ಪಚಾದ್ಯಚಿ ಪೃಷೋದರಾದಿತ್ವಾದ್ರೂಪಸಿದ್ಧಿಃ । ಯದ್ವಾ । ಇಣ್ ಗತಾವಿತ್ಯಸ್ಮಾದೌಣಾದಿಕಃ ಕಕ್ಪ್ರತ್ಯಯಃ । ಉಭಯಥಾಪಿ ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ಸ್ವಾಧ್ಯಂ । ಏರನೇಕಾಚ ಇತಿ ಯಣಾದೇಶಃ । ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ । ಜನಯತ್ । ಜನೇರ್ಣ್ಯಂತಾಲ್ಲೇಟ್ಯಡಾಗಮಃ । ಸೂದಯತ್ । ಷೂದ ಕ್ಷರಣೇ ಪೂರ್ವವಲ್ಲೇಟ್ಯಡಾಗಮಃ ॥

॥ ಪ್ರತಿಪದಾರ್ಥ ॥

(ಅಗ್ನೇಃ—ಅಗ್ನಿಯ) । **ಶುಚಿ**—ಶುಭ್ರವಾದ । **ದ್ಯೌಃ**—ದೀಪ್ತವಾದ । **ಯತ್ ತೇಜಃ**—ಯಾವ ತೇಜಸ್ಸು । **ನೃಪತಿಂ**—ಋತ್ವಿಜರ ಪಾಲಕನಾದ ಯಜಮಾನನನ್ನು । **ಆನಟ್**—ಜಾಠರಾಗ್ನಿ ರೂಪದಿಂದ । **ಇಷೇ**—ಅನ್ನಕ್ಕೋಸ್ಕರ । **ಆ**—ಎಲ್ಲೆಡೆಗಳಲ್ಲಿಯೂ ವ್ಯಾಪಿಸಿತೋ । **ರೇತಃ**—(ಅಂತಹ ತೇಜಸ್ಸಿನಿಂದ ಪರಿಪಕ್ವವಾದ ಅನ್ನವು (ರಸರೂಪವಾದ ವೀರ್ಯವು) । **ಅಭೀಕೇ**—ಗರ್ಭಸ್ಥಾನದಲ್ಲಿ । **ನಿಷಿಕ್ತಂ**—ಸೇರಿಸಲ್ಪಟ್ಟದ್ದಾಗಿ । **ಅಗ್ನಿಃ**—ಅಗ್ನಿಯು (ಪುತ್ರರೂಪನಾಗಿ) । **ಜನಯತ್**—ಜನಿಸಲಿ । **ಶರ್ಧಂ**—ಬಲಿಷ್ಠನಾದ । **ಅನವದ್ಯಂ**—ದೋಷರಹಿತನಾದ । **ಯುವಾನಂ**—ತರುಣನಾದ (ಜರಾರಹಿತನಾದ) । **ಸ್ವಾಧ್ಯಂ**—ಮಂಗಳಕರವಾದ ಕರ್ಮ (ಜ್ಞಾನ) ವುಳ್ಳ (ಉತ್ಪನ್ನನಾದ ಮಗನನ್ನೂ) । **ಸೂದಯಚ್ಚ**—(ಯಾಗಾದಿ ಕರ್ಮಗಳಲ್ಲಿ) ಪ್ರೇರಣೆಯನ್ನೂ ಮಾಡಲಿ ।

ಅಥವಾ [**ನಿಷಿಕ್ತಂ**— ಮೋಘದಿಂದ ಸಿಕ್ತವಾದ । **ರೇತಃ**— ವೃಷ್ಟಿಜಲವು । **ಇಷೇ**— ಅನ್ನಕ್ಕೋಸ್ಕರ । (**ಅಗ್ನೇಃ**-ಅಗ್ನಿಯ) । **ಶುಚಿ**— ಶುಭ್ರವಾದ । **ದೀಪ್ತಂ**— ಪ್ರಜ್ವಲಿಸುವ । **ಯತ್ ತೇಜಃ** — ಯಾವ ತೇಜಸ್ಸನ್ನು । **ಆ ಆನಟ್**— ಸುತ್ತಲೂ ಆವರಿಸಿತೋ । (**ಸಃ**— ಅಂತಹ ತೇಜಸ್ಸಿನಿಂದ ಯುಕ್ತನಾದ) । **ದ್ಯೌಃ** — ದೀಪ್ತನಾದ । **ಅಗ್ನಿಃ** — ಅಗ್ನಿಯು । **ಅಭೀಕೇ**— ಆಸನ್ನಕಾಲದಲ್ಲಿ । **ಶರ್ಧಂ**— ಬಲಿಷ್ಠನೂ । **ಅನವದ್ಯಂ**— ದೋಷರಹಿತನೂ । **ಯುವಾನಂ** — ಜರಾರಹಿತನೂ । **ಸ್ವಾಧ್ಯಂ**— ಒಳ್ಳೆಯ ಕರ್ಮಗಳುಳ್ಳ (ಪುತ್ರನನ್ನು) । **ಜನಯತ್**— ಜನಿಸುವಂತೆ ಮಾಡಲಿ । **ಸೂದಯಚ್ಚ**— ಯಾಗಾದಿಕರ್ಮಗಳಲ್ಲಿ ಪ್ರೇರೇಪಿಸಲಿ]

॥ ಭಾವಾರ್ಥ ॥

ಜಾಠರಾಗ್ನಿರೂಪವಾದ, ಶುಭ್ರವಾದ ಮತ್ತು ದೀಪ್ತವಾದ ಅಗ್ನಿಯ ತೇಜಸ್ಸು, ಯಾಗ ಕರ್ತೃವಿಗೆ ರೇತೋರೂಪವಾಗಿ ಪರಿಣಮಿಸಲಿ. ಅದರಿಂದ ಬಲಿಷ್ಠನೂ, ನಿರ್ದೋಷನೂ, ಜರಾರಹಿತನೂ, ಜ್ಞಾನಿಯೂ ಆದ ಪುತ್ರನಾಗಿ ಅಗ್ನಿಯು ಜನಿಸಿ ಆ ಮಗನು ಸತ್ಕರ್ಮನಿರತನೂ ಆಗುವಂತೆ ಮಾಡಲಿ.

English Translation

May that (digestive) faculty (of Agni) which regards food, be imparted to the devout and illustrious protector of priests, as the source of virile vigour, and may Agni be born as (his) robust, irreproachable, youthful, and intelligent son, and instigate him to acts of worship

॥ ವಿಶೇಷವಿಷಯಗಳು ॥

**ತಿಷ್ಠತ್ಯೇವ ಹಿ ಭೂತಾನಾಂ ಜಠರೇ ಜಠರೇ ಜ್ವಲನ್ ।**

(ಬೃಹದ್ದೇವತಾ ೧-೬೫)

ಎಂಬ ವರ್ಣನೆಯಂತೆ ಸಮಸ್ತ ಭೂತಗಳ ಜಠರಗಳಲ್ಲಿಯೂ ಜಾಠರಾಗ್ನಿ ರೂಪದಲ್ಲಿ ವ್ಯಾಪಿಸಿರುವ ಅಗ್ನಿಯು ಸಕಲ ಸತ್ಕರ್ಮಕಾರ್ಯಕ್ಕೂ ಯಜಮಾನನನ್ನು ಪ್ರೇರಿಸಿ ಆ ಸತ್ಕರ್ಮಗಳಿಗೆ ತಕ್ಕ ಫಲವನ್ನು ಅನುಗ್ರಹಿಸಲಿ. ಮತ್ತು ದೇಹದಲ್ಲಿ ಉತ್ತಮವಾದ ವೀರ್ಯವನ್ನುಂಟುಮಾಡಿ ಶಕ್ತಿಯುತನೂ ಕರ್ಮನಿರತನೂ ಆದ ಪುತ್ರನು ಜನಿಸುವಂತೆ ಮಾಡಲಿ ಎಂದು ಒಂದು ಅರ್ಥವೂ ಅಥವಾ ಅಗ್ನಿಯ ತೇಜಸ್ಸು ಪೃಥ್ವಿಯಲ್ಲೆಲ್ಲಾ ವ್ಯಾಪಿಸಿ ವೃಷ್ಟ್ಯುದಕದ ರೂಪದಲ್ಲಿರುವ ರೇತಸ್ಸನ್ನು ಹರಡಿ ಸಸ್ಯಸಂಪತ್ತನ್ನು ಬೆಳೆಸಿ ಯಾಗಾದಿಸಾಧನಗಳಾದ ಸಂಪತ್ತುಗಳಿಂದ ಕೂಡಿದ ಪುತ್ರನು ಜನಿಸುವಂತೆ ಮಾಡಲಿ ಎಂದು ಇನ್ನೊಂದರ್ಥವೂ ಬರುವಂತೆ ಅಗ್ನಿಯು ಪ್ರಾರ್ಥಿತನಾಗಿದ್ದಾನೆ

**ನೃಪತಿಂ— ನೃಣಾಂ ಋತ್ವಿಜಾಂ ಪಾಲಕಂ ಯಜಮಾನಂ** । ಯಾಗಕ್ಕೆ ನೇತೃಗಳಾದ ಋತ್ವಿಕ್ಕುಗಳಿಗೆ ಪಾಲಕನಾದ ಯಜಮಾನನನ್ನು—

**ಆನಟ್**—**ಇನ್ವತಿ, ನಕ್ಷತಿ, ಆಕ್ಷಾಣಃ, ಆನಟ್** । (ನಿ. ೩ ೧೦) ಇತ್ಯಾದಿ ಹತ್ತು **ವ್ಯಾಪ್ತಿಕರ್ಮಗಳ** ನಾಮಗಳಲ್ಲಿ ಪಠಿತವಾಗಿರುವುದರಿಂದ ವ್ಯಾಪಿಸಿರುವ ಎಂದರ್ಥ.

**ಅಭೀಕೇ—ಅಭೀಕ ಇತ್ಯಾಸನ್ನಸ್ಯ । ಅಭೀಕೇ ಅಭ್ಯಕ್ತೇ ।** ಸಮೀಪ ಅಥವಾ ಸಮೀಪಿಸಿ ವ್ಯಾಪಿಸು ಈ ಅರ್ಥಗಳಲ್ಲಿ ಅಭೀಕ ಶಬ್ದದ ಪ್ರಯೋಗವಿದೆಯೆಂದು ನಿರುಕ್ತಕಾರರು ತಿಳಿಸಿ (ನಿ ೩-೨೦) ಋಕ್ಸಂಹಿತೆಯ **ಅಭೀಕೇ ಚಿದು ಲೋಕಕೃತ್** (ಋ. ಸಂ ೧೦-೧೩೩-೧) ಎಂಬ ಋಕ್ಕನ್ನು ಉದಹರಿಸುತ್ತಾರೆ. ಮೇಲಿನ ಎರಡು ಅರ್ಥಗಳಲ್ಲಿ ಜಠರದಲ್ಲಿ ವ್ಯಾಪಿಸಿರುವ ಅಗ್ನಿಗೆ ಸಂಬಂಧಿಸಿದರೆ ಆಗ ಎಲ್ಲಾ ಭೂತಗಳ ಜಠರಗಳಲ್ಲೂ ವ್ಯಾಪಿಸಿರುವ ಎಂಬರ್ಥವೂ, ಎರಡನೆಯದಾದರೆ, ದ್ಯುಲೋಕದ ಸಮೀಪದಲ್ಲಿ ಎಂದೂ ಆಗುತ್ತದೆ.

**ಶರ್ಧಂ**—**ಓಜಃ, ಪಾಜಃ, ಶವಃ,** ಇತ್ಯಾದಿ ೨೮ ಬಲನಾಮಗಳಲ್ಲಿ ಪಠಿತವಾಗಿರುವುದರಿಂದ **ಬಲವುಳ್ಳ** ಎಂಬ **ವಿಶೇಷಣವಾಗುತ್ತದೆ** ಬಲಿಷ್ಠನಾದ, ವೀರ್ಯವಂತನಾದ ಎಂದರ್ಥ

**ಸ್ವಾಧ್ಯಂ—ಶೋಭನಕರ್ಮಾಣಂ ಶೋಭನಪ್ರಜ್ಞಂ ವಾ ।** ಶ್ರೇಷ್ಠವಾದ ಕರ್ಮವುಳ್ಳವನನ್ನು ಅಥವಾ ಪ್ರಜ್ಞೆಯುಳ್ಳವನನ್ನು ಎಂದರ್ಥ. ಯಾವಾಗಲೂ ಕಲ್ಯಾಣಾತ್ಮಕನಾಗಿ ಕರ್ಮನಿರತನಾದ ಮಗನನ್ನು ಎಂದು ಒಂದರ್ಥವೂ ಎರಡನೆಯದಾಗಿ ನಮಗೆ ವೃಷ್ಟಿದ್ವಾರಾ ಸಸ್ಯಸಂಪತ್ತನ್ನೊದಗಿಸುವ ಕಲ್ಯಾಣಾತ್ಮಕವಾದುದೂ ಕರ್ಮ ನಿರತವಾದುದೂ ಆದ ಬುದ್ಧಿಯನ್ನೂ ಎಂದು ಇನ್ನೊಂದರ್ಥವೂ ಆಗುತ್ತದೆ

**ಸೂದಯತ್**—**ಸೂದ** ಶಬ್ದವು ಅನೇಕ ಅರ್ಥಗಳಲ್ಲಿ ಉಪಯೋಗಿಸಿವೆ ಇಲ್ಲಿ **ಪ್ರೇರಿಸಲಿ,** ಯಾಗಾದಿ ಕರ್ಮಗಳಲ್ಲಿ ಪ್ರೇರಿಸಲಿ ಎಂದಾಗುತ್ತದೆ ಅಥವಾ, **ಸೂದಯತಿರತ್ರ ಸಂಸ್ಕಾರಾರ್ಥಃ । ಸಂಸ್ಕರೋತು ಚ ।** ಇಲ್ಲಿ ಸೂದಯತ್ ಎನ್ನುವುದಕ್ಕೆ ಸಂಸ್ಕೃತವುಳ್ಳದ್ದನ್ನಾಗಿ ಎಂದರೆ ಪರಿಪಾಕವುಳ್ಳದ್ದನ್ನಾಗಿ ಎಂದರ್ಥವಾಗುತ್ತದೆ ಎಂದು ಸ್ಕಂದಸ್ವಾಮಿಗಳು ವಿವರಿಸುತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ಇಷೇ**—ಇಷ್ ಎಂಬುದು ಅನ್ನದ ಹೆಸರು. ಚತುರ್ಥೀ ಏಕವಚನಾಂತರೂಪ **ಸಾವೇಕಾಚಸ್ತೃತೀಯಾದಿಃ** (ಪಾ ಸೂ ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ನೃಪತಿಮ್**—ನೃಣಾಂ ಪತಿಃ ನೃಪತಿಃ ತಮ್ **ಪರಾದಿಶ್ಛಂದಸಿ ಬಹುಲಂ** (ಪಾ. ಸೂ ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ಆನಟ್**—ಅಶೂ ವ್ಯಾಪ್ತೌ ಧಾತು ಸ್ವಾದಿ. ಅನುದಾತ್ತೇತ್ ಲುಙ್ನಲ್ಲಿ **ವ್ಯತ್ಯಯೋ ಬಹುಲಂ** ಎಂಬುದರಿಂದ ಪರಸ್ಮೈಪದ ಪ್ರತ್ಯಯವೂ ಶ್ನುವಿಗೆ ಶ್ನಮ್ ವಿಕರವೂ ಬರುತ್ತದೆ. ಶ್ನಮ್ ಮಿತ್ತಾದುದರಿಂದ **ಮಿದಚೋಂತ್ಯಾತ್ಪರಃ** ಎಂಬ ಪರಿಭಾಷೆಯಿಂದ ಧಾತುವಿನ ಅಂತ್ಯಾಚಿನ ಪರವಾಗಿ ಬರುತ್ತದೆ ಪ್ರಥಮಪುರುಷ

ಏಕವಚನದಲ್ಲಿ ತಿಪ್ ಬಂದಾಗ **ಇತಶ್ಚ** ಸೂತ್ರದಿಂದ ಇಕಾರ ಲೋಪವಾದಾಗ ಹಲಂತದ ಪರದಲ್ಲಿ ಬಂದುದರಿಂದ **ಹಲ್ಙ್ಯಾಭ್ಯೋ**— ಸೂತ್ರದಿಂದ ಅದಕ್ಕೆ ಲೋಪ ಶಕಾರಕ್ಕೆ **ವ್ರಶ್ಚಭ್ರಸ್ಜ**—(ಪಾ ಸೂ ೮-೨ ೩೬) ಎಂಬುದರಿಂದ ಷತ್ವ. **ಝಲಾಂ ಜಶೋಂತೇ** ಸೂತ್ರದಿಂದ ಷಕಾರಕ್ಕೆ ಜಶ್ತ್ವದಿಂದ ಡಕಾರಾದೇಶ ಅದಕ್ಕೆ ಚರ್ತ್ವದಿಂದ ಟಕಾರಾದೇಶ **ಆಡಜಾದೀನಾಂ** ಸೂತ್ರದಿಂದ ಅಂಗಕ್ಕೆ ಆಡಾಗಮ ಆನಟ್ ಎಂದು ರೂಪವಾಗುತ್ತದೆ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ಹಿಂದೆ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಆಡಾಗವು ಉದಾತ್ತವಾಗುವುದರಿಂದ ಆದ್ಯುದಾತ್ತವಾದ ಪದವಾಗುತ್ತದೆ

**ನಿಷಿಕ್ತಮ್**—ಷಿಚಿರ್ ಕ್ಷರಣೇ ಧಾತು ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತಪ್ರತ್ಯಯ. **ಚೋಃ ಕುಃ** ಎಂಬುದರಿಂದ ಝಲ್ ಪರದಲ್ಲಿರುವುದರಿಂದ ಧಾತು ಚಕಾರಕ್ಕೆ ಕುತ್ವದಿಂದ ಕಕಾರಾದೇಶ ಸಕಾರಕ್ಕೆ **ಉಪಸರ್ಗಾತ್ ಸುನೋತಿ ಸುವತಿ**—(ಪಾ ಸೂ ೮-೩-೬೫) ಎಂಬುದರಿಂದ ಷತ್ವ **ಗತಿರನಂತರಃ** (ಪಾ ಸೂ. ೬-೨ ೪೯) ಎಂಬುದರಿಂದ ಗತಿಗೆ (ನಿ) ಪ್ರಕೃತಿಸ್ವರ ಬರುತ್ತದೆ

**ಅಭೀಕೇ**—ಅಂಚು ಗತಿಪೂಜನಯೋಃ ಧಾತು ಪಚಾದಿಯಲ್ಲಿ ಸೇರಿರುವುದರಿಂದ ಅಭಿ ಎಂಬ ಉಪಸರ್ಗವು ಪೂರ್ವದಲ್ಲಿರುವಾಗ ಇದಕ್ಕೆ **ನಂದಿಗ್ರಹಪಚಾದಿಭ್ಯೋ**—(ಪಾ ಸೂ ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ಪೃಷೋದರಾದಿಯಲ್ಲಿ ಸೇರಿರುವುದರಿಂದ **ಪೃಷೋದರಾದೀನಿ ಯಥೋಪದಿಷ್ಟಮ್** ಎಂಬುದರಿಂದ ಅಭಿಮತರೂಪಸಿದ್ಧಿಯಾಗುತ್ತದೆ. ಅಥವಾ ಇಣ್ ಗತೌ ಧಾತು ಇದಕ್ಕೆ **ಔಣಾದಿಕವಾದ** ಕಕ್ ಪ್ರತ್ಯಯು ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ ಎರಡು **ರೀತಿಯನ್ನು ಅನುಸರಿಸಿದರೂ** ದಾಶೀಭಾರಾದಿಯಲ್ಲಿ ಪಠಿತವಾದುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ ಸಪ್ತಮೀ ಏಕವಚನಾಂತರೂಪ

**ಸ್ವಾಧ್ಯಮ್** — ಸ್ವಾಧೀ+ಅಮ್ ಎಂದಿರುವಾಗ **ಏರನೇಕಾಚೋಽಸಂಯೋಗಪೂರ್ವಸ್ಯ** ಎಂಬುದರಿಂದ ಯಣಾದೇಶ ಉದಾತ್ತಸ್ಥಾನದಲ್ಲಿ ಯಣಾದೇಶ ಬಂದುದರಿಂದ ಅದರ ಪರದಲ್ಲಿ ಅನುದಾತ್ತ (ವಿಭಕ್ತಿ) ಬಂದುದರಿಂದ **ಉದಾತ್ತ ಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** (ಪಾ ಸೂ ೮-೨-೪) ಎಂಬುದರಿಂದ ಅನುದಾತ್ತಕ್ಕೆ ಸ್ವರಿತಸ್ವರ ಬರುತ್ತದೆ

**ಜನಯಂತ್** ಜನೀ ಪ್ರಾದುರ್ಭಾವೇ ಧಾತು ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ ಸೂ ೩-೧-೨೬) ಎಂಬುದರಿಂದ ಣಿಚ್ **ಜನೀಜ್ಕ್ನಸ್**—ಎಂಬ ಸೂತ್ರದಿಂದ ಮಿತ್ ಸಂಜ್ಞಾ ಬರುವುದರಿಂದ ಣಿಚ್ ನಿಮಿತ್ತವಾಗಿ ಬಂದಿರುವ ಉಪಧಾವೃದ್ಧಿಗೆ **ಮಿತಾಂ ಹ್ರಸ್ವಃ** (ಪಾ ಸೂ ೬-೪-೯೨) ಎಂಬುದರಿಂದ ಹ್ರಸ್ವ ಬರುತ್ತದೆ. ಣಿಜಂತದ ಮೇಲೆ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚ**—ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಲೇಟೋಽಡಾಟೌ** ಎಂಬುದರಿಂದ ಅದಕ್ಕೆ ಅಡಾಗಮ ಶಪ್ ವಿಕರಣ **ಅತೋಗುಣೇ** ಎಂಬುದರಿಂದ ಪರರೂಪ ಶಪ್ ನಿಮಿತ್ತವಾಗಿ ಣಿಚ್ಚಿಗೆ ಗುಣ ಅಯಾದೇಶ ಜನಯತ್ ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಸೂದಯಾತ್**—ಷೂದ ಕ್ಷರಣೇ ಧಾತು **ಧಾತ್ವಾದೇಃ ಷಃ ಸಃ** (ಪಾ. ಸೂ. ೬-೧-೬೪) ಎಂಬುದರಿಂದ ಷಕಾರಕ್ಕೆ ಸತ್ವ. ಹಿಂದಿನಂತೆಯೇ ಲೇಟ್ ಪ್ರಥಮಪುರುಷ ಏಕವಚನರೂಪ ಹಿಂದೆ ತಿಙಂತವಿರುವುದರಿಂದ **ಅತಿಙಃ** ಎಂದು ಪರ್ಯುದಾಸಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ ಣಿಚ್ ಸ್ವರ ಉಳಿಯುತ್ತದೆ. ॥ ೮ ॥



॥ ಸಂಹಿತಾಪಾಠಃ ॥

ಮನೋ ನ ಯೋಽಧ್ವನಃ ಸದ್ಯ ಏತ್ಯೇಕಃ ಸತ್ರಾ ಸೂರೋ ವಸ್ವ ಈಶೇ ।
ರಾಜಾನಾ ಮಿತ್ರಾವರುಣಾ ಸುಪಾಣೀ ಗೋಷು ಪ್ರಿಯಮಮೃತಂ ರಕ್ಷಮಾಣಾ ॥ ೯ ॥

॥ ಪದಪಾಠಃ ॥

ಮನಃ । ನ । ಯಃ । ಅಧ್ವನಃ । ಸದ್ಯಃ । ಏತಿ । ಏಕಃ । ಸತ್ರಾ । ಸೂರಃ । ವಸ್ವಃ । ಈಶೇ ।
ರಾಜಾನಾ । ಮಿತ್ರಾವರುಣಾ । ಸುಪಾಣೀ ಇತಿ ಸುಽಪಾಣೀ । ಗೋಷು । ಪ್ರಿಯಂ । ಅಮೃತಂ । ರಕ್ಷಮಾಣಾ ॥ ೯ ॥

॥ ಸಾಯಣಭಾಷ್ಯಂ ॥

ಯಃ ಸೂರಃ ಸೂರ್ಯ ಏಕ ಏಕಾಕೀ ಅಸಹಾಯಃ ಸನ್ನಧ್ವನೋ ದಿವ್ಯಾನ್ಮಾರ್ಗಾನ್ಸದ್ಯ ಏತಿ ಆಶು ಗಚ್ಛತಿ । ಅಸಹಾಯತ್ವಂ ಚ ಶ್ರೂಯತೇ । ಸೂರ್ಯ ಏಕಾಕೀ ಚರತೀತ್ಯಾಹ । ಅಸೌ ವಾ ಆದಿತ್ಯ

ಏಕಾಕೀ ಚರತೀತಿ । ತೈ. ಬ್ರಾ. ೩-೯-೫-೪ । ಶೀಘ್ರಗಮನಂ ಚ ಸ್ಮರ್ಯತೇ । ಯೋಜನಾನಾಂ ಸಹಸ್ರೇ ದ್ವೇ ದ್ವೇ ಶತೇ ದ್ವೇ ಚ ಯೋಜನೇ । ಏಕೇನ ನಿಮಿಷಾರ್ಧೇನ ಕ್ರಮಮಾಣ ನಮೋಽಸ್ತು ತ ಇತಿ । ಶೀಘ್ರಗಮನೇ ದೃಷ್ಟಾಂತಃ । ಮನೋ ನ । ಯಥಾ ಮನಃ ಶೀಘ್ರಂ ಗಚ್ಛತಿ ತದ್ವತ್ । ಸ ಚ ಶೂರೋ ವಸ್ವೋ ಧನಸ್ಯ ಸತ್ರಾ ಸಹೈವ ಯುಗಪದೇವೇಶೇ । ಈಷ್ಟೇ । ಯೋ ಹಿ ಶೀಘ್ರಂ ಗಚ್ಛತಿ ಸ ಬಹುದೇಶೇಷ್ವವಸ್ಥಿತಾನಿ ಧನಾನಿ ಪ್ರಾಪ್ನೋತಿ । ತಥಾ ರಾಜಾನಾ ರಾಜಮಾನೌ ಸುಪಾಣೀ ಶೋಭನಬಾಹೂ ಮಿತ್ರಾವರುಣಾ ಮಿತ್ರಾವರುಣಾವಸ್ಮದೀಯಾಸು ಗೋಷು ಪ್ರಿಯಂ ಸರ್ವೇಷಾಂ ಪ್ರೀತಿಕರಮಮೃತಮಮೃತವತ್ಸ್ವಾದುಭೂತಂ ಪಯೋ ರಕ್ಷಮಾಣಾ ರಕ್ಷಂತೌ ವರ್ತೇತೇ । ಹೇ ಅಗ್ನೇ ತತ್ತ್ವದ್ರೂಪೇಣ ತ್ವಮೇವೈವಂ ವರ್ತಸ ಇತಿ ಭಾವಃ ॥ ವಸ್ವಃ । ಲಿಂಗವ್ಯತ್ಯಯಃ । ಜಸಾದಿಷು ಛಂದಸಿ ವಾವಚನಮಿತಿ ಘೇರ್ಙಿತೀತಿ ಗುಣಾಭಾವೇ ಯಣಾದೇಶಃ । ಈಶೇ । ಈಶ ಐಶ್ವರ್ಯೇ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಮಿತ್ರಾವರುಣಾ । ದೇವತಾದ್ವಂದ್ವೇ ಚೇತಿ ಪೂರ್ವಪದಸ್ಯಾನಜಾದೇಶಃ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ॥

॥ ಪ್ರತಿಪದಾರ್ಥ ॥

**ಯಃ ಸೂರಃ**—ಯಾವ ಸೂರ್ಯನು । **ಏಕಃ**—ಒಬ್ಬನೇ (ಅಸಹಾಯನಾಗಿ) । **ಅಧ್ವನಃ**—(ಅಂತರಿಕ್ಷ ಮಾರ್ಗಗಳನ್ನು । **ಮನೋ ನ**—ಮನಸ್ಸಿನಂತೆ । **ಸದ್ಯಃ ಏತಿ**-ಶೀಘ್ರವಾಗಿ ದಾಟುತ್ತಾನೋ । (**ಸಃ**—ಆ ಸೂರ್ಯನು) । **ವಸ್ವಃ ಸತ್ರಾ**—ಧನಕ್ಕೆ ಒಡನೆಯೇ । **ಈಶೇ**—ಸ್ವಾಮಿಯಾಗುತ್ತಾನೆ । (**ತಥಾ**—ಹಾಗೆಯೇ) । **ರಾಜಾನಾ**-ಪ್ರಕಾಶಮಾನರಾದ । **ಸುಪಾಣೀ**—ಶೋಭನಕರವಾದ ಬಾಹುಗಳುಳ್ಳ । **ಮಿತ್ರಾವರುಣಾ**—ಮಿತ್ರಾವರುಣರು । **ಗೋಷು**—(ನಮ್ಮ) ಗೋವುಗಳಲ್ಲಿ । **ಪ್ರಿಯಂ**—(ಎಲ್ಲರಿಗೂ) ಸುಖಕರವಾದ । **ಅಮೃತಂ**—ಅಮೃತದಂತೆ ರುಚಿಯಾದ (ಕ್ಷೀರವನ್ನು) । **ರಕ್ಷಮಾಣಾ**—ರಕ್ಷಿಸುವವರಾಗಿ (ಇದ್ದಾರೆ)

॥ ಭಾವಾರ್ಥ ॥

ಹೇಗೆ ಸೂರ್ಯನು ಒಬ್ಬನೇ ಅಂತರಿಕ್ಷ ಮಾರ್ಗಗಳನ್ನೆಲ್ಲಾ ಮನಸ್ಸಿನಂತೆ ವೇಗವಾಗಿ ಕ್ರಮಿಸಿ, ಧನವಂತನಾಗುತ್ತಾನೆಯೋ ಹಾಗೆ ಪ್ರಕಾಶಮಾನರಾದ, ಶುಭಕರವಾದ ಬಾಹುಗಳುಳ್ಳ ಮಿತ್ರಾವರುಣರು, ನಮ್ಮ ಗೋವುಗಳು ಸುಖಕರವಾದ ಅಮೃತದಂತೆ ರುಚಿಕರವಾದ ಕ್ಷೀರವನ್ನು (ಕರೆಯುವಂತೆ) ಅನುಗ್ರಹಿಸಲಿ

## English Translation

The sun, who traverses alone the path of heaven with the speed of thought, is at once lord of all treasures: the two kings, Mitra and Varuna, with bounteous hands, are the guardians of the precious ambrosia of our cattle

|| ವಿಶೇಷವಿಷಯಗಳು ||

ಸೂರ್ಯನ ಲೋಕಸಂಚಾರಕಾರ್ಯವೂ, ಮಿತ್ರಾವರುಣರ ಲೋಕರಕ್ಷಣಾಕಾರ್ಯವೂ ಅಗ್ನಿಯ ಪ್ರಭಾವದಿಂದಲೇ ಎನ್ನುವುದನ್ನು ಈ ಋಕ್ಕಿನಲ್ಲಿ ಹೇಳಿದೆ

**ಅಗ್ನೇ ನಕ್ಷತ್ರಮಜರಮಾ ಸೂರ್ಯಂ ರೋಹಯೋ ದಿವಿ ।**

(ಋ. ಸಂ ೧೦-೧೫೬-೪)

**ವಿ ಯೋ ರಜಾಂಸ್ಯಮಿಮೀತ ಸುಕ್ರತುರ್ವೈಶ್ವಾನರೋ ವಿ ದಿವೋ ರೋಚನಾ ಕವಿಃ ।**

**ಪರಿ ಯೋ ವಿಶ್ವಾ ಭುವನಾನಿ ಪಪ್ರಥೇಽದಬ್ಧೋ ಗೋಪಾ ಅಮೃತಸ್ಯ ರಕ್ಷಿತಾ ॥**

(ಋ. ಸಂ ೬-೭-೭)

ಇತ್ಯಾದಿ ಋಕ್ಕುಗಳಲ್ಲಿ ಅಗ್ನಿಯೇ ಸೂರ್ಯಾದಿ ಗ್ರಹಗಳ ಲೋಕಸಂಚಾರಕ್ಕೂ ಲೋಕವನ್ನು ಬೆಳಗುವಂತೆ ಮಾಡುವುದಕ್ಕೂ ಕಾರಣನು ಎಂದು ಹೇಳಿದೆ ಅದರಂತೆಯೇ,

**ತ್ವಯಾ ಹ್ಯಗ್ನೇ ವರುಣೋ ಧೃತವ್ರತೋ ಮಿತ್ರಃ ಶಾಶದ್ರೇ ಅರ್ಯಮಾ ಸುದಾನವಃ ।**

(ಋ. ಸಂ. ೧-[illegible])

ಇತ್ಯಾದಿ ಋಕ್ಕುಗಳಲ್ಲಿ ಮಿತ್ರಾವರುಣರ ಲೋಕಧಾರಣ ಮತ್ತು ರಕ್ಷಣಾಕಾರ್ಯವೂ ಅಗ್ನಿಯ ಮಹಿಮೆಯಿಂದಲೇ ನಡೆಯುತ್ತದೆಂದು ಹೇಳಿದೆ. ಅದೇ ಪ್ರಶಂಸೆಯೂ ಇಲ್ಲಿಯೂ ಸಹ ಅಗ್ನಿಯ ಪ್ರಭಾವವನ್ನು ತೋರಿಸುತ್ತದ

**ಮನೋ ನ ಸದ್ಯ ಏತಿ**—ಮನಸ್ಸಿನಂತೆ ಎಂದರೆ ಮನೋವೇಗದಂತೆ ವೇಗವುಳ್ಳ ಸಂಚಾರದಿಂದ ಅಂತರಿಕ್ಷಮಾರ್ಗಗಳಲ್ಲೆಲ್ಲಾ ಶೀಘ್ರವಾಗಿ ಸಂಚರಿಸುತ್ತಾನೆ ಆದ್ದರಿಂದಲೇ ಸೂರ್ಯನಿಗೆ **ತರಣಿಃ** (ಋ. ಸಂ ೧-೫೦) ಎಂಬ ವಿಶೇಷಣವಿದೆ ಸೂರ್ಯನ ಸಂಚಾರದ ವೇಗವನ್ನು ವಿವರಿಸುತ್ತಾ ಸಾಯಣರು ಒಂದು ಶ್ರುತಿವಾಕ್ಯವನ್ನು ಉದಹರಿಸುತ್ತಾರೆ ಆದರೆ ಆ ಶ್ರುತಿವಾಕ್ಯದ ಆಧಾರವಾವುದೆಂಬುದನ್ನು ಮಾತ್ರ ಕೊಟ್ಟಿಲ್ಲ ಆ ವರ್ಣನೆಯಲ್ಲಿ **ಯೋಜನಾನಾಂ ಸಹಸ್ರೇ ದ್ವೇ ದ್ವೇ ಶತೇ ದ್ವೇ ಚ ಯೋಜನೇ । ಏಕೇನ ನಿಮಿಷಾರ್ಧೇನ ಕ್ರಮಮಾಣ ನಮೋಽಸ್ತುತೇ ।** ಎಂದು ಸೂರ್ಯನನ್ನು ಹೊಗಳಿದೆ

**ಸುಪಾಣೀ—ಶೋಭನಬಾಹೂ ।** ಶ್ರೇಷ್ಠವಾದ ಅಥವಾ ರಮ್ಯವಾದ ಬಾಹುಗಳುಳ್ಳವರೆಂದರ್ಥ. ಅಶ್ವಿನೀ ದೇವತೆಗಳಿಗೂ (೧-೧೯-೪) ಮಿತ್ರಾವರುಣರಿಗೂ ವಿಶೇಷಣವುಂಟು

**ರಾಜಾನಾ ಮಿತ್ರಾವರುಣಾ—** ಋಕ್ಸಂಹಿತೆಯಲ್ಲಿ ಮಿತ್ರಾವರುಣರ ಪ್ರಶಂಸೆಯು ನಾನಾವಿಧವಾಗಿದೆ. ಮಿತ್ರಾವರುಣರು ಸಕಲಲೋಕಕ್ಕೂ ಸಮ್ರಾಟರೆಂದೂ, ಸೂರ್ಯನೇ ಅವರ ಕಣ್ಣೆಂದೂ ಅವರು ಭೌತಿಕ ಪ್ರಪಂಚದ ವ್ಯವಹಾರವನ್ನು ಮಾತ್ರವಲ್ಲದೇ ನೈತಿಕವಾದ ವ್ಯವಹಾರಗಳನ್ನೂ ದಿವ್ಯದೃಷ್ಟಿಯಿಂದ ವಿಮರ್ಶಿಸುವರೆಂದೂ ಅವರ ಮಹಿಮೆಯನ್ನು ಹೊಗಳಿದೆ ಮತ್ತು

**ಆ ರಾಜಾನಾ ಮಹ ಋತಸ್ಯ ಗೋಪಾ ಸಿಂಧುಪತೀ ಕ್ಷತ್ರಿಯಾ ಯಾತಮರ್ವಾಕ್ |**

(ಋ ಸಂ ೭-೬೪-೨)

ಇತ್ಯಾದಿ ಅನೇಕ ಸನ್ನಿವೇಶಗಳಲ್ಲಿ ಅವರ ಪ್ರಭುತ್ವವೂ, ರಕ್ಷಕತ್ವವು ಹೇಳಲ್ಪಟ್ಟು ಅಗ್ನಿಗೂ ಅವರಿಗೂ ಯಜ್ಞ ಕರ್ಮದಲ್ಲಿರುವ ಶಾಶ್ವತವಾದ ಸಾಹಚರ್ಯವೂ ಸಹ ಕೆಳಗೆ ಕಂಡಂತೆ ಪ್ರಶಂಸಿಸಲ್ಪಟ್ಟಿದೆ

**ಅಗ್ನೇ ತ್ವಂ ಯಶಾ ಅಸ್ಯಾ ಮಿತ್ರಾವರುಣಾ ವಹ |**

**ಋತಾವಾನಾ ಸಮ್ರಾಜಾ ಪೂತದಕ್ಷಸಾ ||**

(ಋ ಸಂ ೮-೨೩-೩೦)

ಎಂಬುದಾಗಿ ಹೇಳಿರುವುದರಿಂದ ಅಗ್ನಿಗೂ, ಮಿತ್ರಾವರುಣರಿಗೂ ಸಾಹಚರ್ಯವಿದ್ದು ಅವರ ಕರ್ತವ್ಯವೂ ಅಗ್ನಿಯ ಪ್ರಭಾವದಿಂದಲೇ ನೆರವೇರತಕ್ಕದ್ದೆಂದು ಸೂಚಿಸಿ ಈ ಋಕ್ಕಿನಲ್ಲಿ ಸೂರ್ಯನ ಮತ್ತು ಮಿತ್ರಾವರುಣರ ಪ್ರಶಂಸೆಯಿದೆ

|| ವ್ಯಾಕರಣಪ್ರಕ್ರಿಯಾ ||

ಏತಿ- ಇಣ್ ಗತೌ ಧಾತು ಅದಾದಿ ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕ್ಕಿಗೆ ಗುಣ. ಯಃ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ ಸೂ ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ

**ವಸ್ವಃ**—ವಸು ಶಬ್ದ ಧನದ ಹೆಸರನ್ನು ಹೇಳುತ್ತದೆ ಇದು ನಿತ್ಯ ನಪುಂಸಕಶಬ್ದ ಇಲ್ಲಿ ವ್ಯತ್ಯಯದಿಂದ ಪುಲ್ಲಿಂಗದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ ಷಷ್ಠೀವಿಭಕ್ತಿ ಏಕವಚನ ಪರವಾದಾಗ **ಜಸಾದಿಷು ಛಂದಸಿ ವಾವಚನಮ್** ಎಂಬ ವಚನದಿಂದ **ಘೇರ್ಙಿತಿ** ಎಂಬುದರಿಂದ ಬರಬೇಕಾದ ಗುಣವು ಬರುವುದಿಲ್ಲ **ಇಕೋ ಯಣಚಿ** ಎಂಬುದರಿಂದ ಯಣಾದೇಶ ಸಕಾರಕ್ಕೆ ರುತ್ವವಿಸರ್ಗ

**ಈಶೇ**—ಈಶ ಐಶ್ವರ್ಯೇ ಧಾತು. ಅದಾದಿ ಲಿಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ ಬಂದಾಗ **ಟಿತ ಆತ್ಮನೇಪದಾನಾಂ**—ಎಂಬುದರಿಂದ ಅದಕ್ಕೆ ಏತ್ವ **ಲೋಪಸ್ತ ಆತ್ಮನೇ ಪದೇಷು** (ಪಾ ಸೂ. ೭-೧-೪೧) ಎಂಬುದರಿಂದ ತಕಾರಕ್ಕೆ ಲೋಪ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್ ಈಶೇ ಎಂದು ರೂಪವಾಗುತ್ತದೆ. ಅತಿಙಂತದ ಪರವಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ರಾಜಾನಾ**—ರಾಜೃ ದೀಪ್ತೌ ಧಾತು ಲಡರ್ಥದಲ್ಲಿ ಶಾನಚ್ ಪ್ರತ್ಯಯ **ಬಹುಲಂ ಛಂದಸಿ** ಎಂಬುದ ರಿಂದ ಶಪ್ಪಿಗೆ ಲುಕ್. ರಾಜಾನ ಎಂದು ರೂಪವಾಗುತ್ತದೆ ಇದಕ್ಕೆ ಪ್ರಥಮಾ ದ್ವಿವಚನ ಪರವಾದಾಗ **ಸುಪಾಂ ಸುಲುಕ್**--ಸೂತ್ರದಿಂದ ವಿಭಕ್ತಿಗೆ ಆಕಾರಾದೇಶ

**ಮಿತ್ರಾವರುಣಾ**--ಮಿತ್ರಶ್ಚ ವರುಣಶ್ಚ ಮಿತ್ರಾವರುಣೌ **ದೇವತಾದ್ವಂದ್ವೇ ಚ** (ಪಾ ಸೂ ೬-೩-೨೬) ಎಂಬುದರಿಂದ ದ್ವಂದ್ವಸಮಾಸಮಾಡಿದಾಗ ಪೂರ್ವಪದಕ್ಕೆ ಆನಙಾದೇಶ ಹಿಂದಿನಂತೆ ದ್ವಿವಚನದಲ್ಲಿ **ಸುಪಾಂ**

**ಸುಲುಕ್**— ಸೂತ್ರದಿಂದ ಆಕಾರಾದೇಶ **ದೇವತಾದ್ವಂದ್ವೇ ಚ** (ಪಾ ಸೂ ೬-೨-೧೪೧) ಎಂಬುದರಿಂದ ಉಭಯ ಪದ ಪ್ರಕೃತಿಸ್ವರ ಬರುತ್ತದೆ.

**ಸುಪಾಣೀ—**ಶೋಭನೌ ಪಾಣೀ ಯಯೋಃಸ್ತೌ ಸುಪಾಣೀ **ನಞ್ ಸುಭ್ಯಾಮ್** (ಪಾ. ಸೂ. ೬-೨-೧೭೨) ಎಂಬುದರಿಂದ ಬಹುವ್ರೀಹಿಸಮಾಸಮಾಡಿದಾಗ್ಯ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ. ಪ್ರಥಮಾ ದ್ವಿವಚನರೂಪ.

**ರಕ್ಷಮಾಣಾ**—ರಕ್ಷ ಪಾಲನೇ ಧಾತು ಭ್ವಾದಿ **ವ್ಯತ್ಯಯೋ ಬಹುಲಂ** ಎಂಬುದರಿಂದ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ವಿಕರಣ. **ಆನೇಮುಕ್** (ಪಾ. ಸೂ. ೭-೨-೮೨) ಎಂಬುದರಿಂದ ಅಜಂತಾಗಕ್ಕೆ ಮುಕಾಗಮ. ದ್ವಿವಚನಕ್ಕೆ **ಸುಪಾಂ ಸುಲುಕ್**—ಎಂಬುದರಿಂದ ಆಕಾರಾದೇಶ. ಅದುಪದೇಶದ ಪರದಲ್ಲಿರುವುದ ರಿಂದ ಲಸಾರ್ವಧಾತುಕವು (ಶಾನಚ್) **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ ವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ॥ ೯ ॥

॥ ಸಂಹಿತಾಪಾಠಃ ॥

ಮಾ ನೋ ಅಗ್ನೇ ಸಖ್ಯಾ ಪಿತ್ರ್ಯಾಣಿ ಪ್ರ ಮರ್ಷಿಷ್ಠಾ ಅಭಿ ವಿದುಷ್ಕವಿಃ ಸನ್ ।
ನಭೋ ನ ರೂಪಂ ಜರಿಮಾ ಮಿನಾತಿ ಪುರಾ ತಸ್ಯಾ ಅಭಿಶಸ್ತೇ-ರಧೀಹಿ ॥ ೧೦ ॥

॥ ಪದಪಾಠಃ ॥

**ಮಾ । ನಃ । ಅಗ್ನೇ । ಸಖ್ಯಾ । ಪಿತ್ರ್ಯಾಣಿ । ಪ್ರ । ಮರ್ಷಿಷ್ಠಾಃ । ಅಭಿ । ವಿದುಃ । ಕವಿಃ । ಸನ್ ।**
**ನಭಃ । ನ । ರೂಪಂ । ಜರಿಮಾ । ಮಿನಾತಿ । ಪುರಾ । ತಸ್ಯಾಃ । ಅಭಿऽಶಸ್ತೇಃ । ಅಧಿ । ಇಹಿ ॥ ೧೦ ॥**

॥ ಸಾಯಣಭಾಷ್ಯಂ ॥

ಹೇ ಅಗ್ನೇ ಪಿತ್ರ್ಯಾಣಿ ಪಿತರಂ ವಸಿಷ್ಠಮುಪಕ್ರಮ್ಯಾಗತಾನಿ ಸಖ್ಯಾ ಸಖಿತ್ವಾನಿ ಮಾ ಪ್ರ ಮರ್ಷಿಷ್ಠಾಃ । ಮಾ ವಿನಾಶಯ । ಅತ್ರ ಮೃಷ್ಯತೇರುಪಸರ್ಗವಶಾದರ್ಥಾಂತರೇ ವೃತ್ತಿಃ । ಯತಸ್ತ್ವಂ ಕವಿಃ ಕ್ರಾಂತದರ್ಶೀ ಸನ್ ಅಭ್ಯಾಭಿಮುಖ್ಯೇನ ವಿದುಃ ಸರ್ವಂ ವಿದ್ವಾನ್ । ನಭೋ ನ ರೂಪಂ । ಯಥಾಂತರಿಕ್ಷಂ ರೂಪವಂತಃ ಸೂರ್ಯರಶ್ಮಯ ಆಚ್ಛಾದಯಂತಿ ತದ್ವದಾಚ್ಛಾದಯತಿ । ಜರಿಮಾ ಜರಾ ಮಿನಾತಿ । ಮಾಂ ಸೂಕ್ತದ್ರಷ್ಟಾರಂ ಹಿನಸ್ತಿ । ಅಭಿಶಸ್ತೇರ್ಹಿಂಸಾಹೇತೋಸ್ತಸ್ಯಾ ಜರಾಯಾ ಪುರಾ-ಧೀಹಿ । ಮಾಂ ಬುಧ್ಯಸ್ವ । ಸಾ ಯಥಾ ನ ಪ್ರಾಪ್ನೋತಿ ತಥಾ ಕುರು । ಅಮೃತತ್ವಂ ಪ್ರಯಚ್ಛೇತಿ ಯಾವತ್ ॥ ಸಖ್ಯಾ । ಸಖ್ಯುರ್ಭಾವಃ ಸಖ್ಯಂ । ಸಖ್ಯುರ್ಯ ಇತಿ ಯಃ । ಪಿತ್ರ್ಯಾಣಿ । ಪಿತೃಭ್ಯ ಆಗತಾನಿ । ಪಿತುರ್ಯಚ್ಚ । ಪಾ. ೪-೩-೭೯ । ಇತಿ ಯತ್ಪ್ರತ್ಯಯಃ । ರೀಙೃತಃ । ಪಾ. ೭-೪-೨೭ । ಇತಿ ರೀಙಾ-ದೇಶಃ । ಯಸ್ಯೇತಿ ಚೇತೀಕಾರಲೋಪಃ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಮರ್ಷಿಷ್ಠಾಃ । ಮೃಷ ತಿತಿಕ್ಷಾಯಾಂ । ಪ್ರಾರ್ಥನಾಯಾಂ ಛಾಂದಸೋ ಲುಙ್ । ನ ಮಾಙ್ಯೋಗ ಇತ್ಯಡಭಾವಃ । ವಿದುಃ । ವಿದ ಜ್ಞಾನೇ । ಬಹುಲಮನ್ಯತ್ರಾಪೀತ್ಯುಸಿಪ್ರತ್ಯಯಃ । ಅತ ಏವ ಬಹುಲವಚನಾದ್ಗುಣಾ ಭಾವಃ । ಛಂದಸಿ ವಾಽಪ್ರಾಮ್ರೇಡಿತಯೋಃ । ಪಾ. ೮-೩-೪೯ । ಇತಿ ವಿಸರ್ಜನೀಯಸ್ಯ ಷತ್ವಂ । ನಭಃ । ನಹೇರ್ದಿವಿ ಭಶ್ಚ । ಉ. ೪-೨೧೦ । ಇತ್ಯಸುನ್ । ಜರಿಮಾ । ಜೄಷ್ ವಯೋಹಾನೌ । ಔಣಾದಿಕೋ ಭಾವ ಇಮನಿಚ್‌ಪ್ರತ್ಯಯಃ । ಮಿನಾತಿ । ಮೀಙ್ ಹಿಂಸಾಯಾಂ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ । ಅಭಿಶಸ್ತೇಃ । ಅಭಿಶಸ್ಯತೇ ಹಿಂಸ್ಯತೇಽನಯೇತ್ಯಭಿಶಸ್ತಿಃ । ಕರಣೇ ಕ್ತಿನ್ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ಅಧೀಹಿ । ಇಕ್ ಸ್ಮರಣೇ । ಲೋಟ್ಯದಾದಿತ್ವಾಚ್ಛಪೋ ಲುಕ್ । ಹೇರಪಿತ್ತ್ವೇನ ಙಿತ್ತ್ವಾದ್ಗುಣಾಭಾವಃ ॥

॥ ಪ್ರತಿಪದಾರ್ಥ ॥

ಅಗ್ನೇ—ಅಗ್ನಿಯೇ । ಪಿತ್ರ್ಯಾಣಿ— ಪಿತೃವಾದ (ವಸಿಷ್ಠರಿಂದ ಉಪಕ್ರಮಿಸಿ) ಬಂದ । ಸಖ್ಯಾ—ಸ್ನೇಹಗಳನ್ನು । ಕವಿಃ ಸನ್—ಹಿಂದೆ ನಡೆದುದನ್ನೆಲ್ಲಾ ತಿಳಿಯಬಲ್ಲವನಾಗಿ । ಅಭಿ —ಅಭಿಮುಖವಾಗಿ । ವಿದುಃ—ಎಲ್ಲವನ್ನೂ ತಿಳಿದ (ನೀನು) । ಮಾ ಪ್ರ ಮರ್ಷಿಷ್ಠಾಃ--ನಾಶಮಾಡಬೇಡ । ಜರಿಮಾ—ಜರೆಯು (ಮುಪ್ಪು) । ರೂಪಮ್—ಬೆಳಕು । ನಭೋ ನ—ಅಂತರಿಕ್ಷವನ್ನು ಹೇಗೋ ಹಾಗೆ । ಮಿನಾತಿ—ಹಿಂಸೆಪಡಿಸುತ್ತದೆ । ಅಭಿಶಸ್ತೇಃ—ಹಿಂಸಾಹೇತುವಾದ । ತಸ್ಯಾಃ—ಮುಪ್ಪಿಗಿಂತ । ಪುರಾ—ಮೊದಲೇ । ಅಧೀಹಿ—ಎಚ್ಚರಿಸು

॥ ಭಾವಾರ್ಥ ॥

ಎಲೈ ಅಗ್ನಿಯೇ ಭೂತಭವಿಷದ್ಜ್ಞಾನಿಯಾದ ನೀನು, ವಸಿಷ್ಠಾದಿಗಳ ಕಾಲದಿಂದ ಬಂದ ನಮ್ಮ ಪೂರ್ವಿಕರಿಗೆ ಸಂಬಂಧಿಸಿದ ಸ್ನೇಹವನ್ನು ನಾಶಮಾಡಬೇಡ. ಅಂತರಿಕ್ಷವನ್ನೆಲ್ಲಾ ಬೆಳಕು ಆವರಿಸುವಂತೆ, ನನ್ನನ್ನು ಮುಪ್ಪು ಆವರಿಸುತ್ತಿದೆ ಹಿಂಸಾಜನಕವಾದ ಈ ಮುಪ್ಪು (ತೊಂದರೆ ಕೊಡುವುದಕ್ಕೆ) ಮೊದಲೇ ನನ್ನನ್ನು ಎಚ್ಚರಿಸು (ನನಗೆ ಅಮೃತತ್ವವನ್ನು ದಾನಮಾಡು).

## English Translation.

Dissolve not, Agni, our ancestral friendship, for you are cognizant of the past as well as of the present; in like manner as light (speeds over) the sky, so decay impairs (my body); think of me before that source of destruction (prevails)

॥ ವಿಶೇಷವಿಷಯಗಳು ॥

ಅಗ್ನಿಯ ಸಖ್ಯವು ವಂಶಪಾರಂಪರ್ಯವಾಗಿ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿರುವುದರಿಂದಲೂ, ಹಿಂದಿನಿಂದಲೂ ಈ ಋಷಿಯ ವಂಶದವರು ಅಗ್ನಿಯ ಸಖ್ಯಕ್ಕೆ ಎಷ್ಟು ಉತ್ತಮವಾದ ಪಾತ್ರರಾಗಿದ್ದರೆಂದು ಹಿಂದಿನ ಚರಿತ್ರೆಯನ್ನೆಲ್ಲಾ ಅಗ್ನಿಯು ದಿವ್ಯದೃಷ್ಟಿಯಿಂದ ತಿಳಿಯಲು ಸಮರ್ಥನಾದುದರಿಂದಲೂ, ಈಗಲೂ ಅದೇ ಅನುಗ್ರಹ ದಿಂದ ರಕ್ಷಿಸಬೇಕೆಂದೂ ಮತ್ತು ಜರೆಯು ಪ್ರಾಪ್ತವಾಗಿ ನಾನಾ ವಿಧವಾದ ಹಿಂಸೆಗೊಳಗಾಗುವದಕ್ಕೆ ಮೊದಲೆ ಅಮೃತತ್ವವನ್ನು ಕೊಡಬೇಕೆಂದು ಪ್ರಾರ್ಥಿಸಿದೆ

**ಪಿತ್ರ್ಯಾಣಿ—ಪಿತರಂ ವಸಿಷ್ಠಮುಪಕ್ರಮ್ಯಾಗತಾನಿ ।** ವಸಿಷ್ಠ ಋಷಿಯಿಂದ ಆರಂಭಿಸಿ ನಡೆದುಕೊಂಡು ಬಂದ ಸಖ್ಯವನ್ನು ಎಂದು ಈ ಋಕ್ಕಿನಲ್ಲಿ ಹೇಳುವ ವಸಿಷ್ಠಋಷಿಗೂ ಅಗ್ನಿಗೂ ಇರುವ ಸಂಬಂಧವನ್ನೂ ಮತ್ತು ಹಿಂದಿನ ಋಕ್ಕಿನಲ್ಲಿ ಸೂಚಿಸಿರುವಂತೆ ಅಗ್ನಿಗೂ ಮಿತ್ರಾವರುಣರಿಗೂ ಇರುವ ಸಂಬಂಧವನ್ನೂ ಪರಿಶೀಲಿಸಿದರೆ ಅಗ್ನಿಗೂ ವಸಿಷ್ಠನಿಗೂ ಅತ್ಯಂತ ಅಗ್ನಿಗೂ ನಿಕಟವಾದ ಸಂಬಂಧವಿದೆಯೆಂದು ಗೊತ್ತಾಗುತ್ತದೆ ಹೇಗೆಂದರೆ ವಸಿಷ್ಠನು ಮಿತ್ರಾ ವರುಣರ ಪುತ್ರನೆಂದು—

**ಉತಾಸಿ ಮೈತ್ರಾವರುಣೋ ವಸಿಷ್ಠೋರ್ವಶ್ಯಾ ಬ್ರಹ್ಮನ್ಮನಸೋಧಿ ಜಾತಃ ।**

(ಋ ಸಂ. ೭-೩೩-೧೧).

ಎಂಬ ಋಕ್ಸಂಹಿತಾವಾಕ್ಯದಿಂದಲೇ ಗೊತ್ತಾಗುತ್ತದೆ. ಇಂತಹ ವಸಿಷ್ಠನು ಅಗ್ನಿಭಕ್ತನಾಗಿ ಅಗ್ನಿಸ್ತವವನ್ನು ಮಾಡಿರು ವುದೂ ಋಕ್ಸಂಹಿತೆಯಿಂದಲೇ ಪ್ರಸಿದ್ಧವಾಗಿದೆ. ಬೃಹದ್ದೇವತೆಯಲ್ಲಿ ವಿವರಿಸುವಂತೆ—

**ಋಷಿಸ್ತು ಮೈತ್ರಾವರುಣಿಃ ಸೂಕ್ತೈಃ ಷೋಳಶಭಿಃ ಪರೈಃ ।**

**ತುಷ್ಟಾವಾಗ್ನಿಮಿತಿ ತ್ವಗ್ನಿಂ ಅಪ್ರ್ಯಸ್ತಸ್ಯ ಜುಷಸ್ವ ನಃ ॥**

(ಬೃ ದೇ. ೫-೧೬೦).

ಮಿತ್ರಾವರುಣ ಪುತ್ರನಾದ ವಸಿಷ್ಠನು ಅಗ್ನಿಸ್ತವವನ್ನು ಮಾಡುತ್ತಾ ಋಕ್ಸಂಹಿತೆಯ ೭-೧-೧ ರಿಂದ ಹದಿನಾರು ಸೂಕ್ತ ಗಳನ್ನು ರಚಿಸಿದನೆಂದು ಗೊತ್ತಾಗುತ್ತದೆ. ಈ ವಸಿಷ್ಠ ಋಷಿಯ ಮಹಿಮೆಯು ಅತ್ಯಧಿಕವಾಗಿದ್ದುದರಿಂದಲೇ ಅವನನ್ನೂ ಅವನ ವಂಶದಲ್ಲಿ ಉತ್ಪನ್ನರಾದವರನ್ನೂ ಯಜ್ಞಯಾಗಾದಿಗಳಲ್ಲಿ ಅತ್ಯಂತ ಶ್ರೇಷ್ಠವಾದ ಸ್ಥಾನದಲ್ಲಿ ಇರಿಸಿ ಗೌರವಿಸಬೇಕೆಂದು ಭಾಲ್ಲವೀಶ್ರುತಿಯ ಉಕ್ತಿಯನ್ನೂ ಬೃಹದ್ದೇವತಾಕಾರರು ಉದಹರಿಸುತ್ತಾರೆ.

**ತಸ್ಮಾದ್ಯೇಽದ್ಯಾಪಿ ವಾಶಿಷ್ಠಾಃ ಸದಸ್ಯಾಃ ಸ್ಯುಸ್ತು ಕರ್ಹಿಚಿತ್ ।**
**ಅರ್ಹಯೇದ್ದಕ್ಷಿಣಾಭಿಸ್ತಾನ್ ಭಾಲ್ಲವೇಯಾ ಶ್ರುತಿಸ್ತ್ವಿಯಂ ॥**

(ಬೃ ದೇ ೧-೧೫೫)

ಆದುದರಿಂದ ಅಗ್ನಿಯ ಸಖ್ಯವು ಅತ್ಯಂತ ಪ್ರಸಿದ್ಧವಾದುದೆಂದೂ ಅದರಿಂದಲೇ ಈ ವಂಶದ ಮಹಿಮೆಯೂ ಅಧಿಕವಾಯಿತೆಂದೂ, ಈಗಲೂ ಸಹ ಅದಕ್ಕೆ ವಿಚ್ಛೇದವನ್ನು ತರದೇ ಹಿಂದಿನ ಅಭಿಮಾನವನ್ನೇ ಅನುಸ್ಯೂತವಾಗಿ ಮುಂದುವರಿಸಿ ತಮ್ಮೆಲ್ಲರ ಶ್ರೇಯಸ್ಸಿಗೆ ದಾರಿಯನ್ನು ತೋರಿಸಬೇಕೆಂದೂ ಈ ಋಕ್ಕಿನಲ್ಲಿ ಪ್ರಾರ್ಥಿಸಿದೆ.

**ಅಭಿಶಸ್ತೇಃ— ಅಭಿಶಸ್ಯತೇ ಹಿಂಸ್ಯತೇ ಅನಯಾ ಇತ್ಯಭಿಶಸ್ತಿಃ ।** ಇದರಿಂದ ಹಿಂಸೆಯಾಗುವುದರಿಂದ ಇದು ದೂಷ್ಯವಾದುದು, ಎಂದು ಜರೆಯನ್ನು ವರ್ಣಿಸುತ್ತಾ ಅಂತಹ ನಾಶಕರವಾದ ಮುಪ್ಪು ಆವರಿಸುವುದರೊಳಗಾಗಿ ಅಮೃತತ್ವವನ್ನು ಕೊಡಬೇಕೆಂದು ಪ್ರಾರ್ಥಿಸಿದೆ

**ಅಧೀಹಿ --ಮಾಂ ಬುಧ್ಯಸ್ವ ।** ನನ್ನನ್ನು ಎಚ್ಚರಗೊಳಿಸು ಎಂದರೆ ನನಗೆ ಕರ್ಮವಿಷಯಕವಾದ ಜ್ಞಾನವನ್ನು ಕೊಟ್ಟು ನಾನು ಯಾಗಾದಿಗಳನ್ನು ನೆರವೇರಿಸುವುದರಿಂದ ಅಮೃತತ್ವವನ್ನು ಪಡೆಯುವಂತೆ ಮಾಡು ಎಂದಭಿಪ್ರಾಯ-

' ವ್ಯಾಕರಣಪ್ರಕ್ರಿಯಾ '

**ಅಗ್ನೇ- ಆಮಂತ್ರಿತಸ್ಯ ಚ** (ಪಾ ಸೂ. ೮-೧ ೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ

**ಸಖ್ಯಾ**—ಸಖ್ಯುರ್ಭಾವಃ ಸಖ್ಯಮ್ **ಸಖ್ಯುರ್ಯಃ** (ಪಾ ಸೂ ೫-೧-೧೨೬) ಎಂಬುದರಿಂದ ಯ ಪ್ರತ್ಯಯ **ಯಸ್ಯೇತಿ ಚ** ಸೂತ್ರದಿಂದ ಸಖಿ ಶಬ್ದದ ಇಕಾರಕ್ಕೆ ಲೋಪ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ ನಪುಂಸಕದಲ್ಲಿ ಶಸ್ಸಿಗೆ ಶಿ ಆದೇಶ ಬಂದಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ

**ಪಿತ್ರ್ಯಾಣಿ—**ಪಿತೃಭ್ಯ ಆಗತಾನಿ ಪಿತ್ರ್ಯಾಣಿ ತತ ಆಗತಃ ಎಂಬರ್ಥದಲ್ಲಿ **ಪಿತುರ್ಯಚ್ಚ** (ಪಾ ಸೂ ೪-೩-೭೯) ಎಂಬುದರಿಂದ ಯತ್ ಪ್ರತ್ಯಯ. ಪಿತೃ+ಯ ಎಂದಿರುವಾಗ **ರೀಙ್ ಋತಃ** (ಪಾ ಸೂ ೭ ೪-೨೭) ಎಂಬುದರಿಂದ ಋಕಾರಕ್ಕೆ ರೀಙಾದೇಶ ಪಿತ್ರೀ+ಯ ಎಂದಿರುವಾಗ **ಯಸ್ಯೇತಿ ಚ** ಸೂತ್ರದಿಂದ ಈಕಾರಕ್ಕೆ ಲೋಪ. ಪಿತ್ರ್ಯ ಶಬ್ದವಾಗುತ್ತದೆ ದ್ವಿತೀಯಾ ಬಹುವಚನಾಂತರೂಪ **ಯತೋಽನಾವಃ** (ಪಾ ಸೂ ೬ ೧-೨೧೩) ಎಂಬುದರಿಂದ ಸ್ವರಿತವು ಬಾಧಿತವಾಗಿ ಆದ್ಯುದಾತ್ತಸ್ವರ ಬರುತ್ತದೆ

**ಮರ್ಷಿಷ್ಠಾಃ** —ಮೃಷ ತಿತಿಕ್ಷಾಯಾಂ ಧಾತು ಪ್ರಾರ್ಥನಾರೂಪ ಅರ್ಥವು ತೋರುವಾಗ **ಛಂದಸಿ ಲುಙ್ ಲಙ್ ಲಿಟಃ** ಎಂಬುದರಿಂದ ಲುಙ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ **ಚ್ಲೇಃ ಸಿಚ್** ಸೂತ್ರದಿಂದ ಚ್ಲಿಗೆ ಸಿಚಾದೇಶ. **ಆರ್ಧಧಾತುಕಸ್ಯೇಡ್ವಲಾದೇಃ** ಸೂತ್ರದಿಂದ ಅದಕ್ಕೆ ಇಡಾಗಮ **ಆದೇಶ ಪ್ರತ್ಯಯಯೋಃ** ಸೂತ್ರದಿಂದ ಸಕಾರಕ್ಕೆ ಷತ್ವ **ಷ್ಟುನಾ ಷ್ಟುಃ** ಸೂತ್ರದಿಂದ ಪ್ರತ್ಯಯ ಥಕಾರಕ್ಕೆ ಷ್ಟುತ್ವ ಸಕಾರಕ್ಕೆ ರುತ್ವವಿಸರ್ಗ. ಮಾಙ್ ಸಂಬಂಧವಿರುವುದರಿಂದ **ನ ಮಾಙ್ಯೋಗೇ** (ಪಾ ಸೂ ೬-೪-೭೪) ಎಂಬುದರಿಂದ ಅಡಾಗಮ ಬರುವುದಿಲ್ಲ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ವಿದುಃ** ವಿದ ಜ್ಞಾನೇ ಧಾತು. ಇದಕ್ಕೆ **ಬಹುಲಮನ್ಯತ್ರಾಪಿ** ಎಂಬ ಉಣಾದಿ ಸೂತ್ರದಿಂದ ಉಸಿ ಪ್ರತ್ಯಯ ಬಹುಲಗ್ರಹಣದಿಂದಲೇ ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ **ವಿದುಸ್ ಕವಿಃ** ಎಂದಿರುವಾಗ **ಸಸಜುಷೋರುಃ** ಸೂತ್ರದಿಂದ ಸಕಾರಕ್ಕೆ ರುತ್ವ **ಖರವಸಾನಯೋರ್ವಿಸರ್ಜನೀಯಃ** ಎಂಬುದರಿಂದ ಅದಕ್ಕೆ ವಿಸರ್ಗ. **ಛಂದಸಿ ವಾ ಪ್ರಾಮ್ರೇಡಿತಯೋಃ** (ಪಾ. ಸೂ ೮-೩-೪೯) ಎಂಬುದರಿಂದ ವಿಸರ್ಗಕ್ಕೆ ಷತ್ವ ಬರುತ್ತದೆ

**ನಭಃ**--ಣಹ ಬಂಧನೇ ಧಾತು. **ಣೋ ನಃ** ಸೂತ್ರದಿಂದ ಣಕಾರಕ್ಕೆ ನತ್ವ. ಇದಕ್ಕೆ **ನಹೇರ್ದಿವಿ ಭಶ್ಚ** (ಉ ಸೂ ೪-೬೫೦) ಎಂಬುದರಿಂದ ಆಕಾಶರೂಪ ಅರ್ಥ ತೋರುವಾಗ ಅಸುನ್ ಪ್ರತ್ಯಯ **ತತ್ಸಂನಿಯೋಗದಿಂದ** ಹಕಾರಕ್ಕೆ ಭಕಾರಾದೇಶ ನಭಸ್ ಶಬ್ದವಾಗುತ್ತದೆ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ ದ್ವಿತೀಯಾ ಏಕವಚನಾಂತರೂಪ

**ಜರಿಮಾ**—ಜ್ಯಾಷ್ ವಯೋಹಾನೌ ಧಾತು ಇದಕ್ಕೆ ಔಣಾದಿಕವಾದ ಇಮನಿಚ್ ಪ್ರತ್ಯಯವು ಭಾವಾರ್ಥದಲ್ಲಿ ಬರುತ್ತದೆ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣ ಋಕಾರದ ಸ್ಥಾನದಲ್ಲಿ ಬರುವುದರಿಂದ ರಪರವಾಗಿ ಬರುತ್ತದೆ. ಪ್ರತ್ಯಯ ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ ಜರಿಮನ್ ಶಬ್ದವಾಗುತ್ತದೆ ಪ್ರಥಮಾ ಏಕವಚನಾಂತರೂಪ

**ಮಿನಾತಿ**—ಮೀಞ್ ಹಿಂಸಾಯಾಮ್ ಧಾತು. ಕ್ರ್ಯಾದಿ **ಪ್ವಾದೀನಾಂ ಹ್ರಸ್ವಃ** (ಪಾ. ಸೂ ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಅಭಿಶಸ್ತೇಃ--ಅಭಿಶಸ್ಯತೇ ಹಿಂಸ್ಯತೇ ಅನಯಾ ಇತಿ ಅಭಿಶಸ್ತಿಃ ।** ಶಸು ಹಿಂಸಾಯಾಂ ಧಾತು ಭ್ವಾದಿ ಇದಕ್ಕೆ ಕರಣಾರ್ಥದಲ್ಲಿ ಕ್ತಿನ್ ಪ್ರತ್ಯಯ **ತಾದೌ ಚ ನಿತಿ** (ಪಾ ಸೂ ೬-೨-೫೦) ಎಂಬುದರಿಂದ ನಿತ್ತಾದ ತಾದಿಯಾದ ಪ್ರತ್ಯಯಾಂತವು ಪರದಲ್ಲಿರುವುದರಿಂದ ಗತಿಗೆ (ಅಭಿ) ಪ್ರಕೃತಿಸ್ವರ ಬರುತ್ತದೆ

**ಅಧೀಹಿ**—ಇಕ್ ಸ್ಮರಣೇ ಧಾತು ಇದು ಸಾಮಾನ್ಯವಾಗಿ ಅಧಿಪೂರ್ವವಾಗಿರುತ್ತದೆ ಲೋಟ್ ಮಧ್ಯಮ ಪುರುಷದಲ್ಲಿ ಸಿಪ್ಪಿಗೆ ಹಿ ಆದೇಶ **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್. ಹಿ ಆದೇಶಕ್ಕೆ ಅಪಿತ್ವ ಹೇಳಿರುವುದರಿಂದ ಙಿತ್ವ ಬರುವುದರಿಂದ ಧಾತುವಿಗೆ ಗುಣ ಬರುವುದಿಲ್ಲ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೧೦ ॥

ಎಪ್ಪತ್ತೊಂದನೆಯ ಸೂಕ್ತ ಸಮಾಪ್ತವು.



# ಎಪ್ಪತ್ತೆರಡನೆಯ ಸೂಕ್ತವು

**ನಿ ಕಾವ್ಯೇತಿ ದಶರ್ಚಮಷ್ಟಮಂ ಸೂಕ್ತಂ ತ್ರೈಷ್ಟುಭಮಾಗ್ನೇಯಂ ಪರಾಶರಸ್ಯಾರ್ಷಂ ಅನುಕ್ರಾಂತಂ ಚ । ನಿ ಕಾವ್ಯೇತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ॥**

ಅನುವಾದವು—**ನಿ ಕಾವ್ಯಾ** ಎಂಬ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು ಈ ಸೂಕ್ತಕ್ಕೆ ಪರಾಶರನು ಋಷಿಯು, ಅಗ್ನಿಯು ದೇವತೆಯು, ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ **ನಿ ಕಾವ್ಯಾ** ಎಂದು ಹೇಳಿರುವುದು ಪ್ರಾತರನುವಾಕಮಂತ್ರಗಳಿಗಾಗಿಯೂ ಆಶ್ವಿನ ಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದು

## ಸೂಕ್ತ—೭೨

॥ ಓಂ ॥

॥ ಮಂಡಲ—೧ ॥ ಅನುವಾಕ—೧೨ ॥ ಸೂಕ್ತ—೭೨ ॥

॥ ಅಷ್ಟಕ- ೧ ॥ ಅಧ್ಯಾಯ—೫ ॥ ವರ್ಗ—೧೭, ೧೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥

॥ ಋಷಿಃ—ಪಾರಾಶರಃ ಶಾಕ್ತ್ಯಃ ॥

ದೇವತಾ—ಅಗ್ನಿಃ ॥

ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ನಿ ಕಾವ್ಯಾ ವೇಧಸಃ ಶಶ್ವತಸ್ಕರ್ಹಸ್ತೇ ದಧಾನೋ ನರ್ಯಾ
ಪುರೂಣಿ ।
ಅಗ್ನಿರ್ಭುವದ್ರಯಿಪತೀ ರಯೀಣಾಂ ಸತ್ರಾ ಚಕ್ರಾಣೋ ಅಮೃ-
ತಾನಿ ವಿಶ್ವಾ ॥ ೧ ॥

॥ ಪದಪಾಠಃ ॥

ನಿ । ಕಾವ್ಯಾ । ವೇಧಸಃ । ಶಶ್ವತಃ । ಕಃ । ಹಸ್ತೇ । ದಧಾನಃ । ನರ್ಯಾ । ಪುರೂಣಿ ।

ಅಗ್ನಿಃ । ಭುವತ್ । ರಯಿಽಪತಿಃ । ರಯೀಣಾಂ । ಸತ್ರಾ । ಚಕ್ರಾಣಃ । ಅಮೃ-ತಾನಿ । ವಿಶ್ವಾ ॥ ೧ ॥

॥ ಸಾಯಣಭಾಷ್ಯಂ ॥

ಶಶ್ವತಃ ಶಾಶ್ವತಸ್ಯ ನಿತ್ಯಸ್ಯ ವೇಧಸೋ ವಿಧಾತುರ್ಬ್ರಹ್ಮಣಃ ಸಂಬಂಧೀನಿ ಕಾವ್ಯಾ ಕಾವ್ಯಾನಿ ಮಂತ್ರರೂಪಾಣಿ ಸ್ತೋತ್ರಾಣ್ಯಯಮಗ್ನಿರ್ನಿ ಕಃ । ನಿಯಮೇನ ಸ್ವಾತ್ಮಾಭಿಮುಖಂ ಕರೋತಿ । ಕಿಂ ಕುರ್ವನ್ । ನರ್ಯಾ ನೃಭ್ಯೋ ಹಿತಾನಿ ನೃಷು ಸಾಧೂನಿ ವಾ ಪುರೂಣಿ ಬಹೂನಿ ಧನಾನಿ ಹಸ್ತೇ ದಧಾನೋ ಹಸ್ತೇ ಧಾರಯನ್ । ಈದೃಗ್ಭೂತಮಗ್ನಿಮವಲೋಕ್ಯ ಸರ್ವೇ ಜನಾಃ ಸ್ತುವಂತೀತಿ ಭಾವಃ । ಸ್ತೋತೃಭ್ಯೋ ಧನೇಷು ದತ್ತೇಷ್ವಪ್ಯಗ್ನೇರ್ಧನಂ ನ ಕ್ಷೀಯತ ಇತ್ಯಾಹ । ಅಗ್ನಿರಿತಿ । ಅಯಮಗ್ನೀ ರಯೀಣಾಂ ರಯಿಪತಿರ್ಭುವತ್ । ಧನಾನಾಂ ಮಧ್ಯೇ ಯಾನಿ ಧನಾನ್ಯುತ್ಕೃಷ್ಟಾನಿ ತೇಷಾಂ ಸ್ವಾಮೀ ಭವತಿ । ಕಿಂ ಕುರ್ವನ್ । ವಿಶ್ವಾ ವಿಶ್ವಾನಿ ಸರ್ವಾಣ್ಯಮೃತಾನಿ । ಹಿರಣ್ಯಾನ್ಯಮೃತತ್ । ಅಮೃತಂ ಹಿರಣ್ಯಂ । ಅಥ ೫-೨೮-೧೧ । ಇತಿ ಶ್ರುತೇಃ । ಸರ್ವಾಣಿ ಹಿರಣ್ಯಾನಿ ಸ್ತೋತೃಭ್ಯಃ ಸತ್ರಾ ಸಹೈವ ಚಕ್ರಾಣಃ ಕುರ್ವನ್ । ಯುಗಪತ್ಪ್ರಯಚ್ಛನ್ನಿತ್ಯರ್ಥಃ ॥ ಕಃ । ಕರೋತೇಶ್ಛಾಂದಸೋ ಲುಙ್ । ಮಂತ್ರೇ ಘಸೇತಿ ಚ್ಲೇರ್ಲುಕ್ । ಹಲ್ಙ್ಯಾಭ್ಯ ಇತಿ ತಕಾರಲೋಪಃ । ನರ್ಯಾ । ನರಶಬ್ದಾದ್ಧಿತಾರ್ಥೇ ಗವಾದಿ-ಲಕ್ಷಣೋ ಯತ್ಪ್ರತ್ಯಯೋ ದ್ರಷ್ಟವ್ಯಃ । ಪಾ. ೫-೧-೨ । ಯದ್ವಾ । ತತ್ರ ಸಾಧುರಿತಿ ಯತ್ । ಚಕ್ರಾಣಃ । ಕರೋತೇರ್ಲಟಃ ಶಾನಚ್ । ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ನನ್ವೇವಂ ಸತ್ಯಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ಪ್ರಾಪ್ನೋತಿ । ಏವಂ । ತರ್ಹಿ ಲಿಟಃ ಕಾನಜಸ್ತು । ತಸ್ಯಾರ್ಧಧಾತುಕತ್ವೇನಾಭ್ಯ-ಸ್ತಾದ್ಯುದಾತ್ತತ್ವಾಭಾವೇ ಚಿತ್ಸ್ವರ ಏವ ಶಿಷ್ಯತೇ ॥

। ಪ್ರತಿಪದಾರ್ಥ

**ನರ್ಯಾ** -ಮನುಷ್ಯರಿಗೆ ಹಿತವಾದ । **ಪುರೂಣಿ**—ಹೆಚ್ಚಾದ (ಧನವನ್ನು) । **ಹಸ್ತೇ**—ಹಸ್ತದಲ್ಲಿ । **ದಧಾನಃ**—ಧರಿಸಿದವನಾಗಿ । **ಶಶ್ವತಃ** – ನಿತ್ಯನಾದ । **ವೇಧಸಃ** —ಬ್ರಹ್ಮನ ಸಂಬಂಧಿಯಾದ (ಬ್ರಹ್ಮನ ಉದ್ದಿಶ್ಯಕವಾದ) । **ಕಾವ್ಯಾ**—ಕಾವ್ಯಗಳನ್ನು (ಸ್ತೋತ್ರಗಳನ್ನು) । **ನಿ ಕಃ**—ನಿಯಮದಿಂದ ತನ್ನ ಅಭಿಮುಖನಾಗಿ

ಾಡಿಕೊಳ್ಳುತ್ತಾನೆ । **ಅಗ್ನಿಃ**— (ಈ) ಅಗ್ನಿಯು । **ವಿಶ್ವಾ**—ಎಲ್ಲಾ । **ಅಮೃತಾನಿ**—ಸುವರ್ಣವನ್ನು । **ತ್ರಾ**—ಏಕಕಾಲದಲ್ಲಿ । **ಚಕ್ರಾಣಃ**—ಮಾಡುತ್ತಾ (ಕೊಡುತ್ತಾ) । **ರಯೀಣಾಂ**—ಧನದಲ್ಲಿ ಉತ್ತಮವಾದ ನಕ್ಕೆ । **ರಯಿಪತಿಃ**—ಧನಾಧಿಪತಿಯಾಗುತ್ತಾನೆ

॥ ಭಾವಾರ್ಥ ॥

ಅಗ್ನಿಯು, ತನ್ನ ಹಸ್ತಗಳಲ್ಲಿ ಸ್ತೋತೃಗಳಿಗೆ ಪ್ರಿಯವಾದ ಧನವನ್ನು ಹಿಡಿದುಕೊಂಡು ನಿತ್ಯನಾದ ಬ್ರಹ್ಮನನ್ನು ಶೇಶಿಸಿ ಮಾಡಿದ ಸ್ತೋತ್ರಗಳನ್ನು ತಾನೇ ಸ್ವೀಕರಿಸುತ್ತಾನೆ ಸ್ತೋತೃಗಳಿಗೆ ಶೀಘ್ರವಾಗಿ ಎಲ್ಲಾ ಸುವರ್ಣವನ್ನೂ ಾನಮಾಡಿ, (ಧನವು ಕ್ಷಯಿಸದೇ ಇರುವುದರಿಂದ) ಧನಾಧಿಪತಿಯಾಗುತ್ತಾನೆ

## English Translation

Agni, holding in his hands many good things for men appropriates he prayers addressed to the eternal creator. Agni is the lord of riches, quickly bestowing (on those who praise him) all golden (gifts)

॥ ವಿಶೇಷವಿಷಯಗಳು ॥

ಈ ಋಕ್ಕಿಗೆ ಅರ್ಥಮಾಡುವಾಗ ಸಾಯಣರ ವಿವರಣೆಗೂ, ಸ್ಕಂದಸ್ವಾಮಿಗಳ ವಿವರಣೆಗೂ ಬಹಳ ವ್ಯತ್ಯಾಸ ಎರುತ್ತದೆ. ಸಾಯಣರ ವಿವರಣೆಯ ಪ್ರಕಾರ **ಶಶ್ವತಃ**—ನಿತ್ಯನಾದ. **ವೇಧಸಃ**—ಸೃಷ್ಟಿಕರ್ತನಾದ ಬ್ರಹ್ಮನ, **ಕಾವ್ಯಾ**—ಮಂತ್ರರೂಪವಾದ ಸ್ತೋತ್ರವನ್ನು **ನಿ ಕಃ**—ಖಂಡಿತವಾಗಿಯೂ, ತನ್ನ ಪರವಾಗಿಯೇ ಮಾಡಿಕೊಳ್ಳು **ತ್ತಾನೆ** ಎಂದರೆ ಅಗ್ನಿಯು ಸೃಷ್ಟಿಕರ್ತನಾದ ಬ್ರಹ್ಮನಿಗೆ ಯಜಮಾನನು ಅರ್ಪಿಸಿದ ಮಂತ್ರರೂಪವಾದ ಸ್ತೋತ್ರಗಳೆಲ್ಲವನ್ನೂ ತನಗೆ ಅಭಿಮುಖವಾಗಿಯೇ ತಿರುಗಿಸಿಕೊಂಡು ತನ್ನ ಪರವಾಗಿ ಮಾಡಿಕೊಳ್ಳುತ್ತಾನೆ ಎಂದು ತಾತ್ಪರ್ಯ

ಸ್ಕಂದಸ್ವಾಮಿಗಳ ವಿವರಣೆಯ ಪ್ರಕಾರ, **ಅಗ್ನಿಃ**—ಅಗ್ನಿಯು, **ಶಶ್ವತಃ**—ಬಹುಸಂಖ್ಯಾಕವುಳ್ಳ, **ವೇಧಸಃ**—ಮೇಧಾವಿಯಾದ ಯಜಮಾನನ, **ಕಾವ್ಯಾ**—ಕವಿಯಾದ ಎಂದರೆ ಮೇಧಾವಿಯಾದ ತನ್ನ (ಅಗ್ನಿಯ) ಹವಿರ್ವಹಣವೇ ಮುಂತಾದ ಕಾರ್ಯಗಳನ್ನು **ನಿ ಕಃ**—ಖಂಡಿತವಾಗಿಯೂ ನೆರವೇರಿಸುತ್ತಾನೆ. ಈ ಪ್ರಕಾರ, ಕವಿಯಾದ ಎಂದರೆ ಮೇಧಾವಿಯಾದ ಅಗ್ನಿಯು ಯಜಮಾನನ ಹವಿಸ್ಸನ್ನು ವಹಿಸುವುದೇ ಮೊದಲಾದ ತನ್ನ ಕರ್ತವ್ಯಗಳನ್ನೂ ಖಂಡಿತವಾಗಿಯೂ ನೆರವೇರಿಸುತ್ತಾನೆ ಎಂದರ್ಥ

ಈ ಎರಡು ವಿಧವಾದ ವಿವರಣೆಗಳಲ್ಲಿ ಸ್ಕಂದಸ್ವಾಮಿಗಳದೇ ಹೆಚ್ಚು ಸಮಂಜಸವಾಗಿರುವಂತೆ ತೋರುತ್ತದೆ ಏತಕ್ಕೆಂದರೆ **ವೇಧಸಃ**—ಎಂಬ ಪದಕ್ಕೆ ಉತ್ಪಾದಕನು ಎಂಬ ಅರ್ಥವು ಅನೇಕ ಕಡೆಗಳಲ್ಲಿದ್ದರೂ ಋಕ್ಸಂಹಿತೆಯಲ್ಲಿ ಯಜ್ಞಫಲೋತ್ಪಾದಕನು ಎಂದಾಗುತ್ತದೆಯೇ ಹೊರತು, ಸೃಷ್ಟಿಕರ್ತನಾದ ಬ್ರಹ್ಮನ ಪರವಾಗಿ ಈ ವಿಶೇಷಣವು ಉಪಯೋಗಿಸಿರುವಂತೆ ಕಾಣುವುದಿಲ್ಲ **ವೇಧಸ್**-ಶಬ್ದವು **ವಿಪ್ರಃ, ವಿಗ್ರಃ, ಗೃತ್ಸಃ** ಇತ್ಯಾದಿ **ಮೇಧಾವಿ** ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ ೩-೧೫) **ವೇಧಸಃ**—ಎಂದರೆ ಮೇಧಾವಿಯಾದ ಯಜಮಾನನ ಎಂದೂ

ಮತ್ತು **ಶಶ್ವತ್** ಶಬ್ದವು **ಉರು, ಪುರು, ತುವಿ** ಇತ್ಯಾದಿ **ಬಹು**ನಾಮಗಳಲ್ಲಿ (ನಿ. ೩-೧೩) ಪಠಿತವಾಗಿರುವುದರಿಂದ **ಶಶ್ವತಃ** ಎಂದರೆ ಬಹುಸಂಖ್ಯಾಕವಾದ ಯಜಮಾನನ ಅಥವಾ ಯಜಮಾನರ ಎಂದೂ, **ಕಾವ್ಯಾನಿ** ಎನ್ನುವುದಕ್ಕೆ ಅಗ್ನಿಯು **ಕವಿ** ಎಂದರೆ ಮೇಧಾವಿ ಅಥವಾ ಕ್ರಾಂತಪ್ರಜ್ಞನಾದುದರಿಂದಲೂ, ಹವಿರ್ವಹಣವು ಅವನ ಕರ್ತವ್ಯವಾದ್ದರಿಂದಲೂ ಇಲ್ಲಿ **ಕಾವ್ಯಾನಿ** ಎನ್ನುವುದಕ್ಕೆ ಕವಿಯ ಕರ್ಮಗಳು, ಹವಿರ್ವಹಣವೇ ಮೊದಲಾದ ಕರ್ತವ್ಯಗಳು ಎಂಬುದಾಗಿ ಅರ್ಥಮಾಡುವುದು ಸಹಜವಾಗಿದೆ. ಮುಖ್ಯವಾಗಿ, ಕವಿಯಾದ ಅಗ್ನಿಯು ಯಜಮಾನನು ತನಗೆ ಒಪ್ಪಿಸಿರುವ ಕಾರ್ಯಗಳನ್ನು ಖಂಡಿತವಾಗಿಯೂ ನೆರವೇರಿಸುತ್ತಾನೆ ಎಂದಾಗುತ್ತದೆ. ಈ ವಿಧವಾದ ವಿವರಣೆಯು ಸನ್ನಿವೇಶಕ್ಕೆ ಸಹಜವಾಗಿರುವಂತೆ ಕಾಣುತ್ತದೆ.

**ಸತ್ರಾ—ಬಟ್, ಶತ್, ಸತ್ರಾ** ಇತ್ಯಾದಿ ಆರು **ಸತ್ಯ** ನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) **ಸತ್ರಾ** ಎಂದರೆ ಸತ್ಯವಾಗಿಯೂ ಎಂದರ್ಥ ಅಥವಾ ಸದಾಕಾಲದಲ್ಲಿಯೂ ಎಂದಾದರೂ ಆಗಬಹುದು

**ಅಮೃತಾನಿ**—ನಿತ್ಯಗಳಾದ ಎಂದಾಗಲಿ ಅಥವಾ **ಅಮೃತಂ ಹಿರಣ್ಯಂ** (ಅ ಸಂ ೫-೨೨-೧೧) ಎಂಬ ಶ್ರುತಿವಾಕ್ಯವಿರುವುದರಿಂದ ಹಿರಣ್ಯಗಳನ್ನು ಎಂದಾಗಲಿ ಎಂದು ಅರ್ಥವಾಗುತ್ತದೆ ಮೊದಲನೇ ಅರ್ಥದ ಪ್ರಕಾರ **ಅಮೃತಾನಿ-ನಿತ್ಯಾನಿ ಹವಿರ್ನಯನಾದೀನಿ ವಿಶ್ವಾ—ಸರ್ವಾಣಿ ।** ಹವಿರ್ನಯನವೇ ಮೊದಲಾದ ತನ್ನ ಸಕಲ ಕಾರ್ಯಗಳನ್ನೂ ನೆರವೇರಿಸುತ್ತಾನೆಂದರ್ಥ

**ರಯೀಣಾಂ—ಹವಿರ್ಲಕ್ಷಣಾನಾಂ ಸರ್ವೇಷಾಂ ಯಜಮಾನಧನಾನಾಂ**—ಹವಿಸ್ಸಿನ ರೂಪದ ಯಜಮಾನನ ಸಕಲ ಧನಕ್ಕೂ **ರಯಿಪತಿಃ**—ಅಧಿಪತಿಯಾಗಿ, ಅಥವಾ ಸಕಲ ವಿಧವಾದ ಧನಕ್ಕೂ ಅಧಿಪತಿಯಾಗಿ ಎಂದರ್ಥ

**ನರ್ಯಾ—ನರ್ಯಃ, ನೃಭ್ಯೋ ಹಿತಃ, ನರಾಪತ್ಯಮಿತಿ ವಾ ।** (ನಿ ೧೧-೩೬) ।ನರರಿಗೆ ಹಿತವಾದುದು ಅಥವಾ ಸಂತಾನ ಎಂದು ನಿರುಕ್ತಕಾರರು ವಿವರಿಸಿದ್ದಾರೆ ಇಲ್ಲಿಯೂ ಸಹ **ನರ್ಯಾ ಪುರೂಣಿ**—ಎನ್ನುವುದಕ್ಕೆ ಅತ್ಯಧಿಕವಾದುದೂ ಯಜ್ಞಕರ್ತರಾದ ಮಾನವರಿಗೆ ಹಿತಕಾರಿಯಾದುದೂ ಆದ ಧನವನ್ನು **ದಧಾನಃ** ಯಾವಾಗಲೂ ಹಿಡಿದುಕೊಂಡು ಅನುಗ್ರಹ ಮುಖವುಳ್ಳವನಾಗಿಯೇ ಎಂದಾಗಲಿ ಅಥವಾ ಅತ್ಯಧಿಕವಾದುದೂ ಸಂತಾನರೂಪವಾದುದೂ ಆದ ಫಲವನ್ನು ಹಿಡಿದುಕೊಂಡು ಎಂದಾಗಲಿ ಅರ್ಥವಾಗುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

**ಕಾವ್ಯಾ**—ನಪುಂಸಕದಲ್ಲಿ ದ್ವಿತೀಯಾ ಬಹುವಚನದಲ್ಲಿ ಶಸ್ಸಿಗೆ ಶಿ ಆದೇಶ ಬಂದಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ

**ಕಃ**—ಡುಕೃಞ್ ಕರಣೇ ಧಾತು ವರ್ತಮಾನಾರ್ಥದಲ್ಲಿ **ಛಂದಸಿ ಲುಙ್ ಲಙ್ ಲಿಟಃ** ಎಂಬುದರಿಂದ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಸೂತ್ರದಿಂದ ಇಕಾರಲೋಪ **ಚ್ಲಿ ಲುಙಿ** ಎಂಬುದರಿಂದ ಲುಙಿನಲ್ಲಿ ಚ್ಲಿ ವಿಕರಣ ಅದಕ್ಕೆ **ಮಂತ್ರೇಘಸಹ್ವರಣ**—(ಪಾ. ಸೂ. ೨-೪-೮೦) ಎಂಬುದರಿಂದ

ಚ್ಲಿಗೆ ಲುಕ್ ತಿಪ್ ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. **ಉರಣ್ರಪರಃ** ಎಂಬುದರಿಂದ ರಪರನಾಗಿ ಬರುತ್ತದೆ ಆಗ ಹಲಿನ ಪರದಲ್ಲಿ ತಿಪ್ ಬಂದುದರಿಂದ **ಹಲ್ಙ್ಯಾಭ್ಯೋ** —ಎಂಬುದರಿಂದ ಅದಕ್ಕೆ ಲೋಪ ರೇಫಕ್ಕೆ **ಖರವಸಾನಯೋರ್ವಿಸರ್ಜನೀಯಃ** ಸೂತ್ರದಿಂದ ವಿಸರ್ಗ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಂಗಕ್ಕೆ ಅಡಾಗವು ಬರುವುದಿಲ್ಲ ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ

**ದಧಾನಃ**—ಡುಧಾಞ್ ಧಾರಣಪೋಷಣಯೋಃ ಧಾತು ಲಡರ್ಥದಲ್ಲಿ ಶಾನಚ್ ಪ್ರತ್ಯಯ **ಜುಹೋತ್ಯಾದಿಭ್ಯಃ ಶ್ಲುಃ** ಎಂಬುದರಿಂದ ಶ್ಲು ವಿಕರಣ ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ ಜಸ್ತ್ವ. **ಅಭ್ಯಸ್ತಾನಾಮಾದಿಃ** (ಪಾ ಸೂ ೬-೧ ೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ನರ್ಯಾ—ನರಾಯ ಹಿತಂ** ಎಂಬರ್ಥ ವಿವಕ್ಷ್ಯಾಮಾಡಿದಾಗ ಗವಾದಿಗಣದಲ್ಲಿ ಇದು ಸೇರಿರುವುದರಿಂದ **ಉಗವಾದಿಭ್ಯೋಯತ್** (ಪಾ. ಸೂ ೫-೧-೨) ಎಂಬುದರಿಂದ ನರ ಶಬ್ದಕ್ಕೆ ಯತ್ ಪ್ರತ್ಯಯ ಅಥವಾ **ತತ್ರ ಸಾಧುಃ** (ಪಾ ಸೂ. ೪-೪-೯೮) ಎಂಬುದರಿಂದ ಸಾಧ್ವರ್ಥದಲ್ಲಿ ಯತ್ ಪ್ರತ್ಯಯ. ನಪುಂಸಕದಲ್ಲಿ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ. **ಯತೋಽನಾವಃ** (ಪಾ ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ

**ರಯಿಪತಿಃ—ರಯೀಣಾಂ ಪತಿಃ ರಯಿಪತಿಃ ಪತ್ಯಾವೈಶ್ವರ್ಯೇ**—(ಪಾ ಸೂ ೬-೨ ೧೮) ಎಂಬುದರಿಂದ ಉತ್ತರಪದಕ್ಕೆ ಆದ್ಯುದಾತ್ತಸ್ವರ ಬರುತ್ತದೆ

**ಚಕ್ರಾಣಃ**--ಡುಕೃಞ್ ಕರಣೇ ಧಾತು ಇದಕ್ಕೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಶ್ಲು ಆದೇಶ. **ಶ್ಲೌ** ಎಂಬುವುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಉರದತ್ವ ಹಲಾದಿ ಶೇಷ. **ಕುಹೋಶ್ಚುಃ** ಎಂಬುದರಿಂದ ಚಕಾರಾದೇಶ ಧಾತುವಿನ ಋಕಾರಕ್ಕೆ ಯಣಾದೇಶ. ರೇಫದ ಪರದಲ್ಲಿ ನಕಾರ ಬಂದುದರಿಂದ **ಅಟ್‌ಕುಪ್ವಾಙ್**—ಸೂತ್ರದಿಂದ ಣತ್ವ ಹೀಗೆ ಪ್ರಕ್ರಿಯೆಯನ್ನು ಹೇಳಿದರೆ **ಚಕ್ರಾಣಃ** ಎಂದು ರೂಪಸಿದ್ಧಿ ಯಾಗುತ್ತದೆ ಆದರೆ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರಬೇಕಾಗುತ್ತದೆ ಆದುದರಿಂದ ಲಿಟ್ಟಿಗೆ **ಲಿಟಃ ಕಾನಜ್ವಾ** ಎಂಬುದರಿಂದ ಕಾನಜಾದೇಶ ಇದು ಶಿತ್ತಾಗದಿದ್ದುದರಿಂದ **ಆರ್ಧಧಾತುಕಂ ಶೇಷಃ** ಎಂಬುದರಿಂದ ಆರ್ಧಧಾತುಕಸಂಜ್ಞೆಯನ್ನು ಹೊಂದುವುದರಿಂದ ಅಭ್ಯಸ್ತ ನಿಮಿತ್ತಕವಾದ ಆದ್ಯುದಾತ್ತಸ್ವರವು ಬರುವುದಿಲ್ಲ ಆಗ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತ ಸ್ವರವೇ ಬರುತ್ತದೆ

**ವಿಶ್ವಾ— ಶೇಶ್ಛಂದಸಿ ಬಹುಲಂ** (ಪಾ ಸೂ ೬ ೧-೭೦) ಎಂಬುದರಿಂದ ನಪುಂಸಕದಲ್ಲಿ ಶಿಗೆ ಲೋಪ ॥೧॥



॥ ಸಂಹಿತಾಪಾಠಃ ॥

ಅಸ್ಮೇ ವತ್ಸಂ ಪರಿ ಷಂತಂ ನ ವಿಂದನ್ನಿಚ್ಛಂತೋ ವಿಶ್ವೇ ಅಮೃ
ತಾ ಅಮೂರಾಃ ।
ಶ್ರಮಯುವಃ ಪದವ್ಯೋ ಧಿಯಂಧಾಸ್ತಸ್ಥುಃ ಪದೇ ಪರಮೆ
ಚಾರ್ವಗ್ನೇಃ ॥ ೨ ॥

॥ ಪದಪಾಠಃ ॥

ಅಸ್ಮೇ ಇತಿ । ವತ್ಸಂ । ಪರಿ । ಸಂತಂ । ನ । ವಿಂದನ್ । ಇಚ್ಛಂತಃ । ವಿಶ್ವೇ ।
ಅಮೃತಾಃ । ಅಮೂರಾಃ ।
ಶ್ರಮಽಯುವಃ । ಪದಽವ್ಯಃ । ಧಿಯಂಽಧಾಃ । ತಸ್ಥುಃ । ಪದೇ । ಪರಮೇ ।
ಚಾರು । ಅಗ್ನೇಃ ॥ ೨ ॥

॥ ಸಾಯಣಭಾಷ್ಯಂ ॥

ಅಸ್ಮೇ ಅಸ್ಮಾಕಂ ವತ್ಸಂ ವತ್ಸವದತ್ಯಂತಂ ಪ್ರಿಯಂ । ಯದ್ವಾ । ವತ್ಸಃ ಪುತ್ರಃ ಪಶ್ಚಾದುತ್ಪನ್ನತ್ವಾತ್ । ತದ್ವದಗ್ನಿರಪ್ಯಸ್ಮಾಕಂ ಪುತ್ರಃ । ತಥಾ ಚಾಮ್ನಾಯತೇ । ಮಮ್ಯೈವ ಸನ್ಸಹ ಹವ್ಯಾನ್ಯಗ್ನೇ ಪುತ್ರಃ ಪಿತ್ರೇ ಲೋಕಕೃಜ್ಜಾತವೇದಃ । ತೈ. ಬ್ರಾ. ೩-೭-೭-೧೦ । ಇತಿ । ಪರಿ ಷಂತಂ ಪರಿತಃ ಸರ್ವತ್ರ ವರ್ತಮಾನಂ । ದೇವೇಭ್ಯೋ ನಿರ್ಗತ್ಯಾಶ್ವತ್ಥವೇಣ್ವಾದಿಷು ನಿಲೀನಂ ಸಂತಮಿತ್ಯರ್ಥಃ । ಏವಂವಿಧಮಗ್ನಿಮಿಚ್ಛಂತೋ ವಿಶ್ವೇಽಮೃತಾಃ ಸರ್ವೇಽಮರಣಧರ್ಮಾಣೋ ದೇವಾ ಅಮೂರಾ ಅಮೂಢಾ ಮರುತಃ ನ ವಿಂದನ್ । ತಮಗ್ನಿಂ ನಾಲಭಂತ । ಅಲಭಮಾನಾಶ್ಚ ತೇ ಶ್ರಮಯುವೋ ಹವ್ಯವಾಹನಸ್ಯಾಭಾವೇ ಹವಿಷಾಮಭಾವಾತ್ತಜ್ಜನ್ಯೇನ ಶ್ರಮೇಣ ಕ್ಲೇಶೇನೈಕೀಭೂತಾಃ ತಸ್ಯಾಗ್ನೇರನ್ವೇಷಣಾಯ ಪದವ್ಯಃ ಪಾದೈರ್ಗಚ್ಛಂತಃ ಧಿಯಂಧಾ ಧಿಯೋಽಮಗ್ನೇಃ ಶಯನಾಸನಸ್ಥಾನಾದಿಲಕ್ಷಣಾನಾಂ ಕರ್ಮಣಾಂ ಧಾರಯಿ

ತಾರಃ । ಏವಂವಿಧಾ ಸಂತಶ್ಚಾರು ಚಾರುಣಿ ಶೋಭನೇಽಗ್ನೇಃ ಪರಮ ಉತ್ತಮೇಽಂತ್ಯೇ ಪದೇ । ಯತ್ರ ಹ್ಯಗ್ನಿರ್ನಿಲೀನೋ ವರ್ತತೇ ತತ್ರೇತ್ಯರ್ಥಃ । ತಸ್ಮಿನ್ಪದೇ ತಸ್ಥುಃ । ಸ್ಥಿತವಂತಃ । ಬಹುವಿಧೇನ ಪ್ರಯಾಸೇನಾಗ್ನಿಂ ದದೃಶುರಿತ್ಯರ್ಥಃ ॥ ಪರಿ ಷಂತಂ । ಉಪಸರ್ಗಪ್ರಾದುರ್ಭ್ಯಾಮಸ್ತಿರ್ಯಚ್ಪರಃ । ಪಾ ೮-೩-೮೭। ಇತಿ ಷತ್ವಂ । ಶ್ರಮಯುವಃ । ಯು ಮಿಶ್ರಣೇ । ಶ್ರಮೇಣ ಯೂಯಂತ ಇತಿ ಶ್ರಮಯುವಃ । ಕ್ವಿಬ್ವಚಿಪ್ರಚ್ಛೀತ್ಯಾದಿನಾ । ಉ. ೨-೫೭ । ವಿಧೀಯಮಾನೌ ಕ್ವಿಬ್ದೀರ್ಘಾವಸ್ಮಾದಪಿ ಧಾತೋರ್ಭವತಃ । ತನ್ವಾದಿತ್ವಾದುವಙ್ । ಪದವ್ಯಃ । ವೀ ಗತ್ಯಾದಿಷು । ಪಾದೇನ ವಿಯಂತಿ ಗಚ್ಛಂತೀತಿ ಪದವ್ಯಃ । ಕ್ವಿಪ್ಚೇತಿ ಕ್ವಿಪ್ । ಧಿಯಂಧಾಃ । ಆತೋಽನುಪಸರ್ಗೇ ಕ ಇತಿ ಕಃ । ತತ್ಪುರುಷೇ ಕೃತಿ ಬಹುಲಮಿತಿ ಬಹುಲವಚನಾದ್ದ್ವಿತೀಯಾಯಾ ಅಪ್ಯಲುಕ್ । ತಸ್ಥುಃ । ಪಾದಾದಿತ್ವಾನ್ನಿಘಾತಾಭಾವಃ । ಚಾರು । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ ॥

॥ ಪ್ರತಿಪದಾರ್ಥ ॥

**ಅಸ್ಮೇ**—ನಮಗೆ । **ವತ್ಸಂ**—ಪುತ್ರನಂತೆ (ಪ್ರೀತಿಪಾತ್ರನಾದ) । **ಪರಿ ಷಂತಂ**—ಸರ್ವತ್ರಸ್ಥಿತನಾದ, (ಅಗ್ನಿಯನ್ನು) । **ಇಚ್ಛಂತಃ**—ಅಪೇಕ್ಷಿಸುವ । **ವಿಶ್ವೇ ಅಮೃತಾಃ**—ಎಲ್ಲಾ ಅಮರರೂ (ದೇವತೆಗಳೂ) । **ಅಮೂರಾಃ**—ಮೂಢರಲ್ಲದ (ಮರುದ್ದೇವತೆಗಳೂ) । **ನ ವಿಂದರ್ನ**—(ಅಗ್ನಿಯನ್ನು) ಹೊಂದಲಿಲ್ಲ । **ಶ್ರಮಯುವಃ**—(ಅಗ್ನ್ಯಾಹೃತವಾದ ಹವಿಸ್ಸಿಲ್ಲದೇ) ಶ್ರಮದಿಂದ ಏಕೀಭೂತರಾಗಿ । **ಅಗ್ನೇಃ**—ಅಗ್ನಿಯ (ಅನ್ವೇಷಣೆಗಾಗಿ) । **ಪದವ್ಯಃ**—ಪಾದಚಾರಿಗಳಾಗಿ । **ಧಿಯಂಧಾಃ**—(ಅಗ್ನಿಯ ಶಯನಾದಿ) ಕರ್ಮಗಳನ್ನು (ಮನಸ್ಸಿನಲ್ಲಿ) ಧರಿಸಿದವರಾಗಿ । **ಚಾರು**—ರಮಣೀಯವಾದ । **ಪರಮೇ**—ಉತ್ತಮವಾದ । **ಪದೇ**—(ಅಗ್ನಿಯು ಅಡಗಿದ್ದ) ಪ್ರದೇಶದಲ್ಲಿ । **ತಸ್ಥುಃ**—ನಿಂತರು

॥ ಭಾವಾರ್ಥ ॥

ಎಲ್ಲಾ ದೇವತೆಗಳೂ, ಅಜ್ಞಾನಿಗಳಲ್ಲದ ಮರುದ್ದೇವತೆಗಳೂ ನಮಗೆ ಪುತ್ರನಂತೆ ಪ್ರೀತಿಪಾತ್ರನಾದ, ಎಲ್ಲೆಡೆಗಳಲ್ಲಿಯೂ ಇರುವ ಅಗ್ನಿಯನ್ನು ಹುಡುಕಿದರೂ ಅವನು ಪ್ರಾಪ್ತವಾಗಲಿಲ್ಲ (ಅಗ್ನಿಯಿಂದಾಹೃತವಾಗುವ ಹವಿಸ್ಸಿಲ್ಲದೆ) ಶ್ರಾಂತರಾಗಿ ಎಲ್ಲರೂ ಒಟ್ಟಾಗಿ ಸೇರಿ, ಅವನನ್ನು ಪಾದಚಾರಿಗಳಾಗಿ ಹುಡುಕುತ್ತಾ, ಕೊನೆಗೆ ರಮಣೀಯವಾದ ಉತ್ತಮವಾದ ಪ್ರದೇಶದಲ್ಲಿ (ಅವನನ್ನು ಕಂಡು) ನಿಂತರು

## English Translation.

All the immortals, and the unbewildered (Maruts) wishing for him who was (dear) to us as a son, and was everywhere around, discovered him not, oppressed with fatigue, wandering on foot, and cognizant of his acts, they stopped at the last beautiful (hiding) place of Agni.

|| ವಿಶೇಷವಿಷಯಗಳು ||

ಈ ಋಕ್ಕಿನಲ್ಲಿ ಕರ್ಮಾನುಷ್ಠಾನದ ಮಹಿಮೆಯನ್ನು ವರ್ಣಿಸಿದೆ. ಕರ್ಮಗಳ ಹಿರಿಮೆಯನ್ನರಿಯದೆ ಎಷ್ಟೇ ತವಕಿಸಿದರೂ ಸಹ ಅಗ್ನಿಯ ಅನುಗ್ರಹವು ಸಿಕ್ಕಲಾರದು ಎಂಬುದಕ್ಕೆ ಒಂದು ಉದಾಹರಣೆಯನ್ನು ಕೊಡುತ್ತಾ ದೇವತೆಗಳೂ, ಪ್ರಾಜ್ಞರಾದ ಮರುತ್ತುಗಳೂ ಕೂಡ ಬಹಳ ಕಾಲ ಅಲೆದ ಮೇಲೆ, ತಮ್ಮ ತಮ್ಮ ಕರ್ಮಗಳನ್ನು ಧರಿಸಿದವರಾಗಿ ಎಂದರೆ ಕರ್ಮಾನುಷ್ಠಾನ ಪರರಾಗಿ ಶ್ರದ್ಧೆಯಿಂದ ಹುಡುಕಿ ಅನಂತರ ಅಗ್ನಿಯ ಮನೋಹರವಾದ ಸ್ಥಾನವನ್ನು ಕಂಡುಹಿಡಿದರು ಎಂದು ಅಗ್ನಿಯ ಮಹಾತ್ಮ್ಯವನ್ನು ವರ್ಣಿಸಿದೆ

**ಅಸ್ಮೇ— ಅಸ್ಮಾಕಂ**- ನಮ್ಮಗಳ ಎಂದು ಅರ್ಥವು (ನಿ ೬–೭) **ಅಥ ದ್ವಾತ್ರಿಂಶತಂ ಪದಾನಿ** ಎಂದು ಪ್ರಾರಂಭಮಾಡಿ ಅರ್ಥವನ್ನು ವಿವರಿಸಿರುವ ಪದಗಳಲ್ಲಿ ಅಸ್ಮೇ ಎಂಬ ಪದವು ಉಕ್ತವಾಗಿರುವುದು. ಇದು ಎಲ್ಲಾ ವಿಭಕ್ತಿಗಳಲ್ಲಿಯೂ ಒಂದೇ ವಿಧವಾದ ರೂಪದಲ್ಲಿ ಇರವುದು ಆದ್ದರಿಂದ ಇದು ಅನೇಕಾರ್ಥವಾಗಿ ಇರುತ್ತದೆ. **''ಅಸ್ಮೇ ತೇ ಬಂಧುಃ''** ಎಂಬಲ್ಲಿ ಪ್ರಥಮಾ ವಿಭಕ್ತ್ಯಂತವಾಗಿ ಇರುವುದು. **ಅಸ್ಮೇ ಯಾತಂ ನಾಸತ್ಯಾ ಸಜೋಷಾಃ''** ಎಂಬಲ್ಲಿ ದ್ವಿತೀಯಾ ವಿಭಕ್ತಿಯ ಅರ್ಥವನ್ನು ಬೋಧಿಸುವುದು ಇದೇ ರೀತಿಯಲ್ಲಿ ಏಳು ವಿಭಕ್ತಿಗಳಿಗೂ ಉದಾಹರಣೆಯನ್ನು ನಿರುಕ್ತದಲ್ಲಿ ಕೊಟ್ಟಿರುವರು. ಸ್ಕಂದಸ್ವಾಮಿಗಳು **''ಅಸ್ಮೇ ಇತಿ ತಾದರ್ಥ್ಯೇ ಚತುರ್ಥೀ | ಅಸ್ಮಾಕಂ ಹವಿರ್ನಯನಾರ್ಥಂ"** ಅಸ್ಮೇ ಎಂಬುವುದು ತಾದರ್ಥ್ಯಚತುರ್ಥೀವಿಭಕ್ತಿಯ ರೂಪವಾಗುತ್ತದೆ ನಮಗೆ ಸಂಬಂಧಿಸಿದ ಹವಿಸ್ಸುಗಳನ್ನು ತಂದುಕೊಡುವುದಕ್ಕಾಗಿ ಎಂದು ಅರ್ಥವನ್ನು ಹೇಳುವರು

**ವತ್ಸಂ ನ—**ನ ಎಂಬ ಪದವು (ನಿ. ೧–೪) ನಿಷೇಧವೆಂಬ ಅರ್ಥವನ್ನು ಬೋಧಿಸುವುದಾಗಿರುತ್ತದ ಇದರಂತೆಯೇ **ನ ಇತಿ ಪ್ರತಿಷೇಧಾರ್ಥೀಯಃ ಉಪಮಾರ್ಥೇ ಚ ಇತ್ಯುಭಯಮಪಿ ದ್ರಷ್ಟವ್ಯಂ |** ನ ಎಂಬುವುದು ಉಪಮಾರ್ಥವನ್ನೂ ಬೋಧಿಸುವುದು (ನಿ. ೧–೪) **ವತ್ಸಮಿವ**—ಪುತ್ರನ ಹಾಗೆ ಎಂದು ಸ್ಕಂದಸ್ವಾಮಿಗಳೂ **ನ ವಿಂದಃ ನ ಲಭಂತೆ** ಹೊಂದಲಿಲ್ಲ ಎಂದು ನಿಷೇಧಾರ್ಥವಾಗಿ ನ ಶಬ್ದಕ್ಕೆ ಸಾಯಣರೂ ಅರ್ಥಮಾಡಿರುವರು **ವತ್ಸವತ್ ಅತ್ಯಂತಂ ಪ್ರಿಯಂ**-ಅಗ್ನಿಯು ಮಗುವಿನ ಹಾಗೆ ಬಹಳ ಪ್ರೀತಿಪಾತ್ರನಾಗಿರುವನು. ಅಥವಾ **ವತ್ಸ** ಎಂದರೆ ಪುತ್ರನು ನಮ್ಮ ಅನಂತರ ನಮ್ಮಿಂದ ಅರಣಿಯಲ್ಲಿ ಉತ್ಪನ್ನನಾದ ಕಾರಣ ಯಜ್ಞ ಮಾಡತಕ್ಕ ನಮಗೆ ಪುತ್ರನಾಗಿರುವನು.

**ಮನ್ಯೇವ ಸನ್ ವಹ ಹವಾನ್ಯಗ್ನೇ | ಪುತ್ರಃ ಪಿತ್ರೇ ಲೋಕಕೃತ್ ಜಾತವೇದಃ**

(ತೈ. ಬ್ರಾ ೩–೭–೭–೧೦)

"ಲೋಕವನ್ನು ಸೃಷ್ಟಿಮಾಡುವ ಎಲೈ ಅಗ್ನಿಯೇ, ನೀನು ನನಗೆ ಪುತ್ರನಾಗಿ ಹವಿರ್ಭಾಗಗಳನ್ನು ವಹಿಸು'' ಎಂದು ಈ ಮಂತ್ರದ ಅರ್ಥವು ಪುತ್ರನು ತಂದೆಯು ಹೇಳಿದ ಕಾರ್ಯಗಳನ್ನು ಮಾಡುತ್ತಾ ತಂದೆಗೆ ಪ್ರೀತಿಪಾತ್ರನಾಗಿರುವಂತೆ ಇರುವನಾದ್ದರಿಂದ ಪುತ್ರನೆಂದು ಗೌಣವ್ಯಪದೇಶವು ಇದನ್ನೇ ಔಪಚಾರಿಕವೆಂದು ಹೇಳುವರು

**ಪರಿ ಷಂತಂ—**ದೇವತೆಗಳ ಮಧ್ಯದಿಂದ ಹೊರಟು ಅರಳೀಮರ, ಬಿದಿರುಮಳೆ, ಇವೇ ಮೊದಲಾದ ಮರಗಳಲ್ಲಿ ಅಡಗಿಕೊಂಡು ಇರುವವನು ಎಂದು ಸಾಯಣರ ಅರ್ಥವು. ಹವಿಸ್ಸುಗಳನ್ನು ವಹಿಸಬೇಕೆಂಬ ಭಯದಿಂದ ಅಲ್ಲಲ್ಲಿ ಕಾಣಿಸದಂತೆ ಮಕ್ಕಳಹಾಗೆ, ಅವಿತುಕೊಂಡಿರುವನೆಂದು ಸ್ಕಂದಸ್ವಾಮಿಗಳ ಅರ್ಥವು.

**ಅಮೂರಾಃ—ಅಮೂಢಚೇತಸಃ** ಮೋಹವನ್ನು ಹೊಂದದೆ ಇರುವ ಬುದ್ಧಿಯುಳ್ಳವರು. **ಅಮೂರ** ಶಬ್ದವು (ನಿ. ೬-೮) ಮೂವತ್ತೆರಡು ಪದಗಳಲ್ಲಿ ಉಕ್ತವಾಗಿರುವುದು. **ಮೂರಾ ಅಮೂರ ನ ವಯಂ ಚಿಕಿತ್ವಃ** (ಋ. ಸಂ. ೧೦ ೪-೪) ಎಂಬ ಋಕ್ಕಿನಲ್ಲಿ ಅಮೂರ ಶಬ್ದವೂ ಮೂರ ಶಬ್ದವೂ ಉದಾಹೃತವಾಗಿರುವುದು. **ಅಮೂರಾ ಅಮೂಢಾ** ಎಂದೂ, **ಮೂರಾಃ ಮೂಢಾ ವಯಂ ಸ್ಮಃ** ಎಂದೂ ಅರ್ಥವನ್ನು ನಿರುಕ್ತದಲ್ಲಿ ವಿವರಿಸಿರುವರು.

**ಶ್ರಮಯುವಃ—ಶ್ರಮೇಣ ಯೂಯಂತ ಇತಿ ಶ್ರಮಯುವಃ ।** ಅಗ್ನಿಯು ಅವಿತುಕೊಂಡಿರುವಾಗ ತಮ್ಮ ತಮ್ಮ ಹವಿರ್ಭಾಗಗಳನ್ನು ವಹಿಸುವವರು ಇಲ್ಲದಿರುವ ಕಾರಣ ದೇವತೆಗಳಿಗೆ ಹವಿಸ್ಸುಗಳು ಇಲ್ಲದೆ ಇರುವುದರಿಂದ ಅದರಿಂದ ಉಂಟಾದ ಆಯಾಸವನ್ನು ಹೊಂದಿರುವ ದೇವತೆಗಳು ಒಟ್ಟಾಗಿ ಅಗ್ನಿಯನ್ನು ಹುಡುಕುವ ಕಾರ್ಯದಲ್ಲಿ ನಿರತರಾಗಿದ್ದರು ಎಂದು ಅರ್ಥವು. **ಶ್ರಮಯುವಃ** ಎಂಬ ಶಬ್ದದಲ್ಲಿ ಯು ಎಂಬುವ ಶಬ್ದವು ಮತ್ವರ್ಥದಲ್ಲಿ ಇರುವುದು. **ಅಶ್ವಯುರ್ಗವ್ಯೂ ರಥಯುಃ** (ಋ. ಸಂ ೧-೫೧-೧೪) ಎಂಬ ಋಕ್ಕಿನಲ್ಲಿರುವ ಅಶ್ವಯುಃ, ಗವ್ಯುಃ, ರಥಯುಃ, ಎಂಬ ಶಬ್ದಗಳ ಅರ್ಥದಹಾಗೆ ಶ್ರಮಯುಃ ಎಂಬ ಶಬ್ದಕ್ಕೆ ಶ್ರಮವಂತರೆಂದು ಸ್ಕಂದಸ್ವಾಮಿ ಭಾಷ್ಯದಲ್ಲಿ ಅರ್ಥವನ್ನು ವಿವರಿಸಿರುವರು.

**ಪದವ್ಯಃ—ಪಾದೇನ ವಿಯಂತಿ ಗಚ್ಛಂತೀತಿ ಪದವ್ಯಃ** ವಾಹನಾರೂಢರಾಗಿರದೆ ಬರಿಯ ಕಾಲುಗಳಿಂದಲೇ ನಡೆಯುತ್ತಿರುವರು, ಪಾದಸಂಚಾರಿಗಳು ಎಂದು ಸಾಯಣರ ಅರ್ಥವು. ಸಕಲ ಜಗತ್ತುಗಳಿಗೂ ಆಶ್ರಯನಾಗಿರುವ ಕಾರಣಾತ್ಮನು ಎಂದು ಪದಶಬ್ದಕ್ಕೆ—

**ಪದಂ ದೇವಸ್ಯ ನಮಸಾ ವ್ಯಂತಃ ಶ್ರವಸ್ಯವಃ ಶ್ರವ ಆಪನ್ನಮೃಕ್ತಂ ।**

(ಋ. ಸಂ ೬-೧-೪)

ಎಂಬ ಋಕ್ಕಿನಲ್ಲಿ ಇರುವ ವಿಧಾತುವು **ಪಶ್ಯತಿ** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವಂತೆ ಜ್ಞಾನಾರ್ಥದಲ್ಲಿ ಉಪಯುಕ್ತವಾಗಿರುವುದು. ಆದ್ದರಿಂದ ಕಾರಣಾತ್ಮನನ್ನು ತಿಳಿಯುವವರು ಎಂದು ಸ್ಕಂದಸ್ವಾಮಿಗಳ ಅರ್ಥವು.

**ಧಿಯಂಧಾಃ—ಸ್ವಸ್ಯ ಕರ್ಮಣೋ ಧಾರಯಿತಾರಃ ।** ಅಗ್ನಿಯು ಶಯನಾಸನಾದಿಕರ್ಮಗಳ ಸ್ಥಾನಗಳನ್ನು ನಿಶ್ಚಯಮಾಡುವ ಕಾರ್ಯವನ್ನು ಬಿಡದೆ ಇರುವವರು ಎಂದು ವ್ಯಾಖ್ಯಾನವು.

**ಚಾರು—ಚಾರೂಣಿ.** ಮಂಗಳಕರವಾದ, ಉತ್ತಮವಾದ, ಅಗ್ನಿಯು ಅವಿತುಕೊಂಡಿರುವ ಸ್ಥಾನವು ಉತ್ತಮವಾಗಿರುವುದು ಎಂದು ಚಾರು ಶಬ್ದವನ್ನು **ಪರಮೇ ಪದೇ** ಎಂಬ ಪದಕ್ಕೆ ವಿಶೇಷಣವನ್ನಾಗಿ ಭಾಷ್ಯಕಾರರು ವಿವರಿಸಿರುವರು. ಸ್ಕಂದಸ್ವಾಮಿಗಳು ಈ ಅಭಿಪ್ರಾಯವನ್ನು ವಿವರಿಸಿ, ಚಾರು ಎಂಬ ಪದವು ಕ್ರಿಯಾವಿಶೇಷಣವಾಗಿರುವುದು. ಇದರಿಂದ ದೇವತೆಗಳು ಅಗ್ನಿಯು ಅವಿತುಕೊಂಡಿರುವ ಪ್ರದೇಶಗಳು ಚೆನ್ನಾಗಿ ಗೊತ್ತಾಗುವಹಾಗೆ ಅಲ್ಲಲ್ಲಿ ಹುಡುಕಿದರು ಎಂದು ಅರ್ಥವನ್ನು ಮಾಡಿರುವರು. ಮತ್ತು—**ಪರಮೇ ಪದೇ** ಎಂಬಲ್ಲಿ ಪರಮಶಬ್ದದಿಂದ ವಿಶೇಷಿತವಾದ ಪದಶಬ್ದದಿಂದ ಫದಜ್ಞರೆಂದು ಅರ್ಥವು. ಮತ್ತು ಪದಶಬ್ದಕ್ಕೆ—

**ಯೇನಾ ನಃ ಪೂರ್ವೇ ಪಿತರಃ ಪದಜ್ಞಾಃ ಸ್ವರ್ವಿದೋ ಅಭಿ ಗಾ ಅದ್ರಿಮುಷ್ಣನ್ ।**

(ಋ ಸಂ ೯-೯೭-೩೯)

ಎಂಬ ಋಕ್ಕಿನಲ್ಲಿ ಪ್ರಯುಕ್ತವಾಗಿರುವ ಪದಜ್ಞಶಬ್ದಬೋಧ್ಯರಾದ ಅಂಗಿರಸ್ಸುಗಳೆಂದು ಅರ್ಥವು. ಈ ಅರ್ಥಕ್ಕನುಗುಣವಾಗಿ ವಿಶ್ವೇ, ಅಮೂರಾ ಎಂಬ ಶಬ್ದಗಳೂ ಇಲ್ಲಿ ಉಕ್ತವಾಗಿರುತ್ತವೆ ಆದ್ದರಿಂದ ಈ ಋಕ್ಕಿನಲ್ಲಿ ದೇವತೆಗಳು ಎಂದು ಅರ್ಥವನ್ನು ಹೇಳಬಾರದು ವಿಶ್ವೇ, ಅಮೂರಾಃ ಅಮೃತಾಃ ಈ ಪದಗಳಿಂದ ಅಂಗಿರಸ್ಸುಗಳು ಉಕ್ತರಾಗುವರು ಎಂದು ಅರ್ಥ ವಿವರಿಸಿ, ಪಿತೃದೇವತೆಗಳು ಅಡಗಿಕೊಂಡಿರುವ ಅಗ್ನಿಗೆ ತಮ್ಮ ತಮ್ಮ ತೇಜಸ್ಸುಗಳನ್ನು ಸೇರಿಸಿದರು ಎಂಬುವ ವಿಷಯನ್ನು ಸೌಚೀಕಸೂಕ್ತದಲ್ಲಿ ವಿವರಿಸುವೆವು ಎಂದು ವ್ಯಾಖ್ಯಾನವನ್ನು ಮಾಡಿರುತ್ತಾರೆ ಈ ವಿಧವಾದ ವ್ಯಾಖ್ಯಾನದಲ್ಲಿ ಅಗ್ನಿಯ ಅನುಗ್ರಹದಿಂದ ಅಗ್ನಿಯ ಸಾಲೋಕ್ಯವು ಉಂಟಾಗುವುದೆಂದು **ಪರಮೇ ಪದೇ ತಸ್ಥುಃ** ಎಂಬುವುದರಿಂದ ತಿಳಿದುಬರುವುದು

॥ ವ್ಯಾಕರಣಪ್ರಕ್ರಿಯಾ ॥

**ಪರಿಷಂತಮ್**— ಅಸ ಭುವಿ ಧಾತು ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ **ಸಾರ್ವಧಾತುಕಮಪಿತ್** ಸೂತ್ರದಿಂದ ಇದಕ್ಕೆ ಙಿತ್ವ ಬರುವುದರಿಂದ **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಅಸ್ಸಿನ ಅಕಾರಕ್ಕೆ ಲೋಪ ಸತ್ ಶಬ್ದವಾಗುತ್ತದೆ. **ಉಪಸರ್ಗಪ್ರಾದುರ್ಭ್ಯಾಮಸ್ತಿರ್ಯಚ್ ಪರಃ** (ಪಾ. ಸೂ. ೮-೩-೮೭) ಉಪಸರ್ಗ ಮತ್ತು ಪ್ರಾದುಸ್ ಎಂಬುದರ ಪರದಲ್ಲಿರುವ ಅಚ್ ಅಥವಾ ಯಕಾರಪರವಾದ ಅಸ್ ಧಾತುವಿನ ಸಕಾರಕ್ಕೆ ಷತ್ವ ಎಂಬುದರಿಂದ ಇಲ್ಲಿ ಪರಿ ಎಂಬ ಉಪಸರ್ಗದ ಪರದಲ್ಲಿ ಅಚ್ ಪರವಾದ ಸಕಾರ ಬಂದುದರಿಂದ ಷತ್ವ ಬರುತ್ತದೆ ದ್ವಿತೀಯಾ ಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ ಬರುತ್ತದೆ.

**ವಿಂದನ್**—ವಿದ್‌ಲೃ ಲಾಭೇ ಧಾತು ಲಙ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ. ಇಕಾರಲೋಪ. **ಶೇಮುಚಾದೀನಾಂ** (ಪಾ ಸೂ ೭-೧-೫೯) ಎಂಬುದರಿಂದ ಮುಚಾದಿಯಲ್ಲಿ ಸೇರಿರುವುದರಿಂದ ಧಾತುವಿಗೆ ನುಮಾಗಮ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಇಚ್ಛಂತಃ**—ಇಷ ಇಚ್ಛಾಯಾಂ ಧಾತು ತುದಾದಿ ಲಡರ್ಥದಲ್ಲಿ ಶತೃಪ್ರತ್ಯಯ ಶ ವಿಕರಣ. **ಇಷುಗಮಿಯಮಾಂ ಛಃ** (ಪಾ. ಸೂ ೭-೩-೭೭) ಎಂಬುದರಿಂದ ಧಾತುವಿಗೆ ಛಾದೇಶ ಇಚ್ಛತ್ ಶಬ್ದವಾಗುತ್ತದೆ ವಿಕರಣಸ್ವರ ಸತಿಶಿಷ್ಟವಾಗುವುದರಿಂದ ಉಳಿಯುತ್ತದೆ ಪ್ರಥಮಾ ಬಹುವಚನದಲ್ಲಿ ಉಗಿತ್ತಾದುದರಿಂದ ನುಮಾಗಮ

**ಶ್ರಮಯುವಃ**—ಯು ಮಿಶ್ರಣೇ ಧಾತು. ಶ್ರಮೇಣ ಯುವಯಂತೇ ಇತಿ ಶ್ರಮಯುವಃ **ಕ್ವಿಪ್‌ವಚಿಪ್ರಚ್ಛಿಪ್ರ**—ಎಂಬ ವಾರ್ತಿಕದಿಂದ ವಿಧಿಸಲ್ಪಡುವ ಕ್ವಿಪ್ ದೀರ್ಘಗಳು ಈ ಧಾತುವಿನ ಮೇಲೂ ಬರುತ್ತವೆ ಶ್ರಮಯೂ ಶಬ್ದವಾಗುತ್ತದೆ. ಇದಕ್ಕೆ ಜಸ್ ಪರವಾದಾಗ ಇದು ತನ್ವಾದಿಯಲ್ಲಿ ಸೇರಿರುವುದರಿಂದ ಉವಙಾದೇಶ ಬರುತ್ತದೆ. **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಪದವ್ಯಃ**— ವೀ ಗತ್ಯಾದಿಷು ಧಾತು. ಪಾದೇನ ವಿಯಂತಿ ಗಚ್ಛಂತಿ ಇತಿ ಪದವ್ಯಃ **ಕ್ವಿಪ್ ಚ** (ಪಾ. ಸೂ ೩-೨-೭೬) ಎಂಬುದರಿಂದ ಉಪಪದವಾಗಿರುವಾಗ ಈ ಧಾತುವಿಗೆ ಕ್ವಿಪ್ ಪ್ರತ್ಯಯ ಪದವೀ ಎಂದು ರೂಪವಾಗುತ್ತದೆ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬಂದಾಗ ಈಕಾರ ಉದಾತ್ತವಾಗುತ್ತದೆ. ಜಸ್ ಪರವಾದಾಗ ಈಕಾರಕ್ಕೆ ಯಣಾದೇಶ ಉದಾತ್ತಸ್ಥಾನದಲ್ಲಿ ಬಂದ ಯಣಿನ ಪರದಲ್ಲಿ ಅನುದಾತ್ತ ಬಂದುದರಿಂದ (ವಿಭಕ್ತಿ ಅಕಾರ) **ಉದಾತ್ತಸ್ವರಿತಯೋರ್ಯಣಃ**— (ಪಾ ಸೂ ೮-೨-೪) ಎಂಬುದರಿಂದ ಅನುದಾತ್ತಕ್ಕೆ ಸ್ವರಿತಸ್ವರ ಬರುತ್ತದೆ

**ಧಿಯಂಧಾಃ**—**ಧಿಯಾಂ ಧಾರಯಿತಾರಃ ಧಿಯಂಧಾಃ** । ಡುಧಾಞ್ ಧಾರಣಪೋಷಣಯೋಃ ಧಾತು **ಆತೋಽನುಪಸರ್ಗೇ ಕಃ** (ಪಾ ಸೂ ೩-೨-೩) ಎಂಬುದರಿಂದ ಉಪಸರ್ಗ ಭಿನ್ನವಾದದ್ದು ಉಪಪದವಾಗಿರುವುದರಿಂದ ಕ ಪ್ರತ್ಯಯ. **ಆತೋಲೋಪ ಇಟಿಚ** (ಪಾ ಸೂ ೬-೪-೬೪) ಎಂಬುದರಿಂದ ಪ್ರತ್ಯಯ ನಿಮಿತ್ತವಾಗಿ ಆಕಾರಲೋಪ. **ತತ್ಪುರುಷೇ ಕೃತಿ ಬಹುಲಂ** (ಪಾ ಸೂ ೬-೩-೧೪) ಎಂಬುದರಿಂದ ಬಹುಲವಚನ ಸಾಮರ್ಥ್ಯದಿಂದ ತತ್ಪುರುಷ ಸಮಾಸಮಾಡಿದಾಗ ದ್ವಿತೀಯಾ ವಿಭಕ್ತಿಗೂ ಅಲುಕ್ ಬರುತ್ತದೆ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ

**ತಸ್ಥುಃ**— ಷ್ಠಾ ಗತಿನಿವೃತ್ತೌ ಧಾತು. **ಧಾತ್ವಾದೇಃ ಷಃ ಸಃ** ಸೂತ್ರದಿಂದ ಷಕಾರಕ್ಕೆ ಸತ್ವ ಲಿಟ್ ಪ್ರಥಮಪುರುಷ ಬಹುವಚನದಲ್ಲಿ **ಪರಸ್ಮೈಪದಾನಾಂ**—ಎಂಬುದರಿಂದ ಉಸಾದೇಶ. ಧಾತುವಿಗೆ ದ್ವಿತ್ವ. **ಶರ್ಪೂರ್ವಾಃ ಖಯಃ** (ಪಾ ಸೂ ೭-೪-೬೧) ಎಂಬುದರಿಂದ ತಕಾರಕ್ಕೆ ಶೇಷ. **ಆತೋಲೋಪ ಇಟಿಚ** ಎಂಬುದರಿಂದ ಆಕಾರಕ್ಕೆ ಲೋಪ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಅಂತೋದಾತ್ತವಾದ ಪದವಾಗುತ್ತದೆ

**ಚಾರು**—ಇದಕ್ಕೆ ಸಪ್ತಮೀ ವಿಭಕ್ತಿ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಅದಕ್ಕೆ ಲುಕ್ ॥ ೨ ॥



॥ ಸಂಹಿತಾಪಾಠಃ ॥

ತ್ರಿಸ್ರೋ ಯದ॑ಗ್ನೇ ಶ॒ರದ॒ಸ್ತ್ವಾಮಿಚ್ಛುಚಿಂ ಘೃ॒ತೇನ॒ ಶುಚ॑ಯಃ ಸಪ॒ರ್ಯಾನ್ ।
ನಾಮಾ॑ನಿ ಚಿದ್ದಧಿರೇ ಯ॒ಜ್ಞಿಯಾ॒ನ್ಯಸೂ॑ದಯಂತ ತ॒ನ್ವಃ॒ ಸುಜಾ॑ತಾಃ ॥ ೩ ॥

॥ ಪದಪಾಠಃ ॥

ತಿಸ್ರಃ । ಯತ್ । ಅಗ್ನೇ । ಶರದಃ । ತ್ವಾಂ । ಇತ್ । ಶುಚಿಂ । ಘೃತೇನ । ಶುಚ-
ಯಃ । ಸಪರ್ಯಾನ್ ।

ನಾಮಾನಿ । ಚಿತ್ । ದಧಿರೇ । ಯಜ್ಞಿಯಾನಿ । ಅಸೂದಯಂತ । ತನ್ವಃ ।
ಸುऽಜಾತಾಃ ॥ ೩ ॥

॥ ಸಾಯಣಭಾಷ್ಯಂ ॥

ಶುಚಯಃ ಶೋಧಯಿತಾರೋ ದೀಪ್ತಾ ವಾ ಮರುತೋ ಹೇ ಅಗ್ನೇ ಶುಚಿಂ ಶುದ್ಧಂ ದೀಪ್ಯಮಾನಂ ವಾ ತ್ವಾಮಿದ್ದೇವೇಭ್ಯೋ ನಿರ್ಗತಂ ತ್ವಾಮೇವೋದ್ದಿಶ್ಯ ತಿಸ್ರಃ ಶರದಸ್ತ್ರೀನ್ ಸಂವತ್ಸರಾನ್ಘೃತೇನಾಜ್ಯೇನ ಯದ್ಯದಾ ಸಪರ್ಯಾನ್ ಪೂಜಾಂ ಕುರ್ಯುಃ ತದಾನೀಂ ತ್ವಮಾವಿರಭೂಃ । ತದನಂತರಂ ತೇ ಮರುತಸ್ತ್ವಯಾನುಗೃಹೀತಾಃ ಸಂತೋ ಯಜ್ಞಿಯಾನಿ ಯಜ್ಞಾರ್ಹಾಣಿ ಯಜ್ಞೇ ಪ್ರಯೋಕ್ತುಂ ಯೋಗ್ಯಾನಿ ನಾಮಾನಿ ಚಿತ್ ನಾಮಾನ್ಯಪಿ ದಧಿರೇ । ಅಧಾರಯನ್ । ನಾಮಾನಿ ಚ ತೈತ್ತಿರೀಯಕೇ ಸಮಾಮ್ನಾಯಂತೇ । ಈದೃಙ್ ಚಾನ್ಯಾದೃಙ್ ಚ ತಾದೃಙ್ ಚ ಪ್ರತಿದೃಙ್ ಚ ಮಿತಶ್ಚ ಸಂಮಿತಶ್ಚ ಸಭರಾಃ । ತೈ. ಸಂ. ೪-೬-೫-೫ । ಇದ್ಯಾದೀನಿ । ಏತೈಶ್ಚಾಗ್ನಿಚಯನೇ ಮಾರುತಾಃ ಸಪ್ತಕಪಾಲಾ ಹೂಯಂತೇ । ನಾಮಾನಿ ಧಾರಯಿತ್ವಾ ಚ ಸುಜಾತಾಃ ಪೂರ್ವಂ ರೂಪಂ ಪರಿತ್ಯಜ್ಯ ಶೋಭನಮಮೃತತ್ವಂ ಪ್ರಾಪ್ತಾಃ ಸಂತಸ್ತನ್ವಃ ಸ್ವಕೀಯಾನಿ ಶರೀರಾಣ್ಯಸೂದಯಂತ । ಸ್ವರ್ಗಂ ಪ್ರಾಪಿತವಂತಃ ॥ ತಿಸ್ರಃ ಜಸಿ ತ್ರಿಚತುರೋಃ ಸ್ತ್ರಿಯಾಂ ತಿಸೃಚತಸೃ ಇತಿ ಪೂರ್ವಸವರ್ಣದೀರ್ಘತ್ವೇ ಪ್ರಾಪ್ತೇಽಚಿ ರ ಋತ ಇತಿ ರೇಫಾದೇಶಃ । ತ್ರಿಶಬ್ದಃ ಫಿಷಃ । ಫಿ. ೧-೧ । ಇತ್ಯಂತೋದಾತ್ತಃ । ತಿಸ್ರಾದೇಶಸ್ಯಾಪಿ ಸ್ಥಾನಿವದ್ಭಾವೇನಾಂತೋದಾತ್ತತ್ವೇ ಉದಾತ್ತಯಣೋ ಹಲ್ಪೂರ್ವಾದಿತಿ ಜಸ ಉದಾತ್ತತ್ವಂ । ಶರದಃ । ಶೄ ಹಿಂಸಾಯಾಂ । ಶೀರ್ಯಂತೇಽಸ್ಯಾಮೋಷಧಯ ಇತಿ ಶರತ್ಸಂವತ್ಸರಃ । ಶೃದೃಭಸೋಽದಿಃ । ಉ. ೧-೧೨೯ । ಇತ್ಯದಿಪ್ರತ್ಯಯಃ । ಉಭಯತ್ರ ಕಾಲಾಧ್ವನೋರತ್ಯಂತಸಂಯೋಗೇ । ಪಾ. ೨-೩-೫ । ಇತಿ ದ್ವಿತೀಯಾ । ಸಪರ್ಯಾನ್ । ಸಪರ ಪೂಜಾಯಾಂ । ಕಂಡ್ವಾದಿಃ । ಲೇಟ್ಯಾಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಯಜ್ಞಿಯಾನಿ । ಯಜ್ಞರ್ತ್ವಿಗ್ಭ್ಯಾಂ ಘಖಞಾವಿತ್ಯರ್ಹಾರ್ಥೇ ಘಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಅಗ್ನಿಯೇ । **ಶುಚಯಃ**—ಶುದ್ಧಿಮಾಡುವ, (ಕಾಂತಿಯುಕ್ತರಾದ ಮರುತ್ತುಗಳು) । **ಶುಚಿಂ**—ಶುದ್ಧನಾದ, (ದೀಪ್ತನಾದ) । **ತ್ವಾಮಿತ್**—ನಿನ್ನನ್ನು ಉದ್ದೇಶಿಸಿಯೇ । **ತಿಸ್ರಃ ಶರದಃ**—ಮೂರು ಸಂವತ್ಸರಗಳು । **ಘೃತೇನ**—ಆಜ್ಯದಿಂದ । **ಯತ್**—ಯಾವಾಗ । **ಸಪರ್ಯನ್**—ಪೂಜೆಮಾಡಿದರೋ (ಆಗ) । **ಯಜ್ಞಿಯಾನಿ**—ಯಜ್ಞದಲ್ಲಿ (ಪ್ರಯೋಗಿಸಲು) ಅರ್ಹವಾದ । **ನಾಮಾನಿ ಚಿತ್**—ನಾಮಧೇಯಗಳನ್ನೂ ಕೂಡ । **ದಧಿರೇ**—ಧರಿಸಿದರು । **ಸುಜಾತಾಃ**—ಮಂಗಳಕರವಾದ ಅಮೃತವನ್ನು ಹೊಂದಿದವರಾಗಿ । **ತನ್ವಃ**—ತಮ್ಮ ಶರೀರಗಳನ್ನು । **ಅಸೂದಯಂತ**—ಸ್ವರ್ಗಕ್ಕೆ ಸೇರಿಸಿದರು

॥ ಭಾವಾರ್ಥ ॥

ಎಲೈ ಅಗ್ನಿಯೇ, (ಸ್ವತಃ) ಶುದ್ಧರಾದ ಮರುತ್ತುಗಳು ನಿನ್ನನ್ನುದ್ದೇಶಿಸಿ ಮೂರುಸಂವತ್ಸರಗಳು ಆಜ್ಯದಿಂದ ಪೂಜಾದಿ (ಹೋಮಾದಿ) ಗಳನ್ನು ಮಾಡಿದ ಮೇಲೆಯೇ ಯಜ್ಞಾರ್ಹವಾದ ನಾಮಧೇಯಗಳನ್ನು ಪಡೆದರು ಅಮೃತತ್ವವನ್ನು ಪಡೆದವರಾಗಿ, ಸ್ವರ್ಗವನ್ನು ಸೇರಿದರು

## English Translation

Inasmuch, Agni, as the pure (Maruts) worshipped you (equally) pure, with clarified butter for three years, therefore they aquired names worthy (to be repeated) at sacrifices, and being regenerated, obtained celestial bodies.

॥ ವಿಶೇಷವಿಷಯಗಳು ॥

**ಶುಚಯಃ**—ಪವಿತ್ರರನ್ನಾಗಿ ಮಾಡುವ ಅಥವಾ ಕಾಂತಿಯುಕ್ತರಾದ ಮರುದ್ದೇವತೆಗಳೆಂದು ಸಾಯಣರೂ, **ಶುದ್ಧಾತ್ಮಾನಃ**—ಪರಿಶುದ್ಧವಾದ ತನು ಮತ್ತು ಮನಸ್ಸುಳ್ಳವರಾದ ಯಜ್ಞಮಾಡುವರು ಎಂದು ಸ್ಕಂದಸ್ವಾಮಿಗಳೂ ಅರ್ಥಮಾಡಿರುವರು.

**ಶುಚಿಂ**—ಪರಿಶುದ್ಧನಾದ ಅಥವಾ ಕಾಂತಿಯುಳ್ಳವನಾದ ಅಗ್ನಿಯನ್ನು ಮರುದ್ದೇವತೆಗಳು ಆಜ್ಯದಿಂದ ಹೋಮವನ್ನು ಮಾಡಿ ಪೂಜಿಸಿದರು ಎಂದು ಅರ್ಥವು **ಶುಚಿ** ಶಬ್ದವು (ನಿ. ೬-೧) **ಆಶುಶುಕ್ಷಣಿ** ಪದದ ಉತ್ಪತ್ತಿಯನ್ನು ನಿರ್ವಚನಮಾಡುವಾಗ ಉಕ್ತವಾಗಿರುವುದು **ಶುಚಿಃ ಶೋಚತೇರ್ಜ್ವಲತಿಕರ್ಮಣಃ** । **ಜ್ವಲತಿ**-ಪ್ರಕಾಶವುಳ್ಳವನಾಗಿರುತ್ತಾನೆ ಎಂಬ ಅರ್ಥವುಳ್ಳ **ಶುಚ ದೀಪ್ತೌ** ಎಂಬ ಧಾತುವಿನಿಂದ ನಿಷ್ಪನ್ನವಾದ **ಶುಚಿ** ಶಬ್ದವು ದೀಪ್ತಿಯುಳ್ಳವನೆಂಬ ಅರ್ಥವನ್ನು ಬೋಧಿಸುವುದು ಇದರಿಂದ ಶುಚಿಶಬ್ದದಿಂದ ಬೋಧ್ಯನಾದ ಅಗ್ನಿಯೂ **ಆಶುಶುಕ್ಷಣಿ** ಪದದಿಂದ ಬೋಧ್ಯನಾದ ಅಗ್ನಿಯೂ ಬೇರೆಯಾಗಿರುವನು ಎಂದು ಅರ್ಥವು **ಅಯಮಪೀತರಃ**

**ಶುಚಿರೇತಸ್ಮಾದೇವ ಇತಿ ವೈಯಾಕರಣಾ ಮನ್ಯಂತೇ** ಎಂಬುವುದಾಗಿ ಇರುವ ನಿರುಕ್ತವಚನವು ಈ ಅರ್ಥವನ್ನೇ ಬೋಧಿಸುವುದು ಮತ್ತು--

**ತ್ವಮಗ್ನೇ ದ್ಯುಭಿಸ್ತ್ವಮಾಶುಶುಕ್ಷಣಿಸ್ತ್ವಮದ್ಭ್ಯಸ್ತ್ವಮಶ್ಮನಸ್ಪರಿ ।**
**ತ್ವಂ ವನೇಭ್ಯಸ್ತ್ವಮೋಷಧೀಭ್ಯಸ್ತ್ವಂ ನೃಣಾಂ ನೃಪತೇ ಜಾಯಸೇ ಶುಚಿಃ**

(ಋ. ಸಂ. ೨-೧-೧)

ಎಂಬ ಋಕ್ಕಿನಲ್ಲಿ ಉಕ್ತವಾಗಿರುವ **ಆಶುಶುಕ್ಷಣಿಃ ಶುಚಿಃ** ಎಂಬ ಎರಡು ಪದಗಳಿಗೂ ಅಗ್ನಿಯು ಎಂದು ಅರ್ಥವೇ ಆದರೂ ಪರಸ್ಪರವಾಗಿ ಇರುವ ಭೇದವನ್ನು ನಿರುಕ್ತದಲ್ಲಿ ಸ್ಪಷ್ಟವಾಗಿ ಉಪಪಾದನೆ ಮಾಡಿರುವರು

**ಶರದಃ—ಶೀರ್ಯಂತೇ ಅಸ್ಯಾಂ ಓಷಧಯಃ ಇತಿ ಶರತ್ ಸಂವತ್ಸರಃ** ಮೂಲಿಕೆಗಳು ಈ ಕಾಲದಲ್ಲಿ ಪಕ್ವವಾಗಿ (ಹಣ್ಣಾಗಿ) ನೆಲದ ಮೇಲೆ ಬೀಳುತ್ತವೆಯಾದ್ದರಿಂದ ಸಂವತ್ಸರವು ಎಂದು ಅರ್ಥವು ಮರುದ್ದೇವತೆಗಳು ಮೂರು ಸಂವತ್ಸರಗಳವರಿಗೂ ಅಗ್ನಿಯನ್ನು ಆಜ್ಯಹೋಮಾದಿಗಳಿಂದ ಪೂಜಿಸಿದರು ಯಾಸ್ಕರು **ಶರತ್** ಎಂಬ ಶಬ್ದದ ಬಹುವಚನವಾದ **ಶರದಃ** ಎಂಬ ಶಬ್ದದ ಅರ್ಥವನ್ನು ವಿವರಿಸುವಾಗ **ಶರಚ್ಛೃತಾ ಅಸ್ಯಾಮೋಷಧಯೋ ಭವಂತಿ । ಶೀರ್ಣಾ ಆಪ ಇತಿ ವಾ ।** (ನಿ ೪-೨೬) ಈ ಕಾಲದಲ್ಲಿ ಮೂಲಿಕೆಗಳು ಶೀರ್ಣವಾಗುವುವು. ನೀರುಗಳೂ ಒಣಗುವವು ಆದ್ದರಿಂದ **ಶರದಃ** ಎಂದು ಹೆಸರು ಆಗಿರುವುದು ಎಂದು ಅರ್ಥವನ್ನು ಮಾಡಿ ಸಂವತ್ಸರ ಎಂಬ ಅರ್ಥವನ್ನು ಬೋಧಿಸುವ ಅನೇಕವಾದ ರೋಗಗಳಿಂದ ವ್ಯಾಪ್ತವಾದ ಈ ಕಾಲದಲ್ಲಿ ಆರೋಗ್ಯದಿಂದ ಇರುವುದು ಅಪೇಕ್ಷಿಸಲ್ಪಡುತ್ತದೆ ಎಂಬ ಅರ್ಥವುಳ್ಳ—

**ಪುನಃ ಪತ್ನೀಮಗ್ನಿರದಾದಾಯುಷಾ ಸಹ ವರ್ಚಸಾ ।**
**ದೀರ್ಘಾಯುರಸ್ಯಾ ಯಃ ಪತಿರ್ಜೀವಾತಿ ಶರದಃ ಶತಂ ॥**

(ಋ ಸಂ. ೧೦-೮೫-೩೯)

ಎಂಬ ಋಕ್ಕನ್ನು ಉದಹರಿಸಿರುವರು

**ಯಜ್ಞಿಯಾನಿ ನಾಮಾನಿ ಚಿತ್ ದಧಿರೇ**—ಮರುದ್ದೇವತೆಗಳು ಅಗ್ನಿಯನ್ನು ಸಂತೋಷಪಡಿಸಿ ಅವನ ಅನುಗ್ರಹಕ್ಕೆ ಪಾತ್ರರಾಗಿ ಯಜ್ಞದಲ್ಲಿ ಸ್ತೋತ್ರಮಾಡಲು ಯೋಗ್ಯವಾಗಿರುವ ಹೆಸರುಗಳನ್ನು ಹೊಂದಿದರು. ಈ ಹೆಸರುಗಳೂ

**ಈದೃಙ್ ಚಾನ್ಯಾದೃಙ್ ಚೈತಾದೃಙ್ ಚ ಪ್ರತಿದೃಙ್ ಚ ಮಿತಶ್ಚ ಸಂಮಿತಶ್ಚ ಸಭರಾಃ**

(ತೈ. ಸಂ. ೪-೬-೫-೫)

ಎಂಬ ಮಂತ್ರಗಳಲ್ಲಿ ಪ್ರಸಿದ್ಧವಾಗಿರುತ್ತವೆ ಈ ಮಂತ್ರಗಳಿಂದಲೇ ಅಗ್ನಿಚಯನದಲ್ಲಿ ಮರುದ್ದೇವತಾಕವಾಗಿ ಏಳು ಕಪಾಲಗಳಲ್ಲಿ ಹವಿಸ್ಸು ಹೋಮಮಾಡಲ್ಪಡುತ್ತದೆ ಈ ಮರುದ್ದೇವತೆಗಳು ಹೀಗೆ ಹೆಸರಿನಿಂದ ಪ್ರಸಿದ್ಧರಾಗಿ ತಮ್ಮ ಹಿಂದಿನ ರೂಪವನ್ನು ತ್ಯಾಗಮಾಡಿ ಉತ್ತಮವಾದ ದೇವತ್ವವನ್ನು ಹೊಂದಿ ತಮ್ಮ ಶರೀರಗಳನ್ನು ಸ್ವರ್ಗದಲ್ಲಿರುವಂತೆ

ಮಾಡಿಕೊಂಡಿರುವರು. ಇದರಿಂದಲೆ, **ಸುಜಾತಾಃ ತನ್ವಃ ಅಸೂದಯನ್** ಎಂದು ಈಮಂತ್ರದಲ್ಲಿ ನಿರ್ದಿಷ್ಟಗಿರುತ್ತದೆ. ಸ್ಕಂದಸ್ವಾಮಿಗಳು—ಯಾರು ಅಗ್ನಿಯನ್ನು ಮೂರುವರ್ಷಗಳವರೆಗೂ, ಆಜ್ಯದಿಂದ ಹೋಮಮಾಡಿ ಸಂತೋಷಪಡಿಸು ವರೋ, ಅಥವಾ ಹೋಮಮಾಡಿ ಸಂತೋಷಪಡಿಸಲು ದಾರಿದ್ರ್ಯಾದಿ ದೋಷಗಳಿಂದ ಅಶಕ್ತರಾಗಿ ಅಗ್ನಿಯ ನಾಮ ಗಳನ್ನು ಪಠಿಸುವರೋ ಅವರಿಬ್ಬರೂ ಅಗ್ನಿಯ ವಿಷಯದಲ್ಲಿ ಭಕ್ತಿಯಿಂದ ವರ್ತಿಸುವವರಾದಕಾರಣ ಉತ್ತಮವಾದ ಪರಿಶುದ್ಧವಾದ ಸಂಸ್ಕಾರದಿಂದ ಸಂಸ್ಕೃತರಾಗಿ ವಿದ್ಯೆಯೂ ಮತ್ತು ಐಶ್ವರ್ಯವೂ ಇವುಗಳನ್ನು ಅಗ್ನಿಯ ಅನುಗ್ರಹ ದಿಂದ ಹೊಂದಿದರು ಎಂದು ಅರ್ಥವನ್ನು ವಿವರಿಸಿರುವರು

**ಸಪರ್ಯನ್**—**ಪೂಜಾಂ ಚಕ್ರುಃ** ಪೂಜೆಯನ್ನು ಮಾಡಿದರು ಎಂದು ಸಾಯಣರೂ, **ಪರಿಚರಂತಿ** ಸೇವಿಸುವರು ಎಂದು ಸ್ಕಂದಸ್ವಾಮಿಗಳೂ ಅರ್ಥವನ್ನು ಹೇಳುವರು. **ಸಪರ್ಯತಿ** ಎಂಬ ಪರಿಚರಣಕರ್ಮಾರ್ಥಕ ವಾದ ಶಬ್ದದಿಂದ **ಸಪರ್ಯನ್** ಎಂದು ಆಗಿರುತ್ತದೆ **ಸಪರ್ಯತಿ** ಎಂಬ ಪದವು ಹತ್ತು ಪರಿಚರಣಕರ್ಮವಾಚಕ ಗಳಲ್ಲಿ (ನಿ ೩-೧೩) ಉಕ್ತವಾಗಿರುವುದು

॥ ವ್ಯಾಕರಣಪ್ರಕ್ರಿಯಾ ॥

**ತಿಸ್ರಃ**—ತ್ರಿ ಶಬ್ದಕ್ಕೆ ದ್ವಿತೀಯಾ ವಿಭಕ್ತಿಯಲ್ಲಿ ಶಸ್ ಪರವಾದಾಗ **ತ್ರಿಚತುರೋಃ ಸ್ತ್ರಿಯಾಂ ತಿಸೃ ಚತಸೃ** (ಪಾ ಸೂ ೭-೨-೯೯) ಎಂಬುದರಿಂದ ಸ್ತ್ರೀಲಿಂಗದಲ್ಲಿ ತಿಸೃ ಆದೇಶ ತಿಸೃ ಅಸ್ ಎಂದಿರುವಾಗ ಪೂರ್ವ ಸವರ್ಣದೀರ್ಘವು ಪ್ರಾಪ್ತವಾದರೆ **ಅಚಿರ ಋತಃ** (ಪಾ ಸೂ ೭-೨-೧೦೦) ಎಂಬುದರಿಂದ ಅದಕ್ಕೆ ಅಪವಾದವಾಗಿ ಋಕಾರಕ್ಕೆ ರೇಫಾದೇಶ ಬರುತ್ತದ ಸಕಾರಕ್ಕೆ ರುತ್ವ ವಿಸರ್ಗ ತಿಸ್ರಃ ಎಂದು ರೂಪವಾಗುತ್ತದೆ. ತ್ರಿ ಶಬ್ದವು **ಫಿಷಃ** (ಫಿ ಸೂ ೧) ಎಂಬುದರಿಂದ ಅಂತೋದಾತ್ತವಾಗುತ್ತದೆ ತಿಸ್ರಾದೇಶಕ್ಕೂ **ಸ್ಥಾನಿವದಾದೇಶೋಽನಲ್ವಿಧೌ** ಎಂಬುದರಿಂದ ಸ್ಥಾನಿವದ್ಭಾವ ಬರುವುದರಿಂದ ಅಂತೋದಾತ್ತತ್ವವು ಪ್ರಾಪ್ತವಾದರೆ **ಉದಾತ್ತಯಣೋ ಹಲ್ ಪೂರ್ವಾತ್** (ಪಾ ಸೂ ೬-೧-೧೭೪) ಎಂಬುದರಿಂದ ಶಸ್ಸಿಗೆ ಉದಾತ್ತಸ್ವರ ಬರುತ್ತದ.

**ಶರದಃ**— ಶೄ ಹಿಂಸಾಯಾಮ್ ಧಾತು. ಶೀರ್ಯಂತೇ ಅಸ್ಯಾಂ ಓಷಧಯಃ ಇತಿ ಶರತ್ ಸಂವತ್ಸರಃ (ಓಷಧಿಗಳು ಈ ಕಾಲದಲ್ಲಿ ಒಣಗುತ್ತವ). **ಶೄದಭಸೋಽದಿಃ** (ಉ ಸೂ ೧-೧೨೭) ಎಂಬುದರಿಂದ ಅದಿಪ್ರತ್ಯಯ ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಶರದ್ ಶಬ್ದವಾಗುತ್ತದ ದ್ವಿತೀಯಾ ಬಹುವಚನಾಂತರೂಪ. ಎರಡು ಶಬ್ದಗಳಿಗೂ **ಕಾಲಾಧ್ವನೋರತ್ಯಂತಸಂಯೋಗೇ ದ್ವಿತೀಯಾ** (ಪಾ ಸೂ ೨-೩-೫) ಎಂಬುದರಿಂದ ಎಡೆಬಿಡದೆ ಎಂಬರ್ಥ ತೋರುವುದರಿಂದ ದ್ವಿತೀಯಾ ವಿಭಕ್ತಿ ಬಂದಿದೆ

**ಸಪರ್ಯನ್**—ಸಪರ ಪೂಜಾಯಾಂ ಧಾತು. ಕಂಡ್ವಾದಿ ಲೇಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಝೋಽಂತಃ** ಎಂಬುದರಿಂದ ಅಂತಾದೇಶ. **ಇತಶ್ಚಲೋಪಃ ಪರಸ್ಮೈಪದೇಷು** ಎಂಬುದರಿಂದ ಅಂತ್ಯ ಇಕಾರಲೋಪ. **ಕಂಡ್ವಾದಿಭ್ಯೋ ಯಕ್** (ಪಾ ಸೂ ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್ ಪ್ರತ್ಯಯ. **ಅತೋ ಲೋಪಃ** ಎಂಬುದರಿಂದ ತನ್ನಿಮಿತ್ತವಾಗಿ ಅಕಾರಲೋಪ. **ಸಂಯೋಗಾಂತಸ್ಯ ಲೋಪಃ** ಎಂಬುದರಿಂದ ಅಂತ್ಯತಕಾರಕ್ಕೆ ಲೋಪ. **ಸಪರ್ಯನ್** ಎಂದು ರೂಪವಾಗುತ್ತದೆ ಯತ್ ಎಂದು ಹಿಂದೆ

ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಸ್ವರ ಪ್ರತೀಷೆಧ ಬರುವುದರಿಂದ ಯಾಕಾಸ್ವರ ಉಳಿಯುತ್ತದೆ.

**ದಧಿರೇ**— ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷ ಬಹುವಚನರೂಪ. **ಅತಿ**ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಯಜ್ಞಿಯಾನಿ**— ಯಜ್ಞಾಯ ಅರ್ಹಾಣಿ ಯಜ್ಞಿಯಾನಿ **ಯಜ್ಞರ್ತ್ವಿಗ್ಭ್ಯಾಂ ಘಖಞೌ** (ಪಾ. ಸೂ ೫-೧-೭೧) ಎಂಬುದರಿಂದ ಯಜ್ಞಶಬ್ದದ ಮೇಲೆ ಅರ್ಹಾರ್ಥದಲ್ಲಿ ಘ ಪ್ರತ್ಯಯ. **ಆಯನೇಯೀನೀ**—(ಪಾ ಸೂ ೭-೧-೨) ಎಂಬುದರಿಂದ ಅದಕ್ಕೆ ಇಯಾದೇಶ **ಯಸ್ಯೇತಿ ಚ** ಎಂಬುದರಿಂದ ಪ್ರತ್ಯಯನಿಮಿತ್ತವಾಗಿ ಪ್ರಕೃತಿಯ ಅಕಾರಕ್ಕೆ ಲೋಪ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಇಕಾರ ಉದಾತ್ತವಾಗುತ್ತದೆ ದ್ವಿತೀಯಾ ಬಹುವಚನಾಂತರೂಪ.

**ಅಸೂದಯಂತ**—ಷೂದ ಕ್ಷರಣೇ ಧಾತು ಭ್ವಾದಿ. ಪ್ರೇರಣಾ ತೋರುವುದರಿಂದ **ಹೇತುಮತಿ ಚ** ಎಂಬುದರಿಂದ ಣಿಚ್ ಣಿಜಂತದ ಮೇಲೆ ಲಙ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. ಅಂತಾದೇಶ. ಅಂಗಕ್ಕೆ ಅಡಾಗಮ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ || ೩ ||



|| ಸಂಹಿತಾಪಾಠಃ ||

ಆ ರೋದಸೀ ಬೃಹತೀ ವೇವಿದಾನಾಃ ಪ್ರ ರುದ್ರಿಯಾ ಜಭ್ರಿರೇ ಯಜ್ಞಿಯಾಸಃ ।

ವಿದನ್ಮರ್ತೋ ನೇಮಧಿತಾ ಚಿಕಿತ್ವಾನಗ್ನಿಂ ಪದೇ ಪರಮೇ ತಸ್ಥಿವಾಂಸಂ ||೪||

॥ ಪದಪಾಠಃ ॥

ಆ । ರೋದಸೀ ಇತಿ । ಬೃಹತೀ ಇತಿ । ವೇವಿದಾನಾಃ । ಪ್ರ । ರುದ್ರಿಯಾ । ಜಭ್ರಿರೇ । ಯಜ್ಞಿಯಾಸಃ ।

ವಿದತ್ । ಮರ್ತಃ । ನೇಮಽಧಿತಾ । ಚಿಕಿತ್ವಾನ್ । ಅಗ್ನಿಂ । ಪದೇ । ಪರಮೇ । ತಸ್ಥಿಽವಾಂಸಂ ॥ ೪ ॥

॥ ಸಾಯಣಭಾಷ್ಯಂ ॥

ಬೃಹತೀ ಮಹತ್ಯೌ ರೋದಸೀ ದ್ಯಾವಾಪೃಥಿವ್ಯಾವಾ ವೇವಿದಾನಾ ಅತ್ಯರ್ಥಂ ಜ್ಞಾಪಯಂತಃ । ಕುತ್ರಾಗ್ನಿರ್ವರ್ತತ ಇತಿ ಪರಸ್ಪರಂ ವದಂತೋ ದ್ಯಾವಾಪೃಥಿವ್ಯೋರ್ಮಧ್ಯೇ ವರ್ತಮಾನಾ ಇತ್ಯರ್ಥಃ । ಯದ್ವಾ । ಮಹತ್ಯೋರ್ದ್ಯಾವಾಪೃಥಿವ್ಯೋರ್ಮಧ್ಯ ಆ ವೇವಿದಾನಾ ಅಗ್ನಿಮುಪಲಭಮಾನಾಃ । ಏವಂಭೂತಾ ಯಜ್ಞಿಯಾಸೋ ಯಜ್ಞಾರ್ಹಾ ದೇವಾ ರುದ್ರಿಯಾಃ । ರುದ್ರೋಽಗ್ನಿಃ । ದೇವಾನಾಮಸುರೈಃ ಸಹ ಯುದ್ಧಸಮಯೇ ತೈರ್ದೇವೈಃ ಸ್ಥಾಪಿತಂ ಧನಮಪಹೃತ್ಯ ಗತವಂತಮಗ್ನಿಂ ದೇವಾ ಅಗತ್ಯಾಗ್ನಿಸಕಾಶಾದ್ಬಲೇನ ತದ್ಧನಮಗೃಹ್ಣನ್ । ತದಾನೀಂ ಸೋಽಗ್ನಿರರೋದೀತ್ । ತಸ್ಮಾದ್ರುದ್ರ ಇತ್ಯಾಖ್ಯಾಯತೇ । ತಥಾ ಚ ತೈತ್ತಿರೀಯಕಂ । ತದಗ್ನಿರ್ನ್ಯಕಾಮಯತ ತೇನಾಪಾಕ್ರಾಮತ್ ತದ್ದೇವಾ ವಿಜಿತ್ಯಾವರುರುತ್ಸಮಾನಾ ಅನ್ವಾಯನ್ ತದಸ್ಯ ಸಹಸಾದಿತ್ಸಂತ ಸೋಽರೋದೀದ್ಯದರೋದೀತ್ತದ್ರುದ್ರಸ್ಯ ರುದ್ರತ್ವಂ । ತೈ. ಸಂ. ೧-೫-೧-೧ । ಇತಿ । ತಸ್ಯ ರುದ್ರಸ್ಯಾರ್ಹಾಣಿ ಸ್ತೋತ್ರಾಣಿ ಪ್ರ ಜಭ್ರಿರೇ । ಪ್ರಜಹ್ರಿರೇ । ಚಕ್ರುರಿತ್ಯರ್ಥಃ । ನೇಮಧಿತಾ । ನೇಮಶಬ್ದೋಽರ್ಧವಚನಃ । ತಥಾ ಚ ಯಾಸ್ಕಃ । ತ್ವೋ ನೇಮ ಇತ್ಯರ್ಧಸ್ಯ । ನಿ. ೩-೨೦ । ಇತಿ । ಸರ್ವೇಷಾಂ ದೇವಾನಾಮರ್ಧಭಾಗೇನ ಧೀಯತೇ ಧಾರ್ಯತ ಇತಿ ನೇಮಧಿತ ಇಂದ್ರಃ । ಸರ್ವೇ ದೇವಾ ಏಕೋಽರ್ಧಃ । ಇಂದ್ರ ಏಕ ಏವಾಪರೋಽರ್ಧ ಇತಿ ಯಾವತ್ । ತಥಾ ಚ ತೈತ್ತಿರೀಯಕಂ । ಯತ್ಸರ್ವೇಷಾಮರ್ಧಮಿಂದ್ರಃ ಪ್ರತಿ ತಸ್ಮಾದಿಂದ್ರೋ ದೇವತಾನಾಂ ಭೂಯಿಷ್ಠಭಾಕ್ತಮಃ । ತೈ. ಸಂ. ೫-೪-೮-೩ । ಇತಿ । ತೇನೇಂದ್ರೇಣ ಸಹಿತೋ ಮರ್ತೋ ಮರುದ್ಗಣಃ ಪರಮ ಉತ್ತಮೇಽಂತ್ಯೇ ಪದೇ ಸ್ಥಾನೇಽಶ್ವತ್ಥಾದೌ ತಸ್ಥಿವಾಂಸಂ ಸ್ಥಿತವಂತಮಗ್ನಿಂ ಚಿಕಿತ್ವಾಞ್ಜಾನನ್ವಿದತ್ । ಅಲಭತ ॥ ವೇವಿದಾನಾಃ । ವಿದೇರ್ಜ್ಞಾನಾರ್ಥಾಲ್ಲಾಭಾರ್ಥಾದ್ವಾ ಯಙಂತಾಲ್ಲಟಃ ಶಾನಚ್ । ಬಹುಲಂ ಛಂದಸೀತಿ ಶಪೋ ಲುಕ್ । ಛಂದಸ್ಯುಭಯಥೇತಿ ಶಾನಚ ಆರ್ಧಧಾತುಕತ್ವಾದತೋಲೋಪಯಲೋಪೌ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ವಿದತ್ । ವಿದ್ಲೃ ಲಾಭೇ । ಲುಙಿ ಲೃದಿತ್ತ್ವಾತ್ ಚ್ಲೇರಙಾದೇಶಃ । ನೇಮಧಿತಾ । ದಧಾತೇಃ ಕರ್ಮಣಿ ನಿಷ್ಠಾ । ಸುಧಿತ ವಸುಧಿತ ನೇಮಧಿತ ।

ಪಾ. ೭-೪-೪೫ | ಇತಿ ಧಿಭಾವೋ ನಿಪಾತ್ಯತೇ | ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ | ಸುಪಾಂ ಸುಲುಗಿತಿ ತೃತೀಯಾಯಾ ಆಕಾರಃ | ತಸ್ಥಿವಾಂಸಂ | ತಿಷ್ಠತೇರ್ಲಿಟಃ ಕ್ವಸುಃ | ವಸ್ವೇಕಾಜಾದ್ಘಸಾಮಿತೀಡಾಗಮಃ ||

|| ಪ್ರತಿಪದಾರ್ಥ ||

ಬೃಹತೀ—ವಿಸ್ತಾರವಾದ | ರೋದಸೀ—ಭೂಮ್ಯಾಕಾಶಗಳನ್ನು | ಆ ವೇವಿದಾನಾಃ—(ಅಗ್ನಿಯು) ಇರುವನೆಂಬುದಕ್ಕೆ ಜ್ಞಾಪಿಸಿಕೊಳ್ಳುವ | ಯಜ್ಞಿಯಾಸಃ—ಯಜ್ಞಾರ್ಹರಾದ (ದೇವತೆಗಳು) | ರುದ್ರಿಯಾ—ರುದ್ರನಾಮಕ ಅಗ್ನಿಯನ್ನುದ್ದೇಶಿಸಿದ ಮಂತ್ರಗಳನ್ನು | ಪ್ರ ಜಭ್ರಿರೇ—ಉಚ್ಚರಿಸಿದರು | ನೇಮಧಿತಾ—ಅರ್ಧ ಹವಿರ್ಭಾಗಾರ್ಹನಾದ ಇಂದ್ರನೊಡಗೂಡಿದ | ಮರ್ತಃ—ಮರುದ್ಗಣವು | ಪರಮೇ—ಉತ್ತಮವಾದ (ಅಂತ್ಯವಾದ) | ಪದೇ—(ಅಶ್ವತ್ಥಾದಿ) ಸ್ಥಾನದಲ್ಲಿ | ತಸ್ಥಿವಾಂಸಂ—ಇರುವ | ಅಗ್ನಿಂ—ಅಗ್ನಿಯನ್ನು | ಚಿಕಿತ್ವಾನ್—ತಿಳಿದವರಾಗಿ | ವಿದತ್—(ಅಗ್ನಿಯನ್ನು) ಪಡೆದರು.

|| ಭಾವಾರ್ಥ ||

ಯಜ್ಞಾರ್ಹವಾದ ದೇವತೆಗಳು ವಿಸ್ತಾರವಾದ ಭೂಮ್ಯಾಕಾಶಗಳ ಮಧ್ಯೆ ಅಗ್ನಿಯನ್ನು ಅನ್ವೇಷಮಾಡುವವರಾಗಿ, ರುದ್ರನಾಮಕ ಅಗ್ನಿಯನ್ನು ಸ್ತುತಿಸಿದರು ದೇವತೆಗಳ ಹವಿಸ್ಸಿನಲ್ಲಿ ಅರ್ಧಭಾಗಕ್ಕೆ ಅರ್ಹನಾದ ಇಂದ್ರನೊಡಗೂಡಿದ ದೇವತೆಗಳು (ಮರುತ್ತುಗಳು) ಉತ್ತಮವಾದ ಅಶ್ವತ್ಥಾದಿ ಸ್ಥಾನದಲ್ಲಿದ್ದ ಅಗ್ನಿಯನ್ನು ಪಡೆದರು.

## English Translation.

Those who are to be worshipped, (the Gods), inquiring between the expansive heaven and earth (for Agni), recited (hymns) dedicated to Rudra; the troop of mortal (Maruts), with (Indra), the sharer of half the oblation, knowing where Agni was hiding, found him in his excellent retreat.

|| ವಿಶೇಷವಿಷಯಗಳು ||

ರೋದಸೀ—ಸ್ವಧೇ ಪುರಂಧೀ ಮೊದಲಾದ ಇಪ್ಪತ್ತನಾಲ್ಕು ದ್ಯಾವಾಪೃಥಿವೀನಾಮಗಳಲ್ಲಿ ರೋದಸೀ ಎಂಬ ಶಬ್ದವು ಪಠಿತವಾಗಿರುವುದರಿಂದ ರೋದಸೀ ಎಂದರೆ ಭೂಮ್ಯಂತರಿಕ್ಷಗಳೆಂದರ್ಥವು (ನಿ. ೩-೩೦)

ರುದ್ರಿಯಾಃ—ರುದ್ರಸ್ಯಾರ್ಹಾಣಿ ಸ್ತೋತ್ರಾಣಿ ಅಗ್ನಿಯನ್ನು ಸ್ತುತಿಮಾಡಲು ಯೋಗ್ಯವಾದ ಸ್ತೋತ್ರಗಳೆಂದು ಅರ್ಥವು ರುದ್ರ ಶಬ್ದವು ಅಗ್ನಿವಾಚಕವಾಗಿರುವುದು ದೇವತೆಗಳಿಗೂ ಅಸುರರಿಗೂ ಯುದ್ಧವು ನಡೆಯುತ್ತಿರುವಾಗ ದೇವತೆಗಳು ಬಚ್ಚಿಟ್ಟಿದ್ದ ಧನವನ್ನು ಅಗ್ನಿಯು (ದೇವತೆಗಳು ಕಾಣದಂತೆ) ದೇವತೆಗಳಿಗೆ ತಿಳಿಸದೆ ತೆಗೆದುಕೊಂಡುಹೋಗಿ ಅಡಿತುಕೊಂಡಿದ್ದನು. ಯುದ್ಧವಾದನಂತರ ದೇವತೆಗಳು ಅಗ್ನಿಯನ್ನು ಹುಡುಕಿಕೊಂಡುಹೋಗಿ

ತನ್ನ ಧನವನ್ನು ತನ್ನ ಸಾಮರ್ಥ್ಯದಿಂದ ಅಗ್ನಿಯಿಂದ ಹಿಂತಿರಿಗಿ ತಂದರು ಆಗ ಅಗ್ನಿಯು ಅತ್ತನು **ರುದಿರ್ ಅಶ್ರುವಿಮೋಚನೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಕಾರಣ ರುದ್ರಶಬ್ದವು ಅಳುವುದು, ಎಂಬ ಅರ್ಥವನ್ನು ಬೋಧಿಸುವ ಕಾರಣದಿಂದ ಅಗ್ನಿಯು ಅತ್ತದ್ದರಿಂದ ರುದ್ರನೆಂದರೆ ಅಗ್ನಿಯು ಎಂದು ಅರ್ಥವಾಗಿರುತ್ತದೆ **ತೇದಗ್ನಿರ್ನ್ಯಕಾಮಯತ** ಎಂದು ಪ್ರಾರಂಭಿಸಿ **ಸೋಽರೋದೀದ್ಯದರೋದೀತ್ ತದ್ರುದ್ರಸ್ಯ ರುದ್ರತ್ವಂ** (ತೈ ಸಂ ೧-೫-೧-೧) ಎಂಬವರಿಗೂ ಇರುವ ವಚನವು ಈ ಅಭಿಪ್ರಾಯವನ್ನು ಬೋಧಿಸುವುದು. ಅಗ್ನಿಯು ಅವಿತುಕೊಂಡಿದ್ದಾಗ ಯಜ್ಞದ ಹವಿರ್ಭಾಗಗಳನ್ನು ಹೊಂದಲು ಅರ್ಹರಾದ ದೇವತೆಗಳಿಗೆ ಹವಿರ್ಭಾಗಗಳು ಇಲ್ಲದ ಕಾರಣ ಅವರು ದೊಡ್ಡದಾಗಿರುವ ದ್ಯಾವಾಪೃಥಿವಿಗಳನ್ನು ಚೆನ್ನಾಗಿ ತಿಳಿದು ಇರುವುದರಿಂದ ಅಲ್ಲೆಲ್ಲಾ ಅಗ್ನಿಯನ್ನು ಹುಡುಕಿ ಅವನನ್ನು ಕಂಡು ಉಚಿತವಾದ ಸ್ತೋತ್ರಗಳಿಂದ ಸ್ತುತಿಮಾಡಿದರು ಎಂದು ಸಾಯಣರು ಅರ್ಥ ಮಾಡಿರುವರು

**ನೇಮಧಿತಾ**— **ನೇಮ** ಎಂಬ ಶಬ್ದವು ಅರ್ಧವು ಎಂಬ ಅರ್ಥವನ್ನು ಬೋಧಿಸುವುದು **ತ್ವೋ ನೇಮ ಇತ್ಯರ್ಧಸ್ಯ** (ನಿ. ೩-೨೦) ಎಂದು ಯಾಸ್ಕರು ನೇಮ ಶಬ್ದವನ್ನು ಹೇಳಿ ಅದರ ಅರ್ಥವನ್ನು ವಿಮರ್ಶೆಮಾಡುವಾಗ "ದೇವತೆಗಳು ಎಲ್ಲರ ಅರ್ಧಭಾಗದಿಂದ ಧರಿಸಲ್ಪಟ್ಟಿರುವ ಕಾರಣ ಇಂದ್ರನು **ನೇಮಧಿತಿಃ** ಎಂದು ಪ್ರಸಿದ್ಧನಾಗಿರುವನು ದೇವತೆಗಳೆಲ್ಲರೂ ಒಂದು ಅರ್ಧವು ಇಂದ್ರನು ಒಬ್ಬನೇ ಇನ್ನೊಂದು ಅರ್ಧವು" ಎಂದು ಹೇಳಿರುವರು. **ಯತ್ಸರ್ವೇಷಾಮರ್ಧಮಿಂದ್ರಃ** (ತೈ ಸಂ. ೫-೪-೮-೩) ಎಂಬ ವಚನವು ದೇವತೆಗಳೆಲ್ಲರ ಅರ್ಧಭಾಗದಿಂದ ಇರುವ ಇಂದ್ರನು ದೇವತೆಗಳೆಲ್ಲರಿಗಿಂತಲೂ ಅತಿಶಯವಾದ ಹವಿರ್ಭಾಗವುಳ್ಳವನು" ಎಂದು ಬೋಧಿಸುವುದು ಈ ವಚನವು ಇಂದ್ರನು ದೇವತೆಗಳಲ್ಲಿ ಅರ್ಧಭಾಗವಾಗಿರುವನೆಂಬ ಅಂಶದಲ್ಲಿ ಪ್ರಮಾಣವಾಗಿರುತ್ತದೆ

**ಮರ್ತಃ** —ಮರ್ತಶಬ್ದವು ಇಪ್ಪತ್ತೈದು ಮನುಷ್ಯವಾಚಕಗಳಲ್ಲಿ (ನಿ ೩-೭) ಉಕ್ತವಾಗಿರುವುದು. ಇಲ್ಲಿ **ಮರುದ್ಗಣಃ** ದೇವತೆಗಳ ಸಮೂಹವು ಎಂದು ಸಾಯಣರು ಅರ್ಥಮಾಡಿರುವರು ಸ್ಕಂದಸ್ವಾಮಿಗಳು —ರುದ್ರ ಶಬ್ದವು ಹದಿಮೂರು ಸ್ತೋತ್ರನಾಮಗಳಲ್ಲಿ (ನಿ ೩-೧೯) ಉಕ್ತವಾಗಿರುವುದರಿಂದ ರುದ್ರವೆಂದರೆ ಸ್ತೋತ್ರವು ಮರ್ತ ಶಬ್ದವು ಮನುಷ್ಯವಾಚಿಯಾಗಿರುವ ಕಾರಣ ಈ ಪದಕ್ಕೆ **ಚಿಕಿತ್ವಾನ್** ಎಂಬ ಪದವನ್ನು ವಿಶೇಷಣವನ್ನು ಮಾಡಿರುವರು. **ಚಿಕಿತ್ವಾನ್ ಮರ್ತಃ**—ಜ್ಞಾನಿಯಾದ ಮನುಷ್ಯನು **ನೇಮಧಿತಾ**—(ಸಂಗ್ರಾಮ) ಯುದ್ಧಕ್ಕೆ ಸಮನಾದ ಸಂಸಾರ ದಲ್ಲಿರುವವನಾಗಿ ಪರಮಪದವಾದ **ಪರಮಾತ್ಮರೂಪವಾದ ಉತ್ತಮವಾದ** ಸ್ಥಿತಿಯಲ್ಲಿ ಇರುವ **ಅಥವಾ** ಯಜ್ಞವೇದಿಯ ಲ್ಲಿರುವ **ಅಗ್ನಿಯನ್ನು** ಯಜ್ಞಗಳಿಂದ ಪೂಜಿಸುವನು **ಮತ್ತು ಸ್ತೋತ್ರಮಾಡುವನು.**

**ಆ ವೇವಿದಾನಾಃ**— ತಿಳಿಯಬೇಕಾದವುಗಳೆಲ್ಲವನ್ನೂ ತಿಳಿದಿರುವ **ಯಜ್ಞಿಯಾಸಃ** ಯಾಗಶೀಲರಾದವರೂ ಕೂಡ ಅಗ್ನಿಯನ್ನು ಸ್ತೋತ್ರಮಾಡಿ (ಯಜ್ಞಮಾಡಿ) ಯಜ್ಞದಲ್ಲಿ ಹವಿರ್ಭಾಗಗಳಿಂದ ಪೂಜಿಸುವರು ಎಂದು ಅರ್ಥವನ್ನು ವಿವರಿಸಿರುವರು

**ಯಜ್ಞಿಯಾಸಃ**— **ಯಜ್ಞಾರ್ಹಾಃ ದೇವಾಃ** । ಯಜ್ಞದಿಂದ ಪೂಜಿಸಲ್ಪಡಲರ್ಹರಾದ ದೇವತೆಗಳು ಎಂದು ಸಾಯಣರೂ, **ಯಜ್ಞಸಂಪಾದಿನೋ ಮನುಷ್ಯಾಃ** ಯಾಗವಾಡವ ಮನುಷ್ಯರು ಎಂದು ಸ್ಕಂದಸ್ವಾಮಿಗಳೂ ಅರ್ಥವನ್ನು ವಿವರಿಸಿರುವರು

॥ ವ್ಯಾಕರಣಪ್ರಕ್ರಿಯಾ ॥

**ಬೃಹತೀ**—ಬೃಹತ್ ಶಬ್ದ. ದ್ವಿತೀಯಾ ದ್ವಿವಚನರೂಪ **ಬೃಹನ್ಮಹತೋರುಪಸಂಖ್ಯಾನಂ** ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ವೇವಿದಾನಾಃ**—ವಿದ ಜ್ಞಾನೇ ಅಥವಾ ವಿದ್‌ಲೃ ಲಾಭೇ, ಧಾತು. ಇದಕ್ಕೆ ಅತಿಶಯಾರ್ಥ ತೋರುವಾಗ **ಧಾತೋರೇಕಾಚಃ ಕ್ರಿಯಾಸಮಭಿಹಾರೇ ಯಙ್** (ಪಾ ಸೂ. ೩-೧-೨೨) ಎಂಬುದರಿಂದ ಯಙ್ **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ ಬಂದ ಮೇಲೆ **ಗುಣೋಯಙ್‌ಲುಕೋಃ** (ಪಾ. ಸೂ ೭-೪-೮೨) ಎಂಬುದರಿಂದ ಗುಣ. **ಸನಾದ್ಯಂತಾಧಾತವಃ ಸೂತ್ರ**ದಿಂದ ವೇವಿದ್ಯ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. ಯಙಂತದ ಮೇಲೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ **ಬಹುಲಂ ಛಂದಸಿ** ಎಂಬುದರಿಂದ ಶಪ್ಪಿಗೆ ಲುಕ್. **ಛಂದಸ್ಯುಭಯಥಾ** ಎಂಬುದರಿಂದ ಶಾನಚಿಗೆ ಆರ್ಧಧಾತುಕ ಸಂಜ್ಞೆಯು ಬರುವುದರಿಂದ **ಅತೋ ಲೋಪಃ** (ಪಾ. ಸೂ. ೬-೪-೪೮) ಎಂಬುದರಿಂದ ಯಙಿನ ಅಕಾರಕ್ಕೆ ಲೋಪ. **ಯಸ್ಯ ಹಲಃ** (ಪಾ. ಸೂ. ೬-೪-೪೯) ಎಂಬುದರಿಂದ ಯಕಾರಕ್ಕೆ ಲೋಪ. ವೇವಿದಾನ ಎಂದು ರೂಪವಾಗುತ್ತದ **ಅಭ್ಯಸ್ತಾನಾಮಾದಿಃ** (ಪಾ ಸೂ. ೬-೧-೧೮೯) ಎಂಬುದರಿಂದ ಶಾನಚಿಗೆ ಸಾರ್ವಧಾತುಕಸಂಜ್ಞೆಯೂ ಇರುವುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯಜ್ಞಿಯಾಸಃ**—ಪ್ರಥಮಾ ಬಹುವಚನದಲ್ಲಿ ಜಸ್ ಬಂದಾಗ **ಆಜ್ಜಸೇರಸುಕ್** (ಪಾ ಸೂ. ೭ ೧-೫೦) ಎಂಬುದರಿಂದ ಅಸುಕಾಗಮ. ಸಕಾರಕ್ಕೆ ರುತ್ವ ವಿಸರ್ಗ

**ವಿದನ್**—ವಿದ್‌ಲೃ ಲಾಭೇ ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ **ಇತಶ್ಚ** ಎಂಬುದರಿಂದ ಇಕಾರಲೋಪ. ಧಾತುವು ಲೃದಿತ್ತಾದುದರಿಂದ **ಪುಷಾದಿದ್ಯುತಾದಿ**—(ಪಾ. ಸೂ. ೩ ೧-೫೫) ಎಂಬುದರಿಂದ ಲುಙಿನಲ್ಲಿ ಪ್ರಾಪ್ತವಾದ ಚ್ಲಿಗೆ ಅಙಾದೇಶ. ಙಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. **ಸಂಯೋಗಾಂತಸ್ಯ ಲೋಪಃ** ಸೂತ್ರದಿಂದ ಅಂತ್ಯತಕಾರಕ್ಕೆ ಲೋಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರ ಅಙ್ ಉಳಿಯುತ್ತದೆ.

**ನೇಮಧಿತಾ**—ಡುಧಾಞ್ ಧಾರಣಪೋಷಣಯೋಃ ಧಾತು ಇದಕ್ಕೆ ಕರ್ಮಣಿಯಲ್ಲಿ ಕ್ತಪ್ರತ್ಯಯ ನೇಮ ಎಂಬುದು ಉಪಪದವಾಗಿರುವಾಗ **ಸುಧಿತ ವಸುಧಿತ ನೇಮಧಿತ**—(ಪಾ ಸೂ. ೭-೪-೪೫) ಎಂಬುದರಿಂದ ಧಿಭಾವದಿಂದ ನಿಪಾತಿತವಾಗಿದೆ. **ತೃತೀಯಾಕರ್ಮಣಿ** (ಪಾ. ಸೂ ೬-೨-೪೮) ಎಂಬುದರಿಂದ ಪೂರ್ವಪದಪ್ರಕೃತಿ ಸ್ವರ ಬರುತ್ತದೆ. ಇದಕ್ಕೆ ತೃತೀಯಾ ವಿಭಕ್ತಿಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಆಕಾರಾದೇಶ ಬರುತ್ತದೆ

**ಚಿಕಿತ್ವಾನ್**—ಕಿತ ಜ್ಞಾನೇ ಧಾತು. ಇದಕ್ಕೆ ಲಿಡರ್ಥದಲ್ಲಿ ಕ್ವಸು ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ ಚುತ್ವ ಕಿತ್ತಾದುದರಿಂದ ಪ್ರತ್ಯಯನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯ**—ಸೂತ್ರದಿಂದ ಉಪಧಾದೀರ್ಘ ಉಗಿತ್ತಾದುದರಿಂದ

ನುಮಾಗಮ. **ಹಲ್ಙ್ಯಾಭ್ಯೋ**—ಸೂತ್ರದಿಂದ ಸುಲೋಪ ಸಂಯೋಗಾಂತಲೋಪದಿಂದ ಸಕಾರಲೋಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ತಸ್ಥಿವಾಂಸಂ**—ಷ್ಠಾ ಗತಿನಿವೃತ್ತೌ ಧಾತು. ಇದಕ್ಕೆ ಹಿಂದಿನಂತೆ **ಕ್ವಸುಶ್ಚ** (ಪಾ. ಸೂ. ೩-೨-೧೦೭) ಎಂಬುದರಿಂದ ಲಿಟಿಗೆ ಕ್ವಸುರಾದೇಶ. **ವಸ್ವೇಕಾಚಾದ್ಘಸಾಂ** (ಪಾ ಸೂ. ೭-೨-೬೭) ಎಂಬ ನಿಯಮ ಸೂತ್ರದಿಂದ ಈ ಧಾತುವು ಏಕಾಚಾದುದರಿಂದ ಇದರ ಪರದಲ್ಲಿರುವ ವಸುವಿಗೆ ಇಡಾಗಮ. ಧಾತುವಿಗೆ ದ್ವಿತ್ವ. **ಶರ್ಪೂರ್ವಾಃ ಖಯಃ** ಎಂಬುದರಿಂದ ಅಭ್ಯಾಸದಲ್ಲಿ ತಕಾರಕ್ಕೆ ಶೇಷ. **ಆತೋಲೋಪ ಇಟಿಚ** (ಪಾ ಸೂ ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ತಸ್ಥಿವಸ್ ಶಬ್ದವಾಗುತ್ತದೆ ಇದಕ್ಕೆ ದ್ವಿತೀಯಾ ಏಕವಚನ ಪರವಾದಾಗ **ಅತ್ವಸಂತಸ್ಯಚಾಧಾತೋಃ** ಎಂಬುದರಿಂದ ಉಪಧಾದೀರ್ಘ **ಉಗಿದಚಾಂ ಸರ್ವ**-ಎಂಬುದರಿಂದ ನುಮಾಗಮ. ಅದಕ್ಕೆ ಅನುಸ್ವಾರ ಪರಸವರ್ಣ. ॥ ೪ ॥



॥ ಸಂಹಿತಾಪಾಠಃ ॥

ಸಂಜಾನಾನಾ ಉಪ ಸೀದನ್ನಭಿಜ್ಞು ಪತ್ನೀವಂತೋ ನಮಸ್ಯಂ ನಮಸ್ಯನ್
ರಿರಿಕ್ವಾಂಸಸ್ತನ್ವಃ ಕೃಣ್ವತ ಸ್ವಾಃ ಸಖಾ ಸಖ್ಯುರ್ನಿಮಿಷಿ ರಕ್ಷಮಾಣಾಃ ॥ ೫ ॥

॥ ಪದಪಾಠಃ ॥

ಸಂऽಜಾನಾನಾಃ । ಉಪ । ಸೀದನ್ । ಅಭಿऽಜ್ಞು । ಪತ್ನೀऽವಂತಃ । ನಮಸ್ಯಂ । ನಮಸ್ಯನ್ನಿತಿ ನಮಸ್ಯನ್ ।
ರಿರಿಕ್ವಾಂಸಃ । ತನ್ವಃ । ಕೃಣ್ವತ । ಸ್ವಾಃ । ಸಖಾ । ಸಖ್ಯುಃ । ನಿऽಮಿಷಿ । ರಕ್ಷಮಾಣಾಃ ॥ ೫ ॥

॥ ಸಾಯಣಭಾಷ್ಯಂ ॥

**ಘರ್ಮಾಭಿಷ್ಟವೇ ಸಂಜಾನಾನಾ ಇತ್ಯೇಷಾ । ಅಥೋತ್ತರಮಿತಿ ಖಂಡೇ ಸೂತ್ರಿತಂ । ಸಂಜಾನಾನಾ ಉಪ ಸೀದನ್ನಭಿಜ್ಞು ದಶಭಿರ್ವಿವಸ್ವತಃ । ಆ. ೪-೭ । ಇತಿ ॥**

**ಹೇ ಅಗ್ನೇ ತ್ವಾಂ ಸಂಜಾನಾನಾಃ ಸಮ್ಯಗ್ಜಾನಂತೋ ದೇವಾ ಉಪ ಸೀದನ್ । ಉಪಸೀದಂತಿ ಪ್ರಾಪ್ನುವಂತಿ । ಉಪಸತ್ತಿಂ ಕೃತ್ವಾ ಚ ಪತ್ನೀವಂತಃ ಸಪತ್ನೀಕಾಃ ಸಂತೋ ನಮಸ್ಯಂ ನಮಸ್ಕಾರಾರ್ಹಮಭಿಜ್ಞು ಅಭಿಮುಖ್ಯೇನಾವಸ್ಥಿತಜಾನುಯುಕ್ತಂ ತ್ವಾಂ ನಮಸ್ಯನ್ । ಅಪೂಜಯನ್ । ಪೂಜಯಿತ್ವಾ ಚ ಸಖ್ಯುರ್ಮಿತ್ರಸ್ಯ ತವ ನಿಮಿಷಿ ದರ್ಶನೇ ನಿಮಿತ್ತಭೂತೇ ಸತಿ ರಕ್ಷಮಾಣಾಸ್ತ್ವಯಾ ಪರಿರಕ್ಷ್ಯಮಾಣಾಃ ಸಖಾ ಸಖಾಯೋ ದೇವಾಃ ಸ್ವಾಸ್ತನ್ವಃ ಸ್ವಕೀಯಾನಿ ಶರೀರಾಣಿ ರಿರಿಕ್ವಾಂಸೋಽನಶನಾದಿರೂಪೇಣ ದೀಕ್ಷಾನಿಯಮೇನ ರಿಕ್ತೀಕುರ್ವಂತಃ ಶೋಷಯಂತಃ ಕೃಣ್ವತ । ಯಾಗಾನಕುರ್ವನ್ । ದೇವಾ ವೈ ಯಜ್ಞಮತನ್ವತ । ಐ. ಬ್ರಾ. ೨-೧೧ । ಇತಿ ಶ್ರುತೇಃ ॥ ನಮಸ್ಯನ್ । ನಮೋವರಿವಶ್ಚಿತ್ರಙ ಇತಿ ಪೂಜಾರ್ಥೇ ಕ್ಯಚ್ । ಲಙಿ ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ರಿರಿಕ್ವಾಂಸಃ । ರಿಚಿರ್ ವಿರೇಚನೇ । ಲಿಟಃ ಕ್ವಸುಃ । ನಿಮಿಷಿ । ಮಿಷ ಸ್ಪರ್ಧಾಯಾಂ । ಅತ್ರೋಪಸರ್ಗವಶಾದ್ದರ್ಶನಾರ್ಥಃ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ರಕ್ಷಮಾಣಾಃ । ಕರ್ಮಣಿ ಲಟಃ ಶಾನಚ್ । ಯಕಿ ಪ್ರಾಪ್ತೇ ವ್ಯತ್ಯಯೇನ ಶಪ್ ॥**

॥ ಪ್ರತಿಪದಾರ್ಥ ॥

(**ಅಗ್ನೇ**—ಅಗ್ನಿಯೇ) । **ಸಂಜಾನಾನಾ**—(ನೀನಿದ್ದ ಸ್ಥಳವನ್ನು) ತಿಳಿದಂಥಾ (ದೇವತೆಗಳು) । **ಉಪ ಸೀದನ್**—(ನಿನ್ನನ್ನು) ಸಮೀಪಿಸಿದರು । **ನಮಸ್ಯಂ**—ನಮಸ್ಕಾರಾರ್ಹನಾದ (ನಿನ್ನನ್ನು) । **ಪತ್ನೀವಂತಃ**—ಸಪತ್ನೀಕರಾಗಿ । **ಅಭಿಜ್ಞು**—ಅಭಿಮುಖವಾಗಿ ಮಾಡಲ್ಪಟ್ಟ ಜಾನುಗಳುಳ್ಳವರಾಗಿ । **ನಮಸ್ಯನ್**—ನಮಸ್ಕರಿಸಿದರು (ಪೂಜಿಸಿದರು) । **ಸಖ್ಯುಃ**—ಮಿತ್ರನಾದ (ನಿನ್ನ) । **ನಿಮಿಷಿ**—ದರ್ಶನವಾಗಲು । **ರಕ್ಷಮಾಣಾಃ**—(ನಿನ್ನಿಂದ) ರಕ್ಷಿತರಾದ । **ಸಖಾ**—ಸ್ನೇಹಿತರಾದ (ದೇವತೆಗಳು) । **ಸ್ವಾಃ ತನ್ವಃ**—ತಮ್ಮ ಶರೀರಗಳನ್ನು । **ರಿರಿಕ್ವಾಂಸಃ**—(ಅನಶನಾದಿಗಳಿಂದ) ದೇಹವನ್ನು ಶೋಷಿಸಿದವರಾಗಿ । **ಕೃಣ್ವತ**—(ಯಾಗಗಳನ್ನು) ಮಾಡಿದರು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನಿದ್ದ ಸ್ಥಳವನ್ನು ತಿಳಿದ ದೇವತೆಗಳು, ಸಪತ್ನೀಕರಾಗಿ, ನಿನ್ನನ್ನು ಸಮೀಪಿಸಿ, ಜಾನುಗಳನ್ನೂರಿ ನಿನಗೆ ನಮಸ್ಕರಿಸಿದರು. ಮಿತ್ರನಾದ ನಿನ್ನ ದರ್ಶನ ಮಾತ್ರದಿಂದಲೇ ರಕ್ಷಿತರೆಂದು ಭಾವಿಸಿದವರಾಗಿ, ಅನಶನಾದಿದೀಕ್ಷಾಬದ್ಧರಾಗಿ, ನಿನ್ನ ಸಂಬಂಧವಾದ ಯಜ್ಞಗಳನ್ನು ಕೈಗೊಂಡರು

## English Translation.

The Gods, discovering you, sat down, and with their wives paid reverential adoration to you upon their knees. Secure on beholding their friend, of being protected, your friends, the Gods, abandoned the rest of their bodies in sacrifice.

|| ವಿಶೇಷವಿಷಯಗಳು ||

ಘರ್ಮಾಭಿಷ್ಟವಕ್ಕಾಗಿ **ಸಂಜಾನಾನಾ** ಎಂಬ ಈ ಋಕ್ಕಿನ ಪ್ರಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ **ಅಥೋತ್ತರಂ** ಎಂಬ ಖಂಡದ **ಸಂಜಾನಾನಾ ಉಪ ಸೀದನ್ನಭಿಜ್ಞ್ವ ಪತ್ನೀವಂತೋ ನಮಸ್ಯಂ ನಮಸ್ಯನ್ ಇತಿ ದಶಭಿರ್ನಿವಸ್ತತಃ** ಎಂಬ ಸೂತ್ರದಿಂದ ವಿವೃತವಾಗಿರುವುದು (ಅ. ೪-೭).

**ಸಂಜಾನಾನಾಃ**—ಅಗ್ನಿಯ ವಿಷಯವನ್ನು ಚೆನ್ನಾಗಿ ತಿಳಿದಿರುವ ದೇವತೆಗಳೆಂದು ಸಾಯಣರೂ, ಮನುಷ್ಯರೆಂದು ಸ್ಕಂದಸ್ವಾಮಿಗಳೂ ಅರ್ಥವನ್ನು ಮಾಡಿರುವರು. ಪ್ರಥಮಾಂತ ಪದಗಳೆಲ್ಲವನ್ನೂ ದೇವತೆಗಳಿಗೆ ವಿಶೇಷಣವನ್ನಾಗಿ ಅರ್ಥಮಾಡಿರುವ ಸಾಯಣರು **ದೇವಾ ವೈ ಯಜ್ಞಮತನ್ವತ** (ಐ ಬ್ರಾ. ೨-೧೧) ಎಂಬ ಶ್ರುತಿಯನ್ನು ಪ್ರಮಾಣವಾಗಿ ಉದಹರಿಸಿ ದೇವತೆಗಳು ತಮ್ಮ ಪತ್ನಿಯರೊಡಗೂಡಿ, ನಿಯಮವಾಗಿರುತ್ತಾ ತಮ್ಮ ಶರೀರವನ್ನೂ ಅನಶನಾದಿನಿಯಮಗಳಿಂದ ಕೃಶವನ್ನಾಗಿ ಮಾಡಿಕೊಂಡು ತಮಗೆ ಅಭಿಮುಖನಾಗಿರುವ ನಮಸ್ಕಾರಾರ್ಹನಾದ ಅಗ್ನಿಯನ್ನು ಯಾಗಗಳಿಂದ ಪೂಜಿಸಿದರು. ಮತ್ತು ಅಗ್ನಿಯಿಂದ ಸಂರಕ್ಷಿತರಾಗಿದ್ದರು ಎಂದು ಅರ್ಥವನ್ನು ವಿವರಿಸಿರುವರು

ಸ್ಕಂದಸ್ವಾಮಿಗಳು ಈ ವಿಶೇಷಣಗಳೆಲ್ಲವನ್ನೂ ಮನುಷ್ಯರ ಪರವಾಗಿ ಅನ್ವಯವನ್ನು ಮಾಡಿ ಇದೇ ಅರ್ಥವನ್ನು ಹೇಳಿದ್ದಾಗ್ಯೂ **ತನ್ವಃ ಕೃಣ್ವತ ಸ್ವಾಃ**—ಎಂಬ ಪದಗಳ ಅರ್ಥವನ್ನು ಬೇರೆ ವಿಧವಾಗಿ ಹೇಳಿರುವರು **ಕೃಣ್ವತೆ** ಎಂಬ ಪದವು **ಡುಕೃಞ್ ಕರಣೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿರುವುದು ಇದು ಸಂ ಎಂಬ ಉಪಸರ್ಗಪೂರ್ವಕವಾಗಿ ಸಂಸ್ಕಾರ ಎಂಬ ಅರ್ಥದಲ್ಲಿ ಇಲ್ಲಿ ಪ್ರಯುಕ್ತವಾಗಿ ಇರುವುದು. ಇದರಿಂದ ಅಗ್ನಿಯನ್ನು ಯಜ್ಞಾದಿಗಳಿಂದ ಪೂಜಿಸುವ ಸಪತ್ನೀಕರಾದ ಯಜ್ಞಮಾಡುವ ಯಜಮಾನರುಗಳು ಅನುಗ್ರಹವನ್ನು ಮಾಡುವ ನಮಸ್ಕಾರಾರ್ಹನಾದ ಅಗ್ನಿಯಿಂದ ಸಂರಕ್ಷಿಸಲ್ಪಡುವವರಾಗಿ ವಿದ್ಯೈಶ್ವರ್ಯವೇ ಮೊದಲಾದವುಗಳಿಂದ ಸಂಸ್ಕಾರವನ್ನು ಹೊಂದುವರು ಎಂದು ಅರ್ಥವನ್ನು ಹೇಳಿರುವರು

**ಅಭಿಜ್ಞು—ಅಭಿಗತೇ ಜಾನುನೀ ಯಸ್ಮಿನ್ ಉಪಸದನೇ ಅಭಿಜ್ಞು. ಭೂಮೌ ಜಾನುನೀ ನಿಪಾತ್ಯ ಉಪಸೀದಂತೀತ್ಯರ್ಥಃ** ಅಗ್ನಿಯನ್ನು ಪೂಜಿಸುವಾಗ ಭೂಮಿಯಲ್ಲಿ ಮೊಣಕಾಲುಗಳನ್ನು ಊರಿ ಕೂತುಕೊಂಡು ಅಗ್ನಿಯನ್ನು ಪೂಜಿಸುವರು ಎಂದು ಅಭಿಜ್ಞು ಪದವನ್ನು ಕ್ರಿಯಾವಿಶೇಷಣವನ್ನಾಗಿ ಹೇಳಿರುವರು ಮತ್ತು ಶ್ರದ್ಧೆಯಿಂದ ಮಾಡುವ ಕರ್ಮಗಳಲ್ಲಿಯೂ ಮೊಣಕಾಲನ್ನು ಊರಿಕೊಂಡು ಮಾಡುವುದು ರೂಢಿಯಲ್ಲಿದ್ದಂತೆ ಕಂಡುಬರುವುದು.

**ಆ ಜಾನು ಜಾನು ದಕ್ಷಿಣತೋ ನಿಷದ್ಯೇಮಂ ಯಜ್ಞಮಭಿಗೃಣೀತ ವಿಶ್ವೇ ।**

(ಋ ಸಂ ೧೦-೧೫-೬)

ಎಂಬ ಋಕ್ಕು ಈ ವಿಷಯುವನ್ನು ಸಮರ್ಥಿಸುವುದು

**ರಿರಿಕ್ವಾಂಸಃ**--ಅಗ್ನಿಯ ಅನುಗ್ರಹದಿಂದ ಅತಿಶಯವಾದ ಮಹಿಮೆಯನ್ನು ಹೊಂದಿರುವ ಶರೀರವುಳ್ಳವರೆಂದು ಸ್ಕಂದಸ್ವಾಮಿಗಳೂ, ಅಗ್ನಿಯನ್ನು ಪೂಜಿಸುವಾಗ ನಿಯಮಗಳಿಂದ ಕೃಶವಾದ ಶರೀರವುಳ್ಳವರೆಂದು ಸಾಯಣರೂ ಅರ್ಥವನ್ನು ಹೇಳಿರುವರು

। ವ್ಯಾಕರಣಪ್ರಕ್ರಿಯಾ ॥

**ಸಂಜಾನಾನಾಃ**—ಜ್ಞಾ ಅವಬೋಧನೇ ಧಾತು. ಇದಕ್ಕೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಜ್ಞಾ ಜನೋರ್ಜಾ** (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. ಜಾನಾನ ಎಂದು ರೂಪವಾಗುತ್ತದೆ **ಚಿತಃ** ಸೂತ್ರದಿಂದ ಅಂತೋದಾತ್ತಸ್ವರ ಬರುತ್ತದೆ. ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸೀದನ್**—ಷದ್ಲೃ ವಿಶರಣಗತ್ಯವಸಾದನೇಷು. ಧಾತು ಇದಕ್ಕೆ ಲಙ್ ಪ್ರಥಮಪುರುಷ ಬಹುವಚನದಲ್ಲಿ **ಝೋಽಂತಃ** ಎಂಬುದರಿಂದ ಅಂತಾದೇಶ. ಇಕಾರಲೋಪ. **ಕರ್ತರಿ ಶಪ್** ಸೂತ್ರದಿಂದ ಶಪ್ ವಿಕರಣ. ಶಪ್ ಪರವಾದಾಗ **ಪಾಘ್ರಾಧ್ಮಾ**—ಸೂತ್ರದಿಂದ ಧಾತುವಿಗೆ ಸೀದಾದೇಶ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಸಂಯೋಗಾಂತಲೋಪದಿಂದ ಪ್ರತ್ಯಯಾಂತ ತಕಾರಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ನಮಸ್ಯನ್**—**ನಮೋವರಿವಶ್ಚಿತ್ರಙಃ ಕ್ಯಚ್** (ಪಾ. ಸೂ. ೩-೧-೧೯) ಎಂಬುದರಿಂದ ಪೂಜಾರ್ಥತೋರುವಾಗ ನಮಸ್ ಎಂಬ ಪ್ರಾತಿಪದಿಕದ ಮೇಲೆ ಕ್ಯಚ್ ಪ್ರತ್ಯಯ. **ಸನಾದ್ಯಂತಾ ಧಾತವಃ** ಎಂಬುದರಿಂದ ನಮಸ್ಯ ಎಂಬುದು ಧಾತು ಸಂಜ್ಞೆಯನ್ನು ಹೊಂದುತ್ತದೆ ಇದರ ಮೇಲೆ ಲಙ್ ಪ್ರಥಮಪುರುಷ ಬಹುವಚನ ಬಂದಾಗ ಅಂತಾದೇಶ. ಇಕಾರಲೋಪ. **ಅತೋ ಗುಣೇ** ಎಂಬುದರಿಂದ ಪರರೂಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ಸಂಯೋಗಾಂತಲೋಪದಿಂದ ಅಂತ್ಯ ತಕಾರಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ರಿರಿಕ್ವಾಂಸಃ**—ರಿಚಿರ್ ವಿರೇಚನೇ ಧಾತು ಇದಕ್ಕೆ ಲಿಟ್ ಬಂದಾಗ **ಕ್ವಸುಶ್ಚ** (ಪಾ ಸೂ. ೩-೨-೧೦೭) ಎಂಬುದರಿಂದ ಕ್ವಸು ಪ್ರತ್ಯಯ **ತನ್ನಿಮಿತ್ತವಾಗಿ** ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಧಾತುವಿನ ಚಕಾರಕ್ಕೆ ಕುತ್ವ. ಪ್ರಥಮಾ ಬಹುವಚನದಲ್ಲಿ ಉಪಧಾದೀರ್ಘ ನುಮಾಗಮ. ಅದಕ್ಕೆ ಅನುಸ್ವಾರ. ಪ್ರತ್ಯಯ ಸ್ವರದಿಂದ ಆಕಾರ ಉದಾತ್ತವಾಗುತ್ತದೆ.

**ಕೃಣ್ವತೆ**—ಕೃವಿ ಹಿಂಸಾಕರಣಯೋಶ್ಚ ಧಾತು ಧಾತುಗಳಿಗೆ ಅನೇಕಾರ್ಥವಿರುವುದರಿಂದ ಕರಣಾರ್ಥದಲ್ಲಿ ಪ್ರಯುಕ್ತವಾಗಿದೆ. ಲಙ್ ಪ್ರಥಮಪುರುಷ ಬಹುವಚನದಲ್ಲಿ **ಆತ್ಮನೇಪದೇಷ್ವನತಃ** (ಪಾ. ಸೂ ೭-೧-೫) ಎಂಬುದರಿಂದ ಅತಾದೇಶ. **ಇದಿತೋನುಮ್ ಧಾತೋಃ** ಸೂತ್ರದಿಂದ ಧಾತುವಿಗೆ ನುಮಾಗಮ. **ಧಿನ್ವಿಕೃಣ್ವ್ಯೋರ ಚ** (ಪಾ ಸೂ. ೩-೧-೮೦) ಎಂಬುದರಿಂದ ಅಕಾರ ಅಂತಾದೇಶ ಉ ವಿಕರಣ. **ಅತೋ ಲೋಪಃ** ಸೂತ್ರದಿಂದ ಅಕಾರಲೋಪ ಯಣಾದೇಶ. **ಬಹುಲಂ ಛಂದಸ್ಯ**—ಎಂಬುದರಿಂದ ಅಡಾಗಮ ಬರುವುದಿಲ್ಲ ಅಲೋಪಕ್ಕೆ ಸ್ಥಾನಿವದ್ಭಾವ ಬರುವುದರಿಂದ ಉ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ ತಿಙಂತನಿಘಾತಸ್ವರ ಬರುತ್ತದೆ.

**ನಿಮಿಷಿ** - ಮಿಷ ಸ್ಪರ್ಧಾಯಾಮ್. ಧಾತು **ಉಪಸರ್ಗೇಣ ಧಾತ್ವರ್ಥಃ ಬಲಾದನ್ಯಃ ಪ್ರತೀಯತೇ** ಎಂಬ ವಚನಾನುಸಾರವಾಗಿ ಉಪಸರ್ಗವಶದಿಂದ ಇಲ್ಲಿ ದರ್ಶನಾರ್ಥವು ತೋರುತ್ತದೆ **ಸಂಪದಾದಿಭ್ಯಃ ಕ್ವಿಪ್** ಎಂಬುದರಿಂದ ಕ್ವಿಪ್ ಪ್ರತ್ಯಯ ಸಮಾಸದಲ್ಲಿ **ಗತಿಕಾರಕೋಪಪದಾತ್ ಕೃತ್** ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ ಸಪ್ತಮಿ ಏಕವಚನರೂಪ.

**ರಕ್ಷಮಾಣಾಃ**--ರಕ್ಷ ಪಾಲನೇ ಧಾತು ಇದಕ್ಕೆ ಕರ್ಮಣಿಯಲ್ಲಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಾನಚ್ ಪರವಾದಾಗ **ಸಾರ್ವಧಾತುಕೇ ಯಕ್** ಎಂಬುದರಿಂದ ಯಕ್ ಪ್ರಾಪ್ತವಾದಾಗ ವ್ಯತ್ಯಯದಿಂದ ಶಪ್ **ಆನೇಮುಕ್** ಎಂಬುದರಿಂದ ಅಜಂತಕ್ಕೆ ಮುಕಾಗಮ ಲಸಾರ್ವಧಾತುಕವು (ಶಾನಚ್) **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತೆ ॥ ೫ ॥



॥ ಸಂಹಿತಾಪಾಠಃ ॥

ತ್ರಿಃ ಸಪ್ತ ಯದ್ಗುಹ್ಯಾನಿ ತ್ವೇ ಇತ್ಪದಾವಿದನ್ನಿಹಿತಾ ಯಜ್ಞಿ-
ಯಾಸಃ ।
ತೇಭೀ ರಕ್ಷಂತೇ ಅಮೃತಂ ಸಜೋಷಾಃ ಪಶೂಞ್ಚ ಸ್ಥಾತೄಞ್ಚ-
ರಥಂ ಚ ಪಾಹಿ ॥ ೬ ॥

|| ಪದಪಾಠಃ ||

ತ್ರಿಃ । ಸಪ್ತ । ಯತ್ । ಗುಹ್ಯಾನಿ । ತ್ವೇ ಇತಿ । ಇತ್ । ಪದಾ । ಅವಿದನ್ ।
ನಿಽಹಿತಾ । ಯಜ್ಞಿಯಾಸಃ ।
ತೇಭಿಃ । ರಕ್ಷಂತೇ । ಅಮೃತಂ । ಸಽಜೋಷಾಃ । ಪಶೂನ್ । ಚ । ಸ್ಥಾತೄನ್ ।
ಚರಥಂ । ಚ । ಪಾಹಿ || ೬ ||

|| ಸಾಯಣಭಾಷ್ಯಂ ||

ತ್ರಿಃ ಸಪ್ತ ಏಕವಿಂಶತಿಸಂಖ್ಯಾಕಾನಿ ಗುಹ್ಯಾನಿ ರಹಸ್ಯಾನಿ ವೇದೈಕಸಮಧಿಗಮ್ಯಾನಿ ಯದ್ಯಾನಿ ಪದಾ ಪದಾನಿ । ಪದ್ಯತೇ ಗಮ್ಯತೇ ಸ್ವರ್ಗ ಏಭಿರಿತಿ ವ್ಯುತ್ಪತ್ತ್ಯಾ ಪದಶಬ್ದೇನಾತ್ರ ಯಜ್ಞಾ ಉಚ್ಯಂತೇ । ತೇ ಚೈಕವಿಂಶತಿಸಂಖ್ಯಾಕಾಃ । ಔಪಾಸನಹೋಮವೈಶ್ವದೇವಾದಯಃ ಸಪ್ತ ಪಾಕಯಜ್ಞಾಃ । ಅಗ್ನ್ಯಾಧೇಯದರ್ಶಪೂರ್ಣಮಾಸಾದಯಃ ಸಪ್ತ ಹವಿರ್ಯಜ್ಞಾಃ । ಅಗ್ನಿಷ್ಟೋಮಾತ್ಯಗ್ನಿಷ್ಟೋಮಾದಯಃ ಸಪ್ತ ಸೋಮಯಜ್ಞಾಃ । ಏವಮೇಕವಿಂಶತಿಸಂಖ್ಯಾಕಾನಿ ಯಜ್ಞಲಕ್ಷಣಾನಿ ಪದಾನಿ ಹೇ ಅಗ್ನೇ ತ್ವೇ ಇತ್ ತ್ವಯ್ಯೇವ ನಿಹಿತಾ ಸ್ಥಾಪಿತಾನಿ । ತೇಷಾಂ ಸರ್ವೇಷಾಂ ತ್ವತ್ಪ್ರಧಾನತ್ವಾತ್ । ನ ಹ್ಯಗ್ನಿಮಂತರೇಣ ಯಾಗಾ ಅನುಷ್ಠಾತುಂ ಶಕ್ಯಂತೇ । ಯಜ್ಞಿಯಾಸೋ ಯಜ್ಞಾರ್ಹಾ ಅರ್ಥಿತ್ವಸಾಮರ್ಥ್ಯವೈದುಷ್ಯಾದಿಭಿರಧಿಕಾರಹೇತುಭಿರ್ಯುಕ್ತಾಃ । ತಥಾ ಚೋಕ್ತಂ । ಅರ್ಥೀ ಸಮರ್ಥೋ ವಿದ್ವಾನ್ ಶಾಸ್ತ್ರೇಣಾಪರ್ಯುದಸ್ತಃ ಕರ್ಮಣ್ಯಧಿಕಾರೀತಿ । ಏವಂವಿಧಲಕ್ಷಣೋಪೇತಾ ಯಜಮಾನಾಸ್ತಾನಿ ಪದಾನ್ಯವಿದನ್ । ಅಲಭಂತ । ಲಬ್ಧ್ವಾ ಚ ತೇಭಿರ್ಯಜ್ಞಲಕ್ಷಣೈಃ ಪದೈರಮೃತಮಮರಣಧರ್ಮಾಣಂ ತ್ವಾಂ ರಕ್ಷಂತೇ । ಪಾಲಯಂತಿ । ಯಜಂತೀತ್ಯರ್ಥಃ । ಸಜೋಷಾಸ್ತ್ವೈರ್ಯಜಮಾನೈಃ ಸಮಾನಪ್ರೀತಿಸ್ತ್ವಂ ಪಶೂನ್ ಗವಾಶ್ವಾದಿಪಶೂಂಶ್ಚ ಸ್ಥಾತೄನ್ ವ್ರೀಹ್ಯಾದಿಸ್ಥಾವರಾಣಿ ಚರಥಂ ಪಶುವ್ಯತಿರಿಕ್ತಮನ್ಯದ್ಯತ್ಪ್ರಾಣಿಜಾತಮಸ್ತಿ ತಚ್ಚ ಪಾಹಿ । ರಕ್ಷ । ತೇಷು ಹಿ ರಕ್ಷಿತೇಷು ತ್ವದೀಯಾ ಯಾಗಾಃ ಕರ್ತುಂ ಶಕ್ಯಂತೇ ನಾನ್ಯಥಾ । ಅತಸ್ತ್ವಮೇವಮುಚ್ಯಸ ಇತ್ಯರ್ಥಃ ॥ ಯತ್ । ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ । ಗುಹ್ಯಾನಿ । ಗುಹಾಯಾಂ ಭವಾನಿ । ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ತ್ವೇ । ಸುಪಾಂ ಸುಲುಗಿತಿ ಸಪ್ತಮ್ಯಾಃ ಶೇಆದೇಶಃ । ಅವಿದನ್ । ವಿದ್ಲೃ ಲಾಭೇ । ಲುಙಿ ಲೃದಿತ್ವಾದಙ್ । ಪಶೂನ್ ಸ್ಥಾತೄನ್ । ಉಭಯತ್ರೋಭಯಥರ್ಕ್ಷು । ಪಾ. ೮-೩-೮ । ಇತ್ಯುಭಯಥಾಭಾವಾನ್ನಕಾರಸ್ಯ ರುತ್ವಾಭಾವಃ ॥

॥ ಪ್ರತಿಪದಾರ್ಥ ॥

**ಯಜ್ಞಿಯಾಸಃ**—ಯಜ್ಞಮಾಡಲು ಅರ್ಹರಾದವರು (ಅಧಿಕಾರಿಗಳು) । **ತ್ರಿಃ ಸಪ್ತ**—ಇಪ್ಪತ್ತೊಂದು ಸಂಖ್ಯಾಕಗಳಾದ, (ಅಗ್ನ್ಯಾಧೇಯಾದಿ) । **ಗುಹ್ಯಾನಿ**—ರಹಸ್ಯವಾದ (ವೇದದಿಂದ ಮಾತ್ರ ತಿಳಿಯಬಹುದಾದ) । **ಯತ್**—ಯಾವ । **ಪದಾ**—ಯಜ್ಞಗಳಿವೆಯೋ (ಅವುಗಳನ್ನು) । **ತ್ವೇ ಇತ್**—ನಿನ್ನಲ್ಲೇ । **ನಿಹಿತಾ**--ಸ್ಥಾಪಿತವನ್ನಾಗಿ (ಆಚರಿಸಬೇಕಾದವುಗಳನ್ನಾಗಿ) । **ಅವಿದನ್**—ತಿಳಿದರು । **ತೇಭಿಃ**—ಆ ಯಾಗಗಳಿಂದ । **ಅಮೃತಂ**—ಅಮರನಾದ (ನಿನ್ನನ್ನು) । **ರಕ್ಷಂತೇ**—ಪಾಲಿಸುತ್ತಾರೆ (ಪೂಜಿಸುತ್ತಾರೆ) । **ಸಜೋಷಾಃ**—ಸಮಾನ ಪ್ರೀತಿಯುಳ್ಳ (ನೀನು) । **ಪಶೂನ್**—ಗೋವೇ ಮೊದಲಾದ ಪಶುಗಳನ್ನೂ । **ಸ್ಥಾತ್ಯನ್ ಚ**—ಸ್ಥಾವರವಾದ ವ್ರೀಹ್ಯಾದಿಗಳನ್ನೂ । **ಚರಥಂ ಚ**—ಚರವಾದ ಇತರ ಪ್ರಾಣಿಗಳನ್ನೂ । **ಪಾಹಿ**—ಕಾಪಾಡು

॥ ಭಾವಾರ್ಥ ॥

ಯಜ್ಞಮಾಡಲು ಅರ್ಹರಾದ ಅಧಿಕಾರಿಗಳು ರಹಸ್ಯವಾದ ಅಗ್ನ್ಯಾಧೇಯಾದಿ ಇಪ್ಪತ್ತೊಂದು ಯಾಗಗಳನ್ನೂ ನಿನ್ನಲ್ಲೇ ಆಚರಿಸಬೇಕಾದವುಗಳನ್ನಾಗಿ ತಿಳಿದು, ಅಮರನಾದ ನಿನ್ನನ್ನು ಆ ಯಾಗಗಳಿಂದ ಪೂಜಿಸುತ್ತಾರೆ. ಅದೇ ರೀತಿ ಪ್ರೀತಿಯುಕ್ತನಾಗಿ ನೀನು, (ಅವರ) ಗೋವುಗಳು, ವ್ರೀಹ್ಯಾದಿಗಳು ಮತ್ತು ಇತರ ಪಶುಗಳನ್ನೂ (ಯಾಗ ಸಾಧನಗಳಾದುದರಿಂದ) ರಕ್ಷಿಸು.

## English Translation

(Devout men), competent to offer sacrifices, have known the thrice seven mystic rites comprised in you, and with them, worshipped you do you, therefore, with like affection, protect their cattle, and all that (belongs to them), moveable or stationary·

॥ ವಿಶೇಷವಿಷಯಗಳು ॥

**ತ್ರಿಸ್ಸಪ್ತಗುಹ್ಯಾನಿ ಪದಾನಿ—ಪದ್ಯತೇ ಗಮ್ಯತೇ ಸ್ವರ್ಗ ಏಭಿರಿತಿ ಪದಶಬ್ದೇನಾತ್ರ ಯಜ್ಞಾ ಉಚ್ಯಂತೇ ।** ಇವುಗಳ ಆಚರಣೆಯಿಂದ ಸ್ವರ್ಗವು ಹೊಂದಲ್ಪಡುವಕಾರಣ ಪದಶಬ್ದವು ಯಜ್ಞವಾಚಿಯಾಗಿರುವುದು. ಔಪಾಸನಹೋಮ ವೈಶ್ವದೇವ ಇವೇ ಮೊದಲಾದ ಏಳು ಪಾಕಯಜ್ಞಗಳು, ಅಗ್ನ್ಯಾಧೇಯ, ದರ್ಶಪೂರ್ಣಮಾಸ ಎಂಬ ಇವೇ ಮೊದಲಾದವುಗಳು ಏಳು ಹವಿರ್ಯಜ್ಞಗಳು, ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ ಎಂಬ ಇವೇ ಮೊದಲಾದವುಗಳು ಏಳು ಸೋಮಯಜ್ಞಗಳು ಇವೆಲ್ಲವೂ ಸೇರಿ ಇಪ್ಪತ್ತೊಂದು ಆಗುವುವು. ಇವುಗಳನ್ನು ಆಚರಿಸಲು ಅಗ್ನಿಯು ಇಲ್ಲದೇ ಆಗದಿರುವ ಕಾರಣ ಅಗ್ನಿಯಸ್ಥಾನಗಳಾಗಿ ಇವುಗಳು ಅಗ್ನಿಯನ್ನು ಪೂಜಿಸುವರಿಂದ ವೇದಮಾತ್ರದಿಂದಲೇ ತಿಳಿಯಲು ಯೋಗ್ಯವಾದವುಗಳಾಗಿ ಇರುವುವು.

**ಯಜ್ಞಿಯಾಸಃ—ಯಜ್ಞಾರ್ಹಾಃ ।** ಯಜ್ಞಗಳನ್ನು ಮಾಡಲು ಸರಿಯಾದ ಯೋಗ್ಯತೆಯನ್ನು ಹೊಂದಿ ಇರುವವರು. ಯಜ್ಞವನ್ನು ನೆರವೇರಿಸಲು ಬೇಕಾಗುವ ಪದಾರ್ಥಗಳನ್ನು ಯಾಚನೆಮಾಡಿಯಾದರೂ ಸಿದ್ಧಮಾಡುವ ಸಾಮರ್ಥ್ಯವನ್ನು ಹೊಂದಿರುವುದು, ಯಜ್ಞದ ಕಾರ್ಯಗಳನ್ನು ಮಾಡುವ ಶಕ್ತಿಯನ್ನು ಹೊಂದಿರುವುದು, ಯಜ್ಞದ ಆಚರಣೆಯಲ್ಲಿ ಶಾಸ್ತ್ರದಲ್ಲಿ ಹೇಳಿರುವ ಕ್ರಮವನ್ನು ತಿಳಿಯುವ ಜ್ಞಾನವುಳ್ಳವರಾಗಿರುವುದು ಎಂಬ ಈ ಮೂರುವಿಧ ಸಾಮರ್ಥ್ಯವುಳ್ಳವರು ಯಜ್ಞವನ್ನು ಮಾಡಲು ಅಧಿಕಾರಿಗಳಾಗಿರುವರು. **ಅರ್ಥೀ ಸಮರ್ಥೋ ವಿದ್ವಾನ್ ಶಾಸ್ತ್ರೇಣಾಪರ್ಯುದಸ್ತಃ ಕರ್ಮಣ್ಯಧಿಕಾರೀ** ಎಂಬುದಾಗಿ ಶಾಸ್ತ್ರವೂ ಯಜ್ಞಾಧಿಕಾರಿಗಳನ್ನು ವಿವೇಚನೆಮಾಡಿ ಹೇಳಿರುವುದು ಈ ಕ್ರಮವನ್ನು ಅನುಸರಿಸಿ ಇರುವ ಯಜಮಾನರುಗಳು ಅಗ್ನಿಯ ಇಪ್ಪತ್ತೊಂದು ವಿಧವಾದ ಯಜ್ಞರೂಪವಾದ ಸ್ಥಾನಗಳನ್ನು ಎಂದರೆ ಇಪ್ಪತೊಂದು ಯಜ್ಞಕರ್ಮಗಳನ್ನು ತಿಳಿದಿರುವರು ಮತ್ತು ಈ ಕ್ರಮದಿಂದ ಅಗ್ನಿಯ ಅನುಗ್ರಹಕ್ಕೆ ಪಾತ್ರರಾಗುವರು

**ಸಜೋಷಾಃ ಸ್ಥಾತೄನ್ ಚರಥಂ ಚ ಪಾಹಿ**—ಯಜ್ಞವನ್ನು ಆಚರಿಸುವ ಯಜಮಾನರು ಅಗ್ನಿಯ ವಿಷಯದಲ್ಲಿ ಇರಿಸಿರುವ ಪ್ರೀತಿಗನುಸಾರವಾದ ಪ್ರೀತಿಯನ್ನು ಯಜಮಾನ ವಿಷಯದಲ್ಲಿ ಹೊಂದಿರುವ ಅಗ್ನಿಯು— **ಸಜೋಷಾಃ** ಎಂಬ ಪದದಿಂದ ಹೇಳಲ್ಪಡುವನು ಸ್ಥಾವರರೂಪವಾಗಿರುವ ಮತ್ತು ಜಂಗಮ (ಚರ) ಪ್ರಾಣಿಗಳ ರೂಪದಿಂದ ಇರುವ ಯಜಮಾನರುಗಳ ಧನವನ್ನು ಅಗ್ನಿಯು ರಕ್ಷಿಸದಿದ್ದರೆ ಯಾಗಾದಿಗಳು ನೆರವೇರುವುದಿಲ್ಲವಾದ ಕಾರಣ ಅವುಗಳನ್ನು ರಕ್ಷಿಸು ಎಂದು ಅಗ್ನಿಯನ್ನು ಕುರಿತು ಪ್ರಾರ್ಥನೆಯು ಇಲ್ಲಿ ಬೋಧ್ಯವಾಗಿರುತ್ತದೆ.

ಸ್ಕಂದಸ್ವಾಮಿಗಳು ಭಾಷ್ಯದಲ್ಲಿ ಹೇಳಿರುವ ಕ್ರಮ.—

**ತ್ರಿಃ ಸಪ್ತ ಯದ್ ಗುಹ್ಯಾನಿ ಸದಾನಿ**—ಇಲ್ಲಿ ಒಂದು ಇತಿಹಾಸವನ್ನು ಹೇಳುವರು. ದೇವತೆಗಳು—ಇಪ್ಪತ್ತೊಂದು ಛಂದಸ್ಸುಗಳನ್ನೂ ಅಗ್ನಿಯಲ್ಲಿ ಗೂಢವಾಗಿ ಬಚ್ಚಿಟ್ಟಿದ್ದರು ಅಂಗಿರಾಋಷಿಗಳು ಅಗ್ನಿಯನ್ನು ಪೂಜಿಸಿ ಅವುಗಳನ್ನು ಅಗ್ನಿಯ ಅನುಗ್ರಹದಿಂದ ತಿಳಿದುಕೊಂಡರು ಈ ಇತಿಹಾಸವು ಇಲ್ಲಿ ಈ ಮಂತ್ರದಿಂದ ಸೂಚಿತವಾಗುತ್ತದೆ. ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತೀ ಎಂಬ ಏಳು ಛಂದಸ್ಸುಗಳು. ಇವುಗಳಲ್ಲಿ ನಾಲ್ಕು ಛಂದಸ್ಸುಗಳು ಶ್ರೇಷ್ಠವಾದವುಗಳು ಇವುಗಳು ಪ್ರತಿಯೊಂದು ಛಂದಸ್ಸೂ ಬ್ರಾಹ್ಮ, ದೇವ, ಆರ್ಷ, ಎಂಬ ಭೇದದಿಂದ ಮೂರು ವಿಧವಾಗಿರುವುವು. ಅಥವಾ ಪೂರ್ಣ, ನ್ಯೂನ, ಅಧಿಕ, ಎಂಬ ಭೇದಗಳಿಂದ ಇಪ್ಪತ್ತೊಂದು ವಿಧಗಳಾಗುವುವು. ಪೂರ್ಣವೆಂದರೆ, ಆಯಾಯ ಛಂದಸ್ಸಿನ ಮರ್ಯಾದೆಗೆ ಅನುಸಾರವಾಗಿರುವ ಅಕ್ಷರಗಳಿಂದ ತುಂಬಿರುವುವು ಕಡಿಮೆಯಾದ ಅಕ್ಷರಗಳಿಂದ ಇರುವವು ನ್ಯೂನವೆನಿಸಿರುವವು. ಛಂದಸ್ಸಿನ ಮರ್ಯಾದೆಗಿಂತ ಮೀರಿ ಹೆಚ್ಚಾಗಿರುವ ಅಕ್ಷರಗಳನ್ನು ಹೊಂದಿರುವುವು ಅಧಿಕವೆನಿಸಿರುವುವು ಗಾಯತ್ರೀ ಛಂದಸ್ಸು ಇದೇ ಮೊದಲಾದವುಗಳು ಒಂದು ಅಕ್ಷರ ಅಥವಾ ಎರಡು ಅಕ್ಷರಗಳಿಂದ ಕಡಿಮೆಯಾಗಿರುವುದು ಒಂದು ಅಕ್ಷರವು ಕಡಿಮೆಯಾದಾಗ **ನಿಚೃತ್ ಗಾಯತ್ರೀ** ಎಂದು ಹೆಸರನ್ನು ಹೊಂದುವುದು. ಎರಡು ಅಕ್ಷರಗಳು ಕಡಿಮೆಯಾದಾಗ **ವಿರಾಡ್ ಗಾಯತ್ರೀ** ಎನಿಸಿರುವುದು. ಇದರಂತೆಯೇ ಒಂದು ಅಕ್ಷರವು ಅಧಿಕವಾದಾಗ **ಭೂರಿಕ್ ಗಾಯತ್ರೀ** ಎನಿಸಿರುವುದು. ಎರಡು ಅಕ್ಷರವು ಅಧಿಕವಾದಾಗ **ಸ್ವರಾಡ್ ಗಾಯತ್ರೀ** ಎನಿಸಿರುವುದು. ಗಾಯತ್ರೀ ಛಂದಸ್ಸಿಗೆ ಅಕ್ಷರಗಳ ನ್ಯೂನಾಧಿಕಭಾವವು ಉಂಟಾದಾಗ ನಿಚೃತ್, ವಿರಾಟ್, ಭೂರಿಕ್, ಸ್ವರಾಟ್ ಎಂಬ ನಾಮಾಂತರಗಳು ಬಂದರೂ ತನ್ನ ಪ್ರಸಿದ್ಧವಾದ ಗಾಯತ್ರವೆಂಬ ಹೆಸರು ಮಾತ್ರ ಹೋಗುವುದಿಲ್ಲ.—

**ನ ವಾ ಏಕೇನಾಕ್ಷರೇಣ ಛಂದಾಂಸಿ ವಿಯಂತಿ ನ ದ್ವಾಭ್ಯಾಂ**

(ಐ. ಬ್ರಾ. ೧-೧)

ಎಂದು ಶ್ರುತಿಯಲ್ಲಿಯೂ ಹೀಗೆ ಹೇಳಿರುವುದು. ಗಾಯತ್ರೀ ಛಂದಸ್ಸಿಗಿಂತಲೂ ಬೇರೆಯಾಗಿರುವ ಛಂದಸ್ಸುಗಳು ಕೆಲವು ಹೆಚ್ಚಾಗಿ ಇರುವುವು. ಇನ್ನೂ ಕೆಲವು ಛಂದಸ್ಸುಗಳು ಗಾಯತ್ರೀ ಛಂದಸ್ಸಿನ ವಿಚಾರಗಳಾಗಿ ಇರುವುವು ಆದ್ದರಿಂದ ಅವುಗಳನ್ನು ಬೇರೆ ಬೇರೆಯಾಗಿ ಎಣಿಕೆಮಾಡಿರುವುದಿಲ್ಲ. ಇದರಿಂದ ಛಂದಸ್ಸುಗಳು ಇಪ್ಪತ್ತೊಂಬು ಆಗಿರುತ್ತವೆ ಗಾಯತ್ರಿಯೇ ಮೊದಲಾದ ಏಳು ಛಂದಸ್ಸುಗಳಲ್ಲಿರುವ ಅಕ್ಷರಗಳಲ್ಲಿರುವ ಅಕ್ಷರಗಳ ನ್ಯೂನಾಧಿಕಭಾವದಿಂದ ಛಂದಸ್ಸುಗಳು ಇಪ್ಪತ್ತೊಂದು ಆಗಲು ಕಾರಣವಾಗಿರುವುದು ಇದನ್ನು ಈ ಮಂತ್ರದಲ್ಲಿ **ತ್ರಿಃ ಸಪ್ತ ಪದಾನಿ** ಎಂದು ಹೇಳಿರುವುದು. **ಯಜ್ಞಿಯಾಸಃ**--ಯಜ್ಞಮಾಡಲು ಅರ್ಹರಾದ ಅಂಗಿರಾಋಷಿಗಳು ತಮ್ಮ ಜ್ಞಾನದ ಬಲದಿಂದ ಅಗ್ನಿಯಲ್ಲಿ ದೇವತೆಗಳು ಗೂಢವಾಗಿ ಇರಿಸಿದ್ದ ಈ ಛಂದಸ್ಸಿನ ಗುಣಗಳ ಮೂಲಕವಾಗಿ ಅಗ್ನಿಯ ಗುಣಗಳನ್ನು ತಿಳಿದುಕೊಂಡರು. ಅಗ್ನಿಯ ಪ್ರಭಾವವನ್ನು ಚೆನ್ನಾಗಿ ತಿಳಿದನಂತರ ಅವರು ದೇವತೆಯಾಗಿರುವ ಅಗ್ನಿಯನ್ನು ರಕ್ಷಿಸಿದರು ಅಂದರೆ ಆಯಾಯ ಛಂದಸ್ಸಿನ ಮಂತ್ರಗಳಿಂದ ಅಗ್ನಿಯನ್ನು ಸ್ತೋತ್ರಮಾಡದಿದ್ದರೆ ಅಗ್ನಿಯ ಗುಣಗಳು ಮರೆತುಹೋಗುವುದರಿಂದ ಅವುಗಳು ನಾಶವಾಗುವುವು ಆದ್ದರಿಂದ ಅಗ್ನಿಯ ಗುಣಗಳು ಪ್ರಖ್ಯಾತಿಯಾಗುವಂತೆ ಅಂಗಿರಾ ಋಷಿಗಳು ಮಾಡಿರುವ ಕಾರ್ಯಗಳು ಅಗ್ನಿಯ ರಕ್ಷಣವೆಂದು ಉಪಚರಿತವಾಗಿರುತ್ತವೆ ಎಲೈ ಅಗ್ನಿಯೇ ನೀನು ನಮ್ಮ ಪಶುಗಳನ್ನೂ ಸ್ಥಿರಚರಾತ್ಮಕವಾಗಿರುವ ನಮ್ಮ ಧನವೆಲ್ಲವನ್ನೂ ಕೂಡ ನಮ್ಮಲ್ಲಿ ಸಮನಾದ ಪ್ರೀತಿಯಿಂದ ರಕ್ಷಿಸು ಎಂದು ಪ್ರಾರ್ಥನೆಯು ಈ ಮಂತ್ರದ ಅರ್ಥವೆಂದು ಹೇಳಿರುವರು

॥ ವ್ಯಾಕರಣಪ್ರಕ್ರಿಯಾ ॥

**ಪದಾ**—ನಪುಂಸಕ ಬಹುವಚನದಲ್ಲಿ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ

**ಯತ್**--ಯಚ್ಛಬ್ದಕ್ಕೆ ಜಸ್ ಪರವಾದಾಗ **ಸುಪಾಂ ಸುಲುಕ್**—ಸೂತ್ರದಿಂದ ಜಸ್ಸಿಗೆ ಲುಕ್

**ಗುಹ್ಯಾನಿ**—ಗುಹಾಯಾಂ ಭವಾನಿ ಗುಹ್ಯಾನಿ **ಭವೇ ಛಂದಸಿ** (ಪಾ. ಸೂ. ೪-೪-೧೧೦) ಎಂಬುದರಿಂದ ಯತ್ ಪ್ರತ್ಯಯ. **ಯಸ್ಯೇತಿ ಚ** ಸೂತ್ರದಿಂದ ಗುಹಾ ಶಬ್ದದ ಆಕಾರಕ್ಕೆ ಲೋಪ ಬಹುವಚನರೂಪ **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಸ್ವರಿತವು ಬಾಧಿತವಾಗಿ ಆದ್ಯುದಾತ್ತಸ್ವರ ಬರುತ್ತದೆ

**ತ್ವೇ**—ಯುಷ್ಮಚ್ಛಬ್ದ ಸಪ್ತಮೀ ಏಕವಚನ ಪರವಾದಾಗ **ತ್ವಮಾವೇಕವಚನೇ** (ಪಾ. ಸೂ. ೭-೨-೯೭) ಎಂಬುದರಿಂದ ಮಪರ್ಯಂತಕ್ಕೆ ತ್ವಾದೇಶ. **ಸುಪಾಂ ಸುಲುಕ್**—ಎಂಬುದರಿಂದ ವಿಭಕ್ತಿಗೆ ಶೇ ಆದೇಶ **ಶೇಷೇ ಲೋಪಃ** (ಪಾ. ಸೂ. ೭-೨-೯೦) ಸೂತ್ರದಿಂದ ಅದಿಗೆ ಲೋಪ **ಅತೋ ಗುಣೇ** ಸೂತ್ರದಿಂದ ಪರರೂಪ.

**ಅವಿದನ್**—ವಿದ್ಲೃ ಲಾಭೇ ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಅಂತಾದೇಶ **ಇತಶ್ಚ** ಸೂತ್ರದಿಂದ ಇಕಾರಲೋಪ ಧಾತುವು ಲೃದಿತ್ತಾದುದರಿಂದ **ಪುಷಾದಿದ್ಯುತಾದಿ**—(ಪಾ. ಸೂ. ೩-೧-೫೫) ಎಂಬುದರಿಂದ ಲುಙಿನಲ್ಲಿ ಪ್ರಾಪ್ತವಾದ ಚ್ಲಿಗೆ ಅಙಾದೇಶ ಇದು ಙಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ ಧಾತುವಿನ

ಘೂಪಧೆಗೆ ಗುಣ ಬರುವುದಿಲ್ಲ ಅಂಗಕ್ಕೆ ಅಡಾಗಮ. ಸಂಯೋಗಾಂತಲೋಪದಿಂದ ತಕಾರ ಲೋಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯಜ್ಞಿಯಾಸಃ**—ಯಜ್ಞಾಯ ಅರ್ಹಾಣಿ ಯಜ್ಞಿಯಾನಿ. ಅರ್ಹಾರ್ಥದಲ್ಲಿ ಯಜ್ಞಶಬ್ದದ ಮೇಲೆ **ಯಜ್ಞರ್ತ್ವಿಗ್ಭ್ಯಾಂ ಘಖಞೌ** (ಪಾ. ಸೂ. ೫-೧-೭೧) ಎಂಬುದರಿಂದ ಘ ಪ್ರತ್ಯಯ. **ಆಯನೇಯೀ**— ಎಂಬುದರಿಂದ ಅದಕ್ಕೆ ಇಯಾದೇಶ. **ಯಸ್ಯೇತಿ ಚ** ಸೂತ್ರದಿಂದ ಇಕಾರಲೋಪ. ಯಜ್ಞಿಯ ಶಬ್ದಕ್ಕೆ ಶಸ್ ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಜಸ್ಸಿಗೆ ಅಸುಕಾಗಮ

**ತೇಭಿಃ**—ತಚ್ಛಬ್ದಕ್ಕೆ ತೃತೀಯಾ ಬಹುವಚನ ಭಿಸ್ ಪರವಾದಾಗ **ತ್ಯದಾದೀನಾಮಃ** ಸೂತ್ರದಿಂದ ಅತ್ವ. **ಬಹುಲಂ ಛಂದಸಿ** (ಪಾ ಸೂ ೭-೧-೧೦) ಎಂಬುದರಿಂದ ಭಿಸಿಗೆ ಐಸಾದೇಶ ಬರುವುದಿಲ್ಲ. **ಬಹುವಚನೇ ಝಲ್ಯೇತ್** ಸೂತ್ರದಿಂದ ಏತ್ವ ಸಕಾರಕ್ಕೆ ರುತ್ವ ವಿಸರ್ಗ.

**ರಕ್ಷಂತೇ**—ರಕ್ಷ ಪಾಲನೇ ಧಾತು ಲಟ್ ಪ್ರಥಮಪುರುಷ ಬಹುವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪಶೂನ್, ಸ್ಥಾತೄನ್**—ಈ ಎರಡು ಶಬ್ದಗಳಿಗೂ ಮುಂದೆ ಚಕಾರ ಪರದಲ್ಲಿರುವುದರಿಂದ **ನಶ್ಛವ್ಯಪ್ರಶಾನ್** (ಪಾ. ಸೂ. ೮-೩-೭) ಎಂಬುದರಿಂದ ರುತ್ವವು ಪ್ರಾಪ್ತವಾದರೂ **ಉಭಯಥರ್ಕ್ಷು** (ಪಾ. ಸೂ. ೮-೩-೮) ಎಂಬುದರಿಂದ ಎರಡು ರೀತಿಯಾಗಿಯೂ ಆಗುವುದು ಎಂದರೆ ವಿಕಲ್ಪವಾದುದರಿಂದ ಇಲ್ಲಿ ನಕಾರಕ್ಕೆ ರುತ್ವ ಬರುವುದಿಲ್ಲ.

**ಚರಥಂ**—ಚರ ಗತಿ ಭಕ್ಷಣಯೋಃ ಧಾತು ಇದಕ್ಕೆ ಔಣಾದಿಕವಾದ ಅಥ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಮಧ್ಯೋದಾತ್ತವಾದ ಶಬ್ದವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಪಾಹಿ**—ಪಾ ರಕ್ಷಣೇ. ಧಾತು. ಅದಾದಿ. ಲೋಣ್ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಸೇರ್ಹ್ಯಪಿಚ್ಚ** (ಪಾ. ಸೂ. ೩-೪-೮೭) ಎಂಬುದರಿಂದ ಅದಕ್ಕೆ ಹಿ ಆದೇಶ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೬ ॥



॥ ಸಂಹಿತಾಪಾಠಃ ॥

ವಿದ್ವಾ ಅಗ್ನೇ ವಯುನಾನಿ ಕ್ಷಿತೀನಾಂ ವ್ಯಾನುಷಕ್ಛುರುಧೋ ಜೀವಸೇ ಧಾಃ ।

ಅಂತರ್ವಿದ್ವಾ಼ ಅಧ್ವನೋ ದೇವಯಾನಾನತಂದ್ರೋ ದೂತೋ
ಅಭವೋ ಹವಿರ್ವಾಟ್ ॥ ೭ ॥

॥ ಪದಪಾಠಃ ॥

ವಿದ್ವಾನ್ । ಅಗ್ನೇ । ವಯುನಾನಿ । ಕ್ಷಿತೀನಾಂ । ವಿ । ಆನುಷಕ್ । ಶುರುಧಃ ।
ಜೀವಸೇ । ಧಾಃ ।
ಅಂತಃಽವಿದ್ವಾನ್ । ಅಧ್ವನಃ । ದೇವಽಯಾನಾನ್ । ಅತಂದ್ರಃ । ದೂತಃ ।
ಅಭವಃ । ಹವಿಃಽವಾಟ್ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ವಯುನಾನಿ । ಜ್ಞಾನನಾಮೈತತ್ ಇಹ ತು ಜ್ಞಾತವ್ಯೇ ವರ್ತತೇ । ಸರ್ವಾಣಿ ಜ್ಞಾತವ್ಯಾನಿ ವಿದ್ವಾನ್ ಜಾನಂಸ್ತ್ವಂ ಕ್ಷಿತೀನಾಂ ಯಜಮಾನಲಕ್ಷಣಾನಾಂ ಪ್ರಜಾನಾಂ ಜೀವಸೇ ಜೀವಿತುಂ ಶುರುಧಃ ಕ್ಷುದ್ರೂಪಸ್ಯ ಶೋಕಸ್ಯ ರೋಧಯಿತ್ರೀರಿಷೋಽನ್ನಾನ್ಯಾನುಷಕ್ ಅನುಷಕ್ತಂ ಸಂತತಂ ಯಥಾ ಭವತಿ ತಥಾ ವಿ ಧಾಃ । ವಿಧೇಹಿ । ಕುರ್ವಿತ್ಯರ್ಥಃ । ಏವಂ ಯಜಮಾನಾನನ್ನಸಮ್ಪದ್ವಾನ್ಕೃತ್ವಾನಂತರಂ ಹವಿರ್ವಾಟ್ ತೈರ್ದೇವೇಭ್ಯಃ ಪ್ರತ್ತಂ ಹವಿರ್ವಹನ್ದೂತೋಽಭವಃ । ದೇವಾನಾಂ ದೂತೋ ಭವಸಿ । ಕೀದೃಶಸ್ತ್ವಂ । ಅಂತರ್ವಿದ್ವಾನ್ ದ್ಯಾವಾಪೃಥಿವ್ಯೋರ್ಮಧ್ಯೇ ಜಾನನ್ । ಕಿಂ ಜಾನನ್ । ಅಧ್ವನೋ ಮಾರ್ಗಾನ್ । ಕೀದೃಶಾನ್ । ದೇವಯಾನಾನ್ । ದೇವಾ ಯೈರ್ಮಾರ್ಗೈರ್ಯಾಂತಿ ಗಚ್ಛಂತಿ ತಾಞ್ಜಾನನ್ನಿತ್ಯರ್ಥಃ । ಅತಂದ್ರಃ ಪುನರ್ಹವಿರ್ವಹನೇಽಪ್ಯನಲಸಃ ॥ ವಯುನಾನಿ । ಅಜ ಗತಿಕ್ಷೇಪಣಯೋಃ । ಅಜಿಯಮಿಶೀಙ್ಭ್ಯಶ್ಚ । ಉ. ೩-೬೧ । ಇತಿ ಕರ್ಮಣ್ಯುನಪ್ರತ್ಯಯಃ । ಅಜೇರ್ವ್ಯಘಞಪೋಃ । ಪಾ ೨-೪-೫೬ । ಇತಿ ವೀಭಾವಃ । ಕ್ಷಿತೀನಾಂ । ಕ್ಷಿಯಂತಿ ನಿವಸಂತೀತಿ ಕ್ಷಿತಯೋ ಮನುಷ್ಯಾಃ । ಕ್ತಿಚ್ಕ್ತೌ ಚ ಸಂಜ್ಞಾಯಾಮಿತಿ ಕರ್ತರಿ ಕ್ತಿಚ್ । ಅಂತೋದಾತ್ತಾದ್ಧ್ರಸ್ವಾಂತಾತ್ಕ್ಷಿತಿಶಬ್ದಾದುತ್ತರಸ್ಯ ನಾಮೋ ನಾಮನ್ಯತರಸ್ಯಾಮಿತ್ಯುದಾತ್ತತ್ವಂ । ಶುರುಧಃ । ಶುಚಂ ರುಂಧಂತೀತಿ ಶುರುಧಃ । ಕ್ವಿಪ್ಚೇತಿ ಕ್ವಿಪ್ । ಪೂರ್ವಪದಸ್ಯಾಂತ್ಯಲೋಪಃ । ಪೃಷೋದರಾದಿತ್ವಾತ್ ॥

॥ ಪ್ರತಿಪದಾರ್ಥ ॥

**ಅಗ್ನೇ**– ಎಲೈ ಅಗ್ನಿಯೇ । **ವಯುನಾನಿ**—ಜ್ಞಾತವ್ಯಗಳಾದ ಎಲ್ಲವನ್ನೂ । **ವಿದ್ವಾನ್**— ತಿಳಿದ (ನೀನು) **ಕ್ಷಿತೀನಾಂ**—(ಯಜಮಾನರ) ಪ್ರಜೆಗಳ । **ಜೀವಸೇ**—ಜೀವಧಾರಣಮಾಡಲು । **ಶುರುಧಃ**—ಹಸಿವೆಯನ್ನು ಹೋಗಲಾಡಿಸುವ (ಅನ್ನಗಳನ್ನು) । **ಆನುಷಕ್**—ಸಂತತವಾಗಿ ಇರುವಂತೆ । **ವಿ ಧಾಃ**—ಮಾಡು । **ದೇವಯಾನಾನ್**—ದೇವತೆಗಳು ಸಂಚರಿಸುವ । **ಅಧ್ವನಃ**—ಮಾರ್ಗಗಳನ್ನು । **ಅಂತರ್ವಿದ್ವಾನ್**—ಭೂಮ್ಯಾಕಾಶಗಳ ಮಧ್ಯೆ ತಿಳಿದವನಾಗಿ । **ಅತಂದ್ರಃ**—(ಹವಿರ್ವಹನದಲ್ಲಿ) ಆಲಸಿಕೆಯಿಲ್ಲದವನಾಗಿ । **ಹವಿರ್ವಾಟ್**—(ಪ್ರಜೆಗಳಿಂದ ದತ್ತವಾದ) ಹವಿಸ್ಸನ್ನು ವಹಿಸುವ । **ದೂತಃ**—ದೂತನು । **ಅಭವಃ**—ಆಗುತ್ತೀ.

॥ ಭಾವಾರ್ಥ ॥

ಸರ್ವಜ್ಞನಾದ ಎಲೈ ಅಗ್ನಿಯೇ, ಯಾಗ ಮಾಡತಕ್ಕ ಪ್ರಜೆಗಳ ಹಸಿವು ನಿವಾರಣೆಯಾಗುವುದಕ್ಕೋಸ್ಕರ ಅನ್ನವನ್ನು ಸತತವಾಗಿ ಅನುಗ್ರಹಿಸು (ಅನಂತರ) ಭೂಮ್ಯಾಕಾಶಗಳ ಮಧ್ಯೆ ದೇವತೆಗಳು ಸಂಚರಿಸುವ ಮಾರ್ಗವನ್ನು (ಚೆನ್ನಾಗಿ) ತಿಳಿದಿರುವ, ದೇವತೆಗಳಿಗೆ ಹವಿಸ್ಸನ್ನು ವಹಿಸುದವುರಲ್ಲಿ ಸರ್ವದಾ ಜಾಗೃತನಾಗಿರುವ ನೀನು, (ಆ ಪ್ರಜೆಗಳಿಂದ ದತ್ತವಾದ) ಹವಿಸ್ಸನ್ನು ದೇವತೆಗಳಿಗೆ ಒಯ್ದುಕೊಡುವ ದೂತನಾಗು.

## English Translation

Agni, you are cognizant of all things to be known, ever provide for the subsistance of men, grief-alleviating (food); so shall you be the diligent bearer of oblations, and messenger of the Gods, knowing the paths between (earth and heaven), by which they travel.

॥ ವಿಶೇಷವಿಷಯಗಳು ॥

**ವಯುನಾನಿ—ವಯುನ ಶಬ್ದವು ಕೇತಃ, ಕೇತುಃ** ಎಂಬ ಹನ್ನೊಂದು ಪ್ರಜ್ಞಾನಾವ ಗಳಲ್ಲಿ (ನಿ ೩-೧೩) ಉಕ್ತವಾಗಿರುವುದರಿಂದ ಜ್ಞಾನವೆಂದು ಅರ್ಥವು ಇಲ್ಲಿ ಜ್ಞಾತವ್ಯ, ಅಥವಾ ಜ್ಞೇಯ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ **ತ್ವದ್ಭಕ್ತಿರೂಪಾಣಿ ಪ್ರಜ್ಞಾನಾನಿ** ಅಗ್ನಿಯ ವಿಷಯದಲ್ಲಿ ಉಂಟಾಗಿರುವ ಭಕ್ತಿರೂಪವಾದ ಜ್ಞಾನಗಳು ಎಂದು ಸ್ಕಂದಸ್ವಾಮಿವಿವರಣೆಯು

**ಕ್ಷಿತೀನಾಂ—ಕ್ಷಿತಿ**ಶಬ್ದವು ಇಪ್ಪತ್ತೊಂದು ಪೃಥಿವೀನಾಮಗಳಲ್ಲಿ (ನಿ. ೨-೫) ಉಕ್ತವಾಗಿರುತ್ತದೆ. ಮತ್ತು–**ಮನುಷ್ಯಃ, ನರಃ,** ಎಂಬ ಇಪ್ಪತ್ತೈದು ನಾಮಗಳಲ್ಲಿ (ನಿ. ೩-೮) ಉಕ್ತವಾಗಿರುವುದರಿಂದ ಮನುಷ್ಯರು ಎಂದು ಅರ್ಥವು.

**ಶುರುಧಃ—ಶುರುಧಃ ಆಪೋ ಭವಂತಿ** ಎಂದು ನಿರುಕ್ತದಲ್ಲಿಉಕ್ತವಾಗಿರುವುದು.—

**ಋತಸ್ಯ ಹಿ ಶುರುಧಃ ಸಂತಿ ಪೂರ್ವೀರೃತಸ್ಯ ಧೀತಿರ್ವೃಜಿನಾನಿ ಹಂತಿ ।**

(ಋ. ಸಂ. ೪–೨೩-೮ )

ಎಂದು ಋಕ್ಕನ್ನು ಉದಹರಸಿರುವುದರಿಂದ (ನಿ. ೬-೧೬) ಶುರುಧಃ ಎಂದರೆ ನೀರುಗಳು ಎಂದು ಅರ್ಥವು

**ದೇವಯಾನಾನ್—ದೇವಾಃ ಯೈಃ ಮಾರ್ಗೈಃ ಗಚ್ಛಂತಿ** ದೇವತೆಗಳು ಸಂಚರಿಸುವ ಮಾರ್ಗಗಳು-ಎಂದು ಅರ್ಥವು. ಎಲೈ ಅಗ್ನಿಯೇ, ನೀನು ಯಜ್ಞಮಾಡುವ ಯಜಮಾನರುಗಳಿಗೆ ಹಸಿವೆಯು ಆಗದಿರುವಂತೆ, ಅನ್ನವನ್ನು ಯಾವಾಗಲೂ ಕೊಡು ಅದರಿಂದ ಅವರು ದೇವತೆಗಳ ಉದ್ದೇಶದಿಂದ ಅರ್ಪಿಸುವ ಹವಿರ್ಭಾಗಗಳನ್ನು ದೇವತೆಗಳಿಗೆ ತಲುಪಿಸುವುದಕ್ಕಾಗಿ ದೇವತೆಗಳಿಗೆ ದೂತನಾಗಿರುವ ನೀನು ದೇವತೆಗಳು ಸಂಚರಿಸುವ ಮಾರ್ಗಗಳನ್ನು ತಿಳಿದುಕೊಂಡು ಇರುತ್ತೀಯೆ. ಆದ್ದರಿಂದ ಸೋಮಾರಿತನವಿಲ್ಲದಿರುವಂತೆ ಕೆಲಸಮಾಡು ಎಂದು ಯಜ್ಞಮಾಡುವ ಯಜಮಾನರುಗಳ ಪ್ರಾರ್ಥನೆಯು ಈ ಮಂತ್ರದಿಂದ ಉಕ್ತವಾಗಿರುತ್ತದೆ

॥ ವ್ಯಾಕರಣಪ್ರಕ್ರಿಯಾ ॥

**ವಿದ್ವಾನ್ ಅಗ್ನೇ—ದೀರ್ಘಾದಟಿ ಸಮಾನಪಾದೇ** (ಪಾ ಸೂ ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಆತೋಽಟಿ ನಿತ್ಯಂ** (ಪಾ ಸೂ. ೮-೩-೩) ಸೂತ್ರದಿಂದ ಆಕಾರಕ್ಕೆ ನಿತ್ಯಾನುನಾಸಿಕತ್ವ

**ವಯುನಾನಿ**—ಅಜ ಗತಿಕ್ಷೇಪಣಯೋಃ ಧಾತು ಇದಕ್ಕೆ **ಅಜಿ ಯಮಿ ಶೀಙ್‌ಭ್ಯಶ್ಚ** (ಉ ಸೂ. ೩-೩೪೧) ಎಂಬುದರಿಂದ ಕರ್ಮಣಿಯಲ್ಲಿ ಉನನ್ ಪ್ರತ್ಯಯ ಇದಕ್ಕೆ **ಆರ್ಧಧಾತುಕಂ ಶೇಷಃ** ಎಂಬುದರಿಂದ ಆರ್ಧಧಾತುಕ ಸಂಜ್ಞೆ ಬರುವುದರಿಂದ ಇದು ಪರವಾದಾಗ **ಅಜೇರ್ವ್ಯಘಞಪೋಃ** (ಪಾ. ಸೂ. ೨-೪-೫೬) ಘಞ್, ಅಪ್ ಈ ಎರಡು ಪ್ರತ್ಯಯಗಳನ್ನು ಬಿಟ್ಟು ಆರ್ಧಧಾತುಕ ಪರವಾದಾಗ ಧಾತುವಿಗೆ ವೀಭಾವ ಎಂಬುದರಿಂದ ಇಲ್ಲಿ ವೀಭಾವ ಬರುತ್ತದೆ ಪ್ರತ್ಯಯ ನಿಮಿತ್ತವಾಗಿ ಅದಕ್ಕೆ ಗುಣ. ಅಯಾದೇಶ. ವಯುನ ಎಂದು ರೂಪವಾಗುತ್ತದೆ ದ್ವಿತೀಯಾ ಬಹುವಚನರೂಪ ಪ್ರತ್ಯಯ ಸ್ವರದಿಂದ ಉಕಾರ ಉದಾತ್ತವಾಗುತ್ತದ

**ಕ್ಷಿತೀನಾಂ—** ಕ್ಷಿಯಂತಿ ನಿವಸಂತಿ ಇತಿ ಕ್ಷಿತಯೋ ಮನುಷ್ಯಾಃ ಕ್ಷಿ ನಿವಾಸಗತ್ಯೋಃ ಧಾತು **ಕ್ತಿಚ್ ಕ್ತೌ ಚ ಸಂಜ್ಞಾಯಾಂ** (ಪಾ ಸೂ ೩-೩-೧೭೪) ಎಂಬುದರಿಂದ ಇಲ್ಲಿ ಸಂಜ್ಞಾ ತೋರುವುದರಿಂದ ಕರ್ತರಿಯಲ್ಲಿ ಕ್ತಿಚ್ ಪ್ರತ್ಯಯ. ಇದು ಕಿತ್ತಾದುದರಿಂದ ಧಾತುವಿಗೆ ಇದನ್ನು ನಿಮಿತ್ತೀಕರಿಸಿ ಗುಣ ಬರುವುದಿಲ್ಲ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಇದಕ್ಕೆ ಷಷ್ಠೀ ಬಹುವಚನದಲ್ಲಿ ಆಮ್ ಪ್ರತ್ಯಯ ಬಂದಾಗ **ಹ್ರಸ್ವನದ್ಯಾಪೋ ನುಟ್** ಎಂಬುದರಿಂದ ನುಡಾಗಮ **ನಾಮಿ ಸೂತ್ರ**ದಿಂದ ಅಜಂತಾಂಗಕ್ಕೆ ದೀರ್ಘ. ಅಂತೋದಾತ್ತವಾದ ಹ್ರಸ್ವದ ಪರದಲ್ಲಿ ನಾಮ್ ಬಂದುದರಿಂದ **ನಾಮನ್ಯತರಸ್ಯಾಂ** (ಪಾ. ಸೂ ೬-೧-೧೭೭) ಎಂಬುದರಿಂದ ನಾಮಿಗೆ ಉದ್ಯದಾತ್ತ ಸ್ವರ ಬರುತ್ತದೆ

**ಶುರುಧಃ—**ಶುಚಂ ರುಂಧಂತಿ ಇತಿ ಶುರುಧಃ ರುಧಿರ್ ಆವರಣೇ ಧಾತು ಇದಕ್ಕೆ **ಕ್ವಿಪ್ ಚ** (ಪಾ ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ ಪೃಷೋದರಾದಿಯಲ್ಲಿ ಸೇರಿರುವುದರಿಂದ **ಪೃಷೋದರಾದೀನಿ ಯಥೋಪದಿಷ್ಟಂ** ಎಂಬುದರಿಂದ ಪೂರ್ವಪದದ (ಶುಚ್) ಅಂತ್ಯಕ್ಕೆ ಲೋಪ ಬರುತ್ತದೆ. ಶುರುಧ್ ಶಬ್ದವಾಗುತ್ತದೆ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ

**ಜೀವಸೇ**—ಜೀವ ಪ್ರಾಣಧಾರಣೇ ಧಾತು. ಇದಕ್ಕೆ ತುಮುನರ್ಥದಲ್ಲಿ **ತುಮರ್ಥೇ ಸೇಸೇನಸೇ**—(ಪಾ. ಸೂ. ೩-೪-೯) ಎಂಬುದರಿಂದ ಅಸೇ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ. **ಕೃನ್ಮೇ ಜಂತಃ** ಎಂಬ ಸೂತ್ರದಿಂದ ಏಜಂತವಾದ ಕೃದಂತವಾದುದರಿಂದ ಅವ್ಯಯಸಂಜ್ಞಾ ಬರುತ್ತದೆ

**ಧಾಃ**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಡರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲುಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಸೂತ್ರದಿಂದ ಇಕಾರಲೋಪ. ಚ್ಲಿಗೆ ಪ್ರಾಪ್ತವಾದ ಸಿಚ್ಚಿಗೆ **ಗಾತಿಸ್ಥಾಘುಪಾಭೂಭ್ಯಃ**—(ಪಾ. ಸೂ ೨-೪-೭೭) ಎಂಬುದರಿಂದ ಲುಕ್ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಪ್ರತ್ಯಯ ಸಕಾರಕ್ಕೆ ರುತ್ವ. ವಿಸರ್ಗ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಅತಂದ್ರಃ**—ನ ತಂದ್ರಃ ಅತಂದ್ರಃ. ನಞ್ ತತ್ಪುರುಷ ಸಮಾಸದಲ್ಲಿ **ತತ್ಪುರುಷೇ ತುಲ್ಯಾರ್ಥ**—(ಪಾ. ಸೂ ೬-೨-೨) ಎಂಬುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಹವಿರ್ವಾಟ್**—ಹವಿಃ ವಹತಿ ಇತಿ ಹವಿರ್ವಾಟ್ **ವಹ ಪ್ರಾಪಣೇ** ಧಾತು. ಇದಕ್ಕೆ ಛಂದಸ್ಸಿನಲ್ಲಿ **ವಹಶ್ಚ** (ಪಾ. ಸೂ. ೩-೨-೬೪) ಎಂಬುದರಿಂದ ಣ್ವಿ ಪ್ರತ್ಯಯ. ಣಿತ್ತಾದುದರಿಂದ **ಅತ ಉಪಧಾಯಾಃ** ಎಂಬುದರಿಂದ ಉಪಧಾವೃದ್ಧಿ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ‖ ೭ ‖



‖ ಸಂಹಿತಾಪಾಠಃ ‖

ಸ್ವಾಧ್ಯೋ ದಿವ ಆ ಸಪ್ತ ಯಹ್ವೀ ರಾಯೋ ದುರೋ ವ್ಯೃತಜ್ಞಾ
ಅಜಾನನ್ ।
ವಿದದ್ಗವ್ಯಂ ಸರಮಾ ದೃಳ್ಹಮೂರ್ವಂ ಯೇನಾ ನು ಕಂ
ಮಾನುಷೀ ಭೋಜತೇ ವಿಟ್ ‖ ೮ ‖

॥ ಪದಪಾಠಃ ॥

ಸುऽಆಧ್ಯಃ । ದಿವಃ । ಆ । ಸಪ್ತ । ಯಹ್ವೀಃ । ರಾಯಃ । ದುರಃ । ವಿ । ಋತಽಜ್ಞಾಃ । ಅಜಾನನ್ ।

ವಿದತ್ । ಗವ್ಯಂ । ಸರಮಾ । ದೃಳ್ಹಂ । ಊರ್ವಂ । ಯೇನ । ನು । ಕಂ । ಮಾನುಷೀ । ಭೋಜತೇ । ವಿಟ್ ॥ ೮ ॥

॥ ಸಾಯಣಭಾಷ್ಯಂ ॥

ಸ್ವಾಧ್ಯಃ ಶೋಭನಕರ್ಮಯುಕ್ತಾ ಯಹ್ವೀರ್ಯಹ್ವ್ಯೋ ಮಹತ್ಯಃ ಸಪ್ತ ಗಂಗಾದ್ಯಾಃ ಸಪ್ತ ನದ್ಯೋ ದಿವೋ ದ್ಯುಲೋಕಾದಾಗತ್ಯ ಭೂಮ್ಯಾಂ ಪ್ರವಹಂತೀತಿ ಶೇಷಃ । ಹೇ ಅಗ್ನೇ ಈದೃಗ್ವಿಧಾ ನದ್ಯಸ್ತ್ವಯಾ ಸ್ಥಾಪಿತಾಃ । ಅಗ್ನೌ ಹೋಮೇ ಸತಿ ಹಿ ತೇನ ತೃಪ್ತಃ ಸೂರ್ಯೋ ವೃಷ್ಟಿಂ ಕರೋತಿ । ತಸ್ಮಿನ್ನರ್ಥೇ ಸ್ಮೃತಿಃ ಪೂರ್ವಮುದಾಹೃತಾ । ಅತೋ ವೃಷ್ಟಿದ್ವಾರಾಗ್ನಿರೇವ ನದೀಃ ಕರೋತೀತ್ಯುಚ್ಯತೇ । ತಥಾ ಋತಜ್ಞಾ ಋತಂ ಯಜ್ಞಂ ಜಾನಂತೋಽಂಗಿರಸೋ ರಾಯೋ ವಲನಾಮ್ನಾಸುರೇಣಾಪಹೃತಸ್ಯ-ಗೋರೂಪಸ್ಯ ಧನಸ್ಯ ದುರೋ ದ್ವಾರಾಣಿ ಗಮನಮಾರ್ಗಾನಜಾನನ್ । ತ್ವಯಾ ಜ್ಞಾತವಂತಃ । ತ್ವತ್ಸಾಧ್ಯೇನ ಯಾಗೇನ ಪ್ರೀತ ಇಂದ್ರೋ ಗವಾಮನ್ವೇಷಣಾಯ ಸರಮಾಂ ನಾಮ ದೇವಶುನೀಂ ಪ್ರೇಷಿತವಾನ್ । ಸಾ ಚ ಸರಮಾ ಗವಾಂ ಸ್ಥಾನಮುವಗತ್ಯೇಂದ್ರಸ್ಯ ನ್ಯವೇದಯತ್ । ಇಂದ್ರಶ್ಚ ತಾನಂಗಿ-ರಸೋ ಗಾಃ ಪ್ರಾಪಯತ್ । ಅತ ಏತತ್ಸರ್ವಂ ತ್ವಮೇವ ಕೃತವಾನ್ । ಅಂಗಿರೋಭ್ಯಃ ಸಕಾಶಾದ್ಗವ್ಯಂ ಗವಿ ಭವಂ ದೃಳ್ಹಂ ಸ್ಥೂಲಂ । ಬಹುಲಮಿತ್ಯರ್ಥಃ । ಏವಂವಿಧಂ ಪಯೋಲಕ್ಷಣಮೂರ್ವಮನ್ನಂ ಸರಮಾ ದೇವಶುನೀ ವಿದತ್ । ಅಲಭತ । ಕಮಿತ್ಯೇತತ್ಪಾದಪೂರಣಂ । ಯೇನ ನು ಯೇನ ಹಿ ಗವ್ಯೇನ ಮಾನುಷೀ ವಿಟ್ ಮನೋಃ ಸಂಬಂಧಿನೀ ಪ್ರಜಾ ಭೋಜತೇ ಇದಾನೀಂ ಭುಂಕ್ತೇ । ತದ್ಗವ್ಯಮಪಿ ಪರಂಪರಯಾಗ್ನಿರೇವ ಕರೋತಿ ॥ ಸ್ವಾಧ್ಯಃ । ಸುಆಙ್ಪೂರ್ವಾದ್ಧೀಶಬ್ದಾಜ್ಜಸ್ಯೇರನೇಕಾಚ ಇತಿ ಯಣಾದೇಶಃ । ಯಹ್ವೀಃ । ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ । ಗವ್ಯಂ । ಸರ್ವತ್ರ ಗೋರ-ಜಾದಿಪ್ರತ್ಯಯಪ್ರಸಂಗೇ ಯದ್ವಕ್ತವ್ಯಮಿತಿ ಭಾವಾರ್ಥೇ ಯತ್ । ಊರ್ವಂ । ಉರ್ವೀ ಹಿಂಸಾರ್ಥಃ । ಊರ್ವತಿ ಕ್ಷುಧಂ ಹಿನಸ್ತೀತ್ಯೂರ್ವಮನ್ನಂ । ಪಚಾದ್ಯಚ್ । ಭೋಜತೇ । ಭುಜ ಪಾಲನಾಭ್ಯವ-ಹಾರಯೋಃ । ಶ್ನಮಿ ಪ್ರಾಪ್ತೇ ವ್ಯತ್ಯಯೇನ ಶಪ್ ॥

॥ ಪ್ರತಿಪದಾರ್ಥ ॥

**(ಅಗ್ನೇ**—ಎಲೈ ಅಗ್ನಿಯೇ) । **ಸ್ವಾಧ್ಯಃ**—ಮಂಗಳಕರವಾದ ಕರ್ಮಯುಕ್ತರಾದ । **ಯಹ್ವೀಃ**—ದೊಡ್ಡದಾದ । **ಸಪ್ತ**—ಏಳು (ಗಂಗಾನದಿಗಳು) । **ದಿವಃ**—ಸ್ವರ್ಗಲೋಕದಿಂದ (ಬಂದು ಭೂಮಿಯಲ್ಲಿ ಪ್ರವಹಿಸುತ್ತವೆ) । **ಋತಜ್ಞಾ**—ಯಜ್ಞಗಳನ್ನು (ಮಾಡುವ ವಿಧಾನವನ್ನು) ತಿಳಿದ (ಅಂಗಿರಸರು) । **ರಾಯಃ**—(ವಲನಿಂದಪಹೃತವಾದ ಗೋರೂಪವಾದ) ಧನದ । **ದುರಃ**—ದ್ವಾರಗಳನ್ನು (ಗಮನ ಮಾರ್ಗಗಳನ್ನು) । **ಅಜಾನನ್**—ತಿಳಿದರು । **ಯೇನ ನು**—ಯಾವ (ಗೋಸಂಬಂಧವಾದ ಕ್ಷೀರದಿಂದ) । **ಮಾನುಷೀ ವಿಟ್**—ಮನುಸಂಬಂಧಿಯಾದ ಪ್ರಜೆಯು । **ಭೋಜತೇ**—(ಈಗಲೂ) ಭುಜಿಸುತ್ತಾರೋ । **ತಂ**—ಅಂತಹ । **ಗವ್ಯಂ**—ಗೋವಿನಲ್ಲಿರುವ । **ದೃಳ್ಹಂ**—ಸ್ಥೂಲವಾದ (ಹೆಚ್ಚಾದ) । **ಊರ್ವಂ**—(ಪಯೋರೂಪವಾದ) ಅನ್ನವನ್ನು । **ಸರಮಾ**—ದೇವಶುನಿಯು । **ವಿದತ್**—ಹೊಂದಿತು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನಿಂದಲೇ, ಗಂಗಾದಿ ಸಪ್ತಮಹಾನದಿಗಳು ಸ್ವರ್ಗದಿಂದ ಬಂದು ಭೂಲೋಕದಲ್ಲಿ ಹರಿಯುತ್ತಿವೆ. ನಿನ್ನಿಂದಲೇ, ಯಾಗಾದಿಗಳನ್ನು ತಿಳಿದ ಅಂಗಿರಸರು (ವಲನಿಂದಪಹೃತವಾದ) ಗೋವುಗಳ ಮಾರ್ಗವನ್ನು ತಿಳಿದರು ನಿನ್ನಿಂದಲೇ ದೇವಶುನಿಯಾದ ಸರಮೆಯು ಗೋಕ್ಷೀರವನ್ನು ಪಡೆದಳು. ಮತ್ತು ನಿನ್ನಿಂದಲೇ ಈಗಲೂ ಪ್ರಜೆಗಳು ಗೋಕ್ಷೀರವನ್ನು ಪಡೆದು ಪುಷ್ಟರಾಗುತ್ತಾರೆ

English Translation.

The seven pure rivers that flow from heaven (are directed, Agni, by you ; the priests), skilled in sacrifices, knew the doors of the (cave where) the treasure, (their cattle), were concealed ; for you Sarama discovered the abundant milk of the cows with which man, the progeny of Manu still is nourished.

॥ ವಿಶೇಷವಿಷಯಗಳು ॥

**ಯಹ್ವೀಃ**— **ಅವನಯಃ, ಯಹ್ವ್ಯಃ**-ಎಂಬ ಮೂವತ್ತೇಳು ನದೀನಾಮಗಳಲ್ಲಿ ಈ ಶಬ್ದವೂ (ನಿ ೨-೨೪) ಉಕ್ತವಾಗಿರುವುದರಿಂದ ನದಿಗಳೆಂದು ಅರ್ಥವು. **ಮಹತ್, ಬ್ರಧ್ನಃ**-ಎಂಬ ಇಪ್ಪತ್ತೈದು ಮಹನ್ನಾಮಗಳಲ್ಲಿ (ನಿ. ೩-೧೩) ಉಕ್ತವಾಗಿರುವುದರಿಂದ ಮಹತ್ತಾದವುಗಳೆಂದೂ ಅರ್ಥವು ಈ ಋಕ್ಕಿನಲ್ಲಿ ಸಾಯಣರು ಎರಡು ವಾಕಗಳನ್ನು ಮಾಡಿ ಅವುಗಳಿಗೆ ಪರಸ್ಪರಸಂಬಂಧವಿಲ್ಲದಿರುವಂತೆ ಅರ್ಥವನ್ನು ಮಾಡಿದರು ಒಟ್ಟಿನಲ್ಲಿ ಅಗ್ನಿಯ ಪ್ರಭಾವವು ಅತಿಶಯವಾಗಿರುವುದನ್ನು ಪ್ರಕಟಗೊಳಿಸಿರುವರು. ಈ ಋಕ್ಕಿನ ಮೊದಲನೆಯ ಅರ್ಧದಿಂದ ಅಗ್ನಿಯು ಸ್ವರ್ಗಲೋಕದಲ್ಲಿಯೂ ಪ್ರವಹಿಸುವ ಗಂಗೆಯೇ ಮೊದಲಾದ ಏಳು ದೊಡ್ಡ ನದಿಗಳು ಭೂಮಿಯಲ್ಲಿಯೂ ಹರಿಯುತ್ತವೆ ಯಜ್ಞ

ಮಾಡುವವರು ಅಗ್ನಿಯಲ್ಲಿ ಅರ್ಪಿಸುತ್ತಿರುವ ಆಹುತಿಗಳು ಸೂರ್ಯನಿಗೆ ತಲಪುವುವು. ಆದಿತ್ಯನಿಂದ ವೃಷ್ಟಿಯೂ ಅದರಿಂದ ಅನ್ನವೂ, ಅದರಿಂದ ಪ್ರಜೆಗಳೂ ಉತ್ಪನ್ನವಾಗುತ್ತಿರುವುವು ಈ ವಿಷಯವನ್ನು—

**ಅಗ್ನೌ ಪ್ರಾಸ್ತಾಹುತಿಸ್ಸಮ್ಯಗಾದಿತ್ಯಮುಪತಿಷ್ಠತೇ ।**
**ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥**

ಎಂಬ ಸ್ಮೃತಿವಚನವು ವಿಶದಪಡಿಸುವುದು. ಈ ಪ್ರಕಾರವಾಗಿ ಲೋಕದ ಅಭಿವೃದ್ಧಿ, ವೃಷ್ಟಿ, ನದಿಗಳ ಪ್ರವಾಹಗಳು ಇವುಗಳೆಲ್ಲಕ್ಕೂ ಅಗ್ನಿಯೇ ಮುಖ್ಯವಾದ ಕಾರಣನಾಗಿರುವನು

**ಋತಜ್ಞಾಃ**—**ರಾಯಃ**-**ದುರಃ**-**ಅಜಾನನ್**—**ಋತಜ್ಞ** ಶಬ್ದವು—

**ಉದೀರತಾಮವರ ಉತ್ಪರಾಸ ಉನ್ಮಧ್ಯಮಾಃ ಪಿತರಃ ಸೋಮ್ಯಾಸಃ ।**
**ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋಽವಂತು ಪಿತರೋ ಹವೇಷು ॥**

(ಋ ಸಂ ೧೦-೧೫-೧)

ಎಂಬ ಋಕ್ಕಿನಲ್ಲಿ ಉಕ್ತವಾಗಿರುವುದರಿಂದ ಪಿತೃವಾಚಕವಾಗಿರುತ್ತದೆ (ನಿ ೧೧-೧೯) **ಋತ** ಶಬ್ದವು ನೂರೊಂದು ಉದಕನಾಮಗಳಲ್ಲಿಯೂ ಪಠಿತವಾಗಿರುವುದು (ನಿ ೨-೨೪)

**ನ ಯಾತವ ಇಂದ್ರ ಜೂಜುವುರ್ನೋ ನ ವಂದನಾ ಶವಿಷ್ಠ ವೇದ್ಯಾಭಿಃ ।**
**ಸ ಶರ್ಧದರ್ಯೋ ವಿಷುಣಸ್ಯ ಜಂತೋರ್ಮಾ ಶಿಶ್ನದೇವಾಃ ಅಪಿ ಗುರ್ಋತಂ ನಃ ॥**

(ಋ ಸಂ. ೫-೩-೩-೫)

ಎಂಬ ಋಕ್ಕಿನಲ್ಲಿ ಉದಹರಿಸಿರುವ **ಋತ** ಶಬ್ದಕ್ಕೆ (ನಿ ೪-೧೯) **ಸತ್ಯಂ ವಾ ಯಜ್ಞಂ ವಾ** ಎಂದು ಅರ್ಥವನ್ನು ಹೇಳಿರುವುದು **ಋತಜ್ಞ** ಶಬ್ದದಿಂದ ಸತ್ಯವನ್ನು ತಿಳಿದವರು, ಅಥವಾ ಯಜ್ಞವನ್ನು ಬಲ್ಲವರು ಎಂದು ಅರ್ಥವು.

**ರಾಯಃ**— ಎಂಬ ಶಬ್ದವು **ಧನಸ್ಯ**-ದ್ರವ್ಯದ ಎಂಬ ಅರ್ಥವನ್ನು ಬೋಧಿಸುವುದು-

**ಪರಿಷದ್ಯಂ ಹ್ಯರಣಸ್ಯ ರೇಕ್ಣೋ ನಿತ್ಯಸ್ಯ ರಾಯಃ ಪತಯಃ ಸ್ಯಾಮ ।**

(ಋ. ಸಂ ೫-೨-೬-೨)

ಎಂಬ ಋಕ್ಕಿನಲ್ಲಿ **ರೈ** ಶಬ್ದವು ಧನವಾಚಕವಾಗಿರುವುದು ಎಂದು (ನಿ ೩-೩) ಉದಾಹರಿಸುವರು. ಮತ್ತು—

**ಈಷಿರೇಣ ತೇ ಮನಸಾ ಸುತಸ್ಯ ಭಕ್ಷೀಮಹಿ ಪಿತ್ರ್ಯಸ್ಯೇವ ರಾಯಃ ।**
**ಸೋಮ ರಾಜನ್ ಪ್ರ ಣ ಆಯೂಂಷಿ ತಾರೀರಹಾನೀವ ಸೂರ್ಯೋ ವಾಸರಾಣಿ ॥**

(ಋ ಸಂ ೬-೪-೧೨-೨)

ಎಂಬ ಋಕ್ಕಿನಲ್ಲಿಯೂ ರಾಯಃ ಎಂಬ ಶಬ್ದವು ಧನವಾಚಕವಾಗಿರುವುದು ಎಂದು (ನಿ. ೪-೭) ಉದಹರಿಸಿರುವರು. ಸತ್ಯವನ್ನೂ ಯಜ್ಞವನ್ನೂ ತಿಳಿದು ಇರುವ ಅಂಗಿರಾ ಋಷಿಗಳ ಗೋರೂಪವಾದ ಧನವನ್ನು ವಲನೆಂಬ ಅಸುರನು

**ಅಪಹರಿಸಿದಾಗ ಆ ಅಸುರನಿಂದ ಅವುಗಳನ್ನು (ತಿರಗಿ) ಪುನಃ ಹೊಂದುವುದಕ್ಕಾಗಿ ಅವರು ಅಗ್ನಿಯ ಅನುಗ್ರಹದಿಂದ ಉಪಾಯಗಳನ್ನು ಮಾಡಿದರು. ಇಂದ್ರನನ್ನು ಉದ್ದೇಶಮಾಡಿಕೊಂಡು ಯಾಗಗಳನ್ನು ಆಚರಿಸಿದರು. ಆಗ ಇಂದ್ರನು ವಲಾಸುರನು ಇರುವ ವಾಸಸ್ಥಾನವನ್ನು ತಿಳಿಯುವುದಕ್ಕಾಗಿ ಸರಮಾ ಎಂದು ಹೆಸರುಳ್ಳ ದೇವತೆಗಳ ನಾಯಿಯನ್ನು ಕಳುಹಿಸಿದನು ಸರಮೆಯು ಅಂಗಿರಾಋಷಿಗಳ ಗೋವುಗಳು ಇರುವ ಪ್ರದೇಶವನ್ನು ಕಂಡ ಹಿಡಿದು ತಿಳಿಸಿತು. ಇಂದ್ರನು ವಲಾಸುರನನ್ನು ನಿಗ್ರಹಮಾಡಿ ಅಂಗಿರಾಋಷಿಗಳ ಧನವೆಲ್ಲವನ್ನೂ ಅವರಿಗೆ ಒಪ್ಪಿಸಿದನು. ಇದರಿಂದ ಸಂತುಷ್ಟರಾದ ಆ ಋಷಿಗಳು ಸರಮೆಗೆ ಹಾಲು ಮೊಸರು ಮೊದಲಾದವುಗಳನ್ನು ಹೆಚ್ಚಾಗಿ ಕೊಟ್ಟು ತೃಪ್ತಿಪಡಿಸಿದರು.**

**ದೃಳ್ಹಂ—ದೃಢ** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು. ಈ ಪ್ರಕಾರವಾದ ಪ್ರಯೋಗವು ವೇದದಲ್ಲಿ ಮಾತ್ರ ಕಂಡುಬರುತ್ತದೆ.

**ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸುಪತೇ ವಸೂನಾಂ ।**

(ಋ. ಸಂ ೩-೩೦-೧೯)

ಎಂಬ ಋಕ್ಕಿನ ವಾಕ್ಯದಲ್ಲಿ **ಊರ್ವ** ಶಬ್ದವು (ನಿ ೬-೭) ಅಗ್ನಿವಾಚಕವಾಗಿರುವುದು ಸಾಯಣರು ಈ ಶಬ್ದಕ್ಕೆ **ಪಯೋಲಕ್ಷಣಂ ಅನ್ನಂ** ಗೋವಿನಿಂದ ಉತ್ಪನ್ನವಾದ ಹಾಲು ಮೊದಲಾದ ತಿನ್ನುವ ಪದಾರ್ಥಗಳೆಂದು ಅರ್ಥವನ್ನು ವಿವರಿಸಿರುವರು. **ಊರ್ವತಿ ಕ್ಷುಧಂ ಹಿನಸ್ತಿ ಇತಿ ಊರ್ವಂ ಅನ್ನಂ**—ಹಸಿವೆಯನ್ನು ನಾಶಮಾಡುವ ಪದಾರ್ಥವು ಎಂದು ಊರ್ವಶಬ್ದಾರ್ಥ ವಿವರಣೆಯನ್ನು ಮಾಡಿರುವರು. ಸ್ಕಂದಸ್ವಾಮಿಗಳು—

**ಯೆಂತಾರೋ ಯೇ ಮಘವಾನೋ ಜನಾನಾಮೂರ್ವಾನ್ದಯಂತ ಗೋನಾಂ ।**

(ಋ ಸಂ ೭-೧೬-೭)

**ತೆ ಏತಮೂರ್ವಂ ವಿ ಭಜಂತ ಗೋನಾಮಥೈತದ್ವಚಃ ಪಣಯೋ ವಮನ್ನಿತ್ ।**

(ಋ ಸಂ ೧೦-೧೦೮-೮)

ಈ ಋಕ್ಕುಗಳಲ್ಲಿ ಊರ್ವಶಬ್ದವು ಸಮೂಹ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದರಿಂದ **ಗವ್ಯಂ** ಎಂಬ ಪದದೊಡನೆ ಅನ್ವಯವನ್ನು ಹೇಳಿ **ಗವ್ಯಂ ಊರ್ವಂ** ಗೋ ಸಮೂಹವು ಎಂದು ಅರ್ಥವನ್ನು ಹೇಳಿರುವರು. ಮತ್ತು ಈ ಋಕ್ಕಿನಲ್ಲಿ ಎರಡು ವಾಕ್ಯವಿರುವುದು ಎಂದು ಅಂಗೀಕರಿಸಿರುವರು ಅಂಗಿರಾಋಷಿಗಳ ಮತ್ತು ದೇವಗೋವುಗಳ ಪರವಾಗಿ ವ್ಯಾಖ್ಯಾನಮಾಡಿರುವರು **ಸ್ವಾಧ್ಯಃ**—ಮಂಗಳಕರವಾದ ಮನಸ್ಸುಳ್ಳ ಅಂಗಿರಾಋಷಿಗಳು **ದಿವಃ ಆ ಸಪ್ತ ಯಹ್ವೀಃ** ಸ್ವರ್ಗವೇ ಮೊದಲಾದ ಏಳು ಲೋಕಗಳನ್ನೂ, ಧನವು ಲಭಿಸುವ ಉಪಾಯಗಳನ್ನೂ, ಯಜ್ಞಗಳನ್ನೂ ಅಗ್ನಿಯ ಅನುಗ್ರಹದಿಂದ ತಿಳಿದುಕೊಂಡರು. ಅವರು ಜೀವಂತರಾಗಿರುವಾಗ ಯಜ್ಞಗಳನ್ನು ಆಚರಿಸಿ ಧನವನ್ನು ಹೊಂದಿ, ಜ್ಞಾನವಂತರಾಗಿ ಸುಖವನ್ನೂ ಅನುಭವಿಸಿ ಮರಣದನಂತರ ಸ್ವರ್ಗವೇ ಮೊದಲಾದ ಏಳು ಲೋಕಗಳನ್ನೂ ಹೊಂದಿದರು. ಮನುಷ್ಯರು ಮನುಷ್ಯಲೋಕದಲ್ಲಿರುವ ಗೋವುಗಳಿಂದ ಉಂಟಾಗುವ ಸುಖವನ್ನು ಅನುಭವಿಸುವದೂ ದೇವಗೋವುಗಳ ಅನುಗ್ರಹದಿಂದಲಾಗಲಿ, ಅಥವಾ ದೇವಗೋವುಗಳು ಕಾಮಧೇನುಗಳಾಗಿ ಈ ಲೋಕದ ಗೋವುಗಳಿಗೆ ಕಾರಣವಾಗಿರುವುದರಿಂದಲಾಗಲಿ ಉಂಟಾಗಿರುತ್ತದೆ ಎಂದು ವ್ಯಾಖ್ಯಾನಮಾಡಿರುವರು

॥ ವ್ಯಾಕರಣಪ್ರಕ್ರಿಯಾ ॥

**ಸ್ವಾಧ್ಯಃ** –ಸು, ಆಙ್ ಉಪಸರ್ಗ. ಧ್ಯೈ ಚಿಂತಾಯಾಂ ಧಾತು. ಇದಕ್ಕೆ ಕ್ವಿಪ್ ಪರವಾದಾಗ **ಧ್ಯಾಯತೇಃ ಸಂಪ್ರಸಾರಣಂ ಚ** ಎಂಬುದರಿಂದ ಸಂಪ್ರಸಾರಣ, ಪೂರ್ವರೂಪ. ಸು ಆಙ್ ಪೂರ್ವಕ ಧೀ ಶಬ್ದಕ್ಕೆ ಜಸ್ ಪರವಾದಾಗ **ಏರನೇಕಾಚೋಽಸಂಯೋಗಪೂರ್ವಸ್ಯ** ಎಂಬುದರಿಂದ ಯಣಾದೇಶ. ಉದಾತ್ತ ಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತ ಸ್ವರಿತಯೋರ್ಯಣಃ ಸ್ವ—**ಎಂಬುದರಿಂದ ವಿಭಕ್ತಿಗೆ ಸ್ವರಿತಸ್ವರ ಬರುತ್ತದೆ

**ಯಹ್ವೀಃ**—ಯಹ್ವೀ ಶಬ್ದಕ್ಕೆ ಪ್ರಥಮಾ ಬಹುವಚನ ಜಸ್ ಪರವಾದಾಗ **ವಾ ಛಂದಸಿ** ಎಂಬುದರಿಂದ ಪೂರ್ವಸವರ್ಣದೀರ್ಘವು ಏಕಾದೇಶವಾಗಿ ಬರುತ್ತದೆ

**ರಾಯಃ**—ರೈ ಶಬ್ದ ಷಷ್ಠೀ ಏಕವಚನಾಂತರೂಪ **ಊಡಿದಂ ಪದಾದಿ**- (ಪಾ ಸೂ ೬ ೧–೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಋತಜ್ಞಾಃ**—ಋತಂ ಜಾನಂತಿ ಇತಿ ಋತಜ್ಞಾಃ ಜ್ಞಾ ಅವಬೋಧನೇ ಧಾತು. **ಕ್ವಿಪ್ ಚ** ಎಂಬುದರಿಂದ ಇದಕ್ಕೆ ಕ್ವಿಪ್ ಪ್ರತ್ಯಯ. ಪ್ರಥಮಾ ಬಹುವಚನಾಂತರೂಪ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ

**ಅಜಾನನ್**—ಜ್ಞಾ ಅವಬೋಧನೇ ಧಾತು ಲಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯಕ್ಕೆ ಅಂತಾದೇಶ. ಇಕಾರಲೋಪ **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. **ಜ್ಞಾಜನೋರ್ಜಾ** (ಪಾ ಸೂ ೭–೩–೭೯) ಎಂಬುದರಿಂದ ಧಾತುವಿಗೆ ಜಾದೇಶ. **ಶ್ನಾಭ್ಯಸ್ತಯೋರಾತಃ** ಎಂಬುದರಿಂದ ಆಕಾರಲೋಪ ಸಂಯೋಗಾಂತಲೋಪದಿಂದ ಅಂತ್ಯ ತಕಾರಕ್ಕೆ ಲೋಪ. ಅಂಗಕ್ಕೆ ಅಡಾಗಮ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ವಿದತ್—**ವಿದ್ಲೃ ಲಾಭೇ ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇಕಾರ ಲೋಪ. ಲೃದಿತ್ತಾದುದರಿಂದ **ಪುಷಾದಿದ್ಯುತಾದಿ**—(ಪಾ. ಸೂ. ೩–೧–೫೫) ಎಂಬುದರಿಂದ ಚ್ಲಿಗೆ ಅಙಾದೇಶ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಅಙ್ ಸ್ವರ ಉಳಿಯುತ್ತದೆ

**ಗವ್ಯಂ**—ಗವಿ ಭವಂ, ಗವ್ಯಂ. ಎಲ್ಲಾ ಕಡೆಯಲ್ಲಿಯೂ **ಗೋರಜಾದಿಪ್ರತ್ಯಯಪ್ರಸಂಗೇ ಯದ್ವಕ್ತವ್ಯಂ** ಎಂಬುದರಿಂದ ಭಾವಾರ್ಥದಲ್ಲಿ ಯತ್ ಪ್ರತ್ಯಯ. **ವಾಂತೋ ಯಿ ಪ್ರತ್ಯಯೇ** (ಪಾ. ಸೂ ೬–೧–೭೯) ಎಂಬುದರಿಂದ ಓಕಾರಕ್ಕೆ ಅವಾದೇಶ **ಯತೋನಾವಃ** (ಪಾ. ಸೂ. ೬–೧–೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಊರ್ವಂ**—ಉರ್ವೀ ಧಾತುವು ಹಿಂಸಾರ್ಥದಲ್ಲಿ ಪಠಿತವಾಗಿದೆ. ಊರ್ವತಿ ಕ್ಷುಧಂ ಹಿನಸ್ತಿ ಇತಿ ಊರ್ವ ಮನ್ನಂ. ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹ ಪಚಾದಿಭ್ಯೋ**—(ಪಾ. ಸೂ. ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ರೇಫಾಂತ ಉಪಧೆಗೆ ದೀರ್ಘ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ

**ಮಾನುಷೀ—ಮನೋರ್ಜಾತಾವಞ್ಯತೌಷುಕ್ ಚ** (ಪಾ. ಸೂ. ೪-೧-೧೬೧) ಎಂಬುದರಿಂದ ಮನು ಶಬ್ದಕ್ಕೆ ಅಞ್ ಪ್ರತ್ಯಯ - ತತ್ಸಂನಿಯೋಗದಿಂದ ಷುಕಾಗಮ. ಞಿತ್ ಪ್ರತ್ಯಯವಾದುದರಿಂದ **ತದ್ಧಿತೇಷ್ವಚಾ**- ಎಂಬುದರಿಂದ ಆದಿವೃದ್ಧಿ. ಸ್ತ್ರೀತ್ವ ವಿವಕ್ಷಾ ಮಾಡಿದಾಗ ಅಞಂತವಾದುದರಿಂದ **ಟಿಡ್ಢಾಣಞ್**-ಎಂಬುದರಿಂದ ಙೀಪ್ ಪ್ರತ್ಯಯ. **ಞ್ನಿತ್ಯಾದಿರ್ನಿತ್ಯಮ್**-ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.

**ಭೋಜತೇ**—ಭುಜ ಪಾಲನಾಭ್ಯವಹಾರಯೋಃ ಧಾತು. ಪ್ರಥಮಪುರುಷ ಏಕವಚನದಲ್ಲಿ **ಭುಜೋಽನವನೇ** (ಪಾ. ಸೂ. ೧-೩-೬೬) ಎಂಬುದರಿಂದ ಆತ್ಮನೇಪದ ತ ಪ್ರತ್ಯಯ. **ಟಿತಆತ್ಮನೇ**-ಸೂತ್ರದಿಂದ ಏತ್ವ ಪ್ರತ್ಯಯದಿಂದ ಶ್ನಮಿಗೆ ಶಪ್ ವಿಕರಣ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ· ಯೇನ ಎಂದು ಹಿಂದೆ ಸಂಬಂಧ ವಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ ॥ ೮ ॥



॥ ಸಂಹಿತಾಪಾಠಃ ॥

ಆ ಯೇ ವಿಶ್ವಾ ಸ್ವಪತ್ಯಾನಿ ತಸ್ಥುಃ ಕೃಣ್ವಾನಾಸೋ ಅಮೃತತ್ವಾ-
ಯ ಗಾತುಂ ।
ಮಹ್ನಾ ಮಹದ್ಭಿಃ ಪೃಥಿವೀ ವಿ ತಸ್ಥೇ ಮಾತಾ ಪುತ್ರೈರದಿತಿ-
ರ್ಧಾಯಸೇ ವೇಃ ॥ ೯ ॥

॥ ಪದಪಾಠಃ ॥

ಆ । ಯೇ । ವಿಶ್ವಾ । ಸುಽಅಪತ್ಯಾನಿ । ತಸ್ಥುಃ । ಕೃಣ್ವಾನಾಸಃ । ಅಮೃತಽ-
ತ್ವಾಯ । ಗಾತುಂ ।

ಮಹ್ನಾ । ಮಹತ್ಽಭಿಃ । ಪೃಥಿವೀ । ವಿ । ತಸ್ಥೇ । ಮಾತಾ । ಪುತ್ರೈಃ ।
ಅದಿತಿಃ । ಧಾಯಸೇ । ವೇರಿತಿ ವೇಃ ॥ ೯ ॥

॥ ಸಾಯಣಭಾಷ್ಯಂ ॥

ಯ ಆದಿತ್ಯಾ ಅಮೃತತ್ವಾಯಾಮರಣತ್ವಸಿದ್ಧಯೇ ಗಾತುಂ ಮಾರ್ಗಮುಪಾಯಂ ಕೃಣ್ವಾನಾಸಃ ಕುರ್ವಾಣಾಃ ಸಂತೋ ವಿಶ್ವಾ ವಿಶ್ವಾನಿ ಸರ್ವಾಣಿ ಸ್ವಪತ್ಯಾನಿ ಶೋಭನಾನ್ಯಪತನಹೇತುಭೂತಾನಿ ಚತುರ್ದಶರಾತ್ರಷಟ್‌ತ್ರಿಂಶದ್ರಾತ್ರಾದಿತ್ಯಾನಾಮಯನಾದೀನಿ ಕರ್ಮಾಣ್ಯಾ ತಸ್ಥುಃ ಆಸ್ಥಿತವಂತಃ । ಕೃತ-ವಂತ ಇತ್ಯರ್ಥಃ । ತಥಾ ಚ ತೈತ್ತಿರೀಯಕಂ । ಆದಿತ್ಯಾ ಅಕಾಮಯಂತ ಸುವರ್ಗಂ ಲೋಕಮಿಯಾ-ಮೇತೀತಿ । ತ ಏತಗ್ಂ ಷಟ್‌ತ್ರಿಂಶದ್ರಾತ್ರಮಪಶ್ಯನ್ ತಮಾಹರನ್ ತೇನಾಯಜಂತೇತಿ ಚ । ತೈ. ಸಂ. ೭-೪-೬-೧ । ಮಹದ್ಭಿರನುಷ್ಠಾನೇನ ಮಹಾನುಭಾವೈಸ್ತೈಃ ಪುತ್ರೈಃ ಸಹಿತಾ ಮಾತಾ ಜನಯಿತ್ರ್ಯದಿತಿರ-ದೀನಾ ಪೃಥಿವೀ ಧಾಯಸೇ ಸರ್ವಸ್ಯ ಜಗತೋ ಧಾರಣಾಯ ಮಹ್ನಾ ಸ್ವಕೀಯೇನ ಮಹತ್ತ್ವೇನ ವಿ ತಸ್ಥೇ । ವಿಶೇಷೇಣ ತಿಷ್ಠತಿ । ಹೇ ಅಗ್ನೇ ಯತಸ್ತ್ವಂ ವೇಃ ಆದಿತ್ಯೈರನುಷ್ಠಿತೇಷು ಯಾಗೇಷು ಚರುಪುರೋಡಾಶಾದೀನಿ ಹವೀಂಷ್ಯಭಕ್ಷಯಃ । ಅತ ಏತತ್ಸರ್ವಂ ಜಾತಮಿತ್ಯರ್ಥಃ ॥ ಕೃಣ್ವಾನಾಸಃ । ಕೃವಿ ಹಿಂಸಾಕರಣಯೋಶ್ಚ । ವ್ಯತ್ಯಯೇನಾತ್ಮನೇಪದಂ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ತತ್ಸಂನಿಯೋಗೇನಾಕಾರಾಂತಾದೇಶಶ್ಚ । ತಸ್ಯಾತೋ ಲೋಪೇ ಸತಿ ಸ್ಥಾನಿವದ್ಭಾವಾದ್ಗುಣಾಭಾವಃ । ಶಾನಚಶ್ಚಿತ್ತ್ವಾದಂತೋದಾತ್ತತ್ವಂ । ಆಜ್ಜಸೇರಸುಕ್ । ಮಹ್ನಾ । ಮಹಿಮ್ನೇತ್ಯಸ್ಯ ವರ್ಣಲೋಪ-ಶ್ಛಾಂದಸಃ । ಧಾಯಸೇ । ವಹಿಹಾಧಾಞ್ಭ್ಯಶ್ಛಂದಸೀತಿ ದಧಾತೇರ್ಭಾವೇಽಸುನ್ । ಣಿದಿತ್ಯನುವೃತ್ತೇ-ರಾತೋ ಯುಕ್ ಚಿಣ್ಕೃತೋರಿತಿ ಯುಕ್ । ವೇಃ । ವೀ ಗತಿಪ್ರಜನಕಾಂತ್ಯಶನಖಾದನೇಷು । ಲಙಿ ಸಿಪ್ಯದಾದಿತ್ವಾಚ್ಛಪೋ ಲುಕ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಧಾಯಸ ಇತ್ಯಸ್ಯ ವಾಕ್ಯಾಂತರಗತತ್ವಾದಸ್ಯ ನಿಘಾತಾಭಾವಃ ॥

॥ ಪ್ರತಿಪದಾರ್ಥ ॥

ಯೇ — ಯಾವ ಆದಿತ್ಯರು । **ಅಮೃತತ್ವಾಯ** ಅಮರಣತ್ವ ಸಾಧನೆಗಾಗಿ । **ಗಾತುಂ** ಮಾರ್ಗವನ್ನು (ಉಪಾಯವನ್ನು) । **ಕೃಣ್ವಾನಾಸಃ** — ಮಾಡುವವರಾಗಿ । **ವಿಶ್ವಾ** — ಎಲ್ಲಾ । **ಸ್ವಪತ್ಯಾನಿ** — ಮಂಗಳ

ಕರಗಳಾದ, ಬೀಳದೇ ಇರುವಂತೆ ಮಾಡುವ ಚತುರ್ದಶರಾತ್ರಾದಿ) ಕರ್ಮಗಳನ್ನು । **ಆ ತಸ್ಥುಃ**—ಮಾಡಿದರೋ। **ತೈಃ**—ಅಂತಹ । **ಮಹದ್ಭಿಃ**—(ಯಾಗಾನುಷ್ಠಾನದಿಂದ) ಮಹನೀಯರಾದ । **ಪುತ್ರೈಃ**—ಪುತ್ರರಿಂದ (ಯುಕ್ತಳಾದ) । **ಮಾತಾ**—ತಾಯಿಯಾದ । **ಅದಿತಿಃ**—ದೀನಳಲ್ಲದ । **ಪೃಥಿವೀ**—ಪೃಥ್ವಿಯು । **ಧಾಯಸೇ**—ಜಗದ್ಧಾರಣೆಗಾಗಿ । **ಮಹ್ನಾ**—ಶಕ್ತಿಯುವಾದ ಮಹತ್ತ್ವದಿಂದ । **ವಿ ತಸ್ಥೇ**—ವಿಶೇಷವಾಗಿ ನಿಂತಿದ್ದಾಳೆ । **ವೇಃ**—(ಆದಿತ್ಯರಿಂದ ದತ್ತವಾದ ಪುರೋಡಾಶಾದಿಗಳನ್ನು) ಭಕ್ಷಿಸಿದೆ (ಆದ್ದರಿಂದ ಎಲ್ಲವನ್ನೂ ತಿಳಿದಿದ್ದೆ).

॥ ಭಾವಾರ್ಥ ॥

ಆದಿತ್ಯರು, ಅಮರರಾಗಲು ಇಚ್ಛಿಸಿ, ತಾವು (ತಮ್ಮ ಸ್ಥಾನಗಳಿಂದ) ಬೀಳದೆ ಇರುವಂತೆ ಮಾಡುವ ಮಂಗಳಕರವಾದ ಯಾಗಗಳನ್ನು ಮಾಡಿ, ನಿನಗೆ ಪುರೋಡಾಶಾದಿಗಳನ್ನು ಅರ್ಪಿಸಿ, ಅದರಿಂದ ಮಹತ್ತ್ವವನ್ನು ಪಡೆದರು. ಇಂಥಾ ಮಹನೀಯರಾದ ಪುತ್ರರಿಂದ ಯುಕ್ತಳಾದ ದೀನಳಲ್ಲದ, ಪೃಥ್ವಿಯು ಜಗತ್ತನ್ನು ಧಾರಣ ಮಾಡುವುದಕ್ಕೋಸ್ಕರವೇ ನಿಂತಿದ್ದಾಳೆ

## English Translation.

you have been fed, (Agni, with oblations), ever since the Aditya's, devising a road to immortality, instituted all (the sacred rites) that secured them from falling, and mother earth, Aditi, strove with her magnitude to uphold (the world), along with her mighty sons

॥ ವಿಶೇಷವಿಷಯಗಳು ॥

**ಸ್ವಪತ್ಯಾನಿ**—ಉತ್ತಮವಾದ ಅಥವಾ ಮಂಗಳಕರವಾದ ದುರ್ಗತಿಯನ್ನು ಉಂಟುಮಾಡದಿರುವುದರಲ್ಲಿ ಕಾರಣವಾದ ಕರ್ಮಗಳು-ಅದಿತಿ ಪುತ್ರರಾದ ದೇವತೆಗಳು ತಮ್ಮ ದೇವತ್ವವು ಯಾವಾಗಲೂ ಸ್ಥಿರವಾಗಿ ಇರುವುದಕ್ಕಾಗಿ ಚತುರ್ದಶರಾತ್ರ, ಷಟ್ತ್ರಿಂಶದ್ರಾತ್ರ, ಆದಿತ್ಯಾಯನ, ಎಂಬ ಇವೇ ಮೊದಲಾದ (ಕರ್ಮಗಳನ್ನು) ಯಜ್ಞಗಳನ್ನು ಆಚರಿಸಿದರು—

> **ಆದಿತ್ಯಾ ಅಕಾಮಯನ್ತ ಸುವರ್ಗಂ ಲೋಕಮಿಯಾಮೇತಿ ತ ಏತಗ್ಂ ಷಟ್ತ್ರಿಂಶದ್ರಾತ್ರಮಪಶ್ಯನ್ ತಮಾಹರನ್ ತೇನಾಯಜಂತ ಇತಿ ॥**
>
> (ತೈ. ಸಂ. ೭-೪-೭)

ಈ ಮಂತ್ರವು ಈ ಅಭಿಪ್ರಾಯವನ್ನು ಬೋಧಿಸುವುದರಲ್ಲಿ ಪ್ರಮಾಣವಾಗಿರುವುದು.

**ಅದಿತಿಃ**—ಅದಿತಿ ಶಬ್ದವು ಇಪ್ಪತ್ತೊಂದು ಪೃಥಿವೀನಾಮಗಳಲ್ಲಿ (ನಿ ೨-೫) ಉಕ್ತವಾಗಿರುತ್ತದೆ ಐವತ್ತೇಳು ವಾಙ್ನಾಮಗಳಲ್ಲಿಯೂ (ನಿ. ೨-೧೫) ಉಕ್ತವಾಗಿರುತ್ತದೆ ಒಂಭತ್ತು ಗೋನಾಮಗಳಲ್ಲಿ (ನಿ ೩-೯) ಉಕ್ತವಾಗಿರುತ್ತದೆ. ಇಪ್ಪತ್ತುನಾಲ್ಕು ದ್ಯಾವಾಪೃಥಿವೀನಾಮಗಳ ಮಧ್ಯದಲ್ಲಿ (ನಿ ೩-೨೨) ಪಠಿತವಾಗಿ ಇರುತ್ತದೆ ಮತ್ತು **ಅದಿತಿ** ಶಬ್ದವು **ಅದೀನಾ ದೇವಮಾತಾ** (ನಿ ೪-೨೨) ಐತಿಹಾಸಿಕಪಕ್ಷದಲ್ಲಿ ದೇವತೆಗಳ ಜನನಿಯು ಎಂದು ಅರ್ಥವು.

**ಅದಿತಿರ್ದ್ಯೌರದಿತಿರಂತರಿಕ್ಷಮದಿತಿರ್ಮಾತಾ ಸ ಪಿತಾ ಸ ಪುತ್ರಃ ।**
**ವಿಶ್ವೇದೇವಾ ಅದಿತಿಃ ಪಂಚ ಜನಾಃ ಅದಿತಿರ್ಜಾತಮದಿತಿರ್ಜನಿತ್ವಂ ॥**

(ಋ ಸಂ ೧೦-೮೯-೧೦)

ಈ ಋಕ್ಕಿನಲ್ಲಿ ಅದಿತಿಯ ಮಹಿಮೆಯು ಹೇಳಲ್ಪಡುವುದು ಇದರಿಂದಲೇ ಅದೀನಾ ಎಂದು ಅದಿತಿ ಶಬ್ದಕ್ಕೆ ಅರ್ಥ ವನ್ನು ಹೇಳಿರುತ್ತಾರೆ ಅದಿತಿ ಶಬ್ದವು ನಿರುಕ್ತದಲ್ಲಿ (ನಿ. ೧೧-೨೩) **ಅಥಾತೋ ಮಧ್ಯಸ್ಥಾನಾಃ ಸ್ತ್ರಿಯಃ** ಮಧ್ಯಸ್ಥಾನದೇವತೆಗಳಲ್ಲಿ ಸ್ತ್ರೀಯರನ್ನು ಉದಹರಿಸುವೆವು ಎಂದು ಪ್ರಾರಂಭಮಾಡಿ **ಅದಿತಿಃ** ಎಂಬ ಪದವು ಉಕ್ತವಾಗಿರುವುದು ಮತ್ತು **ಅದೀನಾ ದೇವಮಾತಾ** ಎಂದು ವ್ಯಾಖ್ಯಾನಮಾಡಿರುವರು.

**ವೇಃ**—ವೀ ಎಂಬ ಧಾತುವು ಗಮನ, ಅಶನ, ಖಾದನ ಎಂಬ ಅರ್ಥಗಳಲ್ಲಿ ಪ್ರಸಿದ್ಧವಾಗಿರುವುದರಿಂದ ಹವಿಸ್ಸುಗಳನ್ನು ಭಕ್ಷಿಸಿರುತ್ತೀಯೆ ಎಂದು ಅರ್ಥವು. **ಅದಿತಿರ್ದ್ಯೌಃ** ಎಂಬ ಶ್ರುತಿಪ್ರತಿಪಾದ್ಯವಾದ ಮಹಿಮೆಯುಳ್ಳ ಅದಿತಿಯು ಬಹಳ ಮಹಿಮೆಯುಳ್ಳವರಾದ ಮಕ್ಕಳುಗಳೊಡನೆ ಜಗತ್ತೆಲ್ಲವನ್ನೂ ತನ್ನ ಮಹಿಮೆಯಿಂದ ಧರಿಸಲು ಶಕ್ತಳಾಗಿರುವುದು-ಆದಿತ್ಯರು ಅಗ್ನಿಯ (ಪ್ರಸಾದವನ್ನು) ಅನುಗ್ರಹವನ್ನು ಪಡೆಯುವುಕ್ಕಾಗಿ ಆಚರಿಸಿದ ಯಾಗಗಳಲ್ಲಿ ಅರ್ಪಿಸಿದ ಚರುಪುರೋಡಾಶಾದಿಗಳನ್ನು ಅಗ್ನಿಯು ಸ್ವೀಕರಿಸಿರುವುದರಿಂದ ಉಂಟಾಗಿರುತ್ತದೆ ಎಂದು ಅಗ್ನಿಯ ಪ್ರಭಾವವನ್ನು ವಿಶದಮಾಡಿ ಹೇಳಿರುವುದು

ಸ್ಕಂದಸ್ವಾಮಿಗಳು--ಅಂಗಿರಾ ಋಷಿಗಳು ತಮ್ಮ ಪ್ರಭಾವಶಾಲಿಗಳಾದ ಪುತ್ರರಿಂದ ಕೂಡಿದವರಾಗಿ ಅಗ್ನಿಯನ್ನು ಸ್ತುತಿಮಾಡಿ ಬಹಳ ಧನಗಳನ್ನೂ ಮಕ್ಕಳನ್ನೂ ಹೊಂದಿದರು ಈ ಅಂಗಿರಾ ಋಷಿಗಳ ಅನುಗ್ರಹ ದಿಂದ ಭೂಮಿಯು ಮನುಷ್ಯರಿಗೆ ಸಸ್ಯಗಳನ್ನು ಉತ್ಪತ್ತಿ ಮಾಡಿಕೊಡುವುದೇ ಮೊದಲಾದ ಬಹಳ ವಿಧವಾದ ಉಪ ಕಾರಗಳನ್ನು ಉಂಟುಮಾಡಿಕೊಡುವುದು ಅಂಗಿರಾ ಋಷಿಗಳು ಇಂದ್ರನ ಸ್ನೇಹಿತರಾಗಿರುವ ಕಾರಣ ಭೂಮಿಯಲ್ಲಿ ವೃಷ್ಟಿಯು ಆಗುವಂತೆ ಅನುಗ್ರಹಿಸುವರು ವೃಷ್ಟಿಯು ಆಗುವುದರಿಂದ ಧರ್ಮವೂ, ಧರ್ಮಾಚರಣೆಯಿಂದ ದೇವತೆ ಗಳು ಮನುಷ್ಯರಿಗೆ ಉಪಕಾರವಮಾಡುವುದೂ ಆಗಿರುತ್ತದೆ ಇವೆಲ್ಲವೂ ಅಗ್ನಿಯು ಅಂಗಿರಾ ಋಷಿಗಳು ಅರ್ಪಿಸುವ ಹವಿಸ್ಸನ್ನು ಸ್ವೀಕರಿಸಿ ತೃಪ್ತಿಯನ್ನು ಹೊಂದಿರುವುದರ ಫಲವಾಗಿರುತ್ತದೆ ಎಂದು ವ್ಯಾಖ್ಯಾನಮಾಡಿರುವರು

॥ ವ್ಯಾಕರಣಪ್ರಕ್ರಿಯಾ ॥

**ವಿಶ್ವಾ**—ವಿಶ್ವಾನಿ ಎಂದಿರುವಾಗ **ಶೇಶ್ಛಂದಸಿ ಬಹುಲಮ್** ಎಂಬುದರಿಂದ ಶಿಗೆ ಲೋಪ.

**ಸ್ವಪತ್ಯಾನಿ**--ಶೋಭನಾನಿ ಅಪತ್ಯಾನಿ. **ನಞ್‌ಸುಭ್ಯಾಮ್** (ಪಾ ಸೂ ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ

**ತಸ್ಥುಃ**—ಷ್ಠಾ ಗತಿನಿವೃತ್ತೌ ಧಾತು ಲಿಟ್ ಪ್ರಥಮಪುರುಷ ಬಹುವಚನರೂಪ ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಕೃಣ್ವಾನಾಸಃ**—ಕೃವಿ ಹಿಂಸಾಕರಣಯೋಶ್ಚ ಧಾತು. **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇ ಪದಿಯಾಗುತ್ತದೆ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. **ಧಿನ್ವಿಕೃಣ್ವ್ಯೋರಚ** (ಪಾ ಸೂ ೩-೧-೮೦) ಎಂಬುದರಿಂದ ಉವಿಕರಣ. ಅದರೊಡನೆ ಅಕಾರ ಅಂತಾದೇಶ. **ಇದಿತೋನುಮ್ ಧಾತೋಃ** ಎಂಬುದರಿಂದ ಧಾತುವಿಗೆ ನುಮಾ ಗಮ **ಅಂತೋಲೋಪಃ** (ಪಾ ಸೂ. ೬-೪-೪೮) ಎಂಬುದರಿಂದ ಉ ನಿಮಿತ್ತಕವಾಗಿ ಅಕಾರಲೋಪ. **ಅಚಃ ಪರಸ್ಮಿನ್ ಪೂರ್ವವಿಧೌ** ಎಂಬುದರಿಂದ ಸ್ಥಾನಿವದ್ಭಾವ ಬರುವುದರಿಂದ ಉ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಕೃಣು+ಆನ ಎಂದಿರುವಾಗ ಯಣಾದೇಶ ಶಾನಚ್ ಚಿತ್ತಾದುದುದರಿಂದ **ಚಿತಃ** ಸೂತ್ರದಿಂದ ಅಂತೋದಾತ್ತಸ್ವರ ಬರುತ್ತದೆ. ಬಹುವಚನ ಜಸ್ ಪರವಾದಾಗ **ಆಜ್ಜಸೇರಸುಕ್** (ಪಾ. ಸೂ ೭-೧-೫೦) ಎಂಬುದರಿಂದ ಜಸ್ಸಿಗೆ ಅಸುಗಾಗಮ ಪೂರ್ವಸವರ್ಣದೀರ್ಘ ಅಂತ್ಯಸಕಾರಕ್ಕೆ ರುತ್ವ ವಿಸರ್ಗ

**ಅಮೃತತ್ವಾಯ**—ಅಮೃತಸ್ಯ ಭಾವಃ ಅಮೃತತ್ವಮ್, ತಸ್ಮೈ, **ತಸ್ಯಭಾವಸ್ತ್ವತಲೌ** ಎಂಬುದರಿಂದ ಭಾವಾರ್ಥದಲ್ಲಿ ತ್ವ ಪ್ರತ್ಯಯ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ ಚತುರ್ಥೀ ಏಕವಚನರೂಪ

**ಮಹ್ನಾ**—ಮಹಿಮ್ನಾ ಎಂದು ರೂಪವಾಗುವಾಗ ಛಾಂದಸವಾಗಿ ವರ್ಣಲೋಪ ಬಂದು ಮಹ್ನಾ ಎಂದು ರೂಪವಾಗುತ್ತದೆ.

**ತಸ್ಥೇ**—ಷ್ಠಾ ಗತಿನಿವೃತ್ತೌ ಧಾತು. ಹಿಂದೆ ವಿ ಎಂಬ ಉಪಸರ್ಗ ಸಂಬಂಧವಿರುವುದರಿಂದ **ಸಮವಪ್ರವಿಭ್ಯಸ್ಥಃ** (ಪಾ. ಸೂ ೧-೩-೨೨) ಎಂಬುದರಿಂದ ಆತ್ಮನೇಪದಿಯಾಗುತ್ತದೆ ಲಿಟ್ ಪ್ರಥಮಪುರುಷ ಏಕವಚನ ರೂಪ. ಆತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಧಾಯಸೇ**—ಡುಧಾಞ್ ಧಾರಣಪೋಷಣಯೋ, ಧಾತು **ವಹಿ ಹಾ ಧಾಞ್ಭ್ಯಶ್ಛಂದಸಿ.** (ಉ ಸೂ ೪-೬೭೦) ಎಂಬುದರಿಂದ ಭಾವಾರ್ಥದಲ್ಲಿ ಅಸುನ್ ಪ್ರತ್ಯಯ. **ಣಿತ್** ಎಂದು ಹಿಂದಿನ ಸೂತ್ರದಿಂದ ಅನುವೃತ್ತ ವಾಗುವುದರಿಂದ ಅಸುನಿಗೆ ಣಿದ್ವದ್ಭಾವ ಬರುವುದರಿಂದ, ಧಾತುವು ಆಕಾರಾಂತವಾಗುವುದರಿಂದ **ಆತೋ ಯುಕ್ ಚಿಣ್ ಕೃತೋಃ** (ಪಾ ಸೂ. ೭-೩-೩೩) ಎಂಬುದರಿಂದ ಧಾತುವಿಗೆ ಯುಕಾಗಮ ಧಾಯಸ್ ಶಬ್ದವಾಗುತ್ತದೆ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ ಚತುರ್ಥೀ ಏಕವಚನ ದಲ್ಲಿ ಧಾಯಸೇ ಎಂದು ರೂಪವಾಗುತ್ತದೆ

**ವೇಃ**—ವೀ ಗತಿಪ್ರಜನಕಾಂತ್ಯಶನಖಾದನೇಷು ಧಾತು. ಅದಾದಿ ಲಟ್ ಮಧ್ಯಮಪುರುಷ ಏಕವಚನ ದಲ್ಲಿ ಸಿಪ್. **ಇತಶ್ಚ** ಸೂತ್ರದಿಂದ ಇಕಾರಲೋಪ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್ **ಬಹುಲಂ ಛಂದಸ್ಯಮಾಙ್ ಯೋಗೇऽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಸಿಪ್ ನಿಮಿತ್ತವಾಗಿ ಧಾತು ವಿಗೆ ಗುಣ. ಸಕಾರಕ್ಕೆ ರುತ್ವ ವಿಸರ್ಗ. ಇಲ್ಲಿ ಧಾಯಸೇ ಎಂಬ ಪೂರ್ವಪದವು ವಾಕ್ಯಾಂತರ ಸಂಬದ್ಧವಾದುದರಿಂದ ಪದದ ಪರದಲ್ಲಿ ಬಾರದಿರುವುದರಿಂದ ತಿಙಂತನಿಘಾತಸ್ವರ ಬರುವುದಿಲ್ಲ ಧಾತುಸ್ವರದಿಂದ ಉದಾತ್ತವಾಗುತ್ತದೆ ॥ ೯ ॥

॥ ಸಂಹಿತಾಪಾಠಃ ॥

ಅಧಿ ಶ್ರಿಯಂ ನಿ ದಧುಶ್ಚಾರುಮಸ್ಮಿನ್ದಿವೋ ಯದಕ್ಷೀ ಅಮೃತಾ ಅಕೃಣ್ವನ್ ।
ಅಧ ಕ್ಷರಂತಿ ಸಿಂಧವೋ ನ ಸೃಷ್ಟಾಃ ಪ್ರ ನೀಚೀರಗ್ನೇ ಅರುಷೀರಜಾನನ್ ॥ ೧೦ ॥

॥ ಪದಪಾಠಃ ॥

ಅಧಿ । ಶ್ರಿಯಂ । ನಿ । ದಧುಃ । ಚಾರುಂ । ಅಸ್ಮಿನ್ । ದಿವಃ । ಯತ್ । ಅಕ್ಷೀ ಇತಿ । ಅಮೃತಾಃ । ಅಕೃಣ್ವನ್ ।
ಅಧ । ಕ್ಷರಂತಿ । ಸಿಂಧವಃ । ನ । ಸೃಷ್ಟಾಃ । ಪ್ರ । ನೀಚೀಃ । ಅಗ್ನೇ । ಅರುಷೀಃ । ಅಜಾನನ್ ॥ ೧೦ ॥

॥ ಸಾಯಣಭಾಷ್ಯಂ ॥

ಅಸ್ಮಿನ್ನಗ್ನೌ ಚಾರುಂ ಶೋಭನಾಂ ಶ್ರಿಯಂ ಪರಿಸ್ತರಣಪರಿಷೇಚನಾದಿರೂಪಾಂ ಯಜ್ಞಸಂಪದಮಧಿ ನಿ ದಧುಃ । ಯಜಮಾನಾಃ ಸ್ಥಾಪಿತವಂತಃ । ನಿಧಾಯ ಚ ಯದ್ಯದಾಕ್ಷೀ ಯಜ್ಞಸ್ಯಾಜ್ಯಭಾಗಲಕ್ಷಣೇ ಚಕ್ಷುಷೀ ಅಕೃಣ್ವನ್ ಕುರ್ವಂತಿ । ಚಕ್ಷುಷೀ ವಾ ಏತೇ ಯಜ್ಞಸ್ಯ ಯದಾಜ್ಯಭಾಗೌ । ತೈ. ಸಂ. ೨-೬-೨-೧ । ಇತಿ ಶ್ರುತೇಃ । ತದಾನೀಂ ದಿವೋ ದ್ಯುಲೋಕಾದಮೃತಾ ಅಮರಣಧರ್ಮಾಣೋ ದೇವಾ ಯಾಗಸಮಯೋ ಜಾತ ಇತ್ಯವಗಮ್ಯಾಗಚ್ಛಂತೀತಿ ಶೇಷಃ । ಅಥಾಜ್ಯಭಾಗಾನಂತರಂ ಸೃಷ್ಟಾ ಅಗ್ನೇರುತ್ಪನ್ನಾಃ ಸಿಂಧವೋ ನ ಶೀಘ್ರಂ ಗಚ್ಛಂತ್ಯೋ ನದ್ಯ ಇವ ನೀಚೀರ್ನಿತರಾಂ ಸರ್ವಾಸು ದಿಕ್ಷು ಗಚ್ಛಂತೀರರುಷೀರಾರೋಚಮಾನಾಃ । ಯದ್ವಾ । ನಿರ್ಮಲರೂಪಾಃ । ಹೇ ಅಗ್ನೇ ಏವಂಭೂತಾಸ್ತ್ವದೀಯಾ ಜ್ವಾಲಾಃ ಕ್ಷರಂತಿ । ಸಂಚಲಂತಿ ।. ಸರ್ವಾಸು ದಿಕ್ಷೂದ್ಗಚ್ಛಂತೀತ್ಯರ್ಥಃ । ಆಗತಾ ದೇವಾಶ್ಚ ಪ್ರಾಜಾನನ್ । ಅಸ್ಮಾಕಂ ಹೋಮಾಯೇದೃಶ್ಯೋ ಜ್ವಾಲಾ ಉತ್ಪನ್ನಾ ಇತಿ ಹೃಷ್ಟಾಃ ಸಂತಃ ಪ್ರಕರ್ಷೇಣ ಜಾನಂತಿ ॥ ಅಕ್ಷೀ । ಪರತ್ವಾನ್ನುಮಂ ಬಾಧಿತ್ವಾ ಈ ಚ ದ್ವಿವಚನೇ । ಪಾ. ೭-೧-೭೭ । ಇತ್ಯಕ್ಷಿಶಬ್ದಸ್ಯೇ-

ಕಾರಾಂತಾದೇಶಃ । ಸ ಚೋದಾತ್ತಃ । ಈತ್ವೇ ಕೃತೇ ಸಕೃದ್ಗತಪರಿಭಾಷಯಾ । ಪರಿ. ४० । ಪುನರ್ನುಮ್ನ ಭವತಿ । ಸವರ್ಣದೀರ್ಘಃ । ನೀಚೀಃ । ನಿಪೂರ್ವಾದಂಚತೇರ್ಯುತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ । ಅಂಚತೇಶ್ಚೋಪಸಂಖ್ಯಾನಮಿತಿ ಙೀಪ್ । ಅಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ । ನ್ಯಧೀ ಚ । ಪಾ. ೬-೨-೫೩ । ಇತಿ ಗತೇಃ ಪ್ರಕೃತಿಸ್ವರತ್ವಂ । ಅರುಷೀಃ । ಅರುಷಮಿತಿ ರೂಪನಾಮ । ಋಹನಿಭ್ಯಾಮುಷಜಿತ್ಯರ್ತೇರುಷಚ್ । ಛಂದಸೀವನಿಪಾವಿತಿ ಮತ್ವರ್ಥೀಯ ಈಕಾರಃ ॥

॥ ಪ್ರತಿಪದಾರ್ಥ ॥

**ಅಸ್ಮಿನ್**— ಈ ಅಗ್ನಿಯಲ್ಲಿ । **ಚಾರುಂ**—ಶೋಭನಕರವಾದ । **ಶ್ರಿಯಂ**—(ಪರಿಸ್ತರಣಾದಿ) ಯಜ್ಞ ಸಂಪತ್ತನ್ನು । **ಅಧಿ ನಿ ದಧುಃ**—ಸ್ಥಾಪಿಸಿದರು । **ಯತ್** – ಯಾವಾಗ । **ಅಕ್ಷೀ**—(ಯಜ್ಞದ) ಎರಡು ಕಣ್ಣುಗಳಂತಿರುವ (ಆಜ್ಯಭಾಗಗಳನ್ನು) । **ಅಕೃಣ್ವನ್**—ಹೋಮ ಮಾಡುತ್ತಾರೆಯೋ (ಆಗ) । **ದಿವಃ**-ಸ್ವರ್ಗಲೋಕದಿಂದ । **ಅಮೃತಾಃ**—ಅಮರರಾದ (ದೇವತೆಗಳು ಯಾಗಸಮಯವೆಂದು ತಿಳಿಯುತ್ತಾರೆ) । **ಅಧ**—ಆಜ್ಯಭಾಗಾನಂತರದಲ್ಲಿ । **ಸೃಷ್ಟಾ**—ಅಗ್ನಿಯಿಂದ ಉತ್ಪನ್ನವಾದ । **ನೀಚೀಃ**—ನಾನಾ ದಿಕ್ಕುಗಳಲ್ಲಿ ಸಂಚರಿಸುವ । **ಅರುಷೀಃ**—ಶುಭ್ರವಾದ । **ಜ್ವಾಲಾಃ**—ಜ್ವಾಲೆಗಳು । **ಅಗ್ನೇ**—ಎಲೈ ಅಗ್ನಿಯೇ । **ಸಿಂಧವಃ ನ**—ನದಿಗಳಂತೆ । **ಕ್ಷರಂತಿ**—ಚಲಿಸುತ್ತವೆ । **ಪ್ರ ಅಜಾನನ್**--(ಬಂದ ದೇವತೆಗಳೂ ನಮ್ಮ ಹೋಮಕ್ಕೋಸ್ಕರ ಈ ಜ್ವಾಲೆಗಳು ಸ್ಪಷ್ಟವಾಗಿವೆಯೆಂದು) ಹೆಚ್ಚು ಸಂತೋಷದಿಂದ ತಿಳಿದರು

॥ ಭಾವಾರ್ಥ ॥

(ಯಜಮಾನರು) ಅಗ್ನಿಯಲ್ಲಿ ಪರಿಸ್ತರಣಾದ್ಯಲಂಕರಣಗಳನ್ನು ಮಾಡಿ, ಯಜ್ಞದ ಎರಡು ಕಣ್ಣುಗಳಂತಿರುವ ಆಜ್ಯಭಾಗಗಳನ್ನು ಹೋಮ ಮಾಡುತ್ತಾರೆ ಆಗ ದೇವತೆಗಳು ಹೋಮಕಾಲವೆಂದು ತಿಳಿದು ಬರುತ್ತಾರೆ ಅಗ್ನಿಯಿಂದ ಹೊರಟ ಜ್ವಾಲೆಗಳು, ನದಿಗಳಂತೆ ನಾನಾದಿಕ್ಕುಗಳಲ್ಲಿ, ಶುಭ್ರವರ್ಣವುಳ್ಳವುಗಳಾಗಿ ಹೊರಡುತ್ತವೆ ಅವುಗಳನ್ನು ನೋಡಿ ದೇವತೆಗಳು ಬಹಳ ಸಂತೋಷಪಡುತ್ತಾರೆ

## English Translation

(The offerers of oblations), have placed in this (Agni) the graceful honours (of the ceremony), and the two portions of clarified butter that are the two eyes (of the sacrifice), then the immortals come from heaven, and your bright flames, Agni, spread in all directions like rushing rivers, and the Gods perceive it (and rejoice)

॥ ವಿಶೇಷವಿಷಯಗಳು ॥

**ಯತ್-ಅಕ್ಷೀ-ಅಕೃಣ್ವನ್**—ಯಜ್ಞಮಾಡುವ ಯಜಮಾನರು ಯಜ್ಞವನ್ನು ಮಾಡುವ ಕಾಲದಲ್ಲಿ ಯಜ್ಞವೇದಿಯ ಸುತ್ತಲೂ, ಪರಿಸ್ತರಣ, ಪರಿಷೇಚನಗಳನ್ನು ಮಾಡಿದನಂತರ ಯಜ್ಞದ ಚಕ್ಷುಸ್ಸಿನರೂಪವಾಗಿರುವ

ಹವಿರ್ಭಾಗಗಳನ್ನು ಹೋಮಮಾಡಿದಾಗ ದೇವತೆಗಳು ಯಾಗವು ನಡೆಯುವುದೆಂದು ತಿಳಿದು ಸ್ವರ್ಗದಿಂದ ಬರುವ ರೆಂದು ಅರ್ಥವು.

**ಅಕ್ಷೀ— ಚಕ್ಷುಷೀ** ಯಜ್ಞದಲ್ಲಿ ಹೋಮಮಾಡುವಾಗ ಆಜ್ಯಭಾಗಗಳನ್ನು ಮೊದಲು ಹೋಮಮಾಡುವರು ಇದನ್ನು ಚಕ್ಷುಷೀ ಎಂಬ ಪದದಿಂದ ಕರೆಯುವುದು ಯಾಜ್ಞಿಕರ ರೂಢಿಯಾಗಿರುತ್ತದೆ **ಚಕ್ಷುಷೀ ವಾ ಏತೇ ಯಜ್ಞಸ್ಯ ಯದಾಜ್ಯಭಾಗೌ** (ತೈ.ಸಂ. ೨–೬–೨–೧) ಎಂಬ ಶ್ರುತಿಯು ಚಕ್ಷುಶ್ಶಬ್ದಾರ್ಥವನ್ನು ವಿಶದಮಾಡಿರುವುದು ಇದನ್ನೇ ಅಕ್ಷೀ ಶಬ್ದಕ್ಕೆ ಅರ್ಥವನ್ನಾಗಿ ಸಾಯಣರು ಇಲ್ಲಿ ವಿವರಿಸಿರುವರು ಈ ವಿಷಯದಲ್ಲಿ ತೈತ್ತಿರೀಯ ಶ್ರುತಿಯು-

> **ಚಕ್ಷುಷೀ ವಾ ಏತೇ ಯಜ್ಞಸ್ಯ ಯದಾಜ್ಯಭಾಗೌ ಯದಾಜ್ಯಭಾಗೌ ಯಜತಿ ಚಕ್ಷುಷೀ ಏವ ತದ್ಯಜ್ಞಸ್ಯ ಪ್ರತಿ ದಧಾತಿ ಪೂರ್ವಾರ್ಧೇ ಜುಹೋತಿ ತಸ್ಮಾತ್ಪೂರ್ವಾರ್ಧೇ ಚಕ್ಷುಷೀ ಪ್ರಬಾಹುಗ್ಜುಹೋತಿ ತಸ್ಮಾತ್ಪ್ರಬಾಹುಕ್ಚಕ್ಷುಷೀ ದೇವಲೋಕಂ ವಾ ಅಗ್ನಿನಾ ಯಜಮಾನೋಽನು ಪಶ್ಯತಿ ಪಿತೃಲೋಕಗ್‍ಂ ಸೋಮೇನೋತ್ತರಾರ್ಧೇಽಗ್ನಯೇ ಜುಹೋತಿ ದಕ್ಷಿಣಾರ್ಧೇ ಸೋಮಾಯೈವಮಿವ ಹೀಮೌ ಲೋಕಾವನಯೋರ್ಲೋಕಯೋರನುಖ್ಯಾತ್ಯೈ ರಾಜಾನೌ ವಾ ಏತೌ ದೇವತಾನಾಂ ಯದಗ್ನೀಷೋಮಾವಂತರಾ ದೇವತಾ ಇಜ್ಯೇತೇ ದೇವತಾನಾಂ ವಿಧೃತ್ಯೈ ತಸ್ಮಾದ್ರಾಜ್ಞಾ ಮನುಷ್ಯಾ ವಿಧೃತಾಃ ||**
>
> (ತೈ ಸಂ ೨-೬-೨)

ಎಂದು ವಿವರಿಸುವುದು ಆಜ್ಯಭಾಗವೆಂದರೆ ಯಜ್ಞದಲ್ಲಿ ಪ್ರಧಾನದೇವತೆಗಳನ್ನುದ್ದೇಶಿಸಿ ಮಾಡುವ ಹೋಮಗಳಿಗೆ ಮುಂಚಿತವಾಗಿ ಅಗ್ನಿಸಂಸ್ಕಾರಾದಿಗಳಾದ ಮೇಲೆ ಅಗ್ನಿಯನ್ನುದ್ದೇಶಿಸಿ ಒಂದು ಹೋಮವನ್ನೂ, ಸೋಮನನ್ನುದ್ದೇಶಿಸಿ ಒಂದು ಹೋಮವನ್ನೂ ಆಜ್ಯಾಹುತಿ (ಕರಗಿಸಿದ ತುಪ್ಪ) ಯಿಂದ ಮಾಡುವರು ಈ ಎರಡು ಆಹುತಿಗಳಿಗೆ ಆಜ್ಯಭಾಗ ವೆಂದು ಹೆಸರು. ಈ ಆಜ್ಯಭಾಗಗಳೇ ಯಜ್ಞಕ್ಕೆ ಎರಡು ಕಣ್ಣುಗಳೆಂದು ಹೇಳುವರು. ಯಜಮಾನನು ಪೂರ್ವಾಭಿಮುಖವಾಗಿ ಕುಳಿತು ತನ್ನ ಎದುರಿಗೆ ಇರುವ ಅಗ್ನಿಯಲ್ಲಿನ ಉತ್ತರಪಾರ್ಶ್ವದಲ್ಲಿ ಅಗ್ನಯೇ ಸ್ವಾಹಾ ಎಂದು ಅಗ್ನಿಯನ್ನುದ್ದೇಶಿಸಿ ಒಂದು ಹೋಮಮಾಡುವನು ಬಳಿಕ ಅಗ್ನಿಯ ದಕ್ಷಿಣಪಾರ್ಶ್ವದಲ್ಲಿ ಸೋಮಾಯ ಸ್ವಾಹಾ ಎಂದು ಸೋಮನನ್ನುದ್ದೇಶಿಸಿ ಮತ್ತೊಂದು ಹೋಮವನ್ನು ಮಾಡುವನು. ಈ ಎರಡು ಹೋಮ ಪ್ರದೇಶಗಳ ಮಧ್ಯಭಾಗದ ಅಗ್ನಿಯಲ್ಲಿ ಯಜ್ಞದಲ್ಲಿ ನಿರ್ದಿಷ್ಟರಾದ ಪ್ರಧಾನದೇವತೆಗಳನ್ನುದ್ದೇಶಿಸಿ ಆಯಾ ಮಂತ್ರಗಳಿಂದ ಹೋಮಮಾಡುವುದು ಶಾಸ್ತ್ರವಿಹಿತವು. ಅಗ್ನಿಯನ್ನುದ್ದೇಶಿಸಿ ಹೋಮಮಾಡುವುದರಿಂದ ಯಜಮಾನನಿಗೆ ದೇವಲೋಕಪ್ರಾಪ್ತಿಯೂ, ಸೋಮನನ್ನುದ್ದೇಶಿಸಿ ಹೋಮಮಾಡುವುದರಿಂದ ಪಿತೃಲೋಕಪ್ರಾಪ್ತಿಯೂ ಉಂಟಾಗುವುದೆಂದು ಹೇಳಿರುವುದು ಈ ಅಗ್ನೀಷೋಮದೇವತೆಗಳು ದೇವತೆಗಳಲ್ಲೆಲ್ಲಾ ಶ್ರೇಷ್ಠರೆಂದೂ, ದೇವತೆಗಳಿಗೆ ರಾಜರೆಂದೂ ಹೇಳಲ್ಪಡುವುದರಿಂದ ದೇವಪಿತೃಲೋಕಗಳ ಪ್ರಾಪ್ತಿಗಾಗಿ ಈ ದೇವತೆಗಳನ್ನು ಉದ್ದೇಶಿಸಿ ಹೋಮಮಾಡಬೇಕು. ಇವರಿಗೆ ಹೋಮಮಾಡಿದ ನಂತರ ಅಗ್ನಿಯ ಮಧ್ಯಪ್ರದೇಶದಲ್ಲಿ ಇತರ ದೇವತೆಗಳಿಗೆ ಹೋಮಮಾಡಬೇಕು ಎಂದಭಿಪ್ರಾಯವು.

**ಸಿಂಧವೋ ನ-ನದ್ಯ ಇವ**--ನದಿಗಳ ಹಾಗೆ ಎಂದು ಅರ್ಥ . **ಅವನಯಃ, ಯಹ್ವ್ಯಃ,** ಎಂಬ ಮೂರ ಶ್ರೀಳು ನದೀ ನಾಮಗಳಲ್ಲಿ **ಸಿಂಧವಃ** ಎಂಬ ಪದವು (ನಿ ೨-೨೪) ಉಕ್ತವಾಗಿರುತ್ತದೆ.

**ಅರುಷೀಃ—ಅರುಷೀ** ಶಬ್ದವು—**ವಿಭಾವರೀ, ಸೂನರೀ** ಎಂಬ ಇವೇ ಮೊದಲಾದ ಹದಿನಾರು **ಉಷೋ** ನಾಮಗಳಲ್ಲಿ (ನಿ. ೨-೧೯) ಪಠಿತವಾಗಿರುತ್ತದೆ. **ಆರೋಚಮಾನಾಃ, ನಿರ್ಮಲರೂಪಾಃ** ಬಹಳಮಟ್ಟಿಗೆ ಪ್ರಕಾಶಿಸುತ್ತಿರುವವುಗಳು. ಪರಿಶುದ್ಧವಾದವುಗಳು ಎಂದು ಅರ್ಥವನ್ನು ಹೇಳಿ ಅಗ್ನಿಯ ಜ್ವಾಲೆಗಳು ಆಜ್ಯಭಾಗವನ್ನು ಹೋಮ ಮಾಡಿದ ನಂತರ ಅಗ್ನಿಯಿಂದ ಉತ್ಪನ್ನವಾದ ಪರಿಶುದ್ಧವಾದ ಜ್ವಾಲೆಗಳು ವೇಗವಾಗಿ ಹರಿಯುವ ನದಿಗಳ ಹಾಗೆ ದಿಕ್ಕುಗಳೆಲ್ಲವನ್ನೂ ಪ್ರಕಾಶಗೊಳಿಸುವುವು ಯಜ್ಞಕ್ಕಾಗಿ ಬಂದ ದೇವತೆಗಳು ತಮ್ಮ ಸಂತೋಷಕ್ಕಾಗಿ ನಡೆಯುವ ಹೋಮಕ್ಕಾಗಿ ಅಗ್ನಿಯ ಈ ಜ್ವಾಲೆಗಳು ಉತ್ಪನ್ನವಾಗಿರುತ್ತವೆ ಎಂದು ಸಂತೋಷದಿಂದ ತಿಳಿಯುವರು

ಸ್ಕಂದಸ್ವಾಮಿಗಳು—**ಅಹೋರಾತ್ರ ವಿಭಾಗಾರ್ಥಂ ಯದ್ವೈವ ಸೂರ್ಯಾಚಂದ್ರಮಸೌ ದೇವೌ ಉದ ಪೀಪದನ್ ತದ್ವೈವ ತ್ವಾಮಗ್ನಿಂ ದೀಪ್ತಿಮನ್ತಂ ಅಕಾರ್ಷುಃ** ॥ ಅಕ್ಷೀ ಎಂಬ ಶಬ್ದವು ದ್ವಿವಚನದಲ್ಲಿ ಇರುತ್ತಾ ಎರಡು ಎಂಬ ಸಂಖ್ಯಾವಿಶಿಷ್ಟವಾದ ವಸ್ತುವನ್ನು ಬೋಧಿಸುವುದರಿಂದಲೂ, ಚಕ್ಷುರ್ವಾಚಕವಾಗಿರುವುದರಿಂದಲೂ ಪ್ರಕಾಶವನ್ನು ಉಂಟುಮಾಡುವ ಸೂರ್ಯನೂ ಮತ್ತು ಚಂದ್ರನೂ ಆಗಿರುವರು ದೇವತೆಗಳು ಲೋಕದಲ್ಲಿ ಅಹಸ್ಸು ಮತ್ತು ರಾತ್ರಿಗಳು ಇವುಗಳ ವಿಭಾಗವು ಬೇರೆಬೇರೆಯಾಗಿ ತೋರುವುದಕ್ಕಾಗಿ ಸೂರ್ಯನನ್ನೂ ಮತ್ತು ಚಂದ್ರನನ್ನೂ ಬೆಳಕನ್ನು ಕೊಡುವ ಕಣ್ಣುಗಳನ್ನಾಗಿ ನಿರ್ಮಿಸಿದಾಗಲೆ, ಅಗ್ನಿಯಲ್ಲಿಯೂ ಅವರಿಗಿಂತ ಅತಿಶಯವಾದ ಪ್ರಕಾಶದಿಂದ ಕೂಡಿರುವ ಕಾಂತಿಯು ಬೆಳಗುವಂತೆ ಮಾಡಿರುವರು ಎಲೈ ಅಗ್ನಿಯೇ--ನಿನ್ನಲ್ಲಿ ಯಜಮಾನರು ಅರ್ಪಿಸಿದ ಆಹುತಿಗಳು ನಿಮ್ನ ಪ್ರದೇಶವನ್ನು ಕುರಿತು ಪ್ರವಹಿಸುವ ನದಿಗಳ ಹಾಗೆ ಲೋಕೋಪಕಾರಕ್ಕಾಗಿ ವೃಷ್ಟಿ ರೂಪದಿಂದ ಅಧೋಮುಖವಾಗಿರುವ ಗಮನವನ್ನು ಹೊಂದುತ್ತವೆ ಮತ್ತು ಈ ವಿಧವಾದ ಪ್ರಭಾವವು ಅಗ್ನಿಯಲ್ಲಿರುವುದೆಂದು ಜ್ಞಾನಿಗಳು ಆಗಿನಿಂದಲೂ ನಿನ್ನನ್ನು ತಿಳಿದು ಇರುವರು ಎಂದು ಅರ್ಥವಾಗುವಂತೆ, **ಹೇ ಅಗ್ನೇ ತ್ವಯಿ ವಿಸೃಷ್ಟಾಃ ಯಷ್ಟೃಭಿರಾಹುತಯಃ ಅರುಷೀಃ ಸಿಂಧವೋ ನ ಅಧಃ ಕ್ಷರಂತಿ । ತತಃ ಪ್ರಭೃತಿ ಜ್ಞಾನಿನೋಽಪಿ ತ್ವಾಂ ಜ್ಞಾತುಂ ಪ್ರಾರಬ್ಧವಂತಃ** ಎಂದು ಪದಗಳಿಗೆ ಸಂಬಂಧವನ್ನು ಹೇಳಿರತ್ತಾರೆ.

॥ ವ್ಯಾಕರಣಪ್ರಕ್ರಿಯಾ ॥

**ದಧುಃ**—ಡುಧಾಞ್ ಧಾರಣಪೋಷಣಯೋಃ ಧಾತು ಲಿಟ್ ಪ್ರಥಮ ಪುರುಷ ಬಹುವಚನ ರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ದಿವಃ—ಊಡಿದಂಪದಾದಿ**-(ಪಾ ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಅಕ್ಷೀ**—ಅಕ್ಷಿಶಬ್ದ ನಿತ್ಯನಪುಂಸಕವಾಗಿದೆ ಇದಕ್ಕೆ ದ್ವಿವಚನ ಪರವಾದಾಗ **ಇಕೋಽಚಿ ವಿಭಕ್ತೌ** ಎಂಬುದರಿಂದ ನುಮಾಗಮ ಪ್ರಾಪ್ತವಾದರೆ ಪರವಾದುದರಿಂದ ನುಮಾಗಮವನ್ನು ಬಾಧಿಸಿ **ಈ ಚ ದ್ವಿವಚನೇ** (ಪಾ. ಸೂ. ೭-೧-೭೭) ಎಂಬುದರಿಂದ ಅಕ್ಷಿ ಶಬ್ದಕ್ಕೆ ಈಕಾರಾಂತಾದೇಶವಾಗಿ ಬರುತ್ತದೆ ಐರತಕ್ಕ ಈಕಾರವು ಉದಾತ್ತವಾದುದರಿಂದ ವಿಭಕ್ತಿಯ ಔಕಾರಕ್ಕೆ ಬಂದ ಈಕಾರದೊಡನೆ (ಅನುದಾತ್ತ) ಏಕಾದೇಶವಾದುದರಿಂದ **ಏಕಾದೇಶ ಉದಾ-**

**ತ್ರೇಸ್ತೋದಾತ್ತಃ** (ಪಾ. ಸೂ. ೮-೨-೫) ಎಂಬುದರಿಂದ ಉದಾತ್ತವಾಗುತ್ತದೆ. ಈತ್ವ ಬಂದ ಮೇಲೆ ಪುನಃ ನುಮಾಗಮ ಬರಲಿ ಎಂದು ಶಂಕಿಸಬಾರದು. **ಸಕೃದ್ಗತೌ ವಿಪ್ರತಿಷೇಧೇನ ಯದ್ಬಾಧಿತಂ ತದ್ಬಾಧಿತಮೇವ** (ಪರಿಭಾ. ೪೦) ಎಂಬ ವಚನದಿಂದ ಒಂದು ಸಲ ಬಾಧಿತವಾದುದು ಬಾಧಿತವಾದಂತೆಯೇ. ಆದಕ್ಕೆ ಪುನರುತ್ಥಾನವಿಲ್ಲ ಎಂದು ತಾತ್ಪರ್ಯ.

**ಅಕೃಣ್ವನ್**—ಕೃವಿ ಹಿಂಸಾಕರಣಯೋಶ್ಚ ಧಾತು. ಲಙ್ ಪ್ರಥಮಪುರುಷ ಬಹುವಚನರೂಪ. ಇದರ ಪ್ರಕ್ರಿಯೆಯು ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ ಹಿಂದೆ ಯದ್ಯೋಗವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ

**ಸೃಷ್ಟಾಃ**—ಸೃಜ ವಿಸರ್ಗೇ ಧಾತು. ಇದಕ್ಕೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ **ವ್ರಶ್ಚ ಭ್ರಸ್ಜ**—ಎಂಬುದರಿಂದ ಜಕಾರಕ್ಕೆ ಷಕಾರಾದೇಶ ಷ ಸಂಬಂಧದಿಂದ ಪ್ರತ್ಯಯ ತಕಾರಕ್ಕೆ ಷ್ಟುತ್ವ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ

**ನೀಚೀಃ**—ಅಂಚು ಗತಿಪೂಜನಯೋಃ ಧಾತು ನಿಪೂರ್ವವಾಗಿರುವಾಗ **ಋತ್ವಿಕ್ ದಧೃಕ್** (ಪಾ ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. **ಅನಿದಿತಾಂ ಹಲ**-ಎಂಬುದರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ ಸ್ತ್ರೀತ್ವ ವಿವಕ್ಷಾ ಮಾಡಿದಾಗ **ಅಂಚತೇಶ್ಚೋಪಸಂಖ್ಯಾನಮ್** ಎಂಬುದರಿಂದ ಙೀಪ್ **ಅಚಃ** (ಪಾ. ಸೂ. ೬-೪-೧೩೮) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ಲುಪ್ತಾಕಾರನಕಾರ ಅಂಚು ಧಾತುವು ಪರವಾದುದರಿಂದ **ಚೌ** (ಪಾ. ಸೂ. ೬-೩-೧೩೮) ಎಂಬುದರಿಂದ ಪೂರ್ವಪದಕ್ಕೆ (ನಿ) ದೀರ್ಘ. ನೀಚೀ ಎಂದು ರೂಪವಾಗುತ್ತದೆ **ನ್ಯಧೀ ಚ** (ಪಾ. ಸೂ ೬-೨-೫೩) ಎಂಬುದರಿಂದ ಗತಿಗೆ (ನಿ) ಪ್ರಕೃತಿಸ್ವರ ಬರುತ್ತದೆ. ಜಸ್ ಪರವಾದಾಗ **ವಾ ಛಂದಸಿ** ಸೂತ್ರದಿಂದ ಪೂರ್ವಸವರ್ಣದೀರ್ಘ.

**ಅರುಷೀಃ**—ಅರುಷಮ್ ಎಂಬುದು ರೂಪದ ಹೆಸರು. ಋ ಗತೌ ಧಾತು ಇದಕ್ಕೆ **ಋಹನಿಭ್ಯಾಮುಷಚ್** (ಉ. ಸೂ ೪-೫೧೩) ಎಂಬುದರಿಂದ **ಉಷಚ್** ಪ್ರತ್ಯಯ. ಅರುಷಮಸ್ಯ ಅಸ್ತಿ ಎಂಬರ್ಥ ವಿವಕ್ಷಾ ಮಾಡಿದಾಗ **ಛಂದಸೀವನಿಪಾ** (ವಾ. ೩೨೦೨- ) ಎಂಬುದರಿಂದ ಮತ್ವರ್ಥದಲ್ಲಿ ಈ ಪ್ರತ್ಯಯ. **ಯಸ್ಯೇತಿ ಚ** ಸೂತ್ರದಿಂದ ಅಕಾರ ಲೋಪ ಪ್ರಥಮಾ ಬಹುವಚನದಲ್ಲಿ ಪೂರ್ವಸವರ್ಣದೀರ್ಘ

**ಅಜಾನನ್**—೮ ನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

ಎಪ್ಪತ್ತೆರಡನೆಯ ಸೂಕ್ತ ಸಮಾಪ್ತವು



# ಎಪ್ಪತ್ತಮೂರನೆಯ ಸೂಕ್ತವು

**ರಯಿರ್ನೇತಿ ದಶರ್ಚಂ ನವಮಂ ಸೂಕ್ತಂ ಪರಾಶರಸ್ಯಾರ್ಷಂ ತ್ರೈಷ್ಟುಭಮಾಗ್ನೇಯಂ । ಅನುಕ್ರಾಂತಂ ಚ । ರಯಿರ್ನೇತಿ ॥ ಪ್ರಾತರನುವಾಕಾಶ್ವಿನಶಸ್ತ್ರಯೋರುಕ್ತೋ ವಿನಿಯೋಗಃ ॥**

ಅನುವಾದವು—**ರಯಿರ್ನ** ಎಂಬ ಈ ಸೂಕ್ತವು ಹನ್ನೆರಡನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪರಾಶರನು ಋಷಿಯು. ಅಗ್ನಿಯು ದೇವತೆಯು ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ ರಯಿರ್ನ ಎಂದು ಮೊದಲಾಗಿ ಹೇಳಿರುವುದು ಪ್ರಾತರನುವಾಕಮಂತ್ರಗಳಿಗಾಗಿಯೂ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದು

## ಸೂಕ್ತ—೭೩

॥ ಓಂ ॥

॥ ಮಂಡಲ—೧ ॥ ಅನುವಾಕ—೧೨ ॥ ಸೂಕ್ತ—೭೩ ॥

॥ ಅಷ್ಟಕ—೧ ॥ ಅಧ್ಯಾಯ—೫ ॥ ವರ್ಗ—೧೮, ೨೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥

॥ ಋಷಿಃ—ಪಾರಾಶರಃ ಶಾಕ್ತ್ಯಃ ॥

ದೇವತಾ—ಅಗ್ನಿಃ ॥

ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ರಯಿರ್ನ ಯಃ ಪಿತೃವಿತ್ತೋ ವಯೋಧಾಃ ಸುಪ್ರಣೀತಿಶ್ಚಿಕಿತುಷೋ ನ ಶಾಸುಃ ।
ಸ್ಯೋನಶೀರತಿಥಿರ್ನ ಪ್ರೀಣಾನೋ ಹೋತೇವ ಸದ್ಮ ವಿಧತೋ ವಿ ತಾರೀತ್ ॥ ೧ ॥

॥ ಪದಪಾಠಃ ॥

ರಯಿಃ । ನ । ಯಃ । ಪಿತೃಽವಿತ್ತಃ । ವಯಃಽಧಾಃ । ಸುಽಪ್ರನೀತಿಃ । ಚಿಕಿತುಷಃ ।
ನ । ಶಾಸುಃ ।
ಸ್ಯೋನಽಶೀಃ । ಅತಿಥಿಃ । ನ । ಪ್ರೀಣಾನಃ । ಹೋತಾಽಇವ । ಸದ್ಮ । ವಿಧತಃ ।
ವಿ । ತಾರೀತ್ ॥ ೧ ॥

॥ ಸಾಯಣಭಾಷ್ಯಂ ॥

ಪಿತೃವಿತ್ತಃ ಪಿತುಃ ಸಕಾಶಾಲ್ಲಬ್ಧೋ ರಯಿರ್ಧನಮಿವ ಯೋಽಗ್ನಿರ್ವಯೋಧಾ ಅನ್ನಸ್ಯ ದಾತಾ। ಯಥಾ ಪೈತೃಕಂ ಧನಂ ವಿಶ್ರಂಭೇಣ ವ್ಯವಹ್ರಿಯಮಾಣಂ ಸದನ್ನಪ್ರದಂ ಭವತಿ ತದ್ವದಗ್ನಿರಪಿ ಸರ್ವೇಷು ಯಜ್ಞೇಷು ವಿಶ್ರಂಭೇಣ ವ್ಯವಹೃತಃ ಸನ್ ಅನ್ನಪ್ರದೋ ಭವತೀತ್ಯರ್ಥಃ । ಚಿಕಿತುಷೋ ನ ವಿದುಷೋ ಧರ್ಮಶಾಸ್ತ್ರಾಭಿಜ್ಞಸ್ಯ ಶಾಸುಃ ಶಾಸನಮಿವ ಸುಪ್ರಣೀತಿಃ ಸುಖೇನ ಪ್ರಣೇತವ್ಯಃ । ಯಥಾ ವಿದ್ವಚ್ಛಾಸನಂ ಸರ್ವೇಷ್ವನುಷ್ಠೇಯೇಷು ತತ್ತತ್ಸಂಶಯನಿರ್ಣಯಾಯ ನೀಯತೇ ತದ್ವದಗ್ನಿರಪಿ ಸರ್ವೇಷು ಯಜ್ಞೇಷು ಪ್ರಣೀಯತೇ । ಯಶ್ಚ ಸ್ಯೋನಶೀಃ ಸುಖಪ್ರದೇ ಗಾರ್ಹಪತ್ಯಾಯತನಾದೌ ಶಯಾನೋಽತಿಥಿರ್ನ ಸುಖಾಸನ ಉಪವೇಶಿತೋಽರ್ಘಪಾದ್ಯಾದಿಭಿಃ ಸತ್ಕೃತೋಽತಿಥಿರಿವ ಪ್ರೀಣಾನೋ ಹವಿರ್ಭಿಸ್ತರ್ಪಣೀಯಃ ಸೋಽಗ್ನಿರ್ವಿಧತಃ ಪರಿಚರತೋ ಯಜಮಾನಸ್ಯ ಸದ್ಮ ಗೃಹಂ ವಿ ತಾರೀತ್ । ಪ್ರವರ್ಧಯತಿ ದದಾತಿ ವಾ । ತತ್ರ ದೃಷ್ಟಾಂತಃ । ಹೋತೇವ । ಹೋತಾ ಹೋಮಕರ್ತಾಧ್ವರ್ಯುಸ್ತತ್ತತ್ಕರ್ಮಕರಣೇನ ಫಲೈರ್ಯಜಮಾನಸ್ಯ ಗೃಹಂ ಯಥಾ ವರ್ಧಯತಿ ತದ್ವತ್ ॥ ಪಿತೃವಿತ್ತಃ । ವಿದ್ಲೃ ಲಾಭೇ । ಕರ್ಮಣಿ ನಿಷ್ಠಾ । ಯಸ್ಯ ವಿಭಾಷೇತೀಟ್ಪ್ರತಿಷೇಧಃ । ವಿಭಾಷಾ ಗಮಹನವಿದವಿಶಾಮಿತಿ ಕ್ವಸಾವಸ್ಯ ಧಾತೋರಿಟೋ ವಿಕಲ್ಪಿತತ್ವಾತ್ ತತ್ರಾಪಿ ವಿಶಿಸಾಹಚರ್ಯಾತ್ತೌದಾದಿಕ ಏವ ವಿದಿರ್ಗೃಹ್ಯತ ಇತ್ಯುಕ್ತಂ । ಕಾ ೭-೨-೬೮ । ವಿತ್ತೋ ಭೋಗಪ್ರತ್ಯಯಯೋಃ । ಪಾ ೮-೨ ೫೮ । ಇತಿ ನಿಷ್ಠಾನತ್ವಾಭಾವೋ ನಿಪಾತಿತಃ । ವಯೋಧಾಃ । ಡುಧಾಞ್ ಧಾರಣಪೋಷಣಯೋಃ । ಆತೋ ಮನಿನ್ನಿತಿ ವಿಚ್ । ಸುಪ್ರಣೀತಿಃ । ಪ್ರಣೀಯತ ಇತಿ ಪ್ರಣೀತಿಃ । ಕರ್ಮಣಿ ಕ್ತಿನ್ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ಪುನಃ ಸುಶಬ್ದೇನ ಸಮಾಸೇ ಕೃದ್ಗ್ರಹಣೇ ಗತಿಕಾರಕಪೂರ್ವಸ್ಯಾಪಿ ಗ್ರಹಣಾತ್ಕೃದುತ್ತರಪದಪ್ರಕೃತಿಸ್ವರತ್ವಂ । ಚಿಕಿತುಷಃ । ಲಿಟಃ ಕ್ವಸುಃ । ಷಷ್ಠ್ಯೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ಶಾಸುಃ । ಶಾಸು ಅನುಶಿಷ್ಟೌ । ಕೃಸೃಭೃವೃಸ್ತೃಹೀತ್ಯಾದಿನಾ ವಿಧೀಯಮಾನ ಉಪ್ರತ್ಯಯೋ ಬಹುಲವಚನಾದಸ್ಮಾದಪಿ ದ್ರಷ್ಟವ್ಯಃ । ತತ್ರ ನಿದಿತ್ಯನುವೃತ್ತೇರಾದ್ಯುದಾತ್ತತ್ವಂ । ಸ್ಯೋನಶೀಃ । ಸ್ಯೋನ-

**ಮಿತಿ ಸುಖನಾಮ । ಸ್ಯೋನೇ ಸುಖಕರೇ ಗಾರ್ಹಪತ್ಯಾದಿಸ್ಥಾನೇ ಶೇತೆ ಇತಿ ಸ್ಯೋನಶೀಃ । ಕ್ವಿಪ್ಚೇತಿ ಕ್ವಿಪ್ । ಪ್ರೀಣಾನಃ । ಪ್ರೀಞ್ ತರ್ಪಣೇ । ಕರ್ಮಣಿ ಶಾನಚಿ ವ್ಯತ್ಯಯೇನ ಶ್ನಾ । ವಿಧತಃ । ವಿಧ ವಿಧಾನೇ । ವಿಧತಿಃ ಪರಿಚರಣಕರ್ಮೇತಿ ನೈರುಕ್ತಾಃ । ತುದಾದಿತ್ವಾಚ್ಛಪ್ರತ್ಯಯಃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ ।**

॥ ಪ್ರತಿಪದಾರ್ಥ ॥

**ಪಿತೃವಿತ್ತಃ**— ಪಿತೃವಿನಿಂದ ಲಬ್ಧವಾದ । **ರಯಿಃ ನ**—ಧನದಂತೆ । **ಯಃ**—ಯಾವ ಅಗ್ನಿಯು । **ವಯೋಧಾಃ**—ಅನ್ನವನ್ನು ಕೊಡುತ್ತಾನೋ । **ಚಿಕಿತುಷಃ**—(ಧರ್ಮಶಾಸ್ತ್ರಜ್ಞನಾದ) ಪಂಡಿತನ । **ಶಾಸುಃ ನ**—ಶಾಸನದಂತೆ । **ಸುಪ್ರಣೀತಿಃ**—ಸುಖವಾಗಿ ಅನುಸರಿಸಲ್ಪಡತಕ್ಕವನೋ । **ಯಃ**—ಯಾವನು । **ಅತಿಥಿರ್ನ**—(ಸತ್ಕೃತನಾದ) ಅತಿಥಿಯಂತೆ । **ಸ್ಯೋನಶೀಃ**—(ಗಾರ್ಹಪತ್ಯಾಯತನದಲ್ಲಿ) ಸುಖವಾಗಿ ಮಲಗಿರುತ್ತಾನೆಯೋ (**ಸಃ**—ಅಂತಹ) । **ಪ್ರೀಣಾನಃ**—ಹವಿರಾದಿಗಳಿಂದ ಪೂಜಿಸಲ್ಪಡುವ ಅಗ್ನಿಯು । **ವಿಧತಃ**—ಸೇವೆಮಾಡುವ ಯಜಮಾನನ । **ಸದ್ಮ**—ಮನೆಯನ್ನು । **ಹೋತೇವ**—ಹೋತೃವಿನಂತೆ । **ವಿ ತಾರೀತ್**—ವರ್ಧಿಸುತ್ತಾನೆ ॥

॥ ಭಾವಾರ್ಥ ॥

ಪಿತೃವಿನಿಂದ ಲಬ್ಧವಾದ ಧನದಂತೆ, ಎಲ್ಲರಿಗೂ ಅನ್ನಪ್ರದನಾದ, ಧರ್ಮಶಾಸ್ತ್ರಜ್ಞನಂತೆ ಶಾಸ್ತೃವಾದ, ಅತಿಥಿಯಂತೆ (ಗಾರ್ಹಪತ್ಯಾಯತನದಲ್ಲಿ) ಶಯಾನನಾದ, ಹವಿರಾದಿಗಳಿಂದ ಪೂಜನೀಯನಾದ ಅಗ್ನಿಯು, ಹೋತೃವು (ಸ್ತೋತ್ರಗಳ ಮೂಲಕ ಯಜಮಾನನಿಗೆ ಅಭಿವೃದ್ಧಿಯನ್ನು ಕೋರುವಂತೆ), ಯಜಮಾನನ ಮನೆಯನ್ನು ಅಭಿವೃದ್ಧಿಪಡಿಸುತ್ತಾನೆ.

## English Translation.

Agni, like patrimonial wealth, is the giver of food; he is a director like the instructions of one learned in scripture; he rests in the sacrificial chamber like a weleome guest, and like an officiating priest, he brings prosperity on the house of the worshipper

॥ ವಿಶೇಷವಿಷಯಗಳು ॥

**ರಯಿರ್ನ ಪಿತೃವಿತ್ತಃ ವಯೋಧಾಃ**—**ವಯಃ** ಎಂಬ ಶಬ್ದವು **ಅಂಧಃ ವಾಜಃ** ಎಂಬ ಇಪ್ಪತ್ತೆಂಟು ಅನ್ನನಾಮಗಳಲ್ಲಿ (ನಿ ೩-೯) ಉಕ್ತವಾಗಿರುವುದರಿಂದ **ವಯೋಧಾಃ** ಎಂಬ ಪದವು (ಅನ್ನಪ್ರದನು) ಅನ್ನವನ್ನು ಕೊಡುವವನು ಎಂದು ಅರ್ಥವನ್ನು ಬೋಧಿಸುವುದು ಲೋಕದಲ್ಲಿ ತಂದೆಯು ಸಂಪಾದಿಸಿರುವ ದ್ರವ್ಯದ ವ್ಯವಹಾರದಲ್ಲಿ ವೃದ್ಧಿಯನ್ನು ಹೊಂದುತ್ತಾ, ಸಂತೋಷವನ್ನು ಉಂಟುಮಾಡುವ ಅನ್ನವನ್ನು ಕೊಡುವಂತೆ ಅಗ್ನಿಯು ಯಜ್ಞ

ಮಾಡುವುದರಿಂದ ಯಜಮಾನರುಗಳಿಗೆ ಆಯಾಯ ಯಜ್ಞಗಳಲ್ಲಿ ಹೋಮಮಾಡುವ ಹವಿರ್ಭಾಗಗಳನ್ನು ಸ್ವೀಕರಿಸುವವನಾಗಿ ಸುಖಕರವಾದ ಅನ್ನವನ್ನು ಉಂಟುಮಾಡುವನು.

**ಚಿಕಿತುಷೋ ನ ಸುಪ್ರಣೀತಿಃ—ಪ್ರಣೀತಿಃ ಕಾರ್ಯೇಷು ಉಪದೇಶಃ । ಸುಪ್ರಣೀತಿಃ–ಸುಖೇನ ಕಾರ್ಯೇಷು ಉಪದೇಶಃ ಇತಿ (ಸ್ಕಂ. ಭಾ) ಸುಖೇನ ಪ್ರಣೇತವ್ಯಃ ಇತಿ (ಸಾ. ಭಾ)** ಸ್ಕಂದಸ್ವಾಮಿಗಳು ಸುಪ್ರಣೀತಿ ಶಬ್ದಕ್ಕೆ ಆಯಾಸವಿಲ್ಲದೆ ಇರುವಂತೆ ಕಾರ್ಯಗಳನ್ನು ಆಚರಿಸುವುದು ಅಥವಾ ನೆರವೇರಿಸುವುದು ಎಂದು ಅರ್ಥವನ್ನು ವಿವರಿಸಿರುವರು. ಅಗ್ನಿಯು ಯಜಮಾನರಿಂದ ಆಯಾಯ ಕಾರ್ಯಗಳನ್ನು ನೆರವೇರಿಸುವ ಕ್ರಮಗಳನ್ನು ತಿಳಿದಿರುವವರ ಅನುಮತಿಯಂತೆ ಸುಖವಾಗಿ ಆರಾಧಿಸಲು ಯೋಗ್ಯನಾಗಿರುವನು

**ಸ್ಯೋನಶೀರತಿಥಿರ್ನ ಪ್ರೀಣಾನಃ—ಸ್ಯೋನಮಿತಿ ಸುಖನಾಮ । ಸ್ಯೋನೇ ಸುಖಕರೇ ಗಾರ್ಹಪತ್ಯಾದಿಸ್ಥಾನೇ ಶೇತೇ ಇತಿ ಸ್ಯೋನಶೀಃ । ಶಂಬಾತಾ, ಶತರಾ** ಮೊದಲಾದ ಇಪ್ಪತ್ತು ಸುಖನಾಮಗಳಲ್ಲಿ **ಸ್ಯೋನ** ಪದವು ( ನಿ ೩–೬ ) ಉಕ್ತವಾಗಿರುವುದು ಸುಖವನ್ನು ಉಂಟುಮಾಡುವ ಗಾರ್ಹಪತ್ಯವೆಂದು ಯಜ್ಞವೇದಿಯಲ್ಲಿ ನಿರ್ದಿಷ್ಟವಾದ ಪ್ರದೇಶದಲ್ಲಿ ಸುಖದಿಂದ ಉಪವಿಷ್ಟನಾಗಿರುವನು ಎಂದು ಅಗ್ನಿಗೆ ಈ ಪದವು ವಿಶೇಷಣವಾಗಿರುವುದೆಂದು ಸಾಯಣರು ವ್ಯಾಖ್ಯಾನಮಾಡಿರುವರು ಸ್ಕಂದಸ್ವಾಮಿಗಳು **ಸ್ಯೋನಶೀಃ** ಎಂಬ ಪದದಲ್ಲಿರುವ ಶೀಃ ಎಂಬುವುದು ಶಿಙ್ ಧಾತುವಿನ ರೂಪವಾಗಿರುವ ಕಾರಣ **ಶ್ಯೇತಿರಿಹ ಸ್ಥಾನಾರ್ಥಃ ಶೀಃ** ಎಂಬುವುದು ಸ್ಥಾನವನ್ನು ನಿರ್ದೇಶಮಾಡುವುದು **ತಾಸಾಮಹಿಃ ಪತ್ಸುತಃ ಶೀರ್ಬಭೂವ** (ಋ. ವೇ ೧-೩೨-೮) ಎಂಬ ಋಕ್ಕಿನಲ್ಲಿ ನಿರ್ದಿಷ್ಟವಾಗಿರುವಂತೆ **ಅಂತರ್ಭಾವಿತ ಣಿಜರ್ಥ**ದಲ್ಲಿ ಉಪಯುಕ್ತವಾಗಿ **ಸುಖಸ್ಯ ಸ್ಥಾಪಯಿತಾ** ಸುಖವನ್ನು ಉಂಟುಮಾಡುವವನು ಎಂದು ಅರ್ಥವನ್ನು ಹೇಳಿರುವರು ಅತಿಥಿಯು ಸುಖವಾದ ಆಸನದಲ್ಲಿ ಉಪವಿಷ್ಟನಾಗಿ ಅರ್ಘ್ಯಪಾದ್ಯಾದಿಗಳಿಂದ ಪೂಜಿತನಾಗಿ ತೃಪ್ತಿಯನ್ನು ಹೊಂದಿ ಸುಖಕರನಾಗಿರುವ ಹಾಗೆ ಅಗ್ನಿಯು ಗಾರ್ಹಪತ್ಯಾದಿ ವೇದಿಯಲ್ಲಿ ಸುಖೋಪವಿಷ್ಟನಾಗಿ ಯಜಮಾನರಿಂದ ಪೂಜಾದಿಗಳನ್ನೂ ಹವಿರ್ಭಾಗಗಳನ್ನೂ ಸ್ವೀಕರಿಸುತ್ತಾ ತೃಪ್ತನಾಗಿ ಸುಖಕರನೂ ಇಷ್ಟಗಳೆಲ್ಲವನ್ನೂ ನೆರವೇರಿಸುವನೂ ಆಗಿರುವನು.

**ಹೋತೇವ ಸದ್ಮ ವಿಧತೋ ವಿತಾರೀತ್– –ಹೋಮಕರ್ತಾ ಅಧ್ವರ್ಯುಃ ।** ಹೋಮವನ್ನು ಆಚರಿಸುವ ಅಧ್ವರ್ಯು ಎಂಬ ಋತ್ವಿಜನು ಎಂದು ಇಲ್ಲಿ ಹೋತೃ ಪದಕ್ಕೆ ಅರ್ಥವು. ಅಧ್ವರ್ಯುವು ಆಯಾಯ ಕಾಲಾನುಗುಣವಾಗಿ ಯಜ್ಞದಲ್ಲಿ ಹವಿರ್ಭಾಗಗಳನ್ನು ಅಗ್ನಿಯಲ್ಲಿ ಹೋಮಮಾಡಿ ಹೇಗೆ ಯಜಮಾನನ ಮನೆಯು ವೃದ್ಧಿಯಾಗುವ ಹಾಗೆ ವರ್ತಿಸುವನೋ ಅದರಂತೆಯೇ ಅಗ್ನಿಯೂ ತೃಪ್ತನಾಗಿ ಯಜಮಾನನ ಮನೆಯನ್ನು ವೃದ್ಧಿಗೊಳಿಸುವನು

॥ ವ್ಯಾಕರಣಪ್ರಕ್ರಿಯಾ ॥

**ಪಿತ್ರ್ಯವಿತ್ತಃ**— ವಿದ್ಲೃ ಲಾಭೇ ಧಾತು ಇದಕ್ಕೆ **ನಿಷ್ಠಾ** ಎಂಬುದರಿಂದ ಕರ್ಮಣಿಯಲ್ಲಿ **ಕ್ತ** ಪ್ರತ್ಯಯ **ಯಸ್ಯವಿಭಾಷಾ** (ಪಾ. ಸೂ. ೭–೨–೧೫) ಎಂಬುದರಿಂದ ಇಣ್ ನಿಷೇಧ ಬರುತ್ತದೆ. ಎಲ್ಲಿಯಾದರೂ ಇಟ್ ವಿಕಲ್ಪಿತವಾದರೆ ನಿಷ್ಠಾದಲ್ಲಿ ಇಟ್ ಬರುವುದಿಲ್ಲವೆಂದು ಅದರ ತಾತ್ಪರ್ಯ. **ವಿಭಾಷಾ ಗಮಹನವಿದ ವಿಶಾಮ್** (ಪಾ. ಸೂ. ೭–೨–೬೮) ಎಂಬುದರಿಂದ ವಿಡಿನ ಪರದಲ್ಲಿರುವ ಕ್ವಸುವಿಗೆ ಇಟ್ ವಿಕಲ್ಪವಾಗಿ ವಿಹಿತವಾಗಿದೆ ವಿದ ಧಾತುವು ಅನೇಕ

ವಿದ್ವರೂ ಸಾಹಚರ್ಯಪರಿಭಾಷೆಯಿಂದ ಇಲ್ಲಿ ವಿಶಿ ಸಾಹಚರ್ಯವಿರುವುದರಿಂದ ತುದಾದಿಪಠಿತವಾದ ವಿದಿಧಾತುವೇ ಗೃಹೀತವಾಗಿರುವುದರಿಂದ ಹಿಂದಿನ ಸೂತ್ರದಿಂದ ಇಣ್ ನಿಷೇಧ ಬರಲು ಯಾವ ಅಭ್ಯಂತರವೂ ಇಲ್ಲ ದಕಾರದ ಪರದಲ್ಲಿ ನಿಷ್ಠಾ ತಕಾರ ಬಂದುದರಿಂದ ಣತ್ವವು ಪ್ರಾಪ್ತವಾದರೆ **ವಿತ್ತೋ ಭೋಗಪ್ರತ್ಯಯಯೋಃ** (ಪಾ. ಸೂ. ೮-೨-೫೮) ಎಂಬುದರಿಂದ ನಿಷ್ಠಾನತ್ವಾಭಾವವು ನಿಪಾತಿತವಾಗಿದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ ಪಿತುಃ, ವಿತ್ತಃ, ಪಿತೃವಿತ್ತಃ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ

**ವಯೋಧಾಃ**—ಡುಧಾಞ್ ಧಾರಣಪೋಷಣಯೋಃ ಧಾತು. ಇದಕ್ಕೆ **ಆತೋ ಮನಿನ್ ವನಿಬ್ ಕ್ವನಿಪಶ್ಚ** (ಪಾ ಸೂ ೩-೨-೭೪) ಎಂಬುದರಿಂದ ಚಕಾರದಿಂದ ಸಮುಚ್ಚಿತವಾದ ವಿಚ್ ಪ್ರತ್ಯಯ. ವಿಚ್ಚಿನಲ್ಲಿ ಸರ್ವಲೋಪವಾಗುತ್ತದ ವಯಃ ದಧಾತಿ ಇತಿ ವಯೋಧಾಃ ಹಿಂದಿನಂತೆಯೇ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಸುಪ್ರಣೀತಿಃ**—ಪ್ರಣೀಯತೇ ಇತಿ ಪ್ರಣೀತಿಃ. **ಸ್ತ್ರಿಯಾಂ ಕ್ತಿನ್** (ಪಾ ಸೂ ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. **ತಾದೌ ಚ**—(ಪಾ. ಸೂ ೬-೨ ೫೦) ಎಂಬುದರಿಂದ ಗತಿಗೆ (ಪ್ರ) ಪ್ರಕೃತಿಸ್ವರ ಬರುತ್ತದೆ ಆಮೇಲೆ ಶೋಭನಾ ಪ್ರಣೀತಿಃ ಸುಪ್ರಣೀತಿಃ ಎಂದು ಸು ಶಬ್ದದೊಡನೆ ಸಮಾಸವಾದಾಗ **ಕೃದ್‌ಗ್ರಹಣೇ ಗತಿಕಾರಕಪೂರ್ವಸ್ಯಾಪಿ ಗ್ರಹಣಮ್** ಎಂಬ ಪರಿಭಾಷೆಯಿಂದ ಕೃದಂತಕ್ಕೆ ಗ್ರಹಣವಿರುವಾಗ ಗತಿಕಾರಕಪೂರ್ವದಲ್ಲಿದ್ದರೆ ಅದಕ್ಕೂ ಗ್ರಹಣವಿರುವುದರಿಂದ ಇಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದ

**ಚಿಕಿತುಷಃ**—ಕಿತ ಜ್ಞಾನೇ ಧಾತು ಇದಕ್ಕೆ ಲಿಟ್ಟಿನಲ್ಲಿ **ಕ್ವಸುಶ್ಚ** (ಪಾ ಸೂ ೩-೨-೧೦೭) ಎಂಬುದರಿಂದ ಕ್ವಸುರಾದೇಶ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಚುತ್ವ ಕಿತ್ತಾದುದರಿಂದ ವಸು ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ ಚಿಕಿತ್ವಸ್ ಶಬ್ದವಾಗುತ್ತದೆ ಷಷ್ಠೀ ಏಕವಚನದಲ್ಲಿ ಙಸ್ ಪರವ ದಾಗ ಭಸಂಜ್ಞಾ ಇರುವುದರಿಂದ **ವಸೋಃ ಸಂಪ್ರಸಾರಣಮ್** ಎಂಬ ಸೂತ್ರದಿಂದ ಸಂಪ್ರಸಾರಣ ಪೂರ್ವರೂಪ **ಶಾಸಿವಸಿಘಸೀನಾಂ ಚ** (ಪಾ ಸೂ ೮-೩-೬೦) ಎಂಬುದರಿಂದ ವಸುವಿನ ಸಕಾರಕ್ಕೆ ಷತ್ವ. ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗ ಚಿಕಿತುಷಃ ಎಂದು ರೂಪವಾಗುತ್ತದೆ.

**ಶಾಸುಃ**—ಶಾಸು ಅನುಶಿಷ್ಟೌ ಧಾತು ಅದಾದಿ ಉಣಾದಿಯಲ್ಲಿ ಬಹುಲವಚನವಿರುವುದರಿಂದ **ಶೃ ಸ್ವೃ ಸ್ನಿಹಿ**—(ಉ ಸೂ ೧-೧೦) ಎಂಬುದರಿಂದ ವಿಧಿಸಲ್ಪಡುವ ಉಪ್ರತ್ಯಯವು ಇದಕ್ಕೂ ಬರುತ್ತದೆ ಎಂದು ತಿಳಿಯಬೇಕು ಅಲ್ಲಿ ಪೂರ್ವಸೂತ್ರದಿಂದ ನಿತ್ ಎಂದು ಅನುವೃತ್ತವಾಗುವುದರಿಂದ ಉ ಪ್ರತ್ಯಯಕ್ಕೆ ನಿತ್ವದ್ಭಾವವಿರುವುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ ಸೂ ೬-೧-೧೯೭) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ

**ಸ್ಯೋನಶೀಃ**—ಸ್ಯೋನವೆಂಬುದು ಸುಖದ ಹೆಸರು. ಸ್ಯೋನೇ-ಸುಖಕರೇ-ಗಾರ್ಹಪತ್ಯಾದಿಸ್ಥಾನೇ ಶೇತೇ ಇತಿ ಸ್ಯೋನಶೀಃ ॥ ಶೀಙ್ ಸ್ವಪ್ನೇ ಧಾತು. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್‌ಪ್ರತ್ಯಯ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ

**ಪ್ರೀಣಾನಃ**—ಪ್ರೀಞ್ ತರ್ಪಣೇ. ಇದಕ್ಕೆ ಕರ್ಮಣಿಯಲ್ಲಿ ಲಡರ್ಥದಲ್ಲಿ ಶಾನಚ್. **ವ್ಯತ್ಯಯೋ ಬಹುಲಮ್** ಎಂಬುದರಿಂದ ಯಕ್ಕಿಗೆ ಬದಲಾಗಿ ಶ್ನಾ ವಿಕರಣ ಬರುತ್ತದೆ. **ಸಾರ್ವಧಾತುಕಮಪಿತ್** ಸೂತ್ರದಿಂದ ಙಿತ್ವ ಬರುವುದರಿಂದ ಶ್ನಾ ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ ಬರುವುದಿಲ್ಲ. ರೇಫನಿಮಿತ್ತವಿರುವುದರಿಂದ **ಅಟ್-ಕುಪ್ವಾಙ್**-ಸೂತ್ರದಿಂದ ನಕಾರಕ್ಕೆ ಣತ್ವ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ

**ವಿಧತಃ** – ವಿಧ ವಿಧಾನೇ ಧಾತು ತುದಾದಿ. **ವಿಧತಿಃ ಪರಿಚರಣಕರ್ಮಾ** ಎಂದು ನಿರುಕ್ತಕಾರರು ವಿವರಿಸಿರುತ್ತಾರೆ (ಸೇವಾರ್ಥ) **ಇದಕ್ಕೆ ಲಡರ್ಥದಲ್ಲಿ** ಶತೃ ಪ್ರತ್ಯಯ. **ತುದಾದಿಭ್ಯಃ ಶಃ** (ಪಾ ಸೂ ೩-೧-೭೭) ಎಂಬುದರಿಂದ ಶ ವಿಕರಣ ಙಿತ್ತಾದುದರಿಂದ **ಲಘೂಪಧಗುಣ** ಬರುವುದಿಲ್ಲ. ಷಷ್ಠೀ ಏಕವಚನಾಂತರೂಪ ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ** (ಪಾ ಸೂ ೬-೧-೧೭೩) ಎಂಬುದರಿಂದ ಅಜಾದಿಯಾದ ಆ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ ॥ ೧ ॥



॥ ಸಂಹಿತಾಪಾಠಃ ॥

ದೇವೋ ನ ಯಃ ಸವಿತಾ ಸತ್ಯಮನ್ಮಾ ಕ್ರತ್ವಾ ನಿಪಾತಿ ವೃಜ-
ನಾನಿ ವಿಶ್ವಾ ।
ಪುರುಪ್ರಶಸ್ತೋ ಅಮತಿರ್ನ ಸತ್ಯ ಆತ್ಮೇವ ಶೇವೋ ದಿಧಿಷಾ-
ಯ್ಯೋ ಭೂತ್ ॥ ೨ ॥

॥ ಪದಪಾಠಃ ॥

ದೇವಃ । ನ । ಯಃ । ಸವಿತಾ । ಸತ್ಯಽಮನ್ಮಾ । ಕ್ರತ್ವಾ । ನಿಽಪಾತಿ । ವೃಜನಾನಿ ।
ವಿಶ್ವಾ ।
ಪುರುಽಪ್ರಶಸ್ತಃ । ಅಮತಿಃ । ನ । ಸತ್ಯಃ । ಆತ್ಮಾಽಇವ । ಶೇವಃ । ದಿಧಿಷಾಯ್ಯಃ ।
ಭೂತ್ ॥ ೨ ॥

॥ ಸಾಯಣಭಾಷ್ಯಂ ॥

**ದೇವೋ ನ ಸವಿತಾ ದ್ಯೋತಮಾನಃ ಸರ್ವಸ್ಯ ಪ್ರೇರಕಃ ಸೂರ್ಯ ಇವ ಯೋಽಗ್ನಿಃ ಸತ್ಯಮನ್ಮಾ ಸತ್ಯಜ್ಞಾನೋ ಯಥಾರ್ಥದರ್ಶೀ ಸೋಽಗ್ನಿಃ ಕ್ರತ್ವಾತ್ಮೀಯೇನ ಕರ್ಮಣಾ ವಿಶ್ವಾ ವೃಜನಾನಿ । ವಿಭಕ್ತಿವ್ಯತ್ಯಯಃ । ಸರ್ವೇಭ್ಯಃ ಸಂಗ್ರಾಮೇಭ್ಯೋ ನಿಪಾತಿ ನಿತರಾಂ ಪಾಲಯತಿ । ವರ್ಜ್ಯಂತೇ ಹಿಂಸ್ಯಂತೇಽಸ್ಮಿನ್ನಿತಿ ವೃಜನಂ ಸಂಗ್ರಾಮಃ । ಅಪಿ ಚ ಪುರುಪ್ರಶಸ್ತಃ ಪುರುಭಿರ್ಯಜಮಾನೈಃ ಸ್ತುತೋಽಗ್ನಿರಮತಿರ್ನ । ರೂಪನಾಮೈತತ್ । ರೂಪಮಿವ ಸತ್ಯೋ ಬಾಧರಹಿತಃ । ರೂಪ್ಯತ ಇತಿ ರೂಪಂ ಸ್ವರೂಪಂ । ಯಥಾ ಪೃಥಿವ್ಯಾದೇಃ ಸ್ವರೂಪಮಾಗಮಾಪಾಯಿಷು ವಿಶೇಷೇಷು ಸತ್ಸ್ವಪಿ ಸ್ವಯಮೈಕರೂಪ್ಯೇಣ ನಿತ್ಯಂ ಭವತಿ ತದ್ವದಗ್ನಿರಪ್ಯುಚ್ಚಾವಚೇಷು ಸರ್ವೇಷು ಕರ್ಮಸು ಸ್ವಯಮೇಕ ಏವ ವ್ಯಾಪ್ಯ ವರ್ತತೇ । ಸೋಽಗ್ನಿಃ ಶೇವಃ ಸುಖಕರಃ । ತತ್ರ ದೃಷ್ಟಾಂತಃ । ಆತ್ಮೇವ । ಪರಮಪ್ರೇಮಾಸ್ಪದತಯಾ ನಿರತಿಶಯಾನಂದಸ್ವರೂಪ ಆತ್ಮಾ ಯಥಾ ಸರ್ವಾನ್ಸುಖಯತಿ । ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ । ಏಷ ಹ್ಯೇವಾನಂದಂ ಯಾತೀತಿ ಚ ಶ್ರವಣಾತ್ ತದ್ವದಗ್ನಿರಪಿ ಸ್ವರ್ಗಾದಿಫಲಹೇತುತಯಾ ಸುಖಯತಿ । ಏವಂ ಭೂತೋಽಗ್ನಿರ್ದಿಧಿಷಾಯ್ಯೋ ಭೂತ್ । ಸರ್ವೈರ್ಯಜಮಾನೈರ್ಧಾರಣೀಯೋ ಭವತಿ । ಪರಿತ್ಯಾಗೇ ಹಿ ವೀರಹತ್ಯಾಲಕ್ಷಣೋ ದೋಷೋ ಭವತಿ । ತಥಾ ಚ ತೈತ್ತಿರೀಯಕಂ । ವೀರಹಾ ವಾ ಏಷ ದೇವಾನಾಂ ಯೋಽಗ್ನಿಮುದ್ವಾಸಯತೇ । ತೈ. ಸಂ. ೧-೫-೨-೧ । ಇತಿ ॥ ಸತ್ಯಮನ್ಮಾ । ಮನನಂ ಮನ್ಮ । ಮನ ಜ್ಞಾನೇ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ಸತ್ಯಮವಿತಥಂ ಮನ್ಮ ಯಸ್ಯ । ಬಹುವ್ರೀಹಿಸ್ವರಃ । ವೃಜನಾನಿ । ವೃಜೀ ವರ್ಜನೇ । ಕೃ. ಪೃ. ವೃಜೀತ್ಯಾದಿನಾ ಕ್ಯುಪ್ರತ್ಯಯಃ । ಪುರುಪ್ರಶಸ್ತಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವೇ ಪ್ರಾಪ್ತೇ ಪ್ರವೃದ್ಧಾದೀನಾಂ ಚ । ಪಾ. ೬-೨-೧೪೭ । ಇತ್ಯುತ್ತರಪದಾಂತೋದಾತ್ತತ್ವಂ । ಸ ಹ್ಯಾಕೃತಿಗಣ ಇತ್ಯುಕ್ತಂ । ಅಮತಿಃ । ಅಮ ಗತ್ಯಾದಿಷು । ಅಮೇರತಿಃ । ದಿಧಿಷಾಯ್ಯಃ । ದಧಾತೇರ್ದಿಧಿಷಾಯ್ಯಃ । ಉ. ೩-೯೭ । ಇತಿ ಸಾಯ್ಯಪ್ರತ್ಯಯಾಂತೋ ನಿಪಾತ್ಯತೇ ॥**

॥ ಪ್ರತಿಪದಾರ್ಥ ॥

**ದೇವಃ ಸವಿತಾ ನ**—ಪ್ರಕಾಶಮಾನನಾದ, ಸರ್ವಪ್ರೇರಕನಾದ ಸೂರ್ಯನಂತೆ । **ಯಃ**—ಯಾವ ಅಗ್ನಿಯು । **ಸತ್ಯಮನ್ಮಾ**—ಸತ್ಯವಾದ ಜ್ಞಾನವುಳ್ಳವನೋ (ಯಥಾರ್ಥ ದರ್ಶಿಯೋ) । (**ಸಃ**—ಆ ಅಗ್ನಿಯು) । **ಕ್ರತ್ವಾ**—ಸ್ವಕೀಯವಾದ ಕರ್ಮದಿಂದ । **ವಿಶ್ವಾ ವೃಜನಾನಿ**—ಎಲ್ಲಾ ಯುದ್ಧಗಳಿಂದಲೂ । **ನಿಪಾತಿ**—ಚೆನ್ನಾಗಿ ರಕ್ಷಿಸುತ್ತಾನೆ । **ಪುರುಪ್ರಶಸ್ತಃ**—ಬಹುಜನ (ಯಜಮಾನ)ರಿಂದ ಸ್ತುತನಾದ (ಅಗ್ನಿಯು) । **ಅಮತಿರ್ನ**—ರೂಪದಂತೆ । **ಸತ್ಯಃ**—ಬಾಧರಹಿತನಾಗಿ । **ಆತ್ಮೇವ**—ಆತ್ಮನಂತೆ । **ಶೇವಃ**—ಸುಖಕರನಾಗಿ । **ದಿಧಿಷಾಯ್ಯೋ ಭೂತ್**—ಎಲ್ಲರಿಂದಲೂ ಇಡಲ್ಪಡುತ್ತಾನೆ (ಗೌರವಿಸಲ್ಪಡುತ್ತಾನೆ).

॥ ಭಾವಾರ್ಥ ॥

ಪ್ರಕಾಶಮಾನನಾದ ಸೂರ್ಯನಂತಿರುವ, ಯಥಾರ್ಥದರ್ಶಿಯಾದ, ಸ್ವಕೀಯ ಕರ್ಮಗಳಿಂದ (ಯಾಗ ಕರ್ತೃಗಳನ್ನು) ಎಲ್ಲಾ ಯುದ್ಧಗಳಲ್ಲಿಯೂ ರಕ್ಷಿಸುವ, ಬಹುಜನರಿಂದ ಸ್ತುತ್ಯನಾದ ಅಗ್ನಿಯು, ರೂಪದಂತೆ ಬಾಧರಹಿತನಾಗಿ, ಆತ್ಮನಂತೆ ಸುಖಕರನಾಗಿ, ಎಲ್ಲರ ಮನೆಯಲ್ಲಿಯೂ (ಸರ್ವದಾ) ಸ್ಥಾಪಿತನಾಗಿರುತ್ತಾನೆ

## English Translation

He who is like the divine Sun, who knows the truth (of things) preserves by his actions (his votaries) in all encounters, like nature, he is unchangeable, and like soul, is the source of happiness he is ever to be cherished.

॥ ವಿಶೇಷವಿಷಯಗಳು ॥

**ಕ್ರತ್ವಾ ನಿಪಾತಿ ವೃಜನಾನಿ ವಿಶ್ವಾ**—**ವೃಜನಾನಿ** ಎಂಬ ಪದವು—**ಋತಸ್ಯ ಹಿ ಶುರುಧಃ ಸಂತಿ ಪೂರ್ವೀರ್ಋತಸ್ಯ ಧೀತಿರ್ವೃಜಿನಾನಿ ಹಂತಿ** (ಋ ಸಂ ೪-೨೩-೮) ಎಂಬ ಋಕ್ಕಿನಲ್ಲಿ **ವರ್ಜನೀಯಾನಿ** ಎಂದು ಅರ್ಥಬೋಧಕವಾಗಿರುವುದು. **ಸಂಗ್ರಾಮೇಭ್ಯಃ** ಯುದ್ಧಗಳ ದೆಸೆಯಿಂದ ಎಂದು ಸಾಯಣರು ಅರ್ಥವನ್ನು ಹೇಳಿರುವರು **ವೃಜಿನಮಿತಿ ಬಲನಾಮಾನ್ಯತ್ರ ಇಹ ತು ವರ್ಜನೀಯತ್ವಾತ್ ವೃಜಿನಂ ಪಾಪಮುಚ್ಯತೇ। ಸರ್ವಾಣಿ ಪಾಪಾನಿ।** ವೃಜಿನವೆಂಬ ಪದವು ಬೇರೆಯ ಕಡೆಯಲ್ಲಿ ಬಲವೆಂಬ ಅರ್ಥವನ್ನು ಬೋಧಿಸುವುದು. ಇಲ್ಲಿ ತ್ಯಾಗಾರ್ಹವಾಗಿರುವುದು ಎಂಬ ಅರ್ಥವು ವಿವಕ್ಷಿತವಾಗಿರುವುದರಿಂದ ಪಾಪವೆಂದು ಅರ್ಥವು. ಎಲ್ಲಾ ಪಾಪಗಳೆಂದು ತಾತ್ಪರ್ಯವು (ಸ್ಕಂ. ಭಾ) ಅಗ್ನಿಯು, ವಿಪತ್ತುಗಳು ಉಂಟಾಗುವ ಸನ್ನಿವೇಶಗಳು ಒದಗುವುದರಿಂದ ವರ್ಜನೀಯವಾಗಿರುವ ಯುದ್ಧಗಳ ದೆಸೆಯಿಂದ ಯಜಮಾನರು ರಕ್ಷಿತರಾಗುವಂತೆ ಕರ್ಮಗಳನ್ನು ಆಚರಿಸುವ ಹಾಗೆ ಅನುಗ್ರಹವನ್ನು ಮಾಡಿ ಎಲ್ಲರನ್ನೂ ಅತಿಶಯವಾಗಿ ರಕ್ಷಣೆಮಾಡುವನು. ಎಲ್ಲಾ ಪಾತಕಗಳಿಂದ ರಕ್ಷಿಸುವನೆಂದು ಸ್ಕಂದಸ್ವಾಮಿಗಳು ಅರ್ಥವನ್ನು ಹೇಳುವರು.

**ಸತ್ಯಮನ್ಮಾ**—**ಮನನಂ ಮನ್ಮ ಸತ್ಯಮವಿತಥಂ ಮನ್ಮ ಯಸ್ಯ। ಮನ್ಮ** ಎಂದರೆ ಸಂಕಲ್ಪವು. ವ್ಯರ್ಥವಾಗದಿರುವ ಸಂಕಲ್ಪವುಳ್ಳವನು ಎಂದು ಅರ್ಥ

**ಅಮತಿರ್ನ ಸತ್ಯಃ**—**ರೂಪನಾಮ್ಯೇತತ್। ರೂಪಮಿವ ಸತ್ಯಃ ಬಾಧರಹಿತ** (ಸಾ ಭಾ.) **ಅಮತಿರಿತಿ ರೂಪನಾಮಾನ್ಯತ್ರ। ಇಹ ತು ಆತ್ಮಮತಿರಮತಿರುಚ್ಯತೇ। ಅಥವಾ ಗಮನಶೀಲೋ ಆದಿತ್ಯಃ ತದ್ವತ್ ಸತ್ಯಃ।** (ಸ್ಕಂದ ಭಾಷ್ಯ). **ನಿರ್ಣಿಕ್, ವವ್ರಿಃ,** ಎಂಬ ಹದಿನಾರು ರೂಪನಾಮಗಳಲ್ಲಿ **ಅಮತಿ** ಶಬ್ದವು ಉಕ್ತವಾಗಿರುವುದರಿಂದ ರೂಪವಂತನೆಂದು ಅರ್ಥವು (ನಿ. ೩-೧೩) **ರೂಪ್ಯತೇ**—ಪದಾರ್ಥಗಳು ಬೇರೆಬೇರೆಯಾಗಿ ಇರುವಹಾಗೆ

ಮಾಡುವ ವಸ್ತುಗಳ ಆಕಾರಗಳು ರೂಪವೆನಿಸುತ್ತದೆ. ಪೃಥಿವಿಯೇ ಮೊದಲಾದವುಗಳಲ್ಲಿ ವೃದ್ಧಿ ಹ್ರಾಸವು ಉಂಟಾಗುವುದಾದರೂ ಪೃಥಿವೀತ್ವವೆಂಬುವುದು ಒಂದು ಮಾತ್ರ ವ್ಯತ್ಯಾಸವನ್ನು ಹೊಂದದೆ ಇರುವಂತೆ ಅಗ್ನಿಯೂ ಅತಿಶಯವಾದ ಮಹತ್ತ್ವವನ್ನು ಉಂಟುಮಾಡುವ ಕರ್ಮಗಳಲ್ಲಿಯೂ ಇತರವಾದವುಗಳಲ್ಲಿ ತಾನು ಒಬ್ಬನೇ ವ್ಯಾಪಿಸಿ ಇರುವನು. ಇದರಂತೆಯೇ ಯಾವಾಗಲೂ ಯಾವ ವಿಧವಾದ ನ್ಯೂನತೆಯನ್ನೂ ಹೊಂದದೆ ಇರುವ ಸ್ಥಿತಿಯನ್ನು ಹೊಂದಿರುವನು ಎಂದು ಸಾಯಣರು ವ್ಯಾಖ್ಯಾನಮಾಡಿರುವರು. ಸ್ಕಂದಸ್ವಾಮಿಗಳು ಅಗ್ನಿಯು ಆತ್ಮವಿಷಯವಾದ ಜ್ಞಾನವುಳ್ಳವನು ಆದ್ದರಿಂದಲೇ ಅಮತಿ ಎಂದು ವ್ಯವಹರಿಸಲ್ಪಡುವನು ಅಥವಾ ಅಮ ಎಂಬ ಧಾತುವು ಗಮನವೇ ಮೊದಲಾದ ಅರ್ಥಬೋಧಕವಾಗಿರುವುದರಿಂದ **ಅಮತಿ** ಎಂದರೆ ಗಮನಶೀಲನಾಗಿರುವ ಆದಿತ್ಯನ ಹಾಗೆ ಸ್ಥಿತಿಯನ್ನು ಹೊಂದಿ ಇರುವನು ಎಂದು ವಿವರಿಸಿರುವರು.

**ಆತ್ಮೇವ ಶೇವಃ ದಿಧಿಷಾಯ್ಯಃ**—ಅತಿಶಯವಾದ ಪ್ರೀತಿಗೆ ಆಸ್ಪದವಾಗಿರುವ ಆತ್ಮಸ್ವರೂಪದ ಹಾಗೆ ಅಗ್ನಿಯು ಎಲ್ಲರಿಗೂ ಸುಖಕರನಾಗಿಯೂ, ನಿರತಿಶಯವಾದ ಆನಂದರೂಪನಾಗಿ ಇರುವ ಆತ್ಮನು ಎಲ್ಲರಿಗೂ ಸುಖವನ್ನು ಉಂಟುಮಾಡುವ ಹಾಗೆ ಸ್ವರ್ಗವೇ ಮೊದಲಾದ ಉತ್ತಮವಾದ ಫಲಗಳನ್ನು ಉಂಟುಮಾಡುವುದರಿಂದ ಸುಖಜನಕನಾಗಿಯೂ ಇರುವನು ಆತ್ಮಸ್ವರೂಪವು ನಿರತಿಶಯಾನಂದ ರೂಪದಿಂದ ಇರುವ ವಿಷಯವನ್ನು **ಏತಸ್ಯೈವಾನಂದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ** (ಬೃ ಉ. ೪-೩-೩೨) ಈ ಆತ್ಮನ ಆನಂದದ ಲೇಶದಿಂದಲೇ ಇತರ ಎಲ್ಲಾ ಪ್ರಾಣಿಗಳೂ ಸುಖದಿಂದ ಇರುವುವು. **ಏಷ ಹ್ಯೇವಾನಂದ ಯಾತಿ** (ತೈ ಆ ೮-೭) ಈ ಆತ್ಮನೇ ಆನಂದರೂಪನಾಗಿರುವವನು ಎಂದು ಶ್ರುತಿಯು ಬೋಧಿಸುವುದು.

ಯಜ್ಞಮಾಡುವವರಿಗೂ ಇತರರಿಗೂ ಯಾವಾಗಲೂ ಆತ್ಮನಂತೆ ಸುಖಕರನಾಗಿರುವ ಅಗ್ನಿಯನ್ನು ಪೂಜಿಸದೆ ಇರುವವನು ವೀರಹತ್ಯಾ ಎಂಬ ಪಾತಕಕ್ಕೆ ಒಳಗಾಗುವನು.

**ವೀರಹಾ ವಾ ಏಷ ದೇವಾನಾಂ ಯೋ ಅಗ್ನಿಮುದ್ವಾಸಯತೇ ।**

(ತೈ. ಸಂ ೧-೫-೨-೧)

ಎಂಬ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿರುತ್ತದೆ ಆದ್ದರಿಂದ ಅಗ್ನಿಯನ್ನು ಅವಶ್ಯವಾಗಿ ಪೂಜಿಸಬೇಕೆಂದು ತಾತ್ಪರ್ಯವು.

ಆತ್ಮನಂತೆ ಸರ್ವರಿಗೂ ಸುಖಕರನಾಗಿರುವ ಅಗ್ನಿಯು ಎಲ್ಲವನ್ನೂ ಧರಿಸಿ ಇರುವನೆಂದು ಸ್ಕಂದಸ್ವಾಮಿಗಳು ವ್ಯಾಖ್ಯಾನಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಸತ್ಯಮನ್ಮಾ**—ಮನನಂ ಮನ್ಮ. ಮನ ಜ್ಞಾನೇ ಧಾತು ಇದಕ್ಕೆ **ಅನ್ಯೇಭ್ಯೋಽಪಿ ದೃಶ್ಯಂತೇ** (ಪಾ. ಸೂ ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. **ಸತ್ಯಂ ಅವಿತಥಂ ಮನ್ಮ ಯಸ್ಯ ಸತ್ಯಮನ್ಮಾ.** ಸತ್ಯಮನ್ಮನ್ ಶಬ್ದ. ಪ್ರಥಮಾ ಏಕವಚನದಲ್ಲಿ **ಸರ್ವನಾಮಸ್ಥಾನೇಚಾಽಸಂಬುದ್ಧೌ** ಎಂಬುದರಿಂದ ಉಪಧಾ ದೀರ್ಘ. **ಹಲ್ಙ್ಯಾದಿಭ್ಯೋ**— ಸೂತ್ರದಿಂದ ಸುಲೋಪ **ನಲೋಪಃ ಪ್ರಾತಿಪದಿಕಾಂತಸ್ಯ** ಸೂತ್ರದಿಂದ

ನಲೋಪ ಬಹುವ್ರೀಹಿಸಮಾಸವಾದುದರಿಂದ **ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** (ಪಾ. ಸೂ ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ನಿಪಾತಿ**—ಪಾ ರಕ್ಷಣೇ ಧಾತು ಅದಾದಿ ಲಟ್ ಪ್ರಥಮಪುರುಷ ಏಕವಚನರೂಪ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ

**ವೃಜನಾನಿ**—ವೃಜೀ ವರ್ಜನೇ ಧಾತು **ಕೃ ಪೃ ವೃಜಿ**—(ಉ ಸೂ ೨-೨೩೮) ಎಂಬುದರಿಂದ ಇದಕ್ಕೆ ಕ್ಯು ಪ್ರತ್ಯಯ ಕಿತ್ತಾದುದರಿಂದ ಲಘೂಪಧ ಗುಣ ಬರುವುದಿಲ್ಲ **ಯುವೋರನಾಕೌ** ಎಂಬುದರಿಂದ ಕ್ಯುವಿನಲ್ಲಿ ಉಳಿಯುವ ಯು ಎಂಬುದಕ್ಕೆ ಅನಾದೇಶ. ವೃಜನ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಮಧ್ಯೋದಾತ್ತವಾದಪದವಾಗುತ್ತದೆ ದ್ವಿತೀಯಾ ಬಹುವಚನಾಂತರೂಪ

**ವಿಶ್ವಾ**—ನಪುಂಸಕದಲ್ಲಿ ಶಸ್ಸಿಗೆ ಶಿ ಆದೇಶ ಬಂದಾಗ **ಶೇಶ್ಛಂದಸಿ ಬಹುಲಮ್** ಎಂಬುದರಿಂದ ಶಿಗೆ ಲೋಪ

**ಪುರುಪ್ರಶಸ್ತಃ**—ಶಂಸು ಸ್ತುತೌ ಧಾತು ಇದಕ್ಕೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ **ಅನಿದಿತಾಂ ಹಲಉ**— ಎಂಬುದರಿಂದ ಉಪಧಾನಕಾರಲೋಪ. **ಪುರುಭಿಃ (ಪ್ರಕರ್ಷೇಣ) ಶಸ್ತಃ ಪುರುಪ್ರಶಸ್ತಃ. ತೃತೀಯಾಕರ್ಮಣಿ** (ಪಾ. ಸೂ. ೩-೨-೪೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಪ್ರಾಪ್ತವಾದರೆ **ಪ್ರವೃದ್ಧಾದೀನಾಂ ಚ** (ಪಾ. ಸೂ ೬-೨-೧೪೭) ಎಂಬುದರಿಂದ ಇದು ಆ ಗಣದಲ್ಲಿ ಪಠಿತವಾದುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಪ್ರವೃದ್ಧಾದಿಯು ಆಕೃತಿಗಣವಾದುದರಿಂದ ಅನುಶಾಸನವಿಲ್ಲದೆ ಉತ್ತರಪದಾಂತೋದಾತ್ತಸ್ವರ ಬಂದಲ್ಲಿ ಈ ಗಣದಲ್ಲಿ ಪಠಿತವಾಗಿದೆಯೆಂದು ಊಹಿಸಬೇಕು.

**ಅಮತಿಃ**—ಅಮ ಗತ್ಯಾದಿಷು, ಧಾತು ಇದಕ್ಕೆ **ಅಮೇರತಿಃ** (ಉ ಸೂ ೩-೪೬೯) ಎಂಬುದರಿಂದ **ಅತಿ** ಪ್ರತ್ಯಯ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ

**ದಿಧಿಷಾಯ್ಯಃ**—ಡುಧಾಞ್ ಧಾರಣಪೋಷಣಯೋಃ, ಧಾತು ಜುಹೋತ್ಯಾದಿ. **ದಿಧಿಷಾಯ್ಯಃ**—(ಉ ಸೂ ೩-೩೭೭) ಎಂಬುದರಿಂದ ಸಾಯ್ಯ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಪ್ರತ್ಯಯಸ್ವರ ಬರುತ್ತದೆ. ॥ ೨ ॥

❀❀❀

॥ ಸಂಹಿತಾಪಾಠಃ ॥

ದೇವೋ ನ ಯಃ ಪೃಥಿವೀಂ ವಿಶ್ವಧಾಯಾ ಉಪಕ್ಷೇತಿ ಹಿತಮಿತ್ರೋ ನ ರಾಜಾ ।
ಪುರಃಸದಃ ಶರ್ಮಸದೋ ನ ವೀರಾ ಅನವದ್ಯಾ ಪತಿಜುಷ್ಟೇವ ನಾರೀ ॥ ೩ ॥

॥ ಪದಪಾಠಃ ॥

ದೇವಃ । ನ । ಯಃ । ಪೃಥಿವೀಂ । ವಿಶ್ವಽಧಾಯಾಃ । ಉಪಽಕ್ಷೇತಿ । ಹಿತಽಮಿತ್ರಃ ।
ನ । ರಾಜಾ ।
ಪುರಃಽಸದಃ । ಶರ್ಮಽಸದಃ । ನ । ವೀರಾಃ । ಅನವದ್ಯಾ । ಪತಿಜುಷ್ಟಾಽಇವ ।
ನಾರೀ ॥ ೩ ॥

॥ ಸಾಯಣಭಾಷ್ಯಂ ॥

ದೇವೋ ನ ದ್ಯೋತಮಾನಃ ಸೂರ್ಯ ಇವ ಯೋಽಗ್ನಿರ್ವಿಶ್ವಧಾಯಾಃ ಸರ್ವಸ್ಯ ಜಗತೋ ಧರ್ತಾ । ಯಥಾ ಸೂರ್ಯೋ ವೃಷ್ಟ್ಯಾದಿಪ್ರದಾನೇನ ಸರ್ವಂ ಜಗದ್ಧತ್ತೇ ಏವಮಗ್ನಿರಪಿ ಯಜ್ಞಾದಿಸಾಧನೇನ ಕೃತ್ಸ್ನಸ್ಯ ಜಗತೋ ಧಾರಯಿತಾ । ಸೋಽಗ್ನಿಃ ಪೃಥಿವೀಂ ಪೃಥಿವ್ಯಾಮುಪಕ್ಷೇತಿ । ಸರ್ವೇಷಾಂ ಪ್ರಿಯಃ ಸನ್ಯಜ್ಞಗೃಹಾದೌ ನಿವಸತಿ । ತತ್ರ ದೃಷ್ಟಾಂತಃ । ಹಿತಮಿತ್ರೋ ನ ರಾಜಾ । ಹಿತಾನ್ಯನುಕೂಲಾನಿ ಮಿತ್ರಾಣಿ ಯಸ್ಯ ತಾದೃಶೋ ರಾಜಾ ಯಥಾ ಸುಖೇನ ನಿವಸತಿ ತದ್ವತ್ । ಯಥಾ ಸರ್ವಜನಮಿತ್ರೋ ರಾಜಾ ಏವಮಗ್ನಿರಪಿ ಸರ್ವಜನಮಿತ್ರ ಇತ್ಯರ್ಥಃ । ನ ಹ್ಯಗ್ನಿಂ ಕಶ್ಚನ ದ್ವಿಷ್ಟೇ । ಯಸ್ಯಾಗ್ನೇಃ ಪುರಃಸದಃ ಪುರಸ್ತಾತ್ಸೀದಂತ ಉಪವಿಶಂತಃ ಪುರುಷಾಃ ಶರ್ಮಸದೋ ನ ವೀರಾಃ ಪಿತೃಗೃಹೇ ವರ್ತಮಾನಾಃ ಪುತ್ರಾ ಇವ ವರ್ತಂತೇ । ಪಿತಾ ಪುತ್ರಾನಿವಾಗ್ನಿಃ ಸ್ವಸ್ಯ ಪರಿಚಾರಕಾನ್ರಕ್ಷತೀತಿ ಭಾವಃ । ಸೋಽಯಮಗ್ನಿರತಿಶಯೇನ ಶುದ್ಧಃ ಕರ್ಮಯೋಗ್ಯೋ ಭವತಿ । ತತ್ರ ದೃಷ್ಟಾಂತಃ । ಅನವದ್ಯಾನಿಂದಿತಾ ಪತಿಜುಷ್ಟೇವ

ನಾರೀ ಸ್ವಪತಿನಾ ಸೇವಿತಾ ಸ್ವೀಕೃತಾ ಯೋಷಿದಿವ । ಸಾ ಯಥಾ ಪಾತಿವ್ರತ್ಯೇನ ಶುದ್ಧಾ ಸತೀ ಸರ್ವಕರ್ಮಯೋಗ್ಯಾ ಭವತಿ ಏವಮಗ್ನಿರಪಿ॥ ವಿಶ್ವಧಾಯಾಃ । ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚೇತಿ ವಚನಾತ್ಕಾರಕಪೂರ್ವಾದಪಿ ದಧಾತೇರ್ವಹಿಹಾಧಾಞ್ಭ್ಯಶ್ಛಂದಸೀತ್ಯಸುನ್ । ಣಿದಿತ್ಯನುವೃತ್ತೇರಾತೋ ಯುಕ್ ಚಿಣ್ಕೃತೋರಿತಿ ಯುಕ್ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಉಪಕ್ಷೇತಿ । ಕ್ಷಿ ನಿವಾಸಗತ್ಯೋಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಅನವದ್ಯಾ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಪತಿಜುಷ್ಟೇವ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ನಾರೀ । ನೃನರಯೋರ್ವೃದ್ಧಿಶ್ಚ । ಪಾ. ೪-೧-೭೩ । ಇತಿ ಶಾರ್ಙ್ಗರವಾದಿಷು ಪಾಠಾತ್ ಙೀನಂತ ಆದ್ಯುದಾತ್ತಃ ॥

॥ ಪ್ರತಿಪದಾರ್ಥ ॥

**ದೇವೋ ನ**—ಪ್ರಕಾಶಮಾನನಾದ ಸೂರ್ಯನಂತೆ । **ಯಃ**—ಯಾವ ಅಗ್ನಿಯು । **ವಿಶ್ವಧಾಯಾಃ**—ಸಮಸ್ತಜಗತ್ತಿಗೂ ಧಾರಕನೋ (ಆ ಅಗ್ನಿಯು) । **ಹಿತಮಿತ್ರಃ ರಾಜಾ ನ**—ಹಿತರಾದ ಮಿತ್ರರುಳ್ಳ ರಾಜನಂತೆ । **ಪೃಥಿವೀಂ**—ಭೂಮಿಯಲ್ಲಿ । **ಉಪಕ್ಷೇತಿ**—(ಯಜ್ಞಗೃಹಾದಿಗಳಲ್ಲಿ) ವಾಸಿಸುತ್ತಾನೆ । **ಪುರಃಸದಃ**—(ಯಾವ ಅಗ್ನಿಯು) ಪುರೋಭಾಗದಲ್ಲಿ ಕುಳಿತವರು । **ಶರ್ಮಸದಃ ವೀರಾ ನ**—ಪಿತೃಗೃಹದಲ್ಲಿ ಸುಖವಾಗಿ ಕುಳಿತಿರುವ ಪುತ್ರರಂತೆ (ಇರುವ) (ಆ ಅಗ್ನಿಯು) । **ಅನವದ್ಯಾ**—ನಿರ್ದುಷ್ಟಳಾದ । **ಪತಿಜುಷ್ಟಾ**—ಪತಿಯಿಂದ ಸ್ವೀಕೃತಳಾದ । **ನಾರೀವ**—ಸ್ತ್ರೀಯಂತೆ (ಶುದ್ಧನೂ ಮತ್ತು ಕರ್ಮಯೋಗ್ಯನೂ ಆಗಿರುವನು.)

॥ ಭಾವಾರ್ಥ ॥

ಸೂರ್ಯನಂತೆ ಸಮಸ್ತ ಜಗದಾಧಾರನಾದ ಅಗ್ನಿಯು, ಹಿತಮಿತ್ರರೊಡಗೂಡಿದ ರಾಜನಂತೆ ಈ ಭೂಮಿಯಲ್ಲಿರುವ ಯಾಗಶಾಲೆಗಳಲ್ಲಿ ಸ್ಥಾಪಿತನಾಗಿ, ತನ್ನ ಸಮೀಪದಲ್ಲಿರುವವರೆಲ್ಲರಿಗೂ, ತಂದೆಯು ತನ್ನ ಆಶ್ರಯದಲ್ಲಿರುವ ಪುತ್ರರಿಗೆಲ್ಲಾ ರಕ್ಷಕನಾಗಿರುವಂತೆ, ರಕ್ಷಕನಾಗಿರುತ್ತಾನೆ ಮತ್ತು ನಿರ್ದುಷ್ಟಳಾದ, ಪತಿಯಿಂದ ಅಂಗೀಕೃತಳಾದ ನಾರಿಯಂತೆ, ಶುದ್ಧನೂ, ಕರ್ಮಯೋಗ್ಯನೂ ಆಗಿರುತ್ತಾನೆ.

## English Translation

He, who, like the divine (Sun,) is the supporter of the universe, abides on earth like a prince, (sorrounded by) faithful friends; in his presence, men sit down like sons in the dwelling of a parent, and (in purity he resembles) an irreproachable and beloved wife

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಹಿಂದಿನ ಋಕ್ಕಿನಲ್ಲಿರುವಂತೆಯೇ ನಾಲ್ಕು ಉಪಮಾ ಅಲಂಕಾರವುಳ್ಳ ವಾಕ್ಯಗಳಿರುವುವು. ಅವುಗಳಲ್ಲಿ **ದೇವೋ ನ ಯಃ ವಿಶ್ವಧಾಯಾಃ** ಎಂಬುವುದು ಮೊದಲನೆಯ ವಾಕ್ಯವು ಇದರಲ್ಲಿ **ನ** ಎಂಬುವ ಪದವು ಉಪಮಾನವಾಚಕವಾಗಿರುತ್ತದೆ ಪ್ರಕಾಶವುಳ್ಳವನಾದ ಸೂರ್ಯನು ವೃಷ್ಟಿಗಳಿಂದ

ಜಗತ್ತನ್ನು ಧರಿಸಿರುವಂತೆ, ಪ್ರಕಾಶಮಾನನಾದ ಅಗ್ನಿಯೂ ಯಜ್ಞಾದಿಸಾಧನಗಳನ್ನು ದೊರಕಿಸಿ ಜಗತ್ತೆಲ್ಲವನ್ನೂ ಧರಿಸಿರುವನು. ಉಪಮಾಲಂಕಾರಯುಕ್ತವಾದ ಈ ವಾಕ್ಯಕ್ಕೆ **ಹಿತಮಿತ್ರೋ ನ ರಾಜಾ ಪೃಥಿವೀಂ ಉಪಕ್ಷೇತಿ** ಎಂಬ ವಾಕ್ಯವೂ ಉಪಮಾನವಾಗಿ ಹೇಳಲ್ಪಟ್ಟಿರುತ್ತದೆ. ರಾಜನಿಗೆ ಅನುಕೂಲರಾದ ಹಿತವನ್ನು ಆಚರಿಸುವ ಮಿತ್ರರು ಇರುವರು. ಅಗ್ನಿಯು ಜಗತ್ತಿಗೆ ಹಿತವನ್ನು ಉಂಟುಮಾಡುವನು. ರಾಜನು ಎಲ್ಲಾ ಜನರ ಪ್ರೀತಿಗೂ ಪಾತ್ರನಾಗಿ ಸುಖದಿಂದ ವಾಸಮಾಡುವನು. ಅಗ್ನಿಯೂ ಈ ರಾಜನ ಹಾಗೆ ಸರ್ವಜನರ ಪ್ರೀತಿಗೂ ಪಾತ್ರನಾಗಿ ಯಜ್ಞವೇದಿಕೆಯಲ್ಲಿ ಸುಖದಿಂದ ಇರುವನಾದ್ದರಿಂದ ಹಿತಮಿತ್ರತ್ವವೂ, ಸರ್ವಜನ ಪ್ರಿಯನಾಗಿ ಭೂಮಿಯಲ್ಲಿ ಇರುವಿಕೆಯೂ ಅಗ್ನಿಗೂ ರಾಜನಿಗೂ ಸಮಾನವಾಗಿರುವುದು. ಇವೆರಡು ವಾಕ್ಯಗಳು ಪರಸ್ಪರವಾಗಿ ದೃಷ್ಟಾಂತ ವಿಧದಿಂದ ಇರುವ ಹಾಗೆ ಮುಂದಿನ ಅರ್ಧದಲ್ಲಿಯೂ ಎರಡು ಉಪಮಾಲಂಕಾರದಿಂದ ಕೂಡಿರುವ ವಾಕ್ಯಗಳು ಇರುತ್ತವೆ.

**ಪುರಃಸದಃ ಶರ್ಮಸದಃ ನ ವೀರಾಃ**-- **ಪುರಃ**— ಮುಂದುಗಡೆಯಲ್ಲಿ **ಸದಃ**-- ಕೂತುಕೊಂಡಿರುವವರು ಅಗ್ನಿಯ ಮುಂದುಗಡೆಯಲ್ಲಿ ಕೂತುಕೊಂಡಿರುವವರು ಸುಖದಿಂದ ಸಂತೋಷವಾಗಿ ಉಪವಿಷ್ಟರಾಗಿರುವರು. ಸುಖೋಪವಿಷ್ಟ ಎಂಬ ಅರ್ಥವು ಶರ್ಮಸದಃ ಎಂಬ ಪದಕ್ಕೆ ಇರುವುದು **ವೀರಾ ಇವ ಶರ್ಮಸದಃ** ಎಂಬ ಈ ವಾಕ್ಯಕ್ಕೆ ಸಾಯಣರೂ ಸ್ಕಂದಸ್ವಾಮಿಗಳೂ ಬೇರೆಬೇರೆಯಾದ ಅರ್ಥವನ್ನು ಉಲ್ಲೇಖಿಸಿರುವರು ಅಗ್ನಿಯು ತನ್ನ ಮುಂದೆ ಇರುವವರನ್ನು ತಂದೆಯು ತನ್ನ ಮಕ್ಕಳನ್ನು ರಕ್ಷಿಸುವ ಹಾಗೆ ಕಾಪಾಡುತ್ತಿರುವನು. ಆದ್ದರಿಂದ ತಂದೆಯ ಮನೆಯಲ್ಲಿರುವ ಮಕ್ಕಳ ಹಾಗೆ **ಶರ್ಮಸದಃ** ಸುಖದಿಂದ ಕೂಡಿದವರಾಗಿರುವರೆಂದು ಅಗ್ನಿಯನ್ನು ಸೇವಿಸುವರ ವಿಷಯದಲ್ಲಿ ಅಗ್ನಿಗೆ ಇರುವ ಪ್ರೀತಿಯು ವ್ಯಕ್ತವಾಗುತ್ತದೆ. ಈ ಪ್ರೀತಿಯು ತಂದೆಗೆ ತನ್ನ ಮಕ್ಕಳ ವಿಷಯದಲ್ಲಿ ಇರುವ ಪ್ರೀತಿಯಂತೆ ಇರುವುದೆಂದು ತಾತ್ಪರ್ಯವು. (ಸಾ. ಭಾ.)

**ಪುರಸ್ಸದಃ—ಸೇನಾಯಾಃ ಅಗ್ರತೋ ವ್ಯವಸ್ಥಾತಾರಃ । ಶರ್ಮ—ಸಂಗ್ರಾಮಂ ಯಜ್ಞಸುಖಂ ತದರ್ಥಂ ಸೀದಂತೀತಿ ಶರ್ಮಸದಃ ಯಥಾ ಚ ಶರ್ಮಸದೋ ಪುರಸ್ಸದಃ ನ ವೀರಾಃ ಶತ್ರೂನಭಿಭವಿತಾರಃ ತದ್ವದಭಿಭವಿತೇತ್ಯರ್ಥಃ ।** ಸೇನೆಯ ಮುಂಭಾಗದಲ್ಲಿ ಶಿಸ್ತಿನಿಂದ ಇರುವ ವೀರ (ಶೂರ) ರಾದ ಜನರು ಯುದ್ಧವೆಂಬ ಯಜ್ಞದಿಂದ ಉಂಟಾಗುವ ಸುಖವನ್ನು ಅನುಭವಿಸುವದಕ್ಕಾಗಿ ಸಿದ್ಧರಾಗಿ ಶತ್ರುಗಳನ್ನು ತಿರಸ್ಕರಿಸುವಂತೆ, ಅಗ್ನಿಯು ಯಜ್ಞದಿಂದ ಉಂಟಾಗುವ ಸುಖವನ್ನು ತಾನೂ ಅನುಭವಿಸುತ್ತಾ ಯಜ್ಞಮಾಡುವವರಿಗೂ ಉಂಟುಮಾಡುವನು ಮತ್ತು ಶತ್ರುಗಳನ್ನು ತಿರಸ್ಕಾರಮಾಡುವನು. ಮತ್ತು ತಿರಸ್ಕಾರಮಾಡಿಸುವನು ಎಂದು ಸ್ಕಂದಸ್ವಾಮಿಗಳು ವಿವರಿಸಿರುತ್ತಾರೆ.

**ಅನವದ್ಯಾ ಪತಿಜುಷ್ಟೇವ ನಾರೀ**-- **ಪತಿಜುಷ್ಟಾ ಪತಿವ್ರತಾ** ಪತಿಯಿಂದ ಕೂಡಿದವಳು. ಪತಿವ್ರತೆಯು, ಪರಿಶುದ್ಧಳು. ಹೀಗೆಯೇ ಅಗ್ನಿಯೂ ಪರಿಶುದ್ಧನು ಎಂದು ಸಾಯಣರ ವಿವರಣೆಯು. **ಅನವದ್ಯಾ**-- **ರೂಪವತೀ**—**ಭರ್ತೃಸೇವಿತಾ ನಾರೀ ಶೋಭತೇ ನಿತ್ಯಪ್ರೀತಿಯುಕ್ತಾ ವಾ ತದ್ವತ್ ಶೋಭತೇ ನಿತ್ಯಪ್ರೀತಿಯುಕ್ತೋ ವಾ ।** ರೂಪವತಿಯಾಗಿರುವ (ಸೌಂದರ್ಯವತಿಯಾದ) ಸ್ತ್ರೀಯು ಪತಿಯ ಸೇವೆಯನ್ನು ಮಾಡುತ್ತಾ ಪತಿಯ ಪ್ರೀತಿಗೆ ಪಾತ್ರಳಾಗಿ ಕಾಂತಿಯುಳ್ಳವಳಾಗಿ ಶೋಭಿಸುವಂತೆ, ಅಗ್ನಿಯೂ ರೂಪವತ್ತ್ವ, ನಿತ್ಯಪ್ರೀತಿಯುಕ್ತತ್ವ ರೂಪ ಧರ್ಮವುಳ್ಳವನಾಗಿ ಶೋಭಿಸುತ್ತಿರುವನು ಎಂದು ಸ್ಕಂದಸ್ವಾಮಿಗಳು ವ್ಯಾಖ್ಯಾನವನ್ನು ಮಾಡಿರುತ್ತಾರೆ.

**ವಿಶ್ವಧಾಯಾಃ**–**ಧೇಟ್ ಪಾನೇ। ಸರ್ವಾಹುತಿಲಕ್ಷಣಂ ಆಜ್ಯಾದಿಪೇಯಂ ಯಸ್ಯ ಸಃ। ಸರ್ವಾಸಾಂ ಆಹುತೀನಾಂ ಪಾತಾ।** ಧೇಟ್ ಎಂಬ ಧಾತುವಿನಿಂದ ಧಾಯ ಎಂಬ ಶಬ್ದವು ನಿಷ್ಪನ್ನವಾಗಿರುವುದು. ಧಾಯಾ ಎಂಬ ಶಬ್ದಕ್ಕೆ ಧಾರಕನು ಎಂದು ಅರ್ಥಮಾಡಿ ಎಲ್ಲವನ್ನೂ ಅಗ್ನಿಯು ಧರಿಸಿರುವನೆಂದು ಸಾಯಣರೂ, **ಧಾಯಾ** ಎಂಬ ಶಬ್ದವು ಪಾನಮಾಡುವುದಕ್ಕೆ ಅರ್ಹವಾದ ಪೇಯದ್ರವ್ಯವೆಂದು (ಕುಡಿಯುವುದಕ್ಕೆ ಯೋಗ್ಯವಾದ ವಸ್ತುವು, ಹಾಲು ಮುಂತಾದವು) ಅರ್ಥಮಾಡಿ ಅಗ್ನಿಯು ಆಜ್ಯವೇ ಮೊದಲಾದ ದ್ರವರೂಪವಾಗಿರುವ ಆಹುತಿಗಳೆಲ್ಲವನ್ನೂ ಪಾನ ಮಾಡುವವನೆಂದೂ ಸ್ಕಂದಸ್ವಾಮಿಗಳೂ ವಿವರಿಸಿರುವರು

**ವೀರಾಃ**--**ವೀರವಂತಃ ಕಲ್ಯಾಣವೀರಾ ವಾ । ವೀರೋ ವೀರಯತ್ಯಮಿತ್ರಾನ್ ವೇತೇರ್ವಾ ಗತಿಕರ್ಮಣಃ ವೀರಯತೇರ್ವಾ।** ವೀರ ಎಂಬ ಪದವು ಅನೇಕ ವಿಧವಾಗಿ ಶತ್ರುಗಳನ್ನು ನಾಶಮಾಡುವವನು ಅಥವಾ ಶತ್ರುಗಳಿಗೆ ಅಭಿಮುಖವಾಗಿ ಹೋಗುವವನು ಎಂಬ ಅರ್ಥಬೋಧಕವಾಗಿರುವುದು

॥ ವ್ಯಾಕರಣಪ್ರಕ್ರಿಯಾ ॥

**ವಿಶ್ವಧಾಯಾಃ**—ಡುಧಾಞ್ ಧಾರಣಪೋಷಣಯೋಃ ಧಾತು. **ಗತಕಾರಕಯೋರಪಿ ಪೂರ್ವಪದ ಪ್ರಕೃತಿಸ್ವರತ್ವಂ ಚ** (ಉ. ಸೂ ೪-೬೬೬) ಎಂಬ ಉಣಾದಿ ಸೂತ್ರದಿಂದ ಕಾರಕಪೂರ್ವವಾದ ಈ ಧಾತುವಿಗೆ **ವಹಿಹಾಧಾಞ್ಭ್ಯಶ್ಛಂದಸಿ** (ಉ. ಸೂ ೪-೬೬೦) ಎಂಬುದರಿಂದ ಅಸುನ್ ಪ್ರತ್ಯಯ **ವಸೇರ್ಣಿತ್** (ಉ ಸೂ ೪-೪೫೭) ಎಂಬುದರಿಂದ ಣಿತ್ ಎಂದು ಅನುವೃತ್ತವಾಗುವುದರಿಂದ ಅಸುನಿಗೆ ಣಿದ್ವದ್ಭಾವ ಬರುವುದರಿಂದ **ಆತೋ-ಯುಕ್ಚಿಣ್ಕೃತೋಃ** (ಪಾ ಸೂ ೭-೩-೩೩) ಎಂಬುದರಿಂದ ಆದಂತವಾದ ಈ ಧಾತುವಿಗೆ ಯುಕಾಗಮ **ಆದ್ಯಂತೌಟಕಿತೌ** ಎಂಬ ಪರಿಭಾಷೆಯಿಂದ ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ, ವಿಶ್ವಧಾಯಸ್ ಶಬ್ದ ವಾಗುತ್ತದೆ ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯಚಾಽಧಾತೋಃ** ಎಂಬುದರಿಂದ ಉಪಧಾದೀರ್ಘ **ಹಲ್ಙ್ಯಾಭ್ಯೋ**—ಸೂತ್ರದಿಂದ ಸುಲೋಪ. ಸಕಾರಕ್ಕೆ ರುತ್ವವಿಸರ್ಗ. ಮರದ್ವೃಧಾದಿಯಲ್ಲಿ ಸೇರಿರುವುದರಿಂದ ಪೂರ್ವಪದಾಂತೋದಾತ್ತ ಸ್ವರ ಬರುತ್ತದೆ

**ಉಪಕ್ಷೇತಿ**—ಉಪ ಉಪಸರ್ಗ ಕ್ಷಿ ನಿವಾಸ ಗತ್ಯೋಃ ಧಾತು ಇದಕ್ಕೆ ಲಟ್ ಪ್ರಥಮಪುರುಷ ಏಕವಚನ ದಲ್ಲಿ ತಿಪ್ ಪ್ರತ್ಯಯ **ಬಹುಲಂ ಛಂದಸಿ**—ಎಂಬುದರಿಂದ ವಿಕರಣಕ್ಕೆ ಲುಕ್ ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕ್ಕಿಗೆ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ **ಯಃ** ಎಂದು ಹಿಂದೆ ಯಚ್ಛಬ್ದದ ಯೋಗ-ವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರಪ್ರತಿಷೇಧ ಬರುತ್ತದೆ ತಿಪ್ ಪಿತ್ತಾದುದರಿಂದ ಅನುದಾತ್ತ. ಧಾತುಸ್ವರ ಉಳಿಯುತ್ತದೆ ಉದಾತ್ತವುಳ್ಳ ತಿಙಂತವು ಪರವಾದುದರಿಂದ **ತಿಙಿಚೋದಾತ್ತವತಿ** (ಪಾ ಸೂ ೮-೧-೭೧) ಎಂಬುದರಿಂದ ಗತಿಗೆ (ಉಪ) ನಿಘಾತಸ್ವರ ಬರುತ್ತದೆ

**ಹಿತಮಿತ್ರಃ**—**ಹಿತಾನಿ ಮಿತ್ರಾಣಿ ಯಸ್ಯ ಹಿತಮಿತ್ರಃ. ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ

**ಪುರಃಸದಃ**—ಪುರಃ ಸೀದಂತಿ ಇತಿ ಪುರಃಸದಃ. ಷದ್ಲೃ ವಿಶರಣಗತ್ಯವಸಾದನೇಷು, ಧಾತು. ಇದಕ್ಕೆ **ಕ್ವಿಪ್ ಚ** ಎಂಬುದರಿಂದ ಕ್ವಿಪ್‌ಪ್ರತ್ಯಯ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಹೀಗೆಯೇ **ಕರ್ಮಸದಃ** ಎಂಬಲ್ಲಿಯೂ ಪ್ರಕ್ರಿಯೆ

**ಅನವದ್ಯಾ**—ನ ವಿದ್ಯತೇ ಅವದ್ಯಂ ಯಸ್ಯಾಃ ಸಾ. ಅನವದ್ಯಾ. ಬಹುವ್ರೀಹಿಸಮಾಸ **ನಞ್ ಸುಭ್ಯಾಮ್** ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ ಆಬಂತದ ಪರದಲ್ಲಿರುವುದರಿಂದ **ಹಲ್‌ಙ್ಯಾಭ್ಯೋ**—ಸೂತ್ರದಿಂದ ಪ್ರಥಮಾ ಸುವಿಗೆ ಲೋಪ.

**ಪತಿಜುಷ್ಟೇವ**—ಪತ್ಯಾ ಜುಷ್ಟಾ ಸೇವಿತಾ ಪತಿಜುಷ್ಟಾ ತೃತೀಯಾ ತತ್ಪುರುಷ ಸಮಾಸ. **ತೃತೀಯಾ-ಕರ್ಮಣಿ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಸೇವನಾರ್ಥಕ (ಸ್ವೀಕಾರ) ಜುಷ್ ಧಾತುವಿಗೆ ಕ್ತ ಪ್ರತ್ಯಯ ಮಾಡಿದಾಗ ಷ್ಟುತ್ವದಿಂದ ಜುಷ್ಟಾ ಎಂದು ರೂಪವಾಗಿದೆ.

**ನಾರೀ—ನೃ ನರಯೋರ್ವೃದ್ಧಿಶ್ಚ** (ಪಾ ಸೂ. ೪-೧-೭೩ ಗ. ಸೂ.) ಎಂದು ಶಾರ್ಙ್ಗರವಾದಿ ಗಣದಲ್ಲಿ ಪಠಿತವಾದುದರಿಂದ ಙೀನ್ ಪ್ರತ್ಯಯ ಸ್ತ್ರೀತ್ವದಲ್ಲಿ ಬರುತ್ತದೆ ವೃದ್ಧಿಯು ಗಣಸೂತ್ರದಿಂದ ಬರುವುದರಿಂದ ನಾರೀ ಎಂದು ರೂಪವಾಗುತ್ತದೆ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಇದು ಆದ್ಯುದಾತ್ತವಾಗುತ್ತದೆ.॥೩॥



॥ ಸಂಹಿತಾಪಾಠಃ ॥

ತಂ ತ್ವಾ ನರೋ ದಮ ಆ ನಿತ್ಯಮಿದ್ಧಮಗ್ನೇ ಸಚಂತ ಕ್ಷಿತಿಷು ಧ್ರುವಾಸು ।
ಅಧಿ ದ್ಯುಮ್ನಂ ನಿ ದಧುರ್ಭೂರ್ಯಸ್ಮಿನ್ಭವಾ ವಿಶ್ವಾಯುರ್ಧರುಣೋ ರಯೀಣಾಂ ॥ ೪ ॥

॥ ಪದಪಾಠಃ ॥

ತಂ । ತ್ವಾ । ನರಃ । ದಮೇ । ಆ । ನಿತ್ಯಂ । ಇದ್ಧಂ । ಅಗ್ನೇ । ಸಚಂತ । ಕ್ಷಿತಿಷು । ಧ್ರುವಾಸು ।

ಅಧಿ । ದ್ಯುಮ್ನಂ । ನಿ । ದಧುಃ । ಭೂರಿ । ಅಸ್ಮಿನ್ । ಭವ । ವಿಶ್ವಽಆಯುಃ । ಧರುಣಃ । ರಯೀಣಾಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತಂ ತ್ವಾ ಪೂರ್ವೋಕ್ತಗುಣವಿಶಿಷ್ಟಂ ತ್ವಾಂ ನರೋ ಯಜ್ಞಸ್ಯ ನೇತಾರೋ ಯಜಮಾನಾ ಧ್ರುವಾಸು ಕ್ಷಿತಿಷು ನಿಶ್ಚಲಾಸು ಚಲನರಹಿತಾಸು ಭೂಮಿಷು । ನಿರುಪದ್ರವೇಷು ಗ್ರಾಮೇಷ್ವಿತ್ಯರ್ಥಃ । ದಮೇ ಸ್ವಕೀಯೇ ಯಜ್ಞಗೃಹೇ ನಿತ್ಯಮಿದ್ಧಮನವರತಂ ಸಮಿದ್ಭಿಃ ಪ್ರಜ್ವಲಿತಂ ಕೃತ್ವಾ ಆ ಸಚಂತ । ಅಭಿಮುಖ್ಯೇನ ಸೇವಂತೇ । ಕಿಂಚಾಸ್ಮಿನ್ನಗ್ನೌ ದ್ಯುಮ್ನಂ ಹವಿರ್ಲಕ್ಷಣಮನ್ನಂ ಭೂರಿ ಚರುಪುರೋಡಾಶಾದಿರೂಪೇಣ ಬಹುವಿಧಮಧಿ ನಿ ದಧುಃ । ಸ್ಥಾಪಿತವಂತಃ । ಏವಂಗುಣವಿಶಿಷ್ಟೋ ಯೋಽಗ್ನಿಃ ಸ ತ್ವಂ ವಿಶ್ವಾಯುರುಕ್ತಪ್ರಕಾರೇಣ ಸರ್ವಾನ್ನೋ ಭೂತ್ವಾ ರಯೀಣಾಂ ಧನಾನಾಂ ಧರುಣೋ ಧಾರಯಿತಾ ಭವ । ಅಸ್ಮಭ್ಯಂ ದಾತುಂ ಧನಾನಿ ಧಾರಯೇತ್ಯರ್ಥಃ ॥ ಸಚಂತ । ಷಚ ಸಮವಾಯೇ । ಛಾಂದಸೋ ವರ್ತಮಾನೇ ಲಙ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಭವ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ಧರುಣಃ ಧಾರೇರ್ನಿಲುಕ್ಚೇತ್ಯುನಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತಂ ತ್ವಾ**-ಆ (ಪೂರ್ವೋಕ್ತ ಗುಣವಿಶಿಷ್ಟನಾದ) ನಿನ್ನನ್ನು । **ನರಃ**-(ಯಾಗದ ಮುಖಂಡರಾದ) ಮನುಷ್ಯರು । **ಧ್ರುವಾಸು ಕ್ಷಿತಿಷು**—ಅಚಲವಾದ (ನಿರುಪದ್ರವವಾದ) ಪ್ರದೇಶಗಳಲ್ಲಿ । **ದಮೇ**—ಸ್ವಕೀಯವಾದ ಯಜ್ಞಗೃಹದಲ್ಲಿ । **ನಿತ್ಯಂ**—ಪ್ರತಿದಿನವೂ । **ಇದ್ಧಂ**—(ಸಮಿಧಾದಿಗಳಿಂದ) ಜ್ವಲಿತನನ್ನಾಗಿ । **ಆ ಸಚಂತ**—ಅಭಿಮುಖೀಕರಿಸಿಕೊಂಡು ಸೇವಿಸುತ್ತಾರೆ । **ಅಸ್ಮಿನ್**—ಅಗ್ನಿಯಲ್ಲಿ । **ದ್ಯುಮ್ನಂ**—ಹವಿರ್ಲಕ್ಷಣವಾದ ಅನ್ನವನ್ನು । **ಭೂರಿ**—ಹೆಚ್ಚಾಗಿ । **ಅಧಿ ನಿ ದಧುಃ**—ಸ್ಥಾಪಿಸಿದರು । **ವಿಶ್ವಾಯುಃ**—(ಅಂತಹ ನೀನು) ಎಲ್ಲವೂ ಅನ್ನವಾಗಿ ಉಳ್ಳ (ನವನಾಗಿ) । **ರಯೀಣಾಂ**- ಧನದ । **ಧರುಣಃ**—ಧಾರಕನಾಗಿ ಆಗು ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ಹಿಂದೆ ವರ್ಣಿಸಿರುವ ನಿನ್ನನ್ನು ಯಾಗಕರ್ತೃಗಳು ನಿರುಪದ್ರವವಾದ ಪ್ರದೇಶದಲ್ಲಿರುವ ತಮ್ಮ ತಮ್ಮ ಯಾಗಶಾಲೆಗಳಲ್ಲಿ ಪ್ರತಿನಿತ್ಯವೂ ಸಮಿಧಾದಿಗಳಿಂದ ಪ್ರಜ್ವಲಿತನನ್ನಾಗಿ ಮಾಡಿ, ಹವಿರಾದಿಗಳನ್ನು ಯಥೇಚ್ಛವಾಗಿ ಅರ್ಪಿಸುತ್ತಾರೆ ಅಂತಹ ಸರ್ವಭಕ್ಷಕನಾದ ನೀನು (ನಮಗೆಲ್ಲಾ) ಧನವನ್ನು ಅನುಗ್ರಹಿಸು.

English Translation

Such as you are, Agni, men preserve you constantly kindled in their dwellings, in secure places, and offer upon you abundant (sacrificial) food; you in whom is all existence, are the bearer of riches (for advantage).

॥ ವಿಶೇಷವಿಷಯಗಳು ॥

**ಧ್ರುವಾಸು ಕ್ಷಿತಿಷು—ನಿರುಪದ್ರವೇಷು ಗ್ರಾಮೇಷ್ವಿತ್ಯರ್ಥಃ । ಗೌಃ ಗ್ಮಾ** ಎಂಬ ಪೃಥಿವೀನಾಮಗಳಲ್ಲಿ ಕ್ಷಿತಿ ಶಬ್ದವು (ನಿ ೧-೧) ಉಕ್ತವಾಗಿರುವುದರಿಂದ ಭೂಮಿ ಎಂದು ಅರ್ಥವು **ಕ್ಷಿತಿಶಬ್ದಕ್ಕೆ ಸ್ಥಿರ** ಎಂಬ ಅರ್ಥವುಳ್ಳ ಧ್ರುವ ಶಬ್ದವು ವಿಶೇಷಣವಾಗಿರುವುದರಿಂದ ಚಲನರಹಿತವಾದ ಭೂಮಿಯು ಎಂದು ಅರ್ಥವನ್ನು ಸಾಯಣರು ವಿವರಿಸಿರುವರು ಯಾವಾಗಲೂ ಸ್ಥಿರವಾಗಿರುವ ಭೂಮಿಗೆ ಧ್ರುವ ಪದವನ್ನು ವಿಶೇಷಣಮಾಡಿರುವುದು ಅರ್ಥಾಂತರ ಪ್ರತ್ಯಾಯಕವಾಗಿ ಉಪಲಕ್ಷಣದ ರೀತಿಯಿಂದ ಪ್ರಾಣಿಗಳು ವಾಸಮಾಡುವ ಪ್ರದೇಶವೆಂದು ಅರ್ಥವಾಗುವುದು. ಈ ಪ್ರದೇಶವು ಯಾವ ವಿಧವಾದ ತೊಂದರೆಗೂ ಆಸ್ಪದವಿಲ್ಲದಿರುವ ಗ್ರಾಮವಾಗಿರುವುದು ಎಂದು ತಾತ್ಪರ್ಯವು

ಸ್ಕಂದಸ್ವಾಮಿಗಳು—**ಕ್ಷಿತಿಷು ಧ್ರುವಾಸು । ಕ್ಷಿತಿರಿತಿ ಪೃಥಿವೀನಾಮ । ಇಹ ಚ ಅಥಾಪಿ ತದ್ಧಿತೇನ ಕೃತ್ಸ್ನವನ್ನಿಗಮಾ ಭವಂತಿ** (ನಿ ೨-೫) **ಇತ್ಯೇವಂ ತದವಯವೇಷು ಪ್ರಯುಕ್ತಂ । ಪೃಥಿವ್ಯವಯವೇಷು ವೇದ್ಯಾಖ್ಯೇಷು ಧ್ರುವೇಷು ।**—ಯಾಸ್ಕರು "ನಾಮೈಕದೇಶವನ್ನು ಋಕ್ಕುಗಳಲ್ಲಿ ಪ್ರಯೋಗಮಾಡಿದ್ದರೂ ಸಂಪೂರ್ಣವಾಗಿ ಆಯಾಯ ನಾಮಗಳು ಉಕ್ತವಾಗಿರುವುವು" ಎಂದು ಹೇಳಿರುವುದರಿಂದ ಸಮಸ್ತವಾದ ಪೃಥಿವಿಯು ಇಲ್ಲಿ ಕ್ಷಿತಿಪದದಿಂದ ಉಪಸ್ಥಿತವಾದಾಗ್ಯೂ ಬಹುವಚನದಿಂದ ಭೂಮಿಯ ಅವಯವಗಳು ಎಂದು ಅರ್ಥವಾಗುವುದು ಯಜ್ಞದಲ್ಲಿ ಅಗ್ನಿಯನ್ನು ಹೋಮಮಾಡುವುದಕ್ಕಾಗಿ ಪ್ರತಿಷ್ಠೆಮಾಡುವ ವೇದಿಗಳೆಂದು—ಅರ್ಥವನ್ನು ಹೇಳುವರು

**ದಮೇ—ಗಯಃ ಕೃದರಃ ಮೊದಲಾದ** ಇಪ್ಪತ್ತೆರಡು **ಗೃಹ**ನಾಮಗಳಲ್ಲಿ (ನಿ. ೩-೪) **ದಮ**ಶಬ್ದವು ಉಕ್ತವಾಗಿರುವುದು. ಇಲ್ಲಿ ಅಗ್ನಿಯು ಯಾವಾಗಲೂ ಸಮಿತ್ತುಗಳಿಂದಲೂ ಹವಿಸ್ಸುಗಳಿಂದಲೂ ಪ್ರಜ್ವಲಿತನಾಗಿರುವ ಯಜ್ಞಗೃಹವೆಂದು ಅರ್ಥವು.

**ದ್ಯುಮ್ನಂ--ಚರುಪುರೋಡಾಶಾದಿಹವಿರ್ಲಕ್ಷಣಂ ಅನ್ನಂ ।** ಅಗ್ನಿಯಲ್ಲಿ ಹವಿರ್ಭಾಗಗಳಾಗಿ ಹೋಮಮಾಡುವ ಚರುಪುರೋಡಾಶವೇ ಮೊದಲಾದ ರೂಪದಿಂದ ಇರುವ ಅನ್ನವು ಎಂದು ಅರ್ಥವು ಯಾಸ್ಕರು **ದ್ಯುಮ್ನಂ**

**ದ್ಯೋತತೇರ್ಯಶೋ ವಾ ಅನ್ನಂ ವಾ** ಎಂದು **ದ್ಯುಮ್ನ** ಶಬ್ದವನ್ನು **ಅನ್ನಮೇವ ಭುಂಜಾನಸ್ಯ ದೀಪ್ತಿರ್ಭವತಿ** ಅನ್ನವೇ ತಿನ್ನುವವನಿಗೆ ಕಾಂತಿಯನ್ನು ಉಂಟುಮಾಡುವುದು ಮತ್ತು ಶತ್ರುಗಳನ್ನು ನಾಶಮಾಡಿದಾಗ ಯಶಸ್ಸೂ ಕೂಡ ಕಾಂತಿಯನ್ನು ಉಂಟುಮಾಡುವ ಸ್ವಭಾವವುಳ್ಳದ್ದಾಗಿರುವುದು ಎಂದು ಅರ್ಥವನ್ನು ವಿವರಿಸಿ ಅನ್ನ ಮತ್ತು ಯಶಸ್ಸುಗಳ ವಾಚಕವನ್ನಾಗಿ ಹೇಳಿರುವರು. **ಜಹಿ ವಧರ್ವನುಷೋ ಮರ್ತ್ಯಸ್ಯಾಸ್ಮೇ ದ್ಯುಮ್ನಮಧಿ ರತ್ನಂ ಚ ಧೇಹಿ** (ಋ ಸಂ ೭-೨೫-೩) ಎಂದು ಉದಾಹರಣೆಯನ್ನು (ನಿ ೨-೬) ಕೊಟ್ಟಿರುವರು.

**ಧರುಣಃ— ಧಾರಯಿತಾ** ಧರಿಸಿರುವವನು ಎಂದು ಸಾಯಣರ ಅರ್ಥವು ಧರುಣ ಶಬ್ದವು ನೂರೊಂದು ಉದಕನಾಮಗಳಲ್ಲಿ (ನಿ. ೨-೨೪) ಪಠಿತವಾಗಿರುವುದು. ಸ್ಕಂದಸ್ವಾಮಿಗಳು ಧರುಣ ಶಬ್ದವು **ಧೃ ಧಾರಣೇ ಅನ್ಯತ್ರ ಇಹ ತು ಸಾಮರ್ಥ್ಯಾದ್ದಾನವಚನಃ । ಧೃ ಧಾರಣೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿ ಧಾರಣವೆಂಬ ಅರ್ಥವನ್ನು ಬೇರೆಯ ಕಡೆಯಲ್ಲಿ ಬೋಧಿಸುವುದಾದರೂ, ಇಲ್ಲಿ ಪ್ರತಿಪಾದ್ಯವಾದ ವಸ್ತುಪ್ರಭಾವವನ್ನು ಪ್ರಕಾಶಮಾಡುವಕಾರಣ ದಾನರೂಪವಾದ ಅರ್ಥವನ್ನು ಬೋಧಿಸುವುದರಿಂದ ಅಗ್ನಿಯು **ರಯೀಣಾಂ ಧನಾನಾಂ ಧರುಣಃ ದಾತಾ** ಅಗ್ನಿಯು ಧನವನ್ನೂ ಕೊಡುವವನೆಂದು ಅರ್ಥವನ್ನು ವಿವರಿಸಿರುವರು

**ಭವ ವಿಶ್ವಾಯುಃ - ಸರ್ವಾನ್ನಃ ।** ಅಗ್ನಿಯು ಎಲ್ಲವನ್ನೂ ಅನ್ನವನ್ನು ತಿನ್ನುವಂತೆ ಭಕ್ಷಿಸುವವನು ಎಂದು ಸಾಯಣರು ಅರ್ಥವನ್ನು ವಿವರಿಸಿರುವರು. ಆಯುಶ್ಶಬ್ದವು ಲೋಕದಲ್ಲಿಯೂ, ವೇದಲ್ಲಿಯೂ ಆಯುಸ್ಸು ಜೀವಿಸಿರುವ ಕಾಲವೆಂದು ರೂಢಿಯಾದ ಅರ್ಥವನ್ನು ಬೋಧಿಸುವುದು **ಪ್ರಣ ಆಯೂಂಷಿ ತಾರಿಷತ್** (ಋ ಸಂ ೧೦-೧೮೬-೧) (ನಿ. ೧೦-೩೭) ಎಂದು ಶ್ರುತಿಯಲ್ಲಿಯೂ ಆಯುರ್ಬೋಧಕವಾಗಿರುವುದು ಆದರೆ ಇಲ್ಲಿ ಇಪ್ಪತ್ತೆಂಟು ಅನ್ನನಾಮಗಳಲ್ಲಿ ಉಕ್ತವಾಗಿರುವುದರಿಂದ (ನಿ ೩-೯) ಅನ್ನವೆಂದು ಅರ್ಥವು ಸ್ಕಂದಸ್ವಾಮಿಗಳು **ಸರ್ವಾನ್ನಸಂಬದ್ಧಃ-** ಹವಿರ್ಭೋಕ್ತಾ ಎಲ್ಲಾ ವಿಧವಾದ ಅನ್ನಗಳನ್ನೂ ಹವಿಸ್ಸಿನ ರೂಪದಿಂದ ಭಕ್ಷಿಸುವವನು ಮತ್ತು **ಸರ್ವೇಷಾಮನ್ನಾನಾಂ ದಾತಾ** ಅನ್ನವೆಲ್ಲವನ್ನೂ ಕೊಡುವವನು ಎಂದು ಅರ್ಥವನ್ನು ವಿವರಿಸಿರುವರು

॥ ವ್ಯಾಕರಣಪ್ರಕ್ರಿಯಾ ॥

**ನಿತ್ಯಮ್— ತ್ಯಬ್‌ನೇರ್ಧ್ರುವ ಇತಿ ವಕ್ತವ್ಯಮ್** (ವಾ ೨೭೮೦) ಎಂಬ ವಚನದಿಂದ ನಿ ಎಂಬ ಅವ್ಯಯಕ್ಕೆ ನಿಶ್ಚಲಾರ್ಥದಲ್ಲಿ ತ್ಯಪ್ ಪ್ರತ್ಯಯ ಪಿತ್ತಾದುದರಿಂದ ಪ್ರತ್ಯಯವು ಅನುದಾತ್ತವಾಗುತ್ತದೆ

**ಇದ್ಧಮ್— ಞಿ ಇಂಧೀ ದೀಪ್ತಿದೇವನಯೋಃ** ಧಾತು ಇದಕ್ಕೆ ಕ್ತ ಪ್ರತ್ಯಯ ಪರವಾದಾಗ **ಅನಿದಿತಾಂ ಹಲ ಉಪಧಾ**— ಎಂಬುದರಿಂದ ಉಪಧಾ ನಕಾರ ಲೋಪ **ಝಷಸ್ತಥೋರ್ಧೋಽಧಃ** ಎಂಬುದರಿಂದ ಧಕಾರದ ಪರದಲ್ಲಿರುವ ತಕಾರಕ್ಕೆ ಧಕಾರಾದೇಶ **ಝಲಾಂ ಜಶ್ ಝಶಿ** ಎಂಬುದರಿಂದ ಪೂರ್ವಧಕಾರಕ್ಕೆ ಜಸ್ತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗ ತ್ತದೆ

**ಅಗ್ನೇ**— ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ ಸೂ ೬-೧-೧೯೮) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ

**ಸಚಂತ—**ಷಚ ಸಮವಾಯೇ ಧಾತು. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್ಲಙ್ಲಿಟಃ** ಎಂಬುದರಿಂದ ಲಙ್. ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯಕ್ಕೆ **ಝೋಽಂತಃ** ಎಂಬುದರಿಂದ ಅಂತಾದೇಶ. ಧಾತ್ವಾದಿಗೆ ಸಕಾರಾದೇಶ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ **ಆಮಂತ್ರಿತಂ ಪೂರ್ವಮವಿದ್ಯಮಾನವತ್** ಎಂಬುದರಿಂದ ಪೂರ್ವದಲ್ಲಿರುವ ಅಗ್ನೇ ಎಂಬ ಆಮಂತ್ರಿತಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ ಪಾದಾದಿಯಲ್ಲಿ ಬಂದಂತಾದುದರಿಂದ ನಿಘಾತಸ್ವರ ಬರುವುದಿಲ್ಲ ಅದುಪದೇಶದ ಪರದಲ್ಲಿ ಬಂದುದರಿಂದ ಲಸಾರ್ವಧಾತುಕವು (ಅಂತ) **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ

**ಕ್ಷಿತಿಷು—**ಕ್ಷಿ ನಿವಾಸಗತ್ಯೋಃ ಧಾತು ಇದಕ್ಕೆ **ಕ್ತಿಚ್ಕ್ತೌ ಚ ಸಂಜ್ಞಾಯಾಮ್** ಎಂಬುದರಿಂದ ಕ್ತಿಚ್ ಪ್ರತ್ಯಯ. **ಚಿತಃ** ಎಂಬುದರಿಂದ ಅಂತೋದಾತ್ತ ಸ್ವರ ಬರುತ್ತದೆ. ಸಪ್ತಮೀ ಬಹುವಚನಾಂತರೂಪ

**ದಧುಃ**--ಡುಧಾಞ್ ಧಾರಣಪೋಷಣಯೋಃ ಧಾತು ಲಿಟ್ ಪ್ರಥಮಪುರುಷ ಬಹುವಚನರೂಪ. ತಿಙಂತನಿಘಾತಸ್ವರ ಬರುತ್ತದೆ

**ಭವ—**ಭೂ ಸತ್ತಾಯಾಂ ಧಾತು ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ಪಿಗೆ ಹಿ ಆದೇಶ ಬಂದಾಗ **ಅತೋಹೇಃ** ಎಂಬುದರಿಂದ ಹಿಗೆ ಲೋಪ **ದ್ವ್ಯಚೋಽತಸ್ತಿಙಃ** (ಪಾ ಸೂ ೬-೩-೧೩೫) ಎಂಬುದರಿಂದ ಹಿಲೋಪವಾದಾಗ ದ್ವ್ಯಚ್ಕವಾದುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ

**ವಿಶ್ವಾಯುಃ**--ವಿಶ್ವಂ ಆಯುಃ ಯಸ್ಯ ಸಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ

**ಧರುಣಃ**—ಧೃಙ್ (ಅವಸ್ಥಾನೇ) ಧಾರಣೇ. ಧಾತು ಇದಕ್ಕೆ ಪ್ರಯೋಜಕ ವ್ಯಾಪಾರ ತೋರುವಾಗ **ಹೇತುಮತಿ ಚ** ಸೂತ್ರದಿಂದ ಣಿಚ್. ಣಿಜಂತದ ಮೇಲೆ **ಧಾರೇರ್ಣಿಲುಕ್ ಚ** ಎಂಬುದರಿಂದ ಉನ ಪ್ರತ್ಯಯ ತತ್ಸಂನಿಯೋಗದಿಂದ ಣಿಗೆ ಲುಕ್ ಆದುದರಿಂದ ಪ್ರತ್ಯಯ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ **ಉರಣ್ರಪರಃ** ಪರಿಭಾಷೆಯಿಂದ ರಪರವಾಗಿ ಬರುವುದರಿಂದ ರೇಫನಿಮಿತ್ತವಾಗಿ **ಅಟ್ಕುಪ್ವಾಙ್** ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ.

**ರಯಿಣಾಂ—ನಾಮನ್ಯತರಸ್ಯಾಂ** ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ ॥ ೪ ॥

॥ ಸಂಹಿತಾಪಾಠಃ ॥

ವಿ ಪೃಕ್ಷೋ ಅಗ್ನೇ ಮಘವಾನೋ ಅಶ್ಯುರ್ವಿ ಸೂರಯೋ
ದದತೋ ವಿಶ್ವಮಾಯುಃ ।
ಸನೇಮ ವಾಜಂ ಸಮಿಥೇಷ್ವರ್ಯೋ ಭಾಗಂ ದೇವೇಷು ಶ್ರವಸೇ
ದಧಾನಾಃ ॥ ೫ ॥

॥ ಪದಪಾಠಃ ॥

ವಿ । ಪೃಕ್ಷಃ । ಅಗ್ನೇ । ಮಘऽವಾನಃ । ಅಶ್ಯುಃ । ವಿ । ಸೂರಯಃ । ದದತಃ ।
ವಿಶ್ವಂ । ಆಯುಃ ।
ಸನೇಮ । ವಾಜಂ । ಸಂऽಇಥೇಷು । ಅರ್ಯಃ । ಭಾಗಂ । ದೇವೇಷು । ಶ್ರವಸೇ ।
ದಧಾನಾಃ ॥ ೫ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಮಘವಾನೋ ಹವಿರ್ಲಕ್ಷಣೇನ ಧನೇನ ಯುಕ್ತಾ ಯಜಮಾನಾಃ ಪೃಕ್ಷೋಽನ್ನಾನಿ ವ್ಯಶ್ಯುಃ । ವ್ಯಾಪ್ನುವಂತು । ತ್ವಯಾನುಗೃಹೀತಾಃ ಸರ್ವಾಣ್ಯನ್ನಾನಿ ಲಭಂತಾಂ । ಯೇ ಚ ಸೂರಯೋ ವಿದ್ವಾಂಸಸ್ತ್ವಾಂ ಸ್ತುವಂತಿ । ದದತೋ ಯೇ ಚ ತುಭ್ಯಂ ಹವೀಂಷಿ ದದತಃ ಪ್ರಯಚ್ಛಂತೋ ವರ್ತಂತೇ ತೇ ಸರ್ವೇ ವಿಶ್ವಮಾಯುಃ ಸರ್ವಂ ಜೀವಿತಂ ವ್ಯಶ್ಯುಃ । ವ್ಯಾಪ್ನುವಂತು । ವಯಂ ಚ ಸಮಿಥೇಷು ಸಂಗ್ರಾಮೇಷ್ವರ್ಯೋಽರೇಃ ಶತ್ರೋಃ ಸಂಬಂಧಿನಂ ವಾಜಮನ್ನಂ ಸನೇಮ । ತ್ವದನುಗ್ರಹಾತ್ಸಂಭಜೇಮಹಿ । ತದನಂತರಂ ದೇವೇಷು ತ್ವತ್ಪ್ರಮುಖೇಷ್ವಿಂದ್ರಾದಿಷು ಶ್ರವಸೇ ಯಶಸೇ ತದರ್ಥಂ ಭಾಗಂ ಹವಿರ್ಭಾಗಂ ದಧಾನಾಃ ಸ್ಥಾಪಯಂತೋ ಭೂಯಾಸ್ಮೇತಿ ಶೇಷಃ ॥ ಅಶ್ಯುಃ । ಅಶೂ ವ್ಯಾಪ್ತೌ । ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ದದತಃ । ನಾಭ್ಯಸ್ತಾಚ್ಛತುರಿತಿ ನುಮಾಗಮಪ್ರತಿಷೇಧಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಸನೇಮ । ವನ ಷಣ ಸಂಭಕ್ತೌ ।

**ವ್ಯತ್ಯಯೇನ ಶಃ । ಅರ್ಯಃ । ಅರಿಶಬ್ದಾತ್ಪಷ್ಠ್ಯೇಕವಚನೇ ಜಸಾದಿಷು ಚ್ಛಂದಸಿ ವಾ ವಚನಮಿತಿ ಘೇರ್ಙಿತೀತಿ ಗುಣಾಭಾವೇ ಯಣಾದೇಶಃ । ಅರಿಶಬ್ದ ಅಚ ಇರಿತೀಪ್ರತ್ಯಯಾಂತೋಽಂತೋದಾತ್ತಃ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಭಾಗಂ । ಕರ್ಷಾತ್ವತ ಇತ್ಯಂತೋದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಅಗ್ನೇ**— ಎಲೈ ಅಗ್ನಿಯೆ । **ಮಘವಾನಃ**—(ಹವಿರ್ಲಕ್ಷಣವಾದ) ಧನಯುಕ್ತರಾದವರು (ಯಜಮಾನರು) **ಪೃಕ್ಷಃ**—ಅನ್ನಗಳನ್ನು । **ವಿ ಅಶ್ಯುಃ**—ವ್ಯಾಪಿಸಲಿ (ಪಡೆಯಲಿ) । **ಸೂರಯಃ**—(ನಿನ್ನನ್ನು) ಸ್ತುತಿಸುವ (ವಿದ್ವಾಂಸರೂ) । **ದದತಃ**—(ನಿನಗೆ ಹವಿಸ್ಸನ್ನು) ಅರ್ಪಿಸುವವರೂ । **ವಿಶ್ವಮಾಯುಃ**—(ಅವರ) ಜೀವಿತಕಾಲ ಪೂರ್ಣವಾಗಿ । **ವಿ ಅಶ್ಯುಃ**—ಜಿ ವಿಸಲಿ । **ಸಮಿಥೇಷು**—ಸಂಗ್ರಾಮಗಳಲ್ಲಿ । **ಅರ್ಯಃ**—ಶತ್ರುಸಂಬಂಧವಾದ । **ವಾಜಂ**—ಅನ್ನವನ್ನು । **ಸನೇಮ**—(ನಾವು) ಹೊಂದೋಣ (ಅನಂತರ) । **ದೇವೇಷು**—ನಿನ್ನ ಆದಿಯಾದ ಇಂದ್ರಾದಿಗಳಲ್ಲಿ । **ಶ್ರವಸೇ**—ಯಶಸ್ಸಿಗಾಗಿ । **ಭಾಗಂ**—ಹವಿರ್ಭಾಗವನ್ನು । **ದಧಾನಾಃ**—ಸ್ಥಾಪಿಸುವವರಾಗಿ (ಅರ್ಪಿಸುವವರಾಗಿ) ಆಗೋಣ.

॥ ಭಾವಾರ್ಥ ॥

ಎಲೈ ಅಗ್ನಿಯೆ, ಶ್ರೀಮಂತರಾದ ನಿನ್ನ ಆರಾಧಕರು ಹೆಚ್ಚಾಗಿ ಆಹಾರವನ್ನು ಪಡೆಯಲಿ, (ನಿನ್ನನ್ನು ಸ್ತುತಿಸುವ) ಮತ್ತು (ನಿನಗೆ ಹವಿರಾದಿಗಳನ್ನು) ಅರ್ಪಿಸುವವರು, ಬಹುಕಾಲ ಬಾಳಲಿ ಸಂಗ್ರಾಮಗಳಲ್ಲಿ ಶತ್ರುಗಳಿಂದ ವಿಪುಲವಾದ ಧನಾದಿಗಳನ್ನು ಪಡೆಯೋಣ, (ಆ ಧನದಿಂದ) ನಿನಗೂ, ಇಂದ್ರ ಮೊದಲಾದ ದೇವತೆಗಳಿಗೆಲ್ಲರಿಗೂ ಅವರವರ ಭಾಗಗಳನ್ನು ಅರ್ಪಿಸೋಣ

English Translation.

May your opulent worshippers, Agni, obtain, (abundant) food, may the learned (who praise you) and offer you (oblations), acquire long life; may we gain in battles booty from our foes, presenting their portion to the Gods for (the acquisition of) renown

॥ ವಿಶೇಷವಿಷಯಗಳು ॥

**ಪೃಕ್ಷಃ, ವಾಜಃ**—ಈ ಎರಡು ಶಬ್ದಗಳೂ **ಅಂಧಃ ವಾಜಃ** ಎಂಬ ಇಪ್ಪತ್ತೆರಡು ಅನ್ನನಾಮಗಳಲ್ಲಿ (ನಿ ೩-೯) ಪಠಿತವಾಗಿರುವುದರಿಂದ ಅನ್ನವೆಂದು ಅರ್ಥವು

**ಅರ್ಯಃ—ರಾಷ್ಟ್ರೀ, ಅರ್ಯಃ** ಎಂಬ ನಾಲ್ಕು ಈಶ್ವರ ವಾಚಕಗಳಲ್ಲಿ (ನಿ. ೩-೧೧) ಉಕ್ತವಾಗಿರುತ್ತದೆ ಆದರೆ ಇಲ್ಲಿ ಈ ಪದವನ್ನು ಶತ್ರುವಾಚಕವಾದ ಅರಿ ಶಬ್ದದಿಂದ ಉಂಟಾದ ರೂಪವನ್ನಾಗಿ ಹೇಳಿ ಶತ್ರುಸಂಬಂಧವಾದ ಎಂದು ವಿವರಿಸಿರುವರು

**ಸಮಿಥೇಷು**—**ರಣಃ, ವಿವಾಕ್** ಎಂಬ ನಲವತ್ತಾರು ಸಂಗ್ರಾಮನಾಮಗಳಲ್ಲಿ (ನಿ ೨-೧೭) ಉಕ್ತವಾಗಿರುವುದರಿಂದ ಯುದ್ಧಗಳಲ್ಲಿ ಎಂದು ಅರ್ಥವು

ಸ್ಕಂದಸ್ವಾಮಿಗಳು—**ದೇವೇಷು** ಎಂಬ ಶಬ್ದವು ಸಪ್ತಮೀ ವಿಭಕ್ತ್ಯಂತವಾಗಿ ಅಧಿಕರಣಾರ್ಥದಲ್ಲಿ ಪ್ರಯುಕ್ತವಾಗಿದ್ದರೂ **ಸಮಮಬ್ರಾಹ್ಮಣೇ ದಾನಂ** ಎಂಬ ಪ್ರಯೋಗದಂತೆ **ಸಂಪ್ರದಾನಾರ್ಥ**ವನ್ನು ಬೋಧಿಸುವುದರಿಂದ ದೇವತೆಗಳಿಗೋಸ್ಕರ ಎಂದು ಅರ್ಥವನ್ನು ಹೇಳಿರುವರು

**ಶ್ರವಸೇ**—**ಶ್ರವ ಇತ್ಯನ್ನನಾಮ, ಅನ್ನಾರ್ಥಂ । ಮಘಂ, ರೇಕ್ಣಃ** ಎಂಬ ಇಪ್ಪತ್ತೆಂಟು ಧನನಾಮಗಳಲ್ಲಿ (ನಿ ೨-೧೦) **ಶ್ರವಃ** ಎಂಬ ಪದವು ಉಕ್ತವಾಗಿದ್ದರೂ, **ಶ್ರವ ಇತ್ಯನ್ನನಾಮ ಶ್ರೂಯತ ಇತಿ ಸತಃ** (ನಿ ೧೦-೩) ಎಂದು ಯಾಸ್ಕರು ಹೇಳಿ, **ಅಸಸ್ರಾಣಾಸಃ** (ಋ ಸಂ ೬-೩೭-೩) ಎಂಬ ಋಕ್ಕನ್ನು ಉದಹರಿಸಿರುವ **ಶ್ರವ** ಶಬ್ದವು ಅನ್ನವಾಚಕವಾಗಿ ಇರುವುದು ಎಂದು ಅರ್ಥವನ್ನು ಹೇಳಿರುವರು ಸಾಯಣರು—**ಶ್ರವಸೇ - ಯಶಸೇ** ಕೀರ್ತಿಗೋಸ್ಕರ ಎಂದು ಅರ್ಥವನ್ನು ಮಾಡಿರುವರು ಯಾಸ್ಕರು **ಶ್ರವಃ** ಎಂಬ ಪದವು ಯಶಸ್ಸು, ಕೀರ್ತಿ ಎಂಬ ಅರ್ಥಗಳನ್ನು ಬೋಧಿಸುವುದು ಎಂದು ಹೇಳಿ ಆ ವಿಷಯದಲ್ಲಿ ಪ್ರಮಾಣವಾಗಿ ಮೂರು ಉದಾಹರಣೆಗಳನ್ನು ಹೇಳಿರುವರು—

**ಅಮಂದಾನ್ ಸ್ತೋಮಾನ್ ಪ್ರ ಭರೇ ಮನೀಷಾ ಸಿಂಧಾವಧಿ ಕ್ಷಿಯತೋ ಭಾವ್ಯಸ್ಯ ।**
**ಯೋ ಮೇ ಸಹಸ್ರಮಮಿಮೀತ ಸವಾನತೂರ್ತೋ ರಾಜಾ ಶ್ರವ ಇಚ್ಛಮಾನಃ ॥**

(ಋ ಸಂ ೧-೧೨೬-೧)

ಇಲ್ಲಿ— **ಶ್ರವ ಇಚ್ಛಮಾನಃ ಪ್ರಶಂಸಾಮಿಚ್ಛಮಾನಃ** ಕೀರ್ತಿಯನ್ನು ಅಪೇಕ್ಷಿಸುವವನು ಎಂದರ್ಥವು

(ನಿ ೯-೧೧)

**ಪ್ರ ವೋ ಮಹೇ ಮಂದಮಾನಾಯಾಂಧಸೋಽರ್ಚಾ ವಿಶ್ವಾನರಾಯ ವಿಶ್ವಾಭುವೇ ।**
**ಇಂದ್ರಸ್ಯ ಯಸ್ಯ ಸುಮಖಂ ಸಹೋ ಮಹಿ ಶ್ರವೋ ನೃಮ್ಣಂ ಚ ರೋದಸೀ ಸಪರ್ಯತಃ ।**

(ಋ ಸಂ ೧೦ ೫೦ ೧)

ಇಲ್ಲಿಯೂ—**ಮಹಿ ಶ್ರವಃ=ಮಹಚ್ಛ್ರವಣೀಯಂ ಯಶಃ** ಎಂದರೆ ಕೀರ್ತಿಯೆಂದೇ ಅರ್ಥಮಾಡಿರುವರು

(ನಿ ೧೧-೧೦)

ಅತಿಶಯವಾದ ಕೇಳುವುದಕ್ಕೆ ಹಿತವಾದ ಕೀರ್ತಿಯು

**ಉತ ಸ್ಮೈನಂ ವಸ್ತ್ರಮಥಿಂ ನ ತಾಯುಮನು ಕ್ರೋಶಂತಿ ಕ್ಷಿತಯೋ ಭರೇಷು ।**
**ನೀಚಾಯಮಾನಂ ಜಸುರಿಂ ನ ಶ್ಯೇನಂ ಶ್ರವಶ್ಚಾಚ್ಛಾ ಪಶುಮಚ್ಚ ಯೂಥಂ ।**

(ಋ ಸಂ ೪-೩೮-೫)

ಇಲ್ಲಿಯೂ—**ಶ್ರವಶ್ಚಾಚ್ಛಾ ಪಶುಮಚ್ಚ ಯೂಥಂ । ಶ್ರವಶ್ಚಾಪಿ ಪಶುಮಚ್ಚ ಯೂಥಂ ಪ್ರಶಂಸಾಂ ಚ ಯೂಥಂ ಚ ಧನಂ ಚ ಯೂಥಂ ಚೇತಿ ವಾ ।** ಎಂದರೆ ಕೀರ್ತಿಯೆಂದೇ ಹೇಳಿರುವರು

(ನಿ ೪-೨೪)

ಉತ್ತಮವಾದ ಪ್ರಶಂಸೆಯು ಕೀರ್ತಿಯು ಎಂದು ಅರ್ಥವು ಇದನ್ನು ಅನುಸರಿಸಿ ಸಾಯಣರು **ಯಶಸೇ**—ಕೀರ್ತಿಗಾಗಿ ಹವಿರ್ಭಾಗಗಳನ್ನೂ ಹೋಮ ಮಾಡುತ್ತಾ ಅಗ್ನಿಯನ್ನೂ ಪೂಜಿಸೋಣ ಎಂದು ಅರ್ಥಮಾಡಿರುವರು

**ಮಘವಾನಃ—ಮಘ** ಶಬ್ದವು ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿರುವುದರಿಂದ ಧನವುಳ್ಳವರು ಎಂದು ಅರ್ಥವು. ಹಣಗಾರರು ಅಗ್ನಿಯನ್ನು ಯಾಗಾದಿಗಳಿಂದ ಪೂಜಿಸಿ ಸಂತೋಷಪಡಿಸುವರು ಬಡವರು ಸ್ತುತಿ ಮಾಡಿ ಸಂತೋಷಪಡಿಸುವರು. ಅಗ್ನಿಯು ಇವರಿಬ್ಬರಿಗೂ ಆಯುಸ್ಸನ್ನೂ ಧನಾದಿಗಳನ್ನೂ ಅನುಗ್ರಹಿಸುವನೆಂದು ಸ್ಕಂದಸ್ವಾಮಿಗಳು ವಿವರಿಸಿರುವರು

॥ ವ್ಯಾಕರಣಪ್ರಕ್ರಿಯಾ ॥

**ಅಶ್ಯುಃ—**ಅಶೂ ವ್ಯಾಪ್ತೌ ಧಾತು ಆತ್ಮನೇಪದಿ. **ವ್ಯತ್ಯಯೋ ಬಹುಲಂ** ಎಂಬುದರಿಂದ ಪರಸ್ಮೈಪದ ಪ್ರತ್ಯಯ ಬರುತ್ತದೆ. ವಿಧಿಲಿಙ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ **ಝೇರ್ಜುಸ್** (ಪಾ. ಸೂ. ೩-೪-೧೦೮) ಎಂಬುದರಿಂದ ಜುಸಾದೇಶ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಶ್ನು) ಲುಕ್ **ಯಾಸುಟ್ಪರ—** ಎಂಬುದರಿಂದ ಲಿಙಿಗೆ ಯಾಸುಟಾಗಮ. **ಉಸ್ಯ ಪದಾಂತಾತ್** (ಪಾ ಸೂ ೬-೧-೯೬) ಎಂಬುದರಿಂದ ಪರರೂಪ, ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ದದತಃ**—ಡುದಾಞ್ ದಾನೇ ಧಾತು ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. **ಜುಹೋತ್ಯಾದಿಭ್ಯಃ ಶ್ಲುಃ** ಸೂತ್ರದಿಂದ ಶ್ಲು ವಿಕರಣ **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. **ನಾಭ್ಯಸ್ತಾಚ್ಛತುಃ** (ಪಾ ಸೂ ೭-೧-೭೮) ಎಂಬುದರಿಂದ ಅಭ್ಯಸ್ತ ಸಂಜ್ಞಾ ಇರುವುದರಿಂದ ಉಗಿತ್ತಾದರೂ ನ ಮಾಗಮ ಬರುವುದಿಲ್ಲ ಪ್ರಥಮಾ ಬಹುವಚನಾಂತ ರೂಪ **ಅಭ್ಯಸ್ತಾನಾಮಾದಿಃ** (ಪಾ ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದ

**ಸನೇಮ—**ವನ **ಷಣ** ಸಂಭಕ್ತೌ ಧಾತು ವಿಧಿಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** (ಪಾ ಸೂ ೩-೪-೯೯) ಎಂಬುದರಿಂದ ಸಕಾರಕ್ಕೆ ಲೋಪ. **ವ್ಯತ್ಯಯೋ ಬಹುಲಂ** ಎಂಬುದರಿಂದ ಶ ವಿಕರಣ. ಲಿಙಿಗೆ ಯಾಸುಟಾಗಮ. **ಅತೋಯೇಯಃ** (ಪಾ ಸೂ ೭-೨-೮೦) ಎಂಬುದರಿಂದ ಯಾಸ್ ಎಂಬುದಕ್ಕೆ ಇಯಾದೇಶ ಯಕಾರಕ್ಕೆ **ಲೋಪೋವ್ಯೋರ್ವಲಿ** ಎಂಬುದರಿಂದ ಲೋಪ. ಸನ+ಇಮ ಎಂದಿರುವಾಗ ಗುಣ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ವಿಕರಣಸ್ವರ ಸತಿಶಿಷ್ಟವಾಗಿರುವುದರಿಂದ ಮಧ್ಯೋದಾತ್ತವಾದ ಪದವಾಗುತ್ತದೆ

ಅರ್ಯಃ—ಅರಿ ಶಬ್ದ ಶತ್ರು ಎಂಬ ಅರ್ಥವನ್ನು ಕೊಡುತ್ತದೆ ಇದಕ್ಕೇ ಷಷ್ಠೀ ಏಕವಚನ ಪರವಾದಾಗ **ಜಸಾದಿಷು ಛಂದಸಿ ವಾ ವಚನಂ** ಎಂಬ ವಚನದಿಂದ **ಘೇರ್ಙಿತಿ** (ಪಾ. ಸೂ. ೭-೩-೧೧೧) ಎಂಬುದರಿಂದ ಗುಣವು ಬಾರದಿರಲು **ಇಕೋ ಯಣಚಿ** ಸೂತ್ರದಿಂದ ಯಣಾದೇಶ ಋ ಗತೌ ಧಾತು ಇದಕ್ಕೆ **ಅಚ ಇಃ** (ಉ. ಸೂ. ೪-೫೭೮) ಎಂಬುದರಿಂದ ಇಪ್ರತ್ಯಯ ತನ್ನಿಮಿತ್ತವಾಗಿ ಧಾತುವಿಗೆ ಗುಣ. ಋಕಾರಕ್ಕೆ ಬರುವುದರಿಂದ ರಪರವಾಗಿ

ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಬಂದುದರಿಂದ **ಉದಾತ್ತಯಣೋ ಹಲ್ ಪೂರ್ವಾತ್** (ಪಾ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಭಾಗಂ**—ಭಜ ಸೇವಾಯಾಂ ಧಾತು. ಇದಕ್ಕೆ ಘಞ್ ಪ್ರತ್ಯಯ ಮಾಡಿದಾಗ **ಚಜೋಃ ಕು ಘಿಣ್ಯತೋಃ** (ಪಾ ಸೂ ೭-೩-೫೨) ಎಂಬುದರಿಂದ ಜಕಾರಕ್ಕೆ ಕುತ್ವ **ಅತ ಉಪಧಾಯಾಃ** ಎಂಬುದರಿಂದ ಉಪಧಾವೃದ್ಧಿ ಆದ್ಯುದಾತ್ತಸ್ವರವು ಪ್ರಾಪ್ತವಾದರೆ **ಕರ್ಷಾತ್ವತಃ**—(ಪಾ. ಸೂ. ೬-೧-೧೫೯) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ

**ಶ್ರವಸೇ**—ಶ್ರು ಶ್ರವಣೇ ಧಾತು. ಇದಕ್ಕೆ ಔಣಾದಿಕವಾದ ಅಸುನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ಶ್ರವಸ್ ಶಬ್ದವಾಗುತ್ತದೆ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಚತುರ್ಥೀ ಏಕವಚನಾಂತರೂಪ ॥ ೫ ॥



॥ ಸಂಹಿತಾಪಾಠಃ ॥

ಋತಸ್ಯ ಹಿ ಧೇನವೋ ವಾವಶಾನಾಃ ಸ್ಮದೂಧ್ನೀಃ ಪೀಪಯಂತ

ದ್ಯುಭಕ್ತಾಃ ।

ಪರಾವತಃ ಸುಮತಿಂ ಭಿಕ್ಷಮಾಣಾ ವಿ ಸಿಂಧವಃ ಸಮಯಾ

ಸಸ್ರುರದ್ರಿಂ ॥ ೬ ॥

॥ ಪದಪಾಠಃ ॥

ಋತಸ್ಯ । ಹಿ । ಧೇನವಃ । ವಾವಶಾನಾಃ । ಸ್ಮತ್ಽಊಧ್ನೀಃ । ಪೀಪಯಂತ ।
ದ್ಯುಽಭಕ್ತಾಃ ।

ಪರಾಽವತಃ । ಸುಽಮತಿಂ । ಭಿಕ್ಷಮಾಣಾಃ । ವಿ । ಸಿಂಧವಃ । ಸಮಯಾ ।
ಸಸ್ರುಃ । ಅದ್ರಿಂ ॥ ೬ ॥

॥ ಸಾಯಣಭಾಷ್ಯಂ ॥

ಋತಸ್ಯ ಹಿ ಋತಂ ದೇವಯಜನದೇಶಂ ಪ್ರಾಪ್ತಮಗ್ನಿಮೇವ ಧೇನವೋಽಗ್ನಿಹೋತ್ರಾದಿಹವಿಷಾಂ ದೋಗ್ಧ್ರ್ಯೋ ಗಾವಃ ಪೀಪಯಂತ । ಕ್ಷೀರಾದಿಲಕ್ಷಣಂ ಗವ್ಯಮಪಾಯಯನ್ । ಕೀದೃಶ್ಯೋ ಗಾವಃ । ವಾವಶಾನಾ ಅಗ್ನಿಂ ಪುನಃಪುನಃ ಕಾಮಯಮಾನಾಃ ಸ್ಮದೂಧ್ನ್ಯಃ । ಸ್ಮಚ್ಛಬ್ದೋ ನಿತ್ಯಶಬ್ದಸಮಾನಾರ್ಥಃ । ನಿತ್ಯಮೂಧಸಾ ಯುಕ್ತಾಃ । ಸರ್ವದಾ ಪಯಸಃ ಪ್ರದಾತ್ರ್ಯ ಇತ್ಯರ್ಥಃ । ದ್ಯುಭಕ್ತಾ ದಿವಾ ಪ್ರಕಾಶೇನ ಸಂಭಕ್ತಾಃ ಸಂಶ್ಲಿಷ್ಟಾಃ । ತೇಜಸ್ವಿನ್ಯ ಇತ್ಯರ್ಥಃ । ಅಪಿ ಚ ಸಿಂಧವಃ ಸ್ಯಂದನಶೀಲಾ ನದ್ಯಃ ಸುಮತಿಮಸ್ಯಾಗ್ನೇಃ ಶೋಭನಾಮನುಗ್ರಹಾತ್ಮಿಕಾಂ ಬುದ್ಧಿಂ ಭಿಕ್ಷಮಾಣಾ ಯಾಚಮಾನಾಃ ಸತ್ಯೋಽದ್ರಿಂ ಸಮಯಾದ್ರೇಃ ಪರ್ವತಸ್ಯ ಸಮೀಪೇ ಪರಾವತೋ ದೂರದೇಶಾದ್ವಿ ಸಸ್ರುಃ । ವಿಶೇಷೇಣ ಗಚ್ಛಂತಿ ಪ್ರವಹಂತಿ । ಅಗ್ನಯೇ ದಾತವ್ಯಾನಾಂ ಹವಿಷಾಂ ನಿಷ್ಪತ್ತಯೇ ಪ್ರವಹಂತೀತ್ಯರ್ಥಃ ॥ಋತಸ್ಯ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥ್ಯರ್ಥೇ ಷಷ್ಠೀ । ವಾವಶಾನಾಃ । ವಶ ಕಾಂತೌ । ಯಙಂತಾಚ್ಛಾನಚ್ । ನ ವಶಃ । ಪಾ. ೬-೧-೨೦ । ಇತಿ ಸಂಪ್ರಸಾರಣಪ್ರತಿಷೇಧಃ । ಬಹುಲಂ ಛಂದಸೀತಿ ಶಪೋ ಲುಕ್ । ಛಂದಸ್ಯುಭಯಥೇತಿ ಶಾನಚ ಆರ್ಧಧಾತುಕತ್ವಾದತೋಲೋಪಯಲೋಪೌ । ಅತ ಏವ ಲಸಾರ್ವಧಾತುಕಾನುದಾತ್ತತ್ವಾಭಾವೇ ಚಿತ್ಸ್ವರ ಏವ ಶಿಷ್ಯತೇ । ಸ್ಮದೂಧ್ನೀಃ । ಸ್ಮತ್ ನಿತ್ಯಾನ್ಯೂಧಾಂಸಿ ಯಾಸಾಂ । ಊಧಸೋಽನಙ್ । ಪಾ ೫-೪-೧೩೧ । ಇತ್ಯನಙಾದೇಶಃ ಸಮಾಸಾಂತಃ । ಸಂಖ್ಯಾವ್ಯಯಾದೇರ್ಙೀಪ್ । ಪಾ. ೪-೧-೨೬ । ಇತಿ ಙೀಪ್ । ಭಸಂಜ್ಞಾಯಾಮಲ್ಲೋಪೋಽನ ಇತ್ಯಲೋಪಃ । ಙೀಪಃ ಪಿತ್ತ್ವಾದನುದಾತ್ತತ್ವೇ ಬಹುವ್ರೀಹಿಸ್ವರ ಏವ ಶಿಷ್ಯತೇ । ಪೀಪಯಂತ । ಪಾ ಪಾನೇ । ಅಸ್ಮಾದ್ಧೇತುಮತಿ ಣಿಚ್ । ಶಾಛಾಸಾಹ್ವೇತಿ ಯುಕ್ । ಣ್ಯಂತಾಲ್ಲುಙಿ ಚ್ಲೇಃ ಚಙಾದೇಶಾದಿ । ಚಙ್ಯನ್ಯತರಸ್ಯಾಮಿತಿ ಚಙಃ ಪೂರ್ವಸ್ಯೋದಾತ್ತತ್ವಂ । ಹಿ ಚೇತಿ ನಿಘಾತಪ್ರತಿಷೇಧಃ । ಪರಾವತಃ । ಪರಾಗತಾತ್ । ದೂರಂ ಹಿ ಪರಾಗತಂ ಭವತಿ । ಅಸ್ಮಿನ್ನಾತ್ವರ್ಥೇ ಗಮ್ಯಮಾನ ಉಪಸರ್ಗಾಚ್ಛಂದಸಿ ಧಾತ್ವರ್ಥೇ । ಪಾ. ೫-೧-೧೧೮ । ಇತಿ ವತಿಃ ॥

‖ ಪ್ರತಿಪದಾರ್ಥ ‖

**ಋತಸ್ಯ ಹಿ**—ಯಾಗಶಾಲೆಯನ್ನು ಪ್ರಾಪ್ತನಾದ ಅಗ್ನಿಗೇ | **ವಾವಶಾನಾಃ**—ಅಗ್ನಿಯನ್ನು ಪುನಃ ಪುನಃ ಇಚ್ಛಿಸುವ | **ಸ್ವದೂಘ್ನೀಃ**—ನಿತ್ಯವಾದ ಕೆಚ್ಚಲುಳ್ಳ (ಸರ್ವದಾ ಕ್ಷೀರವನ್ನು ಕೊಡುವ) | **ದ್ಯುಭಕ್ತಾಃ**—ತೇಜೋವಿಶಿಷ್ಟವಾದ | **ಧೇನವಃ**—(ಹವಿಸ್ಸಿಗೆ ಕಾರಣಭೂತವಾದ) ಗೋವುಗಳು | **ಪೀಪಯಂತ**—ಕ್ಷೀರಾದಿ ಗವ್ಯವನ್ನು ಪಾನಮಾಡಿಸಿದವು | **ಸಿಂಧವಃ**—ಪ್ರವಹಿಸುತ್ತಿರುವ ನದಿಗಳು | **ಸುಮತಿಂ**—(ಅಗ್ನಿಯ) ಶುಭಾವಹ ವಾದ ಬುದ್ಧಿಯನ್ನು | **ಭಿಕ್ಷಮಾಣಾಃ**—ಯಾಚಿಸುವುವುಗಳಾಗಿ | **ಅದ್ರಿಂ ಸುಮಯೊ**—ಪರ್ವತದ ಸಮೀಪ ದಲ್ಲಿ | **ಪರಾವತಃ**—ದೂರಪ್ರದೇಶದಿಂದ | **ವಿ ಸಸ್ರುಃ**—ಪ್ರವಹಿಸಿ ಬಂದುವು

‖ ಭಾವಾರ್ಥ ‖

ಅಗ್ನಿಯನ್ನು ಪ್ರೀತಿಸುವ, ನಿತ್ಯವೂ ಹಾಲುಕೊಡುವ, ಕಾಂತಿಯುಕ್ತನಾದ, ಗೋವುಗಳು, ಯಾಗಶಾಲೆಗೆ ಬಂದಿರುವ ಅಗ್ನಿಯ ಉಪಯೋಗಕ್ಕಾಗಿ ಕ್ಷೀರಾದಿಗಳನ್ನು ಕೊಡುತ್ತವೆ ನದಿಗಳು, ಅಗ್ನಿಯ ವಿಶ್ವಾಸವನ್ನಪೇಕ್ಷಿಸುವವು ಗಳಾಗಿ, ಪರ್ವತದ ಸಮೀಪದಲ್ಲಿ, ಬಹುದೂರದಿಂದ ಪ್ರವಹಿಸಿಬಂದಿವೆ

English Translation

The cows, loving (Agni, who has come to the hall of sacrifice), sharing his splendour, have brought with full udders (their milk) to be drunk The rivers, soliciting his good will, have flowed from a distance in the vicinity of the mountains

‖ ವಿಶೇಷವಿಷಯಗಳು ‖

**ಋತಸ್ಯ—ಕ್ರಿಯಾಗ್ರಹಣಂ ಕರ್ತವ್ಯಂ ಇತಿ ಕರ್ಮಣಃ ಸಂಪ್ರದಾನತ್ವಾತ್ ಚತುರ್ಥ್ಯರ್ಥೇ ಷಷ್ಠೀ |** ಇಲ್ಲಿ ಷಷ್ಠೀ ವಿಭಕ್ತಿಯು ಸಂಪ್ರದಾನರೂಪವಾದ ಚತುರ್ಥೀ ವಿಭಕ್ತಿಯ ಅರ್ಥದಲ್ಲಿ ಬಂದಿರುತ್ತದೆ ಯಾಸ್ಕರು **ಋತಮಿತ್ಯುದಕನಾಮ** ಪ್ರತ್ಯೃತಂ ಭವತಿ (ನಿ ೨-೨೫) ಎಂದು ಋತಶಬ್ದಕ್ಕೆ ಉದಕವೆಂದೂ ಸಾಯಣರು **ಋತಂ—ದೇವಯಜನದೇಶಂ** ದೇವತೆಗಳನ್ನು ಉದ್ದೇಶವಾಗಿ ಯಜ್ಞಮಾಡುವ ಪ್ರದೇಶವೆಂದೂ ಅರ್ಥ ವಿವರಣೆಮಾಡಿರುವರು

ಸ್ಕಂದಸ್ವಾಮಿಗಳು **ಋತುರರ್ತೇರ್ಗತಿಕರ್ಮಣಃ** (ನಿ. ೨-೨೫) **ಋ ಗತೌ** ಎಂಬ ಧಾತುವಿನಿಂದ **ಋತ** ಶಬ್ದದ ರೂಪನಿಷ್ಪತ್ತಿಯಾಗಿರುವುದರಿಂದ **ಋತಸ್ಯ—ಸರ್ವತ್ರ ಗತಸ್ಯ** ಎಲ್ಲಾ ಪ್ರದೇಶದಲ್ಲಿಯೂ ಸಂಚರಿಸಬಲ್ಲವ ನಾದ ಎಂದು ಅರ್ಥವನ್ನು ಹೇಳುವರು.

**ಸ್ವದೂಘ್ನೀಃ— ಸ್ವಚ್ಛಬ್ದಃ ಪ್ರಶಸ್ತವಚನಃ | ಅನ್ವಿತಪಚನತ್ವಾತ್ ಪ್ರಶಸ್ತಮೂಧೋ ಯಾಸಾಂ ತಾಃ** ಸ್ವತ್ ಎಂಬ ಪದವು ಶ್ರೇಷ್ಠ ಅಥವಾ ಉತ್ತಮ ಎಂಬ ಅರ್ಥವನ್ನು ಬೋಧಿಸುವುದು. ಅನ್ವಿತವನ್ನು

ಪಚನಮಾಡುವುದರಿಂದ ಶ್ರೇಷ್ಠವಾದ ಕೆಚ್ಚಲು ಉಳ್ಳ ಗೋವುಗಳೆಂದು ಅರ್ಥವು. ಸಾಯಣರು ಸ್ಮತ್ ಶಬ್ದವು ನಿತ್ಯ ಎಂಬ ಪದದ ಅರ್ಥವನ್ನೇ ಬೋಧಿಸುವುದರಿಂದ ಯಾವಾಗಲೂ ಹಾಲನ್ನು ಕರೆಯುವ ಕೆಚ್ಚಲು ಉಳ್ಳ ಹಸುಗಳು ಎಂದು ಅರ್ಥವನ್ನು ಹೇಳುವರು

**ದ್ಯುಭಕ್ತಾಃ—ದಿವಾ ಪ್ರಕಾಶೇನ ಸಂಶ್ಲಿಷ್ಟಾಃ ತೇಜಸ್ವಿನ್ಯ ಇತ್ಯರ್ಥಃ** ಸಾಯಣರು ಈ ಶಬ್ದಕ್ಕೆ ಹಗಲಿನ ಪ್ರಕಾಶದಿಂದ ಕೂಡಿರುವುವುಗಳಾದಕಾರಣ ಹಸುಗಳು ತೇಜಶ್ಶಾಲಿಗಳಾಗಿರುವುವು ಎಂದು ಅರ್ಥವನ್ನು ಹೇಳುವರು. ಸ್ಕಂದಸ್ವಾಮಿಗಳು **ದಿವಂ ಯಾ ಭಜಂತೇ ತಾ ದ್ಯುಭಕ್ತಾಃ । ಸ್ವರ್ಗನಿವಾಸಿನ್ಯ ಇತ್ಯರ್ಥಃ** ಸ್ವರ್ಗವನ್ನು ಹೊಂದುವವರು ದ್ಯುಭಕ್ತರೆನಿಸುವರು. ಆದ್ದರಿಂದ ಸ್ವರ್ಗನಿವಾಸಿಗಳೆಂದು ಅರ್ಥವನ್ನು ಹೇಳುವರು. ಯಾವಾಗಲೂ ಹಾಲನ್ನು ಕರೆಯುವ, ಉತ್ತಮವಾದ ಕೆಚ್ಚಲುಗಳುಳ್ಳ ತೇಜಶ್ಶಾಲಿಗಳಾಗಿ ಇರುವ ಅಮೃತಪಚನಮಾಡುವ ಸ್ವರ್ಗನಿವಾಸಿಗಳಾದ ಗೋವುಗಳು ಅಗ್ನಿಯನ್ನು ತಮ್ಮ ಹಾಲಿನಿಂದ ಸಂತೋಷಪಡಿಸುವುವು ಎಂದಭಿಪ್ರಾಯವು ಸ್ಕಂದಸ್ವಾಮಿಗಳು ಬೇರೆಯ ವಿಧವಾಗಿ ಅರ್ಥವನ್ನು ಹೇಳುತ್ತಾರೆ.

**ಪರಾವತಃ—ಪರಾಗತಾತ್ । ದೂರಂ ಹಿ ಪರಾಗತಂ ಭವತಿ ।**

**ಸಿಂಧವಃ**=ನದಿಗಳು, ಅಮೃತಕ್ಕೆ ಸಮನಾದ ನೀರುಗಳಿಂದ ಪ್ರವಹಿಸುತ್ತಾ ಅಗ್ನಿಯನ್ನು ಹುಡುಕುವವುಗಳಾಗಿ ಅನೇಕ ಪ್ರಕಾರವಾಗಿ ಹರಿಯುತ್ತವೆ.

**ಸಮಯಾ ಅದ್ರಿಂ । ಸಮಯಾ ಶಬ್ದಃ ಸಾಮೀಪ್ಯೇ । ಅದ್ರಿರ್ಮೇರು ನಾಮಾ ಪರ್ವತಃ ಮೇರೋಃ ಸಮೀಪೇನೇತ್ಯರ್ಥಃ । ಅಗ್ನೇಃ ಸ್ವಭೂತಾ ಗಾವಃ ಗವ್ಯೂತಿತೋ ಮೇರುಬುಧ್ನೇನಃ ಪ್ರತ್ಯಾಗತ್ಯ ವಿವಿಧಮಗ್ನಿಮಭಿಗಚ್ಛಂತಿ । ಅಭಿಗಮ್ಯ ಚ ಸ್ವೇನಾ ಮೃತರೂಪೇಣ ಪಯಸಾ ಅಗ್ನಿಮಾಪ್ಯಾಯಯನ್ತಿ ಇತಿ ಸಮಸ್ತಾರ್ಥಃ** ಪರಾಗತ ಎಂಬ ಶಬ್ದವು ದೂರ ಎಂಬ ಅರ್ಥವನ್ನು ಬೋಧಿಸುವುದು. ಸಮಯಾ ಎಂಬ ಅವ್ಯಯವು ಸಮೀಪ ಎಂಬ ಅರ್ಥವನ್ನು ಬೋಧಿಸುವುದು. ಅದ್ರಿ ಶಬ್ದದಿಂದ ಇಲ್ಲಿ ಮೇರುಪರ್ವತವೆಂದು ಅರ್ಥವಾಗುವುದು ಅಗ್ನಿಯು ಸ್ವಭೂತ ಎಂದರೆ ಅಗ್ನಿಯಹಾಗೆ ತೇಜಶ್ಶಾಲಿಗಳೂ ಪಾತ್ರಗಳೂ ಆಗಿರುವ ಗೋವುಗಳು ಮೇರು ಪರ್ವತದ ಪ್ರದೇಶದ ದೂರದಿಂದಲೂ ಅಗ್ನಿಯ ಸೇವೆಗಾಗಿ ಬಂದು ಅನೇಕ ಪ್ರಕಾರವಾಗಿ ತಮ್ಮ ಅಮೃತಕ್ಕೆ ಸಮನಾದ ಹಾಲುಗಳಿಂದ ಅಗ್ನಿಯು ಸಂತೋಷಪಡುವಂತೆ (ಮಾಡುತ್ತವೆ) ಸೇವಿಸುತ್ತವೆ. ಈ ಋಕ್ಕಿಗೆ ಇನ್ನೊಂದು ವಿಧವಾದ ಅರ್ಥವನ್ನೂ ಹೇಳುವರು. ಧೀಞ್ ಪ್ರೀಣನೇ ಎಂಬ ಧಾತುವಿನಿಂದ ಉಂಟಾದ ಧೇನು ಶಬ್ದಕ್ಕೆ ಅಗ್ನಿಯನ್ನು ಸಂತೋಷಪಡಿಸುವ ಆಹುತಿಗಳೆಂದು ಅರ್ಥವು. ಇವುಗಳು ಬಹಳ ಮಟ್ಟಿಗೆ ಅಗ್ನಿಯಿಂದ ಅಪೇಕ್ಷಿತಗಳಾಗಿ ಇರುತ್ತವೆ. ಆಹುತಿಗಳ ರಸಸ್ಥಾನವು ಉತ್ತಮವಾದ ಊಧಶ್ಶಬ್ದದಿಂದ ವ್ಯವಹೃತವಾಗಿ ಇರುತ್ತವೆ. ಈ ಆಹುತಿಗಳು ಅಮೃತರಸದಿಂದ ಕೂಡಿದವುಗಳಾಗಿ ಇರುತ್ತವೆ. ಇವುಗಳು ಭೂಮಿಗಿಂತ ದೂರವಲ್ಲಿರುವ ಸ್ವರ್ಗವನ್ನು ಸೇರಿ ಅಮೃತರಸವನ್ನು ಪಾನಮಾಡುವಂತೆ ಪಾನಮಾಡಲ್ಪಡುತ್ತವೆ. **ಧೇನವ ಇತಿ ಧಿನೋತೇಃ ಪ್ರೀಣನಾರ್ಥಸ್ಯ ರೂಪಂ । ಋತಸ್ಯಾಗ್ನೇಃ ಪ್ರೀಣಯಿತ್ರ್ಯಃ ಆಹುತಯಃ ಅತ್ಯರ್ಥಂ ಕಾಮಯಮಾನಾಃ ಅಮೃತರಸಯುಕ್ತಾಃ ದ್ಯುಗಾಮಿನ್ಯಃ ಪೃಥಿವೀತಃ ದೂರಾತ್ ಅಗ್ನಿಮಾಪ್ಯಾಯಯನ್ತಿ ।** ಆದ್ದರಿಂದ ಈ ಆಹುತಿಗಳು ಅಗ್ನಿಯನ್ನು ಸುಖವಾಗಿರುವಂತೆ ಮಾಡುತ್ತವೆ.

॥ ವ್ಯಾಕರಣಪ್ರಕ್ರಿಯಾ ॥

**ಋತಸ್ಯ**—ಸಂಪ್ರದಾನಸಂಜ್ಞಾವಿಧಾಯಕಸೂತ್ರದಲ್ಲಿ **ಕ್ರಿಯಾಗ್ರಹಣಂ ಕರ್ತವ್ಯಂ** ಎಂಬ ವಚನವಿರುವುದರಿಂದ ಇಲ್ಲಿ ಕರ್ಮಕ್ಕೆ ಸಂಪ್ರದಾನ ಸಂಜ್ಞೆ ಬರುವುದರಿಂದ ಚತುರ್ಥ್ಯರ್ಥದಲ್ಲಿ ಷಷ್ಠೀ ವಿಭಕ್ತಿ ಬರುತ್ತದೆ.

**ವಾವಶಾನಾಃ**--ವಶ ಕಾಂತೌ ಧಾತು ಅತಿಶಯಾರ್ಥ ತೋರುವಾಗ **ಧಾತೋರೇಕಾಚೋಹಲಾದೇಃ**— ಎಂಬುದರಿಂದ ಯಙ್ **ಸನ್ಯಙೋಃ** ಎಂಬುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ. **ದೀರ್ಘೋಽಕಿತಃ** (ಪಾ. ಸೂ. ೭-೪-೮೩) ಎಂಬುದರಿಂದ ಅದಕ್ಕೆ ದೀರ್ಘ. ವಾವಶ್ಯ ಎಂಬುದು **ಸನಾದ್ಯಂತಾ ಧಾತವಃ** ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ **ನವಶಃ** (ಪಾ. ಸೂ ೬-೧-೨೦) ಎಂಬುದರಿಂದ ಯಙ್ ಪರವಾದಾಗ ಸಂಪ್ರಸಾರಣ ನಿಷೇಧ. **ಬಹುಲಂ ಛಂದಸಿ** ಎಂಬುದರಿಂದ ಶಪ್ಪಿಗೆ ಲುಕ್ **ಛಂದಸ್ಯುಭಯಥಾ** ಎಂಬುದರಿಂದ ಶಾನಚಿಗೆ ಆರ್ಧಧಾತುಕಸಂಜ್ಞೆಯೂ ಇರುವುದರಿಂದ **ಯಸ್ಯಹಲಃ** ಸೂತ್ರದಿಂದ ಯಕಾರಕ್ಕೂ **ಅತೋಲೋಪಃ** ಸೂತ್ರದಿಂದ ಅಕಾರಕ್ಕೂ ಲೋಪ ವಾವಶಾನ ಎಂದು ರೂಪವಾಗುತ್ತದೆ. ಅದುಪದೇಶದ ಪರದಲ್ಲಿಲ್ಲದಿರುವುದರಿಂದ ಲಸಾರ್ವಧಾತುಕಾನುದಾತ್ತಸ್ವರ ಬಾರದಿರುವುದರಿಂದ ಶಾನಚ್ ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ

**ಸ್ಮದೂಧ್ನೀಃ**—ಸ್ಮತ್ ನಿತ್ಯಾನಿ ಊಧಾಂಸಿ ಯಾಸಾಂ ತಾಃ **ಊಧಸೋಽನಙ್** (ಪಾ.ಸೂ. ೫-೪-೧೩೧) ಎಂಬುದರಿಂದ ಅನಙಾದೇಶವು ಸಮಾಸಾಂತವಾಗಿ ಬರುತ್ತದೆ ಅವ್ಯಯ ಪೂರ್ವಪದವಾಗಿರುವುದರಿಂದ ಸ್ತ್ರೀತ್ವದಲ್ಲಿ **ಸಂಖ್ಯಾವ್ಯಯಾದೇರ್ಙೀಪ್** (ಪಾ. ಸೂ. ೪-೧-೨೬) ಎಂಬುದರಿಂದ ಙೀಪ್ ಪ್ರತ್ಯಯ. ಸ್ಮದೂಧನ್ ಈ ಎಂದಿರುವಾಗ **ಅಲ್ಲೋಪೋಽನಃ** ಎಂಬುದರಿಂದ ಅನಿನ ಅಕಾರಕ್ಕೆ ಲೋಪ. ಙೀಪ್ ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಸೂತ್ರದಿಂದ ಅನುದಾತ್ತವಾಗಿರುವುದರಿಂದ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** ಎಂಬುದರಿಂದ ಬಂದ ಬಹುವ್ರೀಯ ಸ್ವರವು (ಪೂರ್ವಪದ ಪ್ರಕೃತಿಸ್ವರವು) ಉಳಿಯುತ್ತದೆ. ಇದಕ್ಕೆ ಜಸ್ ಪರವಾದಾಗ **ವಾ ಛಂದಸಿ** ಎಂಬುದರಿಂದ ಪೂರ್ವಸವರ್ಣದೀರ್ಘ ಬರುತ್ತದೆ.

**ಪೀಪಯಂತ**—ಪಾ ಪಾನೇ ಧಾತು ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ. ಸೂ ೩-೧-೨೬) ಎಂಬುದರಿಂದ ಣಿಚ್ **ಶಾಚ್ಛಾಸಾಹ್ವಾ**—(ಪಾ ಸೂ. ೭-೩-೩೭) ಎಂಬುದರಿಂದ ಣಿಚ್ ಪರವಾದಾಗ ಧಾತುವಿಗೆ ಯುಕಾಗಮ **ಸನಾದ್ಯಂತಾ ಧಾತವಃ** ಎಂಬುದರಿಂದ ಪಾಯಿ ಎಂಬ ಣಿಜಂತಕ್ಕೆ ಧಾತು ಸಂಜ್ಞಾ ಬರುತ್ತದೆ ಇದರಮೇಲೆ ಲುಙ್ ಪ್ರಥಮಪುರುಷ ಬಹುವಚನ ಝ ಪ್ರತ್ಯಯ. **ಝೋಽಂತಃ** ಎಂಬುದರಿಂದ ಅಂತಾದೇಶ. **ಣಿಶ್ರಿದ್ರುಸ್ರುಭ್ಯಃ ಚಙ್** (ಪಾ ಸೂ ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿನ ಪ್ರಥಮೈಕಾಚಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಹ್ರಸ್ವ **ಣೌಚಙ್ಯುಪಧಾಯಾಃ**—(ಪಾ. ಸೂ. ೭-೪-೧) ಎಂಬುದರಿಂದ ಧಾತುವಿನ ಉಪಧೆಗೆ ಹ್ರಸ್ವ ಬಂದಮೇಲೆ **ಸನ್ವತಃ** ಎಂಬುದರಿಂದ ಅಭ್ಯಾಸಕ್ಕೆ ಇತ್ವ **ದೀರ್ಘೋಽಕಿತಃ** (ಪಾ. ಸೂ ೭-೪-೮೩) ಎಂಬುದರಿಂದ ಇಕಾರಕ್ಕೆ ದೀರ್ಘ. **ಣೇರನಿಟಿ** ಸೂತ್ರದಿಂದ ಣಿಚಿಗೆ ಲೋಪ. **ಅತೋಗುಣೇ** ಸೂತ್ರದಿಂದ ಪರರೂಪ ಪೀಪಯಂತ ಎಂದು ರೂಪ

ವಾಗುತ್ತದೆ. **ಚಜ್ಯನ್ಯತರಸ್ಯಾಂ** (ಪಾ. ಸೂ ೬-೧-೨೧೮) ಎಂಬುದರಿಂದ ಚಙ್‌ನ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಹಿಂದೆ ಹಿ ಎಂಬ **ನಿಪಾತವಿರುವುದರಿಂದ ಹಿ ಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತ ಪ್ರತಿಷೇಧ ಬರುತ್ತದೆ

**ಪರಾವತಃ**—ಪರಾಗತ ಶಬ್ದದಿಂದ ಈ ಶಬ್ದವಾಗಿದೆ ದೂರಂ ಹಿ ಪರಾಗತಂ ಭವತಿ ಪರಾಗತವೆಂದು ಧಾತ್ವರ್ಥ ತೋರುವಾಗ **ಉಪಸರ್ಗಾಚ್ಛಂದಸಿ ಧಾತ್ವರ್ಥೇ** (ಪಾ ಸೂ. ೫-೧-೧೧೮) ಎಂಬುದರಿಂದ ಪರಾ ಎಂಬ ಉಪಸರ್ಗದ ಮೇಲೆ ವತಿ ಪ್ರತ್ಯಯ ಪರಾವತ್ ಶಬ್ದವಾಗುತ್ತದೆ ಪಂಚಮೀ ಏಕವಚನರೂಪ. ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ.

**ಸಸ್ರುಃ**—ಸೃ ಗತೌ ಧಾತು ವರ್ತಮಾನಾರ್ಥದಲ್ಲಿ ಛಾಂದಸವಾದ ಲಿಟ್. ಪ್ರಥಮಪುರುಷ ಬಹುವಚನದಲ್ಲಿ ಉಸಾದೇಶ. ದ್ವಿತ್ವ ಉರದತ್ವ. ಹಲಾದಿಶೇಷ ಯಣಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೭ ॥



॥ ಸಂಹಿತಾಪಾಠಃ ॥

ತ್ವೇ ಅಗ್ನೇ ಸುಮತಿಂ ಭಿಕ್ಷಮಾಣಾ ದಿವಿ ಶ್ರವೋ ದಧಿರೇ ಯಜ್ಞಿಯಾಸಃ ।
ನಕ್ತಾ ಚ ಚಕ್ರುರುಷಸಾ ವಿರೂಪೇ ಕೃಷ್ಣಂ ಚ ವರ್ಣಮರುಣಂ ಚ ಸಂ ಧುಃ ॥ ೭ ॥

॥ ಪದಪಾಠಃ ॥

ತ್ವೇ ಇತಿ । ಅಗ್ನೇ । ಸುऽಮತಿಂ । ಭಿಕ್ಷಮಾಣಾಃ । ದಿವಿ । ಶ್ರವಃ । ದಧಿರೇ । ಯಜ್ಞಿಯಾಸಃ ।

ನಕ್ತಾ । ಚ । ಚಕ್ರುಃ । ಉಷಸಾ । ವಿರೂಪೇ ಇತಿ ವಿऽರೂಪೇ । ಕೃಷ್ಣಂ । ಚ । ವರ್ಣಂ । ಅರುಣಂ । ಚ । ಸಂ । ಧುರಿತಿ ಧುಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸುಮತಿಂ ಶೋಭನಾಮನುಗ್ರಹಾತ್ಮಿಕಾಂ ಬುದ್ಧಿಂ ಭಿಕ್ಷಮಾಣಾ ಯಾಚಮಾನಾ ಯಜ್ಞಿಯಾಸೋ ಯಜ್ಞಾರ್ಹಾಃ ಸರ್ವೇ ದೇವಾ ದಿವಿ ದ್ಯೋತಮಾನೇ ತ್ವೇ ತ್ವಯಿ ಶ್ರವೋ ಹವಿರ್ಲಕ್ಷಣಮನ್ನಂ ದಧಿರೇ। ಅಸ್ಥಾಪಯನ್ । ಅಗ್ನಿರ್ದೇವಾನಾಮನ್ನಾದ ಇತಿ ಶ್ರುತೇಃ। ತದನಂತರಂ ತಾದೃಶೇ ಹವಿಯರ್ುಕ್ತಾಯಾನುಷ್ಠಾನಾಯ ವಿರೂಪೇ ವಿವಿಧರೂಪೇ ಉಷಸೋಷಃಕಾಲೋಪಲಕ್ಷಿತಮಹರ್ನಕ್ತಾ ಚ ನಕ್ತಂ ರಾತ್ರಿಂ ಚ ಚಕ್ರುಃ । ಅಕುರ್ವನ್ । ಏತದೇವ ಸ್ಪಷ್ಟಯತಿ । ಕೃಷ್ಣಂ ಚ ವರ್ಣಂ ರಾತ್ರ್ಯಾಂ ಶ್ಯಾಮುಲವರ್ಣಮಂಧಕಾರಮಹ್ನ್ಯರುಣಮಾರೋಚನಂ ಶ್ವೇತವರ್ಣಂ ತೇಜಶ್ಚ ಸಂ ಧುಃ । ಸಮ್ಯಕ್ ಸ್ಥಾಪಿತವಂತಃ ॥ ತ್ವೇ । ಸುಪಾಂ ಸುಲುಗಿತಿ ಸಪ್ತಮ್ಯಾಃ ಶೇಆದೇಶಃ । ನಕ್ತಾ । ತೇನೈವ ದ್ವಿತಿಯಾಯಾ ಡಾದೇಶಃ। ಉಷಸಾ। ತೇನೈವ ವಿಭಕ್ತೇರಾಕಾರಃ। ಧುಃ । ಡುಧಾಞ್ ಧಾರಣಪೋಷಣಯೋಃ। ಲುಙಿ ಗಾತಿಸ್ಥೇತಿ ಸಿಚೋ ಲುಕ್। ಆತ ಇತಿ ಝೇರ್ಜುಸಾದೇಶಃ। ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । **ಸುಮತಿಂ**—ಶುಭಾವಹವಾದ (ನಿನ್ನ) ಬುದ್ಧಿಯನ್ನು । **ಭಿಕ್ಷಮಾಣಾಃ**—ಯಾಚಿಸುವವರಾಗಿ । **ಯಜ್ಞಿಯಾಸಃ**—ಯಜ್ಞಾರ್ಹರಾದ (ದೇವತೆಗಳು) । **ದಿವಿ**—ಪ್ರಕಾಶಯುಕ್ತನಾದ । **ತ್ವೇ**—ನಿನ್ನಲ್ಲಿ । **ಶ್ರವಃ**—ಹವಿರ್ಲಕ್ಷಣವಾದ ಅನ್ನವನ್ನು । **ದಧಿರೇ**—ಸ್ಥಾಪಿಸಿದರು (ಹವಿರಾದಿ ಅನುಷ್ಠಾನಕ್ಕಾಗಿ) । **ವಿರೂಪೇ**—ವಿವಿಧವರ್ಣಗಳಾದ । **ಉಷಸಾ**—ಉಷಸ್ಸಿನಿಂದ ಯುಕ್ತವಾದ (ಹಗಲನ್ನೂ) । **ನಕ್ತಾ ಚ**—ರಾತ್ರಿಯನ್ನೂ । **ಚಕ್ರುಃ**—ಮಾಡಿದರು । **ಕೃಷ್ಣಂಚ ವರ್ಣಂ**—ಕೃಷ್ಣವರ್ಣವಾದ ಅಂಧಕಾರವನ್ನೂ । **ಅರುಣಂ ಚ**—ಶ್ವೇತವರ್ಣವಾದ ಬೆಳಕನ್ನೂ । **ಸಂ ಧುಃ**—ಚೆನ್ನಾಗಿ ಸ್ಥಾಪಿಸಿದರು ।

॥ ಭಾವಾರ್ಥ ॥

ಯಜ್ಞದಲ್ಲಿ ಪೂಜಾರ್ಹರಾದ ದೇವತೆಗಳು, ನಿನ್ನ ವಿಶ್ವಾಸಾಪೇಕ್ಷಿಗಳಾಗಿ, ದೀಪ್ತನಾದ ನಿನ್ನ ವಶಕ್ಕೆ ಹವಿರಾದಿ ಅನ್ನವನ್ನು ಒಪ್ಪಿಸಿದರು (ಯಾಗಾದಿಗಳನ್ನು ಕ್ರಮವಾಗಿ ನಡೆಯಿಸುವುದಕ್ಕೋಸ್ಕರ) ಅವರು ಹಗಲು ರಾತ್ರಿಗಳನ್ನು, ಬೆಳಕು ಮತ್ತು ಕತ್ತಲೆಯುಳ್ಳವುಗಳನ್ನಾಗಿ ಮಾಡಿದರು

## English Translation

(The Gods), who are entitled to worship, soliciting your good will, have instructed to you, resplendent Agni, the (sacrificial) food and, (for the due observance of sacred rites), they have made the night and morning of different colours, or black and purple.

॥ ವಿಶೇಷವಿಷಯಗಳು ॥

**ಸುಮತಿಂ**— **ಶೋಭನಾಮನುಗ್ರಹಾತ್ಮಿಕಾಂ ಬುದ್ಧಿಂ** ಸಾಯಣರು— ಅನುಗ್ರಹಮಾಡುವ ರೂಪದಿಂದ ಇರುವ ಒಳ್ಳೆಯ ಬುದ್ಧಿಯನ್ನು ಎಂದು ಅರ್ಥಮಾಡಿರುವರು ಸುಮತಿ ಶಬ್ದವು ಇದೇ ಅರ್ಥದಲ್ಲಿ ಬೇರೆಯ ಋಕ್ಕು ಗಳಲ್ಲಿ ಉದಾಹೃತವಾಗಿರುವುದು

**ಅರ್ಷ್ಟಿಷೇಣೋ ಹೋತ್ರಮೃಷಿರ್ನಿಷೀದನ್ ದೇವಾಪಿರ್ದೇವಸುಮತಿಂ ಚಿಕಿತ್ವಾನ್ ।**

(ಋ. ಸಂ ೧೦-೯೮-೮)

ಇಲ್ಲಿ **ಸುಮತಿಂ** ಎಂದರೆ **ಕಲ್ಯಾಣೀಂ ಮತಿಂ**— ಉತ್ತಮವಾದ ಬುದ್ಧಿಯನ್ನು ಎಂದು ಅರ್ಥವು.

**ವೈಶ್ವಾನರಸ್ಯ ಸುಮತೌ ಸ್ಯಾಮ ರಾಜಾಹಿ ಕಂ ಭುವನಾನಾಮಭಿಶ್ರೀಃ**

(ಋ ಸಂ ೧-೯೮-೧)

ಇಲ್ಲಿಯೂ **ಸುಮತೌ ಕಲ್ಯಾಣ್ಯಾಂ ಮತೌ** ಎಂದರೆ ಒಳ್ಳೆಯ ಬುದ್ಧಿಯಲ್ಲಿ ಎಂದರ್ಥವು. (ನಿ ೭-೨೨)

**ವಯಂ ದೇವಸ್ಯ ಧೀಮಹಿ ಸುಮತಿಂ ಸತ್ಯಧರ್ಮಣಃ**

(ಅ ಸಂ. ೭-೧೭-೨)

ಇಲ್ಲಿಯೂ **ಸುಮತಿಂ ಕಲ್ಯಾಣೀಂ ಮತಿಂ ।** (ನಿ. ೧೧-೧೨) ಉತ್ತಮವಾದ ಬುದ್ಧಿಯನ್ನು ಎಂದೇ ಅರ್ಥವು.

**ತೇಷಾಂ ವಯಂ ಸುಮತೌ ಯಜ್ಞಿಯಾನಾಮಪಿ ಭದ್ರೇ ಸೌಮನಸೇ ಸ್ಯಾಮ ।**

(ಋ. ಸಂ. ೧೦-೧೪-೬)

ಇಲ್ಲಿಯೂ **ಸುಮತೌ ಕಲ್ಯಾಣ್ಯಾಂ ಮತೌ** (ನಿ. ೧೧-೨೦) ಎಂದರೆ ಉತ್ತಮವಾದ ಬುದ್ಧಿಯಲ್ಲಿರುವಂತೆ ಎಂದರ್ಥವು.

**ದೇವಾನಾಂ ಭದ್ರಾ ಸುಮತಿರ್ಋಜೂಯತಾಂ ದೇವಾನಾಂ ರಾತಿರಭಿ ನೋ ನಿವರ್ತತಾಂ ।**
(ಋ ಸಂ ೧-೮೯ ೨)

ಇಲ್ಲಿಯೂ—**ದೇವಾನಾಂ ವಯಂ ಸುಮತೌ ಕಲ್ಯಾಣ್ಯಾಂ ಮತೌ ಸುಮತಿಃ ಶೋಭನಾ ಮತಿಃ ಪ್ರಸಾದಾಭಿಮುಖೀ ಮತಿಃ ।** (ನಿ ೧೭-೪೦) ಎಂದರೆ ಉತ್ತಮನಾದ ಬುದ್ಧಿಯೆಂದೇ ಅರ್ಥವು

ಈ ಋಕ್ಕುಗಳಲ್ಲಿ ಇರುವ ಸುಮತಿ ಶಬ್ದಕ್ಕೆ ಸಾಯಣರು ವ್ಯಾಖ್ಯಾನ ಮಾಡಿರುವಂತೆಯೇ ನಿರುಕ್ತಾರ್ಥವೂ ಇರುವುದು

ಸ್ಕಂದಸ್ವಾಮಿಗಳು—**ಸುಮತಿ** ಶಬ್ದಕ್ಕೆ ಧನವೆಂದು ಅರ್ಥಮಾಡಿ **ಸುಮತಿಂ ಭಿಕ್ಷಮಾಣಾಃ ಧನಾನಿ ಯಾಚಮಾನಾಃ** ದ್ರವ್ಯವನ್ನು ಯಾಚಿಸುವವರೆಂದು ವ್ಯಾಖ್ಯಾನಮಾಡಿರುವರು

**ಯಜ್ಞಿಯಾಸಃ ದಿವಿ ತ್ವೇ ಶ್ರವಃ ದಧಿರೇ-ದಿವಿ ಶ್ರವಃ ಹವಿರ್ಲಕ್ಷಣಮನ್ನಂ ದಧಿರೇ ದೇವೇಭ್ಯೋ ಹವೀಂಷಿ ದಧಿರೇ ಇತ್ಯರ್ಥಃ । ಅಥವಾ ದಿವಿ ಇತಿ ಸಪ್ತಮೀ ನಿರ್ದೇಶಾತ್ ದಿವಿ ವ್ಯವಸ್ಥಿತಾಯ ತುಭ್ಯಂ ಶ್ರವಃ ದಧಿರೇ ದದತಿ ।** ಸ್ಕಂದಸ್ವಾಮಿಗಳು--ಯಜ್ಞಮಾಡುವವರು ದೇವತೆಗಳಿಗಾಗಿ ನಿನ್ನಲ್ಲಿ ಹವಿರ್ಭಾಗಗಳನ್ನು ಅರ್ಪಿಸುವರು. ಅಥವಾ ಸ್ವರ್ಗದಲ್ಲಿ ಇರುವ ನಿನಗಾಗಿ ಹವಿಸ್ಸುಗಳನ್ನು ಹೋಮಮಾಡುವರು ಎಂದು ಎರಡು ವಿಧವಾಗಿ ಅರ್ಥವನ್ನು ಹೇಳಿರುವರು

**ನಕ್ತಾ ಚ ಚಕ್ರುರುಷಸಾ ವಿರೂಪೇ ಕೃಷ್ಣಂ ಚವರ್ಣಮರುಣಂ ಚ ಸಂಧುಃ**--ಈ ಶಬ್ದಗಳಿಗೆ ಸ್ಕಂದಸ್ವಾಮಿಗಳು--**ನಕ್ತೇತಿ ರಾತ್ರಿನಾಮ । ಯಷ್ಟಾರಃ ರಾತ್ರೌ ಚೈತತ್ ಕುರ್ವಂತಿ ಉಷಸಾ ಉಷಸಿ ಚ । ಉಷಸಾ ಚ ಅತ್ರ ಅನಂತರಯೋರ್ದಹರ್ಲಕ್ಷತೇ । ಅಹನಿ ಚೇತ್ಯರ್ಥಃ । ಸುಸಮಿದ್ಧಸ್ಯಾಗ್ನೇರ್ಜ್ವಾಲಾಯಾ ಉಪರಿ ಕೃಷ್ಣೋ ಭವತಿ ಶಿಷ್ಟೋ ಅರುಣಃ । ತೌ ಸಂಧುಃ ಸಂದಧತಿ । ಯಥಾ ತವ ಕೃಷ್ಣಾರುಣೌ ವರ್ಣಾವಪಿ ಭಿನ್ನೌ ಭವತ ಇತ್ಯರ್ಥಃ । ನಕ್ತಾ** ಎಂಬ ಪದವುಇಪ್ಪತ್ತಮೂರು ರಾತ್ರಿನಾಮಗಳಲ್ಲಿ (ನಿ. ೨-೧೮) ಉಕ್ತವಾಗಿರುವುದರಿಂದ ರಾತ್ರಿ ಎಂದು ಅರ್ಥವು ಯಜ್ಞಮಾಡುವವರು ರಾತ್ರಿಯಲ್ಲಿಯೂ ಹಗಲಿನಲ್ಲಿಯೂ ಕೂಡ ಅಗ್ನಿಯನ್ನು ದೀಪ್ತನನ್ನಾಗಿ ಮಾಡಿ ಹೋಮಮಾಡುವರು ಆಗ ಅಗ್ನಿಯ ಜ್ವಾಲೆಗಳು ಚೆನ್ನಾಗಿ ಪ್ರಕಾಶಿಸುತ್ತಿರುವ ಕಾಲದಲ್ಲಿ ಜ್ವಾಲೆಯ ಮೇಲುಗಡೆಯ ಕಪ್ಪು ಬಣ್ಣವೂ ಸ್ವತಸ್ಸಿದ್ಧವಾದ ಅರುಣವರ್ಣವು ಮೂಲಭಾಗದಲ್ಲಿಯೂ ಚೆನ್ನಾಗಿ ಬೇರೆ ಬೇರೆಯಾಗಿ ಇರುವವುಗಳಾದರೂ ಅವುಗಳು ಪೃಥಕ್ಕಾಗಿ ಸ್ಪಷ್ಟವಾಗಿ ಎಲ್ಲರೂ ತಿಳಿಯುವ ಮಟ್ಟಿಗೆ ಅಗ್ನಿಯನ್ನು ಕಾಂತಿಯುಳ್ಳವನನ್ನಾಗಿ ಮಾಡುವರು ಅಥವಾ **ನಕ್ತಾ ಚ ಚಕ್ರುರುಷಸಾ ವಿರೂಪೇ ಇತಿ ದ್ವಿತೀಯಾಂತಾನ್ಯೇತಾನಿ ನ । ಚ ಸಪ್ತಮ್ಯಂತಾನಿದಿವಿಶ್ರವೋ ದಧಿರೇ ಯಜ್ಞಿಯಾಸಃನಕ್ತೋಷಸೌ ವಿಭಿನ್ನರೂಪೇ ಕುರ್ವಂತೀತ್ಯರ್ಥಃ । ನಕ್ತೋಷಸೋರೇವ ಕೃಷ್ಣಂ ಚ ವರ್ಣಮರುಣಂ ಚ ಸಂಧುಃ । ಯಾಗಕಾರಿತ್ವಾತ್ ಯಾಗಸ್ಯ ಚ ಧರ್ಮತ್ವಾತ್ ಕೃತ್ಸ್ನಸ್ಯ ಜಗತೋ ಧರ್ಮಮೂಲತ್ವಾತ್** । ನಕ್ತಾ, ಉಷಸಾ, ವಿರೂಪೇ ಈಪದಗಳು ಸಪ್ತಮೀವಿಭಕ್ತ್ಯಂತಗಳಾಗಿರದೆ ದ್ವಿತೀಯಾವಿಭಕ್ತ್ಯಂತಗಳಾಗಿರುವುವು ಹವಿರ್ಭಾಗಗಳನ್ನು ಅರ್ಪಿಸುವಾಗ ಯಜ್ಞ ಮಾಡುವವರು ರಾತ್ರಿಯನ್ನು ಕೃಷ್ಣವರ್ಣವುಳ್ಳದ್ದನ್ನಾಗಿಯೂ, ಉಷಃಕಾಲವು ಅರುಣವರ್ಣವುಳ್ಳದ್ದನ್ನಾಗಿಯೂ ಇರುವ

ಹಾಗೆ ಮಾಡಿರುವರು ರಾತ್ರಿಯ ಕಾಲದಲ್ಲಿ ಯಾಗಮಾಡುವಾಗ ಚೆನ್ನಾಗಿ ಉದ್ದೀಪ್ತನಾದ ಅಗ್ನಿಯ ಜ್ವಾಲೆಗಳ ಅಗ್ರ ಭಾಗವು ಕಪ್ಪಾಗಿ ಕಾಣುವುದರಿಂದ ರಾತ್ರಿಯು ಕಪ್ಪುಬಣ್ಣವುಳ್ಳದ್ದಾಯಿತೆಂದು ಹೇಳುವರು. ಉಷಃಕಾಲವು ಮೊದಲು ಅರುಣವರ್ಣವುಳ್ಳದ್ದಾಗಿ ಅನಂತರ ಕ್ರಮವಾಗಿ ಶುಭ್ರವಾದ ತೇಜಸ್ಸನ್ನು ಹೊಂದುವುದು ಉಷಃಕಾಲ ಮತ್ತು ರಾತ್ರಿ ಕಾಲಗಳು ಅಗ್ನಿಯಲ್ಲಿ ಯಜಮಾನರು ಹೋಮಮಾಡುವಾಗ ಅಗ್ನಿಯ ಕಾಂತಿಯಿಂದ ಮಿಶ್ರವಾಗಿರುವುದರಿಂದ ವಿರೂಪೇ ಎಂದು ಹೇಳಿಸಿಕೊಳ್ಳುವುವು. ಧರ್ಮಮೂಲವಾಗಿರುವುದರಿಂದ ಸಮಸ್ತವಾದ ಜಗದ್ವ್ಯಾಪಾರಗಳೂ ಆಯಾಯಾ ಕಾಲ ಗಳಲ್ಲಿ ನಡೆಯುವಂತೆ ಅಹೋರಾತ್ರಗಳ ವಿಭಾಗಗಳು ಯಜಮಾನರು ಮಾಡುವ ಯಾಗಗಳಿಂದ ಉಂಟಾಗುತ್ತವೆ ಎಂದು ವಿವರಿಸಿರುವರು. ಇವುಗಳೆಲ್ಲಕ್ಕೂ ಅಗ್ನಿಯೇ ಕಾರಣನಾಗಿರುವನು ಎಂದು ತಾತ್ಪರ್ಯವು.

॥ ವ್ಯಾಕರಣಪ್ರಕ್ರಿಯಾ ॥

**ತ್ವೇ**—ಯುಷ್ಮದ್ ಶಬ್ದ ಸಪ್ತಮೀ ಏಕವಚನ ಪರವಾದಾಗ **ತ್ವಮಾವೇಕವಚನೇ** ಎಂಬ ದರಿಂದ ಮಪರ್ಯಂತಕ್ಕೆ ತ್ವಾದೇಶ **ಸುಪಾಂ ಸುಲುಕ್** ಎಂಬುದರಿಂದ ವಿಭಕ್ತಿಗೆ ಶೇ ಆದೇಶ **ಶೇಷೇಲೋಪಃ** ಸೂತ್ರದಿಂದ ಅದಿಗೆ ಲೋಪ. **ಅತೋಗುಣೇ** ಎಂಬುದರಿಂದ ಪರರೂಪ

**ದಿವಿ— ಊಡಿದಂ ಪದಾದಿ**—ಎಂಬುದರಿಂದ ಸಪ್ತಮೀ ಏಕವಚನಕ್ಕೆ ಉದಾತ್ತಸ್ವರ ಬರುತ್ತದೆ

**ದಧಿರೇ**—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷ ಬಹುವಚನರೂಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಯಜ್ಞಿಯಾಸಃ**—ಅರ್ಹಾರ್ಥದಲ್ಲಿ ಯಜ್ಞಶಬ್ದದ ಮೇಲೆ **ಯಜ್ಞರ್ತ್ವಿಗ್ಭ್ಯಾಂ ಘಖಞೌ** (ಪಾ. ಸೂ ೫-೧-೭೧) ಎಂಬುದರಿಂದ ಘ ಪ್ರತ್ಯಯ **ಆಯನೇಯೀನೀ**—ಎಂಬುದರಿಂದ ಇಯಾದೇಶ **ಯಸ್ಯೇತಿ ಚ** ಎಂಬುದರಿಂದ ಅಕಾರಲೋಪ ಯಜ್ಞಿಯ ಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಜಸ್ಸಿಗೆ ಅಸುಕಾಗಮ

**ನಕ್ತಾ**—ನಕ್ತ ಶಬ್ದಕ್ಕೆ ದ್ವಿತೀಯಾ ವಿಭಕ್ತಿ ಪರವಾದಾಗ **ಸುಪಾಂ ಸುಲುಕ್**—ಎಂಬುದರಿಂದ ಅದಕ್ಕೆ ಡಾದೇಶ.

**ಚಕ್ರುಃ**—ಡುಕೃಞ್ ಕರಣೇ ಧಾತು ಲಿಟ್ ಪ್ರಥಮಪುರುಷ ಬಹುವಚನರೂಪ **ಚವಾಯೋಗೇ ಪ್ರಥಮಾ** (ಪಾ ಸೂ. ೮-೧-೫೯) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ ಪ್ರತ್ಯಯಸ್ವರದಿಂದ ಅಂತೋದಾತ್ತಸ್ವರ ಬರುತ್ತದೆ.

**ಉಷಸಾ— ಸುಪಾಂ ಸುಲುಕ್**—ಸೂತ್ರದಿಂದ ವಿಭಕ್ತಿಗೆ ಆಕಾರ

**ಧುಃ**—ಡುಧಾಞ್ ಧಾರಣಪೋಷಣಯೋಃ ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಆದೇಶ ಲುಙ್‌ನಲ್ಲಿ ಪ್ರಾಪ್ತವಾದ ಚ್ಲಿಗೆ ಆದೇಶವಾಗಿ ಬಂದ ಸಿಚಿಗೆ **ಗಾತಿಸ್ಥಾಘುಪಾಭೂಭ್ಯಃ**—(ಪಾ. ಸೂ ೨-೪-೭೭) ಎಂಬುದರಿಂದ ಲುಕ್. **ಆತಃ** (ಪಾ. ಸೂ ೩-೪-೧೧೦) ಸಿಚ್ ಲುಕ್ಕಾದಾಗ ಆದಂತದ ಪರದಲ್ಲಿರುವ ಝಿಗೆ ಜುಸಾದೇಶ ಎಂದುದರಿಂದ ಇಲ್ಲಿ ಜುಸಾದೇಶ ಬರುತ್ತದೆ. **ಉಸ್ಯಪದಾಂತಾತ್** (ಪಾ. ಸೂ. ೬-೧-೯೬) ಎಂಬುದರಿಂದ ಪರರೂಪ ಏಕಾದೇಶವಾಗಿ ಬರುತ್ತದೆ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗವು ಬರುವುದಿಲ್ಲ ಅತಿಙಂತದ ಪರದಲ್ಲಿ ಬಂದುದರಿಂದ **ತಿಙ್ಙತಿಙಃ** (ಪಾ ಸೂ ೮-೧-೨೮) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೭ ॥

॥ ಸಂಹಿತಾಪಾಠಃ ॥

ಯೂನಾ ರಾಯೋ ಮರ್ತಾನಸ್ಸುಷೂದೋ ಅಗ್ನೇ ತೇ ಸ್ಯಾಮ
ಮಘವಾನೋ ವಯಂ ಚ ।
ಛಾಯೇವ ವಿಶ್ವಂ ಭುವನಂ ಸಿಸಕ್ಷ್ಯಾಪಪ್ರಿವಾನ್ರೋದಸೀ ಅಂತ-
ರಿಕ್ಷಂ ॥ ೮ ॥

॥ ಪದಪಾಠಃ ॥

ಯೂನ್ । ರಾಯಃ । ಮರ್ತಾನ್ । ಸುಸೂದಃ । ಅಗ್ನೇ । ತೇ । ಸ್ಯಾಮ ।
ಮಘಽವಾನಃ । ವಯಂ । ಚ ।
ಛಾಯಾಽಇವ । ವಿಶ್ವಂ । ಭುವನಂ । ಸಿಸಕ್ಷಿ । ಆಪಪ್ರಿಽವಾನ್ । ರೋದಸೀ
ಇತಿ । ಅಂತರಿಕ್ಷಂ ॥ ೮ ॥

॥ ಸಾಯಣಭಾಷ್ಯಂ ॥

ಯೋನ್ಮರ್ತಾನ್ಮನುಷ್ಯಾನಸ್ಮಾನ್ರಾಯೇ ಧನಾಯ ಸುಷೂದಃ ಅಗ್ನಿಹೋತ್ರಾದಿಕರ್ಮಸು ಪ್ರೇರಯಸಿ ತೇ ತಾದೃಶಾ ವಯಂ ಚ ಮಘವಾನೋ ಧನಿನಃ ಸ್ಯಾಮ । ಭವೇಮ । ರೋದಸೀ ದ್ಯಾವಾಪೃಥಿವ್ಯಾವಂತರಿಕ್ಷಂ ಚಾಪಪ್ರಿವಾನ್ ಸ್ವತೇಜಸಾ ವೃಷ್ಟ್ಯುದಕೇನ ವಾಪೂರಿತವಾಂಸ್ತ್ವಂ ಚ ವಿಶ್ವಂ ಭುವನಂ ಸರ್ವಂ ಜಗತ್ ಸಿಸಕ್ಷಿ । ಸೇವಸೇ । ಅನುಗೃಹ್ಯ ಸರ್ವಂ ರಕ್ಷಸೀತ್ಯರ್ಥಃ । ತತ್ರ ದೃಷ್ಟಾಂತಃ । ಛಾಯೇವ । ಯಥಾ ಛತ್ರಾದೇಶ್ಛಾಯಾತಪಾದಿಜನಿತಂ ಕ್ಲೇಶಂ ನಿವಾರ್ಯ ರಕ್ಷತಿ ತದ್ವತ್ ॥ ರಾಯೇ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಸುಷೂದಃ । ಷೂದ ಪ್ರೇರಣೇ । ಲೇಟ್ಯಡಾ-ಗಮಃ । ಬಹುಲಂ ಛಂದಸೀತಿ ಶಪಃ ಶ್ಲುಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಯದ್ವೃತ್ತಾ-ನ್ನಿತ್ಯಮಿತಿ ನಿಘಾತಪ್ರತಿಷೇಧಃ । ಸಿಸಕ್ಷಿ । ಷಚ ಸಮವಾಯೇ । ಬಹುಲಂ ಛಂದಸೀತಿ ಶಪಃ ಶ್ಲುಃ । ಇದಿತ್ಯನುವೃತ್ತೌ ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಆಪಪ್ರಿವಾನ್ । ಪ್ರಾ ಪೂರಣೇ । ಲಿಟಃ ಕ್ವಸುಃ । ವಸ್ವೇಕಾಜಾದ್ಘಸಾಮಿತೀಡಾಗಮಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ದ್ವಿರ್ವಚ-ನೇಽಚೀತಿ ಸ್ಥಾನಿವದ್ಭಾವಾತ್ ದ್ವಿರ್ಭಾವಾದಿ ॥

॥ ಪ್ರತಿಪದಾರ್ಥ ॥

**ಯಾನ್ ಮರ್ತಾನ್**—ಯಾವ ಮನುಷ್ಯರನ್ನು (ನಮ್ಮನ್ನು) । **ರಾಯೇ**—ಧನಕ್ಕೋಸ್ಕರ । **ಸುಷೂದಃ**-(ಅಗ್ನಿಹೋತ್ರಾದಿ ಕರ್ಮಗಳಲ್ಲಿ) ಪ್ರೇರಿಸುತ್ತೀಯೋ । **ತೇ ವಯಂ ಚ**—ಅಂತಹ ನಾವೂ ಕೂಡ । **ಮಘವಾನಃ**—ಧನವಂತರಾಗಿ । **ಸ್ಯಾಮ**—ಆಗೋಣ । **ರೋದಸೀ**—ಸ್ವರ್ಗ ಮತ್ತು ಭೂಲೋಕಗಳನ್ನೂ । **ಅಂತರಿಕ್ಷಂ ಚ**—ಆಕಾಶವನ್ನೂ । **ಆಪಪ್ರಿವಾನ್**—ನಿನ್ನ ತೇಜಸ್ಸಿನಿಂದ (ವೃಷ್ಟ್ಯುದಕದಿಂದ) ತುಂಬಿದ (ನೀನು) । **ಛಾಯೇವ** ನೆರಳಿನಂತೆ । **ವಿಶ್ವಂ ಭುವನಂ**—ಸಮಸ್ತಜಗತ್ತನ್ನೂ । **ಸಿಸಕ್ಷಿ**—ಸೇವಿಸುತ್ತೀ ।

॥ ಭಾವಾರ್ಥ ॥

ಐಶ್ವರ್ಯಪ್ರಾಪ್ತಿಗಾಗಿ, (ಯಾಗಾದಿಗಳನ್ನು ಮಾಡಿ ಎಂದು) ನಿನ್ನಿಂದ ಪ್ರೇರಿತರಾದ ಮರ್ತ್ಯರಾದ ನಾವು (ನಿನ್ನ ಅನುಗ್ರಹದಿಂದ) ಧನಿಕರಾಗೋಣ ನೀನು ನಿನ್ನ ತೇಜಸ್ಸಿನಿಂದ (ವೃಷ್ಟ್ಯುದಕದಿಂದ), ಭೂಮಿ, ಆಕಾಶ, ಸ್ವರ್ಗಗಳನ್ನು ಆವರಿಸಿಕೊಂಡು, ಸಮಸ್ತ ಜಗತ್ತನ್ನೂ, (ಆಶ್ರಯಕೊಡುವ) ನೆರಳಿನಂತೆ ರಕ್ಷಿಸುತ್ತೀ.

## English Translation.

May we mortals, whom you have directed (to the performance of sacrifices) for the sake of riches, become opulent; filling heaven and earth and the firmanent (with your radiance), you protect the whole world like a (sheltering) shade

॥ ವಿಶೇಷವಿಷಯಗಳು ॥

**ವಿಶ್ವಂ ಛಾಯೇವ ಸಿಸಕ್ತಿ— ಭುವನಂ ಸರ್ವಂ ಕ್ಲೇಶಂ ನಿವಾರ್ಯ ರಕ್ಷತಿ ಛಾಯಾ ತದ್ವತ್ ।** ಸಾಯಣರು—ಛತ್ರಿಯನ್ನು ಹಿಡಿದುಕೊಂಡಾಗ ಅದರ ನೆರಳು ಬಿಸಿಲು ಮೊದಲಾದ ಕ್ಲೇಶಗಳಿಂದ ತೊಂದರೆಯು ಉಂಟಾಗದ ಹಾಗೆ ರಕ್ಷಿಸುವಂತೆ ಅಗ್ನಿಯು ಜಗತ್ತೆಲ್ಲವನ್ನೂ ರಕ್ಷಿಸುತ್ತಿರುವನು ಎಂದು ಅರ್ಥವನ್ನು ವಿವರಿಸಿರುವರು ಸ್ಕಂದಸ್ವಾಮಿಗಳು—**ಯಥಾ ಛಾಯಾ ನಿತ್ಯಸನ್ನಿಹಿತಾ ಏವಂ ತ್ವಂ ವಿಶ್ವಂ ಭುವನಂ ಭೂತಜಾತಂ ಸಿಸಕ್ಷಿ ದಹನಪಚನಾದಿನಾ ಸೇವಸೇ ।** ಪ್ರಾಣಿಗಳ ನೆರಳು ಯಾವಾಗಲೂ (ಸಮೀಪದಲ್ಲಿದ್ದು) ಸೇವೆಮಾಡುವುದಕ್ಕೆ ಸಿದ್ಧವಾಗಿರುವಂತೆ ಅಗ್ನಿಯು ಪ್ರಪಂಚದ ಎಲ್ಲಾ ಪ್ರಾಣಿಗಳ ಆಹಾರವನ್ನೂ ಪಚನೆಮಾಡುವುದೇ ಮೊದಲಾದ ಕಾರ್ಯಗಳನ್ನು ನೆರವೇರಿಸುವುದರಿಂದ ಎಲ್ಲರನ್ನೂ ಅನುಗ್ರಹಮಾಡಿ ರಕ್ಷಿಸುವನು ಎಂದು ವಿವರಿಸಿರುವರು

**ರೋದಸೀ ಅಪಪ್ರಿವಾರ್—ಸ್ವಧೇ, ಪುರಂಧೀ** ಎಂಬ ಇಪ್ಪತ್ತುನಾಲ್ಕು ದ್ಯಾವಾಪೃಥಿವೀ ನಾಮಗಳಲ್ಲಿ **ರೋದಸೀ** ಎಂಬ ಪದವು (ನಿ ೩-೨೨) ಉಕ್ತವಾಗಿರುವುದರಿಂದ ದ್ಯಾವಾಪೃಥಿವೀ ಎಂದು ಅರ್ಥವು ಇದೇಅರ್ಥದಲ್ಲಿ **ರೋದಸೀ** ಎಂಬ ಶಬ್ದವು ಅನೇಕಕಡೆಗಳಲ್ಲಿ ಪ್ರಯುಕ್ತನಾಗಿರುತ್ತದೆ. **ಏತ್ತಂ ಮೇ ಅಸ್ಯ ರೋದಸೀ** (ನಿ ೪-೬) **ಇಮೇ ಚಿದಿಂದ್ರ ರೋದಸೀ** (ನಿ ೬-೧) ಇತ್ಯಾದಿ. ಅಗ್ನಿಯು ಭೂವ್ಯಂತರಕ್ಷಗಳನ್ನು ಪೂರ್ಣವಾಗಿ ತನ್ನ ತೇಜಸ್ಸುಗಳಿಂದಲೂ, ವೃಷ್ಟ್ಯುದಕಗಳಿಂದಲೂ ವ್ಯಾಪಿಸಿರುವನು ಎಂದು ಅರ್ಥವು

॥ ವ್ಯಾಕರಣಪ್ರಕ್ರಿಯಾ ॥

**ರಾಯೇ**— ರೈ ಶಬ್ದ. ಚತುರ್ಥೀ ಏಕವಚನ ಙೇ ಪರವಾದಾಗ ಆಯಾದೇಶ **ಊಡಿದಂ ಪದಾದಿ**— ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಸುಷೂದಃ**—ಷೂದ ಪ್ರೇರಣೇ ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ **ಇತಶ್ಚಲೋಪ ಪರಸ್ಮೈಪದೇಷು** ಸೂತ್ರದಿಂದ ಇಕಾರಲೋಪ **ಲೇಟೋಽಡಾಟೌ** ಎಂಬುದರಿಂದ ಅದಕ್ಕೆ ಅಡಾಗಮ **ಬಹುಲಂ ಛಂದಸಿ** ಎಂಬುದರಿಂದ ಶಪ್ಪಿಗೆ ಶ್ಲು ಆದೇಶ **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ. ಹ್ರಸ್ವ ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದ **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತವಾಗುತ್ತದ

**ಸ್ಯಾಮ**—ಅಸ ಭುವಿ ಧಾತು. ವಿಧಿಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ **ನಿತ್ಯಂ ಙಿತಃ** ಎಂಬುದರಿಂದ ಸಕಾರಲೋಪ. **ಯಾಸುಟ್ ಪರಸ್ಮೈ**—ಎಂಬುದರಿಂದ ಯಾಸುಟಾಗಮ. ಅದಕ್ಕೆ ಙಿತ್ವ ವಿಧಾನಮಾಡಿರುವುದರಿಂದ **ಶ್ನಸೋರಲ್ಲೋಪಃ** (ಪಾ ಸೂ ೬-೪-೧೧೧) ಸೂತ್ರದಿಂದ ಧಾತುವಿನ ಅಕಾರಕ್ಕೆ ಲೋಪ **ಲಿಙಃಸಲೋಪೋನಂತಸ್ಯ** (ಪಾ ಸೂ ೭-೨-೭೯) ಎಂಬುದರಿಂದ ಸಕಾರಕ್ಕೆ ಲೋಪ ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಸಿಸಕ್ತಿ**—ಷಚ ಸಮವಾಯೇ ಧಾತು **ಧಾತ್ವಾದೇ ಷಃಸಃ** ಎಂಬುದರಿಂದ ಆದಿಗೆ ಸತ್ವ. ಲಟ್ ಮಧ್ಯಮ ಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ **ಬಹುಲಂ ಛಂದಸಿ** ಎಂಬುದರಿಂದ ಶಪ್ಪಿಗೆ ಶ್ಲುವಿಕರಣ **ಶ್ಲೌ** ಸೂತ್ರದಿಂದ ಧಾತುವಿಗೆ ದ್ವಿತ್ವ **ಬಹುಲಂ ಛಂದಸಿ** ಎಂಬುದರಿಂದ ಇಲ್ಲಿಯೂ **ಭೃಞಾಮಿತ್** ಸೂತ್ರದಿಂದ ಇತ್ ಎಂದು ಅನುವೃತ್ತವಾಗುವುದರಿಂದ ಅಭ್ಯಾಸಕ್ಕೆ ಇತ್ವ ಬರುತ್ತದೆ **ಚೋಃಕುಃ** ಎಂಬುದರಿಂದ ಧಾತುವಿನ ಚಕಾರಕ್ಕೆ ಕಕಾರಾದೇಶ **ಆದೇಶಪ್ರತ್ಯಯಯೋಃ** ಸೂತ್ರದಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಸಿಸಕ್ತಿ ಎಂದು ರೂಪವಾಗುತ್ತದೆ. ಅತಿಜಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಆ ಪಪ್ರಿವಾನ್**—ಪ್ರಾ ಪೂರಣೇ ಧಾತು ಇದಕ್ಕೆ ಲಿಟ್ ಬಂದಾಗ ಅದಕ್ಕೆ **ಕ್ವಸುಶ್ಚ** (ಪಾ ಸೂ ೩-೨-೧೦೭) ಎಂಬುದರಿಂದ ಕ್ವಸು ಪ್ರತ್ಯಯ ಧಾತುವು ಏಕಾಚಾದುದರಿಂದ **ವಸ್ವೇಕಾಚಾದ್ಘಸಾಂ** (ಪಾ ಸೂ. ೭-೨-೬೭) ಎಂಬುದರಿಂದ ವಸುವಿಗೆ ಇಡಾಗಮ ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ ಪಪ್ರಾ+ಇವಸ್ ಎಂದಿರುವಾಗ **ಆತೋಲೋಪ ಇಟಿಚ** (ಪಾ ಸೂ ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ **ದ್ವಿರ್ವಚನೇಚಿ** (ಪಾ. ಸೂ ೧-೧-೫೯) ಎಂಬುದರಿಂದ ಮೊದಲು ಆಲೋಪವಾದರೂ ಸ್ಥಾನಿವದ್ಭಾವ ಬರುವುದರಿಂದ ದ್ವಿತ್ವಾದಿಗಳು ಹಿಂದಿನಂತೆಯೇ ಬರುತ್ತವೆ ಪ್ರತ್ಯಯ ಸ್ವರದಿಂದ ವಕಾರೋತ್ತರಾಕಾರ ಉದಾತ್ತವಾಗುತ್ತದೆ. ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯ**—ಎಂಬುದರಿಂದ ಉಪಧಾದೀರ್ಘ. ಉಗಿತ್ತಾದುದರಿಂದ ನುಮಾಗಮ **ಹಲ್‌ಙ್ಯಾಭ್ಯೋ**—ಸೂತ್ರದಿಂದ ಸುಲೋಪ ಸಂಯೋಗಾಂತಲೋಪದಿಂದ ಸಕಾರ ಲೋಪ. ಅದು ಅಸಿದ್ಧವಾಗುವುದರಿಂದ **ನಲೋಪಃ**—ಸೂತ್ರದಿಂದ ನಕಾರಕ್ಕೆ ಲೋಪ ಬರುವುದಿಲ್ಲ. ॥ ೮ ॥



॥ ಸಂಹಿತಾಪಾಠಃ ॥

ಅರ್ವದ್ಭಿರಗ್ನೇ ಅರ್ವತೋ ನೃಭಿರ್ನೄನ್ವೀರೈರ್ವೀರಾನ್ವನು-
ಯಾಮಾ ತ್ವೋತಾಃ ।
ಈಶಾನಾಸಃ ಪಿತೃವಿತ್ತಸ್ಯ ರಾಯೋ ವಿ ಸೂರಯಃ ಶತಹಿಮಾ
ನೋ ಅಶ್ಯುಃ ॥ ೯ ॥

॥ ಪದಪಾಠಃ ॥

ಅರ್ವತ್ಽಭಿಃ । ಅಗ್ನೇ । ಅರ್ವತಃ । ನೃಽಭಿಃ । ನೄನ್ । ವೀರೈಃ । ವೀರಾನ್ । ವನುಯಾಮ । ತ್ವಾಽಊತಾಃ ।

ಈಶಾನಾಸಃ । ಪಿತೃಽವಿತ್ತಸ್ಯ । ರಾಯಃ । ವಿ । ಸೂರಯಃ । ಶತಽಹಿಮಾಃ । ನಃ । ಅಶ್ಯುಃ ॥ ೮ ॥

। ಸಾಯಣಭಾಷ್ಯಂ ।

ಹೇ ಅಗ್ನೇ ತ್ವೋತಾಸ್ತ್ವಯಾ ರಕ್ಷಿತಾಃ ಸಂತೋ ವಯಮರ್ವದ್ಭಿರಸ್ಮದೀಯೈರಶ್ವೈರರ್ವತಃ ಶತ್ರುಸಂಬಂಧಿನೋಽಶ್ವಾನ್ನೃಭಿರಸ್ಮದೀಯೈರ್ಭಟೈರ್ನೄನ್ ಶತ್ರೋರ್ಭಟಾನ್ । ವೀರ್ಯಾಜ್ಜಾಯಂತ ಇತಿ ವೀರಾಃ ಪುತ್ರಾಃ । ತೈರ್ವೀರಾನ್ ಶತ್ರುಪುತ್ರಾಂಶ್ಚ ವನುಯಾಮ । ಹನ್ಯಾಮ । ವನುಷ್ಯತಿರ್ಹಂತಿಕರ್ಮಾನವಗತಸಂಸ್ಕಾರೋ ಭವತಿ । ನಿ ೫-೨ । ಇತಿ ಯಾಸ್ಕಃ । ಪಿತೃವಿತ್ತಸ್ಯ ಪಿತ್ರಾದಿಪರಂಪರಯಾ ಲಬ್ಧಸ್ಯ ರಾಯೋ ಧನಸ್ಯೇಶಾನಾಸಃ ಸ್ವಾಮಿನಃ ಸೂರಯೋ ವಿದ್ವಾಂಸೋ ನೋಽಸ್ಮಾಕಂ ಪುತ್ರಾಃ ಶತಹಿಮಾಃ ಶತಂ ಸಂವತ್ಸರಾನ್ ಜೀವಂತಃ ಸಂತೋ ವ್ಯಶ್ಯುಃ । ವಿಶೇಷೇಣ ಭುಂಜತಾಂ । ಅಸ್ಮದೀಯಾನಾಂ ಪುತ್ರಾಣಾಮಾರೋಗ್ಯಂ ದೀರ್ಘಮಾಯುಶ್ಚ ಭವತ್ವಿತ್ಯರ್ಥಃ ॥ ತ್ವೋತಾಃ ತ್ವಯೋತಾಃ । ಪ್ರತ್ಯಯೋತ್ತರಪದಯೋಶ್ಚೇತಿ ಮಪರ್ಯಂತಸ್ಯ ತ್ವಾದೇಶಃ । ವ್ಯತ್ಯಯೇನಾತ್ವಂ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಶತಹಿಮಾಃ । ಅತ್ರ ಹಿಮಶಬ್ದೇನ ತದ್ವಾನ್ಹೇಮಂತೋ ಲಕ್ಷ್ಯತೇ । ಬ್ರಾಹ್ಮಣಂ ಚ ಭವತಿ । ಶತಂ ಹಿಮಾ ಇತ್ಯಾಹ ಶತಂ ತ್ವಾ ಹೇಮಂತಾನಿ ಧಿಷೀಯೇತಿ ವಾವೈತದಾಹೇತಿ । ಶತಂ ಹಿಮಾಃ ಶತಂ ಹೇಮಂತರ್ತವೋ ಯೇಷಾಂ ತೇ ಶತಸಂವತ್ಸರಜೀವಿನ ಇತ್ಯರ್ಥಃ । ಅಶ್ಯುಃ । ಅಶ ಭೋಜನೇ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವೋತಾಃ**—ನಿನ್ನಿಂದ ರಕ್ಷಿತರಾದ (ನಾವು) । **ಅರ್ವದ್ಭಿಃ**- (ನಮ್ಮ) ಅಶ್ವಗಳಿಂದ । **ಅರ್ವತಃ**—(ಶತ್ರು ಸಂಬಂಧವಾದ) ಅಶ್ವಗಳನ್ನೂ । **ನೃಭಿಃ**—(ನಮ್ಮ) ಭಟರಿಂದ । **ನೄನ್**—(ಶತ್ರುಗಳ) ಭಟರನ್ನೂ । **ವೀರೈಃ**—(ನಮ್ಮ) ವೀರರಿಂದ (ಪುತ್ರರಿಂದ) । **ವೀರಾನ್**—(ಶತ್ರುಪಕ್ಷದ) ವೀರರನ್ನೂ (ಪುತ್ರರನ್ನೂ) । **ವನುಯಾಮ**—ವಧಮಾಡೋಣ । **ಪಿತೃವಿತ್ತಸ್ಯ**—ಪಿತೃಪರಂಪರೆಯಾಗಿ ಬಂದ । **ರಾಯಃ**—ಧನಕ್ಕೆ । **ಈಶಾನಾಸಃ**—ಸ್ವಾಮಿಗಳಾದ । **ಸೂರಯಃ**—ವಿದ್ವಾಂಸರಾದ । **ನಃ**—ನಮ್ಮ ಪುತ್ರರು । **ಶತಹಿಮಾಃ**—ನೂರುವರ್ಷವುಳ್ಳವರಾಗಿ (ನೂರು ವರ್ಷಕಾಲ ಜೀವಿಸುವವರಾಗಿ) । **ವಿ ಅಶ್ಯುಃ**—ಚೆನ್ನಾಗಿ ಭುಜಿಸಲಿ (ಬಾಳಲಿ).

॥ ಭಾವಾರ್ಥ ॥

ಅಗ್ನೀ, ನಾವು, ನಿನ್ನಿಂದ ರಕ್ಷಿತರಾಗಿ, ಶತ್ರುಗಳ ಅಶ್ವಗಳನ್ನು ನಮ್ಮ ಅಶ್ವಗಳಿಂದ, ಅವರ ಭಟರನ್ನು ನಮ್ಮ ಭಟರ ಮೂಲಕ, ಅವರ ಪುತ್ರರನ್ನು ನಮ್ಮ ಪುತ್ರರಮೂಲಕ, ನಾಶಮಾಡೋಣ. ಪಿತ್ರಾರ್ಜಿತವಾದ ಐಶ್ವರ್ಯಯುಕ್ತರಾದ ಮತ್ತು ವಿದ್ವಾಂಸರಾದ ನಮ್ಮ ಪುತ್ರರು ನೂರು ವರ್ಷಗಳು ಬದುಕಲಿ

English Translation

Defended, Agni, by you, may we destroy the horses (of our enemies) by (our) horses, their men by our men, their sons by (our) sons, and may our sons, learned, and inheritors of ancestral wealth, live for a hundred winters

॥ ವಿಶೇಷವಿಷಯಗಳು ॥

**ಅರ್ವದ್ಭಿಃ ಅರ್ವತಃ—ಅರ್ವ ಶಬ್ದವು— ಅತ್ಯಃ ಹಯಃ,** ಎಂಬ ಇಪ್ಪತ್ತಾರು **ಅಶ್ವ**ನಾಮಗಳಲ್ಲಿ (ನಿ ೨-೨೭) ಉಕ್ತವಾಗಿರುವುದರಿಂದ ಕುದುರೆಗಳಿಂದು ಅರ್ಥವು

**ವೀರೈಃ ವೀರಾನ್—ವೀರ್ಯಾತ್ ಜಾಯಂತ ಇತಿ ವೀರಾಃ ಪುತ್ರಾಃ** (ಸಾ. ಭಾ.) ವೀರ್ಯದಿಂದ ಉತ್ಪನ್ನರಾಗುವಕಾರಣ ಪುತ್ರರಿಗೆ ವೀರರೆಂದು ಹೆಸರು ಉಂಟಾಗಿರುವುದು. **ವೀರೋ ವೀರಯತ್ಯಮಿತ್ರಾನ್ ವೇತ್ತೇರ್ವಾ ಸ್ಯಾದ್ಗತಿಕರ್ಮಣೋ ವೀರಯತೇರ್ವಾ** (ನಿ. ೧-೭) ವೀರಶಬ್ದವು ಶತ್ರುಗಳನ್ನು ಅನೇಕ ವಿಧದಿಂದ ನಾಶಮಾಡುವನು, ಎಂಬ ಅರ್ಥವನ್ನು ಬೋಧಿಸುವುದು, ಗಮನವೆಂಬ ಅರ್ಥವುಳ್ಳ ಧಾತುವಿನಿಂದಲಾಗಲಿ ವೀರ-ಶಬ್ದದರೂಪವು ಸಿದ್ಧವಾಗುವುದು **ಬೃಹದ್ವದೇಮ ವಿದಥೇ ಸುವೀರಾಃ** (ಋ ಸಂ ೨-೬-೬-೬) (ನಿ ೧-೭) ಇಲ್ಲಿ ಸುವೀರಾಃ ಎಂಬ ಪದಕ್ಕೆ ಪುತ್ರರು, ಶತ್ರುಗಳನ್ನು ನಾಶಮಾಡುವ ಶೂರರು ಎಂದು ಎರಡು ವಿಧವಾದ ಅರ್ಥಗಳನ್ನೂ ಮಾಡಿರುತ್ತಾರೆ

**ರಾಯಃ—ಮಘಂ, ರೇಕ್ಣಃ,** ಎಂಬ ಇಪ್ಪತ್ತೆಂಟು ಧನನಾಮಗಳಲ್ಲಿ (ನಿ ೩-೯) **ಈ** ಶಬ್ದವು ಉಕ್ತವಾಗಿರುವುದು **ಪಿತ್ರಸ್ಯೇವ ರಾಯಃ** (ಋ ಸಂ ೬-೪-೧೨-೨) (ನಿ-೪-೭) ಇಲ್ಲಿ ರಾಯಃ ಎಂಬ ಪದಕ್ಕೆ **ಧನ**ವೆಂದು ಅರ್ಥವು

**ಶತಹಿಮಾಃ—ಶತಂ ಸಂವತ್ಸರಾನ್** ನೂರು ವರ್ಷಗಳು ಎಂದು ಅರ್ಥವು ಇಲ್ಲಿ ಹಿಮ ಎಂಬ ಶಬ್ದದಿಂದ ಹಿಮವು ಬಹಳವಾಗಿರುವ ಹೇಮಂತಋತುವೆಂದು ಅರ್ಥವು **ಶತಂ ಹಿಮಾ ಇತ್ಯಾಹ ಶತಂ ತ್ವಾ ಹೇಮಂತಾನ್ ಇಂಧಿಷೀಯೇತಿ ವಾವೈತದಾಹ** (ತೈ ಸಂ. ೧-೫-೮-೫) **ಇತಿ** । ಎಂಬದಾಗಿ ತೈತ್ತಿರೀಯ ಸಂಹಿತೆಯ ವಾಕ್ಯವು ಈ ಅಭಿಪ್ರಾಯವನ್ನು ಬೋಧಿಸುವುದು. **ಶತಂ ಹಿಮಾಃ—ಶತಂ ಹೇಮಂತರ್ತವೋ ಯೇಷಾಂ ತೇ** ನೂರು ಆವೃತ್ತಿಯಾದ ಹೇಮಂತ ಋತುಗಳ ಪೂರ್ತಿಯಾಗುವವರಿಗೂ ಇರುವವರು ಎಂದು ಅರ್ಥವು.

**ಅರ್ವದ್ಭಿಃ ಅರ್ವತಃ, ವೀರೈಃ ವೀರಾನ್, ನೃಭಿಃ ನೄನ್ ವನುಯಾಮ**—ಎಲೈ ಅಗ್ನಿಯೇ, ನಾವು ನಿನ್ನಿಂದ ರಕ್ಷಿತರಾಗಿ ಶತ್ರುಗಳನ್ನು ಅನೇಕ ವಿಧವಾಗಿ ನಿಗ್ರಹಮಾಡಿ ಶತ್ರುಗಳನ್ನು ಕೊಲ್ಲೋಣ ಎಂದು ಪ್ರಾರ್ಥನೆಯು ಇಲ್ಲಿ ಉಕ್ತವಾಗಿರುತ್ತದೆ. ವನುಧಾತುವು **ವನುಷ್ಯತಿರ್ಹಂತಿಕರ್ಮಾ ನವಗತಸಂಸ್ಕಾರೋ ಭವತಿ** (ನಿ. ೫-೨) **ಹನನ** ಎಂಬ ಕರ್ಮಬೋಧಕವಾಗಿ ಇರುವುದು ಎಂದು ಯಾಸ್ಕರು ಅರ್ಥಮಾಡಿರುವರು

**ನಃ ಶತಹಿಮಾಃ ವ್ಯಶ್ಯುಃ—ಅಸ್ಮಾಕಂ ಪುತ್ರಾಃ ಶತಸಂವತ್ಸರಾನ್ ಜೀವಂತಃ ವಿಶೇಷೇಣ ಭುಂಜತಾಂ** । ನಮ್ಮ ಮಕ್ಕಳು ನೂರು ವರ್ಷಗಳವರೆಗೂ ಜೀವಿಸುವವರಾಗಿ ಅತಿಶಯವಾದ ಐಶ್ವರ್ಯವನ್ನು ಅನುಭವಿಸಲಿ, ಎಂದು ಅಗ್ನಿಯನ್ನು ಕುರಿತು ಪ್ರಾರ್ಥನೆಯು ಇಲ್ಲಿ ಉಕ್ತವಾಗಿರುತ್ತದೆ

॥ ವ್ಯಾಕರಣಪ್ರಕ್ರಿಯಾ ॥

**ಅರ್ವದ್ಭಿಃ**- ಋ ಗತೌ ಧಾತು. ಇದಕ್ಕೆ **ಅನ್ಯೇಭ್ಯೋಽಪಿದೃಶ್ಯತೇ** (ಪಾ. ಸೂ. ೩-೨-೭೫) ಎಂಬುದರಿಂದ ವನಿಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ ರಪರತ್ವ. ಅರ್ವನ್ ಶಬ್ದವಾಗುತ್ತದೆ. ಇದಕ್ಕೆ ಭಿಸ್ ಪರವಾದಾಗ **ಅರ್ವಣಸ್ತ್ರಸಾವನಞಃ** ಎಂಬುದರಿಂದ ತೃ ಅಂತಾದೇಶವಾಗಿ ಬರುತ್ತದೆ

**ವನುಯಾಮ**—ವನು ಚ ನೋಚ್ಯತೇ ಎಂದು ಧಾತುಪಾಠದಲ್ಲಿ ಪಠಿತವಾಗಿದೆ. ಇದಕ್ಕೆ ಅನೇಕಾರ್ಥ ವಿರುವುದರಿಂದ ಇದೇ ಅರ್ಥವೆಂದು ನಿರ್ಧರಿಸಲಾಗುವುದಿಲ್ಲವೆಂದು ತಾತ್ಪರ್ಯ. ನಿರುಕ್ತದಲ್ಲಿ ವಿವೃತವಾದಂತೆ ಇಲ್ಲಿ ಹಿಂಸಾರ್ಥದಲ್ಲಿ ಪ್ರಯುಕ್ತವಾಗಿದೆ. ವಿಧಿಲಿಙ್ ಉತ್ತಮಪುರುಷ ಬಹುವಚನರೂಪ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ

**ತ್ವೋತಾಃ** -ತ್ವಯಾ ಊತಾಃ ತ್ವೋತಾಃ ಯುಷ್ಮಚ್ಛಬ್ದವು ಏಕತ್ವವಿಶಿಷ್ಟಾರ್ಥಪ್ರತಿಪಾದಕವಾಗಿದ್ದು ಇದಕ್ಕೆ ಉತ್ತರಪದ ಪರದಲ್ಲಿರುವುದರಿಂದ **ಪ್ರತ್ಯಯೋತ್ತರಪದಯೋಶ್ಚ** (ಪಾ. ಸೂ. ೭-೨-೯೮) ಎಂಬುದರಿಂದ ಮಪರ್ಯಂತಕ್ಕೆ ತ್ವಾದೇಶ. **ಶೇಷೇ ಲೋಪಃ** ಸೂತ್ರದಿಂದ ಆದಿಗೆ ಲೋಪ. ವ್ಯತ್ಯಯದಿಂದ ಅತ್ವ ಬರುತ್ತದೆ **ತೃತೀಯಾಕರ್ಮಣಿ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ

**ಈಶಾನಾಸಃ** – ಈಶಾನ ಶಬ್ದಕ್ಕೆ ಜಸ್ ಪರವಾದಾಗ **ಆಜ್ಜಸೇರಸುಕ್** ಎಂಬುದರಿಂದ ಜಸ್ಸಿಗೆ ಅಸುಗಾಗಮ.

**ಪಿತೃವಿತ್ತಸ್ಯ**—ಪಿತ್ರಾ ವಿತ್ತಃ ತಸ್ಯ. ಇದರ ಪ್ರಕ್ರಿಯೆಯು ೭೨ ನೇ ಸೂಕ್ತದ ಒಂದನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ

**ರಾಯಃ**—ರೈ ಶಬ್ದ. ಷಷ್ಠೀ ಏಕವಚನಾಂತರೂಪ. **ಊಡಿದಂಪದಾದಿ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಶತಹಿಮಾಃ**—ಇಲ್ಲಿ ಹಿಮ ಶಬ್ದದಿಂದ ಹಿಮವುಳ್ಳ ಹೇಮಂತಋತುವು ಲಕ್ಷಣಾದಿಂದ ಬೋಧಿತವಾಗುತ್ತದೆ. ಬ್ರಾಹ್ಮಣದಲ್ಲಿಯೂ ಇದು ಹೀಗೇ ಪ್ರಯುಕ್ತವಾಗಿದೆ. **ಶತಂ ಹಿಮಾ ಇತ್ಯಾಹ ಶತಂ ತ್ವಾ ಹೇಮಂತಾನಿಂಧಿಷೀಯೇತಿ ವಾವೈತದಾಹ** (ತೈ. ಸಂ. ೧-೫-೮-೫) ಇತಿ ಶತಂ ಹಿಮಾಃ ಶತಂ ಹೇಮಂತರ್ತವೋ ಯೇಷಾಂ ತೇ

ಶತಹಿಮಾಃ ಶತಸಂವತ್ಸರಜೀವಿನ ಇತ್ಯರ್ಥಃ (ನೂರುವರ್ಷ ಬದುಕುವವರು) **ಬಹುವ್ರೀಹೌ ಪ್ರಕೃತ್ಯಾ ಪೂರ್ವ ಪದಂ** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ

**ಅಶ್ಯುಃ**– ಅಶ ಭೋಜನೇ ಧಾತು. ವಿಧಿಲಿಙ್ ಪ್ರಥಮಪುರುಷ ಬಹುವಚನದಲ್ಲಿ **ಯೇರ್ಜುಸ್** ಎಂಬುದರಿಂದ ಜುಸಾದೇಶ **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ (ಶ್ನಾ) ಲುಕ್ ಲಿಙಿಗೆ ಯಾಸುಟಾಗಮ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೯ ॥



॥ ಸಂಹಿತಾಪಾಠಃ ॥

ಏತಾ ತೇ ಅಗ್ನ ಉಚಥಾನಿ ವೇಧೋ ಜುಷ್ಟಾನಿ ಸಂತು ಮನಸೇ
ಹೃದೇ ಚ ।
ಶಕೇಮ ರಾಯಃ ಸುಧುರೋ ಯಮಂ ತೇಽಧಿ ಶ್ರವೋ ದೇವ-
ಭಕ್ತಂ ದಧಾನಾಃ ॥ ೧೦ ॥

॥ ಪದಪಾಠಃ ॥

**ಏತಾ । ತೇ । ಅಗ್ನೇ । ಉಚಥಾನಿ । ವೇಧಃ । ಜುಷ್ಟಾನಿ । ಸಂತು । ಮನಸೇ ।**
**ಹೃದೇ । ಚ ।**
**ಶಕೇಮ । ರಾಯಃ । ಸುಽಧುರಃ । ಯಮಂ । ತೇ । ಅಧಿ । ಶ್ರವಃ । ದೇವಽ-**
**ಭಕ್ತಂ । ದಧಾನಾಃ ॥ ೧೦ ॥**

॥ ಸಾಯಣಭಾಷ್ಯಂ ॥

ಹೇ ವೇಧಃ । ಮೇಧಾವಿನಾಮೈತತ್ । ಮೇಧಾವಿನ್ನಗ್ನೇ ಏತೋೀಚಥಾನ್ಯೇತಾನೀದಾನೀಮ-ಸ್ಮಾಭಿಃ ಪ್ರಯುಕ್ತಾನಿ ಸ್ತೋತ್ರಾಣಿ ತೇ ತವ ಮನಸೇ ಮನೋವೃತ್ತಯೇ ಹೃದೇ ತದ್ವೃತ್ತಿಮತೇಽಂತಃ-ಕರಣಾಯ ಚ ಜುಷ್ಟಾನಿ ಸಂತು । ಪ್ರಿಯಾಣಿ ಭವಂತು । ತೇ ತವ ಸಂಬಂಧಿನಃ ಸುಧುರಃ ಸುಷ್ಠು ನಿ-ರ್ವಾಹಕಸ್ಯ । ಯದ್ವಾ । ಶೋಭನಂ ಧೂರ್ವತಿ ದಾರಿದ್ರ್ಯಂ ಹಿನಸ್ತೀತಿ ಸುಧೂಃ । ತಾದೃಶಸ್ಯ ರಾಯೋ ಧನಸ್ಯ ಯಮಂ ನಿಯಮನಂ ಕರ್ತುಂ ಶಕೇಮ । ಶಕ್ತಾ ಭಯಾಸ್ಮ । ಕಿಂ ಕುರ್ವಂತಃ । ದೇವಭಕ್ತಂ ದೇವೈಃ ಸಂಭಜನೀಯಂ ಶ್ರವೋ ಹವಿರ್ಲಕ್ಷಣಮನ್ನಮಧಿ ದಧಾನಾಃ । ಅಗ್ನೇರುಪರಿ ಧಾರಯಂತಃ । ಅಗ್ನೌ ಹವಿರ್ಭಿರ್ಹೋಮಂ ಕುರ್ವಂತ ಇತ್ಯರ್ಥಃ ॥ ಉಚಥಾನಿ । ವಚ ಪರಿಭಾಷಣೇ । ರುವಿದಿಭ್ಯಾಂ ಕಿತ್ । ಉ. ೩-೧೧೬ । ಇತಿ ವಿಧೀಯಮಾನೋಽಥಪ್ರತ್ಯಯಃ ಕಿತ್ತ್ವಂ ಚ ಬಹುಲವಚನಾದಸ್ಮಾದಪಿ ಭವತಿ । ವಚ್ಯಾದಿನಾ ಸಂಪ್ರಸಾರಣಂ । ಜುಷ್ಟಾನಿ । ಜುಷ್ಟಾರ್ಪಿತೇ ಚ ಛಂದಸಿ ನಿತ್ಯಂ ಮಂತ್ರೇ । ಪಾ. ೬-೧ ೨೦೯, ೨೧೦ । ಇತ್ಯಾದ್ಯುದಾತ್ತತ್ವಂ । ಹೃದೇ । ಪದ್ದನ್ನಿತ್ಯಾದಿನಾ ಹೃದಯಶಬ್ದಸ್ಯ ಹೃದಾದೇಶಃ । ಶಕೇಮ । ಶಕ್ಲೃ ಶಕ್ತೌ । ಲಿಙ್ಯಾಶಿಷ್ಯಙ್ । ಸುಧುರಃ । ಧುರ್ವೀ ಹಿಂಸಾರ್ಥಃ । ಕ್ವಿಪ್ಚೇತಿ ಕ್ವಿಪ್ । ರಾಲ್ಲೋಪ ಇತಿ ವಕಾರಲೋಪಃ । ನ ಪೂಜನಾದಿತಿ ಸಮಾಸಾಂತಪ್ರತಿಷೇಧಃ । ದೇವೈರ್ಭಕ್ತಂ ದೇವಭಕ್ತಂ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ವೇಧಃ ಅಗ್ನೇ –ಮೇಧಾವಿಯಾದ ಎಲೈ ಅಗ್ನಿಯೇ । ಏತಾ ಉಚಥಾನಿ—ಈ (ನಮ್ಮಿಂದ ಈಗ ಪ್ರಯುಕ್ತವಾಗುವ) ಸ್ತುತಿವಾಕ್ಯಗಳು । ತೇ—ನಿನ್ನ । ಮನಸೇ—ಮನೋವೃತ್ತಿಗೂ । ಹೃದೇ ಚ—ಅಂತಃಕರಣಕ್ಕೂ । ಜುಷ್ಟಾನಿ ಸಂತು—ಪ್ರಿಯವಾಗಲಿ । ತೇ—ನಿನ್ನ (ಸಂಬಂಧವಾದ) । ಸುಧುರಃ –ನಿರ್ವಾಹಕವಾದ (ದಾರಿದ್ರ್ಯ ಪರಿಹಾರಕವಾದ) । ರಾಯಃ–-ದನದ । ಯಮಂ—ನಿಯಮನವನ್ನು (ಮಾಡಲು) । ದೇವಭಕ್ತಂ—ದೇವತೆಗಳಿಂದ ಭೋಜ್ಯವಾದ । ಶ್ರವಃ—ಹವಿರ್ಲಕ್ಷಣವಾದ ಅನ್ನವನ್ನು । ಅಧಿ ದಧಾನಾಃ—(ಅಗ್ನಿಯಲ್ಲಿ) ಇಡುವವರಾಗಿ (ಹಾಕುವವರಾಗಿ) । ಶಕೇಮ -ಶಕ್ತರಾಗೋಣ

॥ ಭಾವಾರ್ಥ ॥

ಮೇಧಾವಿಯಾದ ಎಲೈ ಅಗ್ನಿಯೇ, ನಾವು (ಈಗ ಮಾಡುತ್ತಿರುವ) ಸ್ತೋತ್ರವು ನಿನ್ನ ಮನಸ್ಸಿಗೂ, ಹೃದಯಕ್ಕೂ ಹಿಡಿಸುವಂತಾಗಲಿ ದಾರಿದ್ರ್ಯಹಾರಕವಾದ, ನಿರ್ವಾಹಕವಾದ, ದೇವತೆಗಳ ಭಾಗವಾದ ಹವಿಸ್ಸನ್ನು ನಿನ್ನಲ್ಲಿ ಅರ್ಪಿಸಿ, ನಿನ್ನಿಂದ (ದತ್ತವಾಗುವ) ಐಶ್ವರ್ಯವನ್ನು ಅನುಭವಿಸಲು ಯೋಗ್ಯರಾಗೋಣ

## English Translation.

May these our praises, sapient Agni, be grateful to you, both in mind and heart, may we be competent, to detain your well-supporting wealth, offering upon you their share of the (sacrificial) food to the Gods

|| ವಿಶೇಷವಿಷಯಗಳು ||

**ವೇಧಃ—ವಿಪ್ರಃ ವಿಗ್ರಃ** ಎಂಬ ಇಪ್ಪತ್ತು ಮೇಧಾವಿನಾಮಗಳಲ್ಲಿ ವೇಧಾಃ ಎಂಬ ಶಬ್ದವು (ನಿ ೩-೧೫) ಉಕ್ತವಾಗಿರುವುದರಿಂದ ಮೇಧಾವಿ ಎಂದು ಅರ್ಥವು ಮತ್ತು ಯಾಸ್ಕರು **ಮೇಧಾವಿ** ಶಬ್ದಕ್ಕೆ **ಮೇಧಾವೀ ಕಸ್ಮಾತ್ ಮೇಧಯಾ ತದ್ವಾನ್ ಭವತಿ ಮೇಧಾ ಮತೌ ಧೀಯತೇ** ಮನುಷ್ಯನ ಶಕ್ತಿಯು ಅವನ ಬುದ್ಧಿಯಲ್ಲಿ ಪ್ರಕಟವಾಗುತ್ತದೆಯಾದಕಾರಣ **ಮೇಧಾ** ಎಂದರೆ ಬುದ್ಧಿಯು ಎಂದೂ (ಬುದ್ಧಿಯುಳ್ಳವನು) ಮೇಧೆಯುಳ್ಳವನು **ಮೇಧಾವಿಯು** ಎಂದೂ ವ್ಯಾಖ್ಯಾನವನ್ನು ಮಾಡಿರುವರು. ವೇಧಶ್ಶಬ್ದವೂ ಮೇಧಾವಿ ಶಬ್ದದ ಸಮಾನಾರ್ಥಕವಾದ ಪರ್ಯಾಯ ಪದವಾಗಿರುವುದರಿಂದ ಮೇಧಾವಿಯೆಂದು ಅರ್ಥವು ಎಲೈ ಅಗ್ನಿಯೇ, ನಾವು ನಿನ್ನನ್ನು ಉದ್ದೇಶಮಾಡಿ ಹೇಳಿರುವ ಸ್ತೋತ್ರಗಳು ಮೇಧಾವಿಯಾದ ನಿನ್ನ ಮನಸ್ಸಿಗೂ ಅನ್ತಃಕರಣಕ್ಕೂ ಸಂತೋಷವನ್ನು ಉಂಟುಮಾಡಲಿ ಎಂದು ಪ್ರಾರ್ಥನೆಯು ಉಕ್ತವಾಗಿರುವುದು.

**ಸುಧುರಃ—ಸುಷ್ಠು ನಿರ್ವಾಹಕಸ್ಯ ಯದ್ವಾ ಶೋಭನಂ ಧೂರ್ವತಿ ದಾರಿದ್ರ್ಯಂ ಹಿನಸ್ತೀತಿ ಸುಧೂಃ ।** ಈ ಶಬ್ದವು ಧನವಾಚಕವಾಗಿರುವ ರಾಯಃ ಎಂಬ ಪದಕ್ಕೆ ವಿಶೇಷಣವಾಗಿರುವುದು. ಧನವು ಯಾವಾಗಲೂ ಕಾರ್ಯಗಳನ್ನು ಸರಿಯಾಗಿ ನೆರವೇರಿಸುವುದು. ಅಥವಾ ಬಡತನವನ್ನು ಪೂರ್ಣವಾಗಿ ನಾಶಗೊಳಿಸುವುದು. ಆದ್ದರಿಂದ ಸುಧೂಃ ಎಂಬ ಶಬ್ದದಿಂದ ಬೋಧ್ಯವಾಗಿರುತ್ತದೆ. ಎಂದು ಸಾಯಣರು ಅರ್ಥಮಾಡಿರುವರು

ಸ್ಕಂದಸ್ವಾಮಿಗಳು **ರಾಯಃ ಸುಧುರೋ ಯಮಂ ತೇ ಶಕೇಮ । ಶೋಭನಾ ಧೂರ್ಯಸ್ಯ ಸ ಸುಧುರಃ ರಥಃ । ತಸ್ಯ ಯಮಂ ಬಂಧನಂ । ಸ್ವವೇದ್ಯಾಂ ಧಾರಣಮಿತ್ಯರ್ಥಃ** ಎಲೈ ಮೇಧಾವಿಯಾದ ಅಗ್ನಿಯೇ, ನಾವೂ ದೇವತೆಗಳಿಂದ ಸೇವಿತವಾದ ಅಥವಾ ದೇವತೆಗಳಿಗೆ ಆಹಾರವಾದ ಹವಿಸ್ಸುಗಳನ್ನು ನಿನಗೆ ಕೊಡುವವರಾಗಿ (ಮಂಗಳಕರವಾದ) ದೃಢವಾದ ಅಚ್ಚುಉಳ್ಳದ್ದಾದ ನಿನ್ನ ರಥವು ಯಜ್ಞವೇದಿಯಲ್ಲಿ ಸ್ಥಿರವಾಗಿ ಇರುವಂತೆ ಅದನ್ನು ಬಂಧನಮಾಡುವುದಕ್ಕೆ ನಿನ್ನ ಅನುಗ್ರಹದಿಂದ ಶಕ್ತರಾಗೋಣ ಮತ್ತೆ ಧನವನ್ನು ಹೊಂದುವುದಕ್ಕಾಗಿ ನಿನಗೆ ಹವಿರ್ಭಾಗಗಳನ್ನು ಒಪ್ಪಿಸಿ ನಿನ್ನನ್ನು ಸಂತೋಷಪಡಿಸೋಣ ಎಂದು ಅಪೇಕ್ಷಿಸುತ್ತೇವೆ ಎಂದು ಅರ್ಥವನ್ನು ವಿವರಿಸಿರುವರು.

|| ವ್ಯಾಕರಣಪ್ರಕ್ರಿಯಾ ||

**ಏತಾ**— ಏತಚ್ಛಬ್ದ. ನಪುಂಸಕದಲ್ಲಿ ಶಿ ಆದೇಶ ಬಂದು ರೂಪ ನಿಷ್ಪತ್ತಿಯಾದಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪ

**ಉಚಥಾನಿ**—ವಚ ಪರಿಭಾಷಣೇ ಧಾತು ಅದಾದಿ. ಉಣಾದಿಯಲ್ಲಿ ಬಹುಲವಚನವಿರುವುದರಿಂದ **ರುವಿದಿಭ್ಯಾಂ ಕಿತ್** (ಉ ಸೂ ೩-೩೬೫) ಎಂಬುದರಿಂದ ವಿಧಿಸಲ್ಪಡುವ ಅಥ ಪ್ರತ್ಯಯವೂ ಕಿತ್ತ್ವವೂ ಈ ಧಾತುವಿಗೂ ಬರುತ್ತವೆ ವಚ್+ಅಥ ಎಂದಿರುವಾಗ ಕಿತ್ತ್ವಾತಿದೇಶವಿರುವುದರಿಂದ **ವಚಿಸ್ವಪಿಯಜಾದೀನಾಂ ಕ್ಕಿತಿ** (ಪಾ ಸೂ ೬-೧-೧೫) ಎಂಬುದರಿಂದ ಧಾತುವಿಗೆ (ವಕಾರಕ್ಕೆ) ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ ಉಚಥ ಎಂದು ರೂಪವಾಗುತ್ತದೆ ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ ನಪುಂಸಕದಲ್ಲಿ ಪ್ರಥಮಾ ಬಹುವಚನರೂಪ

**ಜುಷ್ಟಾನಿ**—ಜುಷೀ ಪ್ರೀತಿಸೇವನಯೋಃ ಧಾತು ಇದಕ್ಕೆ ಕರ್ಮಣಿಯಲ್ಲಿ **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ ಕಿತ್ತಾದುದರಿಂದ ಲಘೂಪಧ ಗುಣ ಬರುವುದಿಲ್ಲ ಷಕಾರಯೋಗವಿರುವುದರಿಂದ ಪ್ರತ್ಯಯ ತಕಾರಕ್ಕೆ ಷ್ಟುತ್ವ ಪ್ರತ್ಯಯ ಸ್ವರದಿಂದ ಅಂತೋದಾತ್ತಸ್ವರ ಪ್ರಾಪ್ತವಾದರೆ **ಜುಷ್ಟಾರ್ಪಿತೇ ಚ ಛಂದಸಿ, ನಿತ್ಯಂ ಮಂತ್ರೇ** (ಪಾ. ಸೂ ೬-೧-೨೦೯, ೨೧೦) ಎಂಬುದರಿಂದ ಸಂಹಿತಾದಲ್ಲಿ ನಿತ್ಯವಾಗಿ ಆದ್ಯುದಾತ್ತವಾಗುತ್ತದೆ ಪ್ರಥಮಾ ವಿಭಕ್ತಿ ಬಹುವಚನಾಂತರೂಪ

**ಸಂತು**—ಅಸ ಭುವಿ ಧಾತು ಅದಾದಿ. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಅಂತಾದೇಶ, ಉತ್ವ **ಸಾರ್ವಧಾತುಕಮಪಿತ್** ಸೂತ್ರದಿಂದ ಙಿದ್ವದ್ಭಾವವಿರುವುದರಿಂದ **ಶ್ನಸೋರಲ್ಲೋಪಃ** (ಪಾ ಸೂ ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ ತಿಙಂತ ನಿಘಾತಸ್ವರ ಬರುತ್ತದೆ

**ಹೃದೇ**—ಹೃದಯಶಬ್ದ ಇದಕ್ಕೆ ಚತುರ್ಥೀ ಏಕವಚನ ಪರವಾದಾಗ **ಪದ್ದನ್ನೋಮಾಸ್ ಹೃದ್**—(ಪಾ. ಸೂ ೬-೧-೬೩) ಎಂಬುದರಿಂದ ಹೃದಾದೇಶ **ಊಡಿದಂ ಪದಾದಿ**—(ಪಾ ಸೂ ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಶಕೇಮ**—ಶಕ್ಲೃ ಶಕ್ತೌ ಧಾತು ಆಶೀರ್ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ **ನಿತ್ಯಂ ಙಿತಃ** ಎಂಬುದರಿಂದ ಸಕಾರಲೋಪ. **ಲಿಙ್ಯಾಶಿಷ್ಯಙ್** (ಪಾ ಸೂ ೩-೧-೮೬ ಎಂಬುದರಿಂದ ಲಿಙ್ **ಛಂದಸ್ಯುಭಯಥಾ** ಎಂಬುದರಿಂದ ಸಾರ್ವಧಾತುಕ ಸಂಜ್ಞೆಯೂ ಇರುವುದರಿಂದ **ಅತೋಯೇಯಃ** ಸೂತ್ರದಿಂದ ಯಾಸುಟಿಗೆ ಇಯಾದೇಶ **ಲೋಪೋವ್ಯೋರ್ವಲಿ** ಎಂಬುದರಿಂದ ಯಕಾರಲೋಪ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಅಙಿನ ಸ್ವರ ಪತಿಶಿಷ್ಟವಾಗುವುದರಿಂದ ಮಧ್ಯೋದಾತ್ತವಾದ ಪದವಾಗುತ್ತದೆ

**ಸುಧುರಃ**—ಧುರ್ವೀ ಧಾತುವು ಹಿಂಸಾರ್ಥದಲ್ಲಿದೆ. ಇದಕ್ಕೆ **ಕ್ವಿಪ್ ಚ** (ಪಾ ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ **ರಾಲ್ಲೋಪಃ** (ಪಾ. ಸೂ ೬-೪-೨೧) ಎಂಬುದರಿಂದ ರೇಫದ ಪರದಲ್ಲಿರುವ ವಕಾರಕ್ಕೆ ಲೋಪ ಧುರ್ ಶಬ್ದವಾಗುತ್ತದೆ ಇದಕ್ಕೆ ಸುಶಬ್ದದೊಡನೆ ಸಮಾಸವಾದಾಗ **ಋಕ್ ಪೂರ**—(ಪಾ ಸೂ ೫-೪-೭೪) ಎಂಬುದರಿಂದ ಸಮಾಸಾಂತ (ಅಪ್) ಪ್ರಾಪ್ತವಾದರೆ **ನಪೂಜನಾತ್** (ಪಾ ಸೂ ೫-೪-೬೯) ಎಂಬುದರಿಂದ ನಿಷೇಧ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ ಷಷ್ಠೀ ಏಕವಚನಾಂತರೂಪ

**ದೇವಭಕ್ತಂ**— ಭಜ ಸೇವಾಯಾಂ ಧಾತು. ಇದಕ್ಕೆ ಕ್ತ ಪರವಾದಾಗ **ಚೋಃಕುಃ** ಎಂಬುದರಿಂದ ಕುತ್ವ ಭಕ್ತ ಎಂದು ರೂಪವಾಗುತ್ತದೆ ದೇವೈಃ ಭಕ್ತಂ ದೇವಭಕ್ತಂ **ತೃತೀಯಾ ಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ

**ದಧಾನಾ**—ಡುಧಾಞ್ ಧಾರಣಪೋಷಣಯೋಃ ಧಾತು ಇದಕ್ಕೆ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶ್ಲು ವಿಕರಣ ಬರುವುದರಿಂದ ಧಾತುವಿಗೆ ದ್ವಿತ್ವಾದಿ **ಅಭ್ಯಸ್ತಾನಾಮಾದಿಃ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ॥ ೧೦ ॥

ಎಪ್ಪತ್ತಮೂರನೆಯ ಸೂಕ್ತ ಸಮಾಪ್ತವು.



# ಎಪ್ಪತ್ತನಾಲ್ಕನೆಯ ಸೂಕ್ತವು

**ತ್ರಯೋದಶಾನುವಾಕೆ ಏಕಾದಶ ಸೂಕ್ತಾನಿ । ತತ್ರೋಪಪ್ರಯಂತ ಇತಿ ನವರ್ಚಂ ಪ್ರಥಮಂ ಸೂಕ್ತಂ । ಅತ್ರಾನುಕ್ರಮ್ಯತೇ । ಉಪಪ್ರಯಂತೋ ನವ ಗೋತಮೋ ರಾಹೂಗಣೋ ಗಾಯತ್ರಂ ತ್ವಿತಿ ಅಸ್ಯಾಯಮರ್ಥಃ । ರಹೂಗಣನಾಮಾ ಕಶ್ಚಿದೃಷಿಃ । ತಸ್ಯ ಪುತ್ರೋ ಗೋತಮೋಽಸ್ಯ ಸೂಕ್ತಸ್ಯ ಋಷಿಃ । ಗಾಯತ್ರಂ ತ್ವಿತ್ಯುಕ್ತತ್ವಾದಿದಮುತ್ತರಂ ಚ ಗಾಯತ್ರೀಛಂದಸ್ಕಂ । ಪರಮಾಗ್ನೇಯಮೈಂದ್ರಾದಿತಿ ಪರಿಭಾಷಿತತ್ವಾದಗ್ನಿರ್ದೇವತಾ ॥ ಪ್ರಾತರನುವಾಕಸ್ಯಾಗ್ನೇಯೇ ಕ್ರತೌ ಗಾಯತ್ರೇ ಛಂದಸ್ಯೇತಾವಾದಿಕೇ ದ್ವೇ ಸೂಕ್ತೇ । ಸೂತ್ರಿತಂ ಚ । ಅಪೋ ರೇವತೀಃ ಕ್ಷಯಥಾ ಹಿ ವಸ್ವ ಉಪಪ್ರಯಂತ ಇತಿ ಸೂಕ್ತೇ । ಆ. ೪-೧೩ । ಇತಿ ॥ ಆಶ್ವಿನಶಸ್ತ್ರೇಽಪ್ಯೇತೇ ಸೂಕ್ತೇ ಪ್ರಾತರನುವಾಕನ್ಯಾಯೇನ । ಆ ೬-೫ । ಇತ್ಯತಿದೇಶಾತ್ ॥ ಪೃಷ್ಠ್ಯಷಡಹಸ್ಯ ಪ್ರಥಮೇಽಹನ್ಯೇತದೇವ ಸೂಕ್ತಮಾಜ್ಯಶಸ್ತ್ರಂ । ಸೂತ್ರಿತಂ ಚ । ಉಪಪ್ರಯಂತ ಇತಿ ತು ಪ್ರಥಮೇಽಹನ್ಯಾಜ್ಯಂ । ಆ. ೭-೧೦ । ಇತಿ ॥**

ಅನುವಾದವು—ಎಪ್ಪತ್ತನಾಲ್ಕನೆಯ ಸೂಕ್ತದಿಂದ ಹದಿಮೂರನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕನಲ್ಲಿ ಹನ್ನೊಂದು (೭೪-೮೪) ಸೂಕ್ತಗಳಿರುವವು. ಅವುಗಳಲ್ಲಿ **ಉಪಪ್ರಯಂತಃ** ಎಂಬ ಮೊದಲನೆಯ ಸೂಕ್ತದಲ್ಲಿ ಒಂಭತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ **ಉಪಪ್ರಯಂತೋ ನವ ಗೋತಮೋ ರಾಹೂಗಣೋ ಗಾಯತ್ರಂ ತ್ವಿತಿ** ಎಂದು ಹೇಳಿರುವುದು ಎಂದರೆ ರಹೂಗಣನೆಂಬುವನು ಒಬ್ಬ ಋಷಿಯು ಅವನ ಮಗನಾದ ಗೋತಮನೆಂಬುವನೇ ಈ ಸೂಕ್ತಕ್ಕೆ ಋಷಿಯು. ಈ ಸೂಕ್ತವೂ ಮುಂದಿನ ಸೂಕ್ತವೂ ಗಾಯತ್ರೀಛಂದಸ್ಕವು ಅಗ್ನಿಯು ದೇವತೆಯು. ಪ್ರಾತರನುವಾಕ ಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ಗಾಯತ್ರೀಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತ ಮತ್ತು ಮುಂದಿನ ಸೂಕ್ತಗಳ ವಿನಿಯೋಗವಿರುವುದೆಂದು

ಆಶ್ವಲಾಯನ ಶ್ರೌತಸೂತ್ರದ-**ಆಪೋ ರೇವತೀಃ ಕ್ಷಯಥಾ ಹಿ ವಸ್ವ ಉಪಪ್ರಯಂತ ಇತಿ ಸೂಕ್ತೇ** ಎಂಬ ಸೂತ್ರವು ನಿರ್ದೇಶಿಸುವುದು (ಆ ೪-೧೩) ಆಶ್ವಿನಶಸ್ತ್ರಮಂತ್ರಪಠನಕ್ಕಾಗಿಯೂ ಈ ಎರಡು ಸೂಕ್ತಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದಲ್ಲಿಯೇ ಹೇಳಿರುವುದು (ಆ. ೬-೫) ಆರುದಿವಸಗಳು ಮಾಡಬೇಕಾದ ಪೃಷ್ಠ್ಯಷಡಹವೆಂಬ ಯಾಗದ ಮೊದಲನೆಯ ದಿನ ಈ ಸೂಕ್ತವನ್ನು ಆಜ್ಯಶಸ್ತ್ರಮಂತ್ರಪಠನದಲ್ಲಿ ವಿನಿಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಉಪಪ್ರಯಂತ ಇತಿ ತು ಪ್ರಥಮೇಽಹನ್ಯಾಜ್ಯಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ ೭-೧೦)

## ಸೂಕ್ತ—೭೪

॥ ಓಂ ॥

॥ ಮಂಡಲ ೧ ॥ ಅನುವಾಕ ೧೨ ॥ ಸೂಕ್ತ -೭೪ ॥

॥ ಅಷ್ಟಕ- ೧ ॥ ಅಧ್ಯಾಯ- ೫ । ವರ್ಗ- ೨೧, ೨೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ -೯ ॥

॥ ಋಷಿಃ—ಗೋತಮೋ ರಾಹೂಗಣಃ ।

ದೇವತಾ— ಅಗ್ನಿಃ ॥

ಛಂದಃ—ಗಾಯತ್ರೀ ॥

। ಸಂಹಿತಾಪಾಠಃ ।

ಉಪಪ್ರಯಂತೋ ಅಧ್ವರಂ ಮಂತ್ರಂ ವೋಚೇಮಾಗ್ನಯೇ ।

ಆರೇ ಅಸ್ಮೇ ಚ ಶೃಣ್ವತೇ ॥ ೧ ॥

॥ ಪದಪಾಠಃ ॥

ಉಪಽಪ್ರಯಂತಃ । ಅಧ್ವರಂ । ಮಂತ್ರಂ । ವೋಚೇಮ । ಅಗ್ನಯೇ ।

ಆರೇ । ಅಸ್ಮೇ ಇತಿ । ಚ । ಶೃಣ್ವತೇ ॥ ೧ ॥

॥ ಸಾಯಣಭಾಷ್ಯಂ ॥

ಅಧ್ವರಂ ಹಿಂಸಾಪ್ರತ್ಯವಾಯರಹಿತಮಗ್ನಿಷ್ಟೋಮಾದಿಯಜ್ಞಮುಪಪ್ರಯಂತ ಉಪೇತ್ಯ ಪ್ರಕರ್ಷೇಣ ಯಂತೋ ಗಚ್ಛಂತಃ । ಪ್ರಾಪ್ತ್ಯವಿಚ್ಛೇದೇನ ಸಮ್ಯಗನುತಿಷ್ಠಂತ ಇತ್ಯರ್ಥಃ । ತಾದೃಶಾವಯಮಗ್ನಯೇಽಂಗನಾದಿಗುಣಯುಕ್ತಾಯ ದೇವಾಯ ಮಂತ್ರಂ ಮನನಸಾಧನಮೇತತ್ಸೂಕ್ತರೂಪಂ ಸ್ತೋತ್ರಂ ವೋಚೇಮ । ವಕ್ತಾರೋ ಭೂಯಾಸ್ಮೇತ್ಯಾಶಾಸ್ಯತೇ । ಕೀದೃಶಾಯಾಗ್ನಯೇ । ಆರೇಽಸ್ಮೇ ಚ ಶೃಣ್ವತೇ । ಚಶಬ್ದೋಽಪ್ಯರ್ಥ ಆರೇಶಬ್ದಾತ್ಪರೋ ದ್ರಷ್ಟವ್ಯಃ । ಆರೇ ಚ ದೂರೇಽಪಿ ಸ್ಥಿತ್ವಾಸ್ಮಾಕಂ ಸ್ತುತೀಃ ಶೃಣ್ವತೇ । ಅಸ್ಮಾಸು ಪ್ರೀತ್ಯತಿಶಯೇನ ಸರ್ವತ್ರ ಪ್ರವರ್ತಮಾನೋಽಗ್ನಿರಸ್ಮದೀಯಮೇವ ಸ್ತೋತ್ರಂ ಶೃಣೋತೀತಿ ಭಾವಃ ॥ ವೋಚೇಮ । ಬ್ರುವೋ ವಚಿಃ । ಲಿಙ್ಯಾಶಿಷ್ಯಙ್ । ವಚ ಉಮಿತ್ಯುಮಾಗಮಃ । ಶೃಣ್ವತೇ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಧ್ವರಂ**—ಹಿಂಸಾದಿ ಪ್ರತ್ಯವಾಯರಹಿತವಾದ ಯಜ್ಞಕ್ಕೆ । **ಉಪಪ್ರಯಂತಃ**—ಸಮೀಪಿಸಿ ಯಾಗಾನುಷ್ಠಾನಮಾಡುವ (ನಾವು) । **ಆರೇ ಚ**—ದೂರದಲ್ಲಿದ್ದರೂ । **ಅಸ್ಮೇ**—ನಮ್ಮ (ಸ್ತುತಿಗಳನ್ನು) । **ಶೃಣ್ವತೇ**—ಕೇಳುವ । **ಅಗ್ನಯೇ**—ಅಗ್ನಿಗೆ । **ಮಂತ್ರಂ**—ಈ ಸೂಕ್ತರೂಪವಾದ ಮಂತ್ರವನ್ನು । **ವೋಚೇಮ**—ಉಚ್ಚರಿಸೋಣ

ಭಾವಾರ್ಥ ॥

(ನಾವು) ಯಾಗಶಾಲೆಗೆ ಶೀಘ್ರವಾಗಿ ಹೋಗಿ, ಬಹುದೂರದಲ್ಲಿದ್ದರೂ ನಮ್ಮ ಸ್ತುತಿಗಳನ್ನು ಕೇಳುವ ಅಗ್ನಿಗೆ, ಸ್ತುತಿರೂಪವಾದ (ಈ ಸೂಕ್ತವನ್ನು) ಉಚ್ಚರಿಸೋಣ

## English Translation

Hastening to the sacrifice, let us repeat a prayer to Agni, who hears us from afar

॥ ವಿಶೇಷವಿಷಯಗಳು ॥

ಈ ಸೂಕ್ತಕ್ಕೆ ರಹೂಗಣ ಪುತ್ರನಾದ ಗೋತಮನೆಂಬುವನು ಋಷಿಯು. ಇವನು ಸಪ್ತರ್ಷಿಗಳಲ್ಲಿ ಒಬ್ಬನು ಈ ಋಷಿದೃಷ್ಟವಾದ ಋಕ್ಕುಗಳು ಋಗ್ವೇದದಲ್ಲಿ—ಪ್ರಥಮ ಮಂಡಲದಲ್ಲಿ ೭೪–೯೩ ಸೂಕ್ತಗಳಲ್ಲಿರುವ ೨೦೪ ಋಕ್ಕುಗಳು, ಒಂಭತ್ತನೆಯ ಮಂಡಲದ ೩೧ ನೆಯ ಸೂಕ್ತದಲ್ಲಿ ೬ ಋಕ್ಕುಗಳು, ೬೭ ನೆಯ ಸೂಕ್ತದಲ್ಲಿ (೭–೯) ೩ ಋಕ್ಕುಗಳು, ಒಟ್ಟು ೨೧೩ ಋಕ್ಕುಗಳಿರುವವು.

**ಅಧ್ವರಂ--ನ ವಿದ್ಯತೇ ಧ್ವರೋ ಯಸ್ಯ ।** ಹಿಂಸಾರಹಿತವಾದ ಕರ್ಮ ಎಂದರೆ ದೇವತೆಗಳನ್ನು ಆರಾಧಿಸುವ ಕರ್ಮ ಅಥವಾ ಯಜ್ಞ. ಯಜ್ಞದಲ್ಲಿ ಅಗ್ನಿಷ್ಟೋಮಾದಿ ಅನೇಕ ಭೇದಪ್ರಭೇದಗಳಿರುವುದರಿಂದ ಪ್ರಸಕ್ತ ಋಕ್ಕಿನಲ್ಲಿ ಅಧ್ವರಂ ಎಂದರೆ ಪ್ರಕೃತ ನೆರವೇರುತ್ತಿರುವ ಯಾವ ಯಜ್ಞಬೇಕಾದರೂ ಆಗಬಹುದು. ನಾವು ಮಾಡುತ್ತಿರುವ ಯಜ್ಞಶಾಲೆಗೆ ಹೋಗೋಣವೆಂದು ಗೋತಮಋಷಿಯು ಋತ್ವಿಜರೊಡನೆ ಹೇಳಿರುವುದನ್ನು ಇಲ್ಲಿ ವರ್ಣಿಸಿದೆ.

**ಉಪಪ್ರಯಂತಃ**— ಉಪ ಎಂದರೆ ಸಮೀಪ, ಪ್ರ ಎಂದರೆ ಪ್ರಕರ್ಷ ರೀತಿಯಿಂದ, ಆಸಕ್ತಿಯಿಂದ, ಯಂತಃ–ಹೋಗುವವರು, ಯಜ್ಞನಡೆಯುತ್ತಿರುವ ಪ್ರದೇಶದ ಸಮೀಪಕ್ಕೆ ಉದ್ದೇಶಪೂರ್ವಕವಾಗಿ ಹೋಗೋಣವೆಂದು ಮುಖ್ಯಾಭಿಪ್ರಾಯವು.

**ಮಂತ್ರಂ—ಮನನಸಾಧನಮೇತತ್ಸೂಕ್ತರೂಪಂ ।** ಮನಸ್ಸಿನಲ್ಲಿ ನಾವು ಅಗ್ನಿಯ ವಿಷಯವಾಗಿ ಪ್ರಶಂಸಮಾಡುತ್ತಾ ಬಾಹ್ಯದಲ್ಲಿ ಶಬ್ದೋಚ್ಚಾರಣೆಗಳಿಂದ ಪಠಿಸುವ ಈ ಸೂಕ್ತರೂಪವಾದ ಸ್ತೋತ್ರವು. ಇದನ್ನು ಮಂತ್ರವೆಂದು ಋಷಿಯು ಹೇಳಿರುವನು. ಅಗ್ನಿಪ್ರಶಂಸಾತ್ಮಕವಾದ ಈ ಸೂಕ್ತರೂಪವಾದ ಮಂತ್ರವನ್ನು ಉಚ್ಚರಿಸೋಣವೆಂದು ಋಷಿಯು ಹೋತೃ ಮೊದಲಾದ ಋತ್ವಿಜರೊಡನೆ ಹೇಳುವನು.

**ಅಗ್ನಯೇ—**ಅಗ್ನಿಗಾಗಿ, ಅಗ್ನಿಯನ್ನುದ್ದೇಶಿಸಿ.

**ಆರೇ**—ಆಕೇ, ಪರಾಕೇ ಮೊದಲಾದ ಐದು ದೂರನಾಮಗಳ ಮಧ್ಯದಲ್ಲಿ ಆರೇ ಎಂಬ ಶಬ್ದವು ಪಠಿತವಾಗಿರುವುದರಿಂದ ಆರೇ ಎಂದರೆ ದೂರದಲ್ಲಿ ಎಂದರ್ಥವು. (ನಿ ೩–೨೦)

**ಚ**— ಈ ಶಬ್ದವನ್ನು ಆರೇ ಎಂಬ ಶಬ್ದಾನಂತರ ಸೇರಿಸಿ ಆರೇ ಚ ಎಂದು ಉಚ್ಚರಿಸಿ ಅರ್ಥಮಾಡಬೇಕು. ಆಗ ಆರೇ ಚ ಎಂಬ ಶಬ್ದಗಳಿಗೆ ದೂರದಲ್ಲಿದ್ದರೂ ಕೂಡ ಎಂದರ್ಥವಾಗುವುದು. ಮನುಷ್ಯರಾದ ನಮಗೆ ಸಮೀಪದಲ್ಲಿರುವಾಗ ಮಾತ್ರ ಶಬ್ದವು ಕೇಳಿಸುವುದು. ದೂರದಲ್ಲಿರುವವರು ಮಾತನಾಡುವ ಶಬ್ದವನ್ನು ಕೇಳುವ ಸಾಮರ್ಥ್ಯವಿರುವುದಿಲ್ಲ. ಅಗ್ನಿಯು ಪೃಥಿವ್ಯಂತರಿಕ್ಷ ಸ್ವರ್ಗಗಳಲ್ಲಿ ಇರುವುದರಿಂದ ದೂರದಲ್ಲಿ ನಾವು ಮಾಡುವ ಸ್ತೋತ್ರಾದಿಗಳನ್ನು ಕೇಳುವ ಸಾಮರ್ಥ್ಯವು ಇರುವುದೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಉಪ ಪ್ರಯಂತಃ**—ಉಪ, ಪ್ರ, ಉಪಸರ್ಗ. ಇಣ್ ಗತೌ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. **ಇಣೋ ಯಣ್** (ಪಾ ಸೂ ೬–೪–೮೧) ಎಂಬುದರಿಂದ ಧಾತುವಿನ ಇಕಾರಕ್ಕೆ ಯಣಾದೇಶ. ಪ್ರಥಮಾ ಬಹುವಚನಾಂತರೂಪ.

**ವೋಚೇಮ**—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಇದಕ್ಕೆ ಆಶೀರ್ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** ಎಂಬುದರಿಂದ ಸಕಾರಲೋಪ. **ಲಿಙಾಶಿಷಿ** (ಪಾ ಸೂ ೩–೪–೧೧೬) ಎಂಬುದರಿಂದ ಆಶೀರ್ಲಿಙಿಗೆ ಆರ್ಧಧಾತುಕಸಂಜ್ಞೆ ಇರುವುದರಿಂದ ಇದು ಪರವಾದಾಗ **ಬ್ರುವೋ ವಚಿಃ** (ಪಾ. ಸೂ

೨-೪-೫೩) ಎಂಬುದರಿಂದ ವಚ್ಯಾದೇಶ. **ಲಿಙ್ಯಾಶಿಷ್ಯಙ್** (ಪಾ. ಸೂ. ೩-೧-೮೬) ಎಂಬುದರಿಂದ ಅಙಾದೇಶ. **ವಚ ಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಧಾತುವಿಗೆ ಉಮಾಗಮ. **ಮಿದಚೋಽಂತ್ಯಾತ್ಪರಃ** (ಪಾ. ಸೂ. ೧-೧-೪೭) ಎಂಬುದರಿಂದ ಅಂತ್ಯಾಚ್ಚಿನ ಪರವಾಗಿ ಬರುತ್ತದೆ. ಗುಣಸಂಧಿ **ವೋಚೇಮ** ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ

**ಶೃಣ್ವತೇ**—ಶ್ರು ಶ್ರವಣೇ ಧಾತು. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. **ಶ್ರುವಃ ಶೃಚ** (ಪಾ. ಸೂ. ೩-೧-೭೪) ಎಂಬುದರಿಂದ **ಶಿತ್** ಪ್ರತ್ಯಯ ಪರವಾದುದರಿಂದ ಧಾತುವಿಗೆ ಶೃ ಆದೇಶ. ಶಪ್ಪಿಗೆ ಶ್ನುವಿಕರಣ **ಸಾರ್ವಧಾತುಕಮಪಿತ್** ಎಂಬುದರಿಂದ ಙಿದ್ವದ್ಭಾವವಿರುವುದರಿಂದ ಗುಣಬರುವುದಿಲ್ಲ. ಯಣಾದೇಶ. ಶೃಣ್ವತ್ ಶಬ್ದವಾಗುತ್ತದೆ ಚತುರ್ಥೀ ಏಕವಚನಾಂತರೂಪ. ನುಮ್‌ರಹಿತವಾದ ಶತೃವಿನ ಪರದಲ್ಲಿ ವಿಭಕ್ತಿ ಬಂದುದರಿಂದ **ಶತುರನುಮೋ ನದ್ಯಜಾದೀ** (ಪಾ. ಸೂ ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧ ॥

॥ ಸಂಹಿತಾಪಾಠಃ ॥

ಯಃ ಸ್ನೀಹಿತೀಷು ಪೂರ್ವ್ಯಃ ಸಂಜಗ್ಮಾನಾಸು ಕೃಷ್ಟಿಷು ।
ಅರಕ್ಷದ್ದಾಶುಷೇ ಗಯಂ ॥ ೨ ॥

॥ ಪದಪಾಠಃ ॥

ಯಃ । ಸ್ನೀಹಿತೀಷು । ಪೂರ್ವ್ಯಃ । ಸಂऽಜಗ್ಮಾನಾಸು । ಕೃಷ್ಟಿಷು ।
ಅರಕ್ಷತ್ । ದಾಶುಷೇ । ಗಯಂ ॥ ೨ ॥

॥ ಸಾಯಣಭಾಷ್ಯಂ ॥

**ಪೂರ್ವ್ಯಃ ಚಿರಂತನೋ ಯೋಽಗ್ನಿಃ ಸ್ನೇಹಿತೀಷು ವಧಕಾರಿಣೀಷು ಕೃಷ್ಟಿಷು ಶತ್ರುಭೂತಾಸು ಪ್ರಜಾಸು ಸಂಜಗ್ಮಾನಾಸು ಸಂಗತಾಸು ಸತೀಷು ದಾಶುಷೇ ಹವೀಂಷಿ ದತ್ತವತೇ ಯಜಮಾನಾಯ ಗಯಂ ಧನಮರಕ್ಷತ್ । ರಕ್ಷತಿ । ತಸ್ಮೈ ಮಂತ್ರಂ ವೋಚೇಮೇತಿ ಪೂರ್ವೇಣ ಸಂಬಂಧಃ ॥ ಸ್ನೇಹಿತೀಷು । ಷ್ಣಿಹ ಸ್ನೇಹನೇ । ಚುರಾದಿಃ । ಸ್ನೇಹಯತೀತಿ ವಧಕರ್ಮಸು ಪಠಿತಃ । ಸ್ನೇಹ್ಯಂತೇ ಹಿಂಸ್ಯಂತೇ ಪ್ರಜಾ ಆಭಿರಿತಿ ಸ್ನೇಹಿತಯಃ । ಕರಣೇ ಕ್ತಿನ್ । ತಿತುತ್ರೇಷ್ವಗ್ರಹಾದೀನಾಮಿತಿ ವಕ್ತವ್ಯಮಿತಿ ವಚನಾನ್ನಿಗೃಹೀತಿರ್ನಿಪಠಿತಿರಿತಿವದಿಡಾಗಮಃ । ಮ. ೭-೨-೯ ೧ । ವ್ಯತ್ಯಯೇನೈಕಾರಸ್ಯೇಕಾರಾದೇಶಃ । ಕ್ತಿನೋ ದೀರ್ಘಶ್ಚ । ನಿತ್ಯಾದ್ಯುದಾತ್ತತ್ವಂ । ಸಂಜಗ್ಮಾನಾಸು । ಸಮೋ ಗಮ್ಯೃಚ್ಛೀತ್ಯಾತ್ಮನೇಪದಂ । ಲಿಟಃ ಕಾನಚ್ । ಗಮಹನೇತ್ಯಾದಿನೋಪಧಾಲೋಪಃ । ಅರಕ್ಷತ್ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲಙ್ ॥**

॥ ಪ್ರತಿಪದಾರ್ಥ ॥

**ಸ್ನೇಹಿತೀಷು** – ವಧಕಾರಿಗಳಾದ । **ಕೃಷ್ಟಿಷು**—ಶತ್ರುರೂಪರಾದವರು । **ಸಂಜಗ್ಮಾನಾಸು**—ಯುದ್ಧ ಮಾಡಲು ಬಂದಾಗ । **ಪೂರ್ವ್ಯಃ**—ಪುರಾತನನಾದ । **ಯಃ**—ಯಾವ (ಅಗ್ನಿಯು) । **ದಾಶುಷೇ**—(ಹವಿರಾದಿಗಳನ್ನು ಅರ್ಪಿಸಿದವನ । **ಗಯಂ**—ಧನವನ್ನು । **ಅರಕ್ಷತ್**—ರಕ್ಷಿಸುತ್ತಾನೋ (ಅವನನ್ನು ಸ್ತುತಿಸೋಣ) ।

॥ ಭಾವಾರ್ಥ ॥

ಹಿಂಸಾಕಾರಿಗಳಾದ ಶತ್ರುಗಳು ಸಂಧಿಸಿದಾಗ, ಪುರಾತನನಾದ ಯಾವ ಅಗ್ನಿಯು ಹವಿರಾದಿದಾತೃವಾದ ಯಜಮಾನನಿಗೋಸ್ಕರ ಧನವನ್ನು ರಕ್ಷಣೆ ಮಾಡುತ್ತಾನೆಯೋ (ಅಂತಹ ಅಗ್ನಿಯನ್ನು ಸ್ತುತಿಸೋಣ)

English Translation

Who, existing of old, has preserved wealth for the sacrificer, when malevolent men are assembled together.

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಯಚ್ಛಬ್ದಪ್ರಯೋಗವಿರುವುದರಿಂದಲೂ ಇದು ಅಗ್ನಿಗೆ ಸಂಬಂಧವನ್ನು ಸೂಚಿಸುವುದರಿಂದಲೂ ಈ ಋಕ್ಕಿನಲ್ಲಿ ವಿವರಿಸಿರುವ ಅರ್ಥವನ್ನು ಅಗ್ನಿಗೆ ವಿಶೇಷಣವನ್ನಾಗಿ ಹೇಳಿ ಹಿಂದಿನ ಋಕ್ಕಿನಲ್ಲಿರುವ **ಮಂತ್ರಂ ವೋಚೇಮಾಗ್ನಯೇ** ಎಂಬ ಶಬ್ದಗಳನ್ನು ಅಧ್ಯಾಹಾರಮಾಡಿ ಅಂತಹ ಅಗ್ನಿಯನ್ನು ಮಂತ್ರಗಳಿಂದ ಸ್ತುತಿಸೋಣ ಎಂದು ಅರ್ಥಸಮನ್ವಯಮಾಡಬೇಕೆಂದು ಭಾಷ್ಯಕಾರರು ಹೇಳಿರುವರು.

**ಸ್ನೇಹಿತೀಷು ಸಂಜಗ್ಮಾನಾಸು ಕೃಷ್ಟಿಷು—ಷ್ಣಿಹ ಸ್ನೇಹನೇ । ಸ್ನೇಹಯತೀತಿ ವಧಕರ್ಮಸು ಪಠಿತಃ ।** ಸ್ನೇಹಿತೀಷು ಎಂಬ ಶಬ್ದವು ಷ್ಣಿಹ ಸ್ನೇಹನೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ ದಭ್ನೋತಿ,

ಶ್ನಥತಿ ಮೊದಲಾದ ಮೂವತ್ತಮೂರು ವಧಕರ್ಮಾರ್ಥಕಗಳಾದ ಶಬ್ದಗಳ ಮಧ್ಯದಲ್ಲಿ ಸ್ನೇಹಯತಿ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೦) ಈ ಶಬ್ದಕ್ಕೆ ಕೊಲ್ಲುವವರು, ಶತ್ರುಗಳು ಎಂದರ್ಥವು ಇಂತಹ ಶತ್ರುಗಳು ಸಮ್ಮೊಡನೆ ಯುದ್ಧಮಾಡುವುದಕ್ಕೆ ಬಂದಾಗ ಎಂದಭಿಪ್ರಾಯವು. ಕೃಷ್ಟಿಶಬ್ದವು ಮನುಷ್ಯವಾಚಕವು ವಧಾಪೇಕ್ಷಿಗಳಾಗಿ ಬರುವ ಮನುಷ್ಯರು ಎಂದರೆ ಯುದ್ಧಕ್ಕಾಗಿ ಬರುವ ಶತ್ರುಗಳು

**ಪೂರ್ವ್ಯಃ— ಪೂರ್ವಸ್ಮಿನ್ ಕಾಲೇ ಭವಃ । ಚಿರಂತನಃ ।—** ಹಿಂದಿನಕಾಲದಲ್ಲಿಯೂ ಇದ್ದವನು. ಎಂದರೆ ಯಾವಾಗಲೂ ಇರುವವನು, ಮರಣರಹಿತನು (ಅಗ್ನಿಯು).

**ಗಯಂ**— ತುಕ್, ತೋಕಂ ಮೊದಲಾದ ಹದಿನೈದು ಅಪತ್ಯನಾಮಗಳಲ್ಲಿ ಗಯಶಬ್ದವು ಪಠಿತವಾಗಿರುವುದರಿಂದ ಗಯಶಬ್ದಕ್ಕೆ ಅಪತ್ಯ ಅಥವಾ ಪುತ್ರಾದಿ ಸಂತತಿಯೆಂದೂ (ನಿ ೩-೨), ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ಈ ಶಬ್ದವು ಪಠಿತವಾಗಿರುವುದರಿಂದ (ನಿ ೩-೯) ಗಯಶಬ್ದಕ್ಕೆ ಧನವೆಂದೂ; ಗಯಃ, ಕೃದರಃ ಮೊದಲಾದ ಇಪ್ಪತ್ತೆರಡು ಗೃಹನಾಮಗಳ ಮಧ್ಯದಲ್ಲಿ ಪಠಿತವಾಗಿರುವುದರಿಂದ (ನಿ ೩-೧೩) ಗಯಶಬ್ದಕ್ಕೆ ಗೃಹವೆಂದೂ ಮೂರು ವಿಧವಾದ ಅರ್ಥಗಳಿರುವುವು. ಇಲ್ಲಿ ಭಾಷ್ಯಕಾರರು ಧನವೆಂಬ ಒಂದು ಅರ್ಥವನ್ನು ಮಾತ್ರ ಹೇಳಿರುವರು. ಯುದ್ಧಮಾಡುವ ಶತ್ರುಗಳಿಂದ ಜನಗಳ ಪ್ರಾಣ, ಧನ, ಮನೆ ಇವುಗಳ ರಕ್ಷಣೆಯು ಅವಶ್ಯಕವಾದುದರಿಂದ ಇಲ್ಲಿ ನಿರುಕ್ತದಲ್ಲಿ ಹೇಳಿರುವಂತೆ, ಪುತ್ರ, ಧನ, ಗೃಹ ಎಂಬ ಮೂರು ವಿಧವಾದ ಅರ್ಥಗಳಲ್ಲಿ ಯಾವುದನ್ನು ಬೇಕಾದರೂ ಹೇಳಬಹುದು

**ದಾಶುಷೇ— ಹವೀಂಷಿ ದತ್ತವತೇ ಯಜಮಾನಾಯ—** ಯುದ್ಧಸಂಭವಿಸುವಕಾಲದಲ್ಲಿ ಅಗ್ನಿಯನ್ನು ಹವಿರಾದಿದ್ರವ್ಯಗಳಿಂದ ಆರಾಧನೆಮಾಡುವ ಯಜಮಾನನ ಧನಾದಿಗಳನ್ನು ಅಗ್ನಿಯು ಅವಶ್ಯಕವಾಗಿ ರಕ್ಷಿಸುವನೆಂದಭಿಪ್ರಾಯವು

॥ ವ್ಯಾಕರಣಪ್ರಕ್ರಿಯಾ ॥

**ಸ್ನೇಹಿತೀಷು**— ಷ್ಣಿಹ ಸ್ನೇಹನೇ ಧಾತು ಚುರಾದಿ ಇದು **ಸ್ನೇಹಯತಿ** (ನಿರು. ೨-೧೯-೧೩) ಎಂಬುದಾಗಿ ವಧಕರ್ಮಾರ್ಥದಲ್ಲಿ ಪಠಿತವಾಗಿದೆ. ಸ್ನೇಹ್ಯಂತೇ ಹಿಂಸ್ಯಂತೇ ಪ್ರಜಾ ಆಭಿರಿತಿ ಸ್ನೇಹಿತಯಃ (ಇವುಗಳಿಂದ ಹಿಂಸಿಸಲ್ಪಡುತ್ತಾರೆ) ಕರಣಾರ್ಥದಲ್ಲಿ **ಸ್ತ್ರಿಯಾಂಕ್ತಿನ್** (ಪಾ ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ. ಯದ್ಯಪಿ **ತಿತುತ್ರ**—(ಪಾ ಸೂ ೭-೩-೯) ಎಂಬುದರಿಂದ ಇದಕ್ಕೆ ಇಣ್ನಿಷೇಧ ಬರುತ್ತದೆ. ಆದರೆ ಆ ಸೂತ್ರದಲ್ಲಿ **ತಿತುತ್ರೇಷ್ವಗ್ರಹಾದೀನಾಮಿತಿ ವಕ್ತವ್ಯಂ** (ಪಾ. ಸೂ. ೭-೩-೯-೧) ಎಂಬ ವಚನವಿರುವುದರಿಂದ ನಿಗೃಹೀತಿ, ನಿಪಠಿತಿ ಎಂಬಲ್ಲಿ ಹೇಗೆ ಇಡಾಗಮ ಆ ವಚನದಿಂದ ಸಿದ್ಧವಾಗುವುದೋ ಅದರಂತೆ ಇಲ್ಲಿಯೂ ಇಡಾಗಮ ಬರುತ್ತದೆ. **ವ್ಯತ್ಯಯೋ ಬಹುಲಂ** ಎಂಬುದರಿಂದ ಧಾತುವಿನ ಏಕಾರಕ್ಕೆ ಈಕಾರಾದೇಶವೂ ಕ್ತಿನ್ನಿಗೆ ದೀರ್ಘವೂ ಬರುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ಬಹುವಚನಾಂತರೂಪ.

**ಸಂಜಗ್ಮಾನಾಸು**—ಸಮ್ ಉಪಸರ್ಗ- ಗಮ್ಲೃ ಗತೌ. ಧಾತು. **ಸಮೋ ಗಮ್ಯೃಚ್ಛಿಭ್ಯಾಂ** (ಪಾ ಸೂ. ೧-೩-೨೯) ಎಂಬುದರಿಂದ ಆತ್ಮನೇಪದಿಯಾಗುತ್ತದೆ ಲಿಟ್ ವಿವಕ್ಷಾಮಾಡಿದಾಗ **ಲಿಟಃ ಕಾನಜ್ವಾ** ಎಂಬುದರಿಂದ ಕಾನಚ್ ಪ್ರತ್ಯಯ ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ **ಕುಹೋಶ್ಚುಃ** (ಪಾ. ಸೂ. ೭-೪-೬೨) ಎಂಬುದರಿಂದ ಚುತ್ವದಿಂದ ಜಕಾರಾದೇಶ **ಗಮಹನಜನ** -(ಪಾ. ಸೂ ೬-೪-೯೮) ಎಂಬುದರಿಂದ ಧಾತುವಿನ ಉಪಧೆಗೆ ಲೋಪ. ಸಂಜಗ್ಮಾನ ಎಂದು ರೂಪವಾಗುತ್ತದೆ. ಸ್ತ್ರೀತ್ವದಲ್ಲಿ **ಅಜಾದ್ಯತಷ್ಟಾಪ್** ಸೂತ್ರದಿಂದ ಟಾಪ್ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ ಸಪ್ತಮೀ ಬಹುವಚನಾಂತರೂಪ

**ಅರಕ್ಷತ್**—ರಕ್ಷ ಪಾಲನೇ ಧಾತು ವರ್ತಮಾನಾರ್ಥ ತೋರುವಾಗ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಙ್ ಪ್ರಥಮಪುರುಷ ಏಕವಚನದರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ

**ದಾಶುಷೇ**—ಡುದಾಞ್ ದಾನೇ ಧಾತು **ದಾಶ್ವಾನ್ ಸಾಹ್ವಾನ್**—(ಪಾ ಸೂ. ೬-೧-೧೨) ಎಂಬುದರಿಂದ ಕ್ವಸು ಪ್ರತ್ಯಯಾಂತವಾಗಿ ನಿಪಾತಿತವಾಗಿದೆ ಚತುರ್ಥೀ ಏಕವಚನದಲ್ಲಿ **ವಸೋಃ ಸಂಪ್ರಸಾರಣಂ** ಎಂಬುದರಿಂದ ಸಂಪ್ರಸಾರಣ **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ **ಶಾಸಿವಸಿಘಸೀನಾಂ ಚ** (ಪಾ ಸೂ. ೮-೩-೬೦) ಎಂಬುದರಿಂದ ಸಕಾರಕ್ಕೆ ಷತ್ವ ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ ॥ ೨ ॥



॥ ಸಂಹಿತಾಪಾಠಃ ॥

ಉತ ಬ್ರುವಂತು ಜಂತವ ಉದಗ್ನಿರ್ವೃತ್ರಹಾಜನಿ ।
ಧನಂಜಯೋ ರಣೇರಣೇ ॥ ೩ ॥

। ಪದಪಾಠಃ ।

ಉತ । ಬ್ರುವಂತು । ಜಂತವಃ । ಉತ್ । ಅಗ್ನಿಃ । ವೃತ್ರಽಹಾ । ಅಜನಿ ।
ಧನಂಽಜಯಃ । ರಣೇಽರಣೇ ॥ ೩ ॥

॥ ಸಾಯಣಭಾಷ್ಯಂ ॥

**ಅಗ್ನಿಮಂಥನೇ ಜಾತಾಯಾನುಬ್ರೂಹೀತ್ಯುಕ್ತ ಉತ ಬ್ರುವಂತ್ವಿತ್ಯೇಷಾನುವಚನೀಯಾ। ಪ್ರಾತರನ್ವೈಶ್ವದೇವ್ಯಾಮಿತಿ ಖಂಡೇ ಸೂತ್ರಿತಂ। ಶಿಷ್ಟೇನೋತ್ತರಾಮುತ ಬ್ರುವಂತು ಜಂತವಃ। ಆ. ೨-೧೬। ಇತಿ॥ ತಥಾ ಸಾಕಮೇಧೇಷು ಮರುದ್ಭ್ಯಃ ಕ್ರೀಡಿಭ್ಯಃ ಪುರೋಡಾಶಮಿತ್ಯಸ್ಯಾಮಿಷ್ಟಾವೇಷೈವ ಪ್ರಥಮಾಜ್ಯಭಾಗಾನುವಾಕ್ಯಾ। ಸೂತ್ರಿತಂ ಚ। ಮರುದ್ಭ್ಯಃ ಕ್ರೀಡಿಭ್ಯ ಉತ್ತರೋತ ಬ್ರುವಂತು ಜಂತವಃ। ಆ ೨-೧೮। ಇತಿ॥**

**ಅಗ್ನಿರುದಜನಿ। ಅರಣ್ಯೋಃ ಸಕಾಶಾದುತ್ಪನ್ನಃ। ಉತಾನಂತರಂ ಜಂತವೋ ಜಾತಾಃ ಸರ್ವ ಋತ್ವಿಜೋ ಬ್ರುವಂತು। ತಮಗ್ನಿಂ ಸ್ತುವಂತು। ಕೀದೃಶೋಽಗ್ನಿಃ। ವೃತ್ರಹಾ ವೃತ್ರಾಣಾಮಾವರಕಾಣಾಂ ಶತ್ರೂಣಾಂ ಹಂತಾ ರಣೇ ರಣೇ ಸರ್ವೇಷು ಸಂಗ್ರಾಮೇಷು ಧನಂಜಯಃ ಶತ್ರುಧನಾನಾಂ ಜೇತಾ॥ ಧನಂಜಯಃ। ಸಂಜ್ಞಾಯಾಂ ಭೃತೃವೃಜೀತಿ। ಪಾ. ೩-೨-೪೬। ಖಚ್। ಅರುರ್ದ್ವಿಷದಜಂತಸ್ಯ। ಪಾ. ೬-೩-೬೭। ಇತಿ ಮುಮ್। ಚಿತ್ಸ್ವರೇಣಾಂತೋದಾತ್ತತ್ವಂ। ರಣೇ ರಣೇ। ರಣ ಶಬ್ದಾರ್ಥಃ। ರಣಂತಿ ದುಂದುಭಯೋಽಸ್ಮಿನ್ನಿತಿ ರಣಃ ಸಂಗ್ರಾಮಃ। ಘಞರ್ಥೇ ಕವಿಧಾನಮ್। ಪಾ. ೩ ೩ ೫೮-೩। ಇತ್ಯಪ್। ನಿತ್ಯವೀಪ್ಸಯೋರಿತಿ ದ್ವಿರ್ವಚನಂ। ಆಮ್ರೇಡಿತಾನುದಾತ್ತತ್ವಂ॥**

॥ ಪ್ರತಿಪದಾರ್ಥ ॥

**ವೃತ್ರಹಾ**—ಶತ್ರುನಾಶಕನಾದ। **ರಣೇ ರಣೇ**—ಎಲ್ಲಾ ಯುದ್ಧಗಳಲ್ಲಿಯೂ। **ಧನಂಜಯಃ** ಶತ್ರು ಧನವನ್ನು ಜಯಿಸುವವನಾದ। **ಅಗ್ನಿಃ**—ಅಗ್ನಿಯು। **ಉತ್ ಅಜನಿ**—(ಅರಣಿಗಳಿಂದ) ಜನಿಸಿದನು। **ಉತ**—ಅನಂತರ। **ಜಂತವಃ**—ಉತ್ಪನ್ನರಾದ ಋತ್ವಿಜರು। **ಬ್ರುವಂತು**—(ಅಗ್ನಿಯನ್ನು) ಸ್ತುತಿಸಲಿ

॥ ಭಾವಾರ್ಥ ॥

ಜನ್ಮತಾಳಿದ ಎಲ್ಲರೂ (ಋತ್ವಿಜರು ಮೊದಲಾದವರು), (ಅರಣಿಗಳಿಂದ) ಉತ್ಪನ್ನನಾದ, (ಯುದ್ಧದಲ್ಲಿ) ಶತ್ರು ಧನವನ್ನು ಸಂಪಾದಿಸುವ, ಮತ್ತು ಶತ್ರುನಾಶಕನಾದ, ಅಗ್ನಿಯನ್ನು ಸ್ತುತಿಸಲಿ

## English Translation

Let men praise Agni as soon as grenerated, the slayer of Vritra. and the winner of booty in many a battle

॥ ವಿಶೇಷವಿಷಯಗಳು ॥

ಅಗ್ನಿಮಂಥನಕಾಲದಲ್ಲಿ ಎಂದರೆ ಅರಣಿಗಳೆಂಬ ಎರಡು ಮರದ ತುಂಡುಗಳನ್ನು ಉಪಯೋಗಿಸಿ ಒಂದಕ್ಕೊಂದನ್ನು ಉಜ್ಜುವುದರಿಂದ ಯಜ್ಞದಲ್ಲಿ ಅಗ್ನಿಯನ್ನು ಉತ್ಪತ್ತಿಮಾಡುವ (ಕಡೆಯುವ) ಕಾಲದಲ್ಲಿ ಅಧ್ವರ್ಯುವು ಹೋತೃ

ವನ್ನುದ್ದೇಶಿಸಿ “ **ಅಗ್ನಯೇ ಜಾತಾಯಾನುಬ್ರೂಹಿ**—ಅಗ್ನಿಯ ಉತ್ಪತ್ತಿಯನ್ನು ವರ್ಣಿಸುವ ಋಕ್ಕನ್ನು ಪಠಿಸು ” ಎಂದು ಹೇಳುವಾಗ **ಉತ ಬ್ರುವಂತು** ಎಂಬ ಈ ಋಕ್ಕನ್ನು ಅನುವಚನೀಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಪ್ರಾತರ್ವೈಶ್ವದೇವ್ಯಾಂ** ಎಂಬ ಖಂಡದಲ್ಲಿ—**ಶಿಪ್ರೇನೋತ್ತರಾಮುತ ಬ್ರುವಂತು ಜಂತವಃ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ ೨-೧೬) ಮತ್ತು ಮರುದ್ದೇವತೆಗಳನ್ನುದ್ದೇಶಿಸಿ ಸಾಕಮೇಧವೆಂಬ ಇಷ್ಟಿಯಲ್ಲಿ ಪುರೋಡಾಶ ಹೋಮಮಾಡುವಾಗ ಈ ಋಕ್ಕನ್ನು ಪ್ರಥಮಾಜ್ಯಭಾಗದ ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಮರುದ್ಭ್ಯಃ ಕ್ರೀಡಿಭ್ಯ ಉತ್ತರೋತ ಬ್ರುವಂತು ಜಂತವಃ** ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು (ಆ ೨-೧೮)

**ಉತ**—ಇಲ್ಲಿ ಉತಶಬ್ದವು ಸಮುಚ್ಚಯಾರ್ಥದಲ್ಲಿ ಪ್ರಯುಕ್ತವಾಗಿದೆ **ಉತ** ಎಂದರೆ ಮತ್ತು ಎಂದರ್ಥವು

**ಬ್ರುವಂತು ಜಂತವಃ—ಜಂತು** ಶಬ್ದಕ್ಕೆ ಇಲ್ಲಿ **ಜಾತಾಃ**—ಹುಟ್ಟಿದ, ಉತ್ಪನ್ನರಾದ ಮನುಷ್ಯರು ಎಂದರೆ ಯಜ್ಞದಲ್ಲಿ ಭಾಗವಹಿಸುತ್ತಿರುವ ಋತ್ವಿಕ್ಕುಗಳು ಎಂದು ಭಾಷ್ಯಕಾರರು ಅರ್ಥಮಾಡಿದ್ದಾರೆ. **ಬ್ರುವಂತು ಜಂತವಃ** ಎಂದರೆ ಅಗ್ನಿಯ ಸ್ತುತಿರೂಪವಾದ ಮಂತ್ರಗಳನ್ನು ಹೇಳಲಿ, ಅಗ್ನಿಯನ್ನು ಸ್ತೋತ್ರಮಾಡಲಿ ಎಂದಭಿಪ್ರಾಯವು

**ಉತ್ ಅಜನಿ—ಅರಣ್ಯೋಃ ಸಕಾಶಾದುತ್ಪನ್ನಃ ।** ಯಜ್ಞದಲ್ಲಿ ಅರಣಿಗಳಲ್ಲಿ ಮಂತ್ರಪುರಸ್ಸರವಾಗಿ ಉತ್ಪನ್ನನಾದವನು ಋತ್ವಿಕ್ಕುಗಳು ಅರಣಿಗಳಲ್ಲಿ ಅಗ್ನಿಯನ್ನು ಕಡೆದು ಉತ್ಪನ್ನಮಾಡಿದರು ಎಂದಭಿಪ್ರಾಯವು

**ವೃತ್ರಹಾ—ವೃತ್ರಾಣಾಮಾವರಕಾಣಾಂ ಶತ್ರೂಣಾಂ ಹಂತಾ ।** ಯುದ್ಧಾಭಿಲಾಷಿಗಳಾಗಿ ಬಂದು ಮುತ್ತುವ ಶತ್ರುಗಳನ್ನು ಸಂಹಾರಮಾಡುವವನು. ಇಲ್ಲಿ **ವೃತ್ರ** ಶಬ್ದಕ್ಕೆ—ಯುದ್ಧಮಾಡುವುದಕ್ಕಾಗಿ ಬಂದು ಮುತ್ತುವ ಶತ್ರುಗಳು ಎಂದು ಭಾಷ್ಯಕಾರರು ಅರ್ಥಮಾಡಿರುವರು. ಕೆಲವು ಕಡೆ ವೃತ್ರವಧಾದಿರೂಪವಾದ ಇಂದ್ರನ ಗುಣಗಳನ್ನು ಅಗ್ನಿಯಲ್ಲಿ ಆರೋಪಣೆಮಾಡಿ ಅಗ್ನಿಯನ್ನು ಸ್ತುತಿಸಿರುವುದು. ಆದುದರಿಂದ ವೃತ್ರನನ್ನು ಸಂಹಾರಮಾಡಿದ ಎಂಬರ್ಥವನ್ನು ಹೇಳಬಹುದು ಆದರೆ ಇಲ್ಲಿ ಭಾಷ್ಯಕಾರರು ಹೇಳಿರುವ ಅರ್ಥವೇ ಸಮಂಜಸವಾಗಿರುವುದು

**ಧನಂಜಯಃ ಶತ್ರುಧನಾನಾಂ ಜೇತಾ ।** ಶತ್ರುಗಳಲ್ಲಿರುವ ಧನವನ್ನು ಗೆಲ್ಲುವವನು ಯುದ್ಧಮಾಡುವಾಗ ಶತ್ರುಗಳಿಗೆ ಪರಾಭವವನ್ನುಂಟುಮಾಡಿ ಅವರಲ್ಲಿರುವ ಧನವನ್ನು ಸ್ತೋತ್ರಮಾಡುವವರಿಗೆ ಕೊಡುವವನಾದುದರಿಂದ ಅಗ್ನಿಯನ್ನು ಧನಂಜಯ ಶಬ್ದದಿಂದ ಸ್ತುತಿಸಲಾಗಿರುವುದು. ಧನಂಜಯ ಶಬ್ದವನ್ನು ಇತರ ದೇವತೆಗಳ ಪರವಾಗಿಯೂ ಉಪಯೋಗಿಸಲಾಗಿರುವುದು

**ಸ ಪವಸ್ವ ಧನಂಜಯ ಪ್ರಯಂತಾ ರಾಧಸೋ ಮಹಃ ।**

(ಋ ಸಂ ೯ ೪೬ ೫)

**ಧನಂಜಯಃ ಪವತೇ ಕೃತ್ವ್ಯೋ ರಸೋ ವಿಪ್ರಃ ಕವಿಃ ಕಾವ್ಯೇನಾ ಸ್ವರ್ಚನಾಃ ।**

(ಋ ಸಂ ೯ ೮೪ ೫)

ಈ ಋಕ್ಕುಗಳಲ್ಲಿ ಧನಂಜಯ ಶಬ್ದವು ಸೋಮದೇವತೆಯ ಪರವಾಗಿರುವುದು.

**ವಿದ್ಮಾ ಹಿ ತ್ವಾ ಧನಂಜಯಃ ವಾಜೇಷು ದಧೃಷಂ ಕವೇ ।**

(ಋ ಸಂ ೩-೪೨-೬)

**ವಿದ್ಮಾ ಹಿ ತ್ವಾ ಧನಂಜಯಮಿಂದ್ರ ದೃಳ್ಹಾ ಚಿದಾರುಜಂ ।**

(ಋ ಸಂ ೮-೪೫-೧೩)

ಈ ಋಕ್ಕುಗಳಲ್ಲಿರುವ ಧನಂಜಯಶಬ್ದವು ಇಂದ್ರನ ಪರವಾಗಿರುವುದು

**ತಮು ತ್ವಾ ಪಾಥ್ಯೋ ವೃಷಾ ಸಮೀಧೇ ದಸ್ಯುಹಂತಮಂ ।**
**ಧನಂಜಯಂ ರಣೇರಣೇ ॥**

(ಋ ಸಂ ೬-೧೬-೧೫)

ಈ ಋಕ್ಕಿನಲ್ಲಿ ಧನಂಜಯಶಬ್ದವು ಅಗ್ನಿಯ ಪರವಾಗಿರುವುದು ಇವಲ್ಲದೆ ಪ್ರಸಕ್ತ ಋಕ್ಕಿನಲ್ಲಿರುವ ಪಾದವೇ ಪುನಃ ಪಠಿತವಾಗಿರುವುದು. ಪ್ರಥಮಾವಿಭಕ್ತಿಗೆ ಬದಲಾಗಿ ದ್ವಿತೀಯಾವಿಭಕ್ತಿಯ ಪ್ರಯೋಗವಿರುವುದು. ಇಂದ್ರನ ಪರವಾದ ಉದಾಹರಣೆಗಳಲ್ಲಿಯೂ ಸಹ **ವಿದ್ಮಾ ಹಿ ತ್ವಾ ಧನಂಜಯಂ** ಎಂಬ ಪಾದವು ಪುನಃ ಪಠಿತವಾಗಿರುವುದು. ಈ ಋಕ್ಕುಗಳಿಗೆ ಋಷಿಗಳು ಬೇರೆ ಬೇರೆಯಾಗಿದ್ದರೂ ಒಂದೇ ವಿಧವಾದ ವಾಕ್ಯಗಳನ್ನು ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ಉಪಯೋಗಿಸಿರುವ ವಿಷಯವು ಗಮನಾರ್ಹವಾಗಿರುವುದು. ಧನಂಜಯಶಬ್ದದ ಪ್ರಯೋಗವು ಈ ಋಕ್ಕುಗಳಲ್ಲಲ್ಲದೆ ಋಗ್ವೇದದಲ್ಲಿ ಇನ್ನೆಲ್ಲಿಯೂ ಇರುವುದಿಲ್ಲ

**ರಣೇರಣೇ—ರಣಂತಿ ದುಂದುಭಯೋಽಸ್ಮಿನ್ನಿತಿ ರಣಃ ಸಂಗ್ರಾಮಃ ।** ರಣಶಬ್ದಕ್ಕೆ ಶಬ್ದಮಾಡು, ಧ್ವನಿಮಾಡು ಎಂದರ್ಥವಿರುವುದು ಯುದ್ಧದಲ್ಲಿ ದುಂದುಭಿ, ನಗಾರಿ ಮೊದಲಾದ ನಿರ್ಘೋಷವಿರುವುದರಿಂದ ಅಂತಹ ಧ್ವನಿಯುಕ್ತವಾದ ಯುದ್ಧಕ್ಕೆ ರಣವೆಂದು ಹೆಸರು. **ರಣಃ ವಿವಾಕ್** ಮೊದಲಾದ ನಲವತ್ತಾರು ಸಂಗ್ರಾಮನಾಮಗಳ ಮಧ್ಯದಲ್ಲಿ **ರಣಃ** ಎಂಬ ಶಬ್ದವು ಪಠಿತವಾಗಿರುವುದರಿಂದ ರಣಶಬ್ದಕ್ಕೆ ಯುದ್ಧವೆಂದು ಅರ್ಥವಿರುವುದು ಮತ್ತು ನಿರುಕ್ತಕಾರರು—

**ಮರುತ್ವಾಁ ಇಂದ್ರ ವೃಷಭೋ ರಣಾಯ ಪಿಬಾ ಸೋಮಮನುಷ್ವಧಂ ಮದಾಯ ।**

(ಋ. ಸಂ ೩-೪೭-೧).

**ಮಹೇ ಯತ್ತ್ವಾ ಪುರೂರವೋ ರಣಾಯಾವರ್ಧಯನ್ದಸ್ಯುಹತ್ಯಾಯ ದೇವಾಃ ।**

(ಋ. ಸಂ ೧೦-೯೫-೭)

ಎಂಬ ಋಕ್ಕುಗಳನ್ನು ಉದಾಹರಣೆಯಾಗಿ ಕೊಟ್ಟು ಅವುಗಳಲ್ಲಿರುವ **ರಣಾಯ** ಎಂಬ ಶಬ್ದಕ್ಕೆ **ರಮಣೀಯಾಯ ಸಂಗ್ರಾಮಾಯ**—ರಮಣೀಯವಾದ ಯುದ್ಧಕ್ಕಾಗಿ ಎಂದು ಅರ್ಥವಿವರಣೆಮಾಡಿರುವರು (ನಿ. ೪-೮ ಮತ್ತು ೧೦-೪೭) ಮತ್ತು—

**ಆಪೋ ಹಿ ಷ್ಠಾ ಮಯೋಭುವಸ್ತಾ ನ ಊರ್ಜೇ ದಧಾತನ ।**
**ಮಹೇ ರಣಾಯ ಚಕ್ಷಸೇ ॥**

(ಋ ಸಂ ೧೦-೯-೧)

ಎಂಬ ಋಕ್ಕಿನಲ್ಲಿರುವ **ರಣಾಯ** ಎಂಬ ಶಬ್ದಕ್ಕೆ **ರಮಣೀಯಾಯ** ಎಂದು ಅರ್ಥವಿವರಣೆಮಾಡಿ **ಚಕ್ಷಸೇ ದರ್ಶನಾಯ** ಎಂಬ ಪದಕ್ಕೆ ವಿಶೇಷಣವನ್ನಾಗಿ ಮಾಡಿರುವರು

॥ ವ್ಯಾಕರಣಪ್ರಕ್ರಿಯಾ ॥

**ಬ್ರುವಂತು** –ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಲೋಟ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ ಅದಕ್ಕೆ ಅಂತಾದೇಶ ಉತ್ವ **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ವವಿರುವುದರಿಂದ ಧಾತುವಿಗೆ ಗುಣಬರುವುದಿಲ್ಲ. **ಅಚಿಶ್ನುಧಾತುಭ್ರುವಾಂ**—ಎಂಬುದರಿಂದ ಉವಙಾದೇಶ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಧನಂಜಯಃ** -ಜಿ ಜಯೇ ಧಾತು **ಸಂಜ್ಞಾಯಾಂ ಭೃತೃವೃಜಿ**--(ಪಾ ಸೂ ೩-೨-೪೬) ಎಂಬುದರಿಂದ ಖಚ್ ಪ್ರತ್ಯಯ ಖಿತ್ ಪ್ರತ್ಯಯ ಪರದಲ್ಲಿರುವುದರಿಂದ **ಅರುರ್ದ್ವಿಷದಜಂತಸ್ಯಮುಮ್** (ಪಾ. ಸೂ. ೬-೩-೬೭) ಎಂಬುದರಿಂದ ಪೂರ್ವದಲ್ಲಿರುವ ಅಜಂತವಾದ ಧನ ಎಂಬುದಕ್ಕೆ ಮುಮಾಗಮ ಖಚ್ ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ ಅಯಾದೇಶ ಚಿತ್ತಾದುದರಿಂದ **ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ

**ರಣೇ ರಣೇ**—ರಣ ಶಬ್ದಾರ್ಥಕವಾದ ಧಾತು ರಣಂತಿ ದುಂದುಭಯೋಽಸ್ಮಿನ್ನಿತಿ ರಣಃ ಸಂಗ್ರಾಮಃ (ದುಂದುಭ್ಯಾದಿಗಳು ಶಬ್ದಮಾಡಲ್ಪಡುವುದರಿಂದ ಯುದ್ಧಕ್ಕೆ ಹೆಸರು) **ವಶಿರಣ್ಯೋರುಪಸಂಖ್ಯಾನಂ** (ಪಾ ಸೂ ೩-೩-೫೮-೩) ಎಂಬ ವಚನದಿಂದ ಇದಕ್ಕೆ ಅಪ್ ಪ್ರತ್ಯಯ. ರಣ ಎಂದು ರೂಪವಾಗುತ್ತದೆ ವೀಪ್ಸಾ ತೋರುವುದರಿಂದ **ನಿತ್ಯವೀಪ್ಸಯೋಃ** (ಪಾ. ಸೂ ೮-೧-೪) ಎಂಬುದರಿಂದ ದ್ವಿರ್ವಚನ ಬರುತ್ತದೆ. **ತಸ್ಯ ಪರಮಾಮ್ರೇಡಿತಂ** ಎಂಬುದರಿಂದ ದ್ವಿರುಕ್ತಿ ಬಂದಾಗ ಪರಕ್ಕೆ ಆಮ್ರೇಡಿತ ಸಂಜ್ಞೆ ಬರುತ್ತದೆ. ಆಗ **ಅನುದಾತ್ತಂ ಚ** (ಪಾ ಸೂ ೮-೧-೩) ಎಂಬುದರಿಂದ ಪರಕ್ಕೆ ಅನುದಾತ್ತಸ್ವರ ಬರುತ್ತದೆ ॥ ೩ ॥

॥ ಸಂಹಿತಾಪಾಠಃ ॥

ಯಸ್ಯ ದೂತೋ ಅಸಿ ಕ್ಷಯೇ ವೇಷಿ ಹವ್ಯಾನಿ ವೀತಯೇ ।
ದಸ್ಮತ್ಕೃಣೋಷ್ಯಧ್ವರಂ ॥ ೪ ॥

॥ ಪದಪಾಠಃ ॥

ಯಸ್ಯ । ದೂತಃ । ಅಸಿ । ಕ್ಷಯೇ । ವೇಷಿ । ಹವ್ಯಾನಿ । ವೀತಯೇ ।
ದಸ್ಮತ್ । ಕೃಣೋಷಿ । ಅಧ್ವರಂ ॥ ೪ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಯಸ್ಯ ಯಜಮಾನಸ್ಯ ಕ್ಷಯೇ ದೇವಯಜನಲಕ್ಷಣೇ ಗೃಹೇ ದೇವಾನಾಂ ದೂತಸ್ತ್ವಮಸಿ ಭವಸಿ । ಯಸ್ಯ ಚ ಹವ್ಯಾನಿ ಚರುಪುರೋಡಾಶಾದೀನಿ ಹವೀಂಷಿ ವೀತಯೇ ದೇವಾನಾಂ ಭಕ್ಷಣಾಯ ವೇಷಿ ಗಮಯಸಿ । ಯಸ್ಯ ಚಾಧ್ವರಂ ಯಜ್ಞಂ ದಸ್ಮತ್ ಸರ್ವೈರ್ದರ್ಶನೀಯಂ ಕೃಣೋಷಿ ಕರೋಷಿ । ತಮಿತ್ಸುಹವ್ಯಮಿತ್ಯುತ್ತರಯಾ ಸಂಬಂಧಃ ॥ ವೇಷಿ । ವೀ ಗತ್ಯಾದಿಷು । ಅಂತರ್ಭಾವಿತಣ್ಯರ್ಥಾಲ್ಲಟ್ । ಅದಾದಿತ್ವಾಚ್ಛಪೋ ಲುಕ್ । ಪಾದಾದಿತ್ವಾನ್ನಿಘಾತಾಭಾವಃ । ದಸ್ಮತ್ । ದಸಿ ದಂಸನದರ್ಶನಯೋಃ । ಇಷಿಯುಧೀಂಧೀತ್ಯಾದಿನಾ ಮಕ್ । ದಸ್ಮಮಿತ್ಯತ್ರ ಮಕಾರಸ್ಯ ವರ್ಣವ್ಯಾಪತ್ತ್ಯಾ ತಕಾರಃ । ಕೃಣೋಷಿ । ಕೃವಿ ಹಿಂಸಾಕರಣಯೋಶ್ಚ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ತತ್ಸಂನಿಯೋಗೇನ ವಕಾರಸ್ಯಾಕಾರಃ । ತಸ್ಯಾತೋ ಲೋಪೇ ಸತಿ ಸ್ಥಾನಿವದ್ಭಾವಾಲ್ಲಘೂಪಧಗುಣಾಭಾವಃ । ಯಸ್ಯೇತ್ಯನುಷಂಗಾನ್ನಿಘಾತಾಭಾವಃ ॥

॥ ಪ್ರತಿಪದಾರ್ಥ ॥

ಅಗ್ನೇ—ಅಗ್ನಿಯೇ । ಯಸ್ಯ—ಯಾವ (ಯಜಮಾನನ) । ಕ್ಷಯೇ—ಯಾಗಗೃಹದಲ್ಲಿ ದೂತಃ ಅಸಿ—(ನೀನು ದೇವತೆಗಳ) ದೂತನು ಆಗಿದ್ದೀಯೋ । ಹವ್ಯಾನಿ—(ದೇವತೆಗಳಿಗೆ ಅರ್ಪಿತವಾದ) ಚರುಪುರೋಡಾಶಾದಿಗಳನ್ನು । ವೀತಯೇ—(ದೇವತೆಗಳ) ಭಕ್ಷಣೆಗಾಗಿ । ವೇಷಿ—ಹೊರಡಿಸುತ್ತೀಯೋ (ತೆಗೆದುಕೊಂಡುಹೋಗಿ ಕೊಡುತ್ತೀಯೋ) । ಅಧ್ವರಂ— ಯಜ್ಞವನ್ನು । ದಸ್ಮತ್—(ಎಲ್ಲರಿಗೂ) ದರ್ಶನೀಯವಾಗಿ । ಕೃಣೋಷಿ—ಮಾಡುತ್ತೀಯೋ

॥ ಭಾವಾರ್ಥ ॥

ಯಾವ ಯಜಮಾನನ ಯಾಗಗೃಹದಲ್ಲಿ ನೀನು ದೇವತೆಗಳ ದೂತನಾಗಿರುವಿಯೋ (ಯಾವನು) ಅರ್ಪಿಸಿದ ಹವಿರಾದಿಗಳನ್ನು ದೇವತೆಗಳಿಗೆ ಸೇರಿಸುತ್ತೀಯೋ ಮತ್ತು (ಯಾವನ) ಯಜ್ಞವನ್ನು ಎಲ್ಲರಿಂದಲೂ ಪ್ರೇಕ್ಷಣೀಯ ವನ್ನಾಗಿ ಮಾಡುತ್ತೀಯೋ (ಅಂತಹ ನಿನ್ನನ್ನು ಒಳ್ಳೆಯ ಯಜ್ಞಕರ್ತನಾಗಿರುವನೆಂದು ಹೇಳುವರು)

## English Translation

(The Sacrificer), in whose house you are the messenger of the Gods whose offering you convey for their food, and whose sacrifice you render acceptable

॥ ವಿಶೇಷವಿಷಯಗಳು ॥

**ಯಸ್ಯ ದೂತೋ ಅಸಿ ಕ್ಷಯೇ**—ಯಾವ ಯಜ್ಞಮಾಡುವ ಯಜಮಾನನ ಯಾಗಶಾಲೆಯಲ್ಲಿ ಪ್ರತಿಷ್ಠಿತ ನಾಗಿ ಅವನು ದೇವತೆಗಳನ್ನುದ್ದೇಶಿಸಿ ನಿನ್ನಲ್ಲಿ ಅರ್ಪಿಸುವ (ಹೋಮಮಾಡುವ) ಹವಿಸ್ಸು ಮೊದಲಾದವುಗಳನ್ನು ದೇವತೆಗಳಿಗೆ ತೆಗೆದುಕೊಂಡು ಹೋಗುವ ದೂತನಾಗಿರುವಿಯೋ ಎಂದಭಿಪ್ರಾಯವು

**ಕ್ಷಯೇ—ದೇವಯಜನಲಕ್ಷಣೇ ಗೃಹೇ । ಕ್ಷಿ ನಿವಾಸಗತ್ಯೋಃ** ಎಂಬ ಧಾತುವಿನಿಂದ ನಿಷ್ಪನ್ನ ವಾದ ಕ್ಷಯಶಬ್ದಕ್ಕೆ ವಾಸಗೃಹವೆಂದು ಅರ್ಥವು ಇಲ್ಲಿ ಕ್ಷಯೇ ಎಂದರೆ ಯಜಮಾನನು ಯಜ್ಞಮಾಡುವ ಯಾಗಶಾಲೆ ಯೆಂದಭಿಪ್ರಾಯವು

**ವೀತಯೇ—ವೀ ಗತ್ಯಾದಿಷು । ವೀತಯೇ ದೇವಾನಾಂ ಭಕ್ಷಣಾಯ ।** ದೇವತೆಗಳು ಭಕ್ಷಿಸು ವುದಕ್ಕಾಗಿ

**ವೇಷಿ - ವೀ ಗತ್ಯಾದಿಷು । ಗಮಯಸಿ ।** ಹೊಂದುವೆಯೋ

**ದಸ್ಮತ್—ಸರ್ವೈರ್ದರ್ಶನೀಯಂ ।** ಎಲ್ಲರಿಂದ ನೋಡಲರ್ಹವಾದ, ಸುಂದರವಾದ, ರಮಣೀಯವಾದ ಇತ್ಯಾದಿ

ಈ ಋಕ್ಕಿನಲ್ಲಿ— **ಯಸ್ಯ ದೂತೋ ಅಸಿ ಕ್ಷಯೇ**-ಯಾವ ಯಜಮಾನನ ಮನೆಯಲ್ಲಿರುವ ನೀನು ಅವನ ಪರವಾಗಿ ದೇವತೆಗಳಿಗೆ ದೂತನಾಗಿರುವೆಯೋ **ವೇಷಿ ಹವ್ಯಾನಿ ವೀತಯೇ**-ದೇವತೆಗಳ ಭಕ್ಷಣಾರ್ಥವಾಗಿ ಹವಿಸ್ಸನ್ನು ತೆಗೆದುಕೊಂಡು ಹೋಗುವೆಯೋ, **ದಸ್ಮತ್ಕೃಣೋಷ್ಯಧ್ವರಂ**-ಯಾವ ಯಜಮಾನನ ಯಜ್ಞವನ್ನು ದರ್ಶನೀಯ ವನ್ನಾಗಿ (ಸಕಲರೂ ಮೆಚ್ಚುವಂತೆ) ಮಾಡುವಿಯೋ ಎಂಬ ಪ್ರತ್ಯೇಕವಾದ ಮೂರು ಉಪವಾಕ್ಯಗಳಿರುವವು ಇವುಗ ಳೆಲ್ಲವೂ ಮುಂದಿನ ಋಕ್ಕಿನಲ್ಲಿರುವ **ಸುಬರ್ಹಿಷಂ**-ಶ್ರೇಷ್ಠನಾದ ಯಜ್ಞಕರ್ತನನ್ನಾಗಿ ಎಂಬ ಶಬ್ದಕ್ಕೆ ವಿಶೇಷಣ ರೂಪವಾಗಿರುವುದೆಂದು ಭಾಷ್ಯಕಾರರು ವಿವರಿಸಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಅಸಿ**—ಅಸ ಭುವಿ ಧಾತು. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ತಾಸಸ್ತ್ಯೋರ್ಲೋಪಃ** ಎಂಬುದರಿಂದ ಸಲೋಪ ಯಚ್ಛಬ್ದ ಸಂಬಂಧವಿರುವುದರಿಂದ ನಿಘಾತ ಪ್ರತಿಷೇಧ ಬರುವುದರಿಂದ ಧಾತುಸ್ವರ ಉಳಿಯುತ್ತದೆ.

**ವೇಷಿ**—ವೀ ಗತ್ಯಾದಿಷು. ಧಾತು. ಪ್ರೇರಣಾವ್ಯಾಪಾರತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿಗೆ ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕ್ಕಿಗೆ ಗುಣ **ಆದೇಶಪ್ರತ್ಯಯಯೋಃ** ಎಂಬುದರಿಂದ ಷತ್ವ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತು ಸ್ವರ ಉಳಿಯುತ್ತದೆ

**ದಸ್ಮತ್**—ದಸಿ ದಂಸನದರ್ಶನಯೋಃ ಧಾತು. ಇದಕ್ಕೆ **ಇಷಿಯುಧೀಂಧಿ**—(ಉ ಸೂ. ೧-೧೪೨) ಎಂಬುದರಿಂದ ಮಕ್ ಪ್ರತ್ಯಯ ದಸ್ಮ ಎಂದು ರೂಪವಾಗುತ್ತದೆ. ಇದಕ್ಕೆ ದ್ವಿತೀಯಾ ಅಮ್, ಪರವಾದಾಗ **ಅಮಿಪೂರ್ವಃ** ಎಂಬುದರಿಂದ ಪೂರ್ವರೂಪ ದಸ್ಮಮ್ ಎಂದಿರುವಾಗ ಮಕಾರಕ್ಕೆ ವರ್ಣವ್ಯತ್ಯಯದಿಂದ ತಕಾರ ಬರುತ್ತದ ಮಕಾರೋತ್ತರಾಕಾರವು ಪ್ರತ್ಯಯಸ್ವರದಿಂದ ಉದಾತ್ತವಾದಾಗ ಅದಕ್ಕೆ ಏಕಾದೇಶ ಬಂದುದರಿಂದ **ಏಕಾದೇಶಉದಾತ್ತೇನೋದಾತ್ತಃ** (ಪಾ ಸೂ ೮-೨-೫) ಎಂಬುದರಿಂದ ಉದಾತ್ತವಾಗುತ್ತದೆ

**ಕೃಣೋಷಿ**—ಕೃವಿ ಹಿಂಸಾಕರಣಯೋಶ್ಚ ಧಾತು ಇದಕ್ಕೆ ಲಟ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್ **ಧಿನ್ವಿಕೃಣ್ವ್ಯೋರಚ** (ಪಾ ಸೂ ೩-೧-೮೦) ಎಂಬುದರಿಂದ ಉ ಪ್ರತ್ಯಯ ತತ್ಸಂನಿಯೋಗದಿಂದ ಅಂತ್ಯವಕಾರಕ್ಕೆ ಅಕಾರಾದೇಶ **ಇದಿತೋನುಮ್‌ಧಾತೋಃ** ಎಂಬುದರಿಂದ ಧಾತುವಿಗೆ ನುಮಾಗಮ ಕೃಣ+ಉ+ಸಿ ಎಂದಿರುವಾಗ **ಅತೋ ಲೋಪಃ** ಎಂಬುದರಿಂದ ಉ ನಿಮಿತ್ತವಾಗಿ ಅಕಾರಲೋಪ **ಅಚಃ ಪರಸ್ಮಿನ್ ಪೂರ್ವವಿಧೌ** (ಪಾ. ಸೂ ೧-೧-೫೭) ಎಂಬುದರಿಂದ ಸ್ಥಾನಿವದ್ಭಾವ ಬರುವುದರಿಂದ ಉನಿಮಿತ್ತವಾಗಿ ಲಘೂಪಧಗುಣ ಬರುವುದಿಲ್ಲ ಋಕಾರದ ಪರದಲ್ಲಿ ನಕಾರ ಬಂದುದರಿಂದ ನಕಾರಕ್ಕೆ ಣತ್ವ. ಸಿಪ್ ನಿಮಿತ್ತವಾಗಿ ಉಕಾರಕ್ಕೆ ಗುಣ ಕೃಣೋಷಿ ಎಂದು ರೂಪವಾಗುತ್ತದೆ. ಯಸ್ಯ ಎಂಬುದಕ್ಕೆ ಇಲ್ಲಿಯೂ ಅನುಷಂಗ (ಸಂಬಂಧ)ವಿರುವುದರಿಂದ **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಆಗ ಉಪ್ರತ್ಯಯದ ಸ್ವರವು ಸತಿಶಿಷ್ಟವಾಗುವುದರಿಂದ ಮಧ್ಯೋದಾತ್ತವಾದ ಪದವಾಗುತ್ತದೆ ॥ ೪ ॥



॥ ಸಂಹಿತಾಪಾಠಃ ॥

ತಮಿತ್ಸುಹವ್ಯಮಂಗಿರಃ ಸುದೇವಂ ಸಹಸೋ ಯಹೋ ।
ಜನಾ ಆಹುಃ ಸುಬರ್ಹಿಷಂ ॥ ೫ ॥

॥ ಪದಪಾಠಃ ॥

ತಂ । ಇತ್ । ಸುಽಹವ್ಯಂ । ಅಂಗಿರಃ । ಸುಽದೇವಂ । ಸಹಸಃ । ಯಹೋ ಇತಿ ।
ಜನಾಃ । ಆಹುಃ । ಸುಽಬರ್ಹಿಷಂ ॥ ೫ ॥

॥ ಸಾಯಣಭಾಷ್ಯಂ ॥

ಹೇ ಸಹಸೋ ಯಹೋ ಬಲಸ್ಯ ಪುತ್ರ ಅಂಗಿರೋಽಂಗನಾದಿಗುಣಯುಕ್ತಾಗ್ನೇ ಯೋ ಯಜಮಾನಃ ಪೂರ್ವಮುಕ್ತಸ್ತಮಿತ್ ತಮೇವ ಯಜಮಾನಂ ಸುಹವ್ಯಂ ಶೋಭನಹವಿಷ್ಕಂ ಸುದೇವಂ ಶೋಭನದೈವತಂ ಸುಬರ್ಹಿಷಂ । ಬರ್ಹಿರಿತಿ ಯಜ್ಞನಾಮ । ಶೋಭನಯಜ್ಞಂ ಚ ಜನಾಃ ಸರ್ವೇ ಮನುಷ್ಯಾ ಆಹುಃ । ಕಥಯಂತಿ ॥ ಸುಹವ್ಯಮಿತ್ಯಾದಿಷು ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸಹಸೋ ಯಹೋ । ಸುಬಾಮಂತ್ರಿತೇ ಇತಿ ಪರಾಂಗವದ್ಭಾವಾತ್ಷಷ್ಠ್ಯಾಮಂತ್ರಿತಸಮುದಾಯಸ್ಯಾಷ್ಟಮಿಕಮಾಮಂತ್ರಿತಾನುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಸಹಸೋ ಯಹಃ**—ಬಲದ ಪುತ್ರನಾದ । **ಅಂಗಿರಃ**—ಎಲೈ ಅಂಗಿರಸನೇ (ಅಗ್ನಿಯೇ) । **ತಮಿತ್**—(ಹಿಂದೆ ಹೇಳಿದ) ಅವನನ್ನೇ (ಯಜಮಾನನನ್ನೇ) । **ಸುಹವ್ಯಂ**—ಶುಭವಾದ ಹವಿಸ್ಸುಳ್ಳವನೆಂದೂ । **ಸುದೈವಂ**—ಸುದೈವಿಯೆಂದೂ । **ಸುಬರ್ಹಿಷಂ**—ಮಂಗಳಕರವಾದ ಯಜ್ಞವುಳ್ಳವನೆಂದೂ । **ಜನಾಃ**—ಜನರು । **ಆಹುಃ**—ಹೇಳುತ್ತಾರೆ.

॥ ಭಾವಾರ್ಥ ॥

ಬಲದ ಪುತ್ರನಾದ ಅಂಗಿರಸ್ ಎಂಬ ಅಗ್ನಿಯೇ, (ಹಿಂದೆ ವರ್ಣಿಸಿದ) ಯಜಮಾನನನ್ನೇ, ಹವಿರ್ದಾನ, (ಪೂಜ್ಯವಾದ) ದೇವತೆ, ಮತ್ತು (ಕರ್ತವ್ಯವಾದ) ಯಜ್ಞ, ಇವುಗಳೆಲ್ಲದರಲ್ಲಿಯೂ ಅದೃಷ್ಟಶಾಲಿಯೆಂದು, ಜನರೆಲ್ಲರೂ ಹೇಳುತ್ತಾರೆ.

## English Translation.

Him, Angiras, son of strength, men call fortunate in his sacrifice, his diety, his oblations.

॥ ವಿಶೇಷವಿಷಯಗಳು ॥

**ತಮಿತ್**—ತಮೇವ ಯಜಮಾನಂ—ಇಲ್ಲಿ ಇತ್ ಎಂಬ ಶಬ್ದಕ್ಕೆ ಏವ ಎಂದರ್ಥವು ತಮಿತ್—ಆ ಯಜಮಾನನನ್ನೇ ಎಂದರ್ಥವು

**ಅಂಗಿರಃ**—ಇಲ್ಲಿ ಅಂಗಿರಃ ಎಂಬ ಶಬ್ದವನ್ನು ಅಗ್ನಿಯನ್ನು ಸಂಬೋಧನೆಮಾಡುವುದಕ್ಕಾಗಿ ಉಪಯೋಗಿಸಿದೆ ಋಗ್ವೇದದಲ್ಲಿ ಅಗ್ನಿಯನ್ನು ಸಂಬೋಧನೆಮಾಡುವ ಅನೇಕ ಸಂದರ್ಭಗಳಲ್ಲಿ **ಅಂಗಿರಃ** ಎಂಬ ಶಬ್ದದ ಪ್ರಯೋಗವಿರುವುದು ಉದಾಹರಣೆಗಾಗಿ—

**ಯದಂಗ ದಾಶುಷೇ ತ್ವಮಗ್ನೇ ಭದ್ರಂ ಕರಿಷ್ಯಸಿ । ತವೇತ್ತತ್ಸತ್ಯಮಂಗಿರಃ ॥**

(ಋ. ಸಂ ೧-೧-೬)

**ತ್ವಮಗ್ನೇ ಪ್ರಥಮೋ ಅಂಗಿರಾಋಷಿರ್ದೇವೋ ದೇವಾನಾಮಭವಃ ಶಿವಃ ಸಖಾ ।**

(ಋ ಸಂ ೧-೩೧-೧)

**ಮನುಷ್ವದಗ್ನೇ ಅಂಗಿರಸ್ವದಂಗಿರೋ ಯಯಾತಿವತ್ಸದನೇ ಪೂರ್ವವಚ್ಛುಚೇ ।**

(ಋ. ಸಂ. ೧-೩೧-೧೭)

**ಉತ ಬ್ರಹ್ಮಾಣ್ಯಂಗಿರೋ ಜುಷಸ್ವ ಸಂ ತೇ ಶಸ್ತಿರ್ದೇವವಾತಾ ಜರೇತ ।**

(ಋ ಸಂ ೪-೩-೧೫)

**ಅಸ್ಮಾಕಂ ಜೋಷ್ಯಧ್ವರಮಸ್ಮಾಕಂ ಯಜ್ಞಮಂಗಿರಃ ।**

(ಋ ಸಂ ೪-೯-೭)

**ಸ ನೋ ಜುಷಸ್ವ ಸಮಿಧಾನೋ ಅಂಗಿರೋ ದೇವೋ ಮರ್ತಸ್ಯ ಯಶಸಾ ಸುದೀತಿಭಿಃ ।**

(ಋ ಸಂ. ೫-೮-೪)

**ತ್ವಂ ನೋ ಅಗ್ನೇ ಅಂಗಿರಃ ಸ್ತುತಃ ಸ್ತವಾನ ಆ ಭರ ।**

(ಋ ಸಂ ೫-೧೦-೭)

**ಸ ಜಾಯಸೇ ಮಥ್ಯಮಾನಃ ಸಹೋ ಮಹತ್ತ್ವಾಮಾಹುಃ ಸಹಸಸ್ಪುತ್ರಮಂಗಿರಃ ।**

(ಋ. ಸಂ ೫-೧೧-೬)

ಇತ್ಯಾದಿ ಅನೇಕ ಋಕ್ಕುಗಳಲ್ಲಿ ಅಗ್ನಿಯನ್ನು **ಅಂಗಿರಃ** ಎಂಬ ಶಬ್ದದಿಂದ ಸಂಬೋಧಿಸಲಾಗಿದೆ ಅಗ್ನಿಗೆ ಈ ಹೆಸರು ಬರಲು ಕಾರಣವೇನು ? ಅಗ್ನಿಗೂ ಅಂಗಿರಾಋಷಿಗೂ ಇರುವ ಸಂಬಂಧವೇನು ? ಇವೇ ಮೊದಲಾದ ವಿಷಯಗಳನ್ನು ಋ. ಸಂ. ಭಾಗ ೧ರಲ್ಲಿ 640-641ನೇ ಪೇಜುಗಳಲ್ಲಿ ವಿಸ್ತಾರವಾಗಿ ವಿವರಿಸಲಾಗಿರುವುದು.

**ಸುಹವ್ಯಂ, ಸುದೇವಂ**--ಈ ಶಬ್ದಗಳು ತಂ ಎಂಬ ಯಜಮಾನನ್ನು ಸೂಚಿಸುವ ಶಬ್ದಕ್ಕೆ ವಿಶೇಷಣವಾಗಿ ರುವವು. ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಉತ್ತಮವಾದ ಹವಿಸ್ಸನ್ನು ಸಿದ್ಧಪಡಿಸಿಟ್ಟುಕೊಂಡಿರುವ, ಒಳ್ಳೆಯ ದೇವತೆಯನ್ನು ಆರಾಧಿಸಬೇಕೆಂದಿರುವ ಎಂದು ಈ ಶಬ್ದಗಳ ಅರ್ಥವು

**ಸಹಸೋ ಯಹೋ** – ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ಸಹಸ್ ಶಬ್ದವು ಪಠಿತವಾಗಿರುವುದರಿಂದ **ಸಹಃ** ಎಂದರೆ ಬಲವು ಎಂದರ್ಥವು (ನಿ ೨-೯) **ತುಕ್ ತೋಕಂ** ಮೊದಲಾದ ಹದಿನೈದು ಅಪತ್ಯನಾಮಗಳಲ್ಲಿ **ಯಹುಃ** ಎಂಬ ಶಬ್ದವು ಪಠಿತವಾಗಿರುವುದರಿಂದ **ಯಹು** ಶಬ್ದಕ್ಕೆ ಪುತ್ರನೆಂದು ಅರ್ಥವು. (ನಿ ೨-೨) **ಸಹಸೋ ಯಹೋ** ಎಂದರೆ ಬಲದ ಪುತ್ರನೇ ಎಂದರೆ ಬಲಪ್ರಯೋಗದಿಂದ (ಅರಣಿಯಲ್ಲಿ ಬಲಪ್ರಯೋಗಮಾಡಿ ಕಡೆಯುವುದರಿಂದ ಉತ್ಪನ್ನನಾದ) ಪುತ್ರನೇ ಎಂದು ಅಗ್ನಿಯನ್ನು ಸಂಬೋಧನೆಮಾಡಲಾಗಿರುವುದು. ಕೆಲವುಕಡೆ ಇಂದ್ರನನ್ನು ಈ ಶಬ್ದಗಳಿಂದ ಸ್ತುತಿಸಲಾಗಿರುವುದು **ಸಹಸೋ ಯಹುಃ** ಎಂಬ ಶಬ್ದಗಳಲ್ಲದೆ ಇದೇ ಅರ್ಥವನ್ನೇ ಹೇಳುವ **ಸಹಸಃ ಸೂನುಃ, ಸಹಸಸ್ಪುತ್ರಃ** ಎಂಬ ಶಬ್ದಗಳ ಪ್ರಯೋಗವೂ ಅನೇಕ ಋಕ್ಕುಗಳಲ್ಲಿರುವುದು. ಉದಾಹರಣೆಗಾಗಿ ಕೆಲವು ಋಕ್ಕುಗಳನ್ನು ಇಲ್ಲಿ ಕೊಡುತ್ತೇವೆ—

**ಅಗ್ನಿಂ ಹೋತಾರಂ ಮನ್ಯೇ ದಾಸ್ವಂತಂ ವಸುಂ ಸೂನುಂ ಸಹಸೋ ಜಾತವೇದಸಂ ವಿಪ್ರಂ ನ ಜಾತವೇದಸಂ ।**

(ಋ ಸಂ ೧-೧-೭-೧)

**ದ್ಯುಮ್ನಃ ಸರ್ಪಿರಾಸುತಿಃ ಪ್ರತ್ನೋ ಹೋತಾ ವರೇಣ್ಯಃ ।**
**ಸಹಸಸ್ಪುತ್ರೋ ಅದ್ಭುತಃ ।**

(ಋ ಸಂ ೩-೭-೬)

**ಅಗ್ನಿಂ ಸೂನುಂ ಸನಶ್ರುತಂ ಸಹಸೋ ಜಾತವೇದಸಂ ।**

(ಋ. ಸಂ ೩-೧೧-೪)

**ವಿದ್ಯುದ್ರಥಃ ಸಹಸಸ್ಪುತ್ರೋ ಅಗ್ನಿಃ ಶೋಚಿಷ್ಕೇಶಃ ಪೃಥಿವ್ಯಾಂ ಪಾಜೋ ಅಶ್ರೇತ್ ।**

(ಋ ಸಂ ೩-೧೪-೧)

**ಅಗ್ನೇ ದ್ಯುಮ್ನೇನ ಜಾಗೃವೇ ಸಹಸಃ ಸೂನವಾಹುತ ।**

(ಋ ಸಂ ೩-೨೪-೩).

**ಅಸ್ಮಾಕಮಗ್ನೇ ಅಧ್ವರಂ ಜುಷಸ್ವ ಸಹಸಃ ಸೂನೋ ತ್ರಿಷಧಸ್ಥ ಹವ್ಯಂ ।**

(ಋ ಸಂ ೫-೪-೮)

**ಹುವೇ ವಃ ಸೂನುಂ ಸಹಸೋ ಯುವಾನಮದ್ರೋಘವಾಚಂ ಮತಿಭಿರ್ಯವಿಷ್ಠಂ।**

(ಋ ಸಂ. ೬-೫-೧)

ಇತ್ಯಾದಿ ಅನೇಕ ಸೂಕ್ತಗಳಲ್ಲಿ **ಸಹಸಃ ಸೂನು, ಸಹಸಸ್ಪುತ್ರ** ಎಂಬ ಶಬ್ದಗಳು ಅಗ್ನಿಯ ಪರವಾಗಿ ಪ್ರಯೋಗಿಸಲ್ಪಟ್ಟಿವೆ

**ಜನಾ ಆಹುಃ ಸುಬರ್ಹಿಷಂ**—ಇಲ್ಲಿ **ಬರ್ಹಿಃ** ಎಂದರೆ ಯಜ್ಞವೆಂದು ಭಾಷ್ಯಕಾರರು ಅರ್ಥಮಾಡಿರುವರು. **ಜನಾ ಆಹುಃ ಸುಬರ್ಹಿಷಂ** ಎಂಬ ವಾಕ್ಯಕ್ಕೆ ಯಜಮಾನನು ಶ್ರೇಷ್ಠನಾದ ಯಜ್ಞಕರ್ತನೆಂದು ಜನರು ಹೇಳುವರು. ಎಂದರೆ ಈ ವಿಷಯವು ಪ್ರಸಿದ್ಧವಾಗಿರುವುದು ಎಂದಭಿಪ್ರಾಯವು

॥ ವ್ಯಾಕರಣಪ್ರಕ್ರಿಯಾ ॥

**ಸುಹವ್ಯಂ—ಶೋಭನಂ ಹವ್ಯಂ ಯಸ್ಯ ಸುಹವ್ಯಃ**—ಹೀಗೆಯೇ ಸುದೇವಮ್, ಸುಬರ್ಹಿಷಮ್, ಎಂಬಲ್ಲಿಯೂ ಬಹುವ್ರೀಹಿ ಸಮಾಸ. ಈ ಮೂರು ಸ್ಥಳಗಳಲ್ಲಿಯೂ **ನಞ್ ಸುಭ್ಯಾಮ್** (ಪಾ. ಸೂ ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ

**ಅಂಗಿರಃ**—ಸಂಬುದ್ಧಿ ಏಕವಚನಾಂತರೂಪ. **ಆಮಂತ್ರಿತಸ್ಯ ಚ** (ಪಾ ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಸಹಸೋ ಯಹೋ**—ಯಹೋ ಎಂಬುದು ಆಮಂತ್ರಿತ. ಇದಕ್ಕೆ ಪೂರ್ವದಲ್ಲಿ **ಸಹಸಃ** ಎಂದು ಷಷ್ಠ್ಯಂತವಿರುವುದರಿಂದ **ಸುಬಾಮಂತ್ರಿತೇ ಪರಾಂಗವತ್ ಸ್ವರೇ** (ಪಾ. ಸೂ. ೨-೧-೨) ಎಂಬುದರಿಂದ ಪರಾಂಗವದ್ಭಾವವಿರುವುದರಿಂದ ಸಂಪೂರ್ಣ ಸಮುದಾಯಕ್ಕೆ **ಆಮಂತ್ರಿತಸ್ಯ ಚ** ಎಂಬುದರಿಂದ ನಿಘಾತಸ್ವರ ಬರುತ್ತದೆ

**ಆಹುಃ—ಬ್ರೂಞ್ ವ್ಯಕ್ತಾಯಾಂ ವಾಚಿ.** ಧಾತು ಇದಕ್ಕೆ ಲಟ್ ಪ್ರಥಮಪುರುಷ ಬಹುವಚನ ಪರವಾದಾಗ **ಬ್ರುವಃ ಪಂಚಾನಾಮಾದಿತ ಆಹೋ ಬ್ರುವಃ** (ಪಾ. ಸೂ. ೩-೪-೮೪) ಎಂಬುದರಿಂದ ಝಿಗೆ ಉಸಾದೇಶ ಧಾತುವಿಗೆ ಆಹಾದೇಶ. **ಉಸ್ಯಪದಾಂತಾತ್** ಎಂಬುದರಿಂದ ಪರರೂಪ. ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ. ॥ ೫ ॥



॥ ಸಂಹಿತಾಪಾಠಃ ॥

ಆ ಚ ವಹಾಸಿ ತಾँ ಇಹ ದೇವಾँ ಉಪ ಪ್ರಶಸ್ತಯೇ ।
ಹವ್ಯಾ ಸುಶ್ಚಂದ್ರ ವೀತಯೇ ॥ ೬ ॥

॥ ಪದಪಾಠಃ ॥

ಆ । ಚ । ವಹಾಸಿ । ತಾನ್ । ಇಹ । ದೇವಾನ್ । ಉಪ । ಪ್ರಽಶಸ್ತಯೇ ।
ಹವ್ಯಾ । ಸುಽಚಂದ್ರ । ವೀತಯೇ ॥ ೬ ॥

॥ ಸಾಯಣಭಾಷ್ಯಂ ॥

**ಹೇ ಸುಶ್ಚಂದ್ರ ಶೋಭನಾಹ್ಲಾದನಾಗ್ನೇ ತಾನ್ದೇವಾನಿಹಾಸ್ಮಿನ್ಕರ್ಮಣ್ಯುಪಾಸ್ಮತ್ಸಮೀಪಂ ಪ್ರಶಸ್ತಯೇ ಸ್ತುತಯ ಆ ವಹಾಸಿ ಚ । ಆವಹ ಪ್ರಾಪಯ ಚ । ಆಗತೇಭ್ಯಸ್ತೇಭ್ಯೋ ಹವ್ಯಾ ಹವ್ಯಾನಿ ಚರುಪುರೋಡಾಶಾದೀನಿ ಹವೀಂಷಿ ವೀತಯೇ ಭಕ್ಷಣಾಯ ಪ್ರಾಪಯೇತ್ಯರ್ಥಃ ॥ ವಹಾಸಿ ವಹ ಪ್ರಾಪಣೇ । ಲೇಟ್ಯಾಡಾಗಮಃ । ಪ್ರಶಸ್ತಯೇ । ಶನ್ಸು ಸ್ತುತೌ । ಭಾವೇ ಕ್ತಿನ್ । ತಿತುತ್ರೇತೀಟ್ಪ್ರತಿಷೇಧಃ । ಅನಿದಿತಾಮಿತಿ ನಲೋಪಃ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ಸುಶ್ಚಂದ್ರ । ಹ್ರಸ್ವಾಚ್ಚಂದ್ರೋತ್ತರಪದೇ ಮಂತ್ರ ಇತಿ ಸುಟ್ ॥**

॥ ಪ್ರತಿಪದಾರ್ಥ ॥

**ಸುಶ್ಚಂದ್ರ**—ಆಹ್ಲಾದಕನಾದ ಎಲೈ ಅಗ್ನಿಯೇ । **ತಾನ್ ದೇವಾನ್**— (ಆಹೂತರಾದ) ಆ ದೇವತೆಗಳನ್ನು । **ಇಹ**- ಈ ಕರ್ಮದಲ್ಲಿ । **ಪ್ರಶಸ್ತಯೇ**—ಸ್ತುತಿಸುವುದಕ್ಕೂ । **ಹವ್ಯಾ**—ಹುತವಾದ ಚರ್ವಾದಿಗಳನ್ನು । **ವೀತಯೇ ಚ**—ಭಕ್ಷಿಸುವುದಕ್ಕೂ । **ಉಪ**—(ನಮ್ಮ) ಸಮೀಪಕ್ಕೆ । **ಆ ವಹಾಸಿ**—ಕರೆದುಕೊಂಡು ಬರುತ್ತೀಯೇ.

॥ ಭಾವಾರ್ಥ ॥

ಆಹ್ಲಾದಕರನಾದ ಎಲೈ ಅಗ್ನಿಯೇ, ನಮ್ಮ ಸ್ತುತಿ ಮತ್ತು ನಾವು ಅರ್ಪಿಸುವ ಹವಿರಾದಿಗಳು, ಇವುಗಳನ್ನು ಸ್ವೀಕರಿಸಲು, ಆ ದೇವತೆಗಳನ್ನು ನಮ್ಮ ಸಮೀಪಕ್ಕೆ ಕರೆದುಕೊಂಡು ಬಾ,

## English Translation.

Bring hither, radiant Agni, the Gods to (receive) our praise and our oblations for their food.

॥ ವಿಶೇಷವಿಷಯಗಳು ॥

**ಪ್ರಶಸ್ತಯೇ—ಅಸ್ಮಾಭಿಃ ಕೃತಂ ಸ್ತೋತ್ರಂ ಶ್ರೋತುಂ ।** ನಾವು ಮಾಡುವ ಸ್ತೋತ್ರಗಳನ್ನು ಕೇಳುವುದಕ್ಕಾಗಿ,

**ಸುಶ್ಚಂದ್ರ—ಶೋಭನಾಹ್ಲಾದನಾಗ್ನೇ ।** ಅತ್ಯಂತ ಆಹ್ಲಾದಕನಾದ ಅಗ್ನಿಯೇ. ನಿರುಕ್ತಕಾರರು—**ಚಂದಶ್ಚಂದತೇಃ ಕಾಂತಿಕರ್ಮಣಃ**—ಎಂದರೆ ಕಾಂತಿಕರ್ಮವನ್ನು ಸೂಚಿಸುವ ಚಂದ್ರತಿ ಧಾತುವಿನಿಂದ ಚಂದ್ರ ಶಬ್ದವು ನಿಷ್ಪನ್ನವಾಗಿದೆಯೆಂದು ಹೇಳಿ (ನಿ. ೧೧-೫) **ಚಂದ್ರ** ಎಂದರೆ ಕಾಂತಿಯುಕ್ತನಾದವನು, ಆಹ್ಲಾದಕರನು ಎಂದು ಅರ್ಥವಿವರಣೆ ಮಾಡಿರುವರು.

**ವೀತಯೇ—ಭಕ್ಷಣಾರ್ಥಂ ।** ಹವಿಸ್ಸನ್ನು ಭಕ್ಷಿಸುವುದಕ್ಕಾಗಿ,

**ಚ**—**ಚ** ಶಬ್ದವು ಸಮುಚ್ಚಯಾರ್ಥದಲ್ಲಿ ಪ್ರಯುಕ್ತವಾಗಿರುವುದು **ಪ್ರಶಸ್ತಯೇ** ಮತ್ತು **ವೀತಯೇ** ಎಂಬ ಶಬ್ದಗಳನ್ನು ಇದು ಸೇರಿಸುವುದು

**ಉಪ**—ಸಮೀಪ ನಾವು ಯಜ್ಞಮಾಡುತ್ತಿರುವ ಪ್ರದೇಶದ ಸಮೀಪಕ್ಕೆ, ನಮ್ಮ ಸಮೀಪಕ್ಕೆ, ಎಂದಭಿಪ್ರಾಯವು

॥ ವ್ಯಾಕರಣಪ್ರಕ್ರಿಯಾ ॥

**ವಹಾಸಿ**— ವಹ ಪ್ರಾಪಣೇ ಧಾತು. ಲೇಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ **ಲೇಟೋಡಾಟೌ** (ಪಾ ಸೂ ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. ಶಪ್ ವಿಕರಣ. ವಹಾಸಿ ಎಂದು ರೂಪವಾಗುತ್ತದೆ. **ಚ ವಾಯೋಗೇ ಪ್ರಥಮಾ** (ಪಾ. ಸೂ ೮-೧-೫೯) ಎಂಬುದರಿಂದ ನಿಘಾತ ಪ್ರತಿಷೇಧ ಬರುತ್ತದೆ ವಿಕರಣ, ಆಗಮ, ಪ್ರತ್ಯಯಗಳು ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ

**ಪ್ರಶಸ್ತಯೇ**—ಶಂಸು ಸ್ತುತೌ ಧಾತು. ಇದಕ್ಕೆ **ಸ್ತ್ರಿಯಾಂಕ್ತಿನ್** (ಪಾ. ಸೂ ೩-೩-೯೪) ಎಂಬುದರಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ **ತಿತುತ್ರತಥಸಿ**—(ಪಾ. ಸೂ ೭-೨-೯) ಎಂಬುದರಿಂದ ಇಡಾಗಮ ನಿಷೇಧ ಬರುತ್ತದೆ. ಪ್ರತ್ಯಯ ಕಿತ್ತಾದುದರಿಂದ **ಅನಿದಿತಾಂಹಲ ಉಪಧಾಯಾಃ**—ಎಂಬುದರಿಂದ ಧಾತುವಿನ ಉಪಧಾ ನಕಾರಕ್ಕೆ ಲೋಪ ಶಸ್ತಿ ಎಂದು ರೂಪವಾಗುತ್ತದೆ ಪ್ರ ಎಂಬುದರೊಡನೆ ಸಮಾಸವಾದಾಗ **ತಾದೌ ಚ ನಿತಿ** (ಪಾ ಸೂ. ೬-೨-೫೦) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಹವ್ಯಾ**—ಹೂಯತೇ ಇತಿ ಹವ್ಯಮ್ ನಪುಂಸಕದಲ್ಲಿ ಶಿ ಆದೇಶ ಬಂದು ರೂಪವಾದಾಗ **ಶೇಶ್ಛಂದಸಿ ಬಹುಲಂ** ಎಂಬುದರಿಂದ ಶಿಗೆ ಲೋಪಬರುತ್ತದೆ.

**ಸುಶ್ಚಂದ್ರ**—ಸುಷ್ಠು ಚಂದಯತಿ ಇತಿ ಸುಶ್ಚಂದ್ರಃ **ಹ್ರಸ್ವಾಚ್ಚಂದ್ರೋತ್ತರಪದೇ** (ಪಾ ಸೂ ೬-೧-೧೫೧) ಎಂಬುದರಿಂದ ಚಂದ್ರಶಬ್ದದ ಪೂರ್ವದಲ್ಲಿರುವ ಸು ಎಂಬಲ್ಲಿರುವ ಹ್ರಸ್ವಕ್ಕೆ ಸುಡಾಗವು ಸಂಬುದ್ಧಿಯಲ್ಲಿ ಆಮಂತ್ರಿತ ಸಂಜ್ಞೆ ಇರುವುದರಿಂದ **ಆಮಂತ್ರಿತಸ್ಯ ಚ** (ಪಾ. ಸೂ ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ ॥ ೬ ॥



॥ ಸಂಹಿತಾಪಾಠಃ ॥

# ನ ಯೋರುಪಬ್ದಿರಶ್ವ್ಯಃ ಶೃಣ್ವೇ ರಥಸ್ಯ ಕಚ್ಚನ ।
# ಯದಗ್ನೇ ಯಾಸಿ ದೂತ್ಯಂ ॥ ೭ ॥

॥ ಪದಪಾಠಃ ॥

**ನ । ಯೋಃ । ಉಪಬ್ದಿಃ । ಅಶ್ವ್ಯಃ । ಶೃಣ್ವೇ । ರಥಸ್ಯ । ಕತ್ । ಚನ ।**

**ಯತ್ । ಅಗ್ನೇ । ಯಾಸಿ । ದೂತ್ಯಂ ॥ ೭ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ಯದ್ಯದಾ ದೂತ್ಯಂ ದೇವಾನಾಂ ದೂತತ್ವಂ ಯಾಸಿ ಪ್ರಾಪ್ನೋಷಿ ಕಚ್ಚನ ಕದಾಚನ ತದಾನೀಂ ಸರ್ವದಾಪಿ ಯೋರ್ಗಚ್ಛತಸ್ತವ ರಥಸ್ಯಾಶ್ವ್ಯೈರಶ್ವೈರುತ್ಪಾದಿತ ಉಪಬ್ದಿಃ ಶ್ರವಣಾರ್ಹಃ ಶಬ್ದೋ ನ ಶೃಣ್ವೇ। ನ ಶ್ರೂಯತೇ। ರಥಸ್ಯ ಶೀಘ್ರಗಮನೇನಾಸ್ಮಾಭಿಃ ಶಬ್ದೋ ನೋಪಲಭ್ಯತ ಇತ್ಯರ್ಥಃ ॥ ಯೋಃ । ಯಾ ಪ್ರಾಪಣ ಇತ್ಯಸ್ಮಾತ್ ಯೋ ದ್ವೇ ಚ । ಉ. ೧-೨೨ । ಇತ್ಯೌಣಾದಿಕಃ ಕುಪ್ರತ್ಯಯಃ । ಬಹುಲವಚನಾದ್ದ್ವಿರ್ಭಾವಾಭಾವಃ ಉಪಬ್ದಿರಿತ್ಯೇತತ್ ಶ್ರೋತುಮರ್ಹಸ್ಯ ಶಬ್ದಸ್ಯಾಖ್ಯಾ । ತಥಾ ಚ ತೈತ್ತಿರೀಯಾಣಾಂ ಪ್ರಾತಿಶಾಖ್ಯಂ ಸಶಬ್ದಮುಪಬ್ದಿಮತ್ । ತೈ. ಪ್ರಾ ೨೩-೯ । ಇತಿ । ಶೃಣ್ವೇ । ಶ್ರು ಶ್ರವಣೇ । ಕರ್ಮಣಿ ಲಟಿ ಶ್ರುವಃ ಶೃ ಚೇತಿ ವ್ಯತ್ಯಯೇನ ಶ್ನುಃ ಶೃಭಾವಶ್ಚ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಹುಶ್ನುವೋಃ ಸಾರ್ವಧಾತುಕ ಇತಿ ಯಣಾದೇಶಃ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ। **ಯತ್**—ಯಾವಾಗ। **ದೂತ್ಯಂ**—(ದೇವತೆಗಳ) ದೂತತ್ವವನ್ನು। **ಯಾಸಿ**—ಹೊಂದುತ್ತೀಯೋ। **ಕಚ್ಚನ**—ಆಗ। **ಯೋಃ**—ಹೋಗುತ್ತಿರುವ (ನಿನ್ನ)। **ರಥಸ್ಯ**—ರಥದ। **ಅಶ್ವ್ಯಃ**—ಅಶ್ವಸಂಬಂಧವಾದ (ಅವುಗಳಿಂದ ಉತ್ಪನ್ನವಾದ)। **ಉಪಬ್ದಿಃ**—ಶ್ರವಣಾರ್ಹವಾದ ಶಬ್ದವು। **ನ ಶೃಣ್ವೇ**—ಕೇಳಿಸುವುದಿಲ್ಲ

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ದೇವತೆಗಳ ದೂತತ್ವವನ್ನು ವಹಿಸಿ ಹೋಗುವಾಗ, (ವೇಗವಾಗಿ) ಹೋಗುತ್ತಿರುವ (ನಿನ್ನ) ರಥದ ಅಶ್ವಗಳ ಶಬ್ದವೂ ಕೇಳಿಸುವುದಿಲ್ಲ

## English Translation

Whenever you go, Agni, on a mission of the gods, the neighing of the horses of your (swift), moving chariot, however audible, is not heard,

॥ ವಿಶೇಷವಿಷಯಗಳು ॥

**ಯೋಃ— ಯಾ ಪ್ರಾಪಣೇ।** ಷಷ್ಠೀ ಏಕವಚನ ಹೋಗುತ್ತಿರುವ ನಿನ್ನ ಎಂದರ್ಥವು

**ಉಪಬ್ದಿಃ—ಶ್ರವಣಾರ್ಹಃ ಶಬ್ದಃ।** ಕಿವಿಗಳಿಂದ ಕೇಳಲು ಸಾಧ್ಯವಾದ ಶಬ್ದವು **ಶ್ಲೋಕಃ ಧಾರಾ** ಮೊದಲಾದ ಐವತ್ತೇಳು ವಾಙ್ನಾಮಗಳ ಮಧ್ಯದಲ್ಲಿ **ಉಪಬ್ದಿಃ** ಎಂಬ ಶಬ್ದವು ಪಠಿತವಾಗಿರುವುದರಿಂದ ಉಪಬ್ದಿ ಯೆಂದರೆ ಶಬ್ದವು ಎಂದರ್ಥವು (ನಿ ೨-೨೩).

**ಅಶ್ವ್ಯಃ—ಅಶ್ವೈರುತ್ಪಾದಿತಃ।** ರಥದ ಅಶ್ವಗಳಿಂದ ಮಾಡಲ್ಪಡುವ ಹೇಷಾರವಾದಿ ಶಬ್ದಗಳು ಅಥವಾ ಇಲ್ಲಿ **ರಥಸ್ಯ** ಎಂಬ ಶಬ್ದವಿರುವುದರಿಂದ ರಥವು ಚಲಿಸುತ್ತಿರುವಾಗ ಘರ್ಷಣಾದಿಗಳಿಂದ ಆಗುವ ಶಬ್ದವು ಈ ಶಬ್ದವು **ಉಪಬ್ದಿ** ಎಂಬ ಶಬ್ದಕ್ಕೆ ವಿಶೇಷಣವಾಗಿರುವುದು.

**ಕಚ್ಚನ—ಕದಾಚನ, ತದಾನೀಂ ಸರ್ವದಾಪಿ।** ಒಂದೊಂದು ಕಾಲದಲ್ಲಿ ಎಂದರೆ ಯಾವ ಯಾವ ಕಾಲಗಳಲ್ಲಿ ನೀನು ದೂತತ್ವವನ್ನು ವಹಿಸಿ ದೇವತೆಗಳ ಬಳಿಗೆ ಹೋಗುತ್ತೀಯೋ ಅಂತಹ ಕಾಲಗಳಲ್ಲೆಲ್ಲಾ ಎಂದಭಿಪ್ರಾಯವು

**ನ ಶೃಣ್ವೇ—**ಕೇಳಿಸುವುದಿಲ್ಲ ಎಂದರೆ ರಥವು ಅತ್ಯಂತ ವೇಗವಾಗಿ ಚಲಿಸುವುದರಿಂದ, ಅಶ್ವಗಳ ಹೇಷಾರವವಾಗಲಿ, ರಥಚಕ್ರಗಳ ಘರ್ಷಣಶಬ್ದವಾಗಲಿ ಕೇಳಲವಕಾಶವಿರುವುದಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

**ಯೋಃ**—ಯಾ ಪ್ರಾಪಣೇ ಧಾತು ಇದಕ್ಕೆ **ಯೋರ್ದ್ವೇ ಚ** (ಉ ಸೂ ೧-೨೧) ಎಂಬುದರಿಂದ ಔಣಾದಿಕವಾದ ಕು ಪ್ರತ್ಯಯ. ದ್ವೇ ಚ ಎಂದು ದ್ವಿತ್ವ ವಿಧಾನಮಾಡಿದರೂ ಬಹುಲವಚನದಿಂದ ಇಲ್ಲಿ ದ್ವಿತ್ವ ಬರುವುದಿಲ್ಲ. ಪ್ರತ್ಯಯ ಕಿತ್ತಾದುದರಿಂದ **ಆತೋಲೋಪ ಇಟಿ ಚ** (ಪಾ ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ ಯು ಶಬ್ದವಾಗುತ್ತದೆ. ಪ್ರತ್ಯಯಸ್ವರ ಬರುತ್ತದೆ. ಷಷ್ಠೀಏಕವಚನಾಂತರೂಪ.

**ಉಪಬ್ದಿಃ**— ಉಪಬ್ದಿ ಎಂಬುದು ಕೇಳುವುದಕ್ಕೆ ಯೋಗ್ಯವಾಗಿರುವ ಶಬ್ದದ ಹೆಸರು. ಹೀಗೆಂದೇ ತೈತ್ತಿರೀಯರ ಪ್ರಾತಿಶಾಖ್ಯೆಯಲ್ಲಿ ವಿವೃತವಾಗಿದೆ. **ಸಶಬ್ದಮುಪಬ್ದಿಮತ್** (ತೈ. ಪ್ರಾ ೨೩-೯) ಇತಿ ಅವ್ಯುತ್ಪನ್ನವಾದ ಪ್ರಾತಿಪದಕವೆಂದಾಗುತ್ತದೆ

**ಶೃಣ್ವೇ**—ಶ್ರು ಶ್ರವಣೇ ಧಾತು ಕರ್ಮಣಿಯಲ್ಲಿ ಲಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ ಯದ್ಯಪಿ **ಸಾರ್ವಧಾತುಕೇ ಯಕ್** ಎಂಬುದರಿಂದ ಯಕ್ ಪ್ರಾಪ್ತವಾಗುತ್ತದೆ ಆದರೆ **ವ್ಯತ್ಯಯೋ ಬಹುಲಂ** ಎಂಬುದರಿಂದ **ಶ್ರುವಃ ಶೃ ಚ** (ಪಾ ಸೂ ೩-೧-೭೪) ಎಂಬುದರಿಂದ ಶ್ನು ವಿಕರಣವೂ ಧಾತುವಿಗೆ ಶೃ ಭಾವವೂ ಬರುತ್ತವೆ. ಶೃಣುತೇ ಎಂದಿರುವಾಗ **ಲೋಪಸ್ತ ಆತ್ಮನೇಪದೇಷು** (ಪಾ ಸೂ. ೭-೧-೪೧) ಎಂಬುದರಿಂದ ಪ್ರತ್ಯಯದ ತಕಾರಕ್ಕೆ ಲೋಪ ಆಗ **ಹುಶ್ನುವೋಃ ಸಾರ್ವಧಾತುಕೇ** (ಪಾ ಸೂ. ೬-೪-೮೭) ಎಂಬುದರಿಂದ ಉವಙಿಗೆ ಅಪವಾದವಾಗಿ ಯಣಾದೇಶ ಪಾದಾದಿಯಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಯಾಸಿ**—ಯಾ ಪ್ರಾಪಣೇ ಧಾತು ಅದಾದಿ. ಲಟ್ ಮಧ್ಯಮಪುರುಷ ಏಕವಚನರೂಪ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಅನುದಾತ್ತ ಧಾತುಸ್ವರ ಉಳಿಯುತ್ತದೆ. ॥ ೭ ॥



॥ ಸಂಹಿತಾಪಾಠಃ ॥

ತ್ವೋತೋ ವಾಜ್ಯಹ್ರಯೋಽಭಿ ಪೂರ್ವಸ್ಮಾದಪರಃ ।

ಪ್ರ ದಾಶ್ವಾ ಅಗ್ನೇ ಅಸ್ಥಾತ್ ॥ ೮ ॥

॥ ಪದಪಾಠಃ ॥

**ತ್ವಾ ऽ ಊತಃ । ವಾಜೀ । ಅಹ್ರಯಃ । ಅಭಿ । ಪೂರ್ವಸ್ಮಾತ್ । ಅಪರಃ ।**
**ಪ್ರ । ದಾಶ್ವಾನ್ । ಅಗ್ನೇ । ಅಸ್ಥಾತ್ ॥ ೮ ॥**

॥ ಸಾಯಣಭಾಷ್ಯಂ ॥

**ಯಃ ಪುರುಷಃ ಪೂರ್ವಸ್ಮಾತ್ ಸ್ವಸ್ಮಾದಧಿಕಾರಾದಪರೋ ನಿಕೃಷ್ಟೋ ಭವತಿ ಹೇ ಅಗ್ನೇ ಸ ಇದಾನೀಂ ದಾಶ್ವಾನ್ ತುಭ್ಯಂ ಹವೀಂಷಿ ದಾತಾ ಸನ್ ತ್ವೋತಸ್ತ್ವಯೋತೋ ರಕ್ಷಿತೋ ವಾಜ್ಯನ್ನವಾನ್ ಅಹ್ರಯೋ ಲಜ್ಜಾರಹಿತಃ ಏವಂಭೂತಃ ಸನ್ ಅಭಿ ಪ್ರಾಸ್ಥಾತ್ । ಐಶ್ವರ್ಯಮಭಿಪ್ರಾಪ್ಯ ಪ್ರತಿತಿಷ್ಠತಿ । ಸರ್ವೋತ್ಕೃಷ್ಟೋ ಭವತೀತ್ಯರ್ಥಃ ॥ ಅಹ್ರಯಃ । ಹ್ರೀ ಲಜ್ಜಾಯಾಂ । ಜಿಹ್ರೇತೀತಿ ಹ್ರಯಃ । ನ ಹ್ರಯೋಽಹ್ರಯಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ದಾಶ್ವಾನ್ । ದಾಶೃ ದಾನೇ । ದಾಶ್ವಾನ್ ಸಾಹ್ವಾನಿತಿ ಕ್ವಸುಪ್ರತ್ಯಯಾಂತೋ ನಿಪಾತಿತಃ ॥**

॥ ಪ್ರತಿಪದಾರ್ಥ ॥

**ಹೇ ಅಗ್ನೇ**—ಎಲೈ ಅಗ್ನಿಯೇ । **ಪೂರ್ವಸ್ಮಾತ್**—ತನ್ನ ಅಧಿಕಾರದಿಂದ (ಯಾವನು) । **ಅಪರಃ**—ನಿಕೃಷ್ಟನಾಗಿದ್ದನೋ (ಅವನು ಈಗ) । **ದಾಶ್ವಾನ್**—(ನಿನಗೆ ಹವಿರಾದಿಗಳನ್ನು) ಕೊಟ್ಟವನಾಗಿ । **ತ್ವೋತಃ**—(ನಿನ್ನಿಂದ) ರಕ್ಷಿತನಾಗಿಯೂ । **ವಾಜೀ**—ಅನ್ನವುಳ್ಳವನಾಗಿಯೂ । **ಅಹ್ರಯಃ**—ಲಜ್ಜಾರಹಿತನಾಗಿಯೂ । **ಅಭಿ ಪ್ರ ಅಸ್ಥಾತ್**—(ಐಶ್ವರ್ಯವನ್ನು) ಹೊಂದಿ ಪ್ರತಿಷ್ಠಿತನಾಗಿರುತ್ತಾನೆ

॥ ಭಾವಾರ್ಥ ॥

ಎಲೈ ಅಗ್ನಿಯೇ, ತನ್ನ ಅಧಿಕಾರದಿಂದ (ಚ್ಯುತನಾದ) ನಿಕೃಷ್ಟನಾದ ಮನುಷ್ಯನು, ಈಗ ನಿನ್ನನ್ನು ಹವಿರಾದಿಗಳಿಂದ ಪೂಜಿಸಿದ ಬಳಿಕ ನಿನ್ನಿಂದ ರಕ್ಷಿತನಾಗಿಯೂ, ಲಜ್ಜಾದಿರಹಿತನಾಗಿಯೂ, ಅನ್ನಯುಕ್ತನಾಗಿಯೂ, ಪ್ರತಿಷ್ಠಿತನಾಗಿರುತ್ತಾನೆ

## English Translation.

He who was formerly subject to a superior, having been protected, Agni, by you now stands in your presence as an offerer (of oblations) without bashfulness and supplied with food.

॥ ವಿಶೇಷವಿಷಯಗಳು ॥

**ತ್ವೋತಃ- ತ್ವಯಾ ಊತೋ ರಕ್ಷಿತಃ ।** ನಿನ್ನಿಂದ ರಕ್ಷಿಸಲ್ಪಟ್ಟವನಾಗಿ, ನಿನ್ನ ರಕ್ಷಣೆಯನ್ನು ಪಡೆದ ನಂತರ.

**ಅಪರಃ**—ಪರಃ ಎಂದರೆ ಶ್ರೇಷ್ಠ, ಉತ್ತಮ, ಅಪರ ಎಂದರೆ ಶ್ರೇಷ್ಠನಲ್ಲದವನು, ಸ್ವತಂತ್ರನಲ್ಲದವನು, ಇನ್ನೊಬ್ಬರ ಅಧೀನದಲ್ಲಿರುವವನು ಎಂದಭಿಪ್ರಾಯವು

**ವಾಜೀ** -ಅಂಧಃ, ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ವಾಜಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ ೩-೯) ವಾಜವೆಂದರೆ ಅನ್ನವು ವಾಜಃ ಅಸ್ಯಾಸ್ತೀತಿ ವಾಜೀ-ಅನ್ನವುಳ್ಳವನಿಗೆ ವಾಜೀ ಎಂದು ಹೆಸರು ಅಗ್ನಿಯ ಅನುಗ್ರಹದಿಂದ ಅನ್ನವನ್ನು ಪಡೆದಿರುವವನೆಂದಭಿಪ್ರಾಯವು

**ಅಹ್ರಯಃ—ಹ್ರೀ ಲಜ್ಜಾಯಾಂ। ಜಿಹ್ರೇತೀತಿ ಹ್ರಯಃ। ನ ಹ್ರಯೋಽಹ್ರಯಃ।** ನಾಚಿಕೆ ಅಥವಾ ಅಪಮಾನವಾಗುವುದೆಂಬ ಶಂಕೆಯಿಂದ ಭಯಪಡಬೇಕಾಗಿಲ್ಲದವನು ಒಬ್ಬರ ಅಧೀನದಲ್ಲಿರುವ ಪುರುಷನು ಅವನ ಆಜ್ಞೆಗೆ ಒಳಪಟ್ಟು ನಡೆಯಬೇಕಾಗಿರುವುದರಿಂದ ಅನೇಕ ವೇಳೆ ಅಪಮಾನವು ಸಂಭವಿಸುವುದುಂಟು. ಅಗ್ನಿಯ ಅನುಗ್ರಹದಿಂದ ಅನ್ನಾದಿದ್ರವ್ಯಗಳನ್ನು ಪಡೆದು ಸ್ವತಂತ್ರನಾಗಿರುವಾಗ ಯಾವ ವಿಧವಾದ ಲಜ್ಜೆಯೇ ಆಗಲಿ, ಭಯವಾಗಲಿ ಅವನಿಗಿರುವುದಿಲ್ಲ ಎಂದಭಿಪ್ರಾಯವು

**ದಾಶ್ವಾನ್—ಹವೀಂಷಿ ದಾತಾ।** ಅಗ್ನಿಗೆ ಹವಿಸ್ಸನ್ನರ್ಪಿಸುವವನು ಹವಿಸ್ಸನ್ನರ್ಪಿಸುವುದಕ್ಕೆ ಮುಂಚೆ ಆ ಪುರುಷನು ಪರಾಧೀನನಾಗಿದ್ದು ಅನ್ನಾದಿಗಳಿಗೆ ಕೊರತೆಯುಂಟಾಗಿ ಕಷ್ಟಪಡುತ್ತಿದ್ದರೂ ಅಗ್ನಿಗೆ ಹವಿಸ್ಸನ್ನು ಅರ್ಪಿಸಿದನಂತರ ಅಗ್ನಿಯ ಅನುಗ್ರಹದಿಂದ ಆ ಪುರುಷನಿಗೆ ಅನ್ನಾದಿ ದ್ರವ್ಯಗಳು ಲಭಿಸಿ ಯಾವ ಲಜ್ಜಾಭಯಗಳೂ ಇಲ್ಲದೆ ನಿರ್ಭೀತನಾಗಿ ಜನರಲ್ಲಿ ಶ್ರೇಷ್ಠತೆಯನ್ನು ಪಡೆದು ಬಾಳುವನು ಎಂದು ಮುಖ್ಯಾಭಿಪ್ರಾಯವು

॥ ವ್ಯಾಕರಣಪ್ರಕ್ರಿಯಾ ॥

**ವಾಜೀ**— ವಾಜಮಸ್ಯಾಸ್ತೀತಿ ವಾಜೀ **ಅತಇನಿಠನೌ** (ಪಾ ಸೂ ೫-೨-೧೧೫) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ

**ಅಹ್ರಯಃ—ಹ್ರೀ ಲಜ್ಜಾಯಾಂ** ಧಾತು. ಜಿಹ್ರೇತಿ ಇತಿ ಹ್ರಯಃ ಪಚಾದಿಯಲ್ಲಿ ಸೇರಿರುವುದರಿಂದ ಅಚ್ ಪ್ರತ್ಯಯ ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ ಅಯಾದೇಶ ನ ಹ್ರಯಃ, ಅಹ್ರಯಃ ನಞ್ತತ್ಪುರುಷ ಸಮಾಸ **ತತ್ಪುರುಷೇ ತುಲ್ಯಾರ್ಥ**—(ಪಾ ಸೂ ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ

**ದಾಶ್ವಾನ್** -ದಾಶೃ ದಾನೇ ಧಾತು. ಇದಕ್ಕೆ **ದಾಶ್ವಾನ್ಸಾಹ್ವಾನ್**—(ಪಾ ಸೂ ೬-೧-೧೨) ಎಂಬುದರಿಂದ ಕ್ವಸುಪ್ರತ್ಯಯ ಬಂದು ನಿಪಾತಿತವಾಗಿದೆ ದಾಶ್ವಸ್ ಶಬ್ದವಾಗುತ್ತದೆ ಇದಕ್ಕೆ ಸು ಪರವಾದಾಗ **ಅತ್ವಸಂತಸ್ಯ**—ಸೂತ್ರದಿಂದ ಉಪಧಾದೀರ್ಘ ಉಗಿತ್ತಾದುದರಿಂದ ನುಮಾಗಮ **ಹಲ್ಙ್ಯಾಭ್ಯೋ—**ಸೂತ್ರದಿಂದ ಸುಲೋಪ. ಸಂಯೋಗಾಂತಲೋಪದಿಂದ ಸಕಾರಲೋಪ ದಾಶ್ವಾನ್+ಅಗ್ನೇ ಎಂದಿರುವಾಗ ನಕಾರಕ್ಕೆ ಅಟ್ ಪರವಾದುದರಿಂದ **ದೀರ್ಘಾದಟಿ ಸಮಾನಪಾದೇ** (ಪಾ. ಸೂ ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ **ಆತೋಽಟಿ ನಿತ್ಯಮ್** (ಪಾ ಸೂ. ೮-೩-೩) ಎಂಬುದರಿಂದ ಪೂರ್ವದ ಆಕಾರಕ್ಕೆ ನಿತ್ಯವಾಗಿ ಅನುನಾಸಿಕತ್ವ.

**ಅಸ್ಥಾತ್**—ಷ್ಠಾ ಗತಿನಿವೃತ್ತೌ ಧಾತು ಇದಕ್ಕೆ ಛಾಂದಸವಾದ ಲುಙ್‌ನಲ್ಲಿ ಪ್ರಥಮಪುರುಷದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ ಚ್ಲಿಗೆ ಪ್ರಾಪ್ತವಾದ ಸಿಚ್ಚಿಗೆ **ಗಾತಿಸ್ಥಾಘುಪಾ**-(ಪಾ. ಸೂ. ೨-೪-೭೭) ಎಂಬುದರಿಂದ ಲುಕ್. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ- ॥ ೮ ॥



॥ ಸಂಹಿತಾಪಾಠಃ ॥

ಉತ ದ್ಯುಮತ್ಸುವೀರ್ಯಂ ಬೃಹದಗ್ನೇ ವಿವಾಸಸಿ ।
ದೇವೇಭ್ಯೋ ದೇವ ದಾಶುಷೇ ॥ ೯ ॥

॥ ಪದಪಾಠಃ ॥

**ಉತ । ದ್ಯುऽಮತ್ । ಸುऽವೀರ್ಯಂ । ಬೃಹತ್ । ಅಗ್ನೇ । ವಿವಾಸಸಿ ।**
**ದೇವೇಭ್ಯಃ । ದೇವ । ದಾಶುಷೇ ॥ ೯ ॥**

॥ ಸಾಯಣಭಾಷ್ಯಂ ॥

**ಉತಾಪಿ ಚ ಹೇ ದೇವ ದ್ಯೋತಮಾನಾಗ್ನೇ ದೇವೇಭ್ಯೋ ದಾಶುಷೇ ಚರುಪುರೋಡಾಶಾದೀನಿ ಹವೀಂಷಿ ದತ್ತವತೇ ತಸ್ಮೈ ಯಜಮಾನಾಯ ಬೃಹತ್ಪ್ರೌಢಂ ಧನಂ ವಿವಾಸಸಿ । ಗಮಯಿತುಮಿಚ್ಛಸಿ । ಪ್ರಾಪಯಸೀತಿ ಯಾವತ್ । ಕೀದೃಶಂ । ದ್ಯುಮದತಿಶಯೇನ ದೀಪ್ತಂ ಸುವೀರ್ಯಂ ಶೋಭನವೀರ್ಯೋಪೇತಂ ॥ ಸುವೀರ್ಯಂ । ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ । ವಿವಾಸಸಿ । ವಾ ಗತಿಗಂಧನಯೋಃ । ಸನಿ ದ್ವಿರ್ಭಾವೇ ಸನ್ಯತ ಇತೀತ್ವಂ । ದಾಶುಷೇ । ಚತುರ್ಥ್ಯೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ ॥**

॥ ಪ್ರತಿಪದಾರ್ಥ ॥

**ಉತ**—ಮತ್ತು । **ದೇವ**—ದೇದೀಪ್ಯಮಾನನಾದ । **ಅಗ್ನೇ**—ಎಲೈ ಅಗ್ನಿಯೇ । **ದೇವೇಭ್ಯಃ**—ದೇವತೆಗಳಿಗೆ । **ದಾಶುಷೇ**—(ಪುರೋಡಾಶಾದಿಗಳನ್ನು) ಕೊಡುವ (ಯಜಮಾನನಿಗೆ) । **ದ್ಯುಮತ್**—ದೀಪ್ತವಾದ । **ಸುವೀರ್ಯಂ**—ಒಳ್ಳೆಯ ವೀರ್ಯದಾಯಕವಾದ । **ಬೃಹತ್**—ಹೆಚ್ಚಾದ (ಧನವನ್ನು) । **ವಿವಾಸಸಿ**—ಕೊಡಲು ಇಚ್ಛಿಸುತ್ತೀಯೆ.

|| ಭಾವಾರ್ಥ ||

ದೇದೀಪ್ಯಮಾನನಾದ ಎಲೈ ಅಗ್ನಿಯೇ, ದೇವತೆಗಳಿಗೆ ಪುರೋಡಾಶಾದಿಗಳನ್ನು ಕೊಡುವ ಯಜಮಾನನಿಗೆ, ಪ್ರಕಾಶಮಾನವಾದ, ಮತ್ತು ವೀರ್ಯದಾಯಕವಾದ, ಧನವನ್ನು, ಹೆಚ್ಚಾಗಿ ಅನುಗ್ರಹಿಸು

## English Translation

Verily, divine Agni, you are desirous of bestowing upon the offerer (of oblations) to the Gods, ample (wealth) brilliant, and giving vigour.

|| ವಿಶೇಷವಿಷಯಗಳು ||

**ದ್ಯುಮತ್— ಅತಿಶಯೇನ ದೀಪ್ತಂ |** ಅತ್ಯಂತಪ್ರಕಾಶಮಾನವಾದ, ಇಲ್ಲಿ ಪ್ರಕಾಶಮಾನವೆಂದರೆ ಅತ್ಯಂತ ಶ್ರೇಷ್ಠವಾದ, ಉತ್ತಮವಾದ, ಉಪಯೋಗಕರವಾದ ಎಂದು ಮೊದಲಾದ ಅರ್ಥಗಳನ್ನು ಹೇಳಬಹುದು

**ಸುವೀರ್ಯಂ—ಶೋಭನವೀರ್ಯೋಪೇತಂ**—ಉತ್ತಮವಾದ ಸಾಮರ್ಥ್ಯ ಅಥವಾ ಪರಾಕ್ರಮವನ್ನು, ಅಥವಾ ಪರಾಕ್ರಮಿಗಳಾದ ವೀರರಿಂದ ಯುಕ್ತವಾದ ಎಂದರ್ಥವು

**ಬೃಹತ್**—ಈ ಶಬ್ದಕ್ಕೆ ಹೆಚ್ಚಾಗಿ ಅಥವಾ ದೊಡ್ಡದಾದ ಎಂಬರ್ಥವಿದ್ದರೂ ಇಲ್ಲಿ ಭಾಷ್ಯಕಾರರು ಹೆಚ್ಚಾದ ಧನವನ್ನು ಎಂಬ ಅರ್ಥವನ್ನು ಹೇಳಿರುವರು

**ವಿವಾಸಸಿ ವಾ ಗತಿಗಂಧನಯೋಃ | ಪ್ರಾಪಯಸಿ |** ಹೊಂದುವಂತೆ ಮಾಡುತ್ತೀಯೆ ಎಂದರೆ ಕೊಡುತ್ತೀಯೆ ಎಂದಭಿಪ್ರಾಯವು

ವ್ಯಾಕರಣಪ್ರಕ್ರಿಯಾ

**ಸುವೀರ್ಯಮ್**- ಶೋಭನಂ ವೀರ್ಯಂ ಯಸ್ಯ ಸಃ ಸುವೀರ್ಯಃ ತಮ್ **ವೀರವೀರ್ಯೌ ಚ** (ಪಾ ಸೂ ೬-೨-೧೨೦) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ

**ವಿವಾಸಸಿ**—ವಾ ಗತಿಗಂಧನಯೋಃ ಧಾತು. ಇಚ್ಛಾರ್ಥದಲ್ಲಿರುವಾಗ **ಧಾತೋಃಕರ್ಮಣಃ**—(ಪಾ ಸೂ. ೩-೧-೭) ಎಂಬುದರಿಂದ ಸನ್. **ಸನ್ಯಙೋಃ** (ಪಾ. ಸೂ. ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ **ಹ್ರಸ್ವಃ** ಸೂತ್ರದಿಂದ ಹ್ರಸ್ವ **ಸನ್ಯತಃ** (ಪಾ. ಸೂ ೭-೪-೭೯) ಎಂಬುದರಿಂದ ಇತ್ವ. **ಸನಾದ್ಯಂತಾ-ಧಾತವಃ** ಎಂಬುದರಿಂದ ವಿವಾಸ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. ಇದರಮೇಲೆ ಲಟ್ ಮಧ್ಯಮ ಪುರುಷ ಏಕವಚನದಲ್ಲಿ ಸಿಪ್ ಶಪ್. **ಅತೋಗುಣೇ** ಸೂತ್ರದಿಂದ ಪರರೂಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ದಾಶುಷೇ**—ದಾಶ್ವಸ್ ಶಬ್ದ, ಹಿಂದಿನಮಂತ್ರದಲ್ಲಿ ವ್ಯಾಖ್ಯಾತವಾಗಿದೆ ಚತುರ್ಥೀ ಏಕವಚನದಲ್ಲಿ **ವಸೋಃ ಸಂಪ್ರಸಾರಣಮ್** ಎಂಬುವರಿಂದ ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ '**ಶಾಸಿವಸಿಘಸೀನಾಂಚ** (ಪಾ ಸೂ ೮-೩-೬೦) ಎಂಬುದರಿಂದ ವಸುವಿನ ಸಕಾರಕ್ಕೆ ಷತ್ವ ದಾಶುಷೇ ಎಂದು ರೂಪವಾಗುತ್ತದೆ ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಮಧ್ಯೋದಾತ್ತವಾದ ಪದವಾಗುತ್ತದೆ

**ದೇವ**-- **ಆಮಂತ್ರಿತಸ್ಯ ಚ** (ಪಾ ಸೂ ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೯ ॥

ಎಪ್ಪತ್ತನಾಲ್ಕನೇ ಸೂಕ್ತವು ಸಮಾಪ್ತವು



# ಎಪ್ಪತ್ತೈದನೆಯ ಸೂಕ್ತವು.

**ಜುಷಸ್ವೇತಿ ಪಂಚರ್ಚಂ ದ್ವಿತೀಯಂ ಸೂಕ್ತಂ । ಅನುಕ್ರಾಂತಂ ಚ । ಜುಷಸ್ವ ಪಂಚೇತಿ । ಋಷ್ಯಾದ್ಯಾಃ ಪೂರ್ವವತ್ ॥ ಪ್ರಾತರನುವಾಕಾಶ್ವಿನಶಸ್ತ್ರಯೋಃ ಪೂರ್ವಸೂಕ್ತೇನ ಸಹೋಕ್ತಃ ಸೂಕ್ತವಿನಿಯೋಗಃ ॥ ಪಶೌ ಸ್ತೋಕಾನುವಚನ ಆದ್ಯಾ ವಿನಿಯುಕ್ತಾ । ಸೂತ್ರಿತಂ ಚ । ಪ್ರೇಷಿತಃ ಸ್ತೋಕೇಭ್ಯೋಽನ್ವಾಹ ಜುಷಸ್ವ ಸಪ್ರಥಸ್ತಮಂ । ಆ. ೩-೪ । ಇತಿ ॥**

ಅನುವಾದವು—**ಜುಷಸ್ವ** ಎಂಬ ಈ ಸೂಕ್ತವು ಹದಿಮೂರನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು ಅನುಕ್ರಮಣಿಕೆಯಲ್ಲಿ-**ಜುಷಸ್ವ ಪಂಚೇತಿ** ಎಂದು ಹೇಳಿರುವುದು ಈ ಸೂಕ್ತದ ಋಷಿದೇವತಾ ಛಂದಸ್ಸುಗಳು ಹಿಂದಿನ ಸೂಕ್ತದಂತೆಯೇ. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳ ಪಠನಕ್ಕಾಗಿ ಹಿಂದಿನ ಸೂಕ್ತದ ಮತ್ತು ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಿರುವುದು. ಇದಲ್ಲದೆ ಪಶುಯಾಗದಲ್ಲಿ ಸ್ತೋಕಾನುವಚನಮಂತ್ರಪಠನಕ್ಕಾಗಿ ಈ ಸೂಕ್ತದ ಮೊದಲನೆಯ ಋಕ್ಕನ್ನು ಉಪಯೋಗಿಸಬೇಕೆಂದು ಅಶ್ವಲಾಯನಶ್ರೌತಸೂತ್ರದ **ಪ್ರೇಷಿತಃ ಸ್ತೋಕೇಭ್ಯೋಽನ್ವಾಹ ಜುಷಸ್ವ ಸಪ್ರಥಸ್ತಮಂ** ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು. (ಆ ೩-೪)

## ಸೂಕ್ತ—೭೫.

॥ ಮಂಡಲ—೧ ॥ ಅನುವಾಕ—೧೩ ॥ ಸೂಕ್ತ—೭೫ ॥
॥ ಅಷ್ಟಕ—೧ ॥ ಅಧ್ಯಾಯ ೫ ॥ ವರ್ಗ—೨೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
॥ ಋಷಿಃ—ಗೋತಮೋ ರಾಹೂಗಣಃ ॥
॥ ದೇವತಾ—ಅಗ್ನಿಃ ॥
॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಜುಷಸ್ವ ಸಪ್ರಥಸ್ತಮಂ ವಚೋ ದೇವಪ್ಸರಸ್ತಮಂ ।
ಹವ್ಯಾ ಜುಹ್ವಾನ ಆಸನಿ ॥ ೧ ॥

॥ ಪದಪಾಠಃ ॥

ಜುಷಸ್ವ । ಸಪ್ರಥಃ ऽ ತಮಂ । ವಚಃ । ದೇವಪ್ಸರಃ ऽ ತಮಂ ।
ಹವ್ಯಾ । ಜುಹ್ವಾನಃ । ಆಸನಿ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಸಪ್ರಥಸ್ತಮಮತಿಶಯೇನ ವಿಸ್ತೀರ್ಣಂ ವಚಃ ಸ್ತೋತ್ರಲಕ್ಷಣಮಸ್ಮದೀಯಂ ವಚನಂ ಜುಷಸ್ವ । ಸೇವಸ್ವ । ಕೀದೃಶಂ । ದೇವಪ್ಸರಸ್ತಮಂ ದೇವಾನಾಂ ಪ್ರೀಣಯಿತೃತಮಂ । ಕಿಂ ಕುರ್ವನ್ । ಆಸನಿ ತವಾಸ್ಯೇ ಹವ್ಯಾ ಹವ್ಯಾನಿ ಸ್ತೋಕಲಕ್ಷಣಾನಿ ಹವೀಂಷಿ ಜುಹ್ವಾನಃ ಪ್ರಕ್ಷಿಪನ್ । ಇಮಾನಿ ಸ್ತೋಕಲಕ್ಷಣಾನಿ ಹವೀಂಷಿ ವೃಥಾ ಮಾ ಭುವನ್ ತತ್ಸರ್ವಂ ತ್ವದೀಯೇನ ಮುಖೇನ ಸ್ವೀಕುರ್ವಿತ್ಯರ್ಥಃ ॥ ದೇವಪ್ಸರಸ್ತಮಂ । ಪ್ಸ್ಟೃ ಪ್ರೀತಿಬಲಯೋಃ । ದೇವಾನ್ ಪ್ಸೃಣೋತಿ ಪ್ರೀಣಯತೀತಿ ದೇವಪ್ಸರಾಃ । ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚೇತ್ಯಸುನ್ ಪೂರ್ವಪದಪ್ರಕೃತಿಸ್ವರತ್ವಂ ಚ । ಸಕಾರಪಕಾರಯೋಃ ಸ್ಥಾನವಿಪರ್ಯಯಃ । ಅತಿಶಯೇನ ದೇವಪ್ಸರಾ ದೇವಪ್ಸರಸ್ತಮಃ । ಜುಹ್ವಾನಃ । ಜುಹೋತೇರ್ವ್ಯತ್ಯಯೇನ ಶಾನಚ್ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಆಸನಿ । ಪದ್ದನ್ನಿತ್ಯಾದಿನಾಸ್ಯಶಬ್ದಸ್ಯಾಸನ್ನಾದೇಶಃ ॥

॥ ಪ್ರತಿಪದಾರ್ಥ ॥

(**ಅಗ್ನೇ**—ಎಲೈ ಅಗ್ನಿಯೇ) । **ಸಪ್ರಥಸ್ತಮಂ**—ಹೆಚ್ಚಾಗಿ ವಿಸ್ತೀರ್ಣವಾದ । **ದೇವಪ್ಸರಸ್ತಮಂ**—ದೇವತೆಗಳಿಗೆ ಅತ್ಯಂತ ಪ್ರಿಯವಾದ । **ವಚಃ**—(ನಮ್ಮ ಸ್ತುತಿರೂಪವಾದ) ವಾಕ್ಯಗಳನ್ನು । **ಆಸನಿ**—ನಿನ್ನ ಬಾಯಿಯಲ್ಲಿ । **ಹವ್ಯಾ**—ಹವಿಸ್ಸುಗಳನ್ನು । **ಜುಹ್ವಾನಃ**—ಹಾಕಿಕೊಳ್ಳುತ್ತಾ । **ಜುಷಸ್ವ**—ಸೇವಿಸು (ಸ್ವೀಕರಿಸು) ॥

॥ ಭಾವಾರ್ಥ ॥

ನಾವು ಅರ್ಪಿಸುವ ಹವಿರಾದಿಗಳನ್ನು (ನಿನ್ನ) ಮುಖದಿಂದ ಸ್ವೀಕರಿಸುತ್ತಾ, ನಾವು ಮಾಡುವ, ದೇವತೆಗಳಿಗೆ ಅತ್ಯಂತಪ್ರಿಯವಾದ, ಸ್ತುತಿವಾಕ್ಯಗಳಿಗೆ ಕಿವಿಗೊಡು.

## English Translation

Attended to our most earnest address, propitiatory of the Gods accepting our oblations in your mouth

॥ ವಿಶೇಷವಿಷಯಗಳು ॥

**ಸಪ್ರಥಸ್ತಮಂ ವಚಃ**- ಅತಿ ವಿಸ್ತಾರವಾದ ವಾಕ್ಯ ಎಂದರೆ ದೊಡ್ಡದಾದ ಸ್ತೋತ್ರವನ್ನು.

**ದೇವಪ್ಸರಸ್ತಮಂ—ಪ್ಸ್ವ ಪ್ರೀತಿಬಲಯೋಃ । ದೇವಾನ್ ಪ್ಸೃಣೋತೀತಿ ದೇವಪ್ಸರಾಃ ।** ದೇವತೆಗಳಿಗೆ ಪ್ರೀತಿಪಾತ್ರವಾದ **ಅತಿಶಯೇನ ದೇವಪ್ಸರಾ ದೇವಪ್ಸರಸ್ತಮಃ ।** ದೇವತೆಗಳಿಗೆ ಅತ್ಯಂತ ಪ್ರಿಯವಾದುದು ಎಂದರ್ಥವು.

**ಆಸನಿ**—ಮುಖದಲ್ಲಿ, ಬಾಯಿಯಲ್ಲಿ ಆಸ್ಯಶಬ್ದದ ರೂಪಾಂತರವು.

ಮುಖ್ಯಾಭಿಪ್ರಾಯವು—ಎಲೈ ಅಗ್ನಿಯೇ ನಾವು ಮಾಡುವ ದೊಡ್ಡದಾದ ಈ ಸ್ತೋತ್ರವನ್ನು ಕೇಳಿ, ನಾವು ಅರ್ಪಿಸುವ ಹವಿಸ್ಸುಗಳನ್ನು ಭಕ್ಷಿಸಿ ಅದರಿಂದ ಸಂತುಷ್ಟನಾಗು.

॥ ವ್ಯಾಕರಣಪ್ರಕ್ರಿಯಾ ॥

**ಜುಷಸ್ವ**—ಜುಷೀ ಪ್ರೀತಿಸೇವನಯೋಃ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ **ಥಾಸಃ ಸೇ** (ಪಾ ಸೂ ೩-೪-೮೦) ಎಂಬುದರಿಂದ ಸೇ ಆದೇಶ ಬಂದಾಗ **ಸವಾಭ್ಯಾಂ ವಾಮೌ** (ಪಾ. ಸೂ ೩-೪-೯೧) ಸೂತ್ರದಿಂದ ಏಕಾರಕ್ಕೆ ವಕಾರಾದೇಶ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣ ಸ್ವರ (ಶ) ಉಳಿಯುತ್ತದೆ.

**ದೇವಪ್ಸರಸ್ತಮಮ್**—ಪ್ಸ್ವ ಪ್ರೀತಿಬಲಯೋಃ ಧಾತು ದೇವಾನ್ ಪ್ಸೃಣೋತಿ ಪ್ರೀಣಯತಿ ಇತಿ ದೇವಪ್ಸರಾಃ. **ಗತಿಕಾರಕಯೋರಪಿಪೂರ್ವಪದಪ್ರಕೃತಿಸ್ವರತ್ವಂ ಚ** (ಉ ಸೂ. ೪-೭೭೭) ಎಂಬುದರಿಂದ

ಕಾರಕಪೂರ್ವದಲ್ಲಿರುವಾಗ ಈ ಧಾತುವಿಗೆ ಅಸುನ್ ಪ್ರತ್ಯಯ. ಕೃದುತ್ತರಪದಪ್ರಕೃತಿಸ್ವರಕ್ಕೆ ಬಾಧಕವಾಗಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕ್ಕಿಗೆ **ಸಾರ್ವಧಾತುಕಾರ್ಧಧಾತುಕಯೋಃ** (ಪಾ ಸೂ. ೭-೩-೮೪) ಎಂಬುದರಿಂದ ಗುಣ. **ಉರಣ್ರಪರಃ** ಸೂತ್ರದಿಂದ ರಪರವಾಗಿ ಬರುತ್ತದೆ ಪ್ರತ್ಯಯದಿಂದ ಧಾತುವಿನಲ್ಲಿ ಸಕಾರ ಪಕಾರಗಳಿಗೆ ಸ್ಥಾನ ವಿಪರ್ಯಯ ಬಂದಿದೆ. ಅತಿಶಯೇನ ದೇವಪ್ಸರಾಃ ವೇವಪ್ಸರಸ್ತಮ: **ಅತಿಶಾಯನೇ ತಮಬಿಷ್ಠನೌ** (ಪಾ. ಸೂ ೫-೩-೫೫) ಎಂಬುದರಿಂದ ತಮಪ್ ಪ್ರತ್ಯಯ ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ

**ಹವ್ಯಾ -ಶೇಶ್ಛಂದಸಿ ಬಹುಲಮ್** (ಪಾ. ಸೂ. ೬-೧-೭೦) ಎಂಬುದರಿಂದ ನಪುಂಸಕದಲ್ಲಿ ಶಿಗೆ ಲೋಪ

**ಜುಹ್ವಾನಃ**—ಹು ದಾನಾದನಯೊಃ ಧಾತು **ವ್ಯತ್ಯಯೋ ಬಹುಲಮ್** ಎಂಬುದರಿಂದ ಲಡರ್ಥದಲ್ಲಿ ಶಾನಚ್ ಪ್ರತ್ಯಯ **ಜುಹೋತ್ಯಾದಿಭ್ಯಃ ಶ್ಲುಃ** ಎಂಬುದರಿಂದ ಶ್ಲು ವಿಕರಣ. **ಶ್ಲೌ** ಸೂತ್ರದಿಂದ ಧಾತುವಿಗೆ ದ್ವಿತ್ವ **ಕುಹೋಶ್ಚುಃ** ಸೂತ್ರದಿಂದ ಹಕಾರಕ್ಕೆ ಚುತ್ವ. ಜಸ್ತ್ವ. **ಹುಶ್ನುವೋಃ ಸಾರ್ವಧಾತುಕೇ** (ಪಾ ಸೂ ೬-೪-೮೭) ಎಂಬುದರಿಂದ ಯಣಾದೇಶ **ಅಭ್ಯಸ್ತಾನಾಮಾದಿಃ** (ಪಾ ಸೂ ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದ

**ಆಸನಿ** —ಆಸ್ಯಶಬ್ದ ಇದಕ್ಕೆ ಸಪ್ತಮೀ ಏಕವಚನಪರವಾದಾಗ **ಪದ್ದನ್ನೋಮಾಸ್**—(ಪಾ. ಸೂ ೬-೧-೬೩) ಎಂಬುದರಿಂದ ಆಸನ್ ಆದೇಶ **ವಿಭಾಷಾ ಙಿಶ್ಯೋಃ** (ಪಾ ಸೂ ೬-೪-೧೩೬) ಎಂಬುದರಿಂದ ಸಪ್ತಮೀ ಏಕವಚನದಲ್ಲಿ ವಿಕಲ್ಪವಾಗಿ ಆಸನ ಅಕಾರಕ್ಕೆ ಲೋಪವೆಂಬುದರಿಂದ ಇಲ್ಲಿ ಅಕಾರಲೋಪ ಬರುವುದಿಲ್ಲ ಆಸನಿ ಎಂದು ರೂಪವಾಗುತ್ತದೆ ॥ ೧ ॥



॥ ಸಂಹಿತಾಪಾಠ ॥

ಅಧಾ ತೇ ಅಂಗಿರಸ್ತಮಾಗ್ನೇ ವೇಧಸ್ತಮ ಪ್ರಿಯಂ ।
ವ್ರೋಚೇಮ ಬ್ರಹ್ಮ ಸಾನಸಿ ॥ ೨ ॥

॥ ಪದಪಾಠಃ ॥

ಅಥ । ತೇ । ಅಂಗಿರಃऽತಮ । ಅಗ್ನೇ । ವೇಧಃऽತಮ । ಪ್ರಿಯಂ ।
ವ್ರೋಚೇಮ । ಬ್ರಹ್ಮ । ಸಾನಸಿ ॥ ೨ ॥

॥ ಸಾಯಣಭಾಷ್ಯಂ ॥

**ಹೇ ಅಂಗಿರಸ್ತಮಾತಿಶಯೇನಾಂಗನಾದಿಗುಣಯುಕ್ತ । ಯದ್ವಾ । ಅಂಗಿರಸಾಂ ವರಿಷ್ಠ । ವೇಧಸ್ತಮ । ವೇಧಾ ಇತಿ ಮೇಧಾವಿನಾಮ । ಅತಿಶಯೇನ ಮೇಧಾವಿನ್ನಗ್ನೇ । ಅಥಾನಂತರಂ ತೇ ತುಭ್ಯಂ ಸಾನಸಿ ಸಂಭಜನೀಯಂ ಪ್ರಿಯಂ ಪ್ರೀತಿಕರಂ ಬ್ರಹ್ಮ ಸ್ತೋತ್ರಂ ವೋಚೇಮ । ವಕ್ತಾರೋ ಭೂಯಾಸ್ಮ ॥ ವೋಚೇಮ । ಲಿಙ್ಯಾಶಿಷ್ಯಙ್ । ವಚ ಉಮಿತ್ಯುಮಾಗಮಃ । ಸಾನಸಿ । ವನ ಷಣ ಸಂಭಕ್ತೌ । ಸಾನಸಿ-ಧರ್ಣಸೀತ್ಯಾದಾವಸಿಚ್‌ಪ್ರತ್ಯಯಾಂತೋ ನಿಪಾತ್ಯತೇ ॥**

॥ ಪ್ರತಿಪದಾರ್ಥ ॥

**ಅಥ**--ಅನಂತರ । **ಅಂಗಿರಸ್ತಮ**—ಅಂಗಿರಸರಲ್ಲಿ ಶ್ರೇಷ್ಠನೂ । **ವೇಧಸ್ತಮ**– ಮೇಧಾವಿಗಳಲ್ಲಿ ಶ್ರೇಷ್ಠನೂ, ಆದ । **ಅಗ್ನೇ**—ಎಲೈ ಅಗ್ನಿಯೇ । **ತೇ**—ನಿನಗೆ । **ಸಾನಸಿ**– ಸ್ವೀಕಾರಕ್ಕೆ ಯೋಗ್ಯವಾದ । **ಪ್ರಿಯಂ**—ಪ್ರೀತಿಕರವಾದ । **ಬ್ರಹ್ಮ**—ಸ್ತೋತ್ರವನ್ನು । **ವೋಚೇಮ**---ಉಚ್ಚರಿಸೋಣ ॥

॥ ಭಾವಾರ್ಥ ॥

ಅನಂತರ, ಅಂಗಿರಸರಲ್ಲಿ ಶ್ರೇಷ್ಠನೂ, ಮೇಧಾವಿಯೂ ಆದ ಎಲೈ ಅಗ್ನಿಯೇ, ನಿನ್ನಿಂದ ಸ್ವೀಕೃತವಾಗಲು ಯೋಗ್ಯವಾದ, (ನಿನಗೆ) ಪ್ರೀತಿಕರವಾದ ಸ್ತೋತ್ರವನ್ನು ಮಾಡೋಣ

English Translation

And then, most wise Agent, chief of the Angirasas, may we address (to you) an acceptable and gratifng prayer

॥ ವಿಶೇಷವಿಷಯಗಳು ।

**ಅಥ**— ಛಂದಸ್ಸಿನ ಅನುಕೂಲಕ್ಕಾಗಿ ಈ ಶಬ್ದದ ಅಂತ್ಯಾಕ್ಷರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು.

**ಅಂಗಿರಸ್ತಮ**— ಅಂಗನಾದಿಗುಣಯುಕ್ತನಾದವನು ಅಥವಾ ಅಂಗಿರಾ ಋಷಿಗಳಲ್ಲಿ ಶ್ರೇಷ್ಠನೆನಿಸಿದವನು ಅಗ್ನಿಯನ್ನು ಅಂಗಿರಶಬ್ದದಿಂದ ಕರೆಯುವುದು ರೂಢಿಯು. ಈ ಹೆಸರು ಅಗ್ನಿಗೆ ಹೇಗೆ ಬಂತೆಂಬ ವಿಚಾರವನ್ನು ನಾವು ಋ. ಸಂ. ಭಾಗ ೧ ಪೇಜು 640-641 ಗಳಲ್ಲಿ ವಿವರಿಸಿದೇವೆ. ಅಂಗಿರಸ್ತಮ ಎಂದರೆ ಅಂಗಿರಸರಲ್ಲಿ ಶ್ರೇಷ್ಠನಾದವನು ಎಂದರ್ಥವು

**ವೇಧಸ್ತಮ**—ವಿಪ್ರಃ ವಿಗ್ರಃ ಮೊದಲಾದ ಇಪ್ಪತ್ತನಾಲ್ಕು ಮೇಧಾವಿನಾಮಗಳ ಮಧ್ಯದಲ್ಲಿ ವೇಧಸ್ ಶಬ್ದವು ಪಠಿತವಾಗಿರುವುದರಿಂದ (ನಿ ೩-೧೫) ವೇಧಸ್ ಎಂದರೆ ಮೇಧಾವಿಯು, ಬುದ್ಧಿವಂತನು, ವಿವೇಕಿಯು. ವೇಧಸ್ತಮ ಎಂದರೆ ಅತಿಶಯವಾದ ಬುದ್ಧಿವಂತನು ಎಂದರ್ಥವು

**ಬ್ರಹ್ಮ**—ಬ್ರಹ್ಮಶಬ್ದಕ್ಕೆ ಅನ್ನವೆಂದೂ, ಧನವೆಂದೂ (ನಿ ೩-೯) ಅರ್ಥವಿದ್ದರೂ ಭಾಷ್ಯಕಾರರು ಇಲ್ಲಿ ಸ್ತೋತ್ರವೆಂದು ಅರ್ಥಮಾಡಿರುವರು

**ಸಾನಸಿ—ವನ ಷಣ ಸಂಭಕ್ತೌ । ಸಂಭಜನೀಯಂ ।** ಸ್ವೀಕರಾರ್ಹವಾದ, ಉತ್ತಮವಾದ

॥ ವ್ಯಾಕರಣಪ್ರಕ್ರಿಯಾ ॥

**ಅಥ—ನಿಪಾತಸ್ಯ ಚ**—(ಪಾ ಸೂ ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಅಂಗಿರಸ್ತಮ**—ಅಂಗಿರಸಾಂ ವರಿಷ್ಠಃ ಅಂಗಿರಸ್ತಮಃ **ಅತಿಶಾಯನೇ ತಮಬಿಷ್ಠನೌ** ಎಂಬುದರಿಂದ ತಮಪ್ ಪ್ರತ್ಯಯ. ಸಂಬುದ್ಧಿಯಲ್ಲಿ ಸುಲೋಪವಾದಾಗ **ಆಮಂತ್ರಿತಸ್ಯ ಚ** (ಪಾ ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ ಹೀಗೆಯೇ ವೇಧಸ್ತಮ ಎಂಬಲ್ಲಿಯೂ ಪ್ರಕ್ರಿಯೆ

**ವೋಚೇಮ**—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು ಇದಕ್ಕೆ ಆರ್ಧಧಾತುಕವಿವಕ್ಷಾಮಾಡಿದಾಗ **ಬ್ರುವೋ ವಚಿಃ** (ಪಾ. ಸೂ. ೨-೪-೫೩) ಎಂಬುದರಿಂದ ವಚ್ಯಾದೇಶ ಆಶೀರ್ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ **ನಿತ್ಯಂ ಙಿತಃ** (ಪಾ ಸೂ. ೩-೪-೯೯) ಎಂಬುದರಿಂದ ಅದರ ಸಕಾರಕ್ಕೆ ಲೋಪ **ಲಿಙ್ಯಾಶಿಷ್ಯಙ್** (ಪಾ ಸೂ ೩-೧-೮೬) ಎಂಬುದರಿಂದ ಅಙಾದೇಶ. **ವಚ ಉಮ್** (ಪಾ ಸೂ. ೭-೪-೨೦) ಎಂಬುದರಿಂದ ಉಮಾಗಮ **ಮಿದಚೋಽಂತ್ಯಾತ್ಪರಃ** ಎಂಬುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ ಆಗ ಗುಣದಿಂದ ಓಕಾರ ಅಕಾರದ ಪರದಲ್ಲಿ ಯಾಸುಟ್ ಬಂದುದರಿಂದ ಇಯಾದೇಶ **ಲೋಪೋವ್ಯೋರ್ವಲಿ** ಎಂಬುದರಿಂದ ಯಲೋಪ. ಪುನಃ ಗುಣ ಪಾದಾದಿಯಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ ಪ್ರತ್ಯಯಸ್ವರದಿಂದ (ಯಾಸುಟುದಾತ್ತ) ಮಧ್ಯೋದಾತ್ತವಾದ ಪದವಾಗುತ್ತದೆ

**ಸಾನಸಿ**—ವನ ಷಣ ಸಂಭಕ್ತೌ ಧಾತು. ಇದು **ಸಾನಸಿ ಧರ್ಣಸಿ**—(ಉ ಸೂ ೪-೫೪೭) ಎಂಬುದರಿಂದ ಅಸಿಚ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ ಚಿತ್ತಾದುದರಿಂದ **ಚಿತಃ** ಸೂತ್ರದಿಂದ ಅಂತೋದಾತ್ತವಾಗುತ್ತದೆ ॥ ೨ ॥

---

॥ ಸಂಹಿತಾಪಾಠಃ ॥

# ಕಸ್ತೇ ಜಾಮಿರ್ಜನಾನಾಮಗ್ನೇ ಕೋ ದಾಶ್ವಧ್ವರಃ ।
# ಕೋ ಹ ಕಸ್ಮಿನ್ನಸಿ ಶ್ರಿತಃ ॥ ೩ ॥

॥ ಪದಪಾಠಃ ॥

ಕಃ । ತೇ । ಜಾಮಿಃ । ಜನಾನಾಂ । ಅಗ್ನೇ । ಕಃ । ದಾಶುಽಅಧ್ವರಃ ।

ಕಃ । ಹ । ಕಸ್ಮಿನ್ । ಅಸಿ । ಶ್ರಿತಃ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಜನಾನಾಂ ಮನುಷ್ಯಾಣಾಂ ಮಧ್ಯೇ ತೇ ತವ ಕೋ ಜಾಮಿಃ ಕೋ ಬಂಧುಃ । ತ್ವಂ ಸರ್ವೈರ್ಗುಣೈರಧಿಕೋಽಸಿ । ತವಾನುರೂಪೋ ಬಂಧುರ್ನಾಸ್ತೀತಿ ಭಾವಃ । ಕೋ ದಾಶ್ವಧ್ವರಃ ।.ದಾಶುರ್ದತ್ತೋಽಧ್ವರೋ ಯಜ್ಞೋ ಯೇನ ಸ ತಥೋಕ್ತಃ । ತ್ವಾಂ ಯಷ್ಟುಮಪಿ ಸಮರ್ಥಃ ಕೋಽಪಿ ನಾಸ್ತೀತ್ಯರ್ಥಃ । ಕೋ ಹ ತ್ವಂ ಕಥಂಭೂತಸ್ತ್ವಂ। ಈದೃಗ್ರೂಪ ಇತಿ ಸರ್ವೈರ್ನ ಜ್ಞಾಯಸ ಇತ್ಯರ್ಥಃ । ಕಸ್ಮಿನ್ ಸ್ಥಾನೇ ಶ್ರಿತ ಆಶ್ರಿತೋಽಸಿ । ವರ್ತಸೇ । ತತ್ಸ್ಥಾನಮಪಿ ನ ಕೇನಚಿತ್ ಜ್ಞಾಯತೇ । ಅತಸ್ತ್ವಮಸ್ಮಾಭಿರ್ಮಾಂಸದೃಷ್ಟಿಭಿಃ ಕಥಮುಪಲಬ್ಧವ್ಯ ಇತ್ಯಗ್ನಿಃ ಪ್ರಶಸ್ಯತೇ ॥ ದಾಶ್ವಧ್ವರಃ । ದಾಶೃ ದಾನೇ । ಉಣಾದಯೋ ಬಹುಲಮಿತಿ ಬಹುಲವಚನಾತ್ಕರ್ಮಣ್ಯುಣ್ಪ್ರತ್ಯಯಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಯಣಾದೇಶ ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯೇತಿ ಸ್ವರಿತತ್ವಂ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಜನಾನಾಂ ಮಧ್ಯೇ**—ಮನುಷ್ಯರ ಮಧ್ಯದಲ್ಲಿ । **ತೇ**—ನಿನಗೆ । **ಕಃ ಜಾಮಿಃ**—ಬಂಧುವು ಯಾರು? । **ಕಃ ದಾಶ್ವಧ್ವರಃ**— (ನಿನ್ನ) ಯಜ್ಞಮಾಡಿರುವವನು ಯಾರು? । **ಕೋ ಹ**—(ನೀನು) ಯಾರು? । **ಕಸ್ಮಿನ್**—ಎಲ್ಲಿ (ಯಾವ ಸ್ಥಾನದಲ್ಲಿ) । **ಶ್ರಿತಃ ಅಸಿ**—ಆಶ್ರಯಿಸಿಕೊಂಡಿದ್ದೀಯೇ ? ॥

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನಗೆ (ಅನುರೂಪರಾದ) ಬಂಧುಗಳು ಮನುಷ್ಯರಲ್ಲಿ ಯಾರು ? ನಿನ್ನ ಯಜ್ಞಮಾಡುವವರು ತಾನೇ ಯಾರು ? ನಿಜವಾಗಿಯೂ, ನೀನು ಯಾರು ? ನೀನು ಇರುವುದು ಎಲ್ಲಿ ? (ಯಾವುದನ್ನೂ ತಿಳಿಯಲು ನಾವು ಸಮರ್ಥರಲ್ಲ)

## English Translation.

Who, Agni, amongst men is your kinsman ? who is worthy to offer you sacrifice ? who, indeed, are you and where do you abide ?

॥ ವಿಶೇಷವಿಷಯಗಳು ॥

ಈ ಋಕ್ಕಿನಲ್ಲಿ ಪ್ರತ್ಯೇಕವಾದ ನಾಲ್ಕು ವಾಕ್ಯಗಳಿರುವವು ಋಷಿಯು ಪ್ರಶ್ನೋತ್ತರರೂಪವಾಗಿ ಅಗ್ನಿಯ ಗುಣಗಳನ್ನು ವರ್ಣಿಸಿರುವನು ಪ್ರಶ್ನೆಯು ಮಾತ್ರ ಹೇಳಲ್ಪಟ್ಟಿರುವುದು ಉತ್ತರವನ್ನು ಅಧ್ಯಾಹಾರಮಾಡಿ ಕೊಳ್ಳಬೇಕು.

ಜಾಮಿಃ—ಜಾಮಿಶಬ್ದಕ್ಕೆ ಯಾಸ್ಕರು ಈ ರೀತಿ ನಿರ್ವಚನವನ್ನು ಹೇಳಿರುವರು—

**ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ । ಜಮತೇರ್ವಾ ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ ।**

(ನಿ ೩-೬)

ಜಾಮಿ ಎಂದರೆ ಭಗಿನೀ ಎಂದರ್ಥವನ್ನು ಹೇಳಿ ಇತರರು (ಪತಿಯಾದವನು) ಇವಳಲ್ಲಿ ಸಂತಾನವನ್ನು ಉತ್ಪತ್ತಿ ಮಾಡುವುದರಿಂದ ಭಗಿನಿಗೆ ಜಾಮಿಯೆಂದು ಹೆಸರು ಅಥವಾ ಜಮುತಿಧಾತುವಿಗೆ ಗಮನಾರ್ಥವಿರುವುದರಿಂದ ಹೋಗು ವವಳು ಎಂದರೆ ಪತಿಯ ಗೃಹಕ್ಕೆ ಹೊರಟುಹೋಗುವವಳಾದ್ದರಿಂದ ಭಗಿನಿಗೆ ಜಾಮಿಯೆಂದು ಹೆಸರು. ಇಲ್ಲಿ ಭಾಷ್ಯ ಕಾರರು ಈ ಶಬ್ದಕ್ಕೆ ಬಂಧುವೆಂಬ ಸಾಮಾನ್ಯಾರ್ಥವನ್ನು ಹೇಳಿರುವರು

**ಕಃ ತೇ ಜಾಮಿಃ ಜನಾನಾಂ**—ಮನುಷ್ಯರಲ್ಲಿ ನಿನಗೆ ಬಂಧುವಾದವನು ಯಾರು? ನೀನು ಮನುಷ್ಯರಲ್ಲಿಲ್ಲದ ಅನೇಕ ಗುಣಗಳಿಂದ ಯುಕ್ತನಾಗಿ ಎಲ್ಲರಿಗಿಂತಲೂ ಶ್ರೇಷ್ಠನಾದುದರಿಂದ ನಿನಗೆ ಸಮನಾದ ಬಂಧುವು ಮನುಷ್ಯರಲ್ಲಿ ಯಾರೂ ಇಲ್ಲವೆಂದಭಿಪ್ರಾಯವು

**ಕೋ ದಾಶ್ವಧ್ವರಃ**--ನಿನ್ನನ್ನು ಕ್ರಮವಾಗಿ ಯಜ್ಞಾದಿಗಳಿಂದ ಆರಾಧಿಸಲು ಯಾರು ಸಮರ್ಥರು? ನಿನ್ನ ಗುಣಗಳಿಗೆ ತಕ್ಕಂತೆ ವಿಧ್ಯುಕ್ತರೀತಿಯಿಂದ ನಿನ್ನನ್ನು ಯಜ್ಞಾದಿಗಳಿಂದ ಪೂಜಿಸಲು ಮನುಷ್ಯರಲ್ಲಿ ಸಮರ್ಥನಾದವನು ಯಾರೂ ಇಲ್ಲ ನೀನು ಅತ್ಯಂತ ಗುಣಾಧಿಕನು

**ಕೋ ಹ**—ನೀನು ಯಾರು? ನಿನ್ನ ಸ್ವರೂಪವೇನು? ನಿನ್ನ ಅತಿಶಯವಾದ ಸ್ವರೂಪವನ್ನೂ ಮಹಿಮೆ ಯನ್ನೂ ಯಾವನೂ ತಿಳಿಯಲಾರನು ಎಂದಭಿಪ್ರಾಯವು

**ಕಸ್ಮಿನ್ ಅಸಿ ಶ್ರಿತಃ**—ಯಾವ ಸ್ಥಾನದಲ್ಲಿ ನಿನ್ನ ಆಶ್ರಯವಿರುವುದು? ನೀನು ಭೂಮ್ಯಂತರಿಕ್ಷ ಸ್ವರ್ಗ ಗಳೆಂಬ ಮೂರು ಸ್ಥಾನಗಳಲ್ಲಿರುವವನೆಂದು ಪ್ರಸಿದ್ಧನಾಗಿದ್ದರೂ ನಿನ್ನ ನಿಜವಾದ ವಾಸಸ್ಥಾನದ ಅಥವಾ ಆಶ್ರಯದ ಸ್ವರೂಪವನ್ನು ಯಾರೂ ತಿಳಿಯಲಾರರು

॥ ವ್ಯಾಕರಣಪ್ರಕ್ರಿಯಾ ॥

**ಅಗ್ನೇ**--ಪಾದಾದಿಯಲ್ಲಿರುವುದರಿಂದ ಆಷ್ಟಮಿಕ ನಿಘಾತಸ್ವರ ಬರುವುದಿಲ್ಲ **ಆಮಂತ್ರಿತಸ್ಯ** (ಪಾ ಸೂ ೬-೧-೧೯೮) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ

**ದಾಶ್ವಧ್ವರಃ**—ದಾಶೃ ದಾನೇ ಧಾತು. **ಉಣಾದಯೋಬಹುಲಮ್** (ಪಾ ಸೂ. ೩-೩-೧) ಎಂಬುದರಿಂದ ಬಹುಲಗ್ರಹಣಸಾಮರ್ಥ್ಯದಿಂದ ಕರ್ಮಣಿಯಲ್ಲಿ ಉಣ್ ಪ್ರತ್ಯಯ. ದಾಶು ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದಾಶುಃ ದತ್ತಃ ಅಧ್ವರಃ ಯೇನ ಸಃ ದಾಶ್ವಧ್ವರಃ **ಬಹುವ್ರೀಹೌ-ಪ್ರಕೃತ್ಯಾಪೂರ್ವಪದಮ್** (ಪಾ ಸೂ ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಇಲ್ಲಿ ಉದಾತ್ತಸ್ಥಾನದಲ್ಲಿ ಯಣಾದೇಶ ಬಂದುದರಿಂದ **ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** (ಪಾ ಸೂ ೮-೨-೪) ಎಂಬುದರಿಂದ ಸ್ವರಿತ ಸ್ವರ ಬರುತ್ತದೆ

**ಅಸಿ**— ಅಸ ಭುವಿ. ಧಾತು ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ತಾಸಸ್ತ್ಯೋರ್ಲೋಪಃ** (ಪಾ ಸೂ. ೭-೪-೫೦) ಎಂಬುದರಿಂದ ಅಸಿನ ಸಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಶ್ರಿತಃ**—ಶ್ರಿಞ್ ಸೇವಾಯಾಂ ಧಾತು ಕರ್ಮಣಿಯಲ್ಲಿ ಕ್ತಪ್ರತ್ಯಯ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ ॥ ೩ ॥



॥ ಸಂಹಿತಾಪಾಠಃ ॥

ತ್ವಂ ಜಾಮಿರ್ಜನಾನಾಮಗ್ನೇ ಮಿತ್ರೋ ಅಸಿ ಪ್ರಿಯಃ ।

ಸಖಾ ಸಖಿಭ್ಯ ಈಡ್ಯಃ ॥ ೪ ॥

॥ ಪದಪಾಠಃ ॥

ತ್ವಂ । ಜಾಮಿಃ । ಜನಾನಾಂ । ಅಗ್ನೇ । ಮಿತ್ರಃ । ಅಸಿ । ಪ್ರಿಯಃ ।

ಸಖಾ । ಸಖಿಽಭ್ಯಃ । ಈಡ್ಯಃ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ತ್ವಮುಕ್ತಪ್ರಕಾರೇಣಾಚಿಂತ್ಯರೂಪೋಽಪ್ಯನುಗ್ರಹೀತೃತಯಾ ಸರ್ವೇಷಾಂ ಜನಾನಾಂ ಜಾಮಿರ್ಬಂಧುರಸಿ । ತಥಾ ಪ್ರಿಯಃ ಪ್ರೀಣಯಿತಾ ತ್ವಂ ಯಜಮಾನಾನಾಂ ಮಿತ್ರಃ ಪ್ರಮೀತೇಸ್ತ್ರಾಯ- ಕೋಽಸಿ । ಈಡ್ಯಃ ಸ್ತುತಿಭಿಃ ಸ್ತುತ್ಯಸ್ತ್ವಂ ಸಖಿಭ್ಯಃ ಸಮಾನಖ್ಯಾನೇಭ್ಯ ಋತ್ವಿಗ್ಭ್ಯಃ ಸಖಾ ಸಖಿವದ- ತ್ಯಂತಂ ಪ್ರಿಯೋಽಸಿ ॥ ಜಾಮಿಃ । ಜಮು ಅದನೇ । ಜಮಂತಿ ಸಹೈಕಸ್ಮಿನ್ಪಾತ್ರೇಽದಂತೀತಿ ಜಾಮಯೋ ಬಂಧವಃ । ಜನಿಘಸಿಭ್ಯಾಮಿಣ್ । ಉ. ೪-೧೨೯ । ಇತಿ ವಿಧೀಯಮಾನ ಇಣ್ ಬಹುಲವಚನಾದಸ್ಮಾದಪಿ ದ್ರಷ್ಟವ್ಯಃ । ಈಡ್ಯಃ । ಈಡ ಸ್ತುತೌ । ಈಡವಂದವೃಶಂಸದುಹಾಂ ಣ್ಯತ ಇತ್ಯಾದ್ಯುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತ್ವಂ**—ನೀನು (ಹಿಂದೆ ಹೇಳಿದಂತೆ ಅಚಿಂತ್ಯರೂಪನಾದರೂ) । **ಜನಾನಾಂ**—ಜನಗಳಿಗೆ (ಅನುಗ್ರಹೀತೃವಾದುದರಿಂದ) । **ಜಾಮಿಃ ಅಸಿ**—ಬಂಧುವಾಗಿದ್ದೀ । **ಪ್ರಿಯಃ ಮಿತ್ರಃ**—ಪ್ರೀತಿಪಾತ್ರನಾದ ಮಿತ್ರನೂ (ಆಗಿದ್ದೀ) । **ಈಡ್ಯಃ**—(ಸ್ತೋತ್ರಗಳಿಂದ) ಸ್ತುತ್ಯನಾದ (ನೀನು) । **ಸಖಿಭ್ಯಃ**—ಋತ್ವಿಜರಿಗೆ । **ಸಖಾ**—ಸ್ನೇಹಿತನೂ (ಆಗಿದ್ದೀ)

॥ ಭಾವಾರ್ಥ ॥

(ಮೊದಲೆ ಹೇಳಿದಂತೆ ಅಚಿಂತ್ಯರೂಪನಾದರೂ, ಅನುಗ್ರಹಿತೃವಾದ) ನೀನು ಜನರಿಗೆ ಬಂಧುವೂ, ಪ್ರಿಯ ಮಿತ್ರನೂ ಸ್ತುತ್ಯನೂ ಮತ್ತು ಋತ್ವಿಜರಿಗೆ ಸ್ನೇಹಿತನೂ ಆಗಿದ್ದೀಯೆ.

## English Translation

But, O Agni, you are a kinsman to the people, a dear friend, a praiseworsty companion amongst (all) companions (or a friend to the priests).

॥ ವಿಶೇಷವಿಷಯಗಳು ॥

ಮುಖ್ಯಾಭಿಪ್ರಾಯವು— ಹಿಂದಿನ ಋಕ್ಕಿನಲ್ಲಿ ಅಗ್ನಿಗೆ ಬಂಧುವಾದವನು ಯಾರೂ ಇಲ್ಲವೆಂದು ಹೇಳಿರುವುದಷ್ಟೆ ಅಲ್ಲಿ ಬಂಧುಶಬ್ದಕ್ಕೆ ಸಮಾನಗುಣವುಳ್ಳವನು ಎಂದರ್ಥವನ್ನು ಮಾಡಬೇಕಾಗಿರುವುದು ಬಂಧುಗಳಾದವರಲ್ಲಿ ಸಮಾನವಾದ ಗುಣಗಳಿರಬೇಕಾದುದು ಸಹಜವು. ಆದರೆ ಅಗ್ನಿಗೆ ಸಮನಾದ ಗುಣಗಳುಳ್ಳವನು ಯಾರೂ ಇರುವುದಿಲ್ಲವೆಂದೂ ಆದುದರಿಂದಲೇ ಬಂಧುತ್ವಕ್ಕೆ ಯೋಗ್ಯನಾದ ಪುರುಷನಿಲ್ಲವೆಂದೂ ಪ್ರಕಾರಾಂತರದಿಂದ ಪ್ರಶ್ನರೂಪವಾಗಿ ಹೇಳಿರುವನು. ಈ ಋಕ್ಕಿನಲ್ಲಿ ಅಗ್ನಿಯು ಜನರಿಗೆ ಬಂಧುವೆಂದು ಹೇಳಿರುವನು ಇದು ವಿರೋಧವಲ್ಲವೇ ಎಂದರ ಹಾಗಲ್ಲ ಬಂಧುಗಳಲ್ಲಿ ಇರಬೇಕಾದ ಗುಣವು ಮತ್ತೊಂದು ಇರುವುದು. ಬಂಧುಗಳು ಒಬ್ಬರನ್ನೊಬ್ಬರು ಪ್ರೀತಿಸುತ್ತಾ ಒಬ್ಬರಿಗೊಬ್ಬರು ಹಿತೈಷಿಗಳಾಗಿ ಕಷ್ಟಸುಖಗಳಲ್ಲಿ ಭಾಗಿಗಳಾಗಿರುವರು ಇದು ಬಂಧುತ್ವಲಕ್ಷಣವು ಅಗ್ನಿಯೂ ಸಹ ಜನರ

ಹಿತಕಾಂಕ್ಷಿಯಾಗಿ ಸ್ತೋತ್ರಮಾಡುವವರಿಗೆ ಇಷ್ಟಾರ್ಥಗಳನ್ನು ಸಲ್ಲಿಸುತ್ತಾ ಅವರಿಗೆ ಅನುಗ್ರಹವನ್ನುಂಟುಮಾಡುವನು. ಈ ವಿಧವಾದ ದೃಷ್ಟಿಯಿಂದ ಅಗ್ನಿಯು ಜನರಿಗೆ ಬಂಧುವೆಂದು ಈ ಋಕ್ಕಿನಲ್ಲಿ ಹೇಳಲ್ಪಟ್ಟಿರುವನು. ಈ ವಿಧವಾದ ಅರ್ಥವನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ಮಿತ್ರ, ಪ್ರಿಯ, ಸಖಾ ಎಂಬ ಶಬ್ದಗಳ ಪ್ರಯೋಗವಿರುವುದು

॥ ವ್ಯಾಕರಣಪ್ರಕ್ರಿಯಾ ॥

**ಜಾಮಿಃ**—ಜಮು ಅದನೇ. ಧಾತು ಜಮಂತಿ ಸಹ ಏಕಸ್ಮಿನ್ ಪಾತ್ರೇ ಅದಂತೀತಿ ಜಾಮಯಃ ಬಂಧವಃ (ಒಂದೇ ಪಾತ್ರೆಯಲ್ಲಿ ಊಟಮಾಡುವವರು ಬಂಧುಗಳು) **ಜನಿಘ್ಯಸಿಭ್ಯಾಮಿಣ್** (ಉ. ಸೂ. ೪-೧೩೧) ಎಂಬುದರಿಂದ ವಿಧಿಸಲ್ಪಡುವ ಇಣ್ ಪ್ರತ್ಯಯವು ಉಣಾದಿಯಲ್ಲಿ ಬಹುಲವಚನವಿರುವುದರಿಂದ ಇದಕ್ಕೂ ಬರುತ್ತದೆ. ಣಿತ್ತಾದುದರಿಂದ **ಅತಉಪಧಾಯಾಃ** ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ

**ಈಡ್ಯಃ**—ಈಡ ಸ್ತುತೌ ಧಾತು. ಅದಾದಿ. ಇದಕ್ಕೆ **ಋಹಲೋರ್ಣ್ಯತ್** (ಪಾ ಸೂ ೩-೧-೧೨೪) ಎಂಬುದರಿಂದ ಣ್ಯತ್‌ಪ್ರತ್ಯಯ. **ಈಡವಂದವೃಶಂಸದುಹಾಂ ಣ್ಯತಃ** (ಪಾ ಸೂ. ೬-೧-೨೧೪) ಎಂಬುದರಿಂದ ತಿತ್ ಸ್ವರವು ಬಾಧಿತವಾಗಿ ಆದ್ಯುದಾತ್ತಸ್ವರ ಬರುತ್ತದೆ ॥ ೪ ॥



॥ ಸಂಹಿತಾಪಾಠಃ ॥

ಯಜಾ ನೋ ಮಿತ್ರಾವರುಣಾ ಯಜಾ ದೇವಾಁ ಋತಂ ಬೃಹತ್ ।
ಅಗ್ನೇ ಯಕ್ಷಿ ಸ್ವಂ ದಮಂ ॥ ೫ ॥

॥ ಪದಪಾಠಃ ॥

**ಯಜ । ನಃ । ಮಿತ್ರಾವರುಣಾ । ಯಜ । ದೇವಾನ್ । ಋತಂ । ಬೃಹತ್ ।**
**ಅಗ್ನೇ । ಯಕ್ಷಿ । ಸ್ವಂ । ದಮಂ ॥ ೫ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ನೋಽಸ್ಮದರ್ಥಂ ಮಿತ್ರಾವರುಣಾ ಏತತ್ಸಂಜ್ಞೌ ದೇವೌ ಯಜ । ಹವಿಷಾ ಪೂಜಯ । ತಥಾ ದೇವಾನಿಂದ್ರಾದೀನ್ಯಜ । ಪೂಜಯ । ಋತಂ ಸತ್ಯಂ ಯಥಾರ್ಥಫಲಂ ಯಜ್ಞಂ ಚ ಯಜೇತ್ಯೇವ। ತದರ್ಥಂ ಬೃಹತ್ ಪ್ರೌಢಂ ಸ್ವಂ ಸ್ವಕೀಯಂ ದಮಂ ಯಜ್ಞಗೃಹಂ ಯಕ್ಷಿ । ಯಜ । ಸಂಗಚ್ಛಸ್ವ । ತ್ವಯ್ಯಂತರ್ವಿದ್ಯಮಾನೇ ಸತಿ ಹಿ ಯಜ್ಞಗೃಹಂ ಪೂಜ್ಯತೇ ॥ ಯಜ । ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ । ದೇವಾನ್ । ದೀರ್ಘಾದಟಿಸಮಾನಪಾದ ಇತಿ ಸಂಹಿತಾಯಾಂ ನಕಾರಸ್ಯ ರುತ್ವಂ। ಆತೋಽಟಿ ನಿತ್ಯಮಿತ್ಯನುನಾಸಿಕ ಆಕಾರಃ । ಯತ್ವಲೋಪೌ । ಯಕ್ಷಿ । ಯಜೇರ್ಬಹುಲಂ ಛಂದಸೀತಿ ಶಪೋ ಲುಕ್ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ನಃ**—ನಮಗೋಸ್ಕರ । **ಮಿತ್ರಾವರುಣಾ**—ಮಿತ್ರ ಮತ್ತು ವರುಣರನ್ನು । **ಯಜ**—(ಹವಿಸ್ಸಿನಿಂದ) ಪೂಜಿಸು. । **ದೇವಾನ್**—ಇಂದ್ರಾದಿಗಳನ್ನು । **ಯಜ**—ಪೂಜಿಸು । **ಋತಂ**—ಯಥಾರ್ಥ ಫಲಪ್ರದವಾದ ಯಜ್ಞವನ್ನು । (**ಯಜ**—ಪೂಜಿಸು) । **ಬೃಹತ್**—ದೊಡ್ಡದಾದ । **ಸ್ವಂ ದಮಂ**—ಸ್ವಕೀಯವಾದ (ಯಜ್ಞ) ಗೃಹವನ್ನು । **ಯಕ್ಷಿ**—ಪೂಜಿಸು (ಸೇರು) ।

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮಗೋಸ್ಕರ ಮಿತ್ರ ಮತ್ತು ವರುಣರನ್ನು ಪೂಜಿಸು, ಇಂದ್ರಾದಿ ಸಮಸ್ತ ದೇವತೆಗಳನ್ನೂ ಪೂಜಿಸು, ಯಜ್ಞವನ್ನು ಪುಷ್ಟೀಕರಿಸು; ಮತ್ತು ನಿನ್ನ ಗೃಹವಾದ ಯಾಗಶಾಲೆಯನ್ನು ಪೂಜಾರ್ಹವನ್ನಾಗಿ ಮಾಡು. (ಎಂದರೆ ಯಾಗಶಾಲೆಯನ್ನು ಪ್ರವೇಶಿಸು )

## English Translation.

Worship for us, Mitra and Varuna, worship for us, all the Gods, (celebrate) a great sacrifice; be present in your own dwelling.

॥ ವಿಶೇಷವಿಷಯಗಳು ॥

**ಋತಂ**—ಸತ್ಯಫಲಪ್ರದವಾದ ಯಜ್ಞವು ಎಂದು ಭಾಷ್ಯಕಾರರು ಹೇಳಿರುವರು. **ಯಾಸ್ಕರು—ಋತಂ ಸತ್ಯಂ ವಾ ಯಜ್ಞಂ ವಾ ।** ಎಂದರೆ ಋತಶಬ್ದಕ್ಕೆ ಸತ್ಯ ಅಥವಾ ಯಜ್ಞವೆಂಬ ಅರ್ಥವಿರುವುದು ಎಂದು ನಿರ್ವಚನವನ್ನು ಹೇಳಿರುವರು. (ನಿ. ೪-೧೯) ಈ ಶಬ್ದದ ವಿಸ್ತಾರವಾದ ಅರ್ಥವಿವರಣೆಗಾಗಿ ಋ. ಸಂ. ಭಾಗ ೧ ಪೇಜು ೬೪೭ ನೋಡಿ.

ಇಲ್ಲಿ ಅಗ್ನಿಯನ್ನುದ್ದೇಶಿಸಿ **ಯಜ**-ಯಜ್ಞಮಾಡು ಅಥವಾ ಪೂಜಿಸು ಎಂದು ಹೇಳಿರುವುದರಿಂದ ಅಗ್ನಿಯಲ್ಲಿ ದೇವತೆಗಳನ್ನುದ್ದೇಶಿಸಿ ಸಮರ್ಪಿಸಿದ ಹವಿರಾದಿದ್ರವ್ಯಗಳನ್ನು ಅವರಿಗೆ ಸೇರುವಂತೆ ಮಾಡು ಎಂದಭಿಪ್ರಾಯವು. ಈ ಕಾರಣದಿಂದಲೇ **ಯಜ ದೇವಾನ್** ಎಂಬ ಪದಗಳಿಗೆ ದೇವತೆಗಳಿಗೆ ಸಮರ್ಪಿಸಬೇಕಾದ ದ್ರವ್ಯಗಳನ್ನು ಅಗ್ನಿಯಾದ ನಿನ್ನಲ್ಲಿ ಹೋಮಮಾಡುವುದರಿಂದ ನಾವು ಅರ್ಪಿಸುತ್ತೇವೆ. ಅವುಗಳನ್ನು ದೇವತೆಗಳಿಗೆ ಸೇರುವಂತೆ ಮಾಡುವ ಕರ್ತವ್ಯವು ನಿನ್ನ (ಅಗ್ನಿಯ)ದಾದ್ದರಿಂದ **ದೇವಾನ್ ಯಜ**—ದೇವತೆಗಳನ್ನು ಪೂಜಿಸು ಎಂಬ ಶಬ್ದಗಳನು ಪ್ರಯೋಗಿಸಲಾಗಿರುವುದು.

**ಬೃಹತ್, ಅಗ್ನೇ ಯಕ್ಷಿ ಸ್ವಂ ದಮಂ**—ದಮ ಎಂದರೆ ಗೃಹವು. (ನಿ. ೩-೧೩) ಅಗ್ನಿಯನ್ನುದ್ದೇಶಿಸಿ ಸ್ವಕೀಯವಾದ ಗೃಹವೆಂದು ಹೇಳುವಾಗ ಅಗ್ನಿಯು ಪ್ರತಿಷ್ಠಸಲ್ಪಟ್ಟಿರುವ ಯಾಗಶಾಲೆಯೆಂದರ್ಥವು. ಬೃಹತ್ ಶಬ್ದಕ್ಕೆ ದೊಡ್ಡದಾದ ಅಥವಾ ವಿಸ್ತಾರವಾದ ಎಂದರ್ಥವು. ಯಾಗಶಾಲೆಯನ್ನು ಪೂಜಿಸುವುದೆಂದರೆ, ಯಾಗಶಾಲೆಯಲ್ಲಿ ನೀನು (ಅಗ್ನಿಯು) ಇರುವುದರಿಂದ ಅದು ಪೂಜಾರ್ಹವಾಗುವುದೆಂದು ಭಾಷ್ಯಕಾರರು ಹೇಳಿರುವರು

॥ ವ್ಯಾಕರಣಪ್ರಕ್ರಿಯಾ ॥

**ಯಜ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ಪಿಗೆ ಹಿ ಆದೇಶ. ಶಪ್ ವಿಕರಣ. **ಅತೋ ಹೇಃ** ಎಂಬುದರಿಂದ ಹಿಗೆ ಲುಕ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಶಪ್ ಪಿತ್ತಾದುದರಿಂದ ಅನುದಾತ್ತ. ಆಗ ಧಾತುಸ್ವರ ಉಳಿಯುತ್ತದೆ **ದ್ವ್ಯಚೋಽತಸ್ತಿಙಃ** (ಪಾ ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ

**ಮಿತ್ರಾವರುಣಾ**—ಇದಕ್ಕೆ ದ್ವಿತೀಯಾ ದ್ವಿವಚನಪರವಾದಾಗ (ಔ) **ಸುಪಾಂ ಸುಲುಕ್**—ಎಂಬುದರಿಂದ ಅದಕ್ಕೆ ಆಕಾರಾದೇಶ.

**ದೇವಾನ್**—ಇದಕ್ಕೆ ಅಚ್ (ಋ) ಪರವಾದುದರಿಂದ **ದೀರ್ಘಾದಟಿಸಮಾನಪಾದೇ** (ಪಾ ಸೂ. ೮-೩-೯) ಎಂಬುದರಿಂದ ಸಂಹಿತಾದಲ್ಲಿ ನಕಾರಕ್ಕೆ ರುತ್ವ. **ಆತೋಽಟಿನಿತ್ಯಮ್** ಎಂಬುದರಿಂದ ಪೂರ್ವದಲ್ಲಿರುವ ಆಕಾರಕ್ಕೆ ನಿತ್ಯಾನುನಾಸಿಕತ್ವ. ರುತ್ವಕ್ಕೆ **ಭೋಭಗೋ ಅಘೋ**—ಸೂತ್ರದಿಂದ ಯಕಾರಾದೇಶ. **ಲೋಪಃ-ಶಾಕಲ್ಯಸ್ಯ** ಎಂಬುದರಿಂದ ಯಕಾರಕ್ಕೆ ಲೋಪ

**ಯಕ್ಷಿ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು ಭ್ವಾದಿ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಪ್ರಾಪ್ತವಾದ ಶಪ್ಪಿಗೆ ಲುಕ್. **ವ್ರಶ್ಚಭ್ರಸ್ಜ**—ಸೂತ್ರದಿಂದ ಝಲ್ ಪರದಲ್ಲಿರುವುದರಿಂದ ಷತ್ವ **ಷಢೋಃ ಕಃ ಸಿ** ಸೂತ್ರದಿಂದ :ಅದಕ್ಕೆ ಕತ್ವ. ಅದನ್ನು ನಿಮಿತ್ತೀಕರಿಸಿ ಪ್ರತ್ಯಯಸಕಾರಕ್ಕೆ **ಆದೇಶಪ್ರತ್ಯಯಯೋಃ** ಎಂಬುದರಿಂದ ಷತ್ವ. ಯಕ್ಷಿ ಎಂದು ರೂಪವಾಗುತ್ತವೆ. ಪೂರ್ವದಲ್ಲಿ ಆಮಂತ್ರಿತವಿರುವುದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ. ಸೂ. ೮-೧-೭೨) ಎಂಬುದರಿಂದ

ಅದಕ್ಕೆ ಅವಿದ್ಯಮಾನವದ್ಭಾವ ಬರುವುದರಿಂದ ಇಲ್ಲದಂತಾಗುತ್ತದೆ. ಆಗ ಪದಾದಿಯಲ್ಲಿ ಬಂದಂತಾಗುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತವಾಗುತ್ತದೆ. ಆಗ ಧಾತುವಿನ ಅಂಶೋದಾತ್ತಸ್ವರವು ಉಳಿಯುತ್ತದೆ

ಇಲ್ಲಿಗೆ ಎಪ್ಪತ್ತೈದನೆಯ ಸೂಕ್ತವು ಸಮಾಪ್ತವು



## ಎಪ್ಪತ್ತಾರನೆಯ ಸೂಕ್ತವು

**ಕಾ ತ ಇತಿ ಪಂಚರ್ಚಂ ತೃತೀಯಂ ಸೂಕ್ತಂ। ಕಾ ತ ಇತ್ಯನುಕ್ರಾಂತಂ। ರಾಹೂಗಣೋ ಗೋತಮ ಋಷಿಃ। ತ್ರಿಷ್ಟುಪ್ ಛಂದಃ। ಅಗ್ನಿರ್ದೇವತಾ॥ ಪ್ರಾತರನುವಾಕಸ್ಯಾಗ್ನೇಯೇ ಕ್ರತೌ ತ್ರೈಷ್ಟುಭೇ· ಛಂದಸೀದಮಾದಿಕೇ ದ್ವೇ ಸೂಕ್ತೇ। ಸೂತ್ರಿತಂ ಚ। ಉಪ ಪ್ರ ಜಿನ್ವನ್ನಿತಿ ತ್ರೀಣಿ ಕಾ ತ ಉಪೇತಿರಿತಿ ಸೂಕ್ತೇ। ಆ. ೪-೧೩। ಇತಿ॥ ಆಶ್ವಿನಶಸ್ತ್ರೇಽಪ್ಯೇತೇ ಪ್ರಾತರನುವಾಕಾತಿದೇಶಾತ್॥**

ಅನುವಾದವು—**ಕಾ ತೇ** ಎಂಬ ಈ ಸೂಕ್ತವು ಹದಿಮೂರನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ **ಕಾ ತೇ** ಎಂದು ಹೇಳಿರುವುದು. ಈ ಸೂಕ್ತಕ್ಕೆ ರಹುಗಣ ಪುತ್ರನಾದ ಗೋತಮನು ಋಷಿಯು. ಅಗ್ನಿಯು ದೇವತೆಯು, ತ್ರಿಷ್ಟುಪ್ ಛಂದಸ್ಸು. ಪ್ರಾತರನುವಾಕಮಂತ್ರ ಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಗಾಗಿಯೂ, ಆಶ್ವಿನಶಸ್ತ್ರಮಂತ್ರ ಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ-**ಉಪ ಪ್ರ ಜಿನ್ವನ್ನಿತಿ ತ್ರೀಣಿ ಕಾ ತ ಉಪೇತಿರಿತಿ ಸೂಕ್ತೇ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ ೪-೧೩ )

## ಸೂಕ್ತ—೭೬

॥ ಓಂ ॥

॥ ಮಂಡಲ—೧ ॥ ಅನುವಾಕ—೧೩ ॥ ಸೂಕ್ತ—೭೬ ॥

॥ ಅಷ್ಟಕ—೧ ॥ ಅಧ್ಯಾಯ—೫ ॥ ವರ್ಗ—೨೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ಗೋತಮೋ ರಾಹೂಗಣಃ ॥

ದೇವತಾ—ಅಗ್ನಿಃ ॥

ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಕಾ ತ ಉಪೇತಿರ್ಮನಸೋ ವರಾಯ ಭುವದಗ್ನೇ ಶಂತಮಾ
ಕಾ ಮನೀಷಾ ।
ಕೋ ವಾ ಯಜ್ಞೈಃ ಪರಿ ದಕ್ಷಂ ತ ಆಪ ಕೇನ ವಾ ತೇ ಮನಸಾ
ದಾಶೇಮ ॥ ೧ ॥

॥ ಪದಪಾಠಃ ॥

ಕಾ । ತೇ । ಉಪಽಇತಿಃ । ಮನಸಃ । ವರಾಯ । ಭುವತ್ । ಅಗ್ನೇ । ಶಂಽ-
ತಮಾ । ಕಾ । ಮನೀಷಾ ।
ಕಃ । ವಾ । ಯಜ್ಞೈಃ । ಪರಿ । ದಕ್ಷಂ । ತೇ । ಆಪ । ಕೇನ । ವಾ । ತೇ ।
ಮನಸಾ । ದಾಶೇಮ ॥ ೧ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತೇ ತವ ಮನಸೋ ವರಾಯ ನಿವಾರಣಾಯಾಸ್ಮಾಸ್ವವಸ್ಥಾಪನಾಯ ಕೋಪೇತಿರ್ಭುವತ್ । ಕೀದೃಶಮುಪಗಮನಂ ಭವೇತ್ । ನ ಕಾಪ್ಯಸ್ತಿ । ತವೋಚಿತಮುಪಗಮನಂ ವಯಂ ಕರ್ತುಂ ನ ಶಕ್ನುಮ ಇತಿ ಭಾವಃ । ಮನೀಷಾ ಸ್ತುತಿಃ ಶಂತಮಾ ತವಾತಿಶಯೇನ ಸುಖಕರೀ ಕಾ ಕೀದೃಶೀ ಭವೇತ್ । ತವೋಚಿತಾ ಸ್ತುತಿರಪಿ ನಾಸ್ತೀತ್ಯರ್ಥಃ । ಕೋ ವಾ ಯಜಮಾನೋ ಯಜ್ಞೈಸ್ತವ ಸಂಬಂಧಿಭಿರ್ಯಾಗೈರ್ದಕ್ಷಂ ವೃದ್ಧಿಂ ಬಲಂ ವಾ ಪರ್ಯಾಪ । ಪರ್ಯಾಪ್ನೋತ್ । ನಕೋಽಪೀತ್ಯರ್ಥಃ । ತವೋಚಿತಾನ್ಯಾಗಾನನುಷ್ಠಾಯ ತೈಃ ಫಲಂ ಪ್ರಾಪ್ಯತ ಇತ್ಯೇತದಪಿ ದುರ್ಘಟಮೇವೇತಿ ಭಾವಃ । ಉಪಗಮನಾದಿಕಂ ತಾವದಾಸ್ತಾಂ । ತಸ್ಯ ಸರ್ವಸ್ಯ ಸಾಧನಭೂತಂ ಮನ ಏವಾಸ್ಮಾಕಂ ದುರ್ಲಭಮಿತ್ಯಾಹ । ಕೇನೇತಿ । ಹೇ ಅಗ್ನೇ ತೇ ತುಭ್ಯಂ ಕೇನ ಮನಸಾ ಕೀದೃಶ್ಯಾ ಬುದ್ಧ್ಯಾ ದಾಶೇಮ । ಹವೀಂಷಿ ಪ್ರಯಚ್ಛಾಮ । ತವೋಪಗಮನಾದ್ಯನುರೂಪಂ ಮನೋಽಸ್ಮಾಕಂ ನೋತ್ಪದ್ಯತ ಇತ್ಯರ್ಥಃ ॥ ಉಪೇತಿಃ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ವರಾಯ । ವೃಞ್ ವರಣೇ । ಅಸ್ಮಾದಂತರ್ಭಾವಿತಣ್ಯರ್ಥಾದ್ಗ್ರಹವೃದೃನಿಶ್ಚಿಗಮಶ್ಚ । ಪಾ. ೩-೩-೫೮ । ಇತ್ಯಪ್ । ತಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಭುವತ್ । ಲೇಟ್ಯಡಾಗಮಃ । ಬಹುಲಂ ಛಂದಸೀತಿ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ । ದಕ್ಷಂ । ದಕ್ಷ ವೃದ್ಧೌ । ಭಾವೇ ಕರಣೇ ವಾ ಘಞ್ । ಞಿತ್ತ್ವಾದನುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ತೇ ಮನಸಃ**—ನಿನ್ನ ಮನಸ್ಸಿನ । **ವರಾಯ**—ನಿವಾರಣೆಗೆ (ನಮ್ಮಲ್ಲಿ ಪ್ರಸನ್ನವಾಗಲು) । **ಉಪೇತಿಃ**—(ನಿನ್ನನ್ನು) ಸಮೀಪಿಸಲು ಪ್ರಯತ್ನವು । **ಕಾ ಭುವತ್**—ಎಂತಹುದು ಆದೀತು ? । **ಮನೀಷಾ**—(ನಮ್ಮ) ಸ್ತುತಿಯು । **ಶಂತಮಾ**—(ನಿನಗೆ) ಹೆಚ್ಚಾಗಿ ಸುಖಕರವಾಗಲು । **ಕಾ**—ಎಂತಹುದು (ಆಗಬೇಕು) ? । **ಕೋ ವಾ**—ಯಾವ ಯಜಮಾನನು ತಾನೇ । **ಯಜ್ಞೈಃ**—(ನಿನ್ನ ಸಂಬಂಧವಾದ) ಯಾಗಗಳಿಂದ । **ದಕ್ಷಂ**—ಏಳಿಗೆಯನ್ನು (ಬಲವನ್ನು) । **ಪರಿ ಆಪ**—ಹೊಂದಿದನು ? । **ತೇ**—ನಿನಗೆ । **ಕೇನ ಮನಸಾ**—ಎಂತಹ ಮನಸ್ಸಿನಿಂದ । **ದಾಶೇಮ**—(ಹವಿರಾದಿಗಳನ್ನು) ಅರ್ಪಿಸೋಣ ? ।

॥ ಭಾವಾರ್ಥ ॥

ಎಲೈ ಅಗ್ನಿಯೇ, ನಿನ್ನ ಮನಸ್ಸನ್ನು ಪ್ರಸನ್ನೀಕರಿಸಿಕೊಳ್ಳಲು ನಾವು ಯಾವ ರೀತಿ ಪ್ರಯತ್ನಪಡಬೇಕು ? (ನಾವು ಮಾಡುವ) ಸ್ತುತಿಯು (ನಿನಗೆ) ಹಿತಕರವಾಗಲು ಹೇಗಿರಬೇಕು ? (ನಿನಗೆ ಇಷ್ಟವಾದ) ಯಜ್ಞಗಳನ್ನು ಮಾಡಿ ಯಾವನು ಬಲಾದಿಗಳನ್ನು ಪಡೆದಿದ್ದಾನೆ ? (ನಾವು) ಯಾವ ಮನೋಭಾವದಿಂದ (ನಿನಗೆ) ಹವಿರಾದಿಗಳನ್ನು ಅರ್ಪಿಸೋಣ ?

## English Translation.

What approximation of the mind, Agni, to you, can be accomplished for our good, what can a hundred encomiums (effect.); who, by sacrifices, has obtained your might? with what intent may we offer you (oblations)?

॥ ವಿಶೇಷವಿಷಯಗಳು ॥

**ಮನಸೋ ವರಾಯ ಕಾ ಉಪೇತಿಃ—ನಿವಾರಣಾಯ ಅವಸ್ಥಾಪನಾಯ ಕೀದೃಶಮುಪಗಮನಂ ಭವೇತ್ ।** ಯಜ್ಞಮಾಡುವ ಯಜಮಾನರುಗಳಾದ ನಾವು ಯಜ್ಞಮಾಡುವುದೇ ಮೊದಲಾದ ಕರ್ಮಗಳ ಆಚರಣೆಯಿಂದ ನಿನ್ನ ಮನಸ್ಸು ನಮ್ಮಲ್ಲಿಯೇ ನೆಲಸುವಹಾಗೆಯೂ, ಬೇರೆಯವರಲ್ಲಿ ಬೆರೆಯದಿರುವಂತೆಯೂ ಇರುವಹಾಗೆ ಒಲಿಸಿಕೊಳ್ಳುವ ಉಪಾಯವು ಯಾವುದೆಂಬುದಾಗಿ ತಿಳಿದು ಅದರಂತೆ ನಡೆಸಲು ನಾವು ಸಮರ್ಥರಾಗಿಲ್ಲವು ಎಂದು ಅಗ್ನಿಯ ಮಹಿಮೆಯ ಅತಿಶಯವು ಈ ಪ್ರಶ್ನೆಯಿಂದ ತಿಳಿಯುವುದು. ವರಾಯ ಎಂಬ ಶಬ್ದಕ್ಕೆ ಸಾಯಣರು **ಮನಸಃ ವಿಷಯಾಂತರೇಭ್ಯಃ ನಿವಾರಣಂ ತ್ವಯ್ಯೇವ ಅವಸ್ಥಾಪನಂ** ನಮ್ಮ ಮನಸ್ಸನ್ನು ಬೇರೆಯ ಕಡೆಗೆ ಹೋಗದಂತೆ ತಪ್ಪಿಸಿ ನಿನ್ನಲ್ಲಿಯೇ ನೆಲಸುವಂತೆ ಮಾಡುವುದು ಎಂಬ ಅರ್ಥವು ಬರುವಹಾಗೆ ನಿನ್ನ ಮನಸ್ಸನ್ನು ಒಲಿಸಿಕೊಳ್ಳುವ ಉಪಾಯ ಎಂದು ಅರ್ಥವನ್ನು ಮಾಡಿರುವರು. ಸ್ಕಂದಸ್ವಾಮಿಗಳು—**ವರಾಯ-ವರಶಬ್ದಃ ಶ್ರೇಷ್ಠವಚನಃ** ವರಶಬ್ದವು ಶ್ರೇಷ್ಠನೆಂಬ ಅರ್ಥವನ್ನು ಬೋಧಿಸುವುದು. ಎಂದು ವ್ಯಾಖ್ಯಾನವಮಾಡಿ **ಕಾ ತವ ಉಪೇತಿಃ** ಎಲೈ ಅಗ್ನಿಯೇ ನಿನ್ನನ್ನು ಹೊಂದುವ ಶ್ರೇಷ್ಠವಾದ ಉಪಾಯವು ಯಾವುದು? ಎಂದು ಅರ್ಥ ಮಾಡಿರುವರು

**ಕೋ ವಾ ಯಜ್ಞೈಃ ದಕ್ಷಂ ತೇ ಪರಿ ಆಪ-ಕೋ ವಾ ಯಜಮಾನಃ ತವ ಸಂಬಂಧಿಭಿರ್ಯಾಗೈಃ ವೃದ್ಧಿಂ ಬಲಂ ವಾ ಪರ್ಯಾಪ್ನೋತ್ ।** ಅಗ್ನಿಯನ್ನು ಸ್ತೋತ್ರಮಾಡುವದು ಅಥವಾ ಯಜ್ಞವನ್ನು ಆಚರಿಸುವುದು ಎಂಬ ಎರಡು ವಿಧವಾದ ಕರ್ಮಾಚರಣೆಯಿಂದ ನಿನ್ನನ್ನು ಒಲಿಸಿಕೊಳ್ಳುವುದು (ನೈಯತ್ಯವು) ನಿಯತವಾಗಿ ಆಗುವುದಾದರೆ ನಮ್ಮ ಮನಸ್ಸು ಈ ಕರ್ಮಗಳನ್ನು ಆಚರಿಸಲು ನಿನ್ನಲ್ಲಿ ಸ್ಥಿರವಾಗಿ ಇರಬೇಕಾದದ್ದು ಆವಶ್ಯಕವು. ಸ್ಥಿರವಾದ ಮನಸ್ಸಿಲ್ಲದೆ ಆಚರಿಸಿದ ಕರ್ಮವಾಗಲಿ ಸ್ತುತಿಯಾಗಲಿ ಸರಿಯಾದ ಫಲವನ್ನು ಕೊಡದಿರುವ ಕಾರಣ ಆಯಾಯ ಉಪಾಸನೆಯು ಆಯಾಯ ದೇವತಾಪ್ರೀತಿಜನಕವಾಗಲು ಉಚಿತವಾಗುವುದಿಲ್ಲ ಆದ್ದರಿಂದಲೇ **ಕೇನ ಮನಸಾ ಹವೀಂಷಿ ದಾಶೇಮ** ನಿನ್ನ ಪ್ರೀತಿಯನ್ನು ಸಂಪಾದಿಸುವುದಕ್ಕಾಗಿ ನಿನಗೆ ಹವಿಸ್ಸನ್ನು ಅರ್ಪಿಸುವ ಮನಸ್ಸನ್ನು ನಮಗೆ ಅನುಗ್ರಹಿಸು ಎಂಬರ್ಥವು—ಯಾವ ಮನಸ್ಸಿನಿಂದ ನಿನಗೆ ಹವಿಸ್ಸನ್ನು ಅರ್ಪಿಸೋಣ ಎಂಬ ಪ್ರಶ್ನೆಯಿಂದ ತಿಳಿದುಬರುವುದು. ದಕ್ಷಶಬ್ದಕ್ಕೆ ಬಲ, ವೃದ್ಧಿ ಎಂದು ಅರ್ಥವನ್ನು ಸಾಯಣರು ಹೇಳಿರುವರು. ಸ್ಕಂದಸ್ವಾಮಿಗಳು—**ಕೋ ವಾ ಯಜ್ಞೈಃ ದಕ್ಷಂ ತೇ ಪರ್ಯಾಪ** ಎಂಬ ಈ ವಾಕ್ಯದಲ್ಲಿ **ದಕ್ಷಶಬ್ದೋ ಆತ್ಮವಚನಃ** ದಕ್ಷಶಬ್ದವು ಇಲ್ಲಿ ಆತ್ಮವಾಚಿಯಾಗಿರುವುದು ಎಂದು ಹೇಳಿ,

**ಉತ ಸ್ವೇನ ಕ್ರತುನಾ ಸಂ ವದೇತ ಶ್ರೇಯಾಂಸಂ ದಕ್ಷಂ ಮನಸಾ ಜಗೃಭ್ಯಾತ್ ।**

(ಋ ಸಂ. ೧೦-೩೧-೨)

ಎಂಬ ಋಕ್ಕನ್ನು ಉದಹರಿಸಿರುವರು ಮತ್ತು ದಕ್ಷ ಶಬ್ದವು **ಮನೋ ವಚನೋ ವಾ** ಮನಸ್ಸು ಎಂಬ ಅರ್ಥವನ್ನು ಬೋಧಿಸುವದು ಈ ವಿಷಯದಲ್ಲಿ--

**ಇಂದ್ರ ಶ್ರೇಷ್ಠಾನಿ ದ್ರವಿಣಾನಿ ಧೇಹಿ ಚಿತ್ತಿಂ ದಕ್ಷಸ್ಯ ಸುಭಗತ್ವಮಸ್ಮೇ ।**

( ಋ ಸಂ ೨-೨೧-೬)

ಎಂಬ ಋಕ್ಕಿನಲ್ಲಿ ದಕ್ಷಶಬ್ದವು ಮನೋವಾಚಿಯಾಗಿರುತ್ತದೆ. ಎಂದು ವ್ಯಾಖ್ಯಾನಮಾಡಿರುವರು ಇದರಿಂದ **ತವಾತ್ಮಾನಂ ಮನೋ ವಾ ಪರ್ಯಾಪ ಸರ್ವತೋ ವ್ಯಾಪ್ನೋತಿ**—ಎಲೈ ಅಗ್ನಿಯೇ, ನಿನ್ನ ಆತ್ಮನನ್ನಾಗಲಿ, ನಿನ್ನ ಮನಸ್ಸನ್ನಾಗಲಿ ಎಲ್ಲಾ ವಿಧದಿಂದಲೂ ವ್ಯಾಪಿಸುವ ಉಪಾಯವು ಯಾವುದು ? ಅದನ್ನು ತಿಳಿದು ನಾವುಗಳು ನಿನಗೆ ಹವಿಸ್ಸನ್ನು ಅರ್ಪಿಸಿ ನಿನ್ನ ಪ್ರೀತಿಯನ್ನು ಸಂಪಾದಿಸುವ ಕರ್ಮಗಳನ್ನು ಆಚರಿಸೋಣ ಎಂದು ಅರ್ಥವನ್ನು ಮಾಡಿರುವರು. ದಕ್ಷ ಶಬ್ದವು ಓಜಃ, ಪಾಜಃ, ಮೊದಲಾದ ಇಪ್ಪತ್ತೆಂಟು ಬಲನಾಮಗಳಲ್ಲಿ (ನಿ ೩-೯) ಪಠಿತವಾಗಿರುತ್ತದೆ. ಈ ಶಬ್ದವು ಅಕಾರಾಂತವಾಗಿಯೂ ಸಕಾರಾಂತವಾಗಿಯೂ ಇರುವುದು **ದಕ್ಷತಿರುತ್ಸಾಹಾರ್ಥಃ ದಕ್ಷ ಇತಿ ಸಕಾರಾಂತಂ ಬಲನಾಮ** ಎಂದು ಸ್ಕಂದಸ್ವಾಮಿಗಳು ಹೇಳಿ ಈ ವಿಷಯಸಮರ್ಥನೆಗಾಗಿ—

**ಮಿತ್ರಂ ಹುವೇ ಪೂತದಕ್ಷಂ ವರುಣಂ ಚ ರಿಶಾದಸಂ ।**

( ಋ ಸಂ ೧-೨-೭)

**ಮಿತ್ರಂ ವಯಂ ಹವಾಮಹೇ ವರುಣಂ ಸೋಮಪೀತಯೇ ।**
ಜಜ್ಞಾನಾ **ಪೂತದಕ್ಷಸಾ** ॥

( ಋ ಸಂ ೧-೨೩-೪)

ಎಂಬ ಋಕ್ಕುಗಳನ್ನು ಉದಾಹರಣೆಗಾಗಿ ಕೊಟ್ಟಿರುವರು

॥ ವ್ಯಾಕರಣಪ್ರಕ್ರಿಯಾ ॥

**ಉಪೇತಿಃ**—ಉಪ ಉಪಸರ್ಗ ಇಣ್ ಗತೌ ಧಾತು ಇದಕ್ಕೆ ಭಾವಾರ್ಥದಲ್ಲಿ **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ ತಾದಿ ನಿತ್ ಆದ ಪ್ರತ್ಯಯಾಂತವು ಪರದಲ್ಲಿರುವುದರಿಂದ **ತಾದೌ ಚ ನಿತಿ** (ಪಾ ಸೂ. ೬-೨-೫೦) ಎಂಬುದರಿಂದ ಗತಿಗೆ (ಉಪ) ಪ್ರಕೃತಿಸ್ವರ ಬರುತ್ತದೆ

**ವರಾಯ**—ವೃಞ್ ವರಣೇ ಧಾತು ಪ್ರಯೋಜಕವ್ಯಾಪಾರತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿಗೆ **ಗ್ರಹವೃದೃನಿಶ್ಚಿಗಮಶ್ಚ** (ಪಾ. ಸೂ ೩-೩-೫೮) ಎಂಬುದರಿಂದ ಅಪ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ ಅಪ್ ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ

**ಭುವತ್**—ಭೂ ಸತ್ತಾಯಾಂ, ಧಾತು. ಲೇಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚಲೋಪಃಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಅದರ ಇಕಾರಕ್ಕೆ ಲೋಪ **ಲೇಟೋಽಡಾಟೌ** (ಪಾ ಸೂ ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ **ಬಹುಲಂ ಛಂದಸಿ** ಸೂತ್ರದಿಂದ ಶಪಿಗೆ ಲುಕ್. ಕೇವಲ ತಿಙ್ ಪರದಲ್ಲಿರುವುದರಿಂದ **ಭೂಸುವೋಸ್ತಿಙಿ** (ಪಾ. ಸೂ ೭-೩-೮೮) ಎಂಬುದರಿಂದ ಧಾತುವಿನ ಇಕ್ಕಿಗೆ

ಗುಣನಿಷೇಧ. **ಅಚಿಶ್ನುಧಾತುಭ್ರುವಾಂ** ಸೂತ್ರದಿಂದ ಉವಙಾದೇಶ. ಭುವತ್ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಸಿಪ್ ಪಿತ್ತಾದುದರಿಂದ ಅನುದಾತ್ತ ಆಗ ಧಾತುಸ್ವರ ಉಳಿಯುತ್ತದೆ

**ದಕ್ಷಂ**—ದಕ್ಷ ವೃದ್ಧೌ ಧಾತು ಇದಕ್ಕೆ ಭಾವಾರ್ಥದಲ್ಲಿ ಅಥವಾ ಕರಣಾರ್ಥದಲ್ಲಿ ಘಞ್ ಪ್ರತ್ಯಯ. ಞಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. **ದ್ವಿತೀಯಾ ಏಕವಚನಾಂತರೂಪ.**

**ಆಪ**—ಆಪ್ಲೃ ವ್ಯಾಪ್ತೌ ಧಾತು ಲಿಟ್ ಪ್ರಥಮಪುರುಷ ಏಕವಚನಾಂತರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ದಾಶೇಮ**—ದಾಶೃ ದಾನೇ, ಧಾತು. ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ನಿತ್ಯಂ ಙಿತಃ** (ಪಾ. ಸೂ. ೩-೪-೯೯) ಎಂಬುದರಿಂದ ಸಕಾರಲೋಪ. ಯಾಸುಟಾಗಮ. ಇಯಾದೇಶ ಯಲೋಪ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೧ ॥



॥ ಸಂಹಿತಾಪಾಠಃ ॥

ಏಹ್ಯಗ್ನ ಇಹ ಹೋತಾ ನಿ ಷೀದಾದಬ್ಧಃ ಸು ಪುರಏತಾ ಭವಾ ನಃ ।
ಅವತಾಂ ತ್ವಾ ರೋದಸೀ ವಿಶ್ವಮಿನ್ವೇ ಯಜಾ ಮಹೇ ಸೌಮನಸಾಯ ದೇವಾನ್ ॥ ೨ ॥

॥ ಪದಪಾಠಃ ॥

ಆ । ಇಹಿ । ಅಗ್ನೇ । ಇಹ । ಹೋತಾ । ನಿ । ಸೀದ । ಅದಬ್ಧಃ । ಸು । ಪುರಃ ಽ- ಏತಾ । ಭವ । ನಃ ।

ಅವತಾಂ । ತ್ವಾ । ರೋದಸೀ ಇತಿ । ವಿಶ್ವಮಿನ್ವೇ ಇತಿ ವಿಶ್ವಂ ಽ ಇನ್ವೇ । ಯಜ । ಮಹೇ । ಸೌಮನಸಾಯ । ದೇವಾನ್ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ಏಹಿ । ಆಗಚ್ಛ । ಇಹಾಸ್ಮಿನ್ಯಜ್ಞೇ ಹೋತಾ ದೇವಾನಾಮಾಹ್ವಾತಾ ಸನ್ನಿ ಷೀದ । ಉಪವಿಶ । ನೋಽಸ್ಮಾಕಂ ಪುರಏತಾ ಪುರತೋ ಗಂತಾ ಸು ಭವ । ಸುಷ್ಠು ಭವ । ಯಸ್ಮಾತ್ತ್ವಮದಬ್ಧೋ ರಾಕ್ಷಸಾದಿಭಿರಹಿಂಸ್ಯೋಽಸಿ । ತಾದೃಶಂ ತ್ವಾಂ ವಿಶ್ವಮಿನ್ವೇ ಸರ್ವಂ ವ್ಯಾಪ್ನುವತ್ಯೌ ರೋದಸೀ ದ್ಯಾವಾ- ಪೃಥಿವ್ಯೌ ತ್ವಾ ತ್ವಾಮವತಾಂ । ರಕ್ಷತಾಂ । ಆಗತ್ಯೋಪವಿಶ್ಯ ಚ ದ್ಯಾವಾಪೃಥಿವೀಭ್ಯಾಂ ರಕ್ಷಿತಶ್ಚ ಸನ್ ಮಹೇ ಮಹತೇ ಸೌಮನಸಾಯ ಸೌಮನಸ್ಯಾಯ ದೇವಾನ್ದಾನಾದಿಗುಣಯುಕ್ತಾನಿಂದ್ರಾದೀನ್ಯಜ । ಹವಿರ್ಭಿಃ ಪೂಜಯ ॥ ನಿ ಷೀದ । ಸದೇರಪ್ರತೇರಿತಿ ಷತ್ವಂ । ಸೌಮನಸಾಯ । ಸುಮನಸೋ ಭಾವಃ ಸೌಮನಸಂ । ತಸ್ಯೇದಮಿತಿ ಸಂಬಂಧಸಾಮಾನ್ಯ ಇತ್ಯಣ್ಪ್ರತ್ಯಯಃ । ಸ ಚಾತ್ರ ಭಾವಲಕ್ಷಣೇ ಸಂಬಂಧ- ವಿಶೇಷೇ ಪರ್ಯವಸ್ಯತಿ । ಯದ್ವಾ । ಹಾಯನಾಂತಯುವಾದಿಭ್ಯೋಽಣ್ । ಪಾ. ೫-೧-೧೩೦ । ಇತಿ ಭಾವೇಽಣ್ । ಯುವಾದಿತ್ವಸ್ಯ ಪಾಠೋ ದ್ರಷ್ಟವ್ಯಃ ॥

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ಏಹಿ**—ಬಾ । **ಇಹ**—ಈ ಯಜ್ಞದಲ್ಲಿ । **ಹೋತಾ**—(ದೇವತೆಗಳನ್ನು) ಆಹ್ವಾನಮಾಡುವವನಾಗಿ । **ನಿ ಷೀದ**--ಕುಳಿತುಕೋ । **ಅದಬ್ಧಃ**—ರಾಕ್ಷಸಾದಿಗಳಿಂದ ಅಹಿಂಸ್ಯನಾದ (ನೀನು) । **ನಃ**—ನಮ್ಮ । **ಪುರ ಏತಾ**—ಮುಂದೆ ಹೋಗುವವನಾಗಿ (ಮುಂದಾಳಾಗಿ) । **ಸು ಭವ**—ಚೆನ್ನಾಗಿ ಆಗು । **ವಿಶ್ವಮಿನ್ವೇ**--ಎಲ್ಲವನ್ನೂ ವ್ಯಾಪಿಸಿರುವ । **ರೋದಸೀ**—ಭೂಮ್ಯಾಕಾಶಗಳು । **ತ್ವಾ**—(ಅಂತಹ) ನಿನ್ನನ್ನು । **ಅವತಾಂ**—ರಕ್ಷಿಸಲಿ । **ಮಹೇ**—ಹೆಚ್ಚಾದ । **ಸೌಮನಸಾಯ**—ಮನಃಪ್ರಸಾದಕ್ಕಾಗಿ । **ದೇವಾನ್**—(ಇಂದ್ರಾದಿ) ದೇವತೆಗಳನ್ನು । **ಯಜ**—(ಹವಿರಾದಿಗಳಿಂದ) ಪೂಜಿಸು

॥ ಭಾವಾರ್ಥ ॥

ಎಲೈ ಅಗ್ನಿಯೇ, ಇಲ್ಲಿಗೆ ಬಾ, (ದೇವತೆಗಳ) ಹೋತೃವೇ, ಇಲ್ಲಿ ಆಸೀನನಾಗು, ರಾಕ್ಷಸಾದಿಗಳಿಂದ ಅಪ್ರತಿ ಹುತನಾದ ನೀನು ನಮಗೆ ಮುಂದಾಳಾಗು, ಸರ್ವವ್ಯಾಪಿಗಳಾದ ಭೂಮ್ಯಾಕಾಶಗಳು ನಿನ್ನನ್ನು ರಕ್ಷಿಸಲಿ, ಇಂತಹ ನೀನು, ದೇವತೆಗಳಿಗೆ ತೃಪ್ತಿಯಾಗುವಂತೆ ಹವಿರಾದಿಗಳಿಂದ ಅವರನ್ನು ಪೂಜಿಸು

## English Translation

Come, Agni, hither, invoker (of the Gods), sit down, be our preceder; for you are irresistable, may the all-expansive heaven and earth defend you, that you may worship the Gods to their great satisfaction.

॥ ವಿಶೇಷವಿಷಯಗಳು ॥

**ವಿಶ್ವಮಿನ್ವೇ ರೋದಸೀ ತ್ವಾ ಅವತಾಂ—ಸರ್ವಂ ವ್ಯಾಪ್ನುವಂತ್ಯೌ ದ್ಯಾವಾಪೃಥಿವ್ಯೌ ತ್ವಾಂ ರಕ್ಷತಾಂ ।** ಎಲ್ಲವನ್ನೂ ವ್ಯಾಪಿಸಿಕೊಂಡಿರುವ ಭೂಮ್ಯಂತರಿಕ್ಷಗಳು ರಾಕ್ಷಸರಿಂದ ಯಾವ ವಿಧವಾದ ಹಿಂಸೆಗೂ ಒಳಗಾಗದೆ ಇರುವ ನಿನ್ನನ್ನು ರಕ್ಷಿಸಲಿ ಎಂದು ಅಗ್ನಿಯ ವಿಷಯದಲ್ಲಿ ಯಾಗಮಾಡುವವರ ಪ್ರಾರ್ಥನೆಯು **ಉರು, ತುವಿ** ಮೊದಲಾದ ಬಹು ಎಂಬ ಅರ್ಥವನ್ನು ಬೋಧಿಸುವ ಹನ್ನೆರಡು ನಾಮಗಳಲ್ಲಿ (ನಿ. ೩-೧೩) ಪಠಿತ ವಾಗಿರುವ ವಿಶ್ವಶಬ್ದವು ಇಲ್ಲಿ **ಸರ್ವ** ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ

ಅಗ್ನಿಯನ್ನು ರಕ್ಷಿಸುವ ಮಟ್ಟಿನ ಮಹಿಮೆಯು ದ್ಯಾವಾಪೃಥಿವಿಗಳಿಗೆ ಇರುವುದನ್ನು ಯಾಸ್ಕರು ನಿರುಕ್ತದಲ್ಲಿ —

**ಕತರಾ ಪೂರ್ವಾ ಕತರಾಪರಾಯೋಃ ಕಥಾ ಜಾತೇ ಕವಯಃ ಕೋ ವಿವೇದ ।**
**ವಿಶ್ವಂ ತ್ಮನಾ ಬಿಭೃತೋ ಯದ್ಧ ನಾಮ ವಿ ವರ್ತೇತೇ ಅಹನೀ ಚಕ್ರಿಯೇವ ॥**

(ಋ ಸಂ ೧-೧೮೫-೧)

ಎಂಬ ಋಕ್ಕನ್ನು ಉದಹರಿಸಿ **ದ್ಯಾವಾಪೃಥಿವ್ಯೋರ್ಮಹಿಮಾನಮಾಚಷ್ಟೇ** ಎಂದು ಹೇಳಿರುವರು. ಈ ದ್ಯಾವಾ ಪೃಥಿವಿಗಳಿಗೆ ಇರುವ ಪೂರ್ವಾಪರಭಾವವು ಸ್ಪಷ್ಟವಾಗಿ ತಿಳಿಯಲು ಶಕ್ಯವಲ್ಲವು. ಇವು ಒಟ್ಟಿಗೆ ಉತ್ಪನ್ನವಾಗಿರು ತ್ತವೆಯೋ ಅಥವಾ ಯಾವ ರೀತಿಯಿಂದ ಉತ್ಪನ್ನವಾಗಿರುತ್ತವೆಯೋ ಅದನ್ನು ಯಾವನೂ ತಿಳಿದಿಲ್ಲವು ಆದರೆ ಶಾಸ್ತ್ರಗಳ ಪ್ರಾಮಾಣ್ಯದಿಂದ **ತೇ ಅಣ್ಡಕಪಾಲೇ ರಜತಂ ಚ ಸುವರ್ಣಂ ಚಾಭವತಾಂ, ತದ್ಯತ್ ರಜತಂ ಸೇಯಂ ಪೃಥಿವೀ ಯತ್ ಸುವರ್ಣಂ ಸಾ ದ್ಯೌರಿತಿ ।** ಅಣ್ಡದ ಎರಡು ಭಾಗಗಳಾದವು. ಅವುಗಳಲ್ಲಿ ಒಂದು ಬೆಳ್ಳಿಯದಾಯಿತು. ಇನ್ನೊಂದು ಚಿನ್ನದ್ದಾಯಿತು. ಬೆಳ್ಳಿಯ ಕಪಾಲವು ಭೂಮಿಯಾಗಿಯೂ, ಚಿನ್ನದ ಕಪಾಲವು ದ್ಯುಲೋಕವಾಗಿಯೂ ಆಯಿತು ಎಂಬುವುದರಿಂದ ಈ ದ್ಯಾವಾಪೃಥಿವಿಗಳು ಒಟ್ಟಿಗೆ ಉತ್ಪನ್ನಗಳಾಗಿರುವುವು ಎಂದು ತಿಳಿದುಬರುವುದು ಮತ್ತು ಈ ದ್ಯಾವಾಪೃಥಿವಿಗಳು ಎಲ್ಲವನ್ನೂ, ಎಲ್ಲಾ ಪ್ರಾಣಿಗಳನ್ನೂ ಧರಿಸಿರುವುವು. ಅಹೋ ರಾತ್ರಿಗಳೂ ಕೂಡ ರಥದ ಚಕ್ರಗಳ ಹಾಗೆ ಇವುಗಳಿಗೆ ಸಂಬಂಧಪಟ್ಟಿರುತ್ತವೆ ಎಂದು ಈ ಮಂತ್ರದ ಅರ್ಥವು. ಇದರಿಂದ ದ್ಯಾವಾಪೃಥಿವಿಗಳ ಮಹಿಮೆಯು ಉಕ್ತವಾಗಿರುವುದು.

**ಮಹೇ—ಮಹತೇ, ಸೌಮನಸಾಯ, ಸೌಮನಸ್ಯಾಯ—**ಯಾಗಮಾಡುವ ನಮಗೆ ಅತಿಶಯವಾದ ಗುಣಗಳಿಂದ ಕೂಡಿದ ಮನಸ್ಸು ಉಂಟಾಗುವುದಕ್ಕಾಗಿ ದೇವತೆಗಳನ್ನು ಹವಿರ್ಭಾಗಗಳಿಂದ ಪೂಜಿಸು ಎಂದು ಅಗ್ನಿಯನ್ನು ಕುರಿತು ಪ್ರಾರ್ಥನೆಯು.

॥ ವ್ಯಾಕರಣಪ್ರಕ್ರಿಯಾ ॥

**ಏಹಿ—**ಆ+ಇಹಿ ಏಹಿ-ಆಙ್ ಉಪಸರ್ಗ ಇಣ್ ಗತೌ ಧಾತು ಹಿಗೆ ಅಪಿತ್ವವಿಧಾನಮಾಡಿರುವುದರಿಂದ ತನ್ನಿಮಿತ್ತವಾಗಿ ಧಾತುವಿಗೆ ಗುಣಬರುವುದಿಲ್ಲ ಉಪಸರ್ಗದೊಡನೆ ಗುಣಸಂಧಿ ತಿಙಂತನಿಘಾತಸ್ವರ ಬರುತ್ತದೆ

**ನಿಷೀದ—**ನಿ ಉಪಸರ್ಗ ಷದ್ಲೃ ವಿಶರಣಗತ್ಯವಸಾದನೇಷು ಧಾತು ಲೋಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ **ಸೇರ್ಹ್ಯಪಿಚ್ಚ** ಎಂಬುದರಿಂದ ಅದಕ್ಕೆ ಹಿ ಆದೇಶ ಶಪ್ ವಿಕರಣ. **ಪಾಘ್ರಾಧ್ಮಾಸ್ಥಾ—**(ಪಾ ಸೂ ೭-೩-೭೮) ಎಂಬುದರಿಂದ ಧಾತುವಿಗೆ ಸೀದಾದೇಶ. **ಅತೋಹೇಃ** (ಪಾ ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್ **ಸದಿರಪ್ರತೇಃ** (ಪಾ. ಸೂ ೮-೩-೬೬) ಪ್ರತಿಭಿನ್ನವಾದ ಉಪಸರ್ಗ ದಲ್ಲಿರುವ ನಿಮಿತ್ತದ (ಇಣ್) ಪರದಲ್ಲಿರುವ ಸದ್ ಧಾತುವಿನ ಸಕಾರಕ್ಕೆ ಷತ್ವ. ಎಂಬುದರಿಂದ ಇಲ್ಲಿ ಉಪಸರ್ಗದಲ್ಲಿ ರುವ ಇಕಾರದ ಪರದಲ್ಲಿರುವುದರಿಂದ ಷತ್ವ ತಿಙಂತಕ್ಕೆ ನಿಘಾತಸ್ವರ ಬರುತ್ತದೆ

**ಅದಬ್ಧಃ—**ನ ದಬ್ಧಃ ಅದಬ್ಧಃ ನಞ್‌ತತ್ಪುರುಷಸಮಾಸ **ತತ್ಪುರುಷೇ ತುಲ್ಯಾರ್ಥ—**(ಪಾ ಸೂ. ೬-೨-೨) ಎಂಬುದರಿಂದ (ನಞ್) ಪೂರ್ವಪದ ಪ್ರಕೃತಿಸ್ವರ ಬರುತ್ತದ

**ಪುರಏತಾ—**ಇಣ್ ಗತೌ ಧಾತು ಇದಕ್ಕೆ ಕರ್ತ್ರರ್ಥದಲ್ಲಿ ತೃಚ್ ಪ್ರತ್ಯಯ ತನ್ನಿಮಿತ್ತವಾಗಿ ಧಾತುವಿಗೆ ಗುಣ ಪುರಃಏತಾ ಪುರ ಏತಾ. **ಗತಿಕಾರಕೋಪಪದಾತ್ ಕೃತ್** (ಪಾ ಸೂ ೬-೨-೧೩೯) ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ ಏತಾ ಎಂಬುದು **ಚಿತಃ** ಸೂತ್ರದಿಂದ ಅಂತೋದಾತ್ತವಾಗುತ್ತದೆ

**ಅವತಾಂ—**ಅವ ರಕ್ಷಣೇ ಧಾತು. ಲೋಟ್ ಪ್ರಥಮಪುರುಷದ್ವಿವಚನದಲ್ಲಿ ತಸ್ ಪ್ರತ್ಯಯ. **ಲೋಟೋ ಲಙ್ವತ್** ಸೂತ್ರದಿಂದ ಲಙ್ವದ್ಭಾವವಿರುವುದರಿಂದ **ತಸ್‌ಥಸ್‌ಥ—**(ಪಾ ಸೂ ೩-೪-೧೦೧) ಎಂಬುದರಿಂದ ತಸಿಗೆ ತಾಮಾದೇಶ. ಶಪ್ ವಿಕರಣ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಅದುಪದೇಶದ ಪರದಲ್ಲಿ ಲಸಾರ್ವಧಾತುಕವು (ತಾಮ್) **ತಾಸ್ಯನುದಾತ್ತೇತ್—**(ಪಾ. ಸೂ ೬-೧-೧೮೬) ಎಂಬುದರಿಂದ ಅನುದಾತ್ತವಾಗು ವುದರಿಂದ ಧಾತುಸ್ವರ ಉಳಿಯುತ್ತದೆ

**ಯಜ—**ಯಜ ದೇವಪೂಜಾಸಂಗತಿಕರಣದಾನೇಷು. ಲೋಣ್ಮಧ್ಯಮ-ಪುರುಷ ಏಕವಚನರೂಪ ಹಿಂದೆ ಭವ ಎಂಬಲ್ಲಿಯೂ ಇಲ್ಲಿಯೂ **ದ್ವ್ಯಚೋಽತಸ್ತಿಙಃ** (ಪಾ ಸೂ ೬-೩-೧೩೫) ಎಂಬುದರಿಂದ ಎರಡು ಸ್ವರವಿರು ವುದರಿಂದ ಸಂಹಿತಾರ್ಥದಲ್ಲಿ ದೀರ್ಘ ಬರುತ್ತದೆ.

**ಮಹೇ**—ಮಹತ್ ಶಬ್ದ ಚತುರ್ಥೀ ಏಕವಚನದಲ್ಲಿ ಮಹತೇ ಎಂದು ರೂಪವಾದಾಗ ಛಾಂದಸವಾಗಿ ತಕಾರಲೋಪಬರುತ್ತದೆ.

**ಸೌಮನಸಾಯ**—ಸುಮನಸೋ ಭಾವಃ ಸೌಮನಸಮ್. **ತಸ್ಯೇದಂ** (ಪಾ ಸೂ. ೪-೩-೧೨೦) ಎಂಬುದರಿಂದ ಸಂಬಂಧಸಾಮಾನ್ಯತೋರುವಾಗ ಅಣ್ ಪ್ರತ್ಯಯ. ಇಲ್ಲಿ ಭಾವರೂಪಸಂಬಂಧವಿಶೇಷದಲ್ಲಿ ಪರ್ಯವಸಾನವನ್ನು ಹೊಂದುತ್ತದೆ. ಣಿತ್ತಾದುದರಿಂದ **ತದ್ಧಿತೇಷ್ವಚಾಮಾದೇಃ** (ಪಾ. ಸೂ. ೭-೨-೧೧೭) ಎಂಬುದರಿಂದ ಆದಿವೃದ್ಧಿ ಅಥವಾ **ಹಾಯನಾಂತಯುವಾದಿಭ್ಯೋಽಣ್** (ಪಾ. ಸೂ. ೫-೧-೧೩೦) ಎಂಬುದರಿಂದ ಭಾವಾರ್ಥದಲ್ಲಿ ಅಣ್ ಪ್ರತ್ಯಯ. ಯುವಾದಿಗಣದಲ್ಲಿ ಇದು ಪಠಿತವಾಗಿದೆ. ಹಿಂದಿನಂತೆ ಪ್ರಕ್ರಿಯಾ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ ॥ ೨ ॥



॥ ಸಂಹಿತಾಪಾಠಃ ॥

ಪ್ರ ಸು ವಿಶ್ವಾನ್ರಕ್ಷಸೋ ಧಕ್ಷ್ಯಗ್ನೇ ಭವಾ ಯಜ್ಞಾನಾಮಭಿಶಸ್ತಿಪಾವಾ ।

ಅಥಾ ವಹ ಸೋಮಪತಿಂ ಹರಿಭ್ಯಾಮಾತಿಥ್ಯಮಸ್ಮೈ ಚಕೃಮಾ ಸುದಾವ್ನೇ ॥ ೩ ॥

॥ ಪದಪಾಠಃ ॥

**ಪ್ರ । ಸು । ವಿಶ್ವಾನ್ । ರಕ್ಷಸಃ । ಧಕ್ಷಿ । ಅಗ್ನೇ । ಭವ । ಯಜ್ಞಾನಾಂ । ಅಭಿಶಸ್ತಿಽಪಾವಾ ।**

**ಅಥ । ಆ । ವಹ । ಸೋಮಽಪತಿಂ । ಹರಿಽಭ್ಯಾಂ । ಆತಿಥ್ಯಂ । ಅಸ್ಮೈ । ಚಕೃಮ । ಸುಽದಾವ್ನೇ ॥ ೩ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ವಿಶ್ವಾನ್ಸರ್ವಾನ್ರಕ್ಷಸೋ ರಾಕ್ಷಸಾನ್ಪ್ರ ಸು ಧಕ್ಷಿ । ಪ್ರಕರ್ಷೇಣ ದಹ । ದಗ್ಧ್ವಾ ಚ ಯಜ್ಞಾನಾಮಸ್ಮಾಭಿರನುಷ್ಠೇಯಾನಾಂ ಯಾಗಾನಾಮಭಿಶಸ್ತಿಪಾವಾಭಿಶಸ್ತೇರ್ಹಿಂಸಾಯಾಃ ಪಾತಾ ರಕ್ಷಿತಾ ಭವ । ಅಥಾನಂತರಂ ಸೋಮಪತಿಂ ಸರ್ವೇಷಾಂ ಸೋಮಾನಾಂ ಪಾಲಕಮಿಂದ್ರಂ ಹರಿಭ್ಯಾಂ ತದೀಯಾ-ಶ್ವಾಭ್ಯಾಮಾ ವಹ । ಅಸ್ಮದ್ಯಜ್ಞಂ ಪ್ರಾಪಯ । ಆಗತಾಯಾಸ್ಮೈ ಸುದಾವ್ನೇ ಶೋಭನಸ್ಯ ಫಲಸ್ಯ ದಾತ್ರ ಇಂದ್ರಾಯಾತಿಥ್ಯಮತಿಥ್ಯರ್ಹಂ ಸತ್ಕಾರಂ ಚಕೃಮ । ಕುರ್ಮಃ ॥ ಧಕ್ಷಿ । ದಹ ಭಸ್ಮೀಕರಣೇ । ಬಹುಲಂ ಛಂದಸೀತಿ ಶಪೋ ಲುಕ್ । ಧತ್ವಭಷ್ಭಾವಕತ್ವಷತ್ವಾನಿ । ಅಭಿಶಸ್ತಿಪಾವಾ । ಶಸು ಹಿಂಸಾಯಾಂ । ಅಸ್ಮಾದಭಿಪೂರ್ವಾದ್ಭಾವೇ ಕ್ತಿನ್ । ಅಭಿಶಸ್ತೇಃ ಪಾತೀತ್ಯಭಿಶಸ್ತಿಪಾವಾ । ಪಾ ರಕ್ಷಣೇ । ಆತೋ ಮನಿನ್ನಿತಿ ವನಿಪ್ । ಸೋಮಪತಿಂ । ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರತ್ವಂ । ಸುದಾವ್ನೇ । ಪೂರ್ವವದ್ದದಾತೇರ್ವನಿಪ್ । ಅಲ್ಲೋಪೋಽನ ಇತ್ಯಾಕಾರಲೋಪಃ ॥**

॥ ಪ್ರತಿಪದಾರ್ಥ ॥

**ಅಗ್ನೇ**—ಎಲೈ ಅಗ್ನಿಯೇ । **ವಿಶ್ವಾನ್**--ಎಲ್ಲಾ । **ರಕ್ಷಸಃ**—ರಾಕ್ಷಸರನ್ನೂ । **ಪ್ರ ಸು ಧಕ್ಷಿ**--ಚೆನ್ನಾಗಿ ದಹಿಸು । **ಯಜ್ಞಾನಾಂ**—(ನಮ್ಮಿಂದ ಮಾಡಲ್ಪಡುವ) ಯಜ್ಞಗಳಿಗೆ । **ಅಭಿಶಸ್ತಿಪಾವಾ**—ಹಿಂಸೆಯಿಂದ ರಕ್ಷಿಸುವವನಾಗಿ । **ಭವ**--ಆಗು । **ಅಥ**—ಅನಂತರ । **ಸೋಮಪತಿಂ**--ಸೋಮಪತಿಯಾದ ಇಂದ್ರನನ್ನು । **ಹರಿಭ್ಯಾಂ**—(ಅವನ) ಎರಡು ಅಶ್ವಗಳಿಂದ । **ಆ ವಹ**—(ನಮ್ಮ ಯಜ್ಞಕ್ಕೆ) ಬರುವಂತೆ ಮಾಡು । **ಅಸ್ಮೈ**—(ಬಂದಂಥಾ) ಈ । **ಸುದಾವ್ನೇ**—ಒಳ್ಳೆಯ ಫಲಗಳನ್ನು ಕೊಡುವ ಇಂದ್ರನಿಗೆ । **ಆತಿಥ್ಯಂ**—ಅತಿಥಿಸತ್ಕಾರವನ್ನು । **ಚಕೃಮ**—ಮಾಡೋಣ

॥ ಭಾವಾರ್ಥ ॥

ಎಲೈ ಅಗ್ನಿಯೇ, ಎಲ್ಲಾ ರಾಕ್ಷಸರನ್ನೂ ನಾಶಮಾಡಿ, ನಮ್ಮ ಯಜ್ಞಗಳನ್ನು ನಿರ್ಬಾಧವನ್ನಾಗಿ ಮಾಡು ಅನಂತರ ಸೋಮಪತಿಯಾದ ಇಂದ್ರನನ್ನು ಯಾಗಶಾಲೆಗೆ ಬರಮಾಡು. ಆಗತನಾದ, ಸತ್ಫಲಪ್ರದಾತನಾದ ಇಂದ್ರನಿಗೆ ಅತಿಥಿಸತ್ಕಾರಮಾಡುತ್ತೇವೆ

## English Translation

Utterly consume all the Rakshasas, Agni, and be the protecter of our sacrifices against interruption Bring hither the guardian of the Soma-Juice (Indra), with his steeds, that we may show hospitality to the giver of good.

॥ ವಿಶೇಷವಿಷಯಗಳು ॥

**ಅಭಿಶಸ್ತಿಪಾವಾ—ಶಸು ಹಿಂಸಾಯಾಂ । ಪಾ ರಕ್ಷಣೇ । ಅಭಿಶಸ್ತೇರ್ಹಿಂಸಾಯಾಃ ಪಾತಾ ರಕ್ಷಿತಾ ಭವ ।** ಯಜ್ಞಗಳನ್ನು ಆಚರಿಸುವ ಯಜಮಾನರಿಗೂ ಮತ್ತು ಯಾಗಗಳಿಗೂ ಯಾವ ವಿಧವಾದ ಹಿಂಸೆಯೂ ಆಗದಿರುವಂತೆ ರಕ್ಷಿಸುವವನಾಗಿರು ಎಂದು ಅಗ್ನಿಯನ್ನು ಪ್ರಾರ್ಥಿಸುವುದು ಎಂದು ಸಾಯಣರೂ, ಯಾಗಗಳಿಗೂ ಯಾಗಮಾಡುವ ನಮಗೂ, ಹಿಂಸೆಮಾಡುವವರಿಂದಲೂ, ಹಿಂಸೆಯಿಂದಲೂ ತೊಂದರೆಯಾಗದಿರುವಂತೆ ರಕ್ಷಿಸುವವನಾಗು ಎಂದು ಸ್ಕಂದಸ್ವಾಮಿಗಳೂ ಅರ್ಥವನ್ನು ಮಾಡಿರುವರು.

**ಸೋಮಪತಿಂ—ಸರ್ವೇಷಾಂ ಸೋಮಾನಾಂ ಪಾಲಕಂ—ಪಾ ರಕ್ಷಣೇ ।** ಎಂಬ ಧಾತುವಿನಿಂದ ನಿಷ್ಪನ್ನವಾದ ಪತಿಶಬ್ದಕ್ಕೆ ರಕ್ಷಿಸುವವನು ಎಂದು ಅರ್ಥವು. ದೇವತೆಗಳನ್ನು ಸಂತೋಷಪಡಿಸುವ ಹವಿಸ್ಸುಗಳ ರೂಪದಿಂದ ಇರುವ ದ್ರವ್ಯವು ಸೋಮಪದಕ್ಕೆ ಅರ್ಥವು. ಅಥವಾ ಹವಿರ್ಭಾಗಗಳನ್ನು ಸ್ವೀಕರಿಸುವ ಮಧ್ಯಸ್ಥಾನ ದೇವತೆಗಳು ಎಂದು ಅರ್ಥವು ಇವೆಲ್ಲಕ್ಕೂ ಇಂದ್ರನು ರಕ್ಷಕನಾಗಿರುವನು

**ಹರಿಭ್ಯಾಂ ಆ ವಹ—ತದೀಯಾಶ್ವಾಭ್ಯಾಂ ಇಂದ್ರಂ ಅಸ್ಮದ್ಯಜ್ಞಂ ಪ್ರಾಪಯ—ಹರೀ ಇಂದ್ರಸ್ಯ** (ನಿ. ೧–೧೫) ಇಂದ್ರನ ರಥದ ಕುದುರೆಗಳಿಗೆ ಹರೀ ಎಂದು ಹೆಸರು. ಇಂದ್ರನನ್ನು (ಅವನ ಕುದುರೆಗಳನ್ನು ಕಟ್ಟಿದ ರಥದಿಂದ) ನಮ್ಮ ಯಜ್ಞಕ್ಕೆ ಬರುವಹಾಗೆ ಮಾಡು. ಎಂದು ಅಗ್ನಿಯನ್ನು ಯಜ್ಞ ಮಾಡುವವರು ಪ್ರಾರ್ಥಿಸುವರು

**ಸುದಾವ್ನೇ—ಶೋಭನಸ್ಯ ಫಲಸ್ಯ ದಾತ್ರೇ** ಉತ್ತಮವಾದ ಸುಖಕರವಾದ ಫಲವನ್ನು ಯಾಗಮಾಡುವವರಿಗೂ ಇತರರಿಗೂ ಕೊಡುವವನಾದುದರಿಂದ ಇಂದ್ರನಿಗೆ ಈ ಪದದ ಅರ್ಥವು ಸರಿಯಾಗಿ ಒಪ್ಪುವುದಾಗಿರುವುದು

॥ ವ್ಯಾಕರಣಪ್ರಕ್ರಿಯಾ ॥

ಧಕ್ಷಿ—ದಹ ಭಸ್ಮೀಕರಣೇ ಧಾತು. ಇದಕ್ಕೆ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ **ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ** ಎಂಬುದರಿಂದ ಸಿಪ್ಪಿಗೆ ಹಿ ಆದೇಶ ಬರುವುದಿಲ್ಲ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್ ದಹ್+ಸಿ ಎಂದಿರುವಾಗ **ಹೋಢಃ** (ಪಾ ಸೂ ೮–೨ ೩೧) ಎಂಬುದರಿಂದ ಹಕಾರಕ್ಕೆ ಢತ್ವ **ಏಕಾಚೋಬಶೋಭಷ್—**(ಪಾ ಸೂ. ೮–೨–೩೭) ಎಂಬುದರಿಂದ ಸಕಾರನಿಮಿತ್ತವಾಗಿ ದಕಾರರೂಪ ಬಶ್ಶಿಗೆ ಧತ್ವ. **ಷಢೋಃ ಕಃ ಸಿ** (ಪಾ ಸೂ. ೮–೨–೪೧) ಎಂಬುದರಿಂದ ಢಕಾರಕ್ಕೆ ಸಕಾರಪರದಲ್ಲಿರುವುದರಿಂದ ಕತ್ವ. ಆಗ ಕಕಾರ ನಿಮಿತ್ತವಾಗಿ ಪ್ರತ್ಯಯಸಕಾರಕ್ಕೆ **ಆದೇಶಪ್ರತ್ಯಯಯೋಃ** (ಪಾ ಸೂ ೮–೩–೫೯) ಎಂಬುದರಿಂದ ಷತ್ವ. ಧಕ್ಷಿ ಎಂದು ರೂಪವಾಗುತ್ತದೆ

**ಭವ**—ಭೂ ಸತ್ತಾಯಾಂ ಧಾತು ಲೋಟ್ ಮಧ್ಯಮಪುರುಷ ಏಕವಚನರೂಪ ಹಿಂದೆ ಆಮಂತ್ರಿತವಿರುವುದರಿಂದ **ಆಮಂತ್ರಿತಂ ಪೂರ್ವಮವಿದ್ಯಮಾನವತ್** (ಪಾ.ಸೂ. ೮–೧–೭೨) ಎಂಬುದರಿಂದ ಅದಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ ಅದರ ಹಿಂದೆ ತಿಙಂತವಿರುವುದರಿಂದ ಅತಿಙಃ ಎಂದು ಪರ್ಯುದಾಸಮಾಡಿರುವುದರಿಂದ ನಿಘಾತ ಸ್ವರ ಬರುವುದಿಲ್ಲ ಧಾತುಸ್ವರ ಉಳಿಯುತ್ತದೆ.

**ಅಭಿಶಸ್ತಿಪಾವಾ**—ಶಸು ಹಿಂಸಾಯಾಂ ಧಾತು ಇದಕ್ಕೆ ಅಭಿ ಎಂಬ ಉಪಸರ್ಗವು ಪೂರ್ವಪದದಲ್ಲಿರುವಾಗ ಭಾವಾರ್ಥದಲ್ಲಿ **ಸ್ತ್ರಿಯಾಂಕ್ತಿನ್** (ಪಾ. ಸೂ. ೩-೩-೯೪) ಎಂಬುದರಿಂದ ಕ್ತಿನ್ ಪ್ರತ್ಯಯ ಅಭಿಶಸ್ತಿ ಎಂದು ರೂಪವಾಗುತ್ತದೆ. ಹಿಂಸಾ ಎಂದರ್ಥ. ಅಭಿಶಸ್ತೇಃ (ಪಂಚಮೀ) ಪಾತೀತಿ ಅಭಿಶಸ್ತಿಪಾವಾ. ಪಾ ರಕ್ಷಣೇ ಧಾತು. ಅದಾದಿ. **ಆತೋಮನಿನ್**—(ಪಾ. ಸೂ. ೩-೨-೭೪) ಎಂಬುದರಿಂದ ವನಿಪ್ ಪ್ರತ್ಯಯ. ಅಭಿಶಸ್ತಿಪಾವನ್ ಶಬ್ದವಾಗುತ್ತದೆ ಸು ಪರವಾದಾಗ **ಸರ್ವನಾಮಸ್ಥಾನೇಚಾಸಂಬುದ್ಧೌ** (ಪಾ. ಸೂ ೬-೪-೮) ಎಂಬುದರಿಂದ ಉಪಧಾದೀರ್ಘ. **ಹಲ್ಜ್ಯಾಭ್ಯೋ**—ಸೂತ್ರದಿಂದ ಸುಲೋಪ. **ನ ಲೋಪಃ ಪ್ರಾ**—ಎಂಬುದರಿಂದ ನಲೋಪ. ವನಿಪ್ ಪಿತ್ತಾದುದರಿಂದ ಪಾವನ್ ಎಂಬುದು ಧಾತುಸ್ವರವನ್ನು ಹೊಂದುತ್ತದೆ. ಕಾರಕಪೂರ್ವಪದವಾಗಿರುವುದರಿಂದ **ಗತಿಕಾರಕೋಪಪದಾತ್ಕೃತ್** (ಪಾ. ಸೂ. ೬-೨-೧೩೯) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ವಹ**—ವಹ ಪ್ರಾಪಣೇ ಧಾತು. ಲೋಟ್ಮಧ್ಯಮಪುರುಷಏಕವಚನದಲ್ಲಿ ವಹ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ

**ಸೋಮಪತಿಂ**—ಸೋಮಾನಾಂ ಪತಿಃ ಸೋಮಪತಿಃ ಸಮಾಸಾಂತಸ್ವರವು ಪ್ರಾಪ್ತವಾದರೆ **ಪತ್ಯಾವೈಶ್ವರ್ಯೇ** (ಪಾ. ಸೂ. ೬-೨-೧೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ

**ಅತಿಥ್ಯಂ**—ನ ವಿದ್ಯತೇ ತಿಥಿಃ ಯಸ್ಯ ಸಃ ಅತಿಥಿಃ ಅತಿಥೇಃ ಅರ್ಹಂ ಅತಿಥ್ಯಮ್. ಷ್ಯಞ್ ಪ್ರತ್ಯಯ.

**ಚಕೃಮ**—ಡುಕೃಞ್ ಕರಣೇ ಧಾತು. ಲಿಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ **ಪರಸ್ಮೈಪದಾನಾಂ**—(ಪಾ. ಸೂ ೩-೪-೮೨) ಎಂಬುದರಿಂದ ಅದಕ್ಕೆ ಮಾದೇಶ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಉರದತ್ವ, ಹಲಾದಿಶೇಷ, ಚುತ್ವ. **ಕೃಸೃಭೃ**—(ಪಾ. ಸೂ ೭-೨-೧೩) ಸೂತ್ರದಿಂದ ನಿಯಮಮಾಡಿರುವುದರಿಂದ ಇಡಾಗಮ ಬರುವುದಿಲ್ಲ **ಅಸಂಯೋಗಾಲ್ಲಿಟ್ಕಿತ್** (ಪಾ. ಸೂ. ೧-೨-೫) ಎಂಬುದರಿಂದ ಕಿದ್ವದ್ಭಾವವಿರುವುದರಿಂದ ಗುಣಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುದಾವ್ನೇ**—ಸು ಉಪಪದವಾಗಿರುವಾಗ ದಾಞ್ (ದಾನೇ) ಧಾತುವಿಗೆ ಹಿಂದಿನಂತೆ **ಆತೋಮನಿನ್**—ಸೂತ್ರದಿಂದ ವನಿಪ್ ಪ್ರತ್ಯಯ ಸುದಾವನ್ ಶಬ್ದವಾಗುತ್ತದೆ ಚತುರ್ಥೀ ಏಕವಚನಪರವಾದಾಗ ಭ ಸಂಜ್ಞಾ ಇರುವುದರಿಂದ **ಅಲ್ಲೋಪೋಽನಃ** (ಪಾ. ಸೂ ೬-೪-೧೩೪) ಎಂಬುದರಿಂದ ಅನಿನ ಅಕಾರಕ್ಕೆ ಲೋಪ. ಸುದಾವ್ನೇ ಎಂದು ರೂಪವಾಗುತ್ತದೆ. **ಗತಿಕಾರಕೋಪಪದಾತ್ಕೃತ್** ಸೂತ್ರದಿಂದ ಗತಿಪೂರ್ವದಲ್ಲಿರುವುದರಿಂದ ಪ್ರಕೃತಿಸ್ವರ ಬರುತ್ತದೆ ॥ ೩ ॥



॥ ಸಂಹಿತಾಪಾಠಃ ॥

ಪ್ರಜಾವತಾ ವಚಸಾ ವಹ್ನಿರಾಸಾ ಚ ಹುವೇ ನಿ ಚ ಸತ್ಸೀಹ ದೇವೈಃ ।
ವೇಷಿ ಹೋತ್ರಮುತ ಪೋತ್ರಂ ಯಜತ್ರ ಬೋಧಿ ಪ್ರಯಂತರ್ಜನಿತರ್ವಸೂನಾಂ ॥ ೪ ॥

॥ ಪದಪಾಠಃ ॥

ಪ್ರಜಾಽವತಾ । ವಚಸಾ । ವಹ್ನಿಃ । ಆಸಾ । ಆ । ಚ । ಹುವೇ । ನಿ । ಚ । ಸತ್ಸಿ । ಇಹ । ದೇವೈಃ ।
ವೇಷಿ । ಹೋತ್ರಂ । ಉತ । ಪೋತ್ರಂ । ಯಜತ್ರ । ಬೋಧಿ । ಪ್ರಽಯಂತಃ । ಜನಿತಃ । ವಸೂನಾಂ ॥ ೪ ॥

॥ ಸಾಯಣಭಾಷ್ಯಂ ॥

ಪ್ರಜಾವತಾ ಯಜಮಾನೇಭ್ಯೋ ದಾತವ್ಯಾಪತ್ಯಾದಿಫಲೋಪೇತೇನ ವಚಸಾ ಸ್ತೋತ್ರೇಣ ಸ್ತುತಃ ಸನ್ ಯೋಽಗ್ನಿರಾಸಾಸ್ಯಸ್ಥಾನೀಯಯಾ ಜ್ವಾಲಯಾ ವಹ್ನಿರ್ದೇವೇಭ್ಯೋ ಹವಿಷಾಂ ವೋಢಾ ತಮಗ್ನಿಮಾ ಚ ಹುವೇ । ಆಹ್ವಯಾಮಿ । ಆಹೂತಃ ಸನ್ ತ್ವಮಿಹಾಸ್ಮಿನ್ಕರ್ಮಣಿ ದೇವೈರನ್ಯೈಃ ಸಹ ನಿ ಸತ್ಸಿ ಚ । ನಿಷೀದ ಚ । ನಿಷದ್ಯ ಚ ಹೇ ಯಜತ್ರ ಯಜನೀಯಾಗ್ನೇ ಹೋತ್ರಂ ಹೋತ್ರಾ ಕ್ರಿಯಮಾಣಂ ಕರ್ಮ ಉತಾಪಿ ಚ ಪೋತ್ರಂ ಪೋತ್ರಾ ಕೃತಂ ಕರ್ಮ ಚ ವೇಷಿ । ಕಾಮಯಸ್ವ । ವಸೂನಾಂ ಧನಾನಾಂ ಪ್ರಯಂತಃ ಪ್ರಕರ್ಷೇಣ ನಿಯಂತಃ ವಸೂನ್ಯಸ್ಮದಾಯತ್ತಾನಿ ಕುರ್ವನ್ ಜನಿತರಾಹುತಿದ್ವಾರಾ ಸರ್ವಸ್ಯ ಜನಯಿತರಗ್ನೇ ಬೋಧಿ । ಅಸ್ಮಾನ್ಬೋಧಯ ॥ ಆಸಾ । ಪದ್ದನ್ನಿತ್ಯಾದಿನಾಸ್ಯಶಬ್ದಸ್ಯಾಸನ್ನಾದೇಶಃ । ಸುಪಾಂ ಸುಲುಗಿತಿ ತೃತೀಯಾಯಾ ಡಾದೇಶಃ । ಟಿಲೋಪ ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ ।

**ಹುವೇ । ಹ್ವೇಞ್ಃೋ ಲಟಿ ಬಹುಲಂ ಛಂದಸೀತಿ ಸಂಪ್ರಸಾರಣಂ । ಬಹುಲಂ ಛಂದಸೀತಿ ಶಪೋ ಲುಕ್ । ಚವಾಯೋಗೇ ಪ್ರಥಮೇತಿ ನಿಘಾತಪ್ರತಿಷೇಧಃ । ಬೋಧಿ । ಬುಧ ಅವಗಮನೇ । ಅಸ್ಮಾಣ್ಣ್ಯಂತಾಚ್ಛಂದಸ್ಯುಭಯಥೇತಿ ಹೇರಾರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ । ಹುಝಲ್ಭ್ಯೋ ಹೇರ್ಧಿಃ । ಧಾತೋರಂತ್ಯಲೋಪಶ್ಛಾಂದಸಃ । ಹೇರಪಿತ್ತ್ವಾತ್ತಸ್ಯೈವ ಸ್ವರಃ ಶಿಷ್ಯತೇ ॥**

॥ ಪ್ರತಿಪದಾರ್ಥ ॥

**ಪ್ರಜಾವತಾ**—(ಯಜ್ಞದ) ಯಜಮಾನರಿಗೆ ಸಂತಾನದಾಯಕವಾದ । **ವಚಸಾ**—ಸ್ತುತಿಯಿಂದ (ಸ್ತುತನಾಗಿ) । **ಆಸಾ**—ಬಾಯಿಯಂತಿರುವ ಜ್ವಾಲೆಗಳಿಂದ । **ವಹ್ನಿಃ**—ದೇವತೆಗಳಿಗೆ ಹವಿಸ್ಸನ್ನು ಒಯ್ಯುವ (ಅಗ್ನಿಯನ್ನು) । **ಆ ಚ ಹುವೇ**—ಆಹ್ವಾನಿಸುತ್ತೇನೆ. (ಆಹೂತನಾಗಿ ನೀನು) । **ಇಹ**—ಈ ಕರ್ಮದಲ್ಲಿ (ನಡೆಯುವ ಸ್ಥಳದಲ್ಲಿ) । **ದೇವೈಃ**—(ಇತರ) ದೇವತೆಗಳೊಡನೆ । **ನಿ ಸತ್ಸಿ ಚ**—ಆಸೀನನಾಗು । **ಯಜತ್ರ**—ಯಜ್ಞದಲ್ಲಿ ಪೂಜ್ಯನಾದ ಎಲೈ ಅಗ್ನಿಯೇ । **ಹೋತ್ರಂ**—ಹೋತೃವಿನಕರ್ಮವನ್ನೂ । **ಉತ**—ಮತ್ತು । **ಪೋತ್ರಂ**—ಪೋತೃವಿನ ಕರ್ಮವನ್ನೂ । **ವೇಷಿ**—ಇಚ್ಛಿಸು (ಮಾಡು) । **ವಸೂನಾಂ**—ಧನದ । **ಪ್ರಯಂತಃ**—ನಿಯಮನಮಾಡುವವನೂ । **ಜನಿತಃ**—(ಸಮಸ್ತ ಪದಾರ್ಥಗಳ) ಉತ್ಪತ್ತಿಕಾರಣನೂ (ಆದ ಅಗ್ನಿಯೇ) **ಬೋಧಿ**—(ನಮ್ಮನ್ನು) ಜಾಗೃತರನ್ನಾಗಿ ಮಾಡು

॥ ಭಾವಾರ್ಥ ॥

ಜ್ವಾಲೆಗಳ ಮೂಲಕ ದೇವತೆಗಳಿಗೆ ಹವಿರ್ವಾಹಕನಾದ ಎಲೈ ಅಗ್ನಿಯೇ. ನಿನ್ನನ್ನು ನಮ್ಮ ಯಜ್ಞಕ್ಕೆ ಆಹ್ವಾನಿಸುತ್ತೇವೆ. (ಆಹೂತನಾಗಿ) ನೀನು ಇತರ ದೇವತೆಗಳೊಡನೆ ಬಂದು (ಸುಖವಾಗಿ) ಆಸೀನನಾಗು (ಆಸೀನನಾಗಿ) ಹೋತೃ ಮತ್ತು ಪೋತೃಗಳ ಕರ್ಮಗಳನ್ನು ಮಾಡು. ಧನಕ್ಕೆ ಆಶ್ರಯನೂ, (ಅದರ) ಉತ್ಪತ್ತಿಗೆ ಕಾರಣನೂ ಆದ ನೀನು, ನಮ್ಮನ್ನು (ನಮ್ಮ ಕರ್ಮಗಳಲ್ಲಿ) ಜಾಗೃತರನ್ನಾಗಿ ಮಾಡು.

## English Translation

I invoke (you), you are the conveyer (of oblations) with your flames, with a hymn productive of progeny (to the worshipper), sit down here with the Gods, and deserving of worship, discharge the office of Hotri, or of Potri, and awaken us; you are the depositary and generator of riches

॥ ವಿಶೇಷವಿಷಯಗಳು ॥

**ಪ್ರಜಾವತಾ ವಚಸಾ—ಯಜಮಾನೇಭ್ಯೋ ದಾತವ್ಯಾಪತ್ಯಾದಿಫಲೋಪೇತೇನ ಸ್ತೋತ್ರೇಣ ಸ್ತುತಃ** । ಯಜ್ಞಮಾಡುವ ಯಜಮಾನರಿಗಾಗಿ ಪುತ್ರಾದಿ ಸಂತತಿಯನ್ನು ಅನುಗ್ರಹಿಸುವ ಗುಣಗಳುಳ್ಳ

ಸ್ತೋತ್ರದಿಂದ ಅಗ್ನಿಯು ಸ್ತುತಿಸಲ್ಪಡುವನು ಎಂದು ಈ ಪದಗಳನ್ನು ಸಾಯಣರು ಅಗ್ನಿಪದಕ್ಕೆ ವಿಶೇಷಣಮಾಡಿರುವರು. ಮತ್ತು **ಆಸಾ** ಎಂಬ ಪದಕ್ಕೆ ಮುಖಸ್ಥಾನದಲ್ಲಿರುವ ಜ್ವಾಲೆಯಿಂದೂ ಇದರಿಂದ ಇತರ ದೇವತೆಗಳ ಹವಿರ್ಭಾಗಗಳನ್ನು ಅವರಿಗಾಗಿ ಯಜಮಾನರುಗಳು ಅರ್ಪಿಸುವುದನ್ನು ವಹಿಸುವವನಾಗಿರುವದರಿಂದ ವಹ್ನಿಯೆಂದೂ ಅರ್ಥವನ್ನು ಹೇಳಿರುವರು. ಸ್ಕಂದಸ್ವಾಮಿಗಳು—ಯಜ್ಞಮಾಡುವ ಯಜಮಾನರು ದೇವತೆಗಳಿಗಾಗಿ ಅರ್ಪಿಸುವ ಹವಿರ್ಭಾಗಗಳನ್ನು ವಹಿಸುವವನಾಗಿಯೂ ಬಲವುಳ್ಳವನಾಗಿಯೂ ಇರುವ ವಹ್ನಿಯಾದ ನೀನು **ಪ್ರಜಾವತಾ ಆಸಾ ವಚಸಾ** ಅತಿಶಯವಾದ ಗುಣಗಳುಳ್ಳ ಪುತ್ರರೂಪವಾದ ಫಲವನ್ನು ಅನುಗ್ರಹಿಸುವ, ತಾನಾಗಿ ಉಚ್ಚಾರಣೆಯನ್ನು ಹೊಂದಿರುವ, ಇತರ ದೇವತೆಗಳನ್ನು (ಕರೆಯುವ) ಆಹ್ವಾನಮಾಡುವ ವಾಕ್ಯಗಳಿಂದ ದೇವಾದಿಗಳನ್ನು ಆಹ್ವಾನಮಾಡು ಎಂದು ಅರ್ಥವನ್ನು ವಿವರಿಸಿರುವರು

**ಹೋತ್ರಂ—ಹೋತ್ರಾ ಕ್ರಿಯಮಾಣಂ ಕರ್ಮ ।** ಯಜ್ಞದಲ್ಲಿ ಹವಿರ್ಭಾಗಗಳ ಸ್ವೀಕಾರಕ್ಕಾಗಿ ಆಯಾಯ ದೇವತೆಗಳನ್ನು ಅವರವರ ಸ್ತೋತ್ರಗಳನ್ನು ಹೇಳಿ ಕರೆಯುವವನು ಹೋತೃವೆನಿಸಿರುವನು ಇವನಿಂದ ಆಚರಿಸಲ್ಪಡುವ ಕಾರ್ಯವು ಹೋತ್ರವೆನಿಸಿರುವುದು. ಹೋತೃವೆಂಬ ಋತ್ವಿಜನ ಕರ್ತವ್ಯಕರ್ಮವಾದ ದೇವತೆಗಳ ಆಹ್ವಾನವು ಎಂದಭಿಪ್ರಾಯವು

**ಪೋತ್ರಂ—ಪೋತ್ರಾ ಕೃತಂ ಕರ್ಮ ।** ಹೋತೃವಿನ ಹಾಗೆಯೇ ಪೋತೃವಿಗೂ ಅವನ ಕರ್ತವ್ಯಕರ್ಮವಿರುವದು. ಇವನು ಆಚರಿಸುವ ಕರ್ಮವು ಪೋತ್ರವೆನಿಸಿರುವುದು ಸ್ಕಂದಸ್ವಾಮಿಗಳ ಭಾಷ್ಯದಲ್ಲಿ ಎಲೈ ಅಗ್ನಿಯೇ ನೀನು ಹೋತೃ, ಪೋತೃ ಕರ್ಮಗಳನ್ನು ಆಚರಿಸು. ನೀನು ಯಾಗವನ್ನು ಆಚರಿಸುವವನಾಗಿ **ಯಜತ್ರ** ಎಂಬ ಶಬ್ದಕ್ಕೆ ವಾಚ್ಯನಾಗಿಯೂ ಇರುವ ಕಾರಣ ಯಾಗಾರ್ಹನಾಗಿಯೂ ಇರುತ್ತೀಯೆ. ಆದ್ದರಿಂದ ನಮ್ಮ ಸ್ತುತಿಗಳ ಅಭಿಪ್ರಾಯವನ್ನು ನೀನು ತಿಳಿದು ನಮಗೆ ಬೇರೆ ಬೇರೆ ಉಪಾಯಗಳಿಂದ ಧನವನ್ನು ಅತಿಶಯವಾಗಿ ಕೊಡು ಎಂದು ಅರ್ಥವನ್ನು ವಿವರಿಸಿರುವರು.

**ಜನಿತಃ—ಆಹುತಿದ್ವಾರಾ ಸರ್ವಸ್ಯ ಜನಯಿತಃ ।** ಜನೀ ಪ್ರಾದುರ್ಭಾವೇ ಎಂಬ ಧಾತುವು ಉತ್ಪತ್ತಿ ಎಂಬ ಅರ್ಥವುಳ್ಳದ್ದಾಗಿರುವುದು. ಅದು ಇಲ್ಲಿ ಪ್ರೇರಣಾರ್ಥದಲ್ಲಿ ಪ್ರಯುಕ್ತವಾಗಿರುವುದರಿಂದ ಅಗ್ನಿಯು ಯಜ್ಞಗಳಲ್ಲಿ ಹವಿರ್ಭಾಗಗಳನ್ನು ಸ್ವೀಕರಿಸಿ ಉತ್ಪನ್ನವಾಗಬಹುದಾದವುಗಳನ್ನು ಉತ್ಪತ್ತಿಯಾಗುವಂತೆ ಮಾಡುವನು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಪ್ರಜಾವತಾ**—ಪ್ರಜಾಃ ಅಸ್ಯ ಸಂತಿ ಇತಿ ಪ್ರಜಾವತ್. **ತದಸ್ಯಾಸ್ತಿ**—(ಪಾ. ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. ಅಕಾರದ ಪರದಲ್ಲಿ ಬಂದುದರಿಂದ **ಮಾದುಪಧಾಯಾಶ್ಚ**—(ಪಾ. ಸೂ ೮-೨-೯) ಎಂಬುದರಿಂದ ಮಕಾರಕ್ಕೆ ವಕಾರಾದೇಶ. ತೃತೀಯಾ ಏಕವಚನಾಂತರೂಪ.

**ವಚಸಾ**—ವಚ ಸಂಭಾಷಣೇ ಧಾತು ಔಣಾದಿಕ ಅಸುನ್ ಪ್ರತ್ಯಯ ವಚಸ್ ಶಬ್ದವಾಗುತ್ತದೆ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ಆಸಾ**—ಆಸ್ಯಶಬ್ದ. ಇದಕ್ಕೆ ತೃತೀಯಾ ಏಕವಚನಪರವಾದಾಗ **ಪದ್ದನ್ನೋಮಾಸ್**—(ಪಾ. ಸೂ. ೬-೧-೬೩) ಎಂಬುದರಿಂದ ಆಸನ್ ಆದೇಶ. ತೃತೀಯಾವಿಭಕ್ತಿಗೆ **ಸುಪಾಂ ಸುಲುಕ್**—ಸೂತ್ರದಿಂದ ಡಾದೇಶ ಡಿತ್ತಾದುದರಿಂದ **ಡಿತಿ ಭಸ್ಯ ಟೇರ್ಲೋಪಃ** ಎಂಬುದರಿಂದ ಆಸನ್ ಎಂಬಲ್ಲಿರುವ ಟಿಗೆ(ಅನ್) ಲೋಪ ಅನುದಾತ್ತವಾದ ಟಾ ಪರವಾದಾಗ ಉದಾತ್ತಸ್ವರವಿಶಿಷ್ಟ ಆಸಿಗೆ ಲೋಪಬಂದುದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ ಸೂ ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಹುವೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ. ಧಾತು ಭ್ವಾದಿ ಲಟ್ ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ನಿಮಿತ್ತವಿಲ್ಲದಿದ್ದರೂ ಧಾತುವಿಗೆ ಸಂಪ್ರಸಾರಣ **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಟಿತಆತ್ಮನೇಪದಾನಾಂ**– ಎಂಬುದರಿಂದ ಪ್ರತ್ಯಯಕ್ಕೆ ಏತ್ವ **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್ **ಅಚಿಶ್ನುಧಾತುಭ್ರುವಾಂ**—ಎಂಬುದರಿಂದ ಉವಙಾದೇಶ ಚಕಾರವು ಹಿಂದ ಇರುವುದರಿಂದ **ಚವಾಯೋಗೇ ಪ್ರಥಮಾ** (ಪಾ ಸೂ. ೮-೧-೫೮) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ ಆಗ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಸತ್ಸಿ**—ಷದ್‌ಲೃ ವಿಶರಣಗತ್ಯವಸಾದನೇಷು ಧಾತು. ಇದಕ್ಕೆ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಬಹುಲಂ ಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್ ನಿಮಿತ್ತವಿಲ್ಲದಿದ್ದುದರಿಂದ **ಪಾಘ್ರಾಧ್ಮಾ**—ಸೂತ್ರದಿಂದ ಸೀದಾದೇಶ ಬರುವುದಿಲ್ಲ **ಖರಿ ಚ** (ಪಾ ಸೂ ೮-೪-೫೫) ಎಂಬುದರಿಂದ ಚರ್ತ್ವ ತಿಙಂತನಿಘಾತಸ್ವರ ಬರುತ್ತದೆ.

**ವೇಷಿ**—ವೀ, ಗತಿವ್ಯಾಪ್ತಿಪ್ರಜನಕಾಂತ್ಯಸನಖಾದನೇಷು ಧಾತು ಅದಾದಿ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಶಪಿಗೆ ಲುಕ್ ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ ಪ್ರತ್ಯಯಕ್ಕೆ ಷತ್ವ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ

**ಬೋಧಿ**--ಬುಧ ಅವಗಮನೇ. ಧಾತು ಪ್ರಯೋಜಕವ್ಯಾಪಾರತೋರುವುದರಿಂದ **ಹೇತುಮತಿ ಚ** (ಪಾ ಸೂ ೩-೧-೨೬) ಎಂಬುದರಿಂದ ಣಿಚ್. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಣಿಚ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಣಿಜಂತದಮೇಲೆ ಲೋಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಇದಕ್ಕೆ ಹಿ ಆದೇಶ **ಛಂದಸ್ಯುಭಯಥಾ** ಎಂಬುದರಿಂದ ಹಿಗೆ ಆರ್ಧಧಾತುಕಸಂಜ್ಞೆ ಬರುವುದರಿಂದ ಇದನ್ನ ನಿಮಿತ್ತೀಕರಿಸಿ **ಣೇರನಿಟಿ** (ಪಾ ಸೂ ೬-೧-೫೧) ಸೂತ್ರದಿಂದ ಣಿಗೆ ಲೋಪ. ಬೋಧ್ ಹಿ ಎಂದಿರುವಾಗ **ಹುಝಲ್ಭ್ಯೋ ಹೇರ್ಧಿಃ** (ಪಾ ಸೂ ೬-೪-೧೦೧) ಎಂಬುದರಿಂದ ಝಲಂತದಪರದಲ್ಲಿರುವುದರಿಂದ ಹಿಗೆ ಧಿತ್ವ. ಧಾತುವಿನ ಅಂತ್ಯ ಧಕಾರಕ್ಕೆ ಛಾಂದಸವಾಗಿ ಲೋಪಬರುತ್ತದೆ ಬೋಧಿ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಹಿಗೆ ಅಪಿತ್ತ್ವವನ್ನು ಹೇಳಿರುವುದರಿಂದ ಪ್ರತ್ಯಯಸ್ವರ ಬರುವುದರಿಂದ ಅಂತೋದಾತ್ತವಾಗುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಯಥಾ ವಿಪ್ರಸ್ಯ ಮನುಷೋ ಹವಿರ್ಭಿರ್ದೇವಾँ ಆಯಜಃ ಕವಿಭಿಃ ಕವಿಃ ಸನ್ ।
ಏವಾ ಹೋತಃ ಸತ್ಯತರ ತ್ವಮದ್ಯಾಗ್ನೇ ಮಂದ್ರಯಾ ಜುಹ್ವಾ ಯಜಸ್ವ ॥ ೫ ॥

॥ ಪದಪಾಠಃ ॥

ಯಥಾ । ವಿಪ್ರಸ್ಯ । ಮನುಷಃ । ಹವಿಃಽಭಿಃ । ದೇವಾನ್ । ಅಯಜಃ । ಕವಿಽಭಿಃ । ಕವಿಃ । ಸನ್ ।
ಏವ । ಹೋತರಿತಿ । ಸತ್ಯಽತರ । ತ್ವಂ । ಅದ್ಯ । ಅಗ್ನೇ । ಮಂದ್ರಯಾ । ಜುಹ್ವಾ । ಯಜಸ್ವ ॥ ೫ ॥

॥ ಸಾಯಣಭಾಷ್ಯಂ ॥

ಏಕಾದಶಿನಸ್ಯಾಗ್ನೇಯಸ್ಯ ಪಶೋರ್ಯಥಾ ವಿಪ್ರಸ್ಯೇತ್ಯೇಷಾ ಪಶುಪುರೋಡಾಶಸ್ಯ ಯಾಜ್ಯಾ । ಸೂತ್ರಿತಂ ಚ ಪ್ರದಾನಾನಾಮಿತಿ ಖಂಡೇ । ಯಥಾ ವಿಪ್ರಸ್ಯ ಮನುಷೋ ಹವಿರ್ಭಿಃ ಪ್ರ ಕಾರವೋ ಮನನಾ ವಚ್ಯಮಾನಾಃ । ಆ. ೩-೭ । ಇತಿ ॥

ಕವಿಃ ಕ್ರಾಂತದರ್ಶೀ ಸನ್ಕವಿಭಿರ್ಮೇಧಾವಿಭಿರ್ಋತ್ವಿಗ್ಭಿಃ ಸಹ ವಿಪ್ರಸ್ಯ ಮೇಧಾವಿನೋ ಮನುಷೋ ಮನೋರ್ಯಜ್ಞೇ ಹವಿರ್ಭಿಶ್ಚರುಪುರೋಡಾಶಾದಿಭಿರ್ಹೇ ಅಗ್ನೇ ಯಥಾ ದೇವಾನಯಜಃ ಏವಮೇವ ಹೋತರ್ಹೋಮನಿಷ್ಪಾದಕ ಸತ್ಯತರಾತಿಶಯೇನ ಸತ್ಸು ಸಾಧೋ ಅಗ್ನೇ ತ್ವಮದ್ಯಾಸ್ಮಿನ್ಯಜ್ಞೇ ಮಂದ್ರಯಾ ಹರ್ಷಯಿತ್ರ್ಯಾ ಜುಹ್ವಾ ಹೋಮಸಾಧನಭೂತಯಾ ಸ್ರುಚಾ ಯಜಸ್ವ । ದೇವಾನ್ಹವಿರ್ಭಿಃ ಪೂಜಯ ॥ ಮನುಷಃ । ಮನ ಜ್ಞಾನೇ । ಬಹುಲಮನ್ಯತ್ರಾಪೀತಿ ಮನೇರುಸಿನ್ಪ್ರತ್ಯಯಃ ॥

॥ ಪ್ರತಿಪದಾರ್ಥ ॥

**ಕವಿಃ ಸನ್**—ಭೂತಜ್ಞಾನಿಯಾದ (ನೀನು) । **ಕವಿಭಿಃ**—ಮೇಧಾವಿಗಳಾದ ಋತ್ವಿಜರಿಂದ (ಕೂಡಿ) । **ವಿಪ್ರಸ್ಯ**—ಜ್ಞಾನಿಯಾದ । **ಮನುಷಃ**—ಮನುವಿನ (ಯಜ್ಞದಲ್ಲಿ) । **ಹವಿರ್ಭಿಃ**—ಚರುವಾದಿಗಳಿಂದ । **ಯಥಾ**—ಹೇಗೆ । **ದೇವಾನ್**—(ಇಂದ್ರಾದಿ) ದೇವತೆಗಳನ್ನು । **ಅಯಜಃ**—ಪೂಜಿಸಿದೆಯೋ । (**ತಥಾ**—ಹಾಗೆ) । **ಹೋತಃ**—ಹೋಮನಿಷ್ಪಾದಕನಾದ । **ಸತ್ಯತರ**—ಸಾಧುಗಳಲ್ಲಿ ಉತ್ತಮನಾದ । **ಅಗ್ನೇ**—ಅಗ್ನಿಯೇ । **ತ್ವಂ**—ನೀನು । **ಅದ್ಯ**—ಈಗ (ಈ ಯಜ್ಞದಲ್ಲಿ) । **ಮಂದ್ರಯಾ**—ಹರ್ಷಜನಕವಾದ । **ಜುಹ್ವಾ**—(ಹೋಮಸಾಧನವಾದ) ಸ್ರುಕ್ಕಿನಿಂದ । **ಯಜಸ್ವ**—(ದೇವತೆಗಳನ್ನು ಹವಿರಾದಿಗಳಿಂದ) ಪೂಜಿಸು

॥ ಭಾವಾರ್ಥ ॥

ತ್ರಿಕಾಲಜ್ಞಾನಿಯಾದ ಎಲೈ ಅಗ್ನಿಯೇ, ನೀನು (ಹಿಂದೆ) ಜ್ಞಾನಿಯಾದ ಮನುವಿನ ಯಜ್ಞದಲ್ಲಿ, ಮೇಧಾವಿಗಳಾದ ಋತ್ವಿಜರಿಂದೊಡಗೂಡಿ, ಹೇಗೆ ದೇವತೆಗಳನ್ನು ಚರುಪುರೋಡಾಶಾದಿಗಳಿಂದ ತೃಪ್ತಿಪಡಿಸಿದೆಯೋ ಹಾಗೆ, ಈಗ ನಮ್ಮ ಯಜ್ಞದಲ್ಲಿ ಸಂತೋಷದಾಯಕವಾದ ಸ್ರುಕ್ಕಿನಿಂದ, ದೇವತೆಗಳನ್ನು ತೃಪ್ತಿಪಡಿಸು.

## English Translation

As at the sacrifice of the holy Manu, you, a sage amongst sages did worship the Gods, with oblations, so also, Agni, veracious invoker of the Gods, do you today (present the oblations), with an exhilarating ladle

॥ ವಿಶೇಷವಿಷಯಗಳು ॥

ಏಕಾದಶಿನವೆಂಬ ಯಾಗದಲ್ಲಿ ಅಗ್ನಿಯನ್ನುದ್ದೇಶಿಸಿ ಮಾಡುವ ಪಶುಯಾಗದಲ್ಲಿ ಪಶುಪುರೋಡಾಶಹೋಮ ಮಾಡುವಾಗ **ಯಥಾ ವಿಪ್ರಸ್ಯ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ಪ್ರದಾನಾನಾಂ** ಎಂಬ ಖಂಡದಲ್ಲಿ—**ಯಥಾ ವಿಪ್ರಸ್ಯ ಮನುಷೋ ಹವಿರ್ಭಿಃ ಪ್ರ ಕಾರವೋ ಮನನಾ ವಚ್ಯಮಾನಾಃ** ಎಂಬ ಸೂತ್ರದಿಂದ ವಿವೃತವಾಗಿರುವುದು

**ಮನ್ದ್ರಯಾ—ಹರ್ಷಯಿತ್ರ್ಯಾ** । ಸ್ತುತಿ, ಮೋದ, ಮದ ಮೊದಲಾದ ಅನೇಕಾರ್ಥಗಳನ್ನು ಬೋಧಿಸುವ ಮದಿ ಧಾತುವಿನಿಂದ ನಿಷ್ಪನ್ನವಾದ **ಮನ್ದ್ರಾ** ಎಂಬ ಶಬ್ದವು ಇಲ್ಲಿ ಹೋಮಸಾಧನವನ್ನು ಬೋಧಿಸುವ **ಜುಹೂ** ಎಂಬುವ ಪದಕ್ಕೆ ವಿಶೇಷಣವಾಗಿರುವುದರಿಂದ ಸಂತೋಷವನ್ನು ಉಂಟುಮಾಡುವುದೆಂದು ಅರ್ಥವನ್ನು ಬೋಧಿಸುವುದು

**ಜುಹ್ವಾ—ಹೋಮಸಾಧನಭೂತಯಾ ಸ್ರುಚಾ** । ಯಜ್ಞದಲ್ಲಿ ಆಜ್ಯವನ್ನಾಗಲಿ ಚರುಪುರೋಡಾಶವನ್ನಾಗಲಿ ಅಗ್ನಿಯಲ್ಲಿ ಹೋಮವನ್ನು ಮಾಡುವಾಗ ಹೋಮಮಾಡುವ ಸ್ರುಕ್ಕಿಗೆ **ಜುಹೂಃ** ಎಂದು ಸಾಯಣರು

ಅರ್ಥಮಾಡಿರುವರು **ಮಂದ್ರಯಾ ಜುಹ್ವಾ** ಎಂದು ವಿಶೇಷಣವು ಇರುವುದರಿಂದ **ಮೋದಯಿತ್ರ್ಯಾ ಜುಹ್ವಾ ಹೂಯಮಾನತ್ವಾತ್ ಆಹುತಿರಭಿಪ್ರೇತಾ** ಹರ್ಷವನ್ನುಂಟುಮಾಡುವ ಆಹುತಿಯು ಎಂದು **ಜುಹೂ** ಶಬ್ದದ ಅರ್ಥವನ್ನು ಸ್ಕಂದಸ್ವಾಮಿಗಳು ವಿವರಿಸಿರುವರು

**ಕವಿಭಿಃ—ಮೇಧಾವಿಭಿಃ ಋತ್ವಿಗ್ಭಿಃ** । ಕವಿಗಳು ಎಂದರೆ ಜ್ಞಾನವಂತರಾದವರು ಎಂದು ಅರ್ಥವು. ಇಲ್ಲಿ ತಿಳುವಳಿಕೆಯುಳ್ಳ ಋತ್ವಿಜರೆಂದು ಅರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಯಥಾ—ನಿಪಾತಸ್ಯ ಚ** ಎಂಬುದರಿಂದ ಸಂಹಿತಾರ್ಥದಲ್ಲಿ ದೀರ್ಘ ಬರುತ್ತದೆ

**ಮನುಷಃ**- - ಮನ ಜ್ಞಾನೇ ಧಾತು **ಬಹುಲಮನ್ಯತ್ರಾಪಿ** (ಉ ಸೂ. ೨-೭೭೮) ಎಂಬುದರಿಂದ ಉಸಿನ್ ಪ್ರತ್ಯಯು. **ಆದೇಶಪ್ರತ್ಯಯಯೋಃ** ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ ಪ್ರತ್ಯಯವು ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಷಷ್ಠೀ ಏಕವಚನಾಂತರೂಪ.

**ಅಯಜಃ—**ಯಜ ದೇವಪೂಜಾಸಂಗತಿಕರಣದಾನೇಷು ಧಾತು ಲಙ್ ಮಧ್ಯಮಪುರುಷ ಏಕವಚನರೂಪ. **ನಿಪಾತೈರ್ಯದ—**(ಪಾ ಸೂ. ೮-೧-೩೦) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ

**ಸತ್ಯತರ**—ಸತ್ಯಂ ಅಸ್ಯ ಅಸ್ತಿ ಸತ್ಯಃ **ಅರ್ಶಆದಿಭ್ಯೋಽಚ್** (ಪಾ ಸೂ. ೫-೨-೧೨೭) ಎಂಬುದರಿಂದ ಮತುಪರ್ಥದಲ್ಲಿ ಅಚ್ ಪ್ರತ್ಯಯ. ಅತಿಶಯೇನ ಸತ್ಯಃ ಸತ್ಯತರಃ **ದ್ವಿವಚನವಿಭಜ್ಯೋಪಪದೇ ತರಬೀಯಸುನೌ** (ಪಾ. ಸೂ. ೫-೩-೫೭) ಎಂಬುದರಿಂದ ಅತಿಶಯಾರ್ಥ ತೋರುವಾಗ ತರಪ್ ಪ್ರತ್ಯಯ. ಸಂಬುದ್ಧಿ ಏಕವಚನರೂಪ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ

**ಅಗ್ನೇ—**ಪಾದಾದಿಯಲ್ಲಿರುವುದರಿಂದ ಆಷ್ಟಮಿಕ (ಆಮಂತ್ರಿತನಿಘಾತಸ್ವರ ಬರುವುದಿಲ್ಲ **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಯಜಸ್ವ**—ಯಜ ದೇವಪೂಜಾಸಂಗತಿಕರಣದಾನೇಷು ಧಾತು ಲೋಟ್ ಮಧ್ಯಮಪುರುಷ ಏಕವಚನದಲ್ಲಿ **ಥಾಸಃ ಸೇ** (ಪಾ ಸೂ. ೩-೪-೮೦) ಎಂಬುದರಿಂದ ಸೇ ಆದೇಶ ಶಪ್ ವಿಕರಣ. **ಸವಾಭ್ಯಾಂವಾಮೌ** (ಪಾ. ಸೂ. ೩-೪-೯೧) ಎಂಬುದರಿಂದ ಸಕಾರದ ಪರದಲ್ಲಿರುವ ಏಕಾರಕ್ಕೆ ವಕಾರಾದೇಶ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೫ ॥

ಎಪ್ಪತ್ತಾರನೆಯ ಸೂಕ್ತವು ಸಮಾಪ್ತವು.



# ಎಪ್ಪತ್ತೇಳನೆಯ ಸೂಕ್ತವು

**ಕಥೇತಿ ಪಂಚರ್ಚಂ ಚತುರ್ಥಂ ಸೂಕ್ತಂ ತ್ರೈಷ್ಟುಭಂ ಗೋತಮಸ್ಯಾರ್ಷಮಾಗ್ನೇಯಂ। ಅನುಕ್ರಾಂತಂ ಚ। ಕಥೇತಿ॥ ಪ್ರಾತರನುವಾಕಾಶ್ವಿನಶಸ್ತ್ರಯೋಃ ಪೂರ್ವಸೂಕ್ತೇನ ಸಹೋಕ್ತಃ ಸೂಕ್ತ-ವಿನಿಯೋಗಃ॥**

ಅನುವಾದವು--**ಕಥಾ ದಾಶೇಮ** ಎಂಬ ಈ ಸೂಕ್ತವು ಹದಿಮೂರನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೋತಮನು ಋಷಿಯು ಅಗ್ನಿಯು ದೇವತೆಯು ಅನುಕ್ರಮಣಿಕೆಯಲ್ಲಿ **ಕಥಾ**--ಎಂದು ಮೊದಲಾಗಿ ಹೇಳಿರುವುದು ಪ್ರಾತರನುವಾಕಮಂತ್ರ ಮತ್ತು ಆಶ್ವಿನಶಸ್ತ್ರ ಮಂತ್ರಗಳಿಗಾಗಿ ಈ ಸೂಕ್ತವು ಹಿಂದಿನ ಸೂಕ್ತಗಳೊಡನೆ ವಿನಿಯೋಗಿಸಲ್ಪಡುವುದು

## ಸೂಕ್ತ--೭೭

॥ ಮಂಡಲ--೧ ॥ ಅನುವಾಕ--೧೩ ॥ ಸೂಕ್ತ--೭೭ ॥

॥ ಅಷ್ಟಕ--೧ ॥ ಅಧ್ಯಾಯ--೫ ॥ ವರ್ಗ--೨೫ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ--೫ ॥

॥ ಋಷಿಃ--ಗೋತಮೋ ರಾಹೂಗಣಃ ॥

॥ ದೇವತಾ--ಅಗ್ನಿಃ ॥

॥ ಛಂದಃ--ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಕಥಾ ದಾಶೇಮಾಗ್ನಯೇ ಕಾಸ್ಮೈ ದೇವಜುಷ್ಟೋಚ್ಯತೇ
ಭಾಮಿನೇ ಗೀಃ ।
ಯೋ ಮರ್ತ್ಯೇಷ್ವಮೃತ ಋತಾವಾ ಹೋತಾ ಯಜಿಷ್ಠ ಇತ್ಕೃ-
ಣೋತಿ ದೇವಾನ್ ॥ ೧ ॥

॥ ಪದಪಾಠಃ ॥

ಕಥಾ । ದಾಶೇಮ । ಅಗ್ನಯೇ । ಕಾ । ಅಸ್ಮೈ । ದೇವಽಜುಷ್ಟಾ । ಉಚ್ಯತೇ ।
ಭಾಮಿನೇ । ಗೀಃ ।

ಯಃ । ಮರ್ತ್ಯೇಷು । ಅಮೃತಃ । ಋತಽವಾ । ಹೋತಾ । ಯಜಿಷ್ಠಃ । ಇತ್ ।
ಕೃಣೋತಿ । ದೇವಾನ್ ॥ ೧ ॥

॥ ಸಾಯಣಭಾಷ್ಯಂ ॥

ಅಸ್ಮಾ ಅಗ್ನಯೇ ಕಥಾ ದಾಶೇಮ । ಕಥಂ ಹವೀಂಷಿ ದದಾಮ । ಅಗ್ನೇರನುರೂಪಂ ಯಜ್ಞಂ ಕರ್ತುಮಶಕ್ತಾ ವಯಮಿತ್ಯರ್ಥಃ । ಅಥವಾಸ್ಮೈ ಭಾಮಿನೇ ತೇಜಸ್ವಿನೇಽಗ್ನಯೇ ದೇವಜುಷ್ಟಾ ಸರ್ವೈರ್ದೇವೈಃ ಸೇವಿತವ್ಯಾ ಗೀರ್ವಾಕ್ ಸ್ತುತಿರಪಿ ಕಾ ಕೀದೃಶ್ಯುಚ್ಯತೇ । ತಾದೃಶೀಂ ಸ್ತುತಿಮಪಿ ಕರ್ತುಂ ನ ಶಕ್ತಾ ಇತ್ಯರ್ಥಃ । ಅಮೃತೋ ಮರಣರಹಿತ ಋತಾವಾ ಋತವಾನ್ ಸತ್ಯವಾನ್ಯಜ್ಞವಾನ್ ವಾ ಹೋತಾ ದೇವಾನಾಮಾಹ್ವಾತಾ ಹೋಮನಿಷ್ಪಾದಕೋ ವಾ ಯಜಿಷ್ಠೋಽತಿಶಯೇನ ಯಷ್ಟಾ ಏವಂಭೂತೋ ಯೋಽಗ್ನಿರ್ಮರ್ತ್ಯೇಷು ಮರಣಧರ್ಮಸ್ವಸ್ಮಾಸು ವರ್ತಮಾನಃ ಸನ್ದೇವಾನಿತ್ಕೃಣೋತಿ ಹವಿರ್ಭಿರ್ಯುಕ್ತಾನ್ಕರೋತ್ಯೇವ । ತಾದೃಶಾಯಾಗ್ನಯೇ ಕಥಾ ದಾಶೇಮೇತಿ ಪೂರ್ವೇಣಾನ್ವಯಃ ॥ ಕಥಾ । ಥಾ ಹೇತೌ ಚ ಛಂದಸೀತಿ ಥಾಪ್ರತ್ಯಯಃ । ಭಾಮಿನೇ । ಭಾ ದೀಪ್ತೌ । ಅರ್ತಿಸ್ತುಸ್ವಿತ್ಯಾದಿನಾ ಮನ್ಪ್ರತ್ಯಯಃ । ತತೋ ಮತ್ವರ್ಥೀಯ ಇನಿಃ । ಋತಾವಾ । ಛಂದಸೀವನಿಪಾವಿತಿ ಮತ್ವರ್ಥೀಯೋ ವನಿಪ್ । ಅನ್ಯೇಷಾಮಪಿ ದೃಶ್ಯತ ಇತಿ ದೀರ್ಘತ್ವಂ ॥

॥ ಪ್ರತಿಪದಾರ್ಥ ॥

**ಅಮೃತಃ**—ಮರಣರಹಿತನಾದವನೂ । **ಋತಾವಾ**—ಸತ್ಯವಂತನಾದ (ಯಜ್ಞಯುಕ್ತನಾದ) ವನೂ, **ಹೋತಾ**– ದೇವತೆಗಳನ್ನು ಆಹ್ವಾನಿಸುವವನೂ । **ಯಜಿಷ್ಠಃ**—ಹೆಚ್ಚಾಗಿ ಯಜನಮಾಡುವವನೂ ಆದ । **ಯಃ**—ಯಾವ (ಅಗ್ನಿಯು) । **ಮರ್ತ್ಯೇಷು** –ಮರಣಾಧೀನರಾದ (ನಮ್ಮಲ್ಲಿ ಇದ್ದು) । **ದೇವಾನ್**—ದೇವತೆಗಳನ್ನು । **ಕೃಣೋತಿ ಇತ್**—(ಹವಿರ್ಯುಕ್ತರನ್ನಾಗಿ) ಮಾಡಿಯೇ ಮಾಡುತ್ತಾನೋ । **ಅಸ್ಮೈ ಅಗ್ನಯೇ**—ಅಂತಹ ಅಗ್ನಿಗೆ । **ಕಥಾ**—ಹೇಗೆ (ಯಾವ ಪ್ರಕಾರವಾಗಿ) । **ದಾಶೇಮ**—ಹವಿರಾದಿಗಳನ್ನು ಕೊಡೋಣ? । **ಭಾಮಿನೇ**- ತೇಜಸ್ವಿಯಾದ (ಅಗ್ನಿಗೆ) । **ದೇವಜುಷ್ಟಾ**—ದೇವತೆಗಳಿಂದ ಸೇವಿಸಲ್ಪಡುವ । **ಗೀಃ** (ಸ್ತುತಿರೂಪವಾದ) ವಾಕ್ಯ । **ಕಾ**—ಎಂತಹುದು? । **ಉಚ್ಯತೇ**—(ಹೇಗೆ) ಉಚ್ಚರಿಸಲ್ಪಡುತ್ತದೆ ?

॥ ಭಾವಾರ್ಥ ॥

ಅಮರನೂ, ಸತ್ಯವಂತನೂ, ದೇವತೆಗಳ ಹೋತೃವೂ, ಯಜ್ಞಕರ್ತೃವೂ ಆದ ಯಾವ ಅಗ್ನಿಯು, ಮರ್ತ್ಯರಾದ ನಮ್ಮಗಳಲ್ಲಿ ಇದ್ದು, ದೇವತೆಗಳಿಗೆ ಹವಿರಾದಿಗಳನ್ನು ಒದಗಿಸುತ್ತಾನೋ ಅಂತಹ ಅಗ್ನಿಗೆ ನಾವು ಅರ್ಪಿಸಬಹುದಾದ (ಹವಿರಾದಿಗಳು) ಎಂತಹವು? ಅಥವಾ ಕಾಂತಿಯುಕ್ತನಾದ ಅವನಿಗೆ ದೇವತೆಗಳಿಗೊಪ್ಪುವ ರೀತಿಯಲ್ಲಿ ಉಪಯೋಗಿಸಬಹುದಾದ ಸ್ತುತಿಯಾವರೂ ಯಾವುದು ?

## English Translation

What (oblations) may we offer to Agni? What praise is addressed to the luminous (Agni) that is agreeable to the Gods? that Agni who is immortal and observant of truth, who is the invoker of the Gods, the performer of sacrifices, and who (present) amongst men, conveys oblations to the deities,

॥ ವಿಶೇಷವಿಷಯಗಳು ॥

**ಕಥಾ ದಾಶೇಮ ಅಗ್ನಯೇ**—ಹೇಗೆ ಅಥವಾ ಯಾವ ವಿಧಾನದಿಂದ ಅಗ್ನಿಗೆ ಹವಿಸ್ಸನ್ನರ್ಪಿಸೋಣ? ಅಗ್ನಿಗೆ ಅನುರೂಪವಾದ ಮತ್ತು ಶ್ರೇಷ್ಠವಾದ ಹವಿರಾದಿ ದ್ರವ್ಯಗಳನ್ನು ಅರ್ಪಿಸಲು ನಮ್ಮಂತಹ ಮನುಷ್ಯರಿಗೆ ಅಸಾಧ್ಯವೆಂದಭಿಪ್ರಾಯವು

**ಕಾ ದೇವಜುಷ್ಟಾ ಗೀಃ ಅಸ್ಮೈ ಭಾಮಿನೇ ಉಚ್ಯತೇ**—ಇಂತಹ ತೇಜಸ್ವಿಯಾದ ಅಗ್ನಿಗೆ ಅರ್ಪಿಸುವ ಸ್ತೋತ್ರರೂಪವಾದ ವಾಕ್ಯವು ಹೇಗೆ ಇರಬೇಕು? ಅಂತಹ ಉತ್ತಮವಾದ ಸ್ತೋತ್ರವು ಯಾವುದು? ನಾವು ಅಗ್ನಿಯ ಗುಣಗಳಿಗೆ ಅನುಸಾರವಾದ ಉತ್ತಮವಾದ ಸ್ತೋತ್ರವನ್ನು ಮಾಡಲಸಮರ್ಥರೆಂದರ್ಥವು.

**ದೇವಜುಷ್ಟಾ—ಜುಷೀ ಪ್ರೀತಿಸೇವನಯೋಃ । ಸರ್ವೈರ್ದೇವೈಃಸೇವಿತವ್ಯಾ ।** ಸಮಸ್ತ ದೇವತೆಗಳಿಗೂ ಇಷ್ಟವಾದ, ಪ್ರೀತಿಪಾತ್ರವಾದ

**ಮರ್ತ್ಯೇಷು**—ಮರಣಧರ್ಮಯುಕ್ತರಾದ ಮನುಷ್ಯರಲ್ಲಿ ಎಂದರೆ ಸ್ವಭಾವಸಿದ್ಧವಾಗಿ ಸಾಯಿಗೀಡಾಗುವವರು, ಮನುಷ್ಯರು ಹುಟ್ಟಿದ ಮನುಷ್ಯರೆಲ್ಲ ಒಂದಲ್ಲ ಒಂದು ದಿನ ಸಾವಿಗೀಡಾಗಲೇ ಬೇಕು ಆದುದರಿಂದ ಮನುಷ್ಯರನ್ನು ಮರ್ತ್ಯರೆಂದೂ, ಮರಣಧರ್ಮರಹಿತರಾದ ದೇವತೆಗಳನ್ನು ಅಮರ್ತ್ಯರೆಂದೂ ಹೇಳುವ ರೂಢಿ ಇರುವುದು ಈ ಅರ್ಥದಲ್ಲಿ ಮರ್ತ್ಯ, ಅಮರ್ತ್ಯ ಎಂಬ ಶಬ್ದಗಳ ಪ್ರಯೋಗವು ಋಗ್ವೇದದಲ್ಲಿ ವಿಶೇಷವಾಗಿರುವುದು.

**ಅಮೃತಃ—ಮರಣರಹಿತಃ ।** ಸಾವಿಲ್ಲದವನು, ಯಾವಾಗಲೂ ಇರುವವನು

**ಋತಾವಾ**—ಋತವೆಂದರೆ ಸತ್ಯ ಅಥವಾ ಯಜ್ಞ ಋತಾವಾ ಎಂದರೆ ಸತ್ಯಸ್ವಭಾವದವನು ಅಥವಾ ಯಜ್ಞಾದಿಗಳಲ್ಲಿ ಪೂಜಾರ್ಹನಾದವನು

**ಹೋತಾ**—ಮನುಷ್ಯರು ಮಾಡುವ ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ದೇವತೆಗಳನ್ನು ಆಹ್ವಾನ ಮಾಡುವವನು. (ಅಗ್ನಿಯು)

**ಯಜಿಷ್ಠಃ—ಅತಿಶಯೇನ ಯಷ್ಟಾ ।** ಹೋಮನಿಷ್ಪಾದಕನು. ಯಜ್ಞದಲ್ಲಿ ಯಜಮಾನನು ಅಗ್ನಿಯಲ್ಲಿ ಹೋಮಮಾಡಿದ ಆಹುತಿಗಳನ್ನು ದೇವತೆಗಳಿಗೆ ಒಯ್ಯುವುದರಿಂದ ಅಗ್ನಿಯನ್ನು ಯಜ್ಞನಿಷ್ಪಾದಕನೆಂದು ಹೇಳುವರು ಅಥವಾ ಅಗ್ನಿಯಿಲ್ಲದೆ ಯಜ್ಞವಿಲ್ಲವಾದ್ದರಿಂದಲೂ ಯಜ್ಞದಲ್ಲಿ ಅಗ್ನಿಗೇ ಮುಖ್ಯಪಾತ್ರವಿರುವುದರಿಂದಲೂ ಅಗ್ನಿಯನ್ನು ಯಜಿಷ್ಠ ಎಂದು ಹೇಳುವ ರೂಢಿ ಇದೆ

॥ ವ್ಯಾಕರಣಪ್ರಕ್ರಿಯಾ ॥

**ಕಥಾ**—ಕಿಮ್ ಶಬ್ದ. **ಥಾ ಹೇತೌ ಚ ಛಂದಸಿ** (ಪಾ ಸೂ ೫-೩-೨೬) ಹೇತ್ವರ್ಥದಲ್ಲಿಯೂ ಪ್ರಕಾರಾರ್ಥದಲ್ಲಿಯೂ ಕಿಮ್ ಶಬ್ದಕ್ಕೆ ಥಾ ಪ್ರತ್ಯಯ ಎಂಬುದರಿಂದ ಇಲ್ಲಿ ಪ್ರಕಾರಾರ್ಥದಲ್ಲಿ ಥಾ ಪ್ರತ್ಯಯ **ಪ್ರಾಗ್‌ದಿಶೋ ವಿಭಕ್ತಿಃ** (ಪಾ ಸೂ. ೫-೩-೧) ಎಂಬುದರಿಂದ ಇದಕ್ಕೆ ವಿಭಕ್ತಿ ಸಂಜ್ಞೆ ಇರುವುದರಿಂದ ಇದು ಪರವಾದಾಗ **ಕಿಮಃ ಕಃ** (ಪಾ. ಸೂ ೭-೨-೧೦೩) ಎಂಬುದರಿಂದ ಕಿಮಿಗೆ ಕಾದೇಶ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ದಾಶೇಮ**— ದಾಶೃ ದಾನೇ ಧಾತು ವಿಧಿಲಿಙ್ ಉತ್ತಮಪುರುಷದಲ್ಲಿ ಮಸ್ ಪ್ರತ್ಯಯ **ನಿತ್ಯಂಙಿತಃ** (ಪಾ. ಸೂ ೩-೪-೯೯) ಸೂತ್ರದಿಂದ ಅದರ ಸಕಾರಕ್ಕೆ ಲೋಪ. **ಯಾಸುಟ್ ಪರಸ್ಮೈ** ಸೂತ್ರದಿಂದ ಯಾಸುಟಾಗಮ. ಶಪ್ ವಿಕರಣ. **ಅತೋಯೇಯಃ** (ಪಾ.ಸೂ.೭-೨-೮೦) ಎಂಬುದರಿಂದ ಇಯಾದೇಶ **ಲೋಪೋವ್ಯೋರ್ವಲಿ** ಎಂಬುದರಿಂದ ಯಕಾರಲೋಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ದೇವಜುಷ್ಟಾ**—ಜುಷೀ ಪ್ರೀತಿಸೇವನಯೋಃ ಧಾತು ಕರ್ಮಣಿಯಲ್ಲಿ ಇದಕ್ಕೆ **ನಿಷ್ಠಾ** ಎಂಬುದರಿಂದ ಕ್ತ ಪ್ರತ್ಯಯ. ಷ್ಟುತ್ವದಿಂದ ತಕಾರಕ್ಕೆ ಟಕಾರಾದೇಶ ದೇವೈಃ ಜುಷ್ಟಾ ದೇವಜುಷ್ಟಾ **ತೃತೀಯಾಕರ್ಮಣಿ** (ಪಾ. ಸೂ ೬-೨-೪೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ

**ಉಚ್ಯತೇ**—ವಚ ಪರಿಭಾಷಣೇ ಧಾತು. ಕರ್ಮಣಿಯಲ್ಲಿ **ಲಟ್** ಪ್ರಥಮಪುರುಷ ಏಕವಚನಕ್ಕೆ **ಟಿತಆತ್ಮನೇಪದಾನಾಂ**—ಸೂತ್ರದಿಂದ ಏತ್ವ. **ಸಾರ್ವಧಾತುಕೇ ಯಕ್**—(ಪಾ. ಸೂ. ೩-೧-೬೭) ಎಂಬುದರಿಂದ ಯಕ್. ಕಿತ್ ಪ್ರತ್ಯಯವಾದುದರಿಂದ **ವಚಿಸ್ವಪಿಯಜಾದೀನಾಂ ಕಿತಿ** (ಪಾ ಸೂ ೬-೧-೧೫) ಎಂಬುದರಿಂದ ಧಾತುವಿನ ವಕಾರಕ್ಕೆ ಸಂಪ್ರಸಾರಣ ಪೂರ್ವರೂಪ ಉಚ್ಯತೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಭಾಮಿನೇ**—ಭಾ ದೀಪ್ತೌ ಧಾತು ಇದಕ್ಕೆ **ಅರ್ತಿಸ್ತುಸು**—(ಉ. ಸೂ. ೧-೧೩೭) ಎಂಬುದರಿಂದ ಮನ್ ಪ್ರತ್ಯಯ. ಭಾಮ ಎಂದು ರೂಪವಾಗುತ್ತದೆ ಭಾಮಃ ಅಸ್ಯ ಅಸ್ತಿ ಎಂದು ಅರ್ಥ ವಿವಕ್ಷಾಮಾಡಿದಾಗ **ಅತಇನಿಠನೌ**

(ಪಾ. ಸೂ ೫-೨-೧೧೫) ಎಂಬುದರಿಂದ ಇನಿಪ್ರತ್ಯಯ. ಭಾಮಿನ್ ಶಬ್ದವಾಗುತ್ತದೆ ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ

**ಋತಾವಾ**– ಋತಂ ಅಸ್ಯ ಅಸ್ತಿ ಇತಿ ಋತಾವಾ **ಛಂದಸೀವನಿಪೌ** ಎಂಬ ವಾರ್ತಿಕದಿಂದ ಮತ್ವರ್ಥದಲ್ಲಿ ವನಿಪ್ ಪ್ರತ್ಯಯ ಋತವನ್ ಶಬ್ದವಾಗುತ್ತದೆ. ಪ್ರಥಮಾ ಸು ಪರವಾದಾಗ **ಸರ್ವನಾಮಸ್ಥಾನೇಚಾಽಸಂಬುದ್ಧೌ** ಸೂತ್ರದಿಂದ ಉಪಧಾದೀರ್ಘ **ಹಲ್ಙ್ಯಾಭ್ಯೋ**— ಸೂತ್ರದಿಂದ ಸುಲೋಪ **ನಲೋಪಃ ಪ್ರಾತಿ**— ಎಂಬುದರಿಂದ ನಲೋಪ **ಅನ್ಯೇಷಾಮಪಿ ದೃಶ್ಯತೇ** (ಪಾ ಸೂ ೬-೩-೧೩೭) ಎಂಬುದರಿಂದ ತಕಾರಕ್ಕೂ ದೀರ್ಘ ಬರುತ್ತದೆ

**ಯಜಿಷ್ಠಃ**-–ಅತಿಶಯೇನ ಯಷ್ಟಾ ಯಜಿಷ್ಠಃ **ತುಶ್ಛಂದಸಿ** (ಪಾ. ಸೂ ೫-೩-೫೯) ಎಂಬುದರಿಂದ ಅತಿಶಯಾರ್ಥತೋರುವಾಗ ಯಷ್ಟೃ ಎಂಬ ತೃಜಂತದ ಮೇಲೆ ಇಷ್ಠನ್ ಪರವಾದಾಗ ತೃಚ್ಚಿಗೆ ಲೋಪ ಯಜಿಷ್ಠ ಎಂದು ರೂಪವಾಗುತ್ತದೆ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಕೃಣೋತಿ**—ಕೃವಿ ಹಿಂಸಾಕರಣಯೋಶ್ಚ ಧಾತು. ಲಟ್ ಪ್ರಥಮಪುರುಷಏಕವಚನದಲ್ಲಿ ತಿಪ್ ಪ್ರತ್ಯಯ. **ಧಿನ್ವಿಕೃಣ್ವ್ಯೋರಚ** (ಪಾ. ಸೂ. ೩-೧-೮೦) ಎಂಬುದರಿಂದ ಅಕಾರಾಂತಾದೇಶ ಉಪ್ರ. ಇದಿತ್ತಾದುದರಿಂದ ನುಮಾಗವು ಯಚ್ಛಬ್ದಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** (ಪಾ ಸೂ ೮-೧-೬೬) ಎಂಬುದರಿಂದ ನಿಘಾತಸ್ವರ ನಿಷೇಧ ಬರುತ್ತದೆ ಉ ಪ್ರತ್ಯಯ ಸ್ವರ ಉಳಿಯುವುದರಿಂದ ಮಧ್ಯೋದಾತ್ತವಾಗುತ್ತದೆ ॥ ೧ ॥



॥ ಸಂಹಿತಾಪಾಠಃ ॥

ಯೋ ಅಧ್ವರೇಷು ಶಂತಮ ಋತಾವಾ ಹೋತಾ ತಮೂ

ನಮೋಭಿರಾ ಕೃಣುಧ್ವಂ ।

ಅಗ್ನಿರ್ಯದ್ವೇರ್ಮರ್ತಾಯ ದೇವಾನ್ತ್ಸ ಚಾ ಬೋಧಾತಿ ಮನ-

ಸಾ ಯಜಾತಿ ॥ ೨ ॥

॥ ಪದಪಾಠಃ ॥

ಯಃ । ಅಧ್ವರೇಷು । ಶಂಽತಮಃ । ಋತಽವಾ । ಹೋತಾ । ತಂ । ಊಂ ಇತಿ । ನಮಃಽಭಿಃ । ಆ । ಕೃಣುಧ್ವಂ ।

ಅಗ್ನಿಃ । ಯತ್ । ವೇಃ । ಮರ್ತಾಯ । ದೇವಾನ್ । ಸಃ । ಚ । ಬೋಧಾತಿ । ಮನಸಾ । ಯಜಾತಿ ॥ ೨ ॥

॥ ಸಾಯಣಭಾಷ್ಯಂ ॥

ಯೋಽಗ್ನಿರಧ್ವರೇಷು ಯಾಗೇಷು ಶಂತಮೋಽತಿಶಯೇನ ಸುಖಕಾರೀ ಋತಾವಾ ಸತ್ಯವಾನ್ । ಯಥಾರ್ಥದರ್ಶೀತ್ಯರ್ಥಃ । ಹೋತಾ ದೇವಾನಾಮಾಹ್ವಾತಾ ಭವತಿ ಹೇ ಋತ್ವಿಗ್ಯಜಮಾನಾ ಯೂಯಂ ತಮು ತಮೇವಾಗ್ನಿಂ ನಮೋಭಿಃ ಸ್ತೋತ್ರೈರಾ ಕೃಣುಧ್ವಂ । ಅಭಿಮುಖೀಕುರುತ । ಯದ್ಯದಾಯಮಗ್ನಿರ್ಮರ್ತಾಯ ಮನುಷ್ಯಾಯ ಯಜಮಾನಾರ್ಥಂ ದೇವಾನ್ವೇಃ ವೇತಿ ಗಚ್ಛತಿ ತದಾನೀಂ ಸೋಽಗ್ನಿರ್ಯಷ್ಟವ್ಯಾನ್ಸರ್ವಾನ್ದೇವಾನ್ಬೋಧಾತಿ ಚ । ಜಾನಾತಿ ಚ । ಜ್ಞಾತ್ವಾ ಚ ಮನಸಾ ನಮಸಾ ತಾನ್ಯಜಾತಿ । ಹವಿರ್ಭಿಃ ಪೂಜಯತಿ । ಅತಸ್ತಮೇವಾಗ್ನಿಮಾ ಕೃಣುಧ್ವಮಿತಿ ಯೋಜ್ಯಂ ॥ ವೇಃ । ವೀ ಗತ್ಯಾದಿಷು । ಛಂದಸಿ ಲುಙ್‍ಲಙ್‍ಲಿಟ ಇತಿ ವರ್ತಮಾನೇ ಲಙ್ । ತಿಙಾಂ ತಿಙೋ ಭವಂತೀತಿ ಪ್ರಥಮಪುರುಷೈಕವಚನಸ್ಯ ಮಧ್ಯಮಪುರುಷೈಕವಚನಾದೇಶಃ । ಬೋಧಾತಿ । ಬುಧ ಅವಗಮನೇ । ಲೇಟ್ಯಾಡಾಗಮಃ । ಶಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಚವಾಯೋಗೇ ಪ್ರಥಮೇತಿ ನಿಘಾತಪ್ರತಿಷೇಧಃ । ಮನಸಾ । ಮಕಾರನಕಾರಯೋಃ ಸ್ಥಾನವಿಪರ್ಯಯಃ ॥

॥ ಪ್ರತಿಪದಾರ್ಥ ॥

**ಯಃ**—ಯಾವನು । **ಅಧ್ವರೇಷು**—ಯಾಗಗಳಲ್ಲಿ । **ಶಂತಮಃ**—ಅತ್ಯಂತ ಸುಖಕಾರಿಯೂ । **ಋತಾವಾ**—ಯಥಾರ್ಥದರ್ಶಿಯೂ । **ಹೋತಾ**—ದೇವತೆಗಳನ್ನು ಆಹ್ವಾನ ಮಾಡುವವನೂ (ಆಗಿದಾನೆಯೋ) । **ತಮು**—ಅವನೇ ಅಗ್ನಿಯನ್ನೇ । **ನಮೋಭಿಃ**—ಸ್ತೋತ್ರಗಳಿಂದ । **ಆ ಕೃಣುಧ್ವಂ**—ಅಭಿಮುಖನನ್ನಾಗಿ ಮಾಡಿಕೊಳ್ಳಿರಿ । **ಯತ್**—ಯಾವಾಗ । **ಅಗ್ನಿಃ**—ಅಗ್ನಿಯು । **ಮರ್ತಾಯ**—ಮನುಷ್ಯನಿಗಾಗಿ (ಯಜಮಾನನಿಗೋಸ್ಕರ) । **ದೇವಾನ್**—ದೇವತೆಗಳನ್ನು (ದೇವತೆಗಳ ಹತ್ತಿರ) ಆಹ್ವಾನಮಾಡುವುದಕ್ಕಾಗಿ । **ವೇಃ**—ಹೋಗುತ್ತಾನೆಯೋ । (**ತದಾನೀಂ**—ಆಗ) । **ಸಃ**—ಆ ಅಗ್ನಿಯು । **ಬೋಧಾತಿ**—(ಯಷ್ಟವ್ಯರಾದ ದೇವತೆಗಳನ್ನು) ತಿಳಿಯುತ್ತಾನೆ । **ಮನಸಾ**—ಸ್ತುತಿಗಳಿಂದ । **ಯಜಾತಿ ಚ**—(ಹವಿರಾದಿಗಳಿಂದ) ಪೂಜಿಸಿಯೂ ಪೂಜಿಸುತ್ತಾನೆ

|| ಭಾವಾರ್ಥ ||

ಅಗ್ನಿಯು ಯಾಗದ ಯಜಮಾನನ ಪರವಾಗಿ ದೇವತೆಗಳ ಹತ್ತಿರ ಹೊರಟಾಗ, (ಯಾರು ಯಾರನ್ನು ಪೂಜಿಸಬೇಕೆಂಬುದನ್ನು) ತಿಳಿದು, (ಅವರವರನ್ನು ತಕ್ಕ) ಸ್ತುತಿಗಳಿಂದ ತೃಪ್ತಿಪಡಿಸುತ್ತಾನೆ ಆದ್ದರಿಂದ ಯಾಗ ಗಳಲ್ಲಿ ಸುಖಕರನೂ, ಯಥಾರ್ಥದರ್ಶಿಯೂ, ದೇವತೆಗಳನ್ನು ಕರೆಯುವವನೂ ಆದ ಅಗ್ನಿಯನ್ನು ಸ್ತುತಿವಾಕ್ಯಗಳಿಂದ ಅಭಿಮುಖೀಕರಿಸಿಕೊಳ್ಳಿ

## English Translation.

bring hither, with prises, him who is most constant in sacrificies, observant of truth, and the invoker (of the Gods), for Agni, when he repairs to the Gods on the part of man, knows those (who are to be worshipped), and worships them with reverence.

|| ವಿಶೇಷವಿಷಯಗಳು ||

**ಶಂತಮಃ**—**ಶಿಂಬಾತಾ, ಶತರಾ** ಮೊದಲಾದ ಇಪ್ಪತ್ತು ಸುಖನಾಮಗಳ ಮಧ್ಯದಲ್ಲಿ ಶಂ ಎಂಬ ಶಬ್ದವು ಪಠಿತವಾಗಿರುವುದರಿಂದ ಶಂ ಎಂದರೆ ಸುಖವು (ನಿ ೩-೧೩) **ಅತಿಶಯೇನ ಸುಖಕಾರೀ**—(ಮನುಷ್ಯರಿಗೆ) ವಿಶೇಷ ವಾಗಿ ಸುಖವನ್ನುಂಟುಮಾಡುವವನು ಎಂದರ್ಥವು.

**ಋತಾವಾ, ಹೋತಾ ಮರ್ತಾಯ**—ಈ ಶಬ್ದಗಳ ವಿವರಣೆಯು ಹಿಂದಿನ ಋಕ್ಕಿನಲ್ಲಿ ಇರುವುದು

**ವೇಃ**—**ವೀ ಗತ್ಯಾದಿಷು ।** ವೀ ಧಾತುವಿಗೆ ಗತ್ಯರ್ಥವಿರುವುದು. ಇಲ್ಲಿ ವೇಃ ಎಂದು ಮಧ್ಯಮಪುರುಷೈ ಕವಚನಕ್ಕೆ ಪ್ರಥಮಪುರುಷೈಕವಚನದ ಅರ್ಥವನ್ನು ಹೇಳಬೇಕೆಂದು ಭಾಷ್ಯಕಾರರು ಹೇಳಿರುವರು. **ವೇಃ**—ಹೋಗುತ್ತೀಯೆ ಎನ್ನುವುದಕ್ಕೆ ಬದಲಾಗಿ **ವೇಃ—ಹೋಗುತ್ತಾನೆ ಎಂಬರ್ಥ**ವನ್ನು ಹೇಳಬೇಕೆಂದಭಿಪ್ರಾಯವು

**ದೇವಾನ್ ಸ ಚ ಬೋಧಾತಿ**—ದೇವತೆಗಳನ್ನು ತಿಳಿಯುತ್ತಾನೆ ಎಂದರೆ ಯಜಮಾನನು ಯಜ್ಞದಲ್ಲಿ ಯಾವ ಯಾವ ದೇವತೆಗಳನ್ನುದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡುತ್ತಾನೆಯೋ ಆಯಾ ದೇವತೆಗಳನ್ನು ಯಜ್ಞ ವೇದಿಗೆ ಕರೆತರುವನೆಂದಭಿಪ್ರಾಯವು ಯಾವ ಕಾಲದಲ್ಲಿ ಯಾವ ದೇವತೆಗಳನ್ನು ಯಜ್ಞಭೂಮಿಗೆ ಕರೆತರಬೇಕೆಂಬ ತಿಳಿವಳಿಕೆಯು ಅಗ್ನಿಗೆ ಇರುವುದೆಂದಭಿಪ್ರಾಯವು

**ನಮೋಭಿಃ**—ನಮಸ್ಕಾರಗಳಿಂದ, ಸ್ತೋತ್ರಗಳಿಂದ (ನಿ. ೩-೨೦)

|| ವ್ಯಾಕರಣಪ್ರಕ್ರಿಯಾ ||

**ಶಂತಮಃ**—ಅತಿಶಯೇನ ಶಂ ಸುಖಂ ಕರೋತಿ. ಶಂತಮಃ **ಅತಿಶಾಯನೇ ತಮಬಿಷ್ಠನೌ** ಎಂಬುದರಿಂದ ತಮಪ್ ಪ್ರತ್ಯಯ ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ

**ಋತಾವಾ**— ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿವೆ.

**ಕೃಣುಧ್ವಮ್**—ಕೃವಿ ಹಿಂಸಾಕರಣಯೋಶ್ಚ. ಧಾತು ಲೋಟ್‌ಮಧ್ಯಮಪುರುಷ ಬಹುವಚನದಲ್ಲಿ ಧ್ವಮ್ ಪ್ರತ್ಯಯ. **ಧಿನ್ವಿಕೃಣ್ವ್ಯೋರಚ** (ಪಾ ಸೂ. ೩-೧-೮೦) ಎಂಬುದರಿಂದ **ಅಕಾರಾಂತಾದೇಶ** ಉ ವಿಕರಣ ಇದಿತ್ತಾದುದರಿಂದ ಧಾತುವಿಗೆ ನುಮಾಗಮ. **ಅತೋಲೋಪಃ** ಎಂಬುದರಿಂದ ಉ ನಿಮಿತ್ತವಾಗಿ ಅಕಾರಲೋಪ. ಅದಕ್ಕೆ **ಅಚಃಪರಸ್ಮಿನ್**— ಸೂತ್ರದಿಂದ ಸ್ಥಾನಿವದ್ಭಾವ ಬರುವುದರಿಂದ ಉ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಉಕಾರಕ್ಕೆ ಧ್ವಮ್ ನಿಮಿತ್ತವಾಗಿ ಗುಣ ಬರಲು **ಕ್ಙಿತಿಚ** ಎಂಬುದರಿಂದ ನಿಷೇಧ ಬರುತ್ತದೆ. **ಸಾರ್ವಧಾತುಕಮಪಿತ್** ಎಂಬುದರಿಂದ ಅದಕ್ಕೆ ಙಿತ್ತ್ವ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವೇಃ**— ವೀ ಧಾತುವು ಗತ್ಯಾದಿ ಅನೇಕಾರ್ಥಗಳಲ್ಲಿದೆ. ವರ್ತಮಾನಾರ್ಥತೋರುವಾಗ **ಛಂದಸಿ ಲುಙ್ ಲಙ್‌ಲಿಟಃ** ಎಂಬುದರಿಂದ ಲಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. **ಸಾರ್ವಧಾತುಕಾರ್ಧಧಾತುಕಯೋಃ** ಸೂತ್ರದಿಂದ ಸಿಪ್ ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಇಲ್ಲಿ **ತಿಙಾಂ ತಿಙೋ ಭವಂತಿ** ಎಂಬುದರಿಂದ ಪ್ರಥಮಪುರುಷ ಪ್ರತ್ಯಯಸ್ಥಾನದಲ್ಲಿ ಮಧ್ಯಮಪುರುಷ ಬಂದಿದೆ ಎಂದು ತಿಳಿಯಬೇಕು. **ಬಹುಲಂ ಛಂದಸ್ಯಮಾಙ್ ಯೋಗೇಽಪಿ** ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ. ಯತ್ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಧಾತುವಿನ ಅಂತೋದಾತ್ತಸ್ವರ ಉಳಿಯುತ್ತದೆ.

**ಬೋಧಾತಿ**—ಬುಧ ಅವಗಮನೇ. ಧಾತು ಇದಕ್ಕೆ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಲೇಟೋಡಾಟೌ** (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಆಡಾಗಮ. **ಕರ್ತರಿ ಶಪ್** ಸೂತ್ರದಿಂದ ಶಪ್‌ವಿಕರಣ. ತನ್ನಿಮಿತ್ತವಾಗಿ **ಪುಗಂತಲಘೂ**— ಸೂತ್ರದಿಂದ ಧಾತುವಿನ ಲಘೂಪಧೆಗೆ ಗುಣ ಬೋಧಾತಿ ಎಂದು ರೂಪವಾಗುತ್ತದೆ. ಹಿಂದೆ ಚಕಾರಯೋಗವಿರುವುದರಿಂದ ಚವಾಯೋಗೇಪ್ರಥಮಾ (ಪಾ ಸೂ ೮-೧-೫೯) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದ ಶಪ್ ಪಿತ್ತಾದುದರಿಂದ ಅನುದಾತ್ತ ಆಗ ಧಾತುಸ್ವರ ಉಳಿಯುತ್ತವ.

**ಮನಸಾ**— ನಮಸಾ ಎಂದು ರೂಪ. ಛಂದಸ್ಸಿನಲ್ಲಿ ಮಕಾರ ನಕಾರಗಳಿಗೆ ವ್ಯತ್ಯಯ ಬಂದಿವೆ.

**ಯಜಾತಿ**—ಯಜ ದೇವಪೂಜಾಸಂಗತಿಕರಣದಾನೇಷು. ಧಾತು ಹಿಂದಿನಂತೆ ಲೇಟ್ ಪ್ರಥಮಪುರುಷ ಏಕವಚನರೂಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೨ ॥



॥ ಸಂಹಿತಾಪಾಠಃ ॥

ಸ ಹಿ ಕ್ರತುಃ ಸ ಮರ್ಯಃ ಸ ಸಾಧುರ್ಮಿತ್ರೋ ನ ಭೂದದ್ಭುತಸ್ಯ ರಥೀಃ ।
ತಂ ಮೇಧೇಷು ಪ್ರಥಮಂ ದೇವಯಂತೀರ್ವಿಶ ಉಪ ಬ್ರುವತೇ ದಸ್ಮಮಾರೀಃ ॥ ೩ ॥

॥ ಪದಪಾಠಃ ॥

ಸಃ । ಹಿ । ಕ್ರತುಃ । ಸಃ । ಮರ್ಯಃ । ಸಃ । ಸಾಧುಃ । ಮಿತ್ರಃ । ನ । ಭೂತ್ । ಅದ್ಭುತಸ್ಯ । ರಥೀಃ ।
ತಂ । ಮೇಧೇಷು । ಪ್ರಥಮಂ । ದೇವಽಯಂತೀಃ । ವಿಶಃ । ಉಪ । ಬ್ರುವತೇ । ದಸ್ಮಂ । ಆರೀಃ ॥ ೩ ॥

॥ ಸಾಯಣಭಾಷ್ಯಂ ॥

ಸ್ಯ ಹ್ಯಗ್ನಿಃ ಕ್ರತುಃ ಕರ್ಮಣಾಂ ಕರ್ತಾ । ಸ ಏವ ಮರ್ಯೋ ಮಾರಯಿತಾ ವಿಶ್ವಸ್ಯೋಪಸಂಹರ್ತಾ ಸಾಧುಃ ಸಾಧಯಿತೋತ್ಪಾದಯಿತಾಪಿ ಸ ಏವಾದ್ಭುತಸ್ಯಾಭೂತಸ್ಯಾಲಬ್ಧಸ್ಯ ಧನಸ್ಯ ರಥೀ ರಂಹಯಿತಾ ಪ್ರಾಪಯಿತಾ ಭೂತ್ । ಭವತಿ । ತತ್ರ ದೃಷ್ಟಾಂತಃ । ಮಿತ್ರೋ ನ । ಯಥಾ ಸಖಾ ಧನಾನಿ ಪ್ರಾಪಯತಿ ತದ್ವತ್ । ಏವಂಭೂತೋ ಯೋಽಗ್ನಿಸ್ತಮೇವ ಮೇಧೇಷು ಯಜ್ಞೇಷು ದೇವಯಂತೀರ್ದೇವಯಂತ್ಯೋ ದೇವಾನಾತ್ಮನ ಇಚ್ಛಂತ್ಯೋ ವಿಶಃ ಪ್ರಜಾಃ ಪ್ರಥಮಮುಪ ಬ್ರುವತೇ । ಸ್ತುತಿಭಿರುಪೇತ್ಯ ಪ್ರಧಾನಭೂತ ಇತಿ ಕಥಯಂತಿ । ಕೀದೃಶ್ಯೋ ವಿಶಃ । ದಸ್ಮಂ ದರ್ಶನೀಯಂ ತಮಗ್ನಿಮಾರೀರ್ಗಚ್ಛಂತ್ಯಃ । ಭಜಂತ್ಯ ಇತ್ಯರ್ಥಃ ॥ ಮರ್ಯಃ । ಮೃಙ್ ಪ್ರಾಣತ್ಯಾಗೇ । ಅಸ್ಮಾದಂತರ್ಭಾವಿತಣ್ಯರ್ಥಾಚ್ಛಂದಸಿ ನಿಷ್ಟರ್ಕ್ಯೇತ್ಯಾದೌ ನಿಪಾತನಾದ್ಯತ್ । ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾತ್ಕರ್ತರಿ ದ್ರಷ್ಟವ್ಯಃ । ಯತೋಽನಾವ ಇತ್ಯಾದ್ಯುದಾತ್ತತ್ವಂ । ದೇವಯಂತೀಃ । ವಾ ಛಂದಸೀತಿ

**ಪೂರ್ವಸವರ್ಣದೀರ್ಘತ್ವಂ ।, ಅರೀಃ । ಋ ಗತೌ । ಜನಿಘಸಿಭ್ಯಾಮಿಣ್ । ಉ ೪-೧೨೯ । ಇತಿ ಬಹುಲ- ಗ್ರಹಣಾದಸ್ಮಾದಪೀಣ್ಪ್ರತ್ಯಯಃ । ಕೃದಿಕಾರಾದಕ್ತಿನ ಇತಿ ಙೀಷ್ । ವಾ ಛಂದಸೀತಿ ಪೂರ್ವಸವರ್ಣ- ದೀರ್ಘತ್ವಂ । ವ್ಯತ್ಯಯೇನಾದ್ಯುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಸ ಹಿ**—ಅವನೇ (ಆ ಅಗ್ನಿಯೇ) । **ಕ್ರತುಃ**—ಕರ್ಮಗಳನ್ನು ಮಾಡುವವನು । **ಸಃ**—ಅವನೇ । **ಮರ್ಯಃ**—(ಸಮಸ್ತಪದಾರ್ಥಗಳಿಗೂ) ಸಂಹರ್ತೃವು । **ಸಾಧುಃ**—ಸಾಧಿಸುವವನು । **ಸಃ**—ಅವನೇ । **ಮಿತ್ರೋ ನ**—ಸ್ನೇಹಿತನಂತೆ । **ಅದ್ಭುತಸ್ಯ**—ಅಭೂತವಾದ (ಅಲಬ್ಧವಾದ ಧನವನ್ನು) । **ರಥೀಃ**—ಒದಗಿಸುವವನು । **ಭೂತ್**—ಆಗುತ್ತಾನೆ । **ತಂ**—ಅಂತಹ (ಅಗ್ನಿಯನ್ನೇ) । **ಮೇಧೇಷು**—ಯಜ್ಞಗಳಲ್ಲಿ । **ದೇವಯಂತೀಃ**—ದೇವತೆಗಳನ್ನು ಅಪೇಕ್ಷಿಸುವ (ಪೂಜಿಸುವವರೂ) । **ದಸ್ಮಂ ಅರೀಃ**—ಸುಂದರನಾದ ಅಗ್ನಿಯನ್ನು ಭಜಿಸುವವರೂ ಆದ । **ವಿಶಃ**—ಪ್ರಜೆಗಳು । **ಪ್ರಥಮಂ**—ಆದಿಯಲ್ಲಿ । **ಉಪ ಬ್ರುವತೇ**—ಹೇಳುತ್ತಾರೆ (ಸ್ತೋತ್ರಮಾಡುತ್ತಾರೆ.)

॥ ಭಾವಾರ್ಥ ॥

ಅಗ್ನಿಯೇ ಯಜ್ಞಕರ್ತೃವು. ಅವನೇ ಸಮಸ್ತ ಪದಾರ್ಥಗಳ ಸಂಹರ್ತೃವು ಮತ್ತು ಸೃಷ್ಟಿಕರ್ತೃವು, ಸ್ನೇಹಿತನಂತೆ ಅಲಬ್ಧವಾದ ಧನವನ್ನು ಒದಗಿಸುವವನೂ ಅವನೇ, ಇಂತಹ ಸುರೂಪಿಯಾದ ಅಗ್ನಿಯನ್ನೇ, ದೇವತೆಗಳನ್ನು (ಯಜ್ಞದಲ್ಲಿ) ಅಪೇಕ್ಷಿಸುವ ಪ್ರಜೆಗಳು ಮೊದಲು ಪೂಜಿಸುತ್ತಾರೆ.

## English Translation.

For he is the performer of rites, he is the destroyer and reviver (of all things), and, like a friend, he is the donor of unattained wealth; all men reverencing the Gods, and approaching the well-looking Agni, repeat his name first in holy rites.

॥ ವಿಶೇಷವಿಷಯಗಳು ॥

**ಸ ಹಿ ಕ್ರತುಃ—ಸ ಹ್ಯಗ್ನಿಃ ಕರ್ಮಣಾಂ ಕರ್ತಾ ।** ಆ ಅಗ್ನಿಯೇ ಯಜ್ಞಾದಿಕರ್ಮಗಳನ್ನು ನೆರವೇರಿಸುವವನು. ಅಗ್ನಿಯು ಯಜ್ಞಾದಿಕರ್ಮಗಳಿಗೆ ಅವಶ್ಯಕವಾಗಿ ಬೇಕೇ ಬೇಕು. ಆದ ದರಿಂದ ಅಗ್ನಿಯೇ ಯಜ್ಞಸ್ವರೂಪನಾಗಿರುವನು

**ಸ ಮರ್ಯಃ—ಸ ಏವ ಮಾರಯಿತಾ ವಿಶ್ವಸ್ಯೋಪಸಂಹರ್ತಾ ।** ಅಗ್ನಿಯು ದಹಿಸುವ ಸಾಮರ್ಥ್ಯವುಳ್ಳವನಾದ್ದರಿಂದ ಸಕಲವನ್ನೂ ಸಂಹಾರಮಾಡಲು ಶಕ್ತಿಯುಳ್ಳವನು.

**ಸ ಸಾಧುಃ—ಸಾಧಯಿತಾ, ಉತ್ಪಾದಯಿತಾ ।** ಅಗ್ನಿಯು ಸಂಹಾರಕರ್ತೃಮಾತ್ರವಲ್ಲ, ಸಕಲವನ್ನೂ ಉತ್ಪತ್ತಿಮಾಡತಕ್ಕವನು ಯಜ್ಞಾದಿಗಳಿಗೆ ಮುಖ್ಯಕಾರಣನಾಗಿರುವುದರಿಂದಲೂ ಯಜ್ಞಾದಿಗಳಿಗೆ ವೃಷ್ಟಿಯೂ ವೃಷ್ಟಿಯಿಂದ ಸಸ್ಯಾದಿಗಳ ಉತ್ಪತ್ತಿಯೂ ಪರಂಪರೆಯಾಗಿ ಆಗುವುದರಿಂದ ಅಗ್ನಿಯು ಉತ್ಪತ್ತಿಮಾಡುವನು ಎಂದು ಹೇಳಲಾಗಿದೆ

**ಮಿತ್ರೋ ನ ಅದ್ಭುತಸ್ಯ ರಥೀಃ—ಯಥಾ ಸಖಾ ಧನಾನಿ ಪ್ರಾಪಯತಿ ತದ್ವದಗ್ನಿರಪಿ ಅಭೂತಸ್ಯಾಲಬ್ಧಸ್ಯ ಧನಸ್ಯ ರಂಹಯಿತಾ ಪ್ರಾಪಯಿತಾ ಭೂತ್ ।** ಸ್ನೇಹಿತನಾದವನು ಕಷ್ಟದಲ್ಲಿರುವ ತನ್ನ ಮಿತ್ರರಿಗೆ ಧನಾದಿಗಳನ್ನು ಕೊಟ್ಟು ಸಹಾಯಮಾಡುವಂತೆ ಅಗ್ನಿಯು ತನ್ನನ್ನು ಸ್ತೋತ್ರಮಾಡುವವರಿಗೆ ವಿಶೇಷವಾಗಿ ಧನವನ್ನು ಕೊಟ್ಟು ಕಾಪಾಡುವನು ಎಂದಭಿಪ್ರಾಯವು.

**ಮೇಧೇಷು—ಯಜ್ಞಃ ವೇನಃ** ಮೊದಲಾದ ಹದಿನೈದು ಯಜ್ಞನಾಮಗಳಲ್ಲಿ **ಮೇಧಃ** ಎಂಬ ಶಬ್ದವು ಪಠಿತವಾಗಿರುವುದರಿಂದ ಮೇಧೇಷು ಎಂದರೆ ಯಜ್ಞಗಳಲ್ಲಿ (ನಿ ೩-೧೯)

**ಮೇಧೇಷು ಪ್ರಥಮಂ ದೇವಯಂತೀರ್ವಿಶ ಉಪ ಬ್ರುವತೇ—ದೇವಯಂತೀಃ** ಎಂದರೆ ದೇವತೆಗಳನ್ನು ಯಜ್ಞಭೂಮಿಗೆ ಬರುವಂತೆ ಅಪೇಕ್ಷಿಸುವವರು ಎಂದರ್ಥವು ಇಂತಹ ಯಜಮಾನರಾದಿಯಾದ ಜನರು ಯಜ್ಞಗಳಲ್ಲಿ ದೇವತೆಗಳನ್ನು ಆಹ್ವಾನಮಾಡುವಾಗ ಎಲ್ಲರಿಗಿಂತಲೂ ಮೊದಲು ಅಗ್ನಿಯನ್ನು ಸ್ತೋತ್ರಮಾಡುವರು. ಅಗ್ನಿಯು ಮೂಲಕವೇ ಇತರ ದೇವತೆಗಳನ್ನು ಆಹ್ವಾನಮಾಡಬೇಕಾಗಿರುವುದರಿಂದ ಯಜ್ಞದಲ್ಲಿ ಅಗ್ನಿಗೇ ಪ್ರಧಾನ ಸ್ಥಾನವಿರುವುದು ಅವನನ್ನೇ ಮೊದಲು ಪೂಜಿಸುವರು ಎಂದಭಿಪ್ರಾಯವು

**ದಸ್ಮಂ—ದಸ್ಮಂ** ಎಂದರೆ ದರ್ಶನೀಯಂ-ಸುಂದರನಾದ ಅಗ್ನಿಯನ್ನು

**ಅರೀಃ—ಋ ಗತೌ । ಅರೀರ್ಗಚ್ಛಂತ್ಯಃ ।** ಅಗ್ನಿಯನ್ನು ಸಮೀಪಿಸಿ ಪೂಜಿಸುವವರು ಎಂದಭಿಪ್ರಾಯವು. ಈ ಶಬ್ದವು **ವಿಶಃ** ಎಂಬ ಶಬ್ದಕ್ಕೆ ವಿಶೇಷಣವಾಗಿರುವುದು

॥ ವ್ಯಾಕರಣಪ್ರಕ್ರಿಯಾ ॥

**ಮರ್ಯಃ—**ಮೃಙ್ ಪ್ರಾಣತ್ಯಾಗೇ ಧಾತು. ಪ್ರಯೋಜಕವ್ಯಾಪಾರತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಈ ಧಾತುವಿನ ಮೇಲೆ **ಛಂದಸಿ ನಿಷ್ಟರ್ಕ್ಯದೇ—**(ಪಾ. ಸೂ ೩-೧-೧೨೩) ಎಂಬುದರಿಂದ ನಿಪಾತ ಮಾಡಿರುವುದರಿಂದ ಯತ್ ಪ್ರತ್ಯಯ **ಕೃತ್ಯಲ್ಯುಟೋ ಬಹುಲಂ** (ಪಾ ಸೂ ೩-೩-೧೧೩) ಎಂಬಲ್ಲಿ ಬಹುಲ ಗ್ರಹಣಮಾಡಿರುವುದರಿಂದ ಕರ್ತರಿಯಲ್ಲಿ ಇಲ್ಲಿ ಇದು ಬಂದಿರುತ್ತದೆ ಯತ್ ನಿಮಿತ್ತವಾಗಿ **ಸಾರ್ವಧಾತುಕಾರ್ಧ—**ಎಂಬುದರಿಂದ ಧಾತುವಿನ ಇಕ್ಕಿಗೆ ಗುಣ **ಉರಣ್ರಪರಃ** ಎಂಬ ಪರಿಭಾಷೆಯಿಂದ ರಪರವಾಗಿ ಬರುತ್ತದೆ. **ಯತೋಽನಾವಃ** (ಪಾ. ಸೂ ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಭೂತ್**— ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲುಙ್ ಪ್ರಥಮಪುರುಷ ಏಕವಚನರೂಪ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ತಿಙಂತ ನಿಘಾತಸ್ವರ ಬರುತ್ತದೆ

**ದೇವಯಂತೀಃ**—ದೇವಾನ್ ಆತ್ಮನಃ ಇಚ್ಛಂತ್ಯಃ ದೇವಯಂತ್ಯಃ **ಸುಪಆತ್ಮನಃ ಕ್ಯಚ್** (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ದೇವ ಎಂಬ ಸುಬಂತದ ಮೇಲೆ ಕ್ಯಚ್ ಪ್ರತ್ಯಯ. **ಸನಾದ್ಯಂತಾಧಾತವಃ** ಸೂತ್ರದಿಂದ ದೇವಯ ಎಂಬ ಸನ್ನಂತಕ್ಕೆ ಧಾತುಸಂಜ್ಞಾ ಬರುತ್ತದೆ. **ನಛಂದಸ್ಯಪುತ್ರಸ್ಯ** ಎಂಬುದರಿಂದ ಕ್ಯಚ್‌ನಿಮಿತ್ತವಾಗಿ ಇತ್ವ ದೀರ್ಘಗಳು ಬರುವುದಿಲ್ಲ. ಕ್ಯಜಂತದಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ದೇವಯತ್ ಶಬ್ದವಾಗುತ್ತದೆ. ಇದಕ್ಕೆ ಸ್ತ್ರೀತ್ವ ವಿವಕ್ಷಾಮಾಡಿದಾಗ **ಉಗಿತಶ್ಚ** ಎಂಬುದರಿಂದ ಙೀಪ್ ಪ್ರತ್ಯಯ. ದೇವಯಂತೀ+ಜಸ್ ಎಂದಿರುವಾಗ **ವಾ ಛಂದಸಿ** ಎಂಬುದರಿಂದ ಪೂರ್ವಸವರ್ಣದೀರ್ಘ

**ಬ್ರುವತೇ**--ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು. ಅದಾದಿ ಲಟ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. **ಆತ್ಮನೇಪದೇಷನತಃ** (ಪಾ. ಸೂ. ೭-೧-೫) ಎಂಬುದರಿಂದ ಅಕಾರಭಿನ್ನಾಕ್ಷರದ ಪರದಲ್ಲಿರುವುದರಿಂದ ಝ ಪ್ರತ್ಯಯಕ್ಕೆ ಅತಾದೇಶ. **ಟಿತ ಆತ್ಮನೇಪದಾನಾಂ**— ಸೂತ್ರದಿಂದ ಏತ್ವ **ಸಾರ್ವಧಾತುಕಮಪಿತ್** (ಪಾ ಸೂ ೧-೨-೪) ಸೂತ್ರದಿಂದ ಇದಕ್ಕೆ ಙಿತ್ವ ಬರುವುದರಿಂದ ಇದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ ಬರುವುದಿಲ್ಲ. **ಅಚಿಶ್ನುಧಾತುಭ್ರುವಾಂ**— ಸೂತ್ರದಿಂದ ಉಕಾರಕ್ಕೆ ಉವಙಾದೇಶ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಆರೀಃ**— ಋ ಗತೌ ಧಾತು **ಜನಿಘಸಿಭ್ಯಾಮಿಣ್** (ಉ ಸೂ. ೪-೫೭೯) ಎಂಬುದರಿಂದ ಇದಕ್ಕೂ ಬಹುಲಗ್ರಹಣವಿರುವುದರಿಂದ ಇಣ್ ಪ್ರತ್ಯಯ. ಣಿತ್ತಾದುದರಿಂದ **ಅಚೋಞ್ಣಿತಿ** ಎಂಬುದರಿಂದ ಧಾತುವಿಗೆ ವೃದ್ಧಿ. **ಉರಣ್ರಪರಃ** ಪರಿಭಾಷೆಯಿಂದ ರಪರವಾಗಿ ಬರುತ್ತದೆ. ಆರಿ ಎಂದು ರೂಪವಾಗುತ್ತದೆ ಇದಕ್ಕೆ ಸ್ತ್ರೀತ್ವ ವಿವಕ್ಷಾ ಮಾಡಿದಾಗ, **ಕೃದಿಕಾರಾದಕ್ತಿನಃ**-ಕ್ತಿನ್ ವ್ಯತಿರಿಕ್ತವಾದ ಇಕಾರಾಂತಕೃದಂತ ಶಬ್ದಕ್ಕೆ ಙೀಷ್ ಎಂಬುದರಿಂದ ಙೀಷ್ ಪ್ರತ್ಯಯ. ಆರೀ ಶಬ್ದವಾಗುತ್ತದೆ. ಇದಕ್ಕೆ ಜಸ್ ಪರವಾದಾಗ **ವಾ ಛಂದಸಿ** ಎಂಬುದರಿಂದ ಪೂರ್ವಸವರ್ಣದೀರ್ಘ. ಸಕಾರಕ್ಕೆ ರುತ್ವ ವಿಸರ್ಗ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಅಂತೋದಾತ್ತತ್ವವು ಪ್ರಾಪ್ತವಾದರೆ **ವ್ಯತ್ಯಯೋ ಬಹುಲಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ॥ ೩ ॥



॥ ಸಂಹಿತಾಪಾಠಃ ॥

ಸ ನೋ ನೃಣಾಂ ನೃತಮೋ ರಿಶಾದಾ ಅಗ್ನಿರ್ಗಿರೋಽವಸಾ ವೇತು ಧೀತಿಂ ।

ತನಾ ಚ ಯೇ ಮಘವಾನಃ ಶವಿಷ್ಠಾ ವಾಜಪ್ರಸೂತಾ ಇಷಯಂತ ಮನ್ಮ ॥ ೪ ॥

॥ ಪದಪಾಠಃ ॥

ಸಃ । ನಃ । ನೃಣಾಂ । ನೃಽತಮಃ । ರಿಶಾದಾಃ । ಅಗ್ನಿಃ । ಗಿರಃ । ಅವಸಾ । ವೇತು । ಧೀತಿಂ ।

ತನಾ । ಚ । ಯೇ । ಮಘಽವಾನಃ । ಶವಿಷ್ಠಾಃ । ವಾಜಽಪ್ರಸೂತಾಃ । ಇಷಯಂತ । ಮನ್ಮ ॥ ೪ ॥

॥ ಸಾಯಣಭಾಷ್ಯಂ ॥

ನೃಣಾಂ ಯಜ್ಞಸ್ಯ ನೇತೄಣಾಂ ಮಧ್ಯೇ ನೃತಮೋಽತಿಶಯೇನ ನೇತಾ ರಿಶಾದಾ ರಿಶಾನಾಂ ಶತ್ರೂಣಾಮತ್ತಾ ಭಕ್ಷಯಿತಾ । ಯದ್ವಾ । ರಿಶತಾಂ ಹಿಂಸತಾಮಸಿತಾ ನಿರಸಿತಾ । ಏವಂವಿಧಃ ಸೋಽಗ್ನಿರ್ನೋಽಸ್ಮಾಕಂ ಗಿರಃ ಸ್ತುತೀರವಸಾ ಹವಿರ್ಲಕ್ಷಣೇನಾನ್ನೇನ ಯುಕ್ತಾಂ ಧೀತಿಂ ಕರ್ಮ ಚ ವೇತು । ಕಾಮಯತಾಂ । ಅಪಿ ಚ ಯೇ ಯಜಮಾನಾಸ್ತನಾ । ಧನನಾಮೈತತ್ । ವಿಸ್ತೃತೇನ ಧನೇನ ಮಘವಾನೋ ಧನವಂತಃ ಶವಿಷ್ಠಾ ಅತಿಶಯೇನ ಬಲಿನಶ್ಚ ಸಂತೋ ವಾಜಪ್ರಸೂತಾಃ ಪ್ರಸೂತಂ ಪ್ರೇರಿತಂ ವಾಜೋ ಹವಿರ್ಲಕ್ಷಣಮನ್ನಂ ಯೈಸ್ತಾದೃಶಾ ಭೂತ್ವಾ ಮನ್ಮಾಗ್ನೇರ್ಮನನರೂಪಂ ಸ್ತೋತ್ರಮಿಷಯಂತ ಏಷಯಂತಿ ಋತ್ವಿಗ್ಭಿಃ ಕಾರಯಿತುಮಿಚ್ಛಂತಿ । ತೇಷಾಮಪಿ ಸ್ತುತಿಮಗ್ನಿಃ ಕಾಮಯತಾಮಿತಿ ಭಾವಃ ॥ ನೃಣಾಂ । ನೃ ಚೇತ್ಯುಭಯಥಾಭಾವಾದ್ದೀರ್ಘಾಭಾವಃ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ । ತನಾ । ತನು ವಿಸ್ತಾರೇ । ಪಚಾದ್ಯಚ್ । ತೃತೀಯೈಕವಚನಸ್ಯ ಸುಪಾಂ ಸುಲುಗಿತ್ಯಾಕಾರಃ । ವೃಷಾದೇರಾಕೃತಿ-

**ಗಣತ್ವಾದಾದ್ಯುದಾತ್ತತ್ವಂ । ಶವಿಷ್ಠಾಃ । ಶವ ಇತಿ ಬಲನಾಮ । ಅಸ್ಮಾಯಾಮೇಧೇತಿ ಮತ್ವರ್ಥೀಯೋ ವಿನಿಃ । ತತ ಆತಿಶಾಯನಿಕ ಇಷ್ಠನ್ । ವಿನ್ಮತೋರ್ಲುಗಿತಿ ವಿನೋ ಲುಕ್ । ಟೇರಿತಿ ಟಿಲೋಪಃ । ಇಷ್ಠನೋ ನಿತ್ತ್ವಾದಾದ್ಯುದಾತ್ತತ್ವಂ । ಇಷಯಂತ । ಇಷು ಇಚ್ಛಾಯಾಂ । ಅಸ್ಮಾಣ್ಣ್ಯಂತಾಚ್ಛಾಂದಸೋ ಲಙ್ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾಣ್ಣೌ ಲಘೂಪಧಗುಣಾಭಾವಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಣಿಚ ಏವ ಸ್ವರಃ ಶಿಷ್ಯತೇ ॥**

॥ ಪ್ರತಿಪದಾರ್ಥ ॥

**ನೃಣಾಂ** –(ಯಜ್ಞವನ್ನು) ನಡೆಸುವವರಲ್ಲಿ । **ನೃತಮಃ**--ಉತ್ತಮ ನೇತೃವಾದ । **ರಿಶಾದಾಃ**—ಶತ್ರುನಾಶಕನಾದ (ಯಜ್ಞಹಿಂಸಕರನ್ನು ನಾಶಮಾಡುವ) । **ಸಃ ಅಗ್ನಿಃ** – ಆ ಅಗ್ನಿಯು । **ನಃ**—ನಮ್ಮ । **ಗಿರಃ**—(ಸ್ತುತಿರೂಪವಾದ) ವಾಕ್ಯಗಳನ್ನೂ । **ಅವಸಾ**—ಹವಿರ್ಲಕ್ಷಣವಾದ ಅನ್ನದಿಂದ ಯುಕ್ತವಾದ । **ಧೀತಿಂ**—ಕರ್ಮವನ್ನೂ । **ವೇತು**—ಇಚ್ಛಿಸಲಿ । **ಚ**—ಮತ್ತೂ । **ಯೇ**---ಯಾರು (ಯಜಮಾನರು) । **ತನಾ**—(ಹೆಚ್ಚಾದ) ಧನದಿಂದ । **ಮಘವಾನಃ**—ಧನಿಕರಾಗಿ । **ಶವಿಷ್ಠಾ**—ಬಲಿಷ್ಠರಾಗಿ । **ವಾಜಪ್ರಸೂತಾಃ**—ಅರ್ಪಿಸಲ್ಪಟ್ಟ ಹವಿಸ್ಸುಳ್ಳವರಾಗಿ । **ಮನ್ಮ**—(ಅಗ್ನಿ ಸ್ತುತಿರೂಪವಾದ) ವಾಕ್ಯಗಳನ್ನು । **ಇಷಯಂತ**—(ಋತ್ವಿಜರಿಂದ ಮಾಡಿಸಲು) ಇಚ್ಛಿಸುತ್ತಾರೆಯೋ (ಅದನ್ನೂ ಅಗ್ನಿಯು ಇಚ್ಛಿಸಲಿ).

॥ ಭಾವಾರ್ಥ ॥

ಯಾಗ ನಡೆಸುವವರಲ್ಲಿ ಉತ್ತಮನೂ, ಶತ್ರುನಾಶಕನೂ, ಆದ ಅಗ್ನಿಯು ಹವಿರಾದಿಗಳಿಂದ ಯುಕ್ತವಾದ ನಮ್ಮ ಸ್ತುತಿಯನ್ನೂ, ಹವಿಃಪ್ರದಾನವನ್ನೂ ಅಂಗೀಕರಿಸಲಿ, ಧನಾಢ್ಯರೂ, ಬಲಿಷ್ಠರೂ, ಹವಿರಾದಿಗಳನ್ನು ಸಿದ್ಧಪಡಿಸಿಕೊಂಡಿರುವವರೂ ಆದ ಯಾಗ ಕರ್ತೃಗಳು ಅಗ್ನಿಯನ್ನು ಸ್ತುತಿಸುತ್ತಾರೆ (ಅದನ್ನೂ ಅಗ್ನಿಯು ಅಂಗೀಕರಿಸಲಿ).

## English Translation

May Agni, who is the cheif directer of sacrifices, and the destroyer of enemies, accept our praise and worship: with oblations, and many those who are affluent with great wealth, who are endowed with strength and, by whom the sacrificial food has been prepared, be desirous to offer adoration.

॥ ವಿಶೇಷವಿಷಯಗಳು ॥

**ಸ ನಃ ನೃಣಾಂ ನೃತಮಃ** -- **ನೃತಮಃ ಅತಿಶಯೇನ ನೇತಾ । ಯಜ್ಞಸ್ಯ ನೇತೄಣಾಂ ಮಧ್ಯೇ ಅತಿಶಯೇನ ನೇತಾ ।** ಯಜ್ಞದಲ್ಲಿ ಮುಖ್ಯ ಪಾತ್ರವಹಿಸಿ ಅದನ್ನು ನೆರವೇರಿಸುವ ಋತ್ವಿಗ್ಯಜಮಾನರಾದಿಯಾದವರಲ್ಲಿ ಅತಿಶಯವಾಗಿ ಮುಖ್ಯನೆನಿಸಿದವನು ಯಜ್ಞವನ್ನು ಸಾಂಗವಾಗಿ ನೆರವೇರಿಸುವನೇ ಈ ಅಗ್ನಿಯು.

**ರಿಶಾದಾಃ—ರಿಶಾನಾಂ ಶತ್ರೂಣಾಂ ಅತ್ತಾ ಭಕ್ಷಯಿತಾ । ಯದ್ವಾ ರಿಶತಾಂ ಹಿಂಸತಾಮಸಿತಾ ನಿರಾಸಿತಾ ।** ಶತ್ರುಗಳನ್ನು (ಭಕ್ಷಿಸಿ, ದಹಿಸಿ) ಧ್ವಂಸಮಾಡುವವನು ಅಥವಾ ಹಿಂಸೆಮಾಡುವವರನ್ನು ಓಡಿಸುವವನು.

**ಅಗ್ನಿಃ ಗಿರಃ ಅವಸಾ ವೇತು ಧೀತಿಂ**—ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಅವಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೯) ಅವಸಾ ಎಂದರೆ ಅನ್ನದಿಂದ ಅಥವಾ ಹವಿರ್ಲಕ್ಷಣೋಪೇತವಾದ ಅನ್ನದಿಂದ ಯುಕ್ತವಾದ ಎಂದರ್ಥವು. ನಾವು ಮಾಡುವ ಸ್ತೋತ್ರವನ್ನು ಅಗ್ನಿಯು ಅಪೇಕ್ಷಿಸಿ, ಅದನ್ನೂ ನಾವು ಅರ್ಪಿಸುವ ಹವಿಸ್ಸ್ವರೂಪವಾದ ಅನ್ನವನ್ನೂ ಸ್ವೀಕರಿಸಲಿ ಎಂದಭಿಪ್ರಾಯವು

**ತನಾ—ತನು ವಿಸ್ತಾರೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ತೃತೀಯೈಕವಚನವು ಮೇಘಂ, ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ತನಾ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ ೨-೧೦) ತನಾ ಎಂದರೆ ವಿಸ್ತಾರವಾದ (ಬಹಳವಾದ) ಧನದಿಂದ ಸಹಿತರಾದ ಎಂದರ್ಥವು

**ಮಘವಾನಃ**—ಮಘವೆಂದರೆ ಧನವು (ನಿ ೨-೧೦) ಮಘವಾನಃ ಎಂದರೆ ಧನವಂತರು ಪ್ರಥಮಾ ಬಹುವಚನಾಂತ ಪದವು.

**ಶವಿಷ್ಠಾಃ—**ಓಜಃ ಪಾಜಃ ಮೊದಲಾದ ಇಪ್ಪತ್ತೆಂಟು ಬಲನಾಮಗಳ ಮಧ್ಯದಲ್ಲಿ ಶವಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ ೨-೯) ಶವಿಷ್ಠಾಃ ಎಂದರೆ ಅತಿಶಯವಾಗಿ ಬಲವುಳ್ಳವರು ಎಂದರ್ಥವು

**ವಾಜಪ್ರಸೂತಾಃ**—ಅಂಧಃ **ವಾಜಃ** ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ವಾಜಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ ೨-೯) ವಾಜವೆಂದರೆ ಅನ್ನವು ಪ್ರಸೂತವೆಂದರೆ ಪ್ರೇರಿತವೆಂದರ್ಥವು **ವಾಜಪ್ರಸೂತಾಃ—ಪ್ರಸೂತಂ ಪ್ರೇರಿತಂ ವಾಜೋ ಹವಿರ್ಲಕ್ಷಣಮನ್ನಂ ಯೈಃ ।** ಹವಿರ್ಲಕ್ಷಣೋಪೇತವಾದ ಅನ್ನವನ್ನು ದೇವತೆಗಳಿಗೆ ಅರ್ಪಿಸುತ್ತಿರುವ (ಯಜಮಾನರು) ಎಂದರ್ಥವು. ಮಘವಾನಃ, ಶವಿಷ್ಠಾಃ, ವಾಜಪ್ರಸೂತಾಃ ಎಂಬ ಶಬ್ದಗಳು ಪ್ರಥಮಾ ಬಹುವಚನಾಂತಪದಗಳಾಗಿ ಯೇ (ಯಜಮಾನಾಃ) ಎಂಬ ಶಬ್ದಕ್ಕೆ ವಿಶೇಷಣಗಳಾಗಿರುವವು

**ಮನ್ಮ—ಅಗ್ನೇರ್ಮನನರೂಪಂ ಸ್ತೋತ್ರಂ ।** ನಾವು ಭಕ್ತಿಯಿಂದ ಪಠಿಸುತ್ತಿರುವ ಸ್ತೋತ್ರರೂಪವಾದ ಈ ಮಂತ್ರವನ್ನು

**ಇಷಯಂತ--ಇಷು ಇಚ್ಛಾಯಾಂ । ಏಷಯಂತಿ ಋತ್ವಿಗ್ಭಿಃ ಕಾರಯಿತುಮಿಚ್ಛಂತಿ ।** ಯಜ್ಞಮಾಡುವ ಯಜಮಾನರು ಋತ್ವಿಕ್ಕುಗಳಿಂದ ಅಗ್ನಿಯ ಸ್ತೋತ್ರವನ್ನು ಮಾಡಿಸಲು ಅಪೇಕ್ಷಿಸುತ್ತಾರೆ

॥ ವ್ಯಾಕರಣಪ್ರಕ್ರಿಯಾ ॥

**ನೃಣಾಂ**—ನೃ ಶಬ್ದ. ಇದಕ್ಕೆ ಷಷ್ಠೀಬಹುವಚನದಲ್ಲಿ ಆಮ್ ಪ್ರತ್ಯಯ ಬಂದಾಗ **ಹ್ರಸ್ವನದ್ಯಾಪೋನುಟ್** ಎಂಬುದರಿಂದ ಅದಕ್ಕೆ ನುಡಾಗಮ. **ನೃಚ** (ಪಾ. ಸೂ. ೬-೪-೬) ಎಂಬುದರಿಂದ ದೀರ್ಘವಿಕಲ್ಪವಿಧಾನಮಾಡಿರು

ವುದರಿಂದ ಇಲ್ಲಿ ದೀರ್ಘಬರುವುದಿಲ್ಲ. **ಯುವರ್ಣಾನ್ನಸ್ಯ ಣತ್ವಂ ವಾಚ್ಯಂ** ಎಂಬುದರಿಂದ ನಕಾರಕ್ಕೆ ಣತ್ವ. **ನಾಮನ್ಯತರಸ್ಯಾಂ** (ಪಾ ಸೂ ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

**ರಿಶಾದಾಃ**—ರಿಶಾನ್ ಅತ್ತಿ ಇತಿ ರಿಶಾದಾಃ. ಅದ ಭಕ್ಷಣೇ ಧಾತು. ಇದಕ್ಕೆ **ಗತಿಕಾರಕೋಪಪದಯೋಃ ಪೂರ್ವಪದಪ್ರಕೃತಿಸ್ವರತ್ವಂಚ** (ಉ ಸೂ ೪-೬೬೬) ಎಂಬುದರಿಂದ ಅಸಿ ಪ್ರತ್ಯಯ. ರಿಶಾದಸ್ ಶಬ್ದವಾಗುತ್ತದೆ ಪ್ರಥಮಾ ಏಕವಚನಾಂತರೂಪ

**ವೇತು**—ವೀ ಗತ್ಯಾದಿಷು ಧಾತು. ಇಲ್ಲಿ ಇಚ್ಛಾರ್ಥದಲ್ಲಿ ಪ್ರಯುಕ್ತವಾಗಿದೆ ಲೋಟ್‌ಮಧ್ಯಮ ಪುರುಷ ಏಕವಚನದಲ್ಲಿ ವೇತು ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ

**ತನಾ**—ತನು ವಿಸ್ತಾರೇ ಧಾತು. ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯಃ**—(ಪಾ. ಸೂ ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ. ತನ ಎಂದು ರೂಪವಾಗುತ್ತದೆ ಇದಕ್ಕೆ ತೃತೀಯಾ ಏಕವಚನ ಪರವಾದಾಗ **ಸುಪಾಂಸುಲುಕ್**—ಎಂಬುದರಿಂದ ಅದಕ್ಕೆ ಆಕಾರಾದೇಶ ತನಾ ಎಂದು ರೂಪವಾಗುತ್ತದೆ ಚಿತ್ ಪ್ರತ್ಯಯಾಂತವಾದುದರಿಂದ ಅಂತೋದಾತ್ತವಾಗಿ. ಅದಕ್ಕೆ ಏಕಾದೇಶಬಂದಾಗಲೂ ಅಂತೋದಾತ್ತವು ಪ್ರಾಪ್ತವಾಗುತ್ತದೆ. ಆದರೆ ವೃಷಾದಿಯು ಆಕೃತಿಗಣವಾದುದರಿಂದ **ವೃಷಾದೀನಾಂ ಚ** (ಪಾ. ಸೂ ೬-೧-೨೦೩) ಎಂಬುದರಿಂದ ಅದರಲ್ಲಿ ಸೇರಿದೆ ಎಂದು ಆದ್ಯುದಾತ್ತಸ್ವರ ಬರುತ್ತದೆ.

**ಶವಿಷ್ಠಾಃ**—ಶವ ಎಂಬುದು ಬಲದ ಹೆಸರು. **ಶವಃ ಅಸ್ಯ ಅಸ್ತಿ** ಎಂದು ಮತ್ವರ್ಥವಿವಕ್ಷಾ ಮಾಡಿದಾಗ ಸಾಂತವಾದುದರಿಂದ **ಅಸ್‌ಮಾಯಾಮೇಧಾ**—(ಪಾ. ಸೂ. ೫-೨-೧೨೧) ಎಂಬುದರಿಂದ ವಿನಿ ಪ್ರತ್ಯಯ ಶವಸ್ವಿನ್ ಶಬ್ದವಾಗುತ್ತದೆ ಅತಿಶಯೇನ ಶವಸ್ವೀ ಶವಿಷ್ಠಃ **ಅತಿಶಾಯನೇ ತಮಬಿಷ್ಠನೌ** (ಪಾ ಸೂ. ೫-೩-೫೫) ಎಂಬುದರಿಂದ ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. ಇಷ್ಠನ್ ಪರವಾದಾಗ **ವಿನ್‌ಮತೋರ್ಲುಕ್** (ಪಾ ಸೂ ೫-೩-೬೫) ಎಂಬುದರಿಂದ ವಿನ್ನಿಗೆ ಲುಕ್. **ಟೇಃ** (ಪಾ ಸೂ. ೬-೪-೧೫೫) ಎಂಬುದರಿಂದ ಶವಸ್ ಎಂಬಲ್ಲಿರುವ (ಅಸ್) ಟಿಗೆ ಲೋಪ ಇಷ್ಠನ್ ನಿತ್ತಾದುದುರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಇಷಯಂತ**--ಇಷು ಇಚ್ಛಾಯಾಂ ಧಾತು. ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ. ಸೂ. ೩-೧ ೨೬) ಎಂಬುದರಿಂದ ಣಿಚ್. **ಸನಾದ್ಯಂತಾಧಾತವಃ** ಎಂಬುದರಿಂದ ಇಷಿ ಎಂಬುದು ಧಾತು ಸಂಜ್ಞೆಯನ್ನು ಹೊಂದುತ್ತದೆ. **ಸಂಜ್ಞಾಪೂರ್ವಕೋ ವಿಧಿರನಿತ್ಯಃ** ಎಂಬ ವಚನದಿಂದ ಣಿಚ್ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣಬರುವುದಿಲ್ಲ. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಙ್ ಪ್ರಥಮಪುರುಷ ಬಹುವಚನದಲ್ಲಿ **ಝೋಂತಃ** ಎಂಬುದರಿಂದ ಅಂತಾದೇಶ ಶಪ್ ವಿಕರಣ. ಶಪ್ ನಿಮಿತ್ತವಾಗಿ ಣಿಚಿಗೆ **ಸಾರ್ವಧಾತುಕಾರ್ಧ**—ಎಂಬುದರಿಂದ ಗುಣ ಅಯಾದೇಶ **ಅತೋ ಗುಣೇ** ಸೂತ್ರದಿಂದ ಶಪ್ಪಿಗೆ ಪರರೂಪ **ಬಹುಲಂ ಛಂದಸ್ಯಮಾಙ್ ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ ಯಚ್ಛಬ್ದ

ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ. ಸೂ ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ ಅದುಪದೇಶದ ಪರದಲ್ಲಿರುವ ಲಸಾರ್ವಧಾತುಕವು **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುತ್ತದೆ ಆಗ ಣಿಚ್ಚಿನ ಸ್ವರ ಉಳಿಯುತ್ತದೆ ॥ ೪ ॥



॥ ಸಂಹಿತಾಪಾಠಃ ।

ಏವಾಗ್ನಿರ್ಗೋತಮೇಭಿರ್ಋತಾವಾ ವಿಪ್ರೇಭಿರಸ್ತೋಷ್ಟ ಜಾತವೇದಾಃ ।

ಸ ಏಷು ದ್ಯುಮ್ನಂ ಪೀಪಯತ್ಸ ವಾಜಂ ಸ ಪುಷ್ಟಿಂ ಯಾತಿ ಜೋಷಮಾ ಚಿಕಿತ್ವಾನ್ ॥ ೫ ॥

॥ ಪದಪಾಠಃ ।

ಏವ । ಅಗ್ನಿಃ । ಗೋತಮೇಭಿಃ । ಋತಽವಾ । ವಿಪ್ರೇಭಿಃ । ಅಸ್ತೋಷ್ಟ । ಜಾತಽವೇದಾಃ ।

ಸಃ । ಏಷು । ದ್ಯುಮ್ನಂ । ಪೀಪಯತ್ । ಸಃ । ವಾಜಂ । ಪುಷ್ಟಿಂ । ಯಾತಿ । ಜೋಷಂ । ಆ । ಚಿಕಿತ್ವಾನ್ ॥ ೫ ॥

‖ ಸಾಯಣಭಾಷ್ಯಂ ‖

ಋತಾವಾ ಋತವಾನ್ಯಜ್ಞವಾನ್ ಜಾತವೇದಾ ಜಾತಧನೋ ಜಾತಪ್ರಜ್ಞೋ ವಾಯಮಗ್ನಿರ್ವಿಪ್ರೇಭಿರ್ಮೇಧಾವಿಭಿರ್ಗೋತಮೇಭಿರ್ಗೋತಮ್ಯೈರ್ಋಷಿಭಿರೇವಮುಕ್ತೇನ ಪ್ರಕಾರೇಣಾಸ್ತೋಷ್ಟ । ಸ್ತುತೋಽಭೂತ್ । ಸ್ತುತಶ್ಚ ಸೋಽಗ್ನಿರೇಷು ಗೋತಮೇಷು ದ್ಯುಮ್ನಂ ದ್ಯೋತಮಾನಂ ಸೋಮಂ ಪೀಪಯತ್ । ಅಪಿಬತ್ । ಯದ್ವಾ । ತಾನೃಷೀನಪಾಯಯತ್ । ತಥಾ ಸೋಽಗ್ನಿರ್ವಾಜಂ ಹವಿರ್ಲಕ್ಷಣಮನ್ನಂ ಪೀಪಯದಿತ್ಯೇವ । ಏವಂ ಸೋಮಲಕ್ಷಣಂ ಚರುಪುರೋಡಾಶಾದಿಲಕ್ಷಣಂ ಹವಿಶ್ಚ ಸ್ವೀಕೃತ್ಯ ಸೋಽಗ್ನಿರ್ಜೋಷಮಸ್ಮಾಭಿಃ ಕೃತಂ ಸೇವನಮಾ ಚಿಕಿತ್ವಾನ್ ಆ ಸಮಂತಾಜ್ಜಾನನ್ ಪುಷ್ಟಿಂ ಯಾತಿ । ಪೋಷಂ ಪ್ರಾಪ್ನೋತು । ಯದ್ವಾ । ಅಸ್ಮಾಕಂ ಧನಾನಿ ಪೋಷಂ ಪ್ರಾಪಯತು ‖ ಗೋತಮೇಭಿಃ । ಋಷ್ಯಂಧಕವೃಷ್ಣಿಕುರುಭ್ಯಶ್ಚ । ಪಾ. ೪-೧-೧೧೪ । ಇತಿ ವಿಹಿತಸ್ಯಾಣೋಽತ್ರಿಭೃಗುಕುತ್ಸವಸಿಷ್ಠಗೋತಮಾಂಗಿರೋಭ್ಯಶ್ಚ । ಪಾ ೨-೪-೬೫ । ಇತಿ ಬಹುಷು ಲುಕ್ । ಅಸ್ತೋಷ್ಟ । ಸ್ತೌತೇಃ ಕರ್ಮಣಿ ಲುಙಿ ಚಿಣಭಾವಶ್ಛಾಂದಸಃ । ಪೀಪಯತ್ । ಪಾ ಪಾನೇ । ಣ್ಯಂತಾಲ್ಲುಙಿ ಚ್ಲೇಶ್ಚಙಾದಿ । ಜೋಷಂ । ಜುಷೀ ಪ್ರೀತಿಸೇವನಯೋಃ । ಭಾವೇ ಘಞ್ । ಞಿತ್ತ್ವಾದಾದ್ಯುದಾತ್ತತ್ವಂ ‖

‖ ಪ್ರತಿಪದಾರ್ಥ ‖

**ಋತಾವಾ**—ಸತ್ಯವಂತನೂ (ಯಜ್ಞವುಳ್ಳವನೂ) । **ಜಾತವೇದಾಃ**—ಪ್ರಜ್ಞಾವಂತನೂ (ಧನಾಢ್ಯನೂ) ಆದ । **ಅಗ್ನಿಃ**—ಅಗ್ನಿಯು । **ವಿಪ್ರೇಭಿಃ**—ಮೇಧಾವಿಗಳಾದ । **ಗೋತಮೇಭಿಃ**—ಗೋತಮವಂಶಸ್ಥ ಋಷಿಗಳಿಂದ । **ಅಸ್ತೋಷ್ಟ**—ಸ್ತುತಿಸಲ್ಪಟ್ಟಿರುವನು । **ಸಃ**—(ಸ್ತುತನಾದ) ಆ ಅಗ್ನಿಯು । **ದ್ಯುಮ್ನಂ**—ಹೊಳೆಯುತ್ತಿರುವ ಸೋಮವನ್ನು । **ಏಷು**—ಈ ಗೋತಮರಲ್ಲಿ (ಗೋತಮರಿಗೆ) । **ಪೀಪಯತ್**—ಪಾನಮಾಡಿದನು (ಪಾನಮಾಡಿಸಿದನು) । **ಸಃ**—(ಹಾಗೆಯೇ) ಆ ಅಗ್ನಿಯು । **ವಾಜಂ**—ಹವಿರ್ಲಕ್ಷಣವಾದ ಅನ್ನವನ್ನೂ (ಸ್ವೀಕರಿಸಿದನು) । **ಸಃ**—(ಈ ರೀತಿ ಸೋಮ ಮತ್ತು ಹವಿಸ್ಸನ್ನು ಸ್ವೀಕರಿಸಿದ) ಅಗ್ನಿಯು । **ಜೋಷಂ**—(ನಮ್ಮಿಂದ ಮಾಡಲ್ಪಟ್ಟ) ಸೇವೆಯನ್ನು । **ಆ ಚಿಕಿತ್ವಾನ್**—ಚೆನ್ನಾಗಿ ತಿಳಿದವನಾಗಿ । **ಪುಷ್ಟಿಂ ಯಾತಿ**—ಪುಷ್ಟಿಯನ್ನು ಹೊಂದುತ್ತಾನೆ (ನಮ್ಮ ಧನವನ್ನು ಪುಷ್ಟೀಕರಿಸಲಿ) .

‖ ಭಾವಾರ್ಥ ‖

ಸತ್ಯವಂತನೂ, ಸರ್ವಜ್ಞನೂ ಆದ ಅಗ್ನಿಯು, ಮೇಧಾವಿಗಳಾದ ಗೋತಮರಿಂದ ಸ್ತುತನಾಗಿ. (ಅವರಿಂದ ಅರ್ಪಿತವಾದ) ಸೋಮ ಮತ್ತು ಹವಿಸ್ಸುಗಳನ್ನು ಸ್ವೀಕರಿಸಿದನು. ಅಂತಹ ಅಗ್ನಿಯು ನಮ್ಮಿಂದ ಮಾಡಲ್ಪಟ್ಟ ಸೇವೆಯನ್ನೂ (ಸ್ವೀಕರಿಸಿ) ನಮ್ಮ ಧನಾದಿಗಳನ್ನು ಪುಷ್ಟೀಕರಿಸಲಿ

## English Translation.

Thus has Agni, the celebrator of sacrifices, and by whom all things are known, been hymned by the pious descendants of Gotama, to them

has he given the bright Soma-juice to drink, along with the sacrificial food, and, gratified by our devotion, he obtains nutriment (for himself.)

॥ ವಿಶೇಷವಿಷಯಗಳು ॥

**ಏಷು**— ಇವರಲ್ಲಿ ಎಂದರೆ ಗೋತಮವಂಶಸ್ಥರಾದ ಋಷಿಗಳಲ್ಲಿ ಅಥವಾ ಋಷಿಗಳಿಗೆ. ಈ ಸೂಕ್ತದಲ್ಲಿ **ಗೋತಮೇಭಿಃ ಅಸ್ತೋಷ್ಟ**—ಗೋತಮವಂಶಸ್ಥರಿಂದ ಈ ಸ್ತೋತ್ರವು ಮಾಡಲ್ಪಟ್ಟಿತು ಎಂದು ಇರುವುದರಿಂದ ಏಷು ಎಂಬ ಈ ಸರ್ವನಾಮಶಬ್ದವು ಆ ಗೋತಮವಂಶಸ್ಥರಾದ ಋಷಿಗಳನ್ನೇ ಸೂಚಿಸುವುದು

**ದ್ಯುಮ್ನಂ**- ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ದ್ಯುಮ್ನಶಬ್ದವು ಪಠಿತವಾಗಿರುವುದರಿಂದ ದ್ಯುಮ್ನವೆಂದರೆ ಧನವೆಂದು ಅರ್ಥವು (ನಿ ೩-೯) ಮತ್ತು ಯಾಸ್ಕರು ಈ ಶಬ್ದಕ್ಕೆ ನಿರ್ವಚನವನ್ನು ಹೇಳುವಾಗ—

**ಶತಂ ತೇ ಶಿಪ್ರಿನ್ನೂತಯಃ ಸುದಾಸೇ ಸಹಸ್ರಂ ಶಂಸಾ ಉತ ರಾತಿರಸ್ತು ।**

**ಜಹಿ ವಧರ್ವನುಷೋ ಮರ್ತ್ಯಸ್ಯಾಸ್ಮೇ ದ್ಯುಮ್ನಮಧಿ ರತ್ನಂ ಚ ಧೇಹಿ ॥**

(ಋ ಸಂ ೭-೨೫-೩)

ಎಂಬ ಋಕ್ಕನ್ನು ಉದಾಹರಿಸಿ-- **ದ್ಯುಮ್ನಂ ದ್ಯೋತತೇರ್ಯಶೋ ವಾ ಅನ್ನಂ ವಾ ॥** ಎಂದರೆ ದ್ಯುಮ್ನಶಬ್ದಕ್ಕೆ ಉಜ್ಜ್ವಲವಾದ ಕೀರ್ತಿ ಅಥವಾ ಅನ್ನವೆಂಬ ಎರಡು ವಿಧವಾದ ಅರ್ಥಗಳನ್ನು ಹೇಳಿರುವರು. ಪ್ರಸಕ್ತಋಕ್ಕಿನಲ್ಲಿ ಪೀಪಯತ್ ಎಂಬ ಪಾನಾರ್ಥಕಕ್ರಿಯಾಪದವಿರುವುದರಿಂದ ಭಾಷ್ಯಕಾರರು **ದ್ಯುಮ್ನಂ ದ್ಯೋತಮಾನಂ ಸೋಮಂ ಪೀಪಯತ್**—ಪ್ರಕಾಶಮಾನವಾದ ಸೋಮರಸವನ್ನು ಪಾನಮಾಡಿದನು (ಪಾನಮಾಡಿಸಿದನು) ಎಂದು ಅರ್ಥವಿವರಣೆ ಮಾಡಿರುವರು. ಈ ಶಬ್ದಕ್ಕೆ ಅಗ್ನಿಯು ಹವಿರ್ಲಕ್ಷಣೋಪೇತವಾದ ಅನ್ನವನ್ನು ಸ್ವೀಕರಿಸಿದನು ಎಂಬ ಅರ್ಥವನ್ನು ಬೇಕಾದರೂ ಹೇಳಬಹುದು

**ಋತಾವಾ**— ಹಿಂದಿನ ಋಕ್ಕಿನಲ್ಲಿ ಈ ಶಬ್ದದ ಅರ್ಥವಿವರಣೆ ಇರುವುದು

**ವಿಪ್ರೇಭಿಃ**—ವಿಪ್ರಃ ವಿಗ್ರಃ ಮೊದಲಾದ ಇಪ್ಪತ್ತುನಾಲ್ಕು ಮೇಧಾವಿನಾಮಗಳಲ್ಲಿ ವಿಪ್ರಶಬ್ದವು ಪಠಿತವಾಗಿರುವುದರಿಂದ ವಿಪ್ರೇಭಿಃ ಎಂದರೆ ಮೇಧಾವಿಗಳಾದ, ಅಥವಾ ಬುದ್ಧಿವಂತರಾದ ಎಂದರ್ಥವು. (ನಿ ೩-೯)

**ಜಾತವೇದಾಃ— ಜಾತಧನೋ ಜಾತಪ್ರಜ್ಞೋ ವಾ ।** ವೇದಸ್ ಶಬ್ದಕ್ಕೆ ಧನವೆಂದು (ನಿ. ೩-೯) ಪ್ರಜ್ಞೆಯೆಂದೂ ಎರಡು ಅರ್ಥಗಳಿರುವವು ಆದುದರಿಂದ ಜಾತವೇದಾಃ ಎಂದರೆ ಧನಾಢ್ಯನು ಅಥವಾ ಪ್ರಜ್ಞಾವಂತನು ಎಂದರ್ಥವು.

**ವಾಜಂ**—ಅಂಧಃ, ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ವಾಜಃ ಎಂಬ ಶಬ್ದವು ಪಠಿತವಾಗಿರುವುದರಿಂದ ವಾಜಂ ಎಂದರೆ ಅನ್ನವನ್ನು ಎಂದರ್ಥವು (ನಿ ೩-೯).

**ಪುಷ್ಟಿಂ**– ಪುಷ್ಟಿಯನ್ನು ಅಥವಾ ಪುಷ್ಟಿಕರವಾದ ಆಹಾರವನ್ನು (nourishing food).

**ಜೋಷಂ—ಜುಷೀ ಪ್ರೀತಿಸೇವನಯೋಃ । ಅಸ್ಮಾಭಿಃ ಕೃತಂ ಸೇವನಂ**—ನಮ್ಮಿಂದ ಮಾಡಲ್ಪಟ್ಟ ಸೇವೆಯನ್ನು, ಶುಶ್ರೂಷೆಯನ್ನು.

**ಆ ಚಿಕಿತ್ವಾನ್ —ಕಿತ ಜ್ಞಾನೇ** । ನಾವು ಮಾಡುವ ಸ್ತೋತ್ರರೂಪವಾದ ಸೇವೆಯನ್ನು ತಿಳಿದವನಾಗಿ

॥ ವ್ಯಾಕರಣಪ್ರಕ್ರಿಯಾ ॥

**ಗೋತಮೇಭಿಃ**—ಗೋತಮಸ್ಯ ಅಪತ್ಯಾನಿ ಪುಮಾಂಸಃ ಎಂದು ಅಪತ್ಯಾರ್ಥವಿವಕ್ಷಾ ಮಾಡಿದಾಗ **ಋಷ್ಯಂಧಕ ವೃಷ್ಣಿ ಕುರುಭ್ಯಶ್ಚ** (ಪಾ. ಸೂ. ೪-೧-೧೧೪) ಎಂಬುದರಿಂದ **ಅಣ್** ಪ್ರತ್ಯಯ ಬರುತ್ತದೆ. ಅದಕ್ಕೆ ಬಹುತ್ವ ತೋರುವಾಗ **ಅತ್ರಿಭೃಗುಕುತ್ಸವಸಿಷ್ಠಗೋತಮಾಂಗಿರೋಭ್ಯಶ್ಚ** (ಪಾ ಸೂ. ೨-೪-೬೫) ಎಂಬುದರಿಂದ ಲುಕ್ ಗೋತಮ ಎಂದೇ ಉಳಿಯುತ್ತದೆ. ಇದಕ್ಕೆ ತೃತೀಯಾ ಬಹುವಚನ ಭಿಸ್ ಪರವಾದಾಗ **ವಾ ಛಂದಸಿ** ಎಂಬುದರಿಂದ ಭಿಸ್ಸಿಗೆ ಐಸ್ ಬರುವುದಿಲ್ಲ. **ಬಹುವಚನೇಝಲ್ಯೇತ್** ಎಂಬುದರಿಂದ ಏತ್ವ. ಸಕಾರಕ್ಕೆ ರುತ್ವ ವಿಸರ್ಗ.

**ಋತವಾ**—೭೭ನೇ ಸೂಕ್ತದ ಒಂದನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ

**ಅಸ್ತೋಷ್ಟ**—ಷ್ಟುಞ್ ಸ್ತುತೌ ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ ಇದಕ್ಕೆ ಕರ್ಮಣಿಯಲ್ಲಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ **ಚಿಣ್‌ಭಾವಕರ್ಮಣೋಃ** (ಪಾ ಸೂ ೩-೧-೬೬) ಎಂಬುದರಿಂದ ಇಲ್ಲಿ ಚ್ಲಿಗೆ **ಚಿಣ್** ಪ್ರಾಪ್ತವಾದರೂ ಛಾಂದಸವಾಗಿ ಬರುವುದಿಲ್ಲವೆನ್ನಬೇಕು ಆಗ **ಚ್ಲೇಃಸಿಚ್** ಎಂಬುದರಿಂದ ಸಿಚಾದೇಶ. ಅನಿಟ್ ಧಾತುವಾದುದರಿಂದ ಇಡಾಗಮ ಬರುವುದಿಲ್ಲ. **ಸಾರ್ವಧಾತುಕಾರ್ಧ**-ಎಂಬುದರಿಂದ ಧಾತುವಿನ ಇಕ್ಕಿಗೆ ಗುಣ **ಆದೇಶಪ್ರತ್ಯಯಯೋಃ** ಎಂಬುದರಿಂದ ಸಿಚ್ಚಿನ ಸಕಾರಕ್ಕೆ ಷತ್ವ ತಸ್ಸಿಮಿತ್ತವಾಗಿ ಪ್ರತ್ಯಯ ತಕಾರಕ್ಕೆ ಷ್ಟುತ್ವ ಅಂಗಕ್ಕೆ ಅಡಾಗಮ. ಅಸ್ತೋಷ್ಟ ಎಂದು ರೂಪವಾಗುತ್ತದೆ. ಅತಿಙಂತವ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಪೀಪಯತ್**—ಪಾ ಪಾನೇ ಧಾತು ಪ್ರಯೋಜಕವ್ಯಾಪಾರತೋರುವಾಗ **ಹೇತುಮತಿಚ** (ಪಾ ಸೂ ೩-೧-೨೬) ಎಂಬುದರಿಂದ ಣಿಚ್ ಪರವಾದಾಗ **ಶಾಚ್ಛಾಸಾಹ್ವಾವ್ಯಾವೇಪಾಂ ಯುಕ್** (ಪಾ. ಸೂ. ೭-೩-೩೭) ಎಂಬುದರಿಂದ ಧಾತುವಿಗೆ ಯುಕಾಗಮ. ಪಾಯಿ ಎಂಬ ಣಿಜಂತದ ಮೇಲೆ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರ ಲೋಪ **ಣಿಶ್ರಿದ್ರುಸ್ರುಭ್ಯಃ**—(ಪಾ. ಸೂ ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** (ಪಾ . ಸೂ. ೬-೧-೧೧) ಎಂಬುದರಿಂದ ಧಾತುವಿನ ಪ್ರಥಮೈಕಾಚ್ಚಿಗೆ ದ್ವಿತ್ವ ಛಾಂದಸವಾಗಿ **ಲೋಪಃ ಪಿಬತೇಃ**—(ಪಾ. ಸೂ. ೭-೪-೪) ಎಂಬುದರಿಂದ ಉಪಧಾಲೋಪ ಅಭ್ಯಾಸ ಈತ್ವ ಬರುವುದಿಲ್ಲ **ಣೌಚಙ್ಯುಪಧಾಯಾ ಹ್ರಸ್ವಃ** (ಪಾ. ಸೂ. ೭-೪-೧) ಎಂಬುದರಿಂದ ಧಾತುವಿನ ಉಪಧೆಗೆ ಹ್ರಸ್ವ **ಸನ್ವಲ್ಲಘುನಿ ಚಙ್‌ಪರೇಽನಗ್ಲೋಪೇ** (ಪಾ. ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವ ಬರುವುದರಿಂದ

**ಸನ್ಯತಃ** (ಪಾ ಸೂ. ೭-೪-೭೯) ಎಂಬುದರಿಂದ ಅಭ್ಯಾಸಕ್ಕೆ ಇತ್ವ **ದೀರ್ಘೋ ಲಘೋಃ** (ಪಾ ಸೂ. ೭-೪-೯೪) ಎಂಬುದರಿಂದ ಅದಕ್ಕೆ ದೀರ್ಘ **ಣೇರನಿಟಿ** (ಪಾ. ಸೂ ೯-೪-೫೧) ಎಂಬುದರಿಂದ ಚಙ್‌ನಿಮಿತ್ತವಾಗಿ ಣಿಗೆ ಲೋಪ **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಜೋಷಮ್**—ಜುಷೀ ಪ್ರೀತಿಸೇವನಯೋಃ ಧಾತು ಇದಕ್ಕೆ ಭಾವಾರ್ಥದಲ್ಲಿ ಘಞ್ ಪ್ರತ್ಯಯ **ಪುಗಂತಲಘೂಪಧಸ್ಯ ಚ** ಎಂಬುದರಿಂದ ಲಘೂಪಧಗುಣ ದ್ವಿತೀಯಾ ಏಕವಚನಾಂತರೂಪ. ಞಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ

ಎಪ್ಪತ್ತೇಳನೆಯ ಸೂಕ್ತ ಸಮಾಪ್ತವು.



# ಎಪ್ಪತ್ತೆಂಟನೆಯ ಸೂಕ್ತವು

**ಅಭಿ ತ್ವೇತಿ ಪಂಚರ್ಚಂ ಪಂಚಮಂ ಸೂಕ್ತಂ ಗೋತಮಸ್ಯಾರ್ಷಮಾಗ್ನೇಯಂ ಗಾಯತ್ರಂ। ತಥಾ ಚಾನುಕ್ರಾಂತಂ। ಅಭಿ ತ್ವಾ ಗಾಯತ್ರಂ ತ್ವಿತಿ ॥ ವಿನಿಯೋಗೋ ಲೈಂಗಿಕಃ ॥**

**ಅನುವಾದವು**—**ಅಭಿ ತ್ವಾ ಗೋತಮಾ** ಎಂಬ ಸೂಕ್ತವು ಹದಿನಾರನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ಗೋತಮನು ಋಷಿಯು. ಅಗ್ನಿಯೇ ದೇವತೆಯು. ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ-**ಅಭಿ ತ್ವಾ ಗಾಯತ್ರಂ ತ್ವಿತಿ** ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

## ಸೂಕ್ತ—೭೮

॥ ಮಂಡಲ—೧ ॥ ಅನುವಾಕ—೧೩ ॥ ಸೂಕ್ತ—೭೮ ॥

॥ ಅಷ್ಟಕ—೧ ॥ ಅಧ್ಯಾಯ ೫ ॥ ವರ್ಗ—೨೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ಗೋತಮೋ ರಾಹೂಗಣಃ ॥

॥ ದೇವತಾ—ಅಗ್ನಿಃ ॥

॥ ಛಂದಃ—ಗಾಯತ್ರೀ ॥

॥ ಸಂಹಿತಾಪಾಠಃ ॥

ಅಭಿ ತ್ವಾ ಗೋತಮಾ ಗಿರಾ ಜಾತವೇದೋ ವಿಚರ್ಷಣೇ ।
ದ್ಯುಮ್ನೈರಭಿ ಪ್ರ ಣೋನುಮಃ ॥ ೧ ॥

॥ ಪದಪಾಠಃ ॥

ಅಭಿ । ತ್ವಾ । ಗೋತಮಾಃ । ಗಿರಾ । ಜಾತಽವೇದಃ । ವಿಽಚರ್ಷಣೇ ।
ದ್ಯುಮ್ನೈಃ । ಅಭಿ । ಪ್ರ । ನೋನುಮಃ ॥ ೧ ॥

॥ ಸಾಯಣಭಾಷ್ಯಂ ॥

ಹೇ ಜಾತವೇದೋ ಜಾತಾನಾಂ ವೇದಿತರ್ವಿಚರ್ಷಣೇ ವಿಶೇಷೇಣ ಸರ್ವಸ್ಯ ದ್ರಷ್ಟಃ ಏವಂಭೂತಾಗ್ನೇ ತ್ವಾ ತ್ವಾಂ ಗೋತಮಾ ಅಸ್ಯ ಸೂಕ್ತಸ್ಯ ದ್ರಷ್ಟಾ ಗೋತಮ ಋಷಿಃ । ಋಷೇರೇಕತ್ವೇಽಪಿ ಪೂಜಾರ್ಥಂ ಬಹುವಚನಂ । ಗಿರಾ ಸ್ತೋತ್ರಲಕ್ಷಣಯಾ ವಾಚಾಭ್ಯಾಭಿಮುಖ್ಯೇನಾಸ್ತೌದಿತಿ ಶೇಷಃ । ತದ್ವದ್ವಯಮಪಿ ತ್ವಾಂ ದ್ಯುಮ್ನೈಸ್ತ್ವದೀಯಗುಣಪ್ರಕಾಶಕೈರ್ಮಂತ್ರೈರಭಿ ಪ್ರ ಣೋನುಮಃ । ಅಭಿಮುಖ್ಯೇನ ಪುನಃಪುನಃ ಸ್ತುಮಃ ॥ ನೋನುಮಃ । ಣು ಸ್ತುತೌ । ಅಸ್ಮಾದ್ಯಙ್ಲುಗಂತಾಲ್ಲಟ್ । ಉಪಸರ್ಗಾದಸಮಾಸೇಽಪೀತಿ ಣತ್ವಂ ॥

॥ ಪ್ರತಿಪದಾರ್ಥ ॥

**ಜಾತವೇದಃ**—ಜನಿಸಿರುವುದೆಲ್ಲವನ್ನೂ ತಿಳಿದಿರುವ । **ವಿಚರ್ಷಣೇ**—ಸಮಸ್ತವನ್ನೂ ವಿಶೇಷವಾಗಿ ನೋಡುವ ಎಲೈ ಅಗ್ನಿಯೇ । **ತ್ವಾ**—ನಿನ್ನನ್ನು । **ಗೋತಮಾಃ**—(ಈ ಸೂಕ್ತದ್ರಷ್ಟೃವಾದ) ಗೋತಮ ವಂಶಸ್ಥರಾದ ಋಷಿಗಳು । **ಗಿರಾ**—ಸ್ತುತಿರೂಪವಾದ ವಾಕ್ಕಿನಿಂದ । **ಅಭಿ**—ಅಭಿಮುಖವಾಗಿ ನಿಂತು ಸ್ತುತಿಸಿದರು (ಅದರಂತೆಯೇ ನಾವೂ) । **ದ್ಯುಮ್ನೈಃ**—(ನಿನ್ನ) ಗುಣಗಳನ್ನು ಪ್ರಕಾಶಪಡಿಸುವ (ಮಂತ್ರಗಳಿಂದ) । **ಅಭಿ ಪ್ರ ಣೋನುಮಃ**—ಅಭಿಮುಖವಾಗಿ ಪುನಃ ಪುನಃ ಸ್ತುತಿಸುತ್ತೇವೆ

॥ ಭಾವಾರ್ಥ ॥

ಸರ್ವಜ್ಞನೂ, ಸರ್ವದ್ರಷ್ಟೃವೂ ಆದ ಎಲೈ ಅಗ್ನಿಯೇ, ಗೋತಮ ವಂಶಸ್ಥರು ನಿನ್ನನ್ನು ಸ್ತುತಿರೂಪವಾದ ವಾಕ್ಕುಗಳಿಂದ ಸ್ತುತಿಸುತ್ತಾರೆ, (ಅದರಂತೆಯೇ ನಾವೂ) ನಿನ್ನ ಗುಣದ್ಯೋತಕವಾದ ಮಂತ್ರಗಳಿಂದ ನಿನ್ನನ್ನು ಅಭಿಮುಖೀಕರಿಸಿಕೊಂಡು ಪುನಃ ಪುನಃ ಸ್ತುತಿಸುತ್ತೇವೆ

## English Translation.

Knower and beholder of all that exists, Gotama celebrates you Agni, with praise; we praise you repeatedly with commendatory (hymns).

॥ ವಿಶೇಷವಿಷಯಗಳು ॥

**ಗೋತಮಾಃ**—ಗೋತಮವಂಶಸ್ಥರಾದ ಋಷಿಗಳು. ಈ ಋಕ್ಕಿನಲ್ಲಿ ಗೋತಮಾಃ ಎಂಬ ಬಹುವಚನ ಶಬ್ದವಿದ್ದರೂ ಗೌರವಕ್ಕಾಗಿ ಬಹುವಚನಪ್ರಯೋಗವಿರುವುದೆಂದೂ ಆದುದರಿಂದ ಈ ಶಬ್ದಕ್ಕೆ ಗೋತಮಋಷಿಯು ಎಂಬ ಏಕವಚನಾರ್ಥವನ್ನು ಮಾತ್ರ ಹೇಳಬೇಕೆಂದೂ ಸಾಯಣರು ಅರ್ಥವಿವರಣೆ ಮಾಡಿರುವರು ಈ ಸೂಕ್ತಕ್ಕೆ ಗೋತಮನೇ ಋಷಿಯಾದ್ದರಿಂದ ಭಾಷ್ಯಕಾರರ ಈ ವಿಧವಾದ ವಿವರಣೆಯು ಸಮಂಜಸವಾಗಿರುವುದು. ಆಧುನಿಕ ಭಾಷೆಯಲ್ಲಿಯೂ ಕೂಡ ಕವಿಗಳೂ ಗ್ರಂಥಕರ್ತರೂ ಗ್ರಂಥಗಳಲ್ಲಿ ತಮ್ಮ ಹೆಸರನ್ನು ಸೂಚಿಸುವಾಗ ನಾವು, ನಮ್ಮ ಎಂಬ ಬಹುವಚನ ಶಬ್ದಗಳನ್ನೇ ಉಪಯೋಗಿಸುವುದು ರೂಢಿಯಲ್ಲಿರುವುದು. ಅದರಂತೆ ಇಲ್ಲಿಯೂ ಪ್ರಯೋಗ ವಿರುವುದೆಂದು ಭಾವಿಸಬೇಕು. ಅಥವಾ ಗೋತಮಾಃ ಎಂಬ ಶಬ್ದಕ್ಕೆ ಗೋತಮಋಷಿಯೂ ಅವನ ಪುತ್ರಪೌತ್ರಾದಿ ಸಂತತಿಯವರೂ ಎಂಬ ಅರ್ಥವನ್ನಾದರೂ ಹೇಳಬಹುದು

**ವಿಚರ್ಷಣೇ—ವಿಶೇಷೇಣ ಸರ್ವಸ್ಯ ದ್ರಷ್ಟಃ** । ಸಮಸ್ತವನ್ನೂ ವಿಶೇಷವಾಗಿ ನೋಡುವವನು

**ದ್ಯುಮ್ನೈಃ**—ಈ ಶಬ್ದದ ಅರ್ಥವಿವರಣೆಯನ್ನು ಹಿಂದಿನ ಋಕ್ಕಿನಲ್ಲಿಯೇ ವಿವರಿಸಿರುವೆ ದ್ಯುಮ್ನಶಬ್ದಕ್ಕೆ ಪ್ರಕಾಶಾರ್ಥವಿದ್ದರೂ ಭಾಷ್ಯಕಾರರು ಮಂತ್ರೈಃ ಎಂಬ ಶಬ್ದವನ್ನು ಅಧ್ಯಾಹಾರಮಾಡಿ, ನಿನ್ನ ಗುಣಗಳನ್ನು ಪ್ರಕಾಶ ಪಡಿಸುವ ಸ್ತೋತ್ರಗಳಿಂದ ಎಂದರ್ಥವಿವರಣೆ ಮಾಡಿರುವರು.

**ನೋನುಮಃ**— **ಪುನಃ ಪುನಃ ಸ್ತುಮಃ** । ಮತ್ತೆ ಮತ್ತೆ (ಅನೇಕಾವರ್ತಿ) ಸ್ತೋತ್ರಮಾಡುವೆವು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಗಿರಾ**—ರೇಫಾಂತ ಸ್ತ್ರೀಲಿಂಗ ಗಿರ್ ಶಬ್ದ. ತೃತೀಯಾ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತ ಸ್ವರ ಬರುತ್ತದೆ.

**ಜಾತವೇದಃ**—ಸಂಬುದ್ಧಿ ಏಕವಚನಾಂತರೂಪ ಪಾದಾದಿಯಲ್ಲಿರುವುದರಿಂದ ಅಷ್ಟಮಿಕನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. **ಆಮಂತ್ರಿತಂ ಪೂರ್ವಮವಿದ್ಯಮಾನವತ್** ಸೂತ್ರದಿಂದ ಇದಕ್ಕೆ ಅವಿದ್ಯಮಾನವದ್ಭಾವವಿರುವುದರಿಂದ ಪದದ ಪರದಲ್ಲಿ ಬಂದಂತಾಗದಿದ್ದುದರಿಂದ ಮುಂದಿರುವ ವಿಚರ್ಷಣೇ ಎಂಬ ಆಮಂತ್ರಿತಕ್ಕೂ ನಿಘಾತಸ್ವರ ಬರುವುದಿಲ್ಲ ಹಿಂದಿನ ಸೂತ್ರದಿಂದ ಆದ್ಯುದಾತ್ತವಾಗುತ್ತದೆ.

**ಪ್ರ ಣೋನುಮಃ**—ಣು ಸ್ತುತೌ ಧಾತು ಅದಾದಿ, ಅತಿಶಯ ಅಥವಾ ಪುನಃ ಪುನಃ ಎಂದು ಅರ್ಥತೋರುವುದರಿಂದ **ಧಾತೋರೇಕಾಚೋಹಲಾ** (ಪಾ. ಸೂ. ೩-೧-೨೨) ಎಂಬುದರಿಂದ ಇದಕ್ಕೆ ಯಙ್. **ಯಙೋಽಚಿಚ** (ಪಾ. ಸೂ. ೨-೪-೭೪) ಎಂಬುದರಿಂದ ಯಙ್‌ಗೆ ಲುಕ್. **ಸನ್ಯಙೋಃ** (ಪಾ. ಸೂ ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ **ಗುಣೋಯಙ್‌ಲುಕೋಃ** (ಪಾ. ಸೂ ೭-೪-೮೨) ಎಂಬುದರಿಂದ ಯಙ್‌ಲುಙ್ ನಿಮಿತ್ತವಾಗಿ ಅಭ್ಯಾಸಕ್ಕೆ ಗುಣ. **ಸನಾದ್ಯಂತಾ ಧಾತವಃ** ಎಂಬುದರಿಂದ ಧಾತುಸಂಜ್ಞಾ ಬರುವುದರಿಂದ ಇದರ ಮೇಲೆ ಲಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ ನೋನುಮಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಹಿಂದೆ ಪ್ರ ಎಂಬ ಉಪಸರ್ಗವಿರುವಾಗ **ಉಪಸರ್ಗಾದಸಮಾಸೇಽಪಿ ಣೋಪದೇಶಸ್ಯ** (ಪಾ ಸೂ ೮-೪-೧೪) ಎಂಬುದರಿಂದ ಣೋಪದೇಶವಾದ ಈ ಧಾತುವಿನ ನಕಾರಕ್ಕೆ ಉಪಸರ್ಗದಲ್ಲಿರುವ ನಿಮಿತ್ತದ (ರೇಫ) ಪರದಲ್ಲಿರುವುದರಿಂದ ಣತ್ವ. ಪ್ರ ಣೋನುಮಃ ಎಂದು ರೂಪವಾಗುತ್ತದೆ. ॥ ೧ ॥



॥ ಸಂಹಿತಾಪಾಠಃ ॥

ತಮು ತ್ವಾ ಗೋತಮೋ ಗಿರಾ ರಾಯಸ್ಕಾಮೋ ದುವಸ್ಯತಿ ।
ದ್ಯುಮ್ನೈರಭಿ ಪ್ರ ಣೋನುಮಃ ॥ ೨ ॥

॥ ಪದಪಾಠಃ ॥

ತಂ । ಊಂ ಇತಿ । ತ್ವಾ । ಗೋತಮಃ । ಗಿರಾ । ರಾಯಃऽಕಾಮಃ । ದುವಸ್ಯತಿ ।
ದ್ಯುಮ್ನೈಃ । ಅಭಿ । ಪ್ರ । ನೋನುಮಃ ॥ ೨ ॥

॥ ಸಾಯಣಭಾಷ್ಯಂ ॥

ರಾಯಸ್ಕಾಮೋ ಧನಕಾಮೋ ಗೋತಮೋ ಯಮಗ್ನಿಂ ಗಿರಾ ಸ್ತುತ್ಯಾ ದುವಸ್ಯತಿ ಪರಿಚರತಿ ತಮು ತಮೇವ ತ್ವಾಂ ದ್ಯುಮ್ನೈರ್ದ್ಯೋತಮಾನೈಃ ಸ್ತೋತ್ರೈರಾಭಿಮುಖ್ಯೇನ ಪುನಃಪುನಃ ಸ್ತುಮಃ ॥ ರಾಯಸ್ಕಾಮಃ । ರಾಯೋ ಧನಾನಿ ಕಾಮಯತ ಇತಿ ರಾಯಸ್ಕಾಮಃ । ಕರ್ಮಣ್ಯಣ್ । ತತ್ಪುರುಷೇ ಕೃತಿ|ಬಹುಲಮಿತಿ ಬಹುಲವಚನಾದಲುಕ್ । ಊಡಿದಮಿತ್ಯಾದಿನಾ ಪೂರ್ವಪದಸ್ಯ ವಿಭಕ್ತೇರುದಾತ್ತತ್ವಂ । ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ಅತಃ ಕೃಕಮಿಕಂಸಕುಂಭೇತಿ । ಪಾ. ೮-೩-೪೬ । ವಿಸರ್ಜನೀಯಸ್ಯ ಸತ್ವಂ । ದುವಸ್ಯತಿ । ದುವಸ ಉಪತಾಪೇ ಪರಿಚರಣೇ ಚ । ಕಂಡ್ವಾದಿಃ ॥

॥ ಪ್ರತಿಪದಾರ್ಥ ॥

**ರಾಯಸ್ಕಾಮಃ**—ಧನವನ್ನಪೇಕ್ಷಿಸುವ । **ಗೋತಮಃ**—ಗೋತಮಋಷಿಯು (ಯಾವ ಅಗ್ನಿಯನ್ನು) । **ಗಿರಾ**—ಸ್ತುತಿಯಿಂದ । **ದುವಸ್ಯತಿ**—ಸೇವೆಮಾಡುತ್ತಾನೆಯೋ । **ತಮು**—ಅಂತಹ ಅಗ್ನಿಯನ್ನೇ । **ದ್ಯುಮ್ನೈಃ**—ಗುಣದ್ಯೋತಕವಾದ ಸ್ತುತಿಗಳಿಂದ । **ಅಭಿ ಪ್ರ ಣೋನುಮಃ**--ಪುನಃ ಪುನಃ ಸ್ತುತಿಸುತ್ತೇವೆ

॥ ಭಾವಾರ್ಥ ॥

ಧನಕಾಮರಾಗಿ ಗೌತಮರು, ಯಾವ ಅಗ್ನಿಯನ್ನು ಸ್ತುತಿಸಿವರೋ, ಅದೇ ಅಗ್ನಿಯನ್ನೇ (ನಾವೂ) ಗುಣದ್ಯೋತಕವಾದ ವಾಕ್ಯಗಳಿಂದ ಸ್ತುತಿಸುತ್ತೇವೆ

## English Translation.

To you, that (Agni) whom Gotama, desirous of riches, worships with praise, we offer adoration with commendatory (hymns).

॥ ವಿಶೇಷವಿಷಯಗಳು ॥

**ಗಿರಾ**—ವಾಕ್ಯದಿಂದ ಎಂದರೆ ಸ್ತೋತ್ರರೂಪವಾದ ವಾಕ್ಯದಿಂದ,

**ರಾಯಸ್ಕಾಮಃ—ಮಘಂ ರೇಕ್ಣಃ** ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ **ರಾಯಃ** ಎಂಬ ಶಬ್ದವು ಪಠಿತವಾಗಿರುವುದರಿಂದ **ರಾಯಃ** ಎಂದರೆ ಧನವು (ನಿ ೩–೯) **ರಾಯಸ್ಕಾಮಃ** ಎಂದರೆ ಧನವನ್ನಪೇಕ್ಷಿಸುವವನು ಎಂದರ್ಥವು. ಈ ಸೂಕ್ತದ ಋಷಿಯಾದ ಗೋತಮನು ಧನಪ್ರಾಪ್ತಿಗಾಗಿ ಅಗ್ನಿಯನ್ನು ಸ್ತೋತ್ರ ಮಾಡಿರುವನು

**ದುವಸ್ಯತಿ—ಪರಿಚರತಿ** । ಸೇವೆಮಾಡುತ್ತಾನೆ ಇರಜ್ಯತಿ, ವಿಧೇಮ ಮೊದಲಾದ ಹತ್ತು ಪರಿಚರಣ ಕರ್ಮನಾಮಗಳಲ್ಲಿ **ದುವಸ್ಯತಿ** ಎಂಬ ಶಬ್ದವು ಪಠಿತವಾಗಿರುವುದರಿಂದ **ದುವಸ್ಯತಿ** ಎಂದರೆ ಸೇವೆಮಾಡುತ್ತಾನೆ. ಶುಶ್ರೂಷೆಮಾಡುತ್ತಾನೆ ಎಂದರ್ಥವು (ನಿ. ೩–೧೩). ಈ ಶಬ್ದಪ್ರಯೋಗವಿರುವ ಒಂದೆರಡು ಋಕ್ಕುಗಳನ್ನು ಉದಾಹರಣೆಯಾಗಿ ಕೊಡುವೆವು.

**ಆಕರೇ ವಸೋರ್ಜರಿತಾ ಪನಸ್ಯತೇಽನೇಹಸಃ ಸ್ತುಭ ಇಂದ್ರೋ ದುವಸ್ಯತಿ** ।

(ಋ ಸಂ. ೩–೫೧–೩)

**ಅಗ್ನಿರ್ಹಿ ದೇವಾಁ ಅಮೃತೋ ದುವಸ್ಯತ್ಯಥಾ ಧರ್ಮಾಣಿ ಸನತಾ ನ ದೂದುಷತ್** ।

(ಋ. ಸಂ ೩–೩–೧).

**ಕ್ಷೇಮೇಣ ಮಿತ್ರೋ ವರುಣಂ ದುವಸ್ಯತಿ ಮರುದ್ಭಿರುಗ್ರಃ ಶುಭಮನ್ಯ ಈಯತೇ** ।

(ಋ. ಸಂ. ೭–೮೩–೫).

**ನಮಸ್ಯತ ಹವ್ಯದಾತಿಂ ಸ್ವಧ್ವರಂ ದುವಸ್ಯತ ದಮ್ಯಂ ಜಾತವೇದಸಂ** ।

(ಋ. ಸಂ ೩–೨–೮).

ಇತ್ಯಾದಿ ಋಕ್ಕುಗಳಲ್ಲಿರುವ **ದುವಸ್ಯತಿ** ಶಬ್ದಕ್ಕೆ ಪರಿಚರಣಕರ್ಮವೆಂದೇ ಅರ್ಥವು

**ದ್ಯುಮ್ನೈರಭಿ ಪ್ರ ಣೋನುಮಃ**—ಈ ಸೂಕ್ತದಲ್ಲಿರುವ ಐದು ಋಕ್ಕುಗಳಲ್ಲಿಯೂ ಈ ಪಾದವು ಪಲ್ಲವಿಯಂತೆ ಪುನಃ ಪುನಃ ಪಠಿತವಾಗಿರುವುದು

॥ ವ್ಯಾಕರಣಪ್ರಕ್ರಿಯಾ ॥

**ರಾಯಸ್ಕಾಮಃ**—ರಾಯಃ ಧನಾನಿ ಕಾಮಯತೇ ಇತಿ ರಾಯಸ್ಕಾಮಃ ಕಮು ಕಾಂತೌ ಧಾತು ಇದಕ್ಕೆ ಕರ್ಮವಾಚಕಪದವು ಉಪಪದವಾಗಿರುವಾಗ **ಕರ್ಮಣ್ಯಣ್** (ಪಾ ಸೂ ೩-೨-೧) ಎಂಬುದರಿಂದ ಅಣ್ ಪ್ರತ್ಯಯ. **ಅತ ಉಪಧಾಯಾಃ** (ಪಾ ಸೂ ೭-೨-೧೧೬) ಎಂಬುದರಿಂದ ಉಪಧಾವೃದ್ಧಿ. **ಸುಪೋಧಾತುಪ್ರಾತಿಪದಿಕಯೋಃ** ಎಂಬುದರಿಂದ ದ್ವಿತೀಯಾವಿಭಕ್ತಿಗೆ ಲುಕ್ ಪ್ರಾಪ್ತವಾದರೆ **ತತ್ಪುರುಷೇ ಕೃತಿ ಬಹುಲಂ** (ಪಾ ಸೂ. ೬-೩-೧೪) ಎಂಬಲ್ಲಿ ಬಹುಲಗ್ರಹಣಮಾಡಿರುವುದರಿಂದ ಇಲ್ಲಿಯೂ ಅಲುಕ್ ಬರುತ್ತದೆ **ಊಡಿದಂ ಪದಾದಿ**—(ಪಾ ಸೂ ೬-೧-೧೭೧) ಎಂಬುದರಿಂದ **ರಾಯಃ** ಎಂಬುದು ವಿಭಕ್ತಿಗೆ ಉದಾತ್ತಸ್ವರ ಬರುವುದರಿಂದ ಅಂತೋದಾತ್ತವಾಗುತ್ತದೆ. ದಾಸೀಭಾರಾದಿಯಲ್ಲಿ ಪಠಿತವಾದುದರಿಂದ ವೃತ್ತಿಯಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ ರಾಯಃ। ಕಾಮಃ ಎಂದಿರುವಾಗ **ಅತಃ ಕೃಕಮಿಕಂಸಕುಂಭ**—(ಪಾ ಸೂ. ೮-೩-೪೬) ಎಂಬುದರಿಂದ ಕಮ್ ಧಾತುವು ಪರದಲ್ಲಿರುವುದರಿಂದ ವಿಸರ್ಗಕ್ಕೆ ಸತ್ವ ಬರುತ್ತದೆ.

**ದುವಸ್ಯತಿ**—ದುವಸ ಉಪತಾಪೇ ಪರಿಚರಣೇಚ ಧಾತು ಕಂಡ್ವಾದಿ **ಕಂಡ್ವಾದಿಭ್ಯೋ ಯಕ್** (ಪಾ ಸೂ ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್ ಪ್ರತ್ಯಯ. **ಸನಾದ್ಯಂತಾ ಧಾತವಃ** ಎಂಬುದರಿಂದ ದುವಸ್ಯ ಎಂಬ ಯಗಂತಕ್ಕೆ ಧಾತುಸಂಜ್ಞಾ ಬರುತ್ತದೆ. ಇದರಮೇಲೆ ವರ್ತಮಾನಾರ್ಥದಲ್ಲಿ ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ ಶಪ್ ವಿಕರಣ. **ಅತೋಗುಣೇ** ಎಂಬುದರಿಂದ ಪರರೂಪ ದುವಸ್ಯತಿ ಎಂದು ರೂಪವಾಗುತ್ತದೆ ಅತಿಎಂತದ ಸ್ವರದಲ್ಲಿರುವುದರಿಂದ ಧಾತುಸ್ವರ ಬರುತ್ತದೆ

**ದ್ಯುಮ್ನೈಃ**-**ಊಡಿದಂಪದಾದಿ** (ಪಾ ಸೂ ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ನೋನುಮಃ** ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ ॥ ೭ ॥



॥ ಸಂಹಿತಾಪಾಠಃ ॥

## ತಮು ತ್ವಾ ವಾಜಸಾತಮಮಂಗಿರಸ್ವದ್ಧವಾಮಹೇ ।
## ದ್ಯುಮ್ನೈರಭಿ ಪ್ರ ಣೋನುಮಃ ॥ ೩ ॥

॥ ಪದಪಾಠಃ ॥

**ತಂ । ಊಂ ಇತಿ । ತ್ವಾ । ವಾಜಽಸಾತಮಂ । ಅಂಗಿರಸ್ವತ್ । ಹವಾಮಹೇ । ದ್ಯುಮ್ನೈಃ । ಅಭಿ । ಪ್ರ । ನೋನುಮಃ ॥ ೩ ॥**

॥ ಸಾಯಣಭಾಷ್ಯಂ ॥

**ಹೇ ಅಗ್ನೇ ವಾಜಸಾತಮಂ ವಾಜಾನಾಮನ್ನಾನಾಮತಿಶಯೇನ ಸನಿತಾರಂ ದಾತಾರಂ ತಮೇವ ತ್ವಾ ತ್ವಾಮಂಗಿರಸ್ವತ್ । ಅಂಗಿರಸ ಇವ ಹವಾಮಹೇ । ಆಹ್ವಯಾಮಃ । ಶಿಷ್ಟಂ ಗತಂ ॥ ವಾಜಸಾತಮಂ । ಷಣು ದಾನೇ । ಜನಸನಖನಕ್ರಮಗಮೋ ವಿಟ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ । ಅತಿಶಯೇನ ವಾಜಸಾ ವಾಜಸಾತಮಃ । ತಮಪಃ ಪಿತ್ತ್ವಾದನುದಾತ್ತತ್ವೇ ಕೃದುತ್ತರಪದಪ್ರಕೃತಿಸ್ವರ ಏವ ಶಿಷ್ಯತೇ । ಅಂಗಿರಸ್ವತ್ । ತೇನ ತುಲ್ಯಮಿತಿ ವತಿಃ । ನಭೋಽಂಗಿರೋಮನುಷಾಂ ವತ್ಯುಪಸಂಖ್ಯಾನಂ । ಪಾ ೧-೪-೧೮-೩ । ಇತಿ ಭತ್ವೇನ ಪದತ್ವಾಭಾವಾದ್ರುತ್ವಾದ್ಯಭಾವಃ ॥**

॥ ಪ್ರತಿಪದಾರ್ಥ ॥

**ಅಗ್ನೇ**- ಎಲೈ ಅಗ್ನಿಯೇ, (ನಾವು) । **ವಾಜಸಾತಮಂ**—ಅನ್ನವನ್ನು ಅತಿಶಯವಾಗಿ ಅನುಗ್ರಹಿಸುವ । **ತಮು**—ಅದೇ । **ತ್ವಾ**—ನಿನ್ನನ್ನು । **ಅಂಗಿರಸ್ವತ್**—ಅಂಗಿರಸರಂತೆ (ಅಂಗಿರಾ ಋಷಿಯಂತೆ) । **ಹವಾಮಹೇ**—ಆಹ್ವಾನಿಸುತ್ತೇವೆ । **ದ್ಯುಮ್ನೈಃ**—(ನಿನ್ನ) ಗುಣದ್ಯೋತಕವಾದ ಮಂತ್ರಗಳಿಂದ । **ಅಭಿ ಪ್ರಣೋನುಮಃ**—ಪುನಃ ಪುನಃ ಸ್ತುತಿಸುತ್ತೇವೆ.

॥ ಭಾವಾರ್ಥ ॥

ಎಲೈ ಅಗ್ನಿಯೇ, ವಿಶೇಷವಾಗಿ ಅನ್ನವನ್ನು ಅನುಗ್ರಹಿಸುವ ನಿನ್ನನ್ನು ಅಂಗಿರಸರಂತೆ ನಾವು (ನಮ್ಮ ಯಜ್ಞಕ್ಕೆ) ಆಹ್ವಾನಿಸುತ್ತೇವೆ. (ಬಂದಂಥಾ ನಿನ್ನನ್ನು) ಗುಣದ್ಯೋತಕವಾದ ಮಂತ್ರಗಳಿಂದ ಪುನಃ ಪುನಃ ಸ್ತುತಿಸುತ್ತೇವೆ.

## English Translation.

We invoke you, such as you are, the giver of abundant food, in like manner as did Angiras, we praise you repeatedly which commendatory (hymns).

॥ ವಿಶೇಷವಿಷಯಗಳು ॥

**ವಾಜಸಾತಮಂ—ಅನ್ನಾನಾಮತಿಶಯೇನ ದಾತಾರಂ ।** ವಾಜವೆಂದರೆ ಅನ್ನವು. (ನಿ ೨-೭) ಅತಿಶಯವಾಗಿ ಅನ್ನವನ್ನು ಕೊಡುವವನಾದ್ದರಿಂದ ಅಗ್ನಿಯನ್ನು ವಾಜಸಾತಮಂ ಎಂದು ಸ್ತುತಿಸಲಾಗಿದೆ.

**ಅಂಗಿರಸ್ವತ್**—ಅಂಗಿರಾ ಋಷಿಯು ಅಗ್ನಿಯನ್ನು ಆಹ್ವಾನಮಾಡಿದಂತೆ. ಈ ಉಪಮಾನವು ಋಗ್ವೇದದ ಅನೇಕ ಋಕ್ಕುಗಳಲ್ಲಿ ಹೇಳಿರುವುದು—

**ಮನುಷ್ವದಗ್ನೇ ಅಂಗಿರಸ್ವದಂಗಿರೋ ಯಯಾತಿವತ್ಸದನೇ ಪೂರ್ವವಚ್ಛುಚೇ ।**

(ಋ ಸಂ ೧-೩೧-೧೭)

**ಅಂಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಂ ।**

(ಋ ಸಂ ೧-೪೫-೩)

**ತದಸ್ಮೈ ನವ್ಯಮಂಗಿರಸ್ವದರ್ಚತ ಶುಷ್ಮಾ ಯದಸ್ಯ ಪ್ರತ್ನಥೋದೀರತೇ ।**

(ಋ ಸಂ ೨-೧೭-೧)

**ತಮಂಗಿರಸ್ವನ್ನಮಸಾ ಸಪರ್ಯನ್ನವ್ಯಂ ಕೃಣೋಮಿ ಸನ್ಯಸೇ ಪುರಾಜಾಂ ।**

(ಋ ಸಂ ೩-೩೧-೧೯)

**ಉತ ತ್ವಾ ಭೃಗುವಚ್ಛುಚೇ ಮನುಷ್ವದಗ್ನ ಆ ಹುತ ।**
**ಅಂಗಿರಸ್ವದ್ಧವಾಮಹೇ ।**

(ಋ ಸಂ ೮-೪೩-೧೩)

ಇತ್ಯಾದಿ ಸೂಕ್ತಗಳಲ್ಲಿ ಅಂಗಿರಾಋಷಿಯು ಅಗ್ನಿಯನ್ನು ಆಹ್ವಾನಮಾಡಿ ಪರಿಚರಣ ಮಾಡಿರುವ ವಿಷಯವು ವರ್ಣಿತವಾಗಿದೆ ಆ ವಿಧಾನವು ಅತ್ಯಂತ ಪ್ರಮಾದದಿಂದ ಪರಿಗಣಿಸಲ್ಪಟ್ಟಿರುವುದರಿಂದ ಅನೇಕ ಋಷಿಗಳು ಈ ಉದಾಹರಣೆಯನ್ನೇ ಕೊಟ್ಟಿರುವರ

॥ ವ್ಯಾಕರಣಪ್ರಕ್ರಿಯಾ ॥

**ವಾಜಸಾತಮಮ್**—ಷಣು ದಾನೇ ಧಾತು ವಾಜ ಎಂಬುದು ಉಪಪದವಾಗಿರುವಾಗ . **ಜನಸನಖನಕ್ರಮಗಮೋ ವಿಟ್** (ಪಾ ಸೂ ೩-೨-೬೭) ಎಂಬುದರಿಂದ ಇದಕ್ಕೆ ವಿಟ್ ಪ್ರತ್ಯಯ ವಿಟ್‌ಪರವಾದಾಗ ಇದು ಅನುನಾಸಿಕಾಂತಧಾತುವಾದುದರಿಂದ **ವಿಡ್ವನೋರನುನಾಸಿಕಸ್ಯಾತ್** (ಪಾ ಸೂ. ೬-೪-೪೧) ಎಂಬುದರಿಂದ ಆತ್ವ ಸವರ್ಣದೀರ್ಘ. ವಾಜಸಾ ಎಂದು ರೂಪವಾಗುತ್ತದೆ ಅತಿಶಯೇನ ವಾಜಸಾ ವಾಜಸಾತಮಃ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ ೫-೩-೫೫) ಎಂಬುದರಿಂದ ತಮಪ್ ಪ್ರತ್ಯಯ ತಮಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ **ಗತಿಕಾರಕೋಪಪದಾತ್ ಕೃತ್** (ಪಾ ಸೂ ೬-೨-೧೩೯) ಎಂಬುದರಿಂದ ಬಾದ ಕೃದುತ್ತರಪದ ಪ್ರಕೃತಿಸ್ವರವೇ ಉಳಿಯುತ್ತದೆ ದ್ವಿತೀಯಾ ಏಕವಚನಾಂತರೂಪ

**ಅಂಗಿರಸ್ವತ್**—ಅಂಗಿರಸ ಇವ ಅಂಗಿರಸ್ವತ್ **ತೇನ ತುಲ್ಯಂ ಕ್ರಿಯಾ ಚೇದ್ವತಿಃ** (ಪಾ. ಸೂ ೫-೧-೧೧೫) ಎಂಬುದರಿಂದ ವತಿಪ್ರತ್ಯಯ ವತಿ ಪರವಾದಾಗ ಪದಸಂಜ್ಞೆ ಬರುವುದರಿಂದ ರುತ್ವವು ಪ್ರಾಪ್ತವಾದರೆ **ನಭೋಂಗಿರೋಮನುಷಾಂ ವತ್ಯುಪಸಂಖ್ಯಾನಮ್** (ಪಾ ಸೂ. ೧-೪-೧೮-೩) ಎಂಬ ವಚನದಿಂದ ಭಸಂಜ್ಞೆಯು ಬರುವುದರಿಂದ ಪದಸಂಜ್ಞೆ ಇಲ್ಲದಿರುವುದರಿಂದ ರುತ್ವಾದಿಗಳು ಬರುವುದಿಲ್ಲ.

**ಹವಾಮಹೇ**— ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. **ಟಿತ ಆತ್ಮನೇ**—ಎಂಬುದರಿಂದ ಏತ್ವ. ಶಪ್ ವಿಕರಣ. **ಬಹುಲಂ ಛಂದಸಿ** (ಪಾ. ಸೂ ೬-೧-೩೪) ಎಂಬುದರಿಂದ ನಿಮಿತ್ತವಿಲ್ಲದಿದ್ದರೂ ಧಾತುವಿಗೆ ಸಂಪ್ರಸಾರಣ ಬರುತ್ತದೆ **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. ಹು ಎಂದಾದಾಗ ಶಪ್ ನಿಮಿತ್ತವಾಗಿ ಗುಣ ಅವಾದೇಶ **ಅತೋದೀರ್ಘೋಯಞಿ** (ಪಾ ಸೂ. ೭-೩-೧೦೧) ಎಂಬುದರಿಂದ ಮಹಿಙ್ ನಿಮಿತ್ತವಾಗಿ ಹವ ಎಂಬ ಅಂಗಕ್ಕೆ ದೀರ್ಘ ಅತಿಙಂತದ ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ ॥ ೩ ॥

॥ ಸಂಹಿತಾಪಾಠಃ ॥

ತಮು ತ್ವಾ ವೃತ್ರಹಂತಮಂ ಯೋ ದಸ್ಯೂಁರವಧೂನುಷೇ ।

ದ್ಯುಮ್ನೈರಭಿ ಪ್ರ ಣೋನುಮಃ ॥ ೪ ॥

॥ ಪದಪಾಠಃ ॥

ತಂ । ಊಂ ಇತಿ । ತ್ವಾ । ವೃತ್ರಹನ್ಽತಮಂ । ಯಃ । ದಸ್ಯೂನ್ । ಅವಽ-
ಧೂನುಷೇ ।

ದ್ಯುಮ್ನೈಃ । ಅಭಿ । ಪ್ರ । ನೋನುಮಃ ॥ ೪ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ದಸ್ಯೂನ್ ಉಪಕ್ಷಪಯಿತ್ರ್ಯಾನ್ ರಾಕ್ಷಸಾದೀನ್ಯಸ್ತ್ವಮವಧೂನುಷೇ ಅವಚಾಲಯಸಿ ಸ್ಥಾನಾತ್ಪ್ರಚ್ಯಾವಯಸಿ ವೃತ್ರಹಂತಮಂ ವೃತ್ರಾಣಾಂ ಪಾಪ್ಮಾನಾಮತಿಶಯೇನ ಹಂತಾರಂ ತಮು ತ್ವಾ ತಮೇವ ತ್ವಾಂ ದ್ಯುಮ್ನೈರಿತ್ಯಾದಿ ಪೂರ್ವವತ್ ॥ ವೃತ್ರಹಂತಮಂ । ಅತಿಶಯೇನ ವೃತ್ರಹಾ ವೃತ್ರಹಂತಮಃ । ಪದಸಂಜ್ಞಾಯಾಂ ನಲೋಪೇ ನಾದ್ಯಸ್ಯ । ಪಾ. ೮-೨-೧೭ । ಇತಿ ತಮಪೋ ನುಟ್ । ದಸ್ಯೂನ್ । ದೀರ್ಘಾದಟಿ ಸಮಾನಪಾದ ಇತಿ ನಕಾರಸ್ಯ ರುತ್ವಂ । ಅತ್ರಾನುನಾಸಿಕಃ ಪೂರ್ವಸ್ಯ ತು ವೇತ್ಯೂಕಾರಃ ಸಾನುನಾಸಿಕಃ ॥**

॥ ಪ್ರತಿಪದಾರ್ಥ ॥

**(ಅಗ್ನೇ**—ಎಲೈ ಅಗ್ನಿಯೇ) । **ದಸ್ಯೂನ್**—ರಾಕ್ಷಸರನ್ನು । **ಯಃ**—ಯಾವ (ಯಾವ ನೀನು) । **ಅವಧೂನುಷೇ**—ಓಡಿಸುತ್ತೀಯೋ । **ವೃತ್ರಹಂತಮಂ**—ಪಾಪನಾಶಕನಾದ । **ತಮು ತ್ವಾ**—ಅಂತಹ ನಿನ್ನನ್ನು । **ದ್ಯುಮ್ನೈಃ**—ಗುಣದ್ಯೋತಕವಾದ ಸ್ತುತಿಗಳಿಂದ । **ಅಭಿ ಪ್ರ ಣೋನುಮಃ**—ಪುನಃ ಪುನಃ ಸ್ತುತಿಸುತ್ತೇವೆ

॥ ಭಾವಾರ್ಥ ॥

ಎಲೈ ಅಗ್ನಿಯೇ, (ಯಜ್ಞಹಿಂಸಕರಾದ) ರಾಕ್ಷಸರನ್ನು ನಾಶಮಾಡುವ ಮತ್ತು ಪಾಪನಾಶಕನಾದ ನಿನ್ನನ್ನೇ ಸ್ತುತಿರೂಪವಾದ ಮಂತ್ರಗಳಿಂದ ಪುನಃ ಪುನಃ ಸ್ತುತಿಸುತ್ತೇವೆ

## English Translation.

We praise you, repeatedly with commendatory (hymns), you are the destroyer of Vritra, and you put the Dasyus to flight

॥ ವಿಶೇಷವಿಷಯಗಳು ॥

**ದಸ್ಯೂನ್**—ಈ ಶಬ್ದಕ್ಕೆ ರಾಕ್ಷಸರೆಂದು ಸಾಮಾನ್ಯಾರ್ಥವನ್ನು ಹೇಳಬಹುದಾದರೂ ಯಾಸ್ಕರ ವಿವರಣೆಯನ್ನು ಕೊಡುವುದು ಉಚಿತವಾಗಿರುವುದು—

**ದಸ್ಯುರ್ದಸ್ಯತೇಃ ಕ್ಷಯಾರ್ಥಾದುಪದಸ್ಯಂತ್ಯಸ್ಮಿನ್ರಸಾ ಉಪದಾಸಯತಿ ಕರ್ಮಾಣಿ ।**

(ನಿ. ೭-೨೩)

ರಸಾದಿದ್ರವ್ಯಗಳನ್ನು, ಉದಕವನ್ನು ಒಣಗಿಸಿ ನಾಶಮಾಡುವವನು, ಅನಾವೃಷ್ಟಿಯನ್ನುಂಟುಮಾಡುವವನು ಈ ಕಾರಣದಿಂದಲೇ ಯಜ್ಞಾದಿಕರ್ಮಗಳಿಗೆ ವಿಘ್ನವನ್ನುಂಟುಮಾಡುವವನು ಎಂದು ದಸ್ಯು ಶಬ್ದದ ಅರ್ಥವು. ಪಾಶ್ಚಾತ್ಯರು ದಸ್ಯುವೆಂದರೆ ಈ ದೇಶದಲ್ಲಿ ಆಗ ನೆಲಸಿದ್ದ ಪೂರ್ವನಿವಾಸಿಗಳಾದ ಕಪ್ಪುಜನರೆಂದೂ ಇವರು ಕಳ್ಳತನವನ್ನು ಮಾಡುತ್ತಾ ಆರ್ಯರ ಯಜ್ಞಾದಿಗಳಿಗೆ ತೊಂದರೆಯನ್ನುಂಟುಮಾಡುತ್ತಿದ್ದುದರಿಂದ ಇವರನ್ನು ರಾಕ್ಷಸರೆಂದು ಕರೆಯುತ್ತಿದ್ದರೆಂದೂ ಅಭಿಪ್ರಾಯಪಡುವರು ಇಂತಹ ದಸ್ಯು ಜನರನ್ನು ಸಂಹಾರಮಾಡಿ ತಮ್ಮನ್ನು ಕಾಪಾಡಬೇಕೆಂದು ಋಷಿಗಳು ಅಗ್ನಿಯನ್ನೂ, ಇಂದ್ರನನ್ನೂ ಅನೇಕ ಋಕ್ಕುಗಳಲ್ಲಿ ಸ್ತುತಿಸಿರುವರು—

**ಮಹಾಂತಂ ಚಿದರ್ಬುದಂ ನಿ ಕ್ರಮೀಃ ಪದಾ ಸನಾದೇವ ದಸ್ಯುಹತ್ಯಾಯ ಜಜ್ಞಿಷೇ ।**

(ಋ. ಸಂ ೧-೫೧-೬)

**ಉಪಪ್ರಯನ್ದಸ್ಯುಹತ್ಯಾಯ ವಜ್ರೀ ಯದ್ಧ ಸೂನುಃ ಶ್ರವಸೇ ನಾಮ ದಧೇ ।**

(ಋ ಸಂ ೧-೧೦೩-೪)

**ಮಹೇ ಯತ್ತ್ವಾ ಪುರೂರವೋ ರಣಾಯಾವರ್ಧಯನ್ದಸ್ಯುಹತ್ಯಾಯ ದೇವಾಃ ।**

(ಋ ಸಂ ೧೦-೯೫-೭)

**ತಮು ತ್ವಾ ಪಾಥ್ಯೋ ವೃಷಾ ಸಮೀಧೇ ದಸ್ಯುಹಂತಮಂ ।**

(ಋ ಸಂ ೬-೧೬-೧೫)

**ತಮಾಗನ್ಮ ತ್ರಿಪಸ್ತ್ಯಂ ಮಂಧಾತುರ್ದಸ್ಯುಹಂತಮಮಗ್ನಿಂ ಯಜ್ಞೇಷು ಪೂರ್ವ್ಯಂ ನಭಂತಾ ಮನ್ಯಕೇ ಸಮೇ ।**

(ಋ. ಸಂ. ೮-೩೯-೮)

ಇತ್ಯಾದಿ ಅನೇಕ ಉದಾಹರಣೆಗಳನ್ನು ಕೊಡಬಹುದು

**ವೃತ್ರಹಂತಮಂ**— ದಸ್ಯುಹನನ ವಿಷಯದಲ್ಲಿ ಹೇಳಿದ ವಿಷಯವೇ ವೃತ್ರಹನನದಲ್ಲಿಯೂ ಅನ್ವಯಿಸು ವುದು ಈ ಶಬ್ದವು ಇಂದ್ರನ ಪರವಾದ ಅರ್ಥಗಳಲ್ಲಿ ವಿಶೇಷವಾಗಿ ಬಳಕೆಯಲ್ಲಿದ್ದರೂ, ಕೆಲವು ಸಂದರ್ಭಗಳಲ್ಲಿ ಇಂದ್ರನ ಗುಣಗಳನ್ನು ಅಗ್ನಿಯಲ್ಲಿ ಆರೋಪಿಸಿ ಈ ಶಬ್ದವನ್ನು ಅಗ್ನಿಗೂ ವಿಶೇಷಣ ಪದವನ್ನಾಗಿ ಉಪಯೋಗಿಸಲಾಗಿರು ವುದು. ಉದಾಹರಣೆಗಾಗಿ—

**ಅಗ್ನಿಂ ದೇವಾಸೋ ಅಗ್ರಿಯಮಿಂಧತೇ ವೃತ್ರಹಂತಮಂ ।**

(ಋ. ಸಂ ೬-೧೬-೪೮)

**ಅಗನ್ಮ ವೃತ್ರಹಂತಮಂ ಜ್ಯೇಷ್ಠಮಗ್ನಿಮಾನವಂ ।**

(ಋ ಸಂ. ೮-೭೪-೪)

ಈ ಉದಾಹರಣೆಗಳಲ್ಲಿ ವೃತ್ರಹಂತಮಂ ಎಂಬ ಶಬ್ದವು ಅಗ್ನಿಪರವಾಗಿರುವುದು ಇಂದ್ರನ ಪರವಾಗಿ ಉಪಯೋಗಿಸಿ ದಾಗ ಈ ಶಬ್ದಕ್ಕೆ ವೃತ್ರಾಸುರನನ್ನ ಸಂಹಾರಮಾಡಿದನೆಂದೂ ಅಗ್ನಿಯ ಪರವಾಗಿ ಉಪಯೋಗಿಸುವಾಗ ವೃತ್ರಶಬ್ದಕ್ಕೆ ಶತ್ರುವೆಂಬ ಸಾಧಾರಣಾರ್ಥವನ್ನು ಕಲ್ಪಿಸಿ ಶತ್ರುನಾಶಕನೆಂಬ ಅರ್ಥವನ್ನು ಹೇಳುವುದು ಸಮಂಜಸವಾಗಿರುವುದು ಪ್ರಸಕ್ತಋಕ್ಕಿನಲ್ಲಿ ಭಾಷ್ಯಕಾರರು ಪಾಪ್ಮಾನ ಎಂದರೆ ದುರಿತ ಪಾಪ ಎಂಬ ಅರ್ಥವನ್ನು ಹೇಳಿರುವರು

॥ ವ್ಯಾಕರಣಪ್ರಕ್ರಿಯಾ ॥

**ವೃತ್ರಹಂತಮಮ್**—ವೃತ್ರಂ ಹತವಾನ್ ವೃತ್ರಹಾ ಹನ ಹಿಂಸಾಗತ್ಯೋಃ ಧಾತು ಇದಕ್ಕೆ ವೃತ್ರ ಶಬ್ದ ಉಪಪದವಾಗಿರುವಾಗ **ಬ್ರಹ್ಮಭ್ರೂಣ ವೃತ್ರೇಷು ಕ್ವಿಪ್** (ಪಾ ಸೂ ೩-೨-೮೭) ಎಂಬುದರಿಂದ ಭೂತಾರ್ಥದಲ್ಲಿ ಕ್ವಿಪ್ ಪ್ರತ್ಯಯ ವೃತ್ರಹನ್ ಶಬ್ದವಾಗುತ್ತದೆ ಅತಿಶಯೇನ ವೃತ್ರಹಾ ವೃತ್ರಹಂತಮಃ **ಅತಿಶಾಯನೇ ತಮ ಬಿಷ್ಠನೌ** (ಪಾ ಸೂ ೫ ೩-೫೫) ಎಂಬುದರಿಂದ ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ. **ಸ್ವಾದಿಷ್ವಸರ್ವನಾಮ-ಸ್ಥಾನೇ** ಸೂತ್ರದಿಂದ ಇಲ್ಲಿ ಪದಸಂಜ್ಞೆ ಬರುವುದರಿಂದ **ನಲೋಪಃ ಪ್ರಾತಿಪದಿಕಾಂತಸ್ಯ** ಸೂತ್ರದಿಂದ ಹನಿನ ನಕಾರಕ್ಕೆ ಲೋಪ. **ನಾದ್ಘಸ್ಯ** (ಪಾ ಸೂ ೮-೨-೧೭) ತರಪ್ ತಮಪ್ ಪ್ರತ್ಯಯಗಳಿಗೆ ಘ ಎಂದು ಹೆಸರು.

ನಕಾರದ ಪರದಲ್ಲಿರುವ ಛಕ್ಕೆ ನುಡಾಗವು ಎಂಬುದರಿಂದ ಇಲ್ಲಿ ತಮುಪಿಗೆ ನುಡಾಗವು. ವೃತ್ರಹಂತಮ ಎಂದು ರೂಪ ವಾಗುತ್ತದೆ. ತಮುಪ್ ಪಿತ್ತಾದುದರಿಂದ ಅನುದಾತ್ತ. ಆಗ ಪೂರ್ವದಲ್ಲಿ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ದಸ್ಯೂನ್**—ಇದಕ್ಕೆ ಅವಧೂನುಷೇ ಎಂಬಲ್ಲಿರುವ ಅಕಾರ ರೂಪ ಅಟ್ ಪರವಾದುದರಿಂದ **ದೀರ್ಘಾದಟಿ ಸಮಾನಪಾದೇ** (ಪಾ. ಸೂ. ೮-೩-೯) ಎಂಬುದರಿಂದ ನಕಾರಕ್ಕೆ ರುತ್ವ. **ಅತ್ರಾನುನಾಸಿಕಃ ಪೂರ್ವಸ್ಯ ತು ವಾ** (ಪಾ. ಸೂ ೮-೩-೨) ಎಂಬುದರಿಂದ ಪೂರ್ವದ ಊಕಾರಕ್ಕೆ ಅನುನಾಸಿಕತ್ವ ಬರುತ್ತದೆ

**ಅವಧೂನುಷೇ**—ಅವ ಉಪಸರ್ಗ. ಧೂಞ್ ಕಂಪನೇ ಧಾತು. ಲಟ್ ಮಧ್ಯಮಪುರುಷ ಏಕವಚನದಲ್ಲಿ **ಥಾಸಃ ಸೇ** ಎಂಬುದರಿಂದ ಸೇ ಆದೇಶ **ಸ್ವಾದಿಭ್ಯಃ ಶ್ನುಃ** ಎಂಬುದರಿಂದ ಶ್ನು ವಿಕರಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ ॥ ೪ ॥



॥ ಸಂಹಿತಾಪಾಠಃ ॥

ಅವೋ॑ಚಾಮ ರಹೂ॑ಗಣಾ ಅ॒ಗ್ನಯೇ॒ ಮಧು॑ಮ॒ದ್ವಚಃ॑ ।
ದ್ಯು॒ಮ್ನೈರ॒ಭಿ ಪ್ರ ಣೋ॑ನುಮಃ ॥ ೫ ॥

॥ ಪದಪಾಠಃ ॥

ಅವೋ॑ಚಾಮ । ರಹೂ॑ಗಣಾಃ । ಅ॒ಗ್ನಯೇ॒ । ಮಧು॑ಽಮತ್ । ವಚಃ॑ ।
ದ್ಯು॒ಮ್ನೈಃ । ಅ॒ಭಿ । ಪ್ರ । ನೋ॒ನು॒ಮಃ॒ ॥ ೫ ॥

॥ ಸಾಯಣಭಾಷ್ಯಂ ॥

**ಋಷಿಃ ಕೃತಂ ಸ್ತೋತ್ರಮನಯೋಪಸಂಹರತಿ । ರಹೂಗಣಾ ರಹೂಗಣಸ್ಯ ಪುತ್ರಾ ವಯಂ ಗೋತಮಾ ಅಗ್ನಯೇ ಅಂಗನಾದಿಗುಣಯುಕ್ತಾಯ ದೇವಾಯ ಮಧುಮದ್ವಚೋ ಮಾಧುರ್ಯೋಪೇತಂ ವಚನಮವೋಚಾಮ ಪ್ರಾವಾದಿಷ್ಮ । ತದ್ವಚನರೂಪೈರ್ದ್ಯುಮ್ನೈರ್ದ್ಯೋತಮಾನೈಃ ಸ್ತೋತ್ರೈಃ ಪುನಃ-ಪುನರಗ್ನಿಂ ವಯಮಭಿ ಪ್ರ ಣೋನುಮಃ । ಆಭಿಮುಖ್ಯೇನ ಪ್ರಕರ್ಷೇಣ ಸ್ತುಮಃ ॥**

॥ ಪ್ರತಿಪದಾರ್ಥ ॥

**ರಹೂಗಣಾಃ**—ರಹೂಗಣವಂಶದವರಾದ ಗೋತಮರೆಂಬ (ನಾವು) । **ಅಗ್ನಯೇ**--ಸುರೂಪಿಯಾದ ಅಗ್ನಿಗೆ । **ಮಧುಮದ್ವಚಃ**---ಮಾಧುರ್ಯೋಪೇತವಾದ ಸ್ತೋತ್ರರೂಪವಾದ ಈ ವಾಕ್ಯಗಳನ್ನು । **ಅವೋ-ಚಾಮ**—ಉಚ್ಚರಿಸಿದೆವು (ಮತ್ತು) । **ದ್ಯುಮ್ನೈಃ**—ಗುಣದ್ಯೋತಕವಾದ ವಾಕ್ಯಗಳಿಂದ । **ಅಭಿ ಪ್ರ ಣೋನುಮಃ**—ಪುನಃ ಪುನಃ ಸ್ತುತಿಸುತ್ತೇವೆ.

॥ ಭಾವಾರ್ಥ ॥

ರಹೂಗಣಪುತ್ರರಾದ ಗೋತಮರೆಂಬ ನಾವು ಸ್ಫುರದ್ರೂಪಿಯಾದ ಅಗ್ನಿಯನ್ನು ಮಧುರವಾದ ಮತ್ತು ಗುಣದ್ಯೋತಕವಾದ (ಸ್ತುತಿರೂಪ) ವಾಕ್ಯಗಳಿಂದ ಪುನಃ ಪುನಃ ಸ್ತುತಿಸಿದೆವು

## English Translation

The descendants of Rahugana have recited sweet speeches to Agni, we praise him repeatedly with commendatory (hymns)

॥ ವಿಶೇಷವಿಷಯಗಳು ॥

**ರಹೂಗಣಾಃ**—ರಹೂಗಣನೆಂಬ ಋಷಿಯ ಪುತ್ರರಾದ ಗೋತಮಾದಿಗಳು ಅಥವಾ ರಹೂಗಣ ಋಷಿಯ ವಂಶಸ್ಥರು ಅಥವಾ ಆ ಋಷಿಯ ಸಂಬಂಧಿಗಳು. ಈ ಸೂಕ್ತದ ಋಷಿಯು ರಹೂಗಣಋಷಿಯ ಪುತ್ರನಾದ ಗೋತಮನಾದುದರಿಂದ ಅವನೂ ಅವನ ಸಂಬಂಧಿಗಳಾದ ಇತರ ಜನರೂ ಸೇರಿ ಈ ಸ್ತೋತ್ರವನ್ನು ಮಾಡಿರುವೆವು ಎಂಬುದನ್ನು ಹೇಳಿ ಸೂಕ್ತವನ್ನು ಉಪಸಂಹಾರಮಾಡುವನು.

**ಮಧುಮತ್ ವಚಃ--ಮಾಧುರ್ಯೋಪೇತಂ ವಚನಂ** । ಕೇಳುವುದಕ್ಕೆ ಆಹ್ಲಾದಕರವಾಗಿರುವ, ಅಗ್ನಿಗೆ ಪ್ರೀತಿಕರವಾದ ಇತ್ಯಾದಿ

॥ ವ್ಯಾಕರಣಪ್ರಕ್ರಿಯಾ ॥

**ಅವೋಚಾಮ**--ವಚ ಪರಿಭಾಷಣೇ ಧಾತು ಲುಙ್ ಉತ್ತಮಪುರುಷ ಬಹುವಚನದಲ್ಲಿ ಮಸ್‌ಪ್ರತ್ಯಯ **ನಿತ್ಯಂ ಙಿತಃ** ಸೂತ್ರದಿಂದ ಸಕಾರಲೋಪ. **ಅಸ್ಯತಿವಕ್ತಿಖ್ಯಾತಿಭ್ಯೋಽಙ್** (ಪಾ ಸೂ ೩-೧-೫೨) ಎಂಬುದರಿಂದ ಚ್ಲಿಗೆ ಅಙ್ ಪ್ರತ್ಯಯ. **ವಚಉಮ್** (ಪಾ ಸೂ ೭-೪-೨೦) ಸೂತ್ರದಿಂದ ಧಾತುವಿಗೆ ಉಮಾಗಮ **ಮಿದ-ಚೋಽಂತ್ಯಾತ್ಪರಃ** ಪರಿಭಾಷೆಯಿಂದ ಅಂತ್ಯಾಚಿನ ಪರವಾಗಿ ಬರುತ್ತದೆ ಗುಣ **ಅತೋದೀರ್ಘೋ ಯಞಿ** ಸೂತ್ರದಿಂದ ಮಸ್ ನಿಮಿತ್ತವಾಗಿ ಅದಂತಾಂಗಕ್ಕೆ ದೀರ್ಘ. ಅಂಗಕ್ಕೆ ಅಡಾಗಮ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಮಧುಮತ್**—ಮಧು ಅಸ್ಯ ಅಸ್ತಿ ಇತಿ ಮಧುಮತ್ **ತದಸ್ಯಾಸ್ತಿ**—(ಪಾ ಸೂ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ. ಇದು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಇದಕ್ಕೆ ದ್ವಿತೀಯಾ ಅಮ್ ಪರವಾದಾಗ **ಸ್ವಮೋರ್ನಪುಂಸಕಾತ್** ಎಂಬುದರಿಂದ ಅದಿಗೆ ಲುಕ್

**ವಚಃ**--ವಚ ಪರಿಭಾಷಣೇ ಧಾತು ಇದಕ್ಕೆ ಸರ್ವಧಾತು ನಿಬಂಧನವಾದ ಅಸುನ್ ಪ್ರತ್ಯಯ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** (ಪಾ ಸೂ ೬-೧-೧೯೭) ಎಂಬುದರಿಂದ ಆದ್ಯುದಾತ್ತವಾಗುತ್ತದೆ ದ್ವಿತೀಯಾ ಏಕವಚನಾಂತರೂಪ || ೫ ||

ಎಪ್ಪತ್ತೆಂಟನೆಯ ಸೂಕ್ತವು ಸಮಾಪ್ತವು

# ಎಪ್ಪತ್ತೊಂಭತ್ತನೆಯ ಸೂಕ್ತವು

**ಹಿರಣ್ಯಕೇಶ ಇತಿ ದ್ವಾದಶರ್ಚಂ ಷಷ್ಠಂ ಸೂಕ್ತಂ | ರಹೂಗಣಪುತ್ರಸ್ಯ ಗೋತಮಸ್ಯಾರ್ಷಂ | ಅತ್ರಾನುಕ್ರಮ್ಯತೇ | ಹಿರಣ್ಯಕೇಶೋ ದ್ವಾದಶಾದ್ಯೌ ತೃಚೌ ತ್ರೈಷ್ಟುಭೌಷ್ಣಿಹೌ ಪೂರ್ವೋಽಗ್ನಯೇ ವಾ ಮಧ್ಯಮಾಯೇತಿ | ಪೂರ್ವತ್ರ ಗಾಯತ್ರಂ ತ್ವಿತ್ಯುಕ್ತತ್ವಾದಿದಮಪಿ ಗಾಯತ್ರಂ ಸೂಕ್ತಂ | ಏತಾವಾಂಸ್ತು ವಿಶೇಷಃ | ಆದ್ಯಸ್ತೃಚಸ್ತ್ರೈಷ್ಟುಭಃ | ದ್ವಿತೀಯಸ್ತ್ವೌಷ್ಣಿಹಃ | ಪ್ರಥಮತೃಚಸ್ಯ ಮಧ್ಯಮಸ್ಥಾನೋ ವೈದ್ಯುತೋಽಗ್ನಿಃ ಶುದ್ಧಾಗ್ನಿರ್ವಾ ದೇವತಾ | ಶಿಷ್ಟಾ ನವರ್ಚಃ ಕೇವಲಾಗ್ನಿದೇವತಾಕಾಃ || ಪ್ರಾತರನುವಾಕಸ್ಯಾಗ್ನೇಯೇ ಕ್ರತೌ ತ್ರೈಷ್ಟುಭೇ ಛಂದಸ್ಯಾಶ್ವಿನಶಸ್ತ್ರೇ ಚಾದ್ಯಸ್ತೃಚಃ | ಸೂತ್ರಿತಂ ಚ | ಹಿರಣ್ಯಕೇಶ ಇತಿ ತಿಸ್ರೋಽಪಶ್ಯಮಸ್ಯ ಮಹತ ಇತಿ ಸೂಕ್ತೇ | ಆ ೪-೧೩ | ಇತಿ || ಕಾರೀರ್ಯಾಮಗ್ನೇರ್ಧಾಮಚ್ಛದೋ ಹಿರಣ್ಯಕೇಶ ಇತಿ ದ್ವೇ ಋಚೌ ಯಾಜ್ಯಾನುವಾಕ್ಯೇ | ಸೂತ್ರಿತಂ ಚ | ಹಿರಣ್ಯಕೇಶೋ ರಜಸೋ ವಿಸಾರ ಇತಿ ದ್ವೇ ತ್ವಂ ತ್ಯಾ ಚಿದಚ್ಯುತಾ ಧಾಮಂತೇ ವಿಶ್ವಂ ಭುವನಮಧಿ ಶ್ರಿತಮಿತಿ ವಾ | ಆ. ೨-೧೩ | ಇತಿ ||**

ಅನುವಾದವು— **ಹಿರಣ್ಯಕೇಶಃ** ಎಂಬ ಈ ಸೂಕ್ತವು ಹದಿಮೂರನೆಯ ಅನುವಾಕದಲ್ಲಿ ಆರನೆಯ ಸೂಕ್ತವು ಇದರಲ್ಲಿ ಹನ್ನೆರಡು ಋಕ್ಕುಗಳಿರುವುವು ಈ ಸೂಕ್ತಕ್ಕೆ ರಹೂಗಣಪುತ್ರನಾದ ಗೋತಮನು ಋಷಿಯು. ಅನುಕ್ರಮಣಿಕೆಯಲ್ಲಿ—**ಹಿರಣ್ಯಕೇಶೋ ದ್ವಾದಶಾದ್ಯೌ ತೃಚೌ ತ್ರೈಷ್ಟುಭೌಷ್ಣಿಹೌ ಪೂರ್ವೋಽಗ್ನಯೇ ವಾ ಮಧ್ಯಮಾಯೇತಿ** ಎಂದು ಹೇಳಿರುವುದು ಹಿಂದೆ ಹೇಳಿರುವಂತೆ ಈ ಸೂಕ್ತವು ಗಾಯತ್ರೀ ಛಂದಸ್ಸಾದರೂ

ಇದರಲ್ಲಿ ಕೆಲವು ವಿಶೇಷಗಳಿರುವುವು. ಮೊದಲಿನ ಮೂರು ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು ಮೂರರಿಂದ ಆರರ ವರೆಗಿನ ಋಕ್ಕುಗಳು ಉಷ್ಣಿಕ್ ಛಂದಸ್ಸಿನವು. ಉಳಿದ ಋಕ್ಕುಗಳು ಗಾಯತ್ರೀ ಛಂದಸ್ಸಿನವು. ಮೊದಲಿನ ಮೂರು ಋಕ್ಕುಗಳಿಗೆ ಮಧ್ಯಮಸ್ಥಾನ (ಅಂತರಿಕ್ಷ)ದಲ್ಲಿರುವ ವಿದ್ಯುದ್ರೂಪನಾದ ಅಗ್ನಿ ಅಥವಾ ಕೇವಲ ಅಗ್ನಿಯು ದೇವತೆಯು. ಉಳಿದ ಒಂಭತ್ತು ಋಕ್ಕುಗಳಿಗೂ ಕೇವಲ ಅಗ್ನಿಯೇ ದೇವತೆಯು. ಪ್ರಾತರನುವಾಕಮಂತ್ರಪಠನ ಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಗಾಗಿಯೂ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ಮೊದಲ ಮೂರು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಹಿರಣ್ಯಕೇಶ ಇತಿ ತಿಸ್ರೋಽಪಶ್ಯಮಸ್ಯ ಮಹತ ಇತಿ ಸೂಕ್ತೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೩) ಮತ್ತು ಕಾರೀರೇಷ್ಟಿಯಲ್ಲಿ **ಹಿರಣ್ಯಕೇಶ** ಎಂಬ ಮೊದಲ ಎರಡು ಋಕ್ಕುಗಳನ್ನು ಯಾಜ್ಯಾನುವಾಕ್ಯಾಋಕ್ಕುಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತ ಸೂತ್ರದ **ಹಿರಣ್ಯಕೇಶೋ ರಜಸೋ ವಿಸಾರ ಇತಿ ದ್ವೇ ತ್ವಂ ತ್ಯಾ ಚಿದಚ್ಯುತಾ ಧಾಮಂತೇ ವಿಶ್ವಂ ಭುವನಮಧಿ ಶ್ರಿತಮಿತಿ ವಾ** ಎಂಬ ಸೂತ್ರದಿಂದ ನಿರ್ದಿಷ್ಟವಾಗಿರುವುದು (ಆ. ೨-೧೩)

## ಸೂಕ್ತ—೭೯

॥ ಮಂಡಲ—೧ ॥ ಅನುವಾಕ—೧೩ ॥ ಸೂಕ್ತ—೭೯ ॥

॥ ಅಷ್ಟಕ—೧ । ಅಧ್ಯಾಯ ೬ ॥ ವರ್ಗ—೨೭, ೨೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥

॥ ಋಷಿಃ — ಗೋತಮೋ ರಾಹೂಗಣಃ ॥

॥ ದೇವತಾ — ೧-೩ ಅಗ್ನಿರಗ್ನಿರ್ಮಧ್ಯಮೋ ವಾ। ೪-೧೨ ಅಗ್ನಿಃ ॥

॥ ಛಂದಃ—೧-೩ ತ್ರಿಷ್ಟುಪ್ । ೪-೬ ಉಷ್ಣಿಕ್ । ೭-೧೨ ಗಾಯತ್ರೀ ।

॥ ಸಂಹಿತಾಪಾಠಃ ॥

ಹಿರ॑ಣ್ಯಕೇಶೋ॒ ರಜ॑ಸೋ ವಿಸಾ॒ರೇಽಹಿ॒ರ್ಧುನಿ॒ರ್ವಾತ॑ ಇವ॒ ಧ್ರಜೀ॑ಮಾನ್ ।
ಶುಚಿ॑ಭ್ರಾಜಾ ಉ॒ಷಸೋ॒ ನವೇ॑ದಾ॒ ಯಶ॑ಸ್ವತೀರಪ॒ಸ್ಯುವೋ॒ ನ ಸ॒ತ್ಯಾಃ ॥ ೧ ॥

॥ ಪದಪಾಠಃ ॥

ಹಿರಣ್ಯಽಕೇಶಃ । ರಜಸಃ । ವಿಽಸಾರೇ । ಅಹಿಃ । ಧುನಿಃ । ವಾತಃಽಇವ । ಧ್ರಜೀಮಾನ್ ।

ಶುಚಿಽಭ್ರಾಜಾಃ । ಉಷಸಃ । ನವೇದಾಃ । ಯಶಸ್ವತೀಃ । ಅಪಸ್ಯುವಃ । ನ । ಸತ್ಯಾಃ ॥ ೧ ॥

॥ ಸಾಯಣಭಾಷ್ಯಂ ॥

ಹಿರಣ್ಯಕೇಶೋ ಹಿತರಮಣೀಯಾಃ ಕೇಶಸ್ಥಾನೀಯಾ ಜ್ವಾಲಾ ಯಸ್ಯ ಸ ತಥೋಕ್ತಃ ಸುವರ್ಣವದ್ರೋಚಮಾನಜ್ವಾಲೋ ವಾ ಅಹಿರಾಗತ್ಯ ಹಂತಾ ಮೇಘಾನಾಂ ಧುನಿಸ್ತೇಷಾಂ ಕಂಪಯಿತಾ ವಾತ ಇವ ವಾಯುರಿವ ಧ್ರಜೀಮಾನ್ ಶೀಘ್ರಗತಿಯುಕ್ತಃ ಏವಂಭೂತೋ ವೈದ್ಯುತೋಽಗ್ನೀ ರಜಸ ಉದಕಸ್ಯ ವಿಸಾರೇ ವಿಸರಣೇ ಮೇಘಾನ್ನಿರ್ಗಮನೇ ನಿಮಿತ್ತಭೂತೇ ಸತಿ ಶುಚಿಭ್ರಾಜಾಃ ಶೋಭನದೀಪ್ತಿಃ ಸನ್ ಮೇಘಾಜ್ಜಲಾನಿ ನಿರ್ಗಮಯಿತುಂ ಜಾನಾತಿ । ಉಷಸ ಉಷೋದೇವತಾ ನವೇದಾಃ । ನ ವಿದಂತಿ ಇತಿ ನವೇದಾಃ । ಮೇಘಾದುದಕಸ್ಯ ನಿಃಸಾರಣಮಗ್ನಿರೇವ ಜಾನಾತಿ ಉಷಸಸ್ತು ನ ಜಾನಂತೀತ್ಯರ್ಥಃ । ಅಜ್ಞಾನೇ ದೃಷ್ಟಾಂತಃ । ಯಶಸ್ವತೀರನ್ನಯುಕ್ತಾ ಅನ್ನವತ್ಯೋಽಪಸ್ಯುವೋಽಪಃ ಕರ್ಮಾತ್ಮನ ಇಚ್ಛಂತ್ಯಃ ಸತ್ಯಾ ಅವಿತಥಾರಂಭಾ ನ । ಏವಂಭೂತಾಃ ಪ್ರಜಾ ಇವ । ಅತ್ರೋಷಸಾಮಜ್ಞಾನೇನಾಗ್ನಿಃ ಪ್ರಶಸ್ಯತೇ ನ ತು ತಾ ನಿಂದ್ಯಂತೇ । ನ ಹಿ ನಿಂದಾ ನಿಂದ್ಯಂ ನಿಂದಿತುಂ ಅಪಿ ತು ಸ್ತುತ್ಯಂ ಸ್ತೋತುಮಿತಿ ನ್ಯಾಯಾತ್ ॥ ಧ್ರಜೀಮಾನ್ । ಧ್ರಜ ಗತೌ । ಇನ್ಸರ್ವಧಾತುಭ್ಯ ಇತಿ ಭಾವ ಇನ್ಪ್ರತ್ಯಯಃ । ತತೋ ಮತುಪ್ । ತಸ್ಯ ಪಿತ್ತ್ವಾದನುದಾತ್ತತ್ವೇ ಇನೋ ನಿತ್ತ್ವಾತ್ಪ್ರಾತಿಪದಿಕಸ್ಯಾದ್ಯುದಾತ್ತತ್ವಂ । ನವೇದಾಃ । ನಞ್ಪೂರ್ವಾದ್ವೇತ್ತೇಃ ಪಚಾದ್ಯಚ್ । ನಭ್ರಾಣ್ನಪಾದಿತ್ಯಾದಿನಾ ನಞಃ ಪ್ರಕೃತಿಭಾವಃ । ಅಪಸ್ಯುವಃ । ಅಪಸ್ಶಬ್ದಾತ್ಸುಪ ಆತ್ಮನಃ ಕ್ಯಚ್ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಂ । ಪಾ. ೬-೪-೭೭ ೧ । ಇತ್ಯುವಙ್ ॥

॥ ಪ್ರತಿಪದಾರ್ಥ ॥

**ಹಿರಣ್ಯಕೇಶಃ**—ಹಿತವಾದ ಮತ್ತು ರಮಣೀಯವಾದ ಕೇಶಗಳಂತಿರುವ ಜ್ವಾಲೆಗಳುಳ್ಳವನೂ (ಸುವರ್ಣ ಕಾಂತಿಯುಳ್ಳ ಜ್ವಾಲೆಗಳುಳ್ಳವನೂ) । **ಅಹಿಃ**—ಬಂದು (ಮೇಘಗಳನ್ನು) ನಾಶಮಾಡುವವನೂ । **ಧುನಿಃ**-(ಮೇಘಗಳನ್ನು) ಕಂಪಿಸುವಂತೆ ಮಾಡುವವನೂ । **ವಾತಇವ**—ವಾಯುವಿನಂತೆ ಶೀಘ್ರಗತಿಯುಳ್ಳವನೂ ಆದ (ವಿದ್ಯುದಗ್ನಿಯು) । **ರಜಸಃ ವಿಸಾರೇ**—ಮೇಘಗಳಿಂದ ಉದಕವು ಹೊರಡಲು । **ಶುಚಿಭ್ರಾಜಾಃ** - ಶುಭ್ರನಾಗಿ

ಕಾಂತಿಯುಳ್ಳವನಾಗಿ (ಮೇಘದಿಂದ ನೀರನ್ನು ಹೊರಡಿಸಲು ತಿಳಿದಿರುತ್ತಾನೆ) । (ಆದರೆ) **ಉಷಸಃ**—ಉಷೋದೇವತೆಗಳು । **ಯಶಸ್ವತೀಃ**—ಅನ್ನಯುಕ್ತರಾದ । **ಅಪಸ್ಯುವಃ** – ತಮ್ಮ ತಮ್ಮ ಕರ್ಮಗಳಲ್ಲಿ ಆಸಕ್ತರಾದ । **ಸತ್ಯಾಃ ನ**—ಸತ್ಯವಂತರಾದ (ಪ್ರಜೆಗಳ) ಹಾಗೆ । **ನವೇದಾಃ**—(ಮೇಘದಿಂದ ಜಲನಿರ್ಗಮನವನ್ನು) ತಿಳಿದಿಲ್ಲ

॥ ಭಾವಾರ್ಥ ॥

ಸುವರ್ಣಕಾಂತಿಯಂತಿರುವ ಜ್ವಾಲಾಯುಕ್ತನೂ, ಮೇಘಗಳನ್ನು ಅಲ್ಲಾಡಿಸಿ, ಅವುಗಳನ್ನು ನಾಶಮಾಡುವವನೂ (ಉದಕರಹಿತವನ್ನಾಗಿ ಮಾಡುವವನೂ), ವಾಯುವಿನಂತೆ ಶೀಘ್ರಗಮನನೂ, ಆದ ಅಗ್ನಿಯು, ಶುಭ್ರವಾದ ಕಾಂತಿಯುಳ್ಳವನಾಗಿ, ಮೇಘಗಳಿಂದ ನೀರನ್ನು ಕೆಳಕ್ಕೆ ಬೀಳುವಂತೆ ಮಾಡುತ್ತಾನೆ. ಸತ್ಯವಂತರಾದ ಪ್ರಜೆಗಳು, ಅನ್ನಾದಿಗಳಿಂದ ಯುಕ್ತರಾಗಿ, ತಮ್ಮ ತಮ್ಮ ಕಾರ್ಯಗಳಲ್ಲಿ (ಮಾತ್ರ) ಆಸಕ್ತರಾಗಿ ಮತ್ತೇನನ್ನೂ ತಿಳಿಯದಿರುವಂತೆ ಅಗ್ನಿಯ ಈ ವಿಧವಾದ ಜಲವಿಮೋಚನೆಯನ್ನು ಉಷೋದೇವತೆಗಳೂ ಸಹ ತಿಳಿದಿರುವುದಿಲ್ಲ

## English Translation.

The Golden haired Agni is the agitator of the clouds when the rain is poured forth, and moving with the swiftness of the wind, shines with a bright radiance. The mornings know not (of the showers), like honest (people) who, provided with food, are intent upon their own labours

॥ ವಿಶೇಷವಿಷಯಗಳು ॥

ಈ ಸೂಕ್ತದ ಅರ್ಥವು ಸ್ವಲ್ಪ ತೊಡಕಾಗಿರುವುದು- ವಿದ್ಯುದ್ರೂಪ (ಮಿಂಚಿನ ರೂಪ)ದಿಂದಿರುವ ಅಗ್ನಿಯು ಅಂತರಿಕ್ಷದಲ್ಲಿ ಪ್ರಕಾಶಮಾನನಾಗಿ ಬೆಳಗುತ್ತಾ ಮೇಘಗಳಲ್ಲಿರುವ ನೀರನ್ನು ವೃಷ್ಟಿರೂಪದಿಂದ ಭೂಮಿಯ ಮೇಲೆ ಬೀಳುವಂತೆ ಮಾಡುತ್ತಾನೆ ಈ ಅಗ್ನಿಯ ಜ್ವಾಲೆಗಳು ಅಗ್ನಿಗೆ ಸುವರ್ಣಮಯವಾದ ಕೂದಲುಗಳಂತೆ ಒಪ್ಪುತ್ತಿರುವವು ಮತ್ತು ಅಗ್ನಿಯು (ಮಿಂಚಿನರೂಪದಿಂದಿರುವ ಅಗ್ನಿಯು) ವಾಯುವಿನಂತೆ ಬಹಳ ಶೀಘ್ರವಾದ ಗಮನವುಳ್ಳವನು (ಎಂದರೆ ಮಿಂಚಿನ ಪ್ರಕಾಶವು ದೇದೀಪ್ಯಮಾನನಾಗಿ ಅಂತರಿಕ್ಷದಲ್ಲಿ ಕ್ಷಣಾರ್ಧದಲ್ಲಿ ಕಾಣಿಸಿಕೊಂಡು ಕೂಡಲೇ ಅದೃಶ್ಯವಾಗುವುದು) ಮತ್ತು ಮೇಘಗಳಿಂದ ಮಳೆಯ ನೀರನ್ನು ಸುರಿಸುವಂತೆ ಮಾಡುವುದು ವಿದ್ಯುದ್ರೂಪದಿಂದ ಇರುವ ಅಗ್ನಿಗೆ ಮಾತ್ರ ತಿಳಿದಿರುವುದು ಉಷೋದೇವತೆಗಳಿಗೆ ಈ ವಿಧವಾದ ಸಾಮರ್ಥ್ಯವಿಲ್ಲ ಎಂದರೆ ಉಷೋದೇವತೆಗೂ ಮಳೆಗೂ ಏನೂ ಸಂಬಂಧವಿರುವುದಿಲ್ಲ ಲೋಕದಲ್ಲಿ ಆಹಾರಾದಿಸುಖಸಂಪತ್ತುಗಳಿಂದ ಯುಕ್ತರಾದ ಜನರು ತಮ್ಮ ತಮ್ಮ ಕೆಲಸಕಾರ್ಯಗಳಲ್ಲಿಯೂ ಸುಖಲೋಲುಪತೆಯಲ್ಲಿಯೂ ಮಗ್ನರಾಗಿ ಗಹನವಾದ ಇತರ ವಿಷಯಗಳನ್ನು ಗಮನಿಸದಿರುವಂತೆ ಉಷೋದೇವತೆಗೂ ಮೇಘಗಳಿಂದ ವೃಷ್ಟ್ಯುದಕವನ್ನು ಸುರಿಸುವ ವಿಧಾನವು ತಿಳಿಯದು. ವಿದ್ಯುದ್ರೂಪನಾದ ಅಗ್ನಿಗೆ ಮಾತ್ರವೇ ತಿಳಿದಿರುವುದು ಎಂದು ಮುಖ್ಯಾಭಿಪ್ರಾಯವು.

**ಹಿರಣ್ಯಕೇಶಃ**—ಅಗ್ನಿಯು ಧಗಧಗನೆ ಉರಿಯುತ್ತಿರುವಾಗ ಅದರ ಜ್ವಾಲೆಗಳು ಸ್ವಲ್ಪ ಕೆಂಪುಛಾಯೆಯಿಂದ ಕೂಡಿ ಅತಿಪ್ರಕಾಶಮಾನವಾಗಿ ಬೆಳಗುತ್ತಿರುವುದರಿಂದ ಆ ಜ್ವಾಲೆಗಳನ್ನು ಅಗ್ನಿಯ ಸುವರ್ಣದೃಶವಾದ ಕೇಶಗಳಿಗೆ

ಹೋಲಿಸುವುದು ರೂಢಿಯಾಗಿರುವುದು ಸುವರ್ಣವು ಥಳಥಳನೆ ಹೊಳೆಯುತ್ತಿರುವಂತೆ ಅಗ್ನಿಯ ಜ್ವಾಲೆಗಳು ಪ್ರಕಾಶಿಸುವವು ಇವು ಅಗ್ನಿಯಿಂದ ಹೊರಹೊರಟು ಊರ್ಧ್ವಮುಖವಾಗಿ ಎದ್ದ ಶಿರಸ್ಸಿನ ಮೇಲಿರುವ ಕೇಶಗಳಂತೆ ಕಾಣುತ್ತಿರುವುದರಿಂದ ಕೇಶಗಳ ಉಪಮಾನವು ಜ್ವಾಲೆಗಳಿಗೆ ಒಪ್ಪುವುದು ಈ ಶಬ್ದದ ಪ್ರಯೋಗವು ಋಗ್ವೇದದಲ್ಲಿ ಈ ಋಕ್ಕಿನಲ್ಲಿ ಮಾತ್ರವಿರುವುದು. ಬೇರೆಲ್ಲಿಯೂ ಇರುವುದಿಲ್ಲ. ಇಂದ್ರನ ಹರೀ ಎಂಬ ಕುದುರೆಗಳ ಪರವಾಗಿ

**ಇಹ ತ್ಯಾ ಸಧಮಾದ್ಯಾ ಹರೀ ಹಿರಣ್ಯಕೇಶ್ಯಾ ।**

( ಋ ಸಂ. ೮-೩೨-೨೯)

ಎಂಬ ಋಕ್ಕಿನಲ್ಲಿ ಹಿರಣ್ಯಕೇಶ್ಯಾ ಎಂಬ ಶಬ್ದಪ್ರಯೋಗವಿರುವುದು ಅಗ್ನಿಯ ಜ್ವಾಲೆಗೆ ಹಿರಣ್ಯಶ್ಮಶ್ರುಃ ಎಂಬ ಶಬ್ದದ ಉಪಮಾನವನ್ನೂ ಋ ಸಂ ೬-೭೧-೪ ಎಂಬ ಋಕ್ಕಿನಲ್ಲಿ ಹೇಳಿರುವುದು

**ರಜಸಃ**—ಈ ಶಬ್ದಕ್ಕೆ ಯಾಸ್ಕರು- **ರಜಃ । ರಜೋ ರಜತೇರ್ಜ್ಯೋತೀ ರಜ ಉಚ್ಯತೇ । ಉದಕಂ ರಜ ಉಚ್ಯತೇ । ಲೋಕಾ ರಜಾಂಸ್ಯುಚ್ಯಂತೇ । ಅಸೃಗಹನೀ ರಜಸೀ ಉಚ್ಯೇತೇ ।** (ನಿ ೪-೧೯) ಎಂದು ನಿರ್ವಚನವನ್ನು ಹೇಳಿರುವರು ಎಂದರೆ

(೧) **ರಜಃ** ಎಂಬ ಶಬ್ದವು ರಜತಿಧಾತುವಿನಿಂದ ನಿಷ್ಪನ್ನವಾಗಿ ಪ್ರಕಾಶಿಸುವುದು ಎಂದರ್ಥವಿರುವುದರಿಂದ **ರಜಃ** ಎಂದರೆ ಜ್ಯೋತಿ, ಬೆಳಕು ಎಂದರ್ಥವು ತನ್ನ ಬೆಳಕಿನಿಂದ ಇತರ ದ್ರವ್ಯಗಳನ್ನು ಕಾಣುವಂತೆ ಮಾಡುವುದು ಆದುದರಿಂದ ರಜಶ್ಶಬ್ದಕ್ಕೆ ಜ್ಯೋತಿಯೆಂದು ಹೆಸರು ಉದಾಹರಣೆಗಾಗಿ-

**ಯಾ ತೇ ಅಗ್ನೇ ರಜಾಶಯಾ ತನೂ** ಎಂಬ ಮಂತ್ರವನ್ನು ಕೊಟ್ಟಿರುವರು

(೨) **ಉದಕಂ ರಜ ಉಚ್ಯತೇ—ರಜಃ** ಎಂದರೆ ಉದಕವು ಈ ಅರ್ಥವಿರುವ ಉದಾಹರಣೆಗಾಗಿ —

**ನವ ಚ ಯನ್ನವತಿಂ ಚ ಸ್ರವಂತೀಃ ಶ್ಯೇನೋ ನ ಭೀತೋ ಅತರೋ ರಜಾಂಸಿ ।**

(ಋ ಸಂ ೧ ೩೨-೧೪).

**ಭುವೋ ಯಜ್ಞಸ್ಯ ರಜಸಶ್ಚ ನೇತಾ ಯತ್ರಾ ನಿಯುದ್ಭಿಃ ಸಚಸೇ ಶಿವಾಭಿಃ ।**

(ಋ. ಸಂ ೧೦-೮-೬)

ಈ ಋಕ್ಕುಗಳಲ್ಲಿರುವ ರಜಃಶಬ್ದವು ಉದಕವೆಂಬ ಅರ್ಥವನ್ನು ಹೇಳುವುದು

**ಪೂರ್ವೇ ಅರ್ಧೇ ರಜಸೋ ಅಪ್ತ್ಯಸ್ಯ ಗವಾಂ ಜನಿತ್ರ್ಯಕೃತ ಪ್ರ ಕೇತುಂ ।**

(ಋ ಸಂ ೧-೧೨೪-೫).

**ಇಂದ್ರಶ್ಚ ಯಾ ಚಕ್ರಥುಃ ಸೋಮ ತಾನಿ ಧುರಾ ನ ಯುಕ್ತಾ ರಜಸೋ ವಹಂತಿ ।**

(ಋ. ಸಂ ೧-೧೬೪-೧೯)

(೩) ಈ ಸುಕ್ತಗಳಲ್ಲಿರುವ ರಜಶ್ಶಬ್ದವು ಲೋಕವೆಂಬ ಅರ್ಥವನ್ನು ಸೂಚಿಸುವುದು

(೪) **ಅಸೃಗಹನೀ ರಜಸೀ ಉಚ್ಯೇತೇ । ಅಸೃಕ್ ರುಧಿರಂ, ಅಹಶ್ಚ ಅಸೃಗಹನೀ ತೇ ಅಪಿ ರಜಸೀ ಉಚ್ಯೇತೇ ।** ರಜಸೀ ಎಂಬ ಶಬ್ದವು ರಕ್ತ ಮತ್ತು ಹಗಲು ಎಂಬ ಅರ್ಥವನ್ನು ಹೇಳುವುದು.

**ಅಹಶ್ಚ ಕೃಷ್ಣಮಹರರ್ಜುನಂ ಚ ವಿ ವರ್ತೇತೇ ರಜಸೀ ವೇದ್ಯಾಭಿಃ ।**

(ಋ ಸಂ ೬-೯-೧)

ಈ ಋಕ್ಕಿನಲ್ಲಿರುವ ರಜಶಬ್ದವು ಅಹಸ್ಸೆಂಬ ಅರ್ಥವನ್ನು ಹೇಳುವುದು ಪ್ರಕೃತ ಸಂದರ್ಭದಲ್ಲಿ ರಜಶ್ಶಬ್ದಕ್ಕೆ ಪ್ರಕಾಶವು ಬೆಳಕು ಎಂದರ್ಥವು.

**ಧ್ರಜೀಮಾನ್—ಧ್ರಜ ಗತೌ ।** ವೇಗವಾಗಿ ಗಮನವುಳ್ಳವನು. ವಾಯುವು ಯಾವರೀತಿ ವೇಗವಾಗಿ ಚಲಿಸುವುದೋ ಅದರಂತೆ ಅಗ್ನಿಯು ಶೀಘ್ರಗಮನವುಳ್ಳವನು

**ಶುಚಿಭ್ರಾಜಃ—ಶೋಭನದೀಪ್ತಿಃ ।** ಅತ್ಯಂತಪ್ರಕಾಶಮಾನನಾದವನು. ವೈದ್ಯುತಾಗ್ನಿಯು (ಮಿಂಚು) ಅತಿಪ್ರಕಾಶಮಾನವಾಗಿರುವುದು ಲೋಕಪ್ರಸಿದ್ಧಿಯು.

**ಉಷಸೋ ನವೇದಾಃ**—ಮೇಘಗಳಿಂದ ಮಳೆಯನ್ನು ಸುರಿಯುವಂತೆ ಮಾಡುವ ಚಾತುರ್ಯವು ಉಷೋದೇವತೆಗೆ ತಿಳಿದಿಲ್ಲ ಎಂದು ಹೇಳಿರುವುದರಿಂದ ಉಷೋದೇವತೆಯನ್ನು ನಿಂದೆ ಮಾಡಿದಂತಾಗಲಿಲ್ಲ. ಅಗ್ನಿಯ ಪ್ರಶಂಸೆಯನ್ನು ಪುಷ್ಟೀಕರಿಸುವುದಕ್ಕಾಗಿ ಋಷಿಯು ಈ ರೀತಿ ವರ್ಣಿಸಿರುವನೆಂದು ಭಾಷ್ಯಕಾರರು ವಿವರಿಸಿರುವರು

**ಯಶಸ್ವತೀಃ ಅಪಸ್ಯುವಃ**—ಅರ್ಣಃ ಕ್ಷೋದಃ ಮೊದಲಾದ ನೂರೊಂದು ಉದಕನಾಮಗಳ ಮಧ್ಯದಲ್ಲಿ ಯಶಃಶಬ್ದವು ಪಠಿತವಾಗಿರುವುದರಿಂದ (ನಿ ೨-೨೪) ಯಶಃ ಎಂದರೆ ಉದಕವೆಂದೂ, ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಯಶಃಶಬ್ದವು ಪಠಿತವಾಗಿರುವುದರಿಂದ ಯಶಃ ಎಂದರೆ ಅನ್ನವೆಂದೂ. (ನಿ. ೨-೯) ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ಯಶಶ್ಶಬ್ದವು ಪಠಿತವಾಗಿರುವುದರಿಂದ ಯಶಃ ಎಂದರೆ ಧನವೆಂದೂ (ನಿ. ೩-೯). ಮತ್ತು ಈ ಶಬ್ದಕ್ಕೆ ಸಾಮಾನ್ಯವಾಗಿ ರೂಢಿಯಲ್ಲಿರುವ ಕೀರ್ತಿ ಎಂದೂ ಅರ್ಥಗಳಿರುವುವು ಇವುಗಳಲ್ಲಿ ಅನ್ನವೆಂಬ ಅರ್ಥವನ್ನು ಭಾಷ್ಯಕಾರರು ಸ್ವೀಕರಿಸಿರುವರು. ಏತಕ್ಕೆಂದರೆ ಯಶಸ್ವತೀಃ ಎಂಬ ಶಬ್ದವು **ಅಪಸ್ಯುವಃ**—ಉದಕಗಳು ಅಥವಾ ವೃಷ್ಟ್ಯುದಕಗಳು ಎಂಬ ಶಬ್ದಕ್ಕೆ ವಿಶೇಷಣವಾಗಿರುವುದರಿಂದಲೂ ವೃಷ್ಟಿಯಿಂದ ಸಸ್ಯಾದಿಗಳ ಉತ್ಪತ್ತಿಯಾಗಿ ಅನ್ನ ಅಥವಾ ಆಹಾರೋತ್ಪತ್ತಿಗೆ ಕಾರಣಭೂತವಾಗಿರುವುದರಿಂದಲೂ ಇಲ್ಲಿ ಯಶಃಶಬ್ದಕ್ಕೆ ಅನ್ನವೆಂಬ ಅರ್ಥವೇ ಸಮಂಜಸವಾಗಿರುವುದು. ಯಶಸ್ವತೀಃ—ಎಂದರೆ ಅನ್ನ ಅಥವಾ ಆಹಾರೋತ್ಪತ್ತಿಗೆ ಸಾಧನಭೂತವಾದ ಎಂದರ್ಥವು

**ಸತ್ಯಾಃ—ಅವಿತಥಾರಂಭಾಃ ।** ಈ ಶಬ್ದಕ್ಕೆ ಭಾಷ್ಯಕಾರರು ಸತ್ಯವಂತರಾದ ಪ್ರಜೆಗಳು ಎಂದರ್ಥ ಮಾಡಿರುವರು.

॥ ವ್ಯಾಕರಣಪ್ರಕ್ರಿಯಾ ॥

**ವಿಸಾರೇ**—ಸೃ ಗತೌ ಧಾತು. ಇದಕ್ಕೆ ಘಞ್‌ಪ್ರತ್ಯಯ. ಞಿತ್ತಾದುದರಿಂದ **ಅಚೋಞ್ಣಿತಿ** ಸೂತ್ರದಿಂದ ಅಜಂತಾಂಗಕ್ಕೆ ವೃದ್ಧಿ. **ಕರ್ಷಾತ್ವತಃ**—(ಪಾ ಸೂ. ೬-೧-೧೫೯) ಎಂಬುದರಿಂದ ಅಂತೋದಾತ್ತವಾಗುತ್ತದೆ. ವಿಯೊಡನೆ (ಗತಿ) ಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್**—ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ

**ಧ್ರಜೀಮಾನ್**—ಧ್ರಜ ಗತೌ ಧಾತು **ಇನ್ ಸರ್ವಧಾತುಭ್ಯಃ** (ಉ ಸೂ ೪-೫೫೭) ಎಂಬುದರಿಂದ ಇದಕ್ಕೆ ಭಾವಾರ್ಥದಲ್ಲಿ ಇನ್ ಪ್ರತ್ಯಯ ಧ್ರಜಿ ಎಂದು ರೂಪವಾಗುತ್ತದೆ ಇದು ಉಳ್ಳದ್ದು ಎಂಬರ್ಥವಿವಕ್ಷಾಮಾಡಿದಾಗ **ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್** ಸೂತ್ರದಿಂದ ಮತುಪ್ ಪ್ರತ್ಯಯ **ಅನ್ಯೇಷಾಮಪಿದೃಶ್ಯತೇ** (ಪಾ ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ದೀರ್ಘ ಪ್ರಥಮಾ ಸುಪರವಾದಾಗ ಉಗಿತ್ತಾದುದರಿಂದ **ಉಗಿದಚಾಂ**—ಸೂತ್ರದಿಂದ ನುಮಾಗಮ **ಅತ್ವಸಂತಸ್ಯ ಚಾ**—ಸೂತ್ರದಿಂದ ಉಪಧಾದೀರ್ಘ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಸುಲೋಪ ಸಂಯೋಗಾಂತಲೋಪದಿಂದ ತಕಾರಲೋಪ ಇದು ಅಸಿದ್ಧವಾದುದರಿಂದ ನಲೋಪ ಬರುವುದಿಲ್ಲ. ಮತುಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ ಇನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಸೂತ್ರದಿಂದ ಪ್ರಾತಿಪದಿಕಕ್ಕೆ ಆದ್ಯುದಾತ್ತಸ್ವರ ಬರುತ್ತದೆ

**ನವೇದಾಃ** ವಿದ ಜ್ಞಾನೇ ಧಾತು ಇದಕ್ಕೆ ನಞ್‌ಪೂರ್ವವಾದಾಗ **ನಂದಿಗ್ರಹಪಚಾದಿಭ್ಯಃ**—(ಪಾ ಸೂ ೩-೧-೧೩೪) ಎಂಬುದರಿಂದ ಅಚ್ ಪ್ರತ್ಯಯ ಇದು ಪಚಾದಿಯಲ್ಲಿ ಸೇರಿದೆ ಪ್ರತ್ಯಯನಿಮಿತ್ತವಾಗಿ **ಪುಗಂತಲಘೂಪಧಸ್ಯ ಚ** ಸೂತ್ರದಿಂದ ಧಾತುವಿನ ಉಪಧೆಗೆ ಗುಣ **ನಲೋಪೋ ನಞಃ** (ಪಾ. ಸೂ ೬-೩-೭೩) ಸೂತ್ರದಿಂದ ನ ಞ್‌ನ ನಕಾರಕ್ಕೆ ಲೋಪಪ್ರಾಪ್ತವಾದರೆ **ನಭ್ರಾಣ್ ನಪಾತ್**—(ಪಾ ಸೂ. ೬-೩-೭೫) ಎಂಬುದರಿಂದ ಅದಕ್ಕೆ ಪ್ರಕೃತಿಭಾವ ಬರುತ್ತದೆ **ತತ್ಪುರುಷೇ ತುಲ್ಯಾರ್ಥ**—(ಪಾ ಸೂ. ೬-೨-೨) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ

**ಅಪಸ್ಯುವಃ**—ಅಪಸ್ ಶಬ್ದದ ಮೇಲೆ ಇಚ್ಛಾರ್ಥದಲ್ಲಿ **ಸುಪ ಆತ್ಮನಃ ಕ್ಯಚ್** (ಪಾ ಸೂ ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ **ಸನಾದ್ಯಂತಾಧಾತವಃ** ಸೂತ್ರದಿಂದ ಅಪಸ್ಯ ಎಂಬ ಕ್ಯಜಂತಕ್ಕೆ ಧಾತುಸಂಜ್ಞಾ ಇದರ ಮೇಲೆ **ಕ್ಯಾಚ್ಛಂದಸಿ** (ಪಾ ಸೂ ೩-೨-೧೭೦) ಎಂಬುದರಿಂದ ಉ ಪ್ರತ್ಯಯ ಉ ಪರವಾದಾಗ **ಅತೋಲೋಪಃ** ಸೂತ್ರದಿಂದ ಕ್ಯಚ್ಚಿನ ಅಕಾರಕ್ಕೆ ಲೋಪ. ಅಪಸ್ಯು ಶಬ್ದವಾಗುತ್ತದೆ. ಇದಕ್ಕೆ ಜಸ್ ಪರವಾದಾಗ **ಜಸಿಚ** ಸೂತ್ರದಿಂದ ಗುಣವು ಪ್ರಾಪ್ತವಾದರೆ **ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಂ** (ಪಾ ಸೂ. ೬-೪-೭೭-೧) ಎಂಬುದರಿಂದ ಉವಙ್ ಸಕಾರಕ್ಕೆ ರುತ್ವವಿಸರ್ಗ. ಅಪಸ್ಯುವಃ ಎಂದು ರೂಪವಾಗುತ್ತದೆ ಉಪ್ರತ್ಯಯ ಸ್ವರ ಬರುತ್ತದೆ. ॥೧॥

॥ ಸಂಹಿತಾಪಾಠಃ ॥

ಆ ತೇ ಸುಪರ್ಣಾ ಅಮಿನಂತ ಏವೈಃ ಕೃಷ್ಣೋ ನೋನಾವ
ವೃಷಭೋ ಯದೀದಂ ।
ಶಿವಾಭಿರ್ನ ಸ್ಮಯಮಾನಾಭಿರಾಗಾತ್ಪತಂತಿ ಮಿಹಃ ಸ್ತನಯಂ-
ತ್ಯಭ್ರಾ ॥ ೨ ॥

॥ ಪದಪಾಠಃ ॥

ಆ । ತೇ । ಸುಽಪರ್ಣಾಃ । ಅಮಿನಂತ । ಏವೈಃ । ಕೃಷ್ಣಃ । ನೋನಾವ । ವೃಷಭಃ ।
ಯದಿ । ಇದಂ ।
ಶಿವಾಭಿಃ । ನ । ಸ್ಮಯಮಾನಾಭಿಃ । ಆ । ಅಗಾತ್ । ಪತಂತಿ । ಮಿಹಃ । ಸ್ತನ-
ಯಂತಿ । ಅಭ್ರಾ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತೇ ತವ ಸುಪರ್ಣಾಃ ಶೋಭನಪತನಾ ರಶ್ಮಯ ಏವೈರ್ಗಂತೃಭಿರ್ಮರುದ್ಭಿಃ ಸಹಾಮಿನಂತ । ಆ ಸಮಂತಾನ್ಮೇಘಂ ಹಿಂಸಂತಿ । ವರ್ಷಣಾರ್ಥಂ ತಾಡಯಂತಿ । ಪ್ರಭೃತಶ್ಚ ಕೃಷ್ಣಃ ಕೃಷ್ಣವರ್ಣೋ ವೃಷಭೋ ವರ್ಷಿತಾ ಮೇಘೋ ನೋನಾವ । ಭೃಶಂ ಶಬ್ದಮಕರೋತ್ । ಯದಿ ಯದೇದಮೀದೃಶಂ ಕರ್ಮ ತದಾನೀಂ ಶಿವಾಭಿರ್ನ ಸುಖಕಾರಿಣೀಭಿಃ ಸ್ಮಯಮಾನಾಭಿರ್ಹಸನವತೀಭಿಃ ಕಾಂತಾಭಿರಿವ ಶುಭ್ರವರ್ಣಾಭಿಃ ಫೇನಯುಕ್ತಾಭಿರದ್ಭಿರ್ವಿದ್ಯುದ್ಭಿರ್ವಾ ಸಹಾಗಾತ್ । ವೈದ್ಯುತಾಗ್ನಿಪ್ರೇರಿತಃ ಪರ್ಜನ್ಯ ಆಗಚ್ಛತಿ । ತದನಂತರಂ ಮಿಹ ಆಪಃ ಪತಂತಿ । ದಿವಃ ಸಕಾಶಾತ್ಪ್ರವೃಷ್ಟಾ ಭವಂತಿ । ಅಭ್ರಾಭ್ರಾಣ್ಯದ್ಭಿಃ ಪೂರ್ಣಾ ಮೇಘಾಃ ಸ್ತನಯಂತಿ । ಇತಸ್ತತಃ ಶಬ್ದಂ ಕುರ್ವಂತಿ ॥ ಅಮಿನಂತ । ಮೀಞ್ ಹಿಂಸಾಯಾಂ । ಕ್ರ್ಯಾದಿಕಃ । ವ್ಯತ್ಯಯೇನಾಂತಾದೇಶಃ । ಈಷಾಅಕ್ಷಾದಿತ್ವಾತ್ಪ್ರಕೃತಿಭಾವಃ । ಅಣೋ-ಽಪ್ಯಗೃಹಸ್ಯ । ಪಾ ೮-೪-೫೭ । ಇತಿ ವೈಕಲ್ಪಿಕಮವಸಾನೇ ವಿಧೀಯಮಾನಮನುನಾಸಿಕತ್ವಂ ವ್ಯತ್ಯಯೇ-

**ನಾತ್ರ ಸಂಹಿತಾಯಾಮುಪಿ ದ್ರಷ್ಟವ್ಯಂ । ನೋನಾವ । ನೌತೇರ್ಯಙ್ಲುಗಂತಾಲ್ಲಿಟ್ಯಮಂತ್ರೇ । ಪಾ. ೩-೧-೩೫ । ಇತಿ ನಿಷೇಧಾದಾಮ್ಪ್ರತ್ಯಯಾಭಾವಃ । ಸ್ಮಯಮಾನಾಭಿಃ । ಸ್ಮಿಙ್ ಈಷದ್ಧಸನೇ । ಶಪಃ ಪಿತ್ವಾ ದನುದಾತ್ತತ್ವಂ । ತಾಸಚೋ ಲಸಾರ್ವಧಾತುಕಸ್ವರೇಣ ಧಾತುಸ್ವರಃ ಶಿಷ್ಯತೇ । ಸ್ತನಯಂತಿ । ಸ್ತನ ಶಬ್ದೇ । ಚುರಾದಿರದಂತಃ । ಪತಂತಿ ಸ್ತನಯಂತೀತ್ಯನಯೋಃ ಪಾದಾದಿತ್ವಾದ್ವಾಕ್ಯಾದಿತ್ವಾಚ್ಚ ನಿಘಾತಾಭಾವಃ ॥**

॥ ಪ್ರತಿಪದಾರ್ಥ ॥

(**ಅಗ್ನೇ**— ಎಲೈ ಅಗ್ನಿಯೇ) । **ತೇ**— ನಿನ್ನ । **ಸುಪರ್ಣಾಃ** - ಲಕ್ಷಣವಾಗಿ ಬೀಳುವ ಅಥವಾ ಪ್ರಸರಿಸುವ (ಕಿರಣಗಳು) । **ಏನ್ಯೈಃ**--ಗಮನಶೀಲವಾದ ಮರುತ್ತುಗಳೊಡನೆ । **ಆ ಅಮಿನಂತ**—ಸುತ್ತಲೂ (ಮೇಘಗಳನ್ನು) ಹಿಂಸೆಮಾಡುತ್ತವೆ. । **ಕೃಷ್ಣಃ**—ಕಪ್ಪಾದ । **ವೃಷಭಃ**—ವೃಷ್ಟಿಯನ್ನುಂಟುಮಾಡುವ ಮೇಘವು । **ನೋನಾವ**—ಹೆಚ್ಚಾಗಿ ಶಬ್ದವನ್ನುಂಟುಮಾಡಿತು । **ಯದಿ ಇದಂ**—ಯಾವಾಗ ಈ ಕೆಲಸವು (ನಡೆಯಿತೋ) (ಆಗ) । **ಶಿವಾಭಿಃ**—ಸುಖಕರವಾದ । **ಸ್ಮಯಮಾನಾಭಿಃ ನ**—ನಗುತ್ತಿರುವ ಸ್ತ್ರೀಯರ ದಂತಪಂಕ್ತಿಗಳಂತೆ (ಪ್ರಕಾಶಮಾನವಾದ ವೃಷ್ಟ್ಯುದಕವು) । **ಆ ಅಗಾತ್**—ಬರುತ್ತದೆ (ಬೀಳುತ್ತದೆ) । (**ಅನಂತರ**) **ಮಿಹಃ**—ನೀರು । **ಪತಂತಿ**—(ಆಕಾಶದಿಂದ) ಬೀಳುತ್ತದೆ । **ಅಭ್ರಾಃ**—(ನೀರಿನಿಂದ ತುಂಬಿದ) ಮೇಘಗಳು । **ಸ್ತನಯಂತಿ**—ಗುಡುಗುತ್ತವೆ (ಶಬ್ದಮಾಡುತ್ತವೆ)

॥ ಭಾವಾರ್ಥ ॥

ಚಲಿಸುತ್ತಿರುವ ವಾಯುಪಿನಿಂದ ಯುಕ್ತವಾದ ಮತ್ತು ಅತಿ ಪ್ರಕಾಶಮಾನವಾದ ನಿನ್ನ ಕಿರಣಗಳು ಮೇಘಗಳನ್ನು ಹಿಂಸಿಸುತ್ತವೆ. ಆದರಿಂದ ಕಪ್ಪಾದ ಮೇಘಗಳು ಗರ್ಜಿಸುತ್ತವೆ, ಅನಂತರ ನಗುತ್ತಿರುವ ಸ್ತ್ರೀಯರ ದಂತಕಾಂತಿಯಂತೆ ಬೆಳ್ಳಗಿರುವ ಹನಿಗಳು ಬೀಳುತ್ತದೆ, ಆಕಾಶದಿಂದ ಮಳೆಯು ಬೀಳುತ್ತದೆ, ಮೋಡಗಳು ಗುಡುಗುತ್ತವೆ

English Translation

Your falling (rays), accompanied by the moving (Maruts), strike against (the cloud), the black shedder of rain has roared, when this is done (the shower) comes hith delightful and smiling (drops), the rain descends, the clouds thunder.

॥ ವಿಶೇಷವಿಷಯಗಳು ॥

ಮುಖ್ಯಾಭಿಪ್ರಾಯವು- ಋಷಿಯು ಈ ಋಕ್ಕಿನಲ್ಲಿ ಮಿಂಚು, ಸಿಡಿಲು ಗುಡುಗು ಇವುಗಳೊಡನೆ ಮಹಾ ಆರ್ಭಟದಿಂದ ಬೀಳುವ ಮಳೆಯನ್ನು ವರ್ಣಿಸಿರುವನು ಮಿಂಚು ಅಂತರಿಕ್ಷದಲ್ಲಿ ಥಳಥಳನೆ ಹೊಳೆಯುತ್ತಾ ಬಹು ಪ್ರಕಾಶಮಾನವಾಗಿ ಅಂತರಿಕ್ಷವನ್ನೆಲ್ಲಾ ಸ್ವಪ್ರಕಾಶದಿಂದ ಬೆಳಗುತ್ತಾ ಜಲಪೂರ್ಣವಾದ ಕಪ್ಪಾದ ಮೇಘಗಳ ಮಧ್ಯದಲ್ಲಿ ಮಹಾಶಬ್ದದೊಡನೆ (ಸಿಡಿಲು) ವ್ಯಕ್ತವಾಗುವುದು. ಆ ಕ್ಷಣದಲ್ಲಿಯೇ ಮಹಾಧ್ವನಿಯುಕ್ತವಾದ ಮತ್ತು ಕರ್ಣಕಠೋರ

ವಾದ ಶಿಡಿಲಿನ ಶಬ್ದವು ಕೇಳಿಬರುವುದು. ಇದನ್ನೇ ಋಷಿಯು–ವಿದ್ಯುದ್ರೂಪದಿಂದಿರುವ ಅಗ್ನಿಯು ಜಲಪೂರ್ಣವಾದ ಕಪ್ಪಾದ ಮೇಘಗಳನ್ನು ಮರುತ್ತುಗಳ (ಗಾಳಿಯ) ಸಹಾಯದಿಂದ ಚದುರಿಸುತ್ತಾ ಅವುಗಳನ್ನು ಪ್ರಹರಿಸುವನೆಂದೂ ಆ ಏಟುಗಳಿಂದ ನೊಂದ ಮೇಘಗಳು ಆರ್ಭಟದಿಂದ (ಶಿಡಿಲು, ಗುಡುಗು) ಆರ್ತನಾದ ಮಾಡುತ್ತಾ ಎಂದರೆ ರೋದನ ಮಾಡುತ್ತಾ ಅನ್ನಾದ್ಯಾಹಾರಗಳಿಗೆ ಕಾರಣಭೂತವಾದ ವೃಷ್ಟ್ಯುದಕವನ್ನು ಭೂಮಿಯ ಮೇಲೆ ಸುರಿಸುವವು ಎಂದೂ ಅಂತರಿಕ್ಷದಲ್ಲಿ ಥಟ್ಟನೆ ಕಾಣಿಸುವ ವಿದ್ಯುತ್ಪ್ರಕಾಶವು ಯೌವನವತಿಯರಾದ ಚೆಲುವೆಯರ ಮುಗುಳುನಗೆಯಂತಿರುವು ದೆಂದೂ ವರ್ಣನೆ ಮಾಡಿರುವನು. ಶಿಡಿಲು ಮಿಂಚುಗಳ ಆರ್ಭಟವಾದೊಡನೆಯೇ ಗುಡುಗುಶಬ್ದಗಳಿಂದ ಸಹಿತವಾಗಿ ಮಳೆಯ ಹನಿಗಳು ಭೂಮಿಯ ಮೇಲೆ ಬೀಳುವವು ಎಂದೂ ವರ್ಣಿಸಿರುವನು.

**ಸುಪರ್ಣಾಃ ಅಮಿನಂತ—ಶೋಭನಪತನಾ ರಶ್ಮಯಃ ।** ಕೆಳಗೆ ಬೀಳುವ ಎಂದರೆ ಹರಡುವ ವಿದ್ಯುತ್ತಿನ (ಮಿಂಚಿನ) ರಶ್ಮಿಗಳು. ಮಿಂಚಿನ ಪ್ರಕಾಶವು ಕಪ್ಪಾದ ಮೋಡಗಳ ಮೇಲೆ ಬಿದ್ದು ಅವುಗಳನ್ನು ಹಿಂಸಿಸುವವು ಎಂದಭಿಪ್ರಾಯವು

**ವಿವ್ಯೈಃ— ವಿವ್ಯೈರ್ಗಂತೃಭಿರ್ಮರುದ್ಭಿಃ । ವಿವ್ಯೈಃ** ಎಂಬ ಶಬ್ದಕ್ಕೆ ಹೋಗುವ, ಚಲಿಸುವ ಎಂಬ ಅರ್ಥ ವಿರುವುದರಿಂದ ಯಾವಾಗಲೂ ಚಲಿಸುವ (ಬೀಸುವ) ಸ್ವಭಾವವುಳ್ಳ, ಮರುತ್ತುಗಳು (ರಭಸದಿಂದ ಬೀಸುವ ಗಾಳಿಗಳು) ಎಂದು ಭಾಷ್ಯಕಾರರು ವಿವರಿಸಿರುವರು ಮಳೆಯು ಹುಯ್ಯುವಾಗ ಗಾಳಿಯು ರಭಸವಾಗಿ ಬೀಸುವುದು ಸಹಜವು.

**ಕೃಷ್ಣೋ ವೃಷಭಃ—ಕೃಷ್ಣವರ್ಣೋ ವರ್ಷಿತಾ ಮೇಘಃ ।** ವೃಷ್ಟಿಯನ್ನು ಸುರಿಸುವ ಕಪ್ಪಾದ ಮೇಘಗಳು; ಜಲದಿಂದ ಪೂರ್ಣವಾದ ಮೇಘಗಳು ಮಳೆ ಹುಯ್ಯುವುದಕ್ಕೆ ಮುಂಚೆ ಕಪ್ಪಾಗಿರುವುವು ದೊಡ್ಡ ಮಳೆಯು ಬರುವ ಸಂದರ್ಭದಲ್ಲಿ ಕಪ್ಪಾದ ಮೇಘಗಳು ಅಂತರಿಕ್ಷದಲ್ಲಿ ಗುಂಪಾಗಿ ಸೇರಿ ಕತ್ತಲೆ ಕವಿಯುವಂತೆ ಮಾಡುವುವು. ಆದುದರಿಂದ ಋಷಿಯು ಕೃಷ್ಣ–ಕಪ್ಪಾದ ಎಂಬ ಶಬ್ದವನ್ನು ಉಪಯೋಗಿಸಿರುವನು. ಯಾಸ್ಕರು ವೃಷಭ ಶಬ್ದದ ವಿಷಯದಲ್ಲಿ

**ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ।**

(ಋ ಸಂ ೧-೫೯ ೬)

ಎಂಬ ಋಕ್ಕನ್ನು ಉದಹರಿಸಿ ವೃಷಭಸ್ಯ–ವರ್ಷಿತುರಪಾಂ, ನೀರನ್ನು ಸುರಿಸುವ ಎಂದು ಅರ್ಥವಿವರಣೆ ಮಾಡಿರುವರು (ನಿ ೭-೨೩) ಮತ್ತೂ—

**ವೃಷಭಃ । ವೃಷಭಃ ಪ್ರಜಾಂ ವರ್ಷತೀತಿ ವಾತಿಬೃಹತಿ ರೇತ ಇತಿ ವಾ ತದ್ವೃಷಕರ್ಮಾ ವರ್ಷಣಾದ್ವೃಷಭಃ ॥**

(ನಿ ೯-೨೨)

ಎಂದು ವೃಷಭಶಬ್ದದ ರೂಪನಿಷ್ಪತ್ತಿಯನ್ನು ಹೇಳಿರುವರು ಎಂದರೆ, ಪ್ರಜೋತ್ಪತ್ತಿಗೆ ಕಾರಣವಾದ ರೇತಸ್ಸನ್ನು (ವೀರ್ಯವನ್ನು) ಯೋನಿಯಲ್ಲಿ ಬಿಡುವ ಪುರುಷನಿಗೆ ವೃಷಭನೆಂದು ಹೆಸರು. ಅಥವಾ **ರೇತಃ** ಎಂಬ ಶಬ್ದಕ್ಕೆ ಉದಕ

(ನೀರು) ಎಂದೂ ಅರ್ಥವಿರುವುದರಿಂದ (೨-೨೪) ನೀರನ್ನೂ ವಿಶೇಷವಾಗಿ (ವೃಷ್ಟಿ ಅಥವಾ ಮಳೆಯ ರೂಪದಿಂದ) ಸುರಿಸುವುದಕ್ಕೆ ವೃಷಣವೆಂದು ಹೆಸರು. ಅಂತಹ ಉದಕವರ್ಷಣವನ್ನು ಮಾಡುವ ಪುರುಷನಿಗೆ ವೃಷಭವೆಂದು ಹೆಸರು ಎಂದು ಹೇಳಿ—

**ನ್ಯಕ್ರಂದಯನ್ನುಪಯಂತ ಏನಮಮೇಹಯನ್ವೃಷಭಂ ಮಧ್ಯ ಆಜೇಃ ।**

(ಋ ಸಂ ೧೦-೧೦೨-೫)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು.

**ಶಿವಾಭಿಃ—ಸುಖಕಾರಿಣೀಭಿಃ ।** ಸುಖವನ್ನುಂಟುಮಾಡುವ, ಮನಸ್ಸಿಗೆ ಸಂತೋಷವನ್ನುಂಟುಮಾಡುವ

**ಸ್ಮಯಮಾನಾಭಿರ್ನ—ಸ್ಮಿಙ್ ಈಷದ್ಧಸನೇ । ಹಸನವತೀಭಿಃ ಕಾಂತಾಭಿರಿವ ।** ಮಂದಹಾಸದಿಂದ ಅಥವಾ ಮುಗುಳು ನಗೆಯಿಂದ ಶೋಭಿಸುತ್ತಿರುವ ಕಾಮಿನಿಯರಂತೆ ಸುಂದರಿಯರೂ ತರುಣಿಯರೂ ಆದ ಭಾಮಿನಿಯರು ಸಂತೋಷವನ್ನು ವ್ಯಕ್ತಪಡಿಸುವಾಗ ಮಂದಹಾಸವನ್ನು ಸೂಸುತ್ತಾ ತಮ್ಮ ಅತಿಶುಭ್ರವೂ ಮನೋಹರವೂ ಆದ ದಂತಪಂಕ್ತಿಯನ್ನು ಪ್ರಕಟಿಸುವಂತೆ ವೃಷ್ಟ್ಯುದಕಗಳು ಅತಿಶುಭ್ರವಾಗಿ ಬೆಳ್ಳಗಿರುವ ನೊರೆಗಳಿಂದ ಕೂಡಿ ಶೋಭಿಸುತ್ತಿರುವವು ಎಂದು ಉಪಮಾರ್ಥವು

**ಮಿಹಃ- ಮಿಹ ಸೇಚನೇ । ಅಪಃ ।** ನನೆಯಿಸತಕ್ಕ ನೀರು.

**ಸ್ತನಯಂತಿ—ಸ್ತನ ಶಬ್ದೇ । ಇತಸ್ತತಃ ಶಬ್ದಂ ಕುರ್ವಂತಿ ।** ಅಲ್ಲಲ್ಲಿ ಅಥವಾ ಪದೇ ಪದೇ ಶಬ್ದ ಮಾಡುವವು ಎಂದರೆ ಗುಡುಗು ಶಬ್ದವು ಕೇಳಿಸುತ್ತಿರುವವು ಎಂದಭಿಪ್ರಾಯವು

॥ ವ್ಯಾಕರಣಪ್ರಕ್ರಿಯಾ ॥

**ಅಮಿನಂತ**—ಮಿಞ್ ಹಿಂಸಾಯಾಂ ಧಾತು ಕ್ರ್ಯಾದಿ ಲಙ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ **ವ್ಯತ್ಯಯೋ ಬಹುಲಂ** ಎಂಬುದರಿಂದ ಇದಕ್ಕೆ ಅನ್ತಾದೇಶ **ಕ್ರ್ಯಾದಿಭ್ಯಃ ಶ್ನಾ** ಸೂತ್ರದಿಂದ ಶ್ನಾ ವಿಕರಣ **ಪ್ವಾದೀನಾಂ ಹ್ರಸ್ವಃ** (ಪಾ ಸೂ. ೭-೩-೮೦) ಎಂಬುದರಿಂದ ಶ್ನಾ ಪರವಾದಾಗ ಧಾತುವಿಗೆ ಹ್ರಸ್ವ. **ಶ್ನಾಭ್ಯಸ್ತಯೋರಾತಃ** (ಪಾ ಸೂ ೬-೪-೧೧೨) ಎಂಬುದರಿಂದ ಅಜಾದಿ ಙಿತ್ ಪ್ರತ್ಯಯ ಪರವಾದುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಲೋಪ ಅಂಗಕ್ಕೆ ಅಡಾಗಮ ಅಮಿನಂತ ಎಂದು ರೂಪವಾಗುತ್ತದೆ. ಈಷಾ ಅಕ್ಷಾದಿಗಣದಲ್ಲಿ ಸೇರಿರುವುದರಿಂದ ಇದಕ್ಕೆ ಪ್ರಗೃಹ್ಯಸಂಜ್ಞಾಪ್ರಯುಕ್ತವಾಗಿ ಅಚ್ (ಏವೈಃ) ಪರದಲ್ಲಿದ್ದರೂ ವೃದ್ಧಿಗೆ ಬಾಧಕವಾಗಿ ಪ್ರಕೃತಿಭಾವಸಂಧಿ ಬರುತ್ತದೆ ಯದ್ಯಪಿ ಪ್ರಗೃಹ್ಯಸಂಜ್ಞಾ ಇರುವುದರಿಂದ **ಅಪ್ರಗೃಹ್ಯಸ್ಯ** ಎಂದು ನಿಷೇಧಿಸಿರುವುದರಿಂದ ಅಂತ್ಯಕ್ಕೆ ಅನುನಾಸಿಕಬರಲು ನಿಮಿತ್ತವಿಲ್ಲ ಆದರೆ **ವ್ಯತ್ಯಯೋ ಬಹುಲಂ** ಎಂಬುದರಿಂದ ಸಂಹಿತಾದಲ್ಲಿ ಮಾತ್ರ **ಅಣೋಽಪ್ರಗೃಹ್ಯಸ್ಯಾನುನಾಸಿಕಃ** (ಪಾ. ಸೂ ೮-೪-೫೭) ಎಂಬುದರಿಂದ ವೈಕಲ್ಪಿಕವಾದ ಅನುನಾಸಿಕವು ಅವಸಾನದಲ್ಲಿ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ನೋನಾವ—**ಣು ಸ್ತುತೌ ಧಾತು. **ಣೋನಃ** ಎಂಬುದರಿಂದ ಣಕಾರಕ್ಕೆ ನಕಾರಾದೇಶ ಅತಿಶಯಾರ್ಥ ತೋರುವಾಗ **ಧಾತೋರೇಕಾಚಃ ಹಲಾದೇಃ**—(ಪಾ ಸೂ ೩-೧-೨೨) ಎಂಬುದರಿಂದ ಯಙ್. ಅದಕ್ಕೆ

**ಯಙೋऽಚಿಚ** (ಪಾ ಸೂ. ೨-೪-೭೪) ಎಂಬುದರಿಂದ ಲುಕ್. **ಸನ್ಯಙೋಃ** (ಪಾ. ಸೂ ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ. **ಗುಣೋ ಯಙ್‌ಲುಕೋಃ** (ಪಾ ಸೂ ೭-೪-೮೨) ಸೂತ್ರದಿಂದ ಅಭ್ಯಾಸಕ್ಕೆ ಗುಣ ನೋನು ಎಂದು ರೂಪವಾಗುತ್ತದೆ. **ಸನಾದ್ಯಂತಾ ಧಾತವಃ** ಎಂಬುದರಿಂದ ಧಾತುಸಂಜ್ಞೆ ಬರುವುದರಿಂದ ಇದಕ್ಕೆ ಲಿಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಪರಸ್ಮೈಪದಾನಾಂ**—ಎಂಬುದರಿಂದ ಅದಕ್ಕೆ ಣಲ್ ಆದೇಶ. ಪ್ರತ್ಯಯಾಂತವಾದರೂ **ಕಾಸ್‌ಪ್ರತ್ಯಯಾದಮಂತ್ರೇ ಲಿಟಿ** (ಪಾ ಸೂ. ೩-೧-೩೫) ಎಂಬಲ್ಲಿ ಅಮಂತ್ರೇ ಎಂದು ನಿಷೇಧಮಾಡಿರುವುದರಿಂದ ಲಿಟಿನಲ್ಲಿ ಆಮ್‌ಪ್ರತ್ಯಯ ಬರುವುದಿಲ್ಲ. ಣಲ್ ಣಿತ್ತಾದುದರಿಂದ **ಅಚೋಞ್ಣಿತಿ** ಎಂಬುದರಿಂದ ಅಜಂತಾಂಗಕ್ಕೆ ವೃದ್ಧಿ ಆವಾದೇಶ. ನೋನಾವ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರಬರುತ್ತದೆ

**ಸ್ಮಯಮಾನಾಭಿಃ**—ಸ್ಮಿಙ್ ಈಷದ್ಧಸನೇ ಧಾತು ಇದಕ್ಕೆ ಲಡರ್ಥದಲ್ಲಿ ಶಾನಚ್‌ಪ್ರತ್ಯಯ **ಕರ್ತರಿ ಶಪ್** (ಪಾ ಸೂ ೩-೧-೬೮) ಎಂಬುದರಿಂದ ಶಪ್ ವಿಕರಣ. **ಸಾರ್ವಧಾತುಕಾರ್ಧಧಾ** -(ಪಾ. ಸೂ ೭-೩-೮೪) ಎಂಬುದರಿಂದ ಶಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಅಯಾದೇಶ **ಆನೇಮುಕ್** (ಪಾ ಸೂ. ೭-೨ ೮೨) ಎಂಬುದರಿಂದ ಅಜಂತಾಂಗಕ್ಕೆ ಮುಕಾಗಮ ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ ಸ್ಮಯಮಾನ ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತವಾಗುತ್ತದೆ. ಆದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತ. ಆಗ ಧಾತುಸ್ವರ ಉಳಿಯುವುದರಿಂದ ಆದ್ಯುದಾತ್ತವಾಗುತ್ತದೆ. ತೃತೀಯಾ ಬಹುವಚನರೂಪ

**ಅಗಾತ್**—ಇಣ್ ಗತೌ ಧಾತು. ಅದಾದಿ. ಇದಕ್ಕೆ ಲುಙ್‌ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಸೂತ್ರದಿಂದ ಇಕಾರಲೋಪ **ಇಣೋ ಗಾ ಲುಙಿ** (ಪಾ. ಸೂ. ೨-೪-೪೫) ಎಂಬುದರಿಂದ ಧಾತುವಿಗೆ ಗಾದೇಶ ಚ್ಲಿಗೆ **ಚ್ಲೇಃ ಸಿಚ್** ಎಂಬುದರಿಂದ ಸಿಚಾದೇಶ. **ಗಾತಿಸ್ಥಾಘುಪಾ**—(ಪಾ. ಸೂ ೨-೪-೭೭) ಎಂಬುದರಿಂದ ಸಿಚಿಗೆ ಲುಕ್. ಅಂಗಕ್ಕೆ ಅಡಾಗಮ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಪತಂತಿ**—ಪತ್ಲೃ ಗತೌ ಧಾತು. ಲಟ್ ಪ್ರಥಮಪುರುಷ ಬಹುವಚನರೂಪ. ತಿಙಂತದ ಪರದಲ್ಲಿರುವುದರಿಂದಲೂ ಪಾದಾದಿಯಲ್ಲಿರುವುದರಿಂದಲೂ ನಿಘಾತಸ್ವರ ಬರುವುದಿಲ್ಲ ಶಪ್ ಲಸಾರ್ವಧಾತುಕ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ

**ಸ್ತನಯಂತಿ**—ಸ್ತನ ಶಬ್ದೇ ಧಾತು ಚುರಾದಿ ಇದು ಅದಂತವಾಗಿದೆ. ಇದಕ್ಕೆ ಸ್ವಾರ್ಥದಲ್ಲಿ **ಸತ್ಯಾಪಪಾಶ**- (ಪಾ ಸೂ. ೩-೧-೨೫) ಸೂತ್ರದಿಂದ ಣಿಚ್ **ಅತೋಲೋಪಃ** ಎಂಬುದರಿಂದ ಣಿಚ್ ನಿಮಿತ್ತವಾಗಿ ಧಾತುವಿನ ಅಂತ್ಯ ಅಕಾರಕ್ಕೆ ಲೋಪ. ಇದಕ್ಕೆ **ಅಚಃ ಪರಸ್ಮಿನ್**— ಸೂತ್ರದಿಂದ ಸ್ಥಾನಿವದ್ಭಾವ ಬರುವುದರಿಂದ ಣಿಚ್ ನಿಮಿತ್ತವಾಗಿ ಉಪಧಾವೃದ್ಧಿಬರುವುದಿಲ್ಲ. ಲಟ್ ಪ್ರಥಮಪುರುಷ ಬಹುವಚನರೂಪ. ಇದು ವಾಕ್ಯಾದಿಯಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ ಣಿಚ್‌ಸ್ವರದಿಂದ ನಕಾರೋತ್ತರಾಕಾರ ಉದಾತ್ತವಾಗುತ್ತದೆ ॥ ೨ ॥

॥ ಸಂಹಿತಾಪಾಠಃ ॥

ಯದೀಮೃತಸ್ಯ ಪಯಸಾ ಪಿಯಾನೋ ನಯನ್ನೃತಸ್ಯ ಪಥಿಭೀ ರಜಿಷ್ಠೈಃ ।
ಅರ್ಯಮಾ ಮಿತ್ರೋ ವರುಣಃ ಪರಿಜ್ಮಾ ತ್ವಚಂ ಪೃಂಚಂತ್ಯುಪರಸ್ಯ ಯೋನೌ ॥ ೩ ॥

॥ ಪದಪಾಠಃ ॥

ಯತ್ । ಈಂ । ಋತಸ್ಯ । ಪಯಸಾ । ಪಿಯಾನಃ । ನಯನ್ । ಋತಸ್ಯ । ಪಥಿऽಭಿಃ । ರಜಿಷ್ಠೈಃ ।
ಅರ್ಯಮಾ । ಮಿತ್ರಃ । ವರುಣಃ । ಪರಿऽಜ್ಮಾ । ತ್ವಚಂ । ಪೃಂಚಂತಿ । ಉಪರಸ್ಯ । ಯೋನೌ ॥ ೩ ॥

॥ ಸಾಯಣಭಾಷ್ಯಂ ॥

ಯದೀಂ ಯದಾಯಮಗ್ನಿರ್ಋತಸ್ಯೋದಕಸ್ಯ ಪಯಸಾ ಪಯೋವತ್ಸಾರಭೂತೇನ ರಸೇನ ಪಿಯಾನೋ ಜಗದಾಪ್ಯಾಯನಂ ಕುರ್ವನ್ ಆಪ್ಯಾಯಿತಂ ಚ ಜಗದೃತಸ್ಯೋದಕಸ್ಯ ಸಂಬಂಧಿಭೀ ರಜಿಷ್ಠೈರ್ಋಜುತಮೈಃ ಪಥಿಭಿರ್ಮಾರ್ಗೈಃ ಸ್ನಾನಪಾನಾದಿಭಿರ್ನಯನ್ ಪ್ರಾಪಯನ್ವರ್ತತೇ ತದಾನೀಮರ್ಯಮಾ ಮಿತ್ರೋ ವರುಣಶ್ಚ ಪರಿಜ್ಮಾ ಪರಿತೋ ಗಂತಾ ಮರುದ್ಗಣಶ್ಚೋಪರಸ್ಯ ಮೇಘಸ್ಯ ಯೋನೌ ವೃಷ್ಟ್ಯುದಕೋತ್ಪತ್ತಿಸ್ಥಾನೇ ತ್ವಚಂ ಪೃಂಚಂತಿ । ವೃಷ್ಟ್ಯುದಕಸ್ಯಾಚ್ಛಾದಕಂ ಪ್ರದೇಶಂ ಸ್ವಕೀಯೈರಾಯುಧೈಃ ಸಂಯೋಜಯಂತಿ । ಉದ್ಘಾಟಯಂತೀತಿ ಯಾವತ್ ॥ ಪಿಯಾನಃ । ಪ್ಯಾಯೀ ಓಪ್ಯಾಯೀ ವೃದ್ಧೌ । ಬಹುಲಂ ಛಂದಸೀತಿ ಶಪೋ ಲುಕ್ । ಧಾತೋರ್ವ್ಯತ್ಯಯೇನ ಪೀಭಾವಃ ।

**ಅನುದಾತ್ತೇತ್ತ್ವಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ರಜಿಷ್ಠೈಃ । ಋಜುಶಬ್ದಾದಿಷ್ಠನಿ ವಿಭಾಷರ್ಜೋಃ ಛಂದಸಿ । ಪಾ. ೬-೪-೧೬೨ । ಇತ್ಯೃಕಾರಸ್ಯ ರತ್ವಂ । ಟೇರಿತಿ ಟಿಲೋಪಃ । ಪೃಂಚಂತಿ । ಪೃಚೀ ಸಂಪರ್ಕೇ । ರೌಧಾದಿಕಃ ॥**

॥ ಪ್ರತಿಪದಾರ್ಥ ॥

**ಯದೀಂ**—ಯಾವಾಗ ಈ ಅಗ್ನಿಯು । **ಋತಸ್ಯ**—ಉದಕವ । **ಪಯಸಾ**—ಕ್ಷೀರದಂತೆ ಸಾರವತ್ತಾದ ರಸದಿಂದ । **ಪಿಯಾನಃ**--(ಪ್ರಪಂಚಕ್ಕೆ) ಆಪ್ಯಾಯನವನ್ನುಂಟುಮಾಡುತ್ತಾ (ಆಪ್ಯಾಯಿತವಾದ ಜಗತ್ತನ್ನು) । **ಋತಸ್ಯ**—ಉದಕದ (ಸಂಬಂಧವಾದ) । **ರಜಿಷ್ಠೈಃ**-ಅತ್ಯಂತ ಋಜುವಾದ (ನ್ಯಾಯವಾದ) । **ಪಥಿಭಿಃ**—ಮಾರ್ಗಗಳಿಂದ (ಸ್ನಾನಪಾನಾದಿಗಳಿಂದ) । **ನಯರ್ತ**--ಒದಗಿಸುತ್ತಾ (ಇರುತ್ತಾನೋ ಆಗ) । **ಅರ್ಯಮಾ ಮಿತ್ರಃ ವರುಣಃ**—ಅರ್ಯಮ ಮಿತ್ರ, ವರುಣ (ಮತ್ತು) । **ಪರಿಜ್ಮಾ**—ಸರ್ವಪ್ರದೇಶದಲ್ಲಿಯೂ ಸಂಚರಿಸುವ ಮರುತ್ತುಗಳೂ । **ಉಪರಸ್ಯ**—ಮೇಘದ । **ಯೋನೌ**—(ವೃಷ್ಟಿಯ) ಉತ್ಪತ್ತಿಸ್ಥಾನದಲ್ಲಿ । **ತ್ವಚಂ**—ಚರ್ಮವನ್ನು (ಆವರಣವನ್ನು) । **ಪೃಂಚಂತಿ**—(ತಮ್ಮ ಆಯುಧಗಳಿಂದ) ಚುಚ್ಚುತ್ತಾರೆ

॥ ಭಾವಾರ್ಥ ॥

ಅಗ್ನಿಯು ಕ್ಷೀರದಂತೆ ಸಾರವತ್ತಾದ ವೃಷ್ಟ್ಯುದಕದಿಂದ ಪ್ರಪಂಚವನ್ನೆಲ್ಲಾ ಸ್ನಾನಪಾನಾದಿಗಳಿಂದ ತೃಪ್ತಿಪಡಿಸುತ್ತಿರುವಾಗ, ಅರ್ಯಮ, ಮಿತ್ರ, ವರುಣ ಮತ್ತು ಸರ್ವದಾ ಗತಿಶೀಲರಾದ ಮರುದ್ಗಣ, ಇವರುಗಳು ವೃಷ್ಟಿಯ ಉತ್ಪತ್ತಿಸ್ಥಾನವನ್ನು ಚುಚ್ಚಿ. (ಮಳೆ ಬೀಳುವಂತೆ ಮಾಡುತ್ತಾರೆ)

## English Translation

When this, (the lightning, Agni), nourishes the world with the milk of the rain, and conducts it by the most direct ways, to (the enjoyment of) water, then Mitra, Aryaman, Varuna, and the circumambient (troops of Maruts) pierce through the (investing) membrane into the womb of the cloud.

॥ ವಿಶೇಷವಿಷಯಗಳು ॥

**ಋತಸ್ಯ—ಅರ್ಣಃ ಕ್ಷೋದಃ ಮೊದಲಾದ ನೂರೊಂದು ಉದಕನಾಮಗಳ ಮಧ್ಯದಲ್ಲಿ ಋತಂ ಎಂಬ ಶಬ್ದವು ಪಠಿತವಾಗಿರುವುದರಿಂದ** ಋತಸ್ಯ ಎಂದರೆ ಉದಕದ ಎಂದರ್ಥವು (ನಿ. ೨-೨೪)

**ಪಯಸಾ**--**ಪಯಃ** ಎಂಬ ಶಬ್ದವು ಉದಕವೆಂದೂ ಕ್ಷೀರವೆಂದೂ ಅರ್ಥವಾಗುವುದು. ಇಲ್ಲಿ ಭಾಷ್ಯಕಾರರು ಕ್ಷೀರದಂತೆ (ಹಾಲಿನಂತೆ) ಸಾರಭೂತವಾದ ಉದಕದಿಂದ ಎಂದರ್ಥಮಾಡಿರುವರು

**ಪಿಯಾನಃ—ಸ್ಫಾಯಿೀ ಓಪ್ಯಾಯೀ ವೃದ್ಧೌ** । ಆಪ್ಯಾಯನವನ್ನುಂಟುಮಾಡುವ, ತೃಪ್ತಿಯನ್ನುಂಟುಮಾಡುವ.

**ನಯನ್ ಋತಸ್ಯ ಪಥಿಭಿಃ ರಜಿಷ್ಠೈಃ**—ನೀರಿನಿಂದ ಸಹಜವಾಗಿ ಆಗಬೇಕಾದ ಸ್ನಾನ, ಪಾನ, ಮೊದಲಾದ ವಿಧವಿಧ ಮಾರ್ಗಗಳಿಂದ ಜಗತ್ತಿಗೆ ಅನುಕೂಲವನ್ನುಂಟುಮಾಡುತ್ತಾ ಎಂದಭಿಪ್ರಾಯವು

**ಉಪರಸ್ಯ—ಅದ್ರಿಃ ಗ್ರಾವಾ** ಮೊದಲಾದ ಮೂವತ್ತು ಮೇಘನಾಮಗಳ ಮಧ್ಯದಲ್ಲಿ ಉಪರಃ ಎಂಬ ಶಬ್ದವು ಪಠಿತವಾಗಿರುವುದರಿಂದ ಉಪರಸ್ಯ ಎಂದರೆ ಮೇಘದ ಎಂದರ್ಥವು

**ತ್ವಚಂ**—ಚರ್ಮದ ಅಥವಾ ಮೇಘದ ಆವರಣವನ್ನು ಚುಚ್ಚಿ ಒಳಗಿರುವ ನೀರನ್ನು ಸುರಿಯುವಂತೆ ಮಾಡಿದರು

**ಅರ್ಯಮಾ, ಮಿತ್ರಃ, ವರುಣಃ, ಪರಿಜ್ಮಾ**—ಅರ್ಯಮ, ಮಿತ್ರ, ವರುಣ ಮತ್ತು ಮರುದ್ದೇವತೆಗಳು ಮೇಘದಲ್ಲಿರುವ ನೀರನ್ನು ಮುಚ್ಚಿರುವ ಆಚ್ಛಾದನವನ್ನು ಉದ್ಘಾಟನೆಮಾಡಿ ನೀರು ಭೂಮಿಯ ಮೇಲೆ ಬೀಳುವಂತೆ ಮಾಡಿದರು ಇಲ್ಲಿ ಅರ್ಯಮಾ ಮೊದಲಾದ ದೇವತೆಗಳು ಮೇಘದಿಂದ ನೀರನ್ನು ಹೊರಡಿಸುವಂತೆ ಮಾಡಿರುವುದಕ್ಕೆ ಯಾವ ಕಾರಣವನ್ನೂ ಹೇಳಿರುವುದಿಲ್ಲ

**ಪರಿಜ್ಮಾ— ಪರಿತೋ ಗಂತಾ** । ಎಲ್ಲೆಲ್ಲಿಯೂ ಸಂಚರಿಸುವ ವಾಯುವು ಎಂದರ್ಥವು

॥ ವ್ಯಾಕರಣಪ್ರಕ್ರಿಯಾ ॥

**ಪಿಯಾನಃ—**ಸ್ಫಾಯಿೀ **ಓಪ್ಯಾಯೀ ವೃದ್ಧೌ** ಧಾತು ಇದಕ್ಕೆ ಲಡರ್ಥದಲ್ಲಿ ಶಾನಚಾದೇಶ **ಬಹುಲಂ-ಛಂದಸಿ** ಎಂಬ ದರಿಂದ ಪ್ರಾಪ್ತವಾದ ಶಪಿಗೆ ಲುಕ್. **ವ್ಯತ್ಯಯೋ ಬಹುಲಮ್** ಸೂತ್ರದಿಂದ ಧಾತುವಿಗೆ ಪೀ ಭಾವ ಪೀ+ಆನ ಎಂದಿರುವಾಗ **ಅಚಿಶ್ನುಧಾತು ಭ್ರುವಾಮ್**—ಎಂಬುದರಿಂದ ಧಾತುವಿನ ಇಕಾರಕ್ಕೆ ಇಯಙಾದೇಶ ಪಿಯಾನ ಎಂದು ರೂಪವಾಗುತ್ತದೆ ಧಾತುವು ಅನುದಾತ್ತವಾಗಿ ಇದರ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ **ತಾಸ್ಯನುದಾತ್ತೇತ್**—(ಪಾ ಸೂ ೬-೧-೧೮೬) ಎಂಬುದರಿಂದ ಅನುದಾತ್ತವಾಗುತ್ತದೆ ಆಗ ಧಾತುಸ್ವರ ಉಳಿಯುತ್ತದೆ.

**ನಯನ್—**ಣೀಞ್ ಪ್ರಾಪಣೇ ಧಾತು ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. **ಆಯಾದೇಶ** ಇದಕ್ಕೆ ಸು ಪರವಾದಾಗ ಉಗಿತ್ತಾದುದರಿಂದ ನುಮಾಗಮ **ಹಲ್ ಙ್ಯಾಭ್ಯೋ—**ಸೂತ್ರದಿಂದ ಸುಲೋಪ ಸಂಯೋಗಾಂತಲೋಪದಿಂದ **ತಕಾರಲೋಪ** ಇಲ್ಲಿ ಅದುಪದೇಶದ ಪರದಲ್ಲಿರುವುದರಿಂದ ಹಿಂದಿನಂತೇ ಲಸಾರ್ವಧಾತುಕವು ಅನುದಾತ್ತವಾಗುತ್ತದೆ ಆಗ ಧಾತುಸ್ವರ ಉಳಿಯುತ್ತದೆ

**ರಜಿಷ್ಠೈಃ—**ಅತಿಶಯೇನ ಋಜವಃ ರಜಿಷ್ಠಾಃ ಋಜುಶಬ್ದದ ಮೇಲೆ ಅತಿಶಯಾರ್ಥ ತೋರುವಾಗ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ ೫-೩-೫೫) ಎಂಬುದರಿಂದ ಇಷ್ಠನ್ ಪ್ರತ್ಯಯ ಇದು ಪರವಾದಾಗ **ವಿಭಾಷರ್ಜೋಶ್ಛಂದಸಿ** (ಪಾ ಸೂ ೬-೪-೧೬೨) ಎಂಬುದರಿಂದ ಋಜು ಶಬ್ದದ ಋಕಾರಕ್ಕೆ ರತ್ವ **ಟೇಃ** (ಪಾ ಸೂ ೬-೪-೧೫೫) ಎಂಬುದರಿಂದ **ಟಿಗೆ ಲೋಪ** (ಉಕಾರ) **ರಜಿಷ್ಠ** ಎಂದು ರೂಪವಾಗುತ್ತದೆ ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತವಾಗುತ್ತದೆ ತೃತೀಯಾ ಬಹುವಚನಾಂತರೂಪ

**ಪರಿಜ್ಮಾ**—ಪರಿ ಜಾಯತೇ ಇತಿ ಪರಿಜ್ಮಾ, ಜನೀ ಪ್ರಾದುರ್ಭಾವೇ ಧಾತು. **ಶ್ವನ್ನುಕ್ಷನ್** - (ಉ. ಸೂ. ೧-೧೫೭) ಎಂಬುದರಿಂದ ಈ ಧಾತುವಿಗೆ ಪರಿ ಉಪಸರ್ಗ ಪೂರ್ವದಲ್ಲಿರುವಾಗ ಉಪಧಾಲೋಪವೂ ಮಕಾರಾಂತಾ ದೇಶವೂ ಕನಿ ಪ್ರತ್ಯಯವೂ ಬಂದು ನಿಪಾತಿತವಾಗಿದೆ. ಪ್ರಥಮಾ ಏಕವಚನಾಂತರೂಪ

**ಪೃಞ್ಚಂತಿ**—ಪೃಚೀ ಸಂಪರ್ಕೇ ಧಾತು.- ರುಧಾದಿ ಲಟ್ ಪ್ರಥಮಪುರುಷ ಬಹುವಚನದಲ್ಲಿ **ಝೋಽಂತಃ** ಎಂಬುದರಿಂದ ಅಂತಾದೇಶ. **ರುಧಾದಿಭ್ಯಃ ಶ್ನಮ್** ಎಂಬುದರಿಂದ ಶ್ನಮ್ ವಿಕರಣ. **ಮಿದಚೋಽಂತ್ಯಾತ್ಪರಃ** ಪರಿಭಾಷೆಯಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. **ನಶ್ಚಾಪದಾಂತಸ್ಯ ಝಲಿ** ಸೂತ್ರದಿಂದ ಅದಕ್ಕೆ ಅನುಸ್ವಾರ. **ಅನುಸ್ವಾರಸ್ಯಯಯಿ ಪರಸವರ್ಣಃ** ಸೂತ್ರದಿಂದ ಪರಸವರ್ಣ ಅತಿಜಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ ॥ ೩ ॥



। ಸಂಹಿತಾಪಾಠಃ ॥

ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।
ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥ ೪ ॥

॥ ಪದಪಾಠಃ ॥

ಅಗ್ನೇ । ವಾಜಸ್ಯ । ಗೋऽಮತಃ । ಈಶಾನಃ । ಸಹಸಃ । ಯಹೋ ಇತಿ ।
ಅಸ್ಮೇ ಇತಿ । ಧೇಹಿ । ಜಾತऽವೇದಃ । ಮಹಿ । ಶ್ರವಃ ॥ ೪ ॥

|| ಸಾಯಣಭಾಷ್ಯಂ ||

**ಪ್ರಾತರನುವಾಕಸ್ಯಾಗ್ನೇಯೇ ಕ್ರತಾವೌಷ್ಣಿಹೇ ಛಂದಸ್ಯಾಶ್ವಿನಶಸ್ತ್ರೇ ಚಾಗ್ನೇ ವಾಜಸ್ಯೇತ್ಯಾದ್ಯಾಸ್ತಿಸ್ರ ಋಚಃ । ಸೂತ್ರಿತಂ ಚ । ಅಗ್ನೇ ವಾಜಸ್ಯೇತಿ ತಿಸ್ರಃ ಪುರು ತ್ವಾ ತ್ವಾಮಗ್ನೇ । ಆ. ೪-೧೩ । ಇತಿ ॥**

**ಹೇ ಸಹಸೋ ಯಹೋ ಬಲಸ್ಯ ಪುತ್ರಾಗ್ನೇ ಗೋಮತೋ ಬಹುಭಿರ್ಗೋಭಿರ್ಯುಕ್ತಸ್ಯ ವಾಜಸ್ಯಾನ್ನಸ್ಯೇಶಾನ ಈಶ್ವರಸ್ತ್ವಮಸಿ । ಅತೋಽಸ್ಮೇ ಅಸ್ಮಾಸು ಹೇ ಜಾತವೇದೋ ಜಾತಧನ ಜಾತಾನಾಂ ವೇದಿತರ್ವಾಗ್ನೇ ಮಹಿ ಪ್ರಭೂತಂ ಶ್ರವೋಽನ್ನಂ ಧೇಹಿ । ಸ್ಥಾಪಯ ॥ ಸಹಸೋ ಯಹೋ । ಪರಾಂಗವದ್ಭಾವಾದಾಮಂತ್ರಿತಸ್ಯ ಚೇತಿ ಷಷ್ಠ್ಯಾಮಂತ್ರಿತಸಮುದಾಯೋ ನಿಹನ್ಯತೇ । ಅಸ್ಮೇ । ಸುಪಾಂ ಸುಲುಗಿತಿ ಸಪ್ತಮ್ಯಾಃ ಶೇಆದೇಶಃ ॥**

॥ ಪ್ರತಿಪದಾರ್ಥ ॥

**ಸಹಸೋ ಯಹೋ**—ಬಲದ ಪುತ್ರನಾದ । **ಅಗ್ನೇ**—ಎಲೈ ಅಗ್ನಿಯೇ (ನೀನು) । **ಗೋಮತಃ**—(ಅನೇಕ) ಗೋವುಗಳಿಂದ ಯುಕ್ತವಾದ । **ವಾಜಸ್ಯ**—ಅನ್ನಕ್ಕೆ । **ಈಶಾನಃ**—ಸ್ವಾಮಿಯು । **ಜಾತವೇದಃ**—ಜಾತಧನನಾದ (ಸರ್ವವನ್ನು ತಿಳಿದ ಎಲೈ ಅಗ್ನಿಯೇ) । **ಮಹಿ**—ಹೆಚ್ಚಾದ । **ಶ್ರವಃ**—ಅನ್ನವನ್ನು । **ಧೇಹಿ**—(ನಮ್ಮಲ್ಲಿ) ಸ್ಥಾಪಿಸು (ಕೊಡು)

॥ ಭಾವಾರ್ಥ ॥

ಬಲಪ್ರಯೋಗದಿಂದ ಜನಿಸಿದವನಾದ್ದರಿಂದ ಬಲದ ಪುತ್ರನೆಂದು ಪ್ರಸಿದ್ಧನಾದ ಎಲೈ ಅಗ್ನಿಯೇ, ನೀನು ಗೋವುಗಳಿಗೂ, ಅನ್ನಾದ್ಯಾಹಾರಗಳಿಗೂ ಸ್ವಾಮಿಯು ನೀನು ಸರ್ವವನ್ನೂ ತಿಳಿದವನು ನಮಗೆ ಬಹಳವಾಗಿ ಅನ್ನವನ್ನು ಕೊಡು

## English Translation

Agni, son of strength, lord of food and of cattle, give us abundant sustenance ; you know all that exist

॥ ವಿಶೇಷವಿಷಯಗಳು ॥

ಪ್ರಾತರನುವಾಕ ಮಂತ್ರಪಠನಕಾಲದಲ್ಲಿ ಆಗ್ನೇಯಕ್ರತು ಸಂಬಂಧವಾದ ಉಷ್ಣಿಕ್ ಛಂದಸ್ಸಿನ ಋಕ್ಕುಗಳಿಗಾಗಿಯೂ, ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ **ಅಗ್ನೇ ವಾಜಸ್ಯ** ಎಂದು ಮೊದಲಾದ ಮೂರು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಅಗ್ನೇ ವಾಜಸ್ಯೇತಿ ತಿಸ್ರಃ ಪುರು ತ್ವಾ ತ್ವಾಮಗ್ನೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ ೪-೧೩).

**ಸಹಸೋ ಯಹೋ**—ಸಹಸ್ ಶಬ್ದಕ್ಕೆ ಬಲವೆಂದರ್ಥವು (ನಿ. ೩-೯) ಯಹು ವೆಂದರೆ ಪುತ್ರನು. (ನಿ ೩-೨) ಆದುದರಿಂದ ಸಹಸೋ ಯಹೋ-ಬಲದ ಪುತ್ರನು, ಎಂದರೆ ಬಲಪ್ರಯೋಗಮಾಡಿ ಅರಣಿಗಳಲ್ಲಿ ಕಡೆಯುವುದರಿಂದ ಅಗ್ನಿಯು ಉತ್ಪನ್ನನಾಗುವುದರಿಂದ ಅಗ್ನಿಯನ್ನು ಸಹಸೋ ಯಹೋ, ಸಹಸಸ್ಪುತ್ರ, ಸಹಸಃ ಸೂನೋ ಎಂಬ ಸಂಬೋಧನೆಗಳಿಂದ ಕರೆಯುವುದು ರೂಢಿಯಾಗಿದೆ

**ವಾಜಸ್ಯ ಗೋಮತಃ—ಬಹುಭಿರ್ಗೋಭಿರ್ಯುಕ್ತಸ್ಯಾನ್ನಸ್ಯ ।** ವಾಜವೆ ದರೆ ಅನ್ನವು (ನಿ. ೩-೯). ಗೋವುಗಳಿಂದ ಯುಕ್ತವಾದ ಅನ್ನ ಎಂದರೆ ಗೋವುಗಳಿಗೂ ಅನ್ನಕ್ಕೂ (ಸ್ವಾಮಿ) ಯೆಂದಭಿಪ್ರಾಯವು

**ಅಸ್ಮೇ ಧೇಹಿ—ಅಸ್ಮಾಸು ಸ್ಥಾಪಯ ।** ನಮ್ಮಲ್ಲಿ ಸ್ಥಾಪಿಸು ಎಂದರೆ ನಮಗೆ ಕೊಡು ಎಂದಭಿಪ್ರಾಯವು. ಅಸ್ಮೇ ಎಂಬ ಶಬ್ದವು ಋಗ್ವೇದದಲ್ಲಿ ಅಸ್ಮಚ್ಛಬ್ದದ ಎಲ್ಲಾ ವಿಭಕ್ತ್ಯರ್ಥಗಳಲ್ಲಿಯೂ ಉಪಯೋಗಿಸಲ್ಪಡುವುದು ಈ ವಿಷಯದಲ್ಲಿ ಯಾಸ್ಕರು (ನಿ. ೬-೭) ಈ ರೀ ವಿವರಿಸಿರುವರು—

**(೧) ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ।**

**ಅಸ್ಮೇ ಇತ್ಯೇತತ್ಪದಂ ಸರ್ವವಿಭಕ್ತ್ಯಂತಂ । ತಸ್ಮಾದನೇಕಾರ್ಥಂ । ಏಕಮೇವ ಹ್ಯೇತಚ್ಛಬ್ದರೂಪಂ ಸಪ್ತಸ್ವಪಿ ವಿಭಕ್ತ್ಯರ್ಥೇಷು ವರ್ತತೇ । ಪ್ರಕರಣಾದಿವಶಾತ್ ತಸ್ಯ ನಿಯಮೋ ಭವತಿ । ತದ್ಯಥಾ—ಪ್ರಥಮಾಯಾಸ್ತಾವತ್—ಅಸ್ಮೇ ತೇ ಬಂಧುಃ । ವಯಮಿತ್ಯರ್ಥಃ ॥** ಎಂದರೆ ಅಸ್ಮೇ ಎಂಬ ಶಬ್ದವು ಏಳು ವಿಭಕ್ತಿಗಳ ಅರ್ಥದಲ್ಲಿಯೂ ಸಂದರ್ಭಾನುಸಾರವಾಗಿ ಉಪಯೋಗಿಸಲ್ಪಡುವುದು ಎಂದರೆ ಆಯಾ ಪ್ರಕರಣಾನುಸಾರವಾಗಿ ಈ ಶಬ್ದಕ್ಕೆ ಏಳು ವಿಭಕ್ತಿಗಳಲ್ಲಿ ಯಾವ ವಿಭಕ್ತಿಯ ಅರ್ಥವನ್ನಾದರೂ ಹೇಳಬಹುದು ಹೇಗೆಂದರೆ- -**ಅಸ್ಮೇ ತೇ ಬಂಧುಃ** ಎಂಬ ವಾಕ್ಯದಲ್ಲಿ **ಅಸ್ಮೇ** ಎಂಬ ಶಬ್ದಕ್ಕೆ **ವಯಂ**—ನಾವು ಎಂಬರ್ಥವಿರುವುದು ಇದು ಪ್ರಥಮಾ ವಿಭಕ್ತಿಯ ಅರ್ಥಕ್ಕೆ ಉದಾಹರಣೆಯು.

**(೨) ಅಸ್ಮೇ ಯಾತಂ ನಾಸತ್ಯಾ ಸಜೋಷಾಃ । ಅಸ್ಮಾನಿತ್ಯರ್ಥಃ ॥**
**ದ್ವಿತೀಯಾಸ್ತಾವತ್**—ಅಸ್ಮೇಎಂಬ ಶಬ್ದಕ್ಕೆ ದ್ವಿತೀಯಾ ವಿಭಕ್ತಿಯಾದ ಅಸ್ಮಾನ್-ನಮ್ಮನ್ನು ಎಂದು ಅರ್ಥವು. ಈ ಅರ್ಥದ ಉದಾಹರಣೆಗಾಗಿ—

**ಆ ಶ್ಯೇನಸ್ಯ ಜವಸಾ ನೂತನೇನಾಸ್ಮೇ ಯಾತಂ ನಾಸತ್ಯಾ ಸಜೋಷಾಃ ।**
**ಹವೇ ಹಿ ವಾಮಶ್ವಿನಾ ರಾತಹವ್ಯಃ ಶಶ್ವತ್ತಮಾಯಾ ಉಷಸೋ ವ್ಯುಷ್ಟೌ ।**

(ಋ. ಸಂ ೧-೧೧೮-೧೧)

ಎಂಬ ಋಕ್ಕನ್ನು ಕೊಟ್ಟಿರುವರು ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾನ್-ನಮ್ಮನ್ನು ಎಂದರ್ಥವು

**(೩) ಅಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ । ಅಸ್ಮಾಭಿರಿತ್ಯರ್ಥಃ ॥**
**ತೃತೀಯಾಸ್ತಾವತ್**— ಇಲ್ಲಿ ಅಸ್ಮೇ ಎಂದರೆ ಅಸ್ಮಾಭಿಃ-ನಮ್ಮಿಂದ ಎಂದು ತೃತೀಯಾವಿಭಕ್ತ್ಯರ್ಥವು ಈ ವಿಷಯದಲ್ಲಿ--

**ಭೂರಿ ಚಕರ್ಥ ಯುಜ್ಯೇಭಿರಸ್ಮೇ ಸಮಾನೇಭಿರ್ವೃಷಭ ಪೌಂಸ್ಯೇಭಿಃ ।**
**ಭೂರೀಣಿ ಹಿ ಕೃಣವಾಮಾ ಶವಿಷ್ಠೇಂದ್ರ ಕ್ರತ್ವಾ ಮರುತೋ ಯದ್ವಶಾಮ ॥**

(ಋ ಸಂ ೧-೧೬೫-೭)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿರುವರು. ಇಲ್ಲಿ ಅಸ್ಮೇ ಎಂದರೆ ಅಸ್ಮಾಭಿಃ-ನಮ್ಮಿಂದ ಎಂದರ್ಥವು

(೪) **ಅಸ್ಮೇ ಪ್ರಯಂಧಿ ಮಘವನ್ನೃಜೀಷಿನ್ । ಅಸ್ಮಭ್ಯಮಿತ್ಯರ್ಥಃ ॥**

**ಚತುರ್ಥ್ಯಾಃಸ್ಥಾನೇ**- ಇಲ್ಲಿ ಅಸ್ಮೇ ಎಂದರೆ ಅಸ್ಮಭ್ಯಂ ನಮಗಾಗಿ ಎಂದು ಚತುರ್ಥೀವಿಭಕ್ತ್ಯರ್ಥವು ಉದಾಹರಣೆ-

**ಅಸ್ಮೇ ಪ್ರ ಯಂಧಿ ಮಘವನ್ನೃಜೀಷಿನ್ನಿಂದ್ರ ರಾಯೋ ವಿಶ್ವವಾರಸ್ಯ ಭೂರೇಃ ।**
**ಅಸ್ಮೇ ಶತಂ ಶರದೋ ಜೀವಸೇ ಧಾ ಅಸ್ಮೇ ವೀರಾಞ್ಛಶ್ವತ ಇಂದ್ರ ಶಿಪ್ರಿನ್ ॥**

(ಋ ಸಂ ೩-೩೬-೧೦)

ಎಂಬ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಗಳಿಗೆ ಅಸ್ಮಭ್ಯಂ-ನಮಗಾಗಿ ಎಂದು ಚತುರ್ಥೀ ವಿಭಕ್ತ್ಯರ್ಥವು

(೫) **ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು । ಅಸ್ಮದಿತ್ಯರ್ಥಃ ।**

**ಪಂಚಮ್ಯಾಸ್ಥಾನೇ**— ಇಲ್ಲಿ ಅಸ್ಮೇ ಎಂದರೆ ಅಸ್ಮತ್-ನಮ್ಮ ದೆಶೆಯಿಂದ ಎಂದರ್ಥವು ಉದಾಹರಣೆ—

**ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ।**
**ಸ ಸುತ್ರಾಮಾ ಸ್ವವಾँ ಇಂದ್ರೋ ಅಸ್ಮೇ ಆರಾಚ್ಚಿದ್ದ್ವೇಷಃ ಸನುತರ್ಯುಯೋತು ।**

(ಋ ಸಂ ೬-೪೭-೧೩)

ಎಂಬ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮತ್ ನಮ್ಮ ದೆಶೆಯಿಂದ ಎಂದು ಪಂಚಮೀವಿಭಕ್ತ್ಯರ್ಥವು

(೬) **ಊರ್ವ ಇವ ಪಪ್ರಥೇ ಕಾಮೋ ಅಸ್ಮೇ । ಅಸ್ಮಾಕಮಿತ್ಯರ್ಥಃ ।**

**ಷಷ್ಠ್ಯಾಃಸ್ಥಾನೇ** -ಇಲ್ಲಿ ಅಸ್ಮೇ ಎಂದರೆ ಅಸ್ಮಾಕಂ-ನಮಗೆ ಎಂದರ್ಥವು, ಈ ಅರ್ಥವಿವರಣೆಗಾಗಿ—

**ಆ ನೋ ಭರ ಭಗಮಿಂದ್ರ ದ್ಯುಮಂತಂ ನಿ ತೇ ದೇಷ್ಣಸ್ಯ ಧೀಮಹಿ ಪ್ರರೇಕೇ ।**
**ಊರ್ವ ಇವ ಪಪ್ರಥೇ ಕಾಮೋ ಅಸ್ಮೇ ತಮಾ ಪೃಣ ವಸುಪತೇ ವಸೂನಾಂ ॥**

(ಋ ಸಂ ೩-೩೦-೧೯)

ಈ ಋಕ್ಕಿನಲ್ಲಿರುವ ಅಸ್ಮೇ ಎಂಬ ಶಬ್ದಕ್ಕೆ ಅಸ್ಮಾಕಂ-ನಮ್ಮ ನಮಗೆ ಎಂದು ಷಷ್ಠೀವಿಭಕ್ತ್ಯರ್ಥವು

(೭) **ಅಸ್ಮೇ ಧತ್ತ ವಸವೋ ವಸೂನಿ । ಅಸ್ಮಾಸ್ವಿತ್ಯರ್ಥಃ ॥**

**ಸಪ್ತಮ್ಯಾಸ್ಥಾನೇ**—ಇಲ್ಲಿ ಅಸ್ಮೇ ಎಂದರೆ ನಮ್ಮಲ್ಲಿ ಎಂದರ್ಥವು ಉದಾಹರಣೆ—

**ಅಗ್ನೇ ವಾಜಸ್ಯ ಗೋಮತ ಈಶಾನಃ ಸಹಸೋ ಯಹೋ ।**
**ಅಸ್ಮೇ ಧೇಹಿ ಜಾತವೇದೋ ಮಹಿ ಶ್ರವಃ ॥**

(ಋ ಸಂ ೧-೭೯-೪)

ಈ ಋಕ್ಕಿನಲ್ಲಿರುವ ಅಸ್ಮೇ-ಎಂಬ ಶಬ್ದಕ್ಕೆ ಅಸ್ಮಾಸು-ನಮ್ಮಲ್ಲಿ ಎಂದು ಸಪ್ತಮೀವಿಭಕ್ತ್ಯರ್ಥವು

॥ ವ್ಯಾಕರಣಪ್ರಕ್ರಿಯಾ ॥

**ಗೋಮತಃ**— ಗಾವಃ ಅಸ್ಯ ಅಸ್ತಿ ಗೋಮಾನ್ ತಸ್ಯ. **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** ಎಂಬುದರಿಂದ ಮತುಪ್ ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ ಷಷ್ಠೀ ಏಕವಚನಾಂತರೂಪ.

**ಸಹಸೋ ಯಹೋ—**ಸಂಬುದ್ಧಿರೂಪವಾದುದರಿಂದ ಆಮಂತ್ರಿತಸಂಜ್ಞೆಯನ್ನು ಹೊಂದುತ್ತದೆ. **ಯಹೋ** ಎಂಬುದರ ಹಿಂದೆ **ಸಹಸೋ** ಎಂದಿರುವುದರಿಂದ **ಸುಬಾಮಂತ್ರಿತೇ ಪರಾಂಗವತ್ ಸ್ವರೇ** ಎಂಬುದರಿಂದ ಅದಕ್ಕೆ ಪರಾವಯವತ್ವವು ಬರುತ್ತದೆ. ಆಗ ಷಷ್ಠ್ಯಂತದಿಂದ ಕೂಡಿರುವ ಆ ಸಮುದಾಯಕ್ಕೆ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ

**ಅಸ್ಮೇ—**ಅಸ್ಮದ್ ಶಬ್ದ ಇದಕ್ಕೆ ಸಪ್ತಮೀ ಬಹುವಚನ (ಸುಪ್) ಪರವಾದಾಗ **ಸುಪಾಂ ಸುಲುಕ್** (ಪಾ. ಸೂ. ೭-೧-೩೯) ಎಂಬುದರಿಂದ ವಿಭಕ್ತಿಗೆ ಶೇ ಆದೇಶ. ಶಿತ್ತಾದುದರಿಂದ ಸರ್ವಾದೇಶವಾಗಿ ಬರುತ್ತದೆ. **ಶೇಷೇ ಲೋಪಃ** ಎಂಬುದರಿಂದ ಅಸ್ಮದ್ ಎಂಬಲ್ಲಿರುವ ಮಪರ್ಯಂತದ ಪರದಲ್ಲಿರುವ ಅದ್ ಎಂಬುದಕ್ಕೆ ಲೋಪ ಅಸ್ಮೇ ಎಂದು ರೂಪವಾಗುತ್ತದೆ

**ಧೇಹಿ—**ಡುಧಾಞ್ ಧಾರಣಪೋಷಣಯೋಃ ಧಾತು ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ಪಿಗೆ ಹಿ ಆದೇಶ. **ಜುಹೋತ್ಯಾದಿಭ್ಯಃ ಶ್ಲುಃ** ಎಂಬುದರಿಂದ ಶ್ಲು ವಿಕರಣ. **ಶ್ಲೌ** ಸೂತ್ರದಿಂದ ಧಾತುವಿಗೆ ದ್ವಿತ್ವ ಆಗ **ಘ್ವಸೋರೇದ್ಧಾವಭ್ಯಾಸಲೋಪಶ್ಚ** (ಪಾ ಸೂ. ೬-೪-೧೧೯) ಎಂಬುದರಿಂದ ಅಭ್ಯಾಸಲೋಪವೂ ಧಾತುವಿಗೆ ಏತ್ವವೂ ಬರುತ್ತವೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಶ್ರವಃ**—ಶ್ರು ಶ್ರವಣೇ ಧಾತು. **ಸರ್ವಧಾತುಭ್ಯ ಅಸುನ್** (ಉ. ಸೂ. ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ ಅವಾದೇಶ **ಞ್ನಿತ್ಯಾದಿರ್ನಿತ್ಯಮ್** (ಪಾ ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ



॥ ಸಂಹಿತಾಪಾಠಃ ॥

ಸ ಇಧಾನೋ ವಸುಷ್ಕವಿರಗ್ನಿರೀಳೇನ್ಯೋ ಗಿರಾ ।
ರೇವದಸ್ಮಭ್ಯಂ ಪುರ್ವಣೀಕ ದೀದಿಹಿ ॥ ೫ ॥

॥ ಪದಪಾಠಃ ॥

ಸಃ । ಇಧಾನಃ । ವಸುಃ । ಕವಿಃ । ಅಗ್ನಿಃ । ಈಳೇನ್ಯಃ । ಗಿರಾ ।
ರೇವತ್ । ಅಸ್ಮಭ್ಯಂ । ಪುರುऽಅನೀಕ । ದೀದಿಹಿ ॥ ೫ ॥

॥ ಸಾಯಣಭಾಷ್ಯಂ ॥

ಸೋಽಗ್ನಿರಿಧಾನೋ ದೀಪನಶೀಲೋ ವಸುರ್ನಿವಾಸಯಿತಾ ಸರ್ವೇಷಾಂ ಕವಿಃ ಕ್ರಾಂತದರ್ಶನೋ ಮೇಧಾವೀ ವಾ ಗಿರಾ ಸ್ತೋತ್ರರೂಪಯಾ ವಾಚೇಳೇನ್ಯಃ ಸ್ತೋತವ್ಯೋ ಭವತಿ । ಹೇ ಪುರ್ವಣೀಕ । ಅನೀಕಂ ಮುಖಂ । ಪುರುಭಿರ್ಬಹ್ವೀಭಿರನೀಕಸ್ಥಾನೀಯಾಭಿರ್ಜ್ವಾಲಾಭಿರ್ಯುಕ್ತಾಗ್ನೇ ಅಸ್ಮಭ್ಯಂ ರೇವದ್ಧನಯುಕ್ತಮನ್ನಂ ಯಥಾ ಭವತಿ ತಥಾ ದೀದಿಹಿ । ದೀಪ್ಯಸ್ವ ॥ ಇಧಾನಃ । ಞಿಇಂಧೀ ದೀಪ್ತೌ । ತಾಚ್ಛೀಲಿಕಶ್ಚಾನಶ್ । ಬಹುಲಂ ಛಂದಸೀತಿ ಶಪೋ ಲುಕ್ । ಈಳೇನ್ಯಃ । ಈಡ ಸ್ತುತೌ । ಔಣಾದಿಕ ಏನ್ಯಪ್ರತ್ಯಯಃ । ರೇವತ್ । ರಯೇರ್ಮತೌ ಬಹುಲಮಿತಿ ಸಂಪ್ರಸಾರಣಂ । ಛಂದಸೀರ ಇತಿ ಮತುಪೋ ವತ್ವಂ । ರೇಶಬ್ದಾಚ್ಚ ಮತುಪ ಉದಾತ್ತತ್ವಂ ವಕ್ತವ್ಯಂ । ಕಾ. ೬-೧ ೧೭೬-೧ । ಇತಿ ಮತುಪ ಉದಾತ್ತತ್ವಂ ॥ ದೀದಿಹಿ । ದೀದೇತಿಶ್ಛಾಂದಸೋ ದೀಪ್ತಿಕರ್ಮಾ ॥

॥ ಪ್ರತಿಪದಾರ್ಥ ॥

ಸಃ ಅಗ್ನಿಃ— ಆ ಅಗ್ನಿಯು । ಇಧಾನಃ—ಉರಿಯುವ ಸ್ವಭಾವವುಳ್ಳವನು । ವಸುಃ—ನಿವಾಸಸ್ಥಾನಗಳನ್ನು ಕಲ್ಪಿಸುವವನು । ಕವಿಃ—ಹಿಂದೆ ನಡೆದುದೆಲ್ಲವನ್ನು ತಿಳಿಯುವವನು (ಮೇಧಾವಿಯು) । ಗಿರಾ—(ಸ್ತುತಿರೂಪವಾದ) ವಾಕ್ಕುಗಳಿಂದ । ಈಳೇನ್ಯಃ—ಸ್ತುತಿಸಲ್ಪಡತಕ್ಕವನು । (ಹೇ) ಪುರ್ವಣೀಕ— ಅನೇಕ ಮುಖಗಳಂತಿರುವ ಜ್ವಾಲೆಗಳಿಂದ ಯುಕ್ತನಾದ ಎಲೈ ಅಗ್ನಿಯೇ । ಅಸ್ಮಭ್ಯಂ—ನಮಗೆ । ರೇವತ್ ಧನಯುಕ್ತವಾದ ಅನ್ನವುಂಟಾಗುವಂತೆ । ದೀದಿಹಿ—ಪ್ರಕಾಶಿಸು

॥ ಭಾವಾರ್ಥ ॥

ಸರ್ವಜ್ಞನೂ, ನಿವಾಸಗಳನ್ನು ಕಲ್ಪಿಸುವವನೂ, ಜ್ವಲನಸ್ವಭಾವವುಳ್ಳವನೂ ಆದ ಅಗ್ನಿಯು ಸ್ತುತಿಗಳಿಂದ ಸ್ತುತ್ಯನು. ಅನೇಕ ಜ್ವಾಲೆಗಳಿಂದ ದೀಪ್ತವಾದ ಮುಖವುಳ್ಳ ಎಲೈ ಅಗ್ನಿಯೇ, ನಮಗೆ (ವಿಶೇಷ) ದ್ರವ್ಯಯುಕ್ತವಾದ ಅನ್ನವುಂಟಾಗುವಂತೆ ದೀಪ್ತನಾಗು.

## English Translation

He, the blazing Agni, who is wise, and the granter of dwellings, is to be praised by our hymns : Oh ; you whose mouth (glows) with many (flames) shine (propitiouslv so) that food-providing wealth may be ours.

॥ ವಿಶೇಷವಿಷಯಗಳು ॥

**ಪುರ್ವಣೀಕ—ಅನೀಕಂ ಮುಖಂ । ಪುರುಭಿರ್ಬಹ್ವೀಭಿರನೀಕಸ್ಥಾನೀಯಾಭಿರ್ಜ್ವಾಲಾಭಿ-ರ್ಯುಕ್ತ ।** ಅನೀಕವೆಂದರೆ ಮುಖವು. ಪುರು ಎಂದರೆ ಅನೇಕ ಅನೇಕ ಮುಖಗಳಿಂದ ಎಂದರೆ ಮುಖಸ್ಥಾನೀಯವಾದ ಅನೇಕ ಜ್ವಾಲೆಗಳಿಂದ ಯುಕ್ತನಾದ ಅಗ್ನಿಯು. ಜನರು ಮುಖದಿಂದ (ಬಾಯಿಂದ) ಭಕ್ಷಿಸುವಂತೆ ಅಗ್ನಿಯು ತನ್ನ ಜ್ವಾಲೆಯಿಂದ ಎಲ್ಲವನ್ನೂ ಭಕ್ಷಿಸುವನು (ದಹಿಸುವನು). ಆದುದರಿಂದ ಜನರಿಗೆ ಮುಖವು (ಬಾಯಿಯು) ಹೇಗೋ ಅಗ್ನಿಗೆ ಜ್ವಾಲೆಯು ಹಾಗೆ. ಅಂತಹ ಅನೇಕ ಜ್ವಾಲೆಗಳುಳ್ಳವನಾದ್ದರಿಂದ ಅನೇಕ ಮುಖಗಳುಳ್ಳ ಅಗ್ನಿಯು ಎಂದು ಋಷಿಯು ಉಪಮಾರ್ಥದಿಂದ ಅಗ್ನಿಯನ್ನು ಸಂಬೋಧನೆ ಮಾಡಿರುವನು

**ಇಧಾನಃ, ಕವಿಃ, ವಸುಃ**—ಈ ಶಬ್ದಗಳು ಸಾಧಾರಣವಾಗಿ ಅಗ್ನಿಯನ್ನು ಸ್ತುತಿಸುವಾಗ ಉಪಯೋಗಿಸಲ್ಪಡುವವು.

**ರೇವತ್—ಧನಯುಕ್ತಮನ್ನಂ ।** ಧನಯುಕ್ತವಾದ ಅನ್ನವು ಎಂದರೆ ಧನವನ್ನೂ ಅನ್ನವನ್ನೂ ಕೊಡಬೇಕೆಂದು ಪ್ರಾರ್ಥನೆಯು.

**ದೀದಿಹಿ**—ಭ್ರಾಜತೇ, ಭ್ರಾಶತೇ ಮೊದಲಾದ ಹನ್ನೊಂದು ಜ್ವಲತಿಕರ್ಮಗಳನ್ನು ಸೂಚಿಸುವ ಶಬ್ದಗಳ ಮಧ್ಯದಲ್ಲಿ ದೀದಯತಿ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ ೨-೨೮) ದೀದಯತಿ ಎಂದರೆ ಪ್ರಕಾಶಿಸುತ್ತಾನೆಂದೂ ದೀದಿಹಿ ಎಂದರೆ ಪ್ರಕಾಶಿಸು ಎಂದೂ ಅರ್ಥವು

॥ ವ್ಯಾಕರಣಪ್ರಕ್ರಿಯಾ ॥

**ಇಧಾನಃ**—ಞಿ ಇಂಧೀ ದೀಪ್ತೌ ಧಾತು. ಇದಕ್ಕೆ ತಚ್ಛೀಲಾರ್ಥ ತೋರುವಾಗ **ತಾಚ್ಛೀಲ್ಯವಯೋ—** (ಪಾ. ಸೂ ೩-೨-೧೨೯) ಎಂಬುದರಿಂದ ಚಾನಶ್ ಪ್ರತ್ಯಯ ಶಿತ್ತಾದುದರಿಂದ **ಕರ್ತರಿ ಶಪ್** ಸೂತ್ರದಿಂದ ಶಪ್. ಅದಕ್ಕೆ **ಬಹುಲಂ ಛಂದಸಿ** ಎಂಬುದರಿಂದ ಲುಕ್. **ಸಾರ್ವಧಾತುಕಮಪಿತ್** (ಪಾ ಸೂ. ೧-೨-೪) ಎಂಬುದರಿಂದ

ಪ್ರತ್ಯಯಕ್ಕೆ ಜಿತ್ವ ಬರುವುದರಿಂದ **ಅನಿದಿತಾಂ ಹಲ ಉಪಧಾಯಾಃ ಕ್ಙಿತಿ** ಸೂತ್ರದಿಂದ ಉಪಧಾಲೋಪ ಪ್ರತ್ಯಯವು **ಚಿತ್ತಾದುದರಿಂದ ಚಿತಃ** (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತವಾಗುತ್ತದೆ

**ಈಳೇನ್ಯಃ**—ಈಡ ಸ್ತುತೌ ಧಾತು. ಇದಕ್ಕೆ ಔಣಾದಿಕವಾದ ಏನ್ಯ ಪ್ರತ್ಯಯ. **ಈಳೇನ್ಯಃ** ಎಂದು ರೂಪ ವಾಗುತ್ತದೆ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಗಿರಾ**—ಗಿರ್ ಶಬ್ದ ತೃತೀಯಾ ಏಕವಚನಾಂತರೂಪ **ಸಾವೇಕಾಚಸ್ತೃತೀಯಾದಿಃ** (ಪಾ ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ರೇವತ್**—ರಯಿ ಎಂಬುದು ಧನವಾಚಕ ಶಬ್ದ. **ರಯಿಃ ಅಸ್ಯ ಅಸ್ತಿ** ಎಂದು ಅರ್ಥ ವಿವಕ್ಷಾಮಾಡಿದಾಗ **ತದಸ್ಯಾಸ್ತಿ**—ಸೂತ್ರದಿಂದ ಮತುಪ್ ಪ್ರತ್ಯಯ. **ರಯೇರ್ಮತೌ ಬಹುಲಂ** ಎಂಬ ವಚನದಿಂದ **ರಯಿ** ಎಂಬಲ್ಲಿ ಸಂಪ್ರಸಾರಣ. ಸಂಪ್ರಸಾರಣವನ್ನು ಹೊಂದುವುದು ಇಲ್ಲಿ ಎರಡು ವರ್ಣವಿರುವುದರಿಂದ **ನ ಸಂಪ್ರಸಾರಣೇ ಸಂಪ್ರಸಾರಣಂ** ಎಂಬುದರಿಂದ ಪೂರ್ವಕ್ಕೆ ನಿಷೇಧ. **ಇಗ್ಯಣಃ ಸಂಪ್ರಸಾರಣಂ** ಎಂಬುದರಿಂದ ಯಕಾರಕ್ಕೆ ಇಕಾರ ರೂಪ ಸಂಪ್ರಸಾರಣ ಬಂದಾಗ **ಸಂಪ್ರಸಾರಣಾಚ್ಚ** ಸೂತ್ರದಿಂದ ಪೂರ್ವರೂಪ ಅಕಾರದ ಪರದಲ್ಲಿ ಇಕಾರ ಬಂದುದರಿಂದ **ಆದ್ಗುಣಃ** ಎಂಬುದರಿಂದ ಗುಣ. **ಛಂದಸೀರಃ** (ಪಾ. ಸೂ ೮-೨-೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವಕಾರಾದೇಶ ರೇವತ್ ಶಬ್ದವಾಗುತ್ತದೆ ಮತುಪ್ ಪಿತ್ತಾದುದರಿಂದ ಅನುದಾತ್ತಸ್ವರವು ಪ್ರಾಪ್ತವಾದರ **ರೇ ಶಬ್ದಾಚ್ಚ ಮತುಪ ಉದಾತ್ತತ್ವಂ ವಕ್ತವ್ಯಂ** (ಕಾ. ೬-೧-೧೭೬-೧) ಎಂಬ ವಚನದಿಂದ ಅದಕ್ಕೆ ಉದಾತ್ತ ಸ್ವರ ಬರುತ್ತದೆ

**ದೀದಿಹಿ**—ದೀದೀ ದೀಪ್ತಿದೇವನಯೋಃ ಧಾತು ಇದು ಕೇವಲ ಛಾಂದಸವಾದ ಧಾತು ದೀದೀಙ್ ಎಂದು ಅದಾದಿಯಲ್ಲಿ ಪಠಿತವಾಗಿದೆ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ಪಿಗೆ ಹಿ ಆದೇಶ ಅದಕ್ಕೆ ಅಪಿತ್ತ್ವವನ್ನು ಹೇಳಿರುವುದರಿಂದ ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ ಬರುವುದಿಲ್ಲ ಅತಿಙಂತದ ಪರದಲ್ಲಿರುವುದ ರಿಂದ ನಿಘಾತಸ್ವರ ಬರುತ್ತದೆ. ॥ ೫ ॥



1 ಸಂಹಿತಾಪಾಠಃ ।

ಕ್ಷಪೋ ರಾಜನ್ನುತ ತ್ಮನಾಗ್ನೇ ವಸ್ತೋರುತೋಷಸಃ ।

ಸ ತಿಗ್ಮಜಂಭ ರಕ್ಷಸೋ ದಹ ಪ್ರತಿ ॥ ೬ ॥

॥ ಪದಪಾಠಃ ॥

ಕ್ಷಪಃ । ರಾಜನ್ । ಉತ । ತ್ಮನಾ । ಅಗ್ನೇ । ವಸ್ತೋಃ । ಉತ । ಉಷಸಃ ।
ಸಃ । ತಿಗ್ಮಽಜಂಭ । ರಕ್ಷಸಃ । ದಹ । ಪ್ರತಿ ॥ ೬ ॥

॥ ಸಾಯಣಭಾಷ್ಯಂ ॥

ಹೇ ರಾಜನ್ ರಾಜನಶೀಲಾಗ್ನೇ ಕ್ಷಪಃ। ಕ್ಷಪಯ। ರಾಕ್ಷಸಾದೀನ್ ಸ್ವಕೀಯೈಃ ಪುರುಷೈರ್ಬಾಧಸ್ವ। ಉತಾಪಿ ಚ ತ್ಮನಾ ನ ಕೇವಲಮನ್ಯೈರೇವಾತ್ಮನಾ ಚ ಶಾನ್ಬಾಧಸ್ವ। ಕದೇತಿ ಚೇತ್ ಉಚ್ಯತೇ। ವಸ್ತೋಃ ಸರ್ವಾಣ್ಯಹಾನಿ ಉತಾಪಿ ಚೋಷಸ ಉಷಃಕಾಲೋಪಲಕ್ಷಿತಾ ರಾತ್ರೀಃ। ಅತ್ಯಂತಸಂಯೋಗೇ ದ್ವಿತೀಯಾ। ಸರ್ವೇಷ್ವಹಃಸು ಸರ್ವಾಸು ರಾತ್ರಿಷು ಚೇತ್ಯರ್ಥಃ। ಹೇ ತಿಗ್ಮಜಂಭ ತೀಕ್ಷ್ಣಮುಖಾಗ್ನೇ ರಕ್ಷಸೋ ರಾಕ್ಷಸಾನುಕ್ತಪ್ರಕಾರೇಣ ಕ್ಷಪಯಿತ್ವಾ ಸ ಏವ ತ್ವಂ ಪ್ರತಿ ದಹ। ಪ್ರತ್ಯೇಕಂ ದಹ। ನ ಕಿಂಚಿದ್ದಗ್ಧವ್ಯಮಿತ್ಯುದಾಸ್ವೇತ್ಯರ್ಥಃ॥ ಕ್ಷಪಃ। ಕ್ಷಪ ಕ್ಷಾಂತ್ಯಾಂ। ಲೋಡರ್ಥೇ ಛಾಂದಸೋ ಲಙ್। ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ। ಉದಾತ್ತನಿವೃತ್ತಿಸ್ವರೇಣ ಶಪ ಉದಾತ್ತತ್ವಂ। ತ್ಮನಾ। ಮಂತ್ರೇಷ್ವಾಙ್ಯಾದೇರಾತ್ಮನ ಇತ್ಯಾಕಾರಲೋಪಃ। ರಕ್ಷಸಃ ರಕ್ಷ ಪಾಲನೇ। ರಕ್ಷಿತವ್ಯಮಸ್ಮಾದಿತಿ ರಕ್ಷಃ। ಭೀಮಾದಿತ್ವಾತ್। ಪಾ ೩-೪-೭೪। ಅಪಾದಾನೇಽಸಿಪ್ರತ್ಯಯಃ। ಕ್ಷರತೇರ್ವಾ ಣ್ಯಂತಾದಸಿಪ್ರತ್ಯಯೇ ಣಿಲೋಪೋ ವರ್ಣವಿಪರ್ಯಯಶ್ಚ। ಅಸ್ಯ ಚ ರಕ್ಷಃಶಬ್ದಸ್ಯಾಸಿಪ್ರತ್ಯಯಾಂತತ್ವಾತ್ಪ್ರತ್ಯಯಸ್ವರ ಏವ ಶಿಷ್ಯತೇ॥

॥ ಪ್ರತಿಪದಾರ್ಥ ॥

**ರಾಜನ್** -ಪ್ರಕಾಶಶೀಲನಾದ । **ಅಗ್ನೇ**—ಎಲೈ ಅಗ್ನಿಯೇ । **ವಸ್ತೋಃ**—(ಎಲ್ಲಾ) ಹಗಲುಗಳಲ್ಲಿಯೂ । **ಉತ**—ಮತ್ತು । **ಉಷಸಃ**—ಉಷಃಕಾಲ ಸಹಿತವಾದ ರಾತ್ರಿಯಲ್ಲಿಯೂ । **ಕ್ಷಪಃ**—(ನಿನ್ನ ಕಡೆಯ ಪುರುಷರಿಂದ ರಾಕ್ಷಸರನ್ನು) ನಾಶಮಾಡಿಸು । **ಉತ**—ಮತ್ತು । **ತ್ಮನಾ**—ಸ್ವತಃ ನೀನೂ ಸಹ (ರಾಕ್ಷಸರನ್ನು ಬಾಧೆಪಡಿಸು) । **ತಿಗ್ಮಜಂಭ**—ತೀಕ್ಷ್ಣಮುಖವುಳ್ಳ ಎಲೈ ಅಗ್ನಿಯೇ । **ಸಃ**—ಅದೇ (ನೀನು) । **ರಕ್ಷಸಃ**—ರಾಕ್ಷಸರನ್ನು (ನಾಶಪಡಿಸಿ) । **ಪ್ರತಿ ದಹ**—ಪ್ರತ್ಯೇಕವಾಗಿ ದಹಿಸು.

॥ ಭಾವಾರ್ಥ ॥

ಪ್ರಕಾಶಮಾನನಾದ ಎಲೈ ಅಗ್ನಿಯೇ, ಹಗಲಿನಲ್ಲಾಗಲೀ, ರಾತ್ರಿಯಲ್ಲಿಯಾಗಲೀ, ನೀನೇ ಸ್ವತಃ ಅಥವಾ, ನಿನ್ನ ಕಡೆಯವರಿಂದ ರಾಕ್ಷಸರನ್ನು ನಾಶಪಡಿಸು, ತೀಕ್ಷ್ಣಮುಖವುಳ್ಳ ಎಲೈ ಅಗ್ನಿಯೇ. ನೀನು (ಈರೀತಿ) ರಾಕ್ಷಸರನ್ನು ಚೆನ್ನಾಗಿ ದಹಿಸಿ ನಾಶಮಾಡು.

## English Translation

Shining Agni, drive off (all disturbers of the rite), either by yourself or (your servants), whether by day or by night; sharp-visaged Agni, destroy the Rakshasas, entirely.

ವಿಶೇಷವಿಷಯಗಳು

**ರಾಜನ್**—ಪ್ರಕಾಶಮಾನನಾದ ಅಗ್ನಿಯೇ ಜ್ವಾಲೆಗಳಿಂದ ಪ್ರಕಾಶಿಸುವ ಸ್ವಭಾವವುಳ್ಳವನು.

**ಕ್ಷಪಃ**—**ಕ್ಷಪಃ ಕ್ಷಾಂತ್ಯಾಂ । ಕ್ಷಪಯ, ಬಾಧಸ್ವ ।** ಹಿಂಸೆಪಡಿಸು, ನಾಶಮಾಡು.

**ತ್ಮನಾ—ಆತ್ಮನಾ ।** ಸ್ವತಃ ನೀನೂ ಸಹ । ಇಲ್ಲಿ ಛಂದಸ್ಸಿನ ಅನುಕೂಲಕ್ಕಾಗಿ ಆತ್ಮನಾ ಎಂಬ ಶಬ್ದದ ಆಕಾರವು ಲೋಪವಾಗಿ ತ್ಮನಾ ಎಂದು ಮಾತ್ರ ಪಠಿತವಾಗಿರುವುದು. ಈ ಶಬ್ದವು ಇದೇ ರೀತಿ—

**ಅವ ತ್ಮನಾ ಭರತೇ ಕೇತವೇದಾ ಅವ ತ್ಮನಾ ಭರತೇ ಫೇನಮುದನ್**

(ಋ. ಸಂ. ೧-೧೦೪-೩)

**ಜಗೃಂಭ್ಮಾ ದೂರಆದಿಶಂ ಶ್ಲೋಕಮದ್ರೇರಧ ತ್ಮನಾ ।**

(ಋ. ಸಂ. ೧-೧೩೯-೧೦)

**ತ್ವಂ ವಾತೈರರುಣೈರ್ಯಾಸಿ ಶಂಗಯಸ್ತ್ವಂ ಪೂಷಾ ವಿಧತಃ ಪಾಸಿ ನು ತ್ಮನಾ ।**

(ಋ. ಸಂ. ೨-೧-೬)

**ಜಾತ ಆಪೃಣೋ ಭುವನಾನಿ ರೋದಸೀ ಅಗ್ನೇ ತಾ ವಿಶ್ವಾ ಪರಿಭೂರಸಿ ತ್ಮನಾ ।**

(ಋ. ಸಂ. ೩-೩-೧೦)

**ಪರಿ ತ್ಮನಾ ಮಿತದ್ರುರೇತಿ ಹೋತಾಗ್ನಿರ್ಮಂದ್ರೋ ಮಧುವಚಾ ಋತಾವಾ ।**

(ಋ. ಸಂ. ೪-೬-೫)

ಇತ್ಯಾದಿ ಅನೇಕ ಮಂತ್ರಗಳಲ್ಲಿ ಆತ್ಮನಾ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ವಸ್ತೋಃ ಉಷಸಃ**—ವಸ್ತೋಃ ಸರ್ವಾಣ್ಯಹಾನಿ, ಉಷಃಕಾಲೋಪಲಕ್ಷಿತಾ ರಾತ್ರೀಶ್ಚ । **ಉಷಃಕಾಲ** ಯುಕ್ತವಾದ ರಾತ್ರಿಕಾಲಗಳಲ್ಲಿಯೂ ಹಗಲಿನಲ್ಲಿಯೂ ಸಹ. ವಸ್ತೋಃ ಎಂಬ ಶಬ್ದವು ಹನ್ನೆರಡು ಅಹರ್ನಾಮಗಳಲ್ಲಿ ಪಠಿತವಾಗಿರುವುದು (ನಿ ೧-೯). ಇಲ್ಲಿ ಉಷಸಃ ಎಂಬ ಶಬ್ದವು ಉಷಃಕಾಲವನ್ನು ಸೂಚಿಸುವುದಾಗಿದ್ದರೂ ಸೂರ್ಯೋದಯಕ್ಕೆ ಮುಂಚಿತವಾಗಿರುವ ಉಷಃಕಾಲವು ರಾತ್ರಿಕಾಲಕ್ಕೇ ಸೇರಿದ್ದಾಗಿರುವುದು. ಆದುದರಿಂದ ಉಷಃ ಕಾಲಯುಕ್ತವಾದ ರಾತ್ರಿಕಾಲವೆಂದು **ಭಾಷ್ಯಕಾರರು** ಹೇಳಿರುವರು. ಅಥವಾ ಈ ಮಂತ್ರದಲ್ಲಿ ವಸ್ತೋಃ ಎಂಬ **ಅಹರ್ನಾಮದ ಜತೆಯಲ್ಲಿ** ಉಷಸಃ ಎಂಬ ಶಬ್ದವು ಪಠಿತವಾಗಿರುವುದರಿಂದ ಹಗಲು ಮತ್ತು ರಾತ್ರಿಕಾಲಗಳಲ್ಲಿ ಎಂಬ ಸಾಮಾನ್ಯಾರ್ಥವನ್ನು ಹೇಳಬಹುದು.

**ತಿಗ್ಮಜಂಭ**— ತಿಗ್ಮವೆಂದರೆ ತೀಕ್ಷ್ಣವೆಂದರ್ಥವು. ತಿಗ್ಮಜಂಭವೆಂದರೆ ತೀಕ್ಷ್ಣವುಖ, ಸುಡುವ ಸ್ವಭಾವ ವುಳ್ಳವನು ಎಂದರ್ಥವು. ಸಾಧಾರಣವಾಗಿ ಈ ಶಬ್ದವು ಅಗ್ನಿಗೆ ವಿಶೇಷಣವಾಗಿಯೇ ಉಪಯೋಗಿಸಲ್ಪಡುವುದು. ಈ ಶಬ್ದವು ಋಗ್ವೇದದಲ್ಲಿ--

**ಪ್ರ ತೇ ಅಗ್ನಿರ್ಬಭಸತ್ತಿಗ್ಮಜಂಭಸ್ತಪಿಷ್ಠೇನ ಶೋಚಿಷಾ ಯಃ ಸುರಾಧಾಃ ।**

(ಋ ಸಂ. ೪-೫-೪)

**ಅಸ್ಯ ಘಾ ವೀರ ಈವತೋಽಗ್ನೇರೀಶೀತ ಮರ್ತ್ಯಃ ।**
**ತಿಗ್ಮಜಂಭಸ್ಯ ಮೀಳ್ಹುಷಃ ॥**

(ಋ ಸಂ. ೪-೧೫-೫)

**ತಿಗ್ಮಜಂಭಾಯ ತರುಣಾಯ ರಾಜತೇ ಪ್ರಯೋ ಗಾಯಸ್ಯಗ್ನಯೇ ।**

(ಋ ಸಂ ೮-೧೯-೨೨)

**ಯಜ್ಞಾನಾಂ ರಥ್ಯೇ ವಯಂ ತಿಗ್ಮಜಂಭಾಯ ವೀಳವೇ ।**

(ಋ ಸಂ ೮-೪೪-೨೭)

ಎಂಬ ಋಕ್ಕುಗಳಲ್ಲಿ ಮಾತ್ರ ಇರುವುದು ಇನ್ನೆಲ್ಲಿಯೂ ಇಲ್ಲ ಈ ಸ್ಥಳಗಳಲ್ಲೆಲ್ಲಾ ಈ ಶಬ್ದವು ಅಗ್ನಿಪರವಾಗಿಯೇ ಉಪಯೋಗಿಸಲ್ಪಟ್ಟಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಕ್ಷಪಃ**—ಕ್ಷಪ ಕ್ಷಾಂತ್ಯಾಂ ಧಾತು. ಲೋಡರ್ಥದಲ್ಲಿ **ಛಂದಸಿ ಲುಙ್ಲಙ್ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಙ್. ಣಿಜರ್ಥ ತೋರುವುದರಿಂದ **ಹೇತುಮತಿ ಚ** (ಪಾ ಸೂ ೩-೧-೨೬) ಎಂಬುದರಿಂದ ಣಿಚ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಇಕಾರಕ್ಕೆ ಲೋಪ. **ಕರ್ತರಿ ಶಪ್** ಸೂತ್ರದಿಂದ ಶಪ್ **ಛಂದಸ್ಯುಭಯಥಾ** ಎಂಬುದರಿಂದ ಶಪ್ಪಿಗೆ ಆರ್ಧಧಾತುಕಸಂಜ್ಞೆಯೂ ಬರುವುದರಿಂದ **ಣೇರನಿಟಿ** (ಪಾ ಸೂ. ೬-೪-೫೧) ಎಂಬುದರಿಂದ ಣಿಚ್ಚಿಗೆ ಲೋಪ ಸಕಾರಕ್ಕೆ ರುತ್ವ ವಿಸರ್ಗ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತ. ಅನುದಾತ್ತವನ್ನು ನಿಮಿತ್ತೀಕರಿಸಿ ಉದಾತ್ತವಾದ ಣಿಚ್ ಲೋಪವಾದುದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ. ಸೂ ೬-೧-೧೬೧) ಎಂಬುದರಿಂದ ಶಪ್ಪಿಗೆ ಉದಾತ್ತಸ್ವರ ಬರುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ತ್ಮನಾ**—ಆತ್ಮನಾ ಎಂದು ಆತ್ಮನ್ ಶಬ್ದದ ತೃತೀಯಾ ಏಕವಚನಾಂತರೂಪ. **ಮಂತ್ರೇಷ್ವಾಙ್ಯಾದೇರಾತ್ಮನಃ** (ಪಾ. ಸೂ ೬-೪-೧೪೧) ಎಂಬುದರಿಂದ ಸಂಹಿತಾದಲ್ಲಿ ಆಕಾರಲೋಪ ಬರುತ್ತದೆ.

**ರಕ್ಷಸಃ**—ರಕ್ಷ ಪಾಲನೇ ಧಾತು. ರಕ್ಷಿತವ್ಯಮಸ್ಮಾದಿತಿ ರಕ್ಷಃ (ಇವರಿಂದ ಜನರನ್ನು ರಕ್ಷಿಸಬೇಕು) ಭೀಮಾದಿಯಲ್ಲಿ ಸೇರಿರುವುದರಿಂದ **ಭೀಮಾದಯೋಽಪಾದಾನೇ** (ಪಾ ಸೂ ೩-೪-೭೪) ಎಂಬುದರಿಂದ ಅಪಾದಾ

ನಾರ್ಥದಲ್ಲಿ ಅಸಿ ಪ್ರತ್ಯಯು. ರಕ್ಷಸ್ ಶಬ್ದವಾಗುತ್ತದೆ. **ಅಥವಾ ಕ್ಷರ ಧಾತುವಿಗೆ ಣಿಚ್ ಮಾಡಿದಾಗ ಣಿಜಂತದ ಮೇಲೆ** ಹಿಂದಿನಂತೇ ಅಸಿ ಪ್ರತ್ಯಯು. **ಣೇರನಿಟಿ** ಸೂತ್ರದಿಂದ ಣಿಲೋಪ ಛಾಂದಸವಾಗಿ ವರ್ಣವಿಪರ್ಯಯು ಬರುತ್ತದೆ. ಪ್ರತ್ಯಯ ಸ್ವರದಿಂದ ರಕ್ಷಸ್ ಶಬ್ದ ಅಂತೋದಾತ್ತವಾಗುತ್ತದೆ.

**ದಹ**—ದಹ ಭಸ್ಮೀಕರಣೇ ಧಾತು ಲೋಟ್ ಮಧ್ಯಮಪುರುಷ ಏಕವಚನರೂಪ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ ॥ ೬ ॥

॥ ಸಂಹಿತಾಪಾಠಃ ॥

ಅವಾ ನೋ ಅಗ್ನ ಊತಿಭಿರ್ಗಾಯತ್ರಸ್ಯ ಪ್ರಭರ್ಮಣಿ ।
ವಿಶ್ವಾಸು ಧೀಷು ವಂದ್ಯ ॥ ೭ ॥

॥ ಪದಪಾಠಃ ॥

ಅವ । ನಃ । ಅಗ್ನೇ । ಊತಿಽಭಿಃ । ಗಾಯತ್ರಸ್ಯ । ಪ್ರಽಭರ್ಮಣಿ ।
ವಿಶ್ವಾಸು । ಧೀಷು । ವಂದ್ಯ ॥ ೭ ॥

॥ ಸಾಯಣಭಾಷ್ಯಂ

**ಪ್ರಾತರನುವಾಕಸ್ಯಾಗ್ನೇಯೇ ಕ್ರತೌ ಗಾಯತ್ರೇ ಛಂದಸ್ಯವಾ ನೋ ಅಗ್ನ ಇತ್ಯಾದ್ಯಾಃ ಷಳೃಚಃ। ಸೂತ್ರಿತಂ ಚ । ಅವಾನೋ ಅಗ್ನ ಇತಿ ಷಳಗ್ನಿರ್ವಾಳೇಽಗ್ನಿಂ ದೂತಂ । ಆ. ೪-೧೩ । ಇತಿ ॥ ಆಶ್ವಿನಶಸ್ತ್ರೇ ಚೈತಾಃ ಶಂಸನೀಯಾಃ ಪ್ರಾತರನುವಾಕಾತಿದೇಶಾತ್ ॥**

**ವಿಶ್ವಾಸು ಧೀಷು ಸರ್ವೇಷು ಕರ್ಮಸು ವಂದ್ಯ ಸ್ತುತ್ಯ ಹೇ ಅಗ್ನೇ ಗಾಯತ್ರಸ್ಯ ಗಾಯತ್ರಸಾಮ್ನೋ ಗಾಯತ್ರೀಚ್ಛಂದಸ್ಕಸ್ಯ ಸೂಕ್ತಸ್ಯ ವಾ ಪ್ರಭರ್ಮಣಿ ಪ್ರಭರಣೇ ಸಂಪಾದನೇ ನಿಮಿತ್ತಭೂತೇ ಸತಿ ಸೋಽಸ್ಮಾನೂತಿಭಿಸ್ತ್ವದೀಯೈಃ ಪಾಲನೈರವ । ರಕ್ಷ ॥ ಅವ । ದ್ವಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘತ್ವಂ ॥**

॥ ಪ್ರತಿಪದಾರ್ಥ ॥

**ವಿಶ್ವಾಸು ಧೀಷು**—ಎಲ್ಲಾ ಕರ್ಮಗಳಲ್ಲಿಯೂ । **ವಂದ್ಯ**—ಸ್ತುತ್ಯನಾದ । **ಅಗ್ನೇ**—ಎಲೈ ಅಗ್ನಿಯೇ । **ಗಾಯತ್ರಸ್ಯ**—ಗಾಯತ್ರವೆಂಬ ಸಾಮದ ಅಥವಾ ಗಾಯತ್ರೀ ಛಂದಸ್ಸಿನ ಸೂಕ್ತದ । **ಪ್ರಭರ್ಮಣಿ**—ಉಚ್ಚಾರ ಕರ್ಮದಲ್ಲಿ (ಉಚ್ಚಾರದಿಂದ ತುಷ್ಟನಾಗಿ) । **ನಃ**—ನಮ್ಮನ್ನು । **ಊತಿಭಿಃ**—(ನಿನ್ನ) ಪಾಲನ ಕರ್ಮಗಳಿಂದ । **ಅವ**—ರಕ್ಷಿಸು.

॥ ಭಾವಾರ್ಥ ॥

ಸರ್ವಕರ್ಮಗಳಲ್ಲಿಯೂ ಪೂಜ್ಯನಾದ ಎಲೈ ಅಗ್ನಿಯೇ, ಗಾಯತ್ರೀ ಛಂದೋಬದ್ಧವಾದ ಸೂಕ್ತದಿಂದ (ತುಷ್ಟನಾದ) ನೀನು, ನಿನ್ನ ಪಾಲನಕರ್ಮಗಳಿಂದ ನಮ್ಮನ್ನು ರಕ್ಷಿಸು

## English Translation

Agni, who in all rites is to be praised, guard us with your protection (propitiated) by the recitation of the metrical hymn

॥ ವಿಶೇಷವಿಷಯಗಳು ॥

ಪ್ರಾತರನುವಾಕ ಮಂತ್ರ ಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ಗಾಯತ್ರೀಛಂದಸ್ಸಿನ ಋಕ್ಕುಗಳನ್ನು ಪಠಿಸುವಾಗ **ಅವಾ ನೋ ಅಗ್ನ** ಎಂದು ಮೊದಲಾಗುವ ಈ ಆರು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಅವಾ ನೋ ಅಗ್ನ ಇತಿ ಷಳಗ್ನಿಮೀಳೇಽಗ್ನಿಂ ದೂತಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೩) ಪ್ರಾತರನುವಾಕಮಂತ್ರಪಠನಸಂಬಂಧದಲ್ಲಿ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಋಕ್ಕುಗಳನ್ನು ಹೇಳಬೇಕೆಂದು ಅಲ್ಲಿಯೇ ನಿರ್ದಿಷ್ಟವಾಗಿರುವುದು.

**ಅವ**—ಛಂದಸ್ಸಿನ ಅನುಕೂಲಕ್ಕಾಗಿ ಈ ಶಬ್ದದ ಅಂತ್ಯಾಕ್ಷರವು ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು

**ಗಾಯತ್ರಸ್ಯ**—ಗಾಯತ್ರವೆಂಬ ಸಾಮವೇದದ ಮಂತ್ರವಿಶೇಷದ ಅಥವಾ ಗಾಯತ್ರೀಛಂದಸ್ಸಿನಿಂದ ಸಹಿತವಾದ ಋಕ್ಕುಗಳನ್ನೊಳಗೊಂಡ ಸೂಕ್ತದ (ಸ್ತೋತ್ರದ)

**ವಿಶ್ವಾಸು ಧೀಷು ವಂದ್ಯ**—ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮಗಳ ಮಧ್ಯದಲ್ಲಿ ಧೀಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧) ಧೀಷು ಎಂದರೆ ಕರ್ಮಗಳಲ್ಲಿ ಎಂದರ್ಥವು. **ವಿಶ್ವಾಸು ಧೀಷು ವಂದ್ಯ** ಎಂದರೆ ಸಮಸ್ತವಾದ ಯಜ್ಞಾದಿಕರ್ಮಗಳಲ್ಲಿಯೂ ಸ್ತುತಿಸಲ್ಪಡುವ ಅಥವಾ ನಮಸ್ಕೃತನಾದ ಅಗ್ನಿಯೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಅವ**— ಅವ ರಕ್ಷಣೇ ಧಾತು. ಲೋಟ್ ಮಧ್ಯಮಪುರುಷ ಏಕವಚನರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತ. ಆಗ ಧಾತುಸ್ವರ ಉಳಿಯುತ್ತದೆ. ಧಾತುವು ದ್ವ್ಯಚ್ಕವಾಗಿರುವುದರಿಂದ **ದ್ವ್ಯಚೋಽತಸ್ತಿಙಃ** (ಪಾ. ಸೂ ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ

**ಊತಿಭಿಃ** — **ಊತಿಯೂತಿಜೂತಿ** –(ಪಾ ಸೂ ೩-೩-೯೭) ಎಂಬುದರಿಂದ ನಿಪಾತಿತವಾಗಿದೆ ತೃತೀಯಾ ಬಹುವಚನಾಂತರೂಪ

**ವಂದ್ಯ**—ವದಿ ಅಭಿವಾದನಸ್ತುತ್ಯೋಃ ಧಾತು ವಂದಿತುಂ ಯೋಗ್ಯಃ ವಂದ್ಯಃ. ಯತ್ ಪ್ರತ್ಯಯ ಸಂಬುದ್ಧಿಯಲ್ಲಿ ವಂದ್ಯ ಎಂದು ರೂಪವಾಗುತ್ತದೆ **ಆಮಂತ್ರಿತಸ್ಯ ಚ** (ಪಾ ಸೂ ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ ॥ ೭ ॥



॥ ಸಂಹಿತಾಪಾಠಃ ॥

ಆ ನೋ ಅಗ್ನೇ ರಯಿಂ ಭರ ಸತ್ರಾಸಾಹಂ ವರೇಣ್ಯಂ ।
ವಿಶ್ವಾಸು ಪೃತ್ಸು ದುಷ್ಟರಂ ॥ ೮ ॥

॥ ಪದಪಾಠಃ ॥

ಆ । ನಃ । ಅಗ್ನೇ । ರಯಿಂ । ಭರ । ಸತ್ರಾಽಸಹಂ । ವರೇಣ್ಯಂ ।
ವಿಶ್ವಾಸು । ಪೃತ್ಽಸು । ದುಸ್ತರಂ ॥ ೮ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ರಯಿಂ ಧನಂ ನೋಽಸ್ಮಭ್ಯಮಾ ಭರ । ಪ್ರಯಚ್ಛ । ಕೀದೃಶಂ । ಸತ್ರಾಸಾಹಂ ಸತ್ರಾ ಸಹ ಯುಗಪದೇವ ದಾರಿದ್ರ್ಯಸ್ಯ ನಾಶಕಂ । ವರೇಣ್ಯಂ ಸರ್ವೈರ್ವರಣೀಯಂ ವಿಶ್ವಾಸು ಪೃತ್ಸು ಸರ್ವೇಷು ಸಂಗ್ರಾಮೇಷು ದುಷ್ಟರಂ ಶತ್ರುಭಿಸ್ತರೀತುಮಶಕ್ಯಂ ॥ ಸತ್ರಾಸಾಹಂ । ಛಂದಸಿ ಸಹ ಇತಿಣ್ವಿಃ । ವರೇಣ್ಯಂ । ವೃಞ ಏಣ್ಯಃ । ಪೃತ್ಸು । ಪದಾದಿಷು ಮಾಂಸ್ಪೃತ್ಸ್ನೂನಾಮುಪಸಂಖ್ಯಾನಮಿತಿ ಪೃತನಾಶಬ್ದಸ್ಯ ಪೃದ್ಭಾವಃ। ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಅಗ್ನೇ**— ಎಲೈ ಅಗ್ನಿಯೇ । **ಸತ್ರಾಸಾಹಂ**—ಒಂದೇಕ್ಷಣದಲ್ಲಿ ದಾರಿದ್ರ್ಯನಾಶಕವಾದ । **ವರೇಣ್ಯಂ**-(ಸಮಸ್ತರಿಂದಲೂ) ಅಪೇಕ್ಷಿತವಾದ । **ವಿಶ್ವಾಸು ಪೃತ್ಸು**—ಎಲ್ಲಾ ಸಂಗ್ರಾಮಗಳಲ್ಲಿ । **ದುಷ್ಟರಂ**—ಶತ್ರುಗಳಿಂದ ಪಡೆಯಲು ಅಸಾಧ್ಯವಾದ । **ರಯಿಂ**—ಧನವನ್ನು । **ನಃ**—ನಮಗೆ । **ಆ ಭರ**—ಅನುಗ್ರಹಿಸು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಕ್ಷಣಮಾತ್ರದಲ್ಲಿ ದಾರಿದ್ರ್ಯವನ್ನು ನಾಶಪಡಿಸುವ, ಎಲ್ಲರಿಗೂ ಇಷ್ಟವಾದ ಮತ್ತು ಸಂಗ್ರಾಮಗಳಲ್ಲಿ ಶತ್ರುಗಳು ಅಪಹರಿಸಲು ಆಗದೇ ಇರುವ ಧನವನ್ನು ನಮಗೆ ಅನುಗ್ರಹಿಸು

English Translation

Grant us, Agni, riches that dispel poverty, that are desirable (to all) and cannot be taken (from us) in all encounters (with our foes)

॥ ವಿಶೇಷವಿಷಯಗಳು ॥

**ಸತ್ರಾಸಾಹಂ**—ಸತ್ರಾ ಎಂಬ ಶಬ್ದವು ಬಟ್ ಶ್ರತ್ ಮೊದಲಾದ ಆರು ಸತ್ಯನಾಮಗಳಲ್ಲಿ ಪಠಿತವಾಗಿರುವುದರಿಂದ ಸತ್ರಾ ಎಂದರೆ ಸತ್ಯವಾಗಿ ಎಂಬರ್ಥವನ್ನು ಯಾಸ್ಕರು ಹೇಳಿರುವರು. (ನಿ. ೩-೧೩) ಆದರೆ ಭಾಷ್ಯಕಾರರು ಈ ಋಕ್ಕಿನಲ್ಲಿ ಸತ್ರಾ ಎಂಬ ಶಬ್ದಕ್ಕೆ ಯುಗಪತ್ ಕೂಡಲೇ ತಕ್ಷಣವೇ ಎಂದರ್ಥಮಾಡಿರುವರು ಇದಲ್ಲದೆ ಸತ್ರಾ-ಅಸಹಂ ಎಂದು ಪದವಿಭಾಗವಿರುವುದರಿಂದ ಕೂಡಲೇ ದಾರಿದ್ರ್ಯವನ್ನು ನಾಶಮಾಡುವುದು ಎಂದು ದಾರಿದ್ರ್ಯಶಬ್ದವನ್ನು ಅಧ್ಯಾಹಾರಮಾಡಿರುವರು ಯಾಸ್ಕರ ವಿವರಣೆಯಂತೆ ಸತ್ರಾ ಎಂಬ ಶಬ್ದಕ್ಕೆ ಸತ್ಯವೆಂದು ಅರ್ಥಮಾಡಿದರೂ ಸತ್ಯವಾಗಿಯೂ ದಾರಿದ್ರ್ಯವನ್ನು ನಾಶಮಾಡುವ ಎಂಬ ಅರ್ಥವೂ ಸರಿಹೋಗುವುದು. ಈ ಶಬ್ದವು ಋಗ್ವೇದದಲ್ಲಿ—

ಸತ್ರಾಸಾಹಂ ವರೇಣ್ಯಂ ಸಹೋದಾಂ ಸಸವಾಂಸಂ ಸ್ವರಪಶ್ಚ ದೇವೀಃ ।

(ಋ. ಸಂ. ೩-೩೪ ೮)

**ವಿವಸ್ವತಃ ಸದನೆ ಆ ಹಿ ಪಿಪ್ರಿಯೇ ಸತ್ರಾಸಾಹಮಭಿಮಾತಿಹನಂ ಸ್ತುಹಿ ।**

(ಋ. ಸಂ. ೩-೫೧-೩)

**ಕೃಮು ವಃ ಸತ್ರಾಸಾಹಂ ವಿಶ್ವಾಸು ಗೀಷ್ವಾರ್ಯತಂ ।**

(ಋ. ಸಂ ೮-೯೨-೭)

ಎಂಬ ಋಕ್ಕುಗಳಲ್ಲಿಯೂ, **ಸತ್ರಾಸಹಃ** ಎಂಬ ಶಬ್ದವು ಋ. ಸಂ ೨-೨೧-೩ ರಲ್ಲಿಯೂ ಸತ್ರಾಸಹೇ ಎಂಬ ಶಬ್ದವು ಋ ಸಂ. ೨-೨೧-೨ ರಲ್ಲಿಯೂ ಪಠಿತವಾಗಿರುವುದು ಮತ್ತೆಲ್ಲಿಯೂ ಈ ಶಬ್ದದ ಪ್ರಯೋಗವಿಲ್ಲ. ಮೇಲೆ ಕೊಟ್ಟಿರುವ ಮೊದಲನೆಯ ಋಕ್ಕನ್ನು ವಿವರಿಸುವಾಗ ಭಾಷ್ಯಕಾರರು ಸತ್ರಾಸಾಹಂ ಎಂಬ ಶಬ್ದಕ್ಕೆ ವೃತ್ರಾದಿಶತ್ರೂನಭಿಭವಿತಾರಂ-ಶತ್ರುವನ್ನು ಪರಾಭವಗೊಳಿಸುವವನು (ಇಂದ್ರ) ಎಂದೂ, ಎರಡನೆಯ ಉದಾಹರಣೆಯಲ್ಲಿರುವ ಸತ್ರಾಸಾಹ ಶಬ್ದವನ್ನು ವಿವರಿಸುವಾಗ ಶತ್ರೂಣಾಮಭಿಭವಿತಾರಂ ಎಂಬ ಅದೇ ಅರ್ಥವನ್ನು ಹೇಳಿರುವರು. ಋ. ಸಂ. ೨-೨೧-೨ ಮತ್ತು ೨-೨೧-೩ ಋಕ್ಕುಗಳಲ್ಲಿಯೂ ಸಹ ಶತ್ರುಗಳನ್ನು ಪರಾಭವಗೊಳಿಸು ಎಂಬ ಅರ್ಥವನ್ನೇ ಹೇಳಿರುವರು. ಪ್ರಸಕ್ತ ಋಕ್ಕಿನಲ್ಲಿಯೂ ಸಹ ಈ ಅರ್ಥವನ್ನು ಹೇಳಬಹುದು

**ವರೇಣ್ಯಂ--ಸರ್ವೈರ್ವರಣೀಯಂ ।** ಎಲ್ಲರಿಂದಲೂ ಅಪೇಕ್ಷಿಸಲ್ಪಡುವ ಧನವನ್ನು ಎಲ್ಲರೂ ಅಪೇಕ್ಷಿಸುವರು

**ಪೃತ್ಸು**-- ರಣಃ ವಿವಾಕ್ ಮೊದಲಾದ ನಲವತ್ತಾರು ಸಂಗ್ರಾಮನಾಮಗಳ ಮಧ್ಯದಲ್ಲಿ ಪೃತ್ಸು ಎಂಬ ಶಬ್ದವು ಪಠಿತವಾಗಿರುವುದರಿಂದ ಈ ಶಬ್ದಕ್ಕೆ ಯುದ್ಧಗಳಲ್ಲಿ ಎಂದರ್ಥವು (ನಿ ೨-೧೭) ಈ ಶಬ್ದವು ಸಾಧಾರಣವಾಗಿ ಬಹುವಚನದಲ್ಲಿಯೇ ಪ್ರಯೋಗಿಸಲ್ಪಡುವುದು

**ದುಷ್ಟರಂ —ದುಃ-ತರಂ ।** ಕಷ್ಟಸಾಧ್ಯವಾದ, ಹೊಂದುವುದಕ್ಕೆ ಅಸಾಧ್ಯವಾದ ಎಂದರೆ ಬಹು ಶ್ರಮದಿಂದ ಮಾತ್ರ ಸಂಪಾದಿಸಲು ಸಾಧ್ಯವಾದ ಧನವೆಂದಭಿಪ್ರಾಯವು

॥ ವ್ಯಾಕರಣಪ್ರಕ್ರಿಯಾ ॥

ಭರ- ಹೃಞ್ ಹರಣೇ ಧಾತು ಲೋಟ್ ಮಧ್ಯಮಪುರುಷ ಏಕವಚನದಲ್ಲಿ **ಹರ** ಎಂದು ರೂಪವಾಗುತ್ತದೆ. **ಹೃಗ್ರಹೋರ್ಭಶ್ಛಂದಸಿ** ಎಂಬ ವಚನದಿಂದ ಸಂಹಿತಾದಲ್ಲಿ ಹಕಾರಕ್ಕೆ ಭಕಾರ ಆದೇಶ ಅತಿಙಂತವ ಪದದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಸತ್ರಾಸಾಹಮ್—**ಷಹ ಮರ್ಷಣೇ ಧಾತು **ಧಾತ್ವಾದೇಃಷಃ ಸಃ** ಎಂಬುದರಿಂದ ಆದಿಗೆ ಸತ್ವ. **ಛಂದಸಿ ಸಹಃ** (ಪಾ. ಸೂ. ೩-೨-೬೩) ಎಂಬುದರಿಂದ ಇದಕ್ಕೆ ಣ್ವಿ ಪ್ರತ್ಯಯ ಣಿತ್ತಾದುದರಿಂದ **ಅತ ಉಪಧಾಯಾಃ** (ಪಾ. ಸೂ ೭-೨-೧೧೬) ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ **ಅನ್ಯೇಷಾಮಪಿ**—(ಪಾ ಸೂ. ೬-೩-೧೩೭) ಎಂಬುದರಿಂದ ಪೂರ್ವಪದಕ್ಕೆ ದೀರ್ಘ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ ದ್ವಿತೀಯಾ ಏಕವಚನಾಂತರೂಪ.

**ವರೇಣ್ಯಮ್**—ವೃಞ್ ವರಣೇ ಧಾತು. **ವೃಞ ಏಣ್ಯಃ**—(ಉ. ಸೂ. ೩-೩೭೮) ಎಂಬುದರಿಂದ ಇದಕ್ಕೆ ಏಣ್ಯ ಪ್ರತ್ಯಯ ತನ್ನಿಮಿತ್ತವಾಗಿ **ಸಾರ್ವಧಾತುಕಾರ್ಧ**—ಸೂತ್ರದಿಂದ ಧಾತುವಿನ ಇಕ್ಕಿಗೆ ಗುಣ **ವರೇಣ್ಯ** ಎಂದು ರೂಪವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಪೃತ್ಸು**—ಪೃತನಾ ಶಬ್ದ. ಇದಕ್ಕೆ ಸಪ್ತಮೀ ಬಹುವಚನಪರವಾದಾಗ **ಮಾಂಸ, ಪೃತನಾ ಸಾನೂನಾಂ ಮಾಂಸ್, ಪೃತ್, ಸ್ನವೋ ಶಸಾದೌ ವಾ ವಾಚ್ಯಾಃ** ಎಂಬ ವಾರ್ತಿಕದಿಂದ ಪೃತಾದೇಶ. **ಸಾವೇಕಾಚಸ್ತೃತೀಯಾದಿಃ** (ಪಾ. ಸೂ. ೬-೧-೧೬೮) ಎಂಬುದರಿಂದ ಏಕಾಚಾದುದರಿಂದ ಇದರ ಪರದಲ್ಲಿರುವ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದುಷ್ಟರಮ್**—ದುಃಖೇನ ಕರ್ತುಂ ಶಕ್ಯಂ ದುಷ್ಟರಮ್ ತೄ ಪ್ಲವನತರಣಯೋಃ ಧಾತು. ಇದಕ್ಕೆ ದುಸ್ ಎಂಬುದು ಉಪಪದವಾದಾಗ **ಈಷದ್ದುಃಸ್ಸುಷುಕೃ**—(ಪಾ. ಸೂ. ೩-೩-೧೨೬) ಎಂಬುದರಿಂದ ಕೃಚ್ಛ್ರ ಎಂಬರ್ಥ ತೋರುವಾಗ ಖಲ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. **ಲಿತಿ** (ಪಾ. ಸೂ ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ ॥ ೮ ॥



॥ ಸಂಹಿತಾಪಾಠಃ ॥

ಆ ನೋ ಅಗ್ನೇ ಸುಚೇತುನಾ ರಯಿಂ ವಿಶ್ವಾಯುಪೋಷಸಂ ।
ಮಾರ್ಡೀಕಂ ಧೇಹಿ ಜೀವಸೇ ॥ ೯ ॥

॥ ಪದಪಾಠಃ ॥

ಆ । ನಃ । ಅಗ್ನೇ । ಸುಽಚೇತುನಾ । ರಯಿಂ । ವಿಶ್ವಾಯುಽಪೋಷಸಂ ।
ಮಾರ್ಡೀಕಂ । ಧೇಹಿ । ಜೀವಸೇ ॥ ೯ ॥

॥ ಸಾಯಣಭಾಷ್ಯಂ ॥

**ಆಯುಷ್ಕಾಮೇಷ್ಟ್ಯಾಂ ಪ್ರಥಮಸ್ಯಾಜ್ಯಭಾಗಸ್ಯಾನುವಾಕ್ಯಾ ಆ ನೋ ಅಗ್ನ ಇತಿ । ಸೂತ್ರಿತಂ ಚ । ಆಯುಷ್ಕಾಮೇಷ್ಟ್ಯಾಂ ಜೀವಾತುಮಂತಾವಾ ನೋ ಅಗ್ನೇ ಸುಚೇತುನಾ । ಅ. ೨-೧೦ । ಇತಿ ॥ ಮಹಾಪಿತೃಯಜ್ಞೇಽಪ್ಯೇಷೈವ ಪ್ರಥಮಾಜ್ಯಭಾಗಾನುವಾಕ್ಯಾ । ಸೂತ್ರಿತಂ ಚ । ಜೀವಾತುಮಂತೌ ಸರ್ವೋತ್ತಯಾರ್ಪಸ್ಥಾಃ । ಅ. ೨-೧೯ । ಇತಿ ॥**

**ಹೇ ಅಗ್ನೇ ನೋಽಸ್ಮಾಕಂ ಜೀವಸೇ ಜೀವನಾಯ ಸುಚೇತುನಾ ಶೋಭನೇನ ಜ್ಞಾನೇನ ಯುಕ್ತಂ ರಯಿಂ ಧನಮಾ ಧೇಹಿ । ಆಸ್ಥಾಪಯ । ಕೀದೃಶಂ । ಮಾರ್ಡೀಕಂ । ಮೃಡೀಕಂ ಸುಖಂ । ತದ್ಧೇತುಭೂತಂ । ವಿಶ್ವಾಯುಪೋಷಸಂ ಸರ್ವಸ್ಮಿನ್ನಾಯುಷಿ ದೇಹಾದೇಃ ಪೋಷಕಂ । ಯಾವಜ್ಜೀವಮಸ್ಮದುಪಭೋಗಪರ್ಯಾಪ್ತಮಿತ್ಯರ್ಥಃ । ಸುಚೇತುನಾ । ಚಿತೀ ಸಂಜ್ಞಾನೇ । ಔಣಾದಿಕ ಉಪ್ರತ್ಯಯಃ ಕೃದುತ್ತರಪದಪ್ರಕೃತಿಸ್ವರತ್ವಂ । ವಿಶ್ವಾಯುಪೋಷಸಂ । ವಿಶ್ವಮಾಯುರ್ಯಸ್ಮಿನ್ ಶರೀರಾದೌ ತದ್ವಿಶ್ವಾಯು । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ । ತತ್ಪುಷ್ಣಾತೀತಿ ವಿಶ್ವಾಯುಪೋಷಾಃ । ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚೇತ್ಯಸುನ್ ಪೂರ್ವಪದ ಪ್ರಕೃತಿಸ್ವರತ್ವಂ ಚ । ಸಕಾರಲೋಪಶ್ಛಾಂದಸಃ । ದೀರ್ಘಾಯುತ್ವಾಯ ವರ್ಚಸ ಇತಿ ಯಥಾ ॥**

॥ ಪ್ರತಿಪದಾರ್ಥ ॥

**ಅಗ್ನೇ** – ಎಲೈ ಅಗ್ನಿಯೇ । **ನಃ** ನಮ್ಮ । **ಜೀವಸೇ**—ಜೀವನಕ್ಕಾಗಿ । **ಸುಚೇತುನಾ** ಒಳ್ಳೆಯ ಜ್ಞಾನಯುಕ್ತವಾದ । **ಮಾರ್ಡೀಕಂ**—ಸುಖಕರವಾದ । **ವಿಶ್ವಾಯುಪೋಷಸಂ**—ಜೀವಾವಧಿ (ದೇಹಾದಿ) ಪೋಷಕವಾದ । **ರಯಿಂ**—ಧನವನ್ನು । **ಆ ಧೇಹಿ**—ಚೆನ್ನಾಗಿ ಸ್ಥಾಪಿಸು (ಕೊಡು)

॥ ಭಾವಾರ್ಥ ॥

ಎಲೈ ಅಗ್ನಿಯೇ, ನಮ್ಮ ಜೀವನಕ್ಕಾಗಿ, ಒಳ್ಳೆಯ ಜ್ಞಾನಸಹಿತವಾದ, ಸುಖಕರವಾದ ಮತ್ತು (ನಮ್ಮ) ಜೀವಾವಧಿ (ದೇಹಾದಿಗಳನ್ನು) ಪೋಷಿಸುವ ಧನವನ್ನು (ನೆಲೆಯಾಗಿ) ನಿಲ್ಲಿಸು.

## English Translation

Grant us, Agni, for our livelihood, wealth with sound understanding, conferring happiness, and sustaining (us) through life.

॥ ವಿಶೇಷವಿಷಯಗಳು ॥

ಆಯುಷ್ಕಾಮೇಷ್ಟಿಯಲ್ಲಿ ಹೋಮಮಾಡುವ ಎರಡು ಆಜ್ಯಭಾಗವೆಂಬ ಆಹುತಿಗಳಲ್ಲಿ ಮೊದಲನೆಯ ಆಹುತಿಯನ್ನು ಹೋಮಮಾಡುವಾಗ **ಆ ನೋ ಅಗ್ನೇ** ಎಂಬ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸ

ಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಆಯುಷ್ಮಾನೋಷ್ಟ್ಯಂ ಜೀವಾತುಮಂತಾವಾ ಸೋ ಅಗ್ನೇ ಸುಚೇತುನಾ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೨-೧೦) ಮಹಾಪಿತೃಯಜ್ಞದಲ್ಲಿಯೂ ಕೂಡ ಪ್ರಥಮಾಜ್ಯಭಾಗ ಹೋಮದಲ್ಲಿ ಪುರೋನುವಾಕ್ಯಮಂತ್ರವನ್ನಾಗಿ ಈ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಜೀವಾತುಮಂತೌ ಸವ್ಯೋತ್ತೆಯೋರ್ಯಸ್ಯಾಃ** ಎಂಬ ಸೂತ್ರದಿಂದ ನಿರ್ದೇಶಿಸಲ್ಪಟ್ಟಿರುವುದು (ಆ ೨-೧೯)

**ಸುಚೇತುನಾ— ಚಿತೀ ಸಂಜ್ಞಾನೇ। ಶೋಭನೇನ ಜ್ಞಾನೇನ ಯುಕ್ತಂ** (ರಯಿಂ) ಜ್ಞಾನದಿಂದ ಕೂಡಿದ ದ್ರವ್ಯವನ್ನು ಎಂದರೆ ಉತ್ತಮವಾದ ಜ್ಞಾನವನ್ನೂ ಧನವನ್ನೂ ಸಹ ಎರಡನ್ನೂ ಕೊಡಬೇಕೆಂದು ಪ್ರಾರ್ಥನೆಯು.

**ವಿಶ್ವಾಯುಪೋಷಸಂ—ವಿಶ್ವಮಾಯುರ್ಯಸ್ಮಿನ್ ಶರೀರಾದೌ ತದ್ವಿಶ್ವಾಯು। ಸರ್ವಸ್ಮಿನ್ನಾಯುಷಿ ದೇಹಾದೇಃ ಪೋಷಕಂ। ಯಾವಜ್ಜೀವಮಸ್ಮದುಪಭೋಗಪರ್ಯಾಪ್ತಮಿತ್ಯರ್ಥಃ।** ನಾವು ಜೀವಿಸಿರುವವರೆಗೂ ನಮ್ಮ ಸುಖಕ್ಕಾಗಿ ಸಾಧನಭೂತವಾದ ಧನವನ್ನು ಎಂದಭಿಪ್ರಾಯವು ಧನವಿದ್ದರೆ ದೇಹಾದಿ ಪೋಷಣೆಯು ಸಾಧ್ಯವು. ಆದುದರಿಂದ ಬಹುಕಾಲ ದೇಹಪೋಷಣೆಗೆ ಧನವು ಅತ್ಯಾವಶ್ಯಕವು

**ಮಾರ್ಡೀಕಂ—ಮೃಡ ಸುಖನೇ। ಮೃಡೀಕಂ ಸುಖಂ। ತದ್ಧೇತುಭೂತಂ**—ಸುಖಕ್ಕೆ ಕಾರಣವಾದ. ಧನದಿಂದ ಸುಖವು ಲಭಿಸುವುದು ಲೋಕಪ್ರಸಿದ್ಧಿಯು.

**ಧೇಹಿ—ಆಸ್ಥಾಪಯ।** ಸ್ಥಾಪಿಸು ಅಥವಾ ಕೊಡು

॥ ವ್ಯಾಕರಣಪ್ರಕ್ರಿಯಾ ॥

**ಸುಚೇತುನಾ**— ಚಿತೀ ಸಂಜ್ಞಾನೇ ಧಾತು ಇದಕ್ಕೆ ಔಣಾದಿಕವಾದ ಉ ಪ್ರತ್ಯಯ. **ಪುಗಂತಲಘೂಪಧಸ್ಯ ಚ** (ಪಾ. ಸೂ. ೭-೩-೮೬) ಎಂಬುದರಿಂದ ಪ್ರತ್ಯಯ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಸು ಎಂಬುದರೊಡನೆ ಗತಿಸಮಾಸವಾದಾಗ **ಗತಿಕಾರಕೋಪಪದಾತ್ ಕೃತ್** ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ.

**ವಿಶ್ವಾಯುಪೋಷಸಮ್**—ವಿಶ್ವಂ ಆಯುಃ ಯಸ್ಮಿನ್ ಶರೀರಾದೌ ತತ್ ವಿಶ್ವಾಯು ಬಹುವ್ರೀಹಿ ಸಮಾಸ ಪೂರ್ವಪದಪ್ರಕೃತಿಸ್ವರಕ್ಕೆ ಬಾಧಕವಾಗಿ **ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ** ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ. ವಿಶ್ವಾಯು ಪುಷ್ಣಾತಿ ಇತಿ ವಿಶ್ವಾಯುಪೋಷಾಃ. ಪುಷ ಪುಷ್ಟೌ ಧಾತು. **ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚ** (ಪಾ ಸೂ ೪-೬-೬೬) ಎಂಬುದರಿಂದ ಇದಕ್ಕೆ ಅಸುನ್ ಪ್ರತ್ಯಯ. ತತ್ಸಂನಿಯೋಗದಿಂದ ಪೂರ್ವಪದಪ್ರಕೃತಿಸ್ವರವೂ ಬರುತ್ತದೆ. ಆಯುಸ್ ಶಬ್ದದ ಸಕಾರಕ್ಕೆ ಛಾಂದಸವಾಗಿ ಲೋಪಬರುತ್ತದೆ. ವಿಶ್ವಾಯುಪೋಷಸ್ ಶಬ್ದವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ. ಇಂಥಾ ಸ್ಥಳದಲ್ಲಿ ಸಕಾರಲೋಪವೆಂಬುದು ಸ್ವಾಭಾವಿಕ **ದೀರ್ಘಾಯುತ್ವಾಯ ವರ್ಧಸೇ** ಇತ್ಯಾದಿ ಅನೇಕ ಸ್ಥಳಗಳು ಉದಾಹರಣೆಗೆ ದೊರೆಯುತ್ತವೆ.

**ಧೇಹಿ**—ಡುಧಾಞ್ ಧಾರಣಪೋಷಣಯೋಃ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ **ಘ್ವಸೋರೇದ್ಧಾವಭ್ಯಾಸಲೋಪಶ್ಚ** (ಪಾ ಸೂ. ೬-೪-೧೧೯) ಎಂಬುದರಿಂದ ಅಭ್ಯಾಸಲೋಪವೂ ಧಾತುವಿಗೆ ಏತ್ವವೂ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಜೀವಸೇ**—ಜೀವ ಪ್ರಾಣಧಾರಣೇ ಧಾತು ಇದಕ್ಕೆ ತುಮುನರ್ಥದಲ್ಲಿ **ತುಮರ್ಥೇ ಸೇಸೇನಸೇ**—(ಪಾ ಸೂ ೩-೪-೯) ಎಂಬುದರಿಂದ ಅಸೇ ಪ್ರತ್ಯಯ **ಕೃನ್ಮೇಜಂತಃ** (ಪಾ ಸೂ ೧-೧-೩೯) ಎಂಬುದರಿಂದ ಏಜಂತವಾದುದರಿಂದ ಅವ್ಯಯಸಂಜ್ಞಾ ಬರುತ್ತದೆ ‖ ೯ ‖



ಸಂಹಿತಾಪಾಠಃ

ಪ್ರ ಪೂತಾಸ್ತಿಗ್ಮಶೋಚಿಷೇ ವಾಚೋ ಗೋತಮಾಗ್ನಯೇ ।
ಭರಸ್ವ ಸುಮ್ನಯುರ್ಗಿರಃ ‖ ೧೦ ‖

ಪದಪಾಠಃ

ಪ್ರ । ಪೂತಾಃ । ತಿಗ್ಮಽಶೋಚಿಷೇ । ವಾಚಃ । ಗೋತಮ । ಅಗ್ನಯೇ ।
ಭರಸ್ವ । ಸುಮ್ನಽಯುಃ । ಗಿರಃ ‖ ೧೦ ‖

ಸಾಯಣಭಾಷ್ಯಂ ‖

ಹೇ ಗೋತಮ ಸೂಕ್ತದ್ರಷ್ಟಃ ಸುಮ್ನಯುಃ ಸುಮ್ನಂ ಧನಮಾತ್ಮನ ಇಚ್ಛಂಸ್ತ್ವಂ ತಿಗ್ಮಶೋಚಿಷೇ ತೀಕ್ಷ್ಣಜ್ವಾಲಾಯಾಗ್ನಯೇ ಪೂತಾಃ ಶುದ್ಧಾ ವಾಚೋಽಗ್ನೇರ್ಗುಣಾನ್ ಸಮ್ಯಗಭಿದಧತೀರ್ಗಿರಃ ಸ್ತುತೀಃ ಪ್ರಭರಸ್ವ । ಪ್ರಕರ್ಷೇಣ ಸಂಪಾದಯ ‖ ತಿಗ್ಮಶೋಚಿಷೇ । ತಿಜ ನಿಶಾನೇ । ಯುಜಿರುಚಿತಿಜಾಂ ಕುತ್ವಂ ಚ । ಉ. ೧-೧೪೫ । ಇತಿ ಮಕ್ । ತಿಗ್ಮಾನಿ ಶೋಚೀಂಷಿ ಯಸ್ಯ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಸುಮ್ನಯುಃ । ಸುಮ್ನಶಬ್ದಾತ್ಕ್ಯಚಿ ನ ಛಂದಸ್ಯಪುತ್ರಸ್ಯೇತೀತ್ವದೀರ್ಘಯೋಃ ಪ್ರತಿಷೇಧಃ । ಕ್ಯಾಚ್ಛಂದಸೀತ್ಯುಪ್ರತ್ಯಯಃ ‖

॥ ಪ್ರತಿಪದಾರ್ಥ ॥

**ಗೋತಮ**—ಸೂಕ್ತದ್ರಷ್ಟೃವಾದ ಎಲೈ ಗೋತಮನೇ । **ಸುಮ್ನಯುಃ**—ಧನವನ್ನು ಇಚ್ಛಿಸುವ (ನೀನು) । **ತಿಗ್ಮಶೋಚಿಷೇ**—ತೀಕ್ಷ್ಣಜ್ವಾಲೆಗಳುಳ್ಳ । **ಅಗ್ನಯೇ**—ಅಗ್ನಿಗೆ । **ಪೂತಾಃ**—ಶುದ್ಧವಾದ । **ವಾಚಃ**—(ಅಗ್ನಿಯ ಗುಣಗಳನ್ನು ಚೆನ್ನಾಗಿ) ವ್ಯಕ್ತಪಡಿಸುವ । **ಗಿರಃ**—(ಸ್ತುತಿರೂಪವಾದ) ವಾಕ್ಯಗಳನ್ನು । **ಪ್ರ ಭರಸ್ವ**—ಹೆಚ್ಚಾಗಿ ಅರ್ಪಿಸು

॥ ಭಾವಾರ್ಥ ॥

ಸೂಕ್ತದ್ರಷ್ಟೃವಾದ ಎಲೈ ಗೋತಮನೇ, ದ್ರವ್ಯಾಪೇಕ್ಷಿಯಾದ ನೀನು, ತೀಕ್ಷ್ಣಜ್ವಾಲೆಗಳುಳ್ಳ ಅಗ್ನಿಗೆ, ಅವನ ಗುಣದ್ಯೋತಕವಾದ ಸ್ತುತಿವಾಕ್ಯಗಳನ್ನು ಹೆಚ್ಚಾಗಿ ಅರ್ಪಿಸು (ಸ್ತುತಿಸು).

## English Translation.

Gotama, desirous of wealth, offers to the sharp-flaming Agni pure prayers and praises.

॥ ವಿಶೇಷವಿಷಯಗಳು ॥

**ಪೂತಾಃ**--ಶುದ್ಧವಾದ ಎಂದರೆ ಶ್ರೇಷ್ಠವಾದ ಉತ್ತಮವಾದ, ಭಕ್ತಿಭಾವದಿಂದ ಕೂಡಿದ ಇತ್ಯಾದಿ.

**ತಿಗ್ಮಶೋಚಿಷೇ**—ತೀಕ್ಷ್ಣವಾದ ಪ್ರಕಾಶವುಳ್ಳ ಎಂದರೆ ಜಾಜ್ವಲ್ಯಮಾನವಾಗಿ ಉರಿಯುತ್ತಿರುವ (ಅಗ್ನಿಗೆ).

**ವಾಚಃ ಗಿರಃ**—ಈ ಎರಡು ಶಬ್ದಗಳೂ ಸಮಾನಾರ್ಥವನ್ನೇ ಸೂಚಿಸುವುದಾದರೂ ಭಾಷ್ಯಕಾರರು ವಾಚಃ ಎಂಬ ಶಬ್ದಕ್ಕೆ ಅವಯವಾರ್ಥಭೂತವಾದ ಅಗ್ನಿಯ ಗುಣಗಳನ್ನು ಚೆನ್ನಾಗಿ ಪ್ರಕಾಶಪಡಿಸುವ ಎಂಬರ್ಥವನ್ನು ಹೇಳಿರುವರು.

**ಸುಮ್ನಯುಃ**—ಶಿಂಬಾತಾ ಶತರಾ ಮೊದಲಾದ ಇಪ್ಪತ್ತು ಸುಖ ನಾಮಗಳ ಮಧ್ಯದಲ್ಲಿ ಸುಮ್ನಂ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ ೩-೧೩) ಸುಮ್ನಂ ಎಂದರೆ ಸುಖವು **ಸುಮ್ನಮಿಚ್ಛನ್ ಸುಮ್ನಯುಃ** ಸುಖವನ್ನಪೇಕ್ಷಿಸುವ ಎಂದರ್ಥವು. ಭಾಷ್ಯಕಾರರು ಸುಮ್ನ ಶಬ್ದಕ್ಕೆ ಧನವೆಂದು ಅರ್ಥಮಾಡಿ ಸುಮ್ನಯು ವೆಂದರೆ ಧನವನ್ನಪೇಕ್ಷಿಸುವ ಗೋತಮನು ಎಂದು ಅರ್ಥವಿವರಣೆ ಮಾಡಿರುವರು.

**ಭರಸ್ವ**—**ಭೃಞ್ ಭರಣೇ । ಸಂಪಾದಯ ।** ಸಂಪಾದಿಸು ಅಥವಾ ಅರ್ಪಿಸು. ಅಗ್ನಿಗೆ ಸ್ತೋತ್ರವನ್ನು ಸಮರ್ಪಿಸು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

**ಪೂತಾಃ**—ಪೂಞ್ ಪವನೇ ಧಾತು. ಕ್ರ್ಯಾದಿ ಇದಕ್ಕೆ ಕ್ತಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ತಿಗ್ಮಶೋಚಿಷೇ—ತಿಗ್ಮಾನಿ ಶೋಚೀಂಷಿ ಯಸ್ಯ ಸಃ ।** ಬಹುವ್ರೀಹಿಸಮಾಸ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ** (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ ತಿಜ ನಿಶಾನೇ ಧಾತು. ಇದಕ್ಕೆ **ಯುಜಿ ರುಚಿ ತಿಜಾಂ ಕುತ್ವಂ ಚ** (ಉ. ಸೂ. ೧-೧೪೩) ಎಂಬುದರಿಂದ ಮಕ್ ಪ್ರತ್ಯಯ. ತತ್ಸಂನಿಯೋಗದಿಂದ ಧಾತುವಿನ ಜಕಾರಕ್ಕೆ ಕುತ್ವದಿಂದ ಗಕಾರಾದೇಶ. **ತಿಗ್ಮ** ಎಂದು ರೂಪವಾಗುತ್ತದೆ

**ಭರಸ್ವ**—ಡುಭೃಞ್ ಭರಣೇ ಧಾತು. **ಲೋಟ್** ಮಧ್ಯಮಪುರುಷ ಏಕವಚನದಲ್ಲಿ **ಥಾಸಃ ಸೇ** ಸೂತ್ರದಿಂದ ಸೇ ಆದೇಶ. **ಸವಾಭ್ಯಾಂ ವಾಮೌ** (ಪಾ. ಸೂ. ೩-೪-೯೧) ಎಂಬುದರಿಂದ ಏಕಾರಕ್ಕೆ ವತ್ವ ಶಪ್ ವಿಕರಣ ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತ ಧಾತುಸ್ವರ ಉಳಿಯುತ್ತದೆ

**ಸುಮ್ನಯುಃ—ಸುಮ್ನಂ ಧನಂ ಆತ್ಮನಃ ಇಚ್ಛತಿ** ಎಂದು ವಿವಕ್ಷಾಮಾಡಿದಾಗ ಸುಮ್ನ ಶಬ್ದದ ಮೇಲೆ **ಸುಪ ಆತ್ಮನಃ ಕ್ಯಚ್** (ಪಾ ಸೂ ೩-೧-೮) ಎಂಬುದರಿಂದ ಕ್ಯಚ್ ಪ್ರತ್ಯಯ. ಅದಂತವಾದರೂ ಸುಮ್ನಶಬ್ದಕ್ಕೆ **ನಚ್ಛಂದಸ್ಯಪುತ್ರಸ್ಯ** (ಪಾ ಸೂ. ೭-೪-೩೫) ಎಂಬುದರಿಂದ ನಿಷೇಧಮಾಡಿರುವುದರಿಂದ ಈತ್ವಾದಿಗಳು ಬರುವುದಿಲ್ಲ **ಸುಮ್ನಯ** ಎಂಬುದು **ಸನಾದ್ಯಂತಾಧಾತವಃ** ಸೂತ್ರದಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ ಇದರ ಮೇಲೆ **ಕ್ಯಾಚ್ಛಂದಸಿ** (ಪಾ ಸೂ ೩-೨-೧೭೦) ಎಂಬುದರಿಂದ ಉಪ್ರತ್ಯಯ ಇದು ಪರವಾದಾಗ **ಅತೋಲೋಪಃ** ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ॥ ೧೦ ॥

॥ ಸಂಹಿತಾಪಾಠಃ ॥

ಯೋ ನೋ ಅಗ್ನೇಽಭಿದಾಸತ್ಯಂತಿ ದೂರೇ ಪದೀಷ್ಟ ಸಃ ।
ಅಸ್ಮಾಕಮಿದ್ವೃಧೇ ಭವ ॥ ೧೧ ॥

॥ ಪದಪಾಠಃ ॥

ಯಃ । ನಃ । ಅಗ್ನೇ । ಅಭಿಽದಾಸತಿ । ಅಂತಿ । ದೂರೇ । ಪದೀಷ್ಟ । ಸಃ ।
ಅಸ್ಮಾಕಂ । ಇತ್ । ವೃಧೇ । ಭವ ॥ ೧೧ ॥

॥ ಸಾಯಣಭಾಷ್ಯಂ ॥

**ಹೇ ಅಗ್ನೇ ನೋಽಸ್ಮಾನ್ ಅಂತ್ಯಂತಿಕೇ ಸಮೀಪೇ ದೂರೇ ವಿಪ್ರಕೃಷ್ಟದೇಶೇಽವಸ್ಥಿತಃ ಸನ್ ಯಃ ಶತ್ರುರಭಿದಾಸತಿ ಉಪಕ್ಷಪಯತಿ ಸ ಶತ್ರುಃ ಪದೀಷ್ಟ । ಪತತು । ನಶ್ಯತು । ತ್ವಂ ಚಾಸ್ಮಾಕಮಿತ್ ಅಸ್ಮಾಕಮೇವ ವೃಧೇ ವರ್ಧನಾಯ ಭವ ॥ ಅಭಿದಾಸತಿ । ದಸು ಉಪಕ್ಷಯೇ । ಅಸ್ಮಾಣ್ಯಂತಾಲ್ಲಟಿ ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ । ಅಂತಿ । ಕಾದಿಲೋಪೋ ಬಹುಲಮಿತಿ ವಕ್ತವ್ಯಮಿತ್ಯಂತಿಕಶಬ್ದಸ್ಯ ಕಕಾರಲೋಪಃ । ವೃಧೇ । ವೃಧು ವೃದ್ಧೌ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥**

॥ ಪ್ರತಿಪದಾರ್ಥ ॥

**ಅಗ್ನೇ**- ಎಲೈ ಅಗ್ನಿಯೇ । **ಯಃ**—ಯಾವ (ಶತ್ರುವು) । **ಅಂತಿ**-- ಸಮೀಪದಲ್ಲಿಯಾಗಲೀ । **ದೂರೇ**— ದೂರದಲ್ಲಿಯಾಗಲೀ (ಇದ್ದು) । **ನಃ**— ನಮ್ಮನ್ನು । **ಅಭಿದಾಸತಿ**—ತೊಂದರೆಪಡಿಸುತ್ತಾನೆಯೋ । **ಸಃ**--ಅವನು (ಶತ್ರುವು) । **ಪದೀಷ್ಟ**—ಬೀಳಲಿ (ನಾಶಹೊಂದಲಿ) । **(ತ್ವಂ ಚ**— ನೀನಾದರೋ) । **ಅಸ್ಮಾಕಮಿತ್**— ನಮ್ಮ । **ವೃಧೇ—**ಅಭಿವೃದ್ಧಿಗಾಗಿಯೇ । **ಭವ**- ಆಗು.

॥ ಭಾವಾರ್ಥ ॥

ಎಲೈ ಅಗ್ನಿಯೇ, ಸಮೀಪದಲ್ಲಿಯೇ ಆಗಲೀ, ದೂರದಲ್ಲಿಯಾಗಲೀ ಇದ್ದು ನಮ್ಮನ್ನು ಹಿಂಸಿಸುವ ಶತ್ರುವು ನಾಶಹೊಂದಲಿ ನೀನಾದರೋ ನಮಗೆ ಅಭಿವೃದ್ಧಿಯನ್ನುಂಟುಮಾಡು.

## English Translation

May he, Agni, who annoys us, whether nigh or afar, perish, and be to us (propitious) for our advancement.

॥ ವಿಶೇಷವಿಷಯಗಳು ॥

**ಅಂತಿ- ಅಂತಿಕೇ** । ಛಂದಸ್ಸಿನ ಅನುಕೂಲಕ್ಕಾಗಿ ಕೇ ಎಂಬ ಅಕ್ಷರವು ಲೋಪವಾಗಿರುವುದು. ಸಮೀಪದಲ್ಲಿ ಎಂದರ್ಥವು

**ಅಸ್ಮಾಕಮಿದ್ವೃಧೇ ಭವ**—ನಮ್ಮ ಶ್ರೇಯೋಭಿವೃದ್ಧಿಗಾಗಿಯೇ ನೀನು ನಮ್ಮ ವಿಷಯದಲ್ಲಿ ಅನುಗ್ರಹ ಬುದ್ಧಿಯುಳ್ಳವನಾಗಿರು ನಮ್ಮನ್ನು ಸರ್ವದಾ ಕಾಪಾಡುತ್ತಿರು ಎಂದಭಿಪ್ರಾಯವು.

**ಅಭಿದಾಸತಿ—ದಸು ಉಪಕ್ಷಯೇ** । ಹಿಂಸೆ ಅಥವಾ ತೊಂದರೆಪಡಿಸುವನು

**ಪದೀಷ್ಟ—ಪತತು** । ಬೀಳಲಿ ಎಂದರೆ ನಾಶವನ್ನು ಹೊಂದಲಿ ಎಂದಭಿಪ್ರಾಯವು

॥ ವ್ಯಾಕರಣಪ್ರಕ್ರಿಯಾ ॥

**ಅಭಿದಾಸತಿ**—ಅಭಿ ಉಪಸರ್ಗ. ದಸು ಉಪಕ್ಷಯೇ ಧಾತು. ಪ್ರಯೋಜಕವ್ಯಾಪಾರ ತೋರುವಾಗ **ಹೇತುಮತಿಚ** (ಪಾ. ಸೂ ೩-೧-೨೬) ಎಂಬುದರಿಂದ ಣಿಚ್ ಪ್ರತ್ಯಯ. **ಅತ ಉಪಧಾಯಾಃ** ಎಂಬುದರಿಂದ ತನ್ನಿಮಿತ್ತವಾಗಿ ಧಾತುವಿನ ಉಪಧೆಗೆ ವೃದ್ಧಿ. ಣ್ಯಂತದ ಮೇಲೆ ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಕರ್ತರಿ ಶಪ್** ಸೂತ್ರದಿಂದ ಶಪ್ ವಿಕರಣ. **ಛಂದಸ್ಯುಭಯಥಾ** ಎಂಬುದರಿಂದ ಅದಕ್ಕೆ ಆರ್ಧಧಾತುಕಸಂಜ್ಞೆಯೂ ಇರುವುದರಿಂದ **ಣೇರನಿಟಿ** (ಪಾ ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ದಾಸತಿ ಎಂದು ರೂಪವಾಗುತ್ತದೆ. **ಯಃ** ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** (ಪಾ ಸೂ ೮-೧-೬೬) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಶಪ್, ಲಸಾರ್ವಧಾತುಕವು ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ. **ತಿಙ್‌ಚೋದಾತ್ತವತಿ** (ಪಾ ಸೂ. ೮-೧-೭೧) ಎಂಬುದರಿಂದ ಉದಾತ್ತವುಳ್ಳ ತಿಙಂತ ಪರವಾದುದರಿಂದ ಗತಿಗೆ (ಅಭಿ) ನಿಘಾತಸ್ವರ ಬರುತ್ತದೆ.

**ಅಂತಿ**--ಅಂತಿಕ ಶಬ್ದ. ಇದರ ಕಕಾರಕ್ಕೆ **ಕಾದಿಲೋಪೋ ಬಹುಲಮಿತಿ ವಕ್ತವ್ಯಮ್** ಎಂಬ ವಚನದಿಂದ ಛಂದಸ್ಸಿನಲ್ಲಿ ಲೋಪಬರುತ್ತದೆ.

**ವೃಧೇ**—ವೃಧು ವೃದ್ಧೌ ಧಾತು. ಸಂಪದಾದಿಯಲ್ಲಿ ಸೇರಿರುವುದರಿಂದ **ಸಂಪದಾದಿಭ್ಯಃ ಕ್ವಿಪ್** (ವಾ. ೨೨೩೩) ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್ ಪ್ರತ್ಯಯ. ವೃಧ್ ಶಬ್ದವಾಗುತ್ತದೆ. ಚತುರ್ಥೀ ಏಕವಚನದಲ್ಲಿ ವೃಧೇ ಎಂದು ರೂಪವಾಗುತ್ತದೆ. ಏಕಾಚಾದುದರಿಂದ **ಸಾವೇಕಾಚಸ್ತೃತೀಯಾದಿಃ** (ಪಾ. ಸೂ ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ॥ ೧೧ ॥



॥ ಸಂಹಿತಾಪಾಠಃ ॥

ಸಹಸ್ರಾಕ್ಷೋ ವಿಚರ್ಷಣಿರಗ್ನೀ ರಕ್ಷಾಂಸಿ ಸೇಧತಿ ।

ಹೋತಾ ಗೃಣೀತ ಉಕ್ಥ್ಯಃ ॥ ೧೨ ॥

॥ ಪದಪಾಠಃ ॥

ಸಹಸ್ರಽಅಕ್ಷಃ । ವಿಽಚರ್ಷಣಿಃ । ಅಗ್ನಿಃ । ರಕ್ಷಾಂಸಿ । ಸೇಧತಿ ।

ಹೋತಾ । ಗೃಣೀತೇ । ಉಕ್ಥ್ಯೈಃ ॥ ೧೨ ॥

ಸಾಯಣಭಾಷ್ಯಂ ।

ಸಹಸ್ರಾಕ್ಷೋಽಸಂಖ್ಯಾತಜ್ವಾಲೋ ವಿಚರ್ಷಣಿರ್ವಿಶೇಷೇಣ ಸರ್ವಸ್ಯ ದ್ರಷ್ಟಾಯಮಗ್ನೀ ರಕ್ಷಾಂಸಿ ಸೇಧತಿ । ಪ್ರತಿಷೇಧತಿ । ಯಜ್ಞಾನ್ನಿರ್ಗಮಯತಿ । ಸ ಚಾಗ್ನಿರುಕ್ಥ್ಯೈ ಉಕ್ಥೈಃ ಶಸ್ತ್ರೈರಸ್ಮಾಭಿಃ ಸ್ತೂಯಮಾನಃ ಸನ್ ಹೋತಾ ದೇವಾನಾಮಾಹ್ವಾತಾ ಭೂತ್ವಾ ಗೃಣೀತೇ । ತಾನ್ಸ್ತೌತಿ ॥ ಸಹಸ್ರಾಕ್ಷಃ । ಬಹುವ್ರೀಹೌ ಸಕ್ಥ್ಯಕ್ಷ್ಣೋರಿತಿ ಷಚ್ ಸಮಾಸಾಂತಃ । ಸತಿ ಶಿಷ್ಟತ್ವಾತ್ತಸ್ಯೈವ ಸ್ವರಃ ಶಿಷ್ಯತೇ । ಸೇಧತಿ । ಷಿಧು ಗತ್ಯಾಂ । ಅತ್ರ ಕೇವಲೋಽಪಿ ಸೋಪಸರ್ಗಾರ್ಥೋ ದ್ರಷ್ಟವ್ಯಃ । ಗೃಣೀತೇ । ಗೄ ಶಬ್ದೇ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ ॥

॥ ಪ್ರತಿಪದಾರ್ಥ ॥

**ಸಹಸ್ರಾಕ್ಷಃ**—ಅಸಂಖ್ಯಾತ ಜ್ವಾಲಾಯುಕ್ತನಾದ । **ವಿಚರ್ಷಣಿಃ**—ವಿಶೇಷವಾಗಿ (ಸಮಸ್ತವನ್ನೂ) ನೋಡುವ । **ಅಗ್ನಿಃ**—ಅಗ್ನಿಯು । **ರಕ್ಷಾಂಸಿ**—ರಾಕ್ಷಸರನ್ನು । **ಸೇಧತಿ**—ಪ್ರತಿಷೇಧಿಸುತ್ತಾನೆ (ಓಡಿಸುತ್ತಾನ) । **ಉಕ್ಥ್ಯೈಃ**—ಶಸ್ತ್ರಮಂತ್ರಗಳಿಂದ (ನಮ್ಮಿಂದ) ಸ್ತುತಿಸಲ್ಪಟ್ಟವನಾಗಿ (ಅಗ್ನಿಯು) । **ಹೋತಾ**—(ದೇವತೆಗಳನ್ನು) ಆಹ್ವಾನಿಸುವವನಾಗಿ । **ಗೃಣೀತೇ**—(ಅವರುಗಳನ್ನು) ಸ್ತುತಿಸುತ್ತಾನೆ.

। ಭಾವಾರ್ಥ ।

ಅಸಂಖ್ಯಾತ ಜ್ವಾಲೆಗಳುಳ್ಳ, ಸರ್ವದ್ರಷ್ಟೃವಾದ ಅಗ್ನಿಯು ರಾಕ್ಷಸರನ್ನು (ಯಾಗಶಾಲೆಗಳಿಂದ ಓಡಿಸಿ, ಶಸ್ತ್ರಮಂತ್ರಗಳಿಂದ (ಸ್ತುತಿವಾಕ್ಯಗಳಿಂದ) ಸ್ತುತನಾಗಿ, ದೇವತೆಗಳನ್ನು ಆಹ್ವಾನಿಸಿ, ಅವರನ್ನು (ನಮಗಾಗಿ) ಸ್ತುತಿಸುತ್ತಾನೆ

## English Translation

The thousand-eyed, all beholding Agni, drives away the Rakshasas, and, (praised by us) with holy hymns, he (the invoker of the Gods) celebrates their praise

|| ವಿಶೇಷವಿಷಯಗಳು ||

**ಸಹಸ್ರಾಕ್ಷಃ**—ಈ ಶಬ್ದಕ್ಕೆ ಅವಯವಾರ್ಥವನ್ನು ಮಾಡುವುದಾದರೆ ಸಾವಿರಕಣ್ಣುಳ್ಳವನು ಎಂದರ್ಥವು. ಇಲ್ಲಿ ಈ ಶಬ್ದವು ಅಗ್ನಿಗೆ ವಿಶೇಷಣವಾಗಿರುವುದರಿಂದ ಅಕ್ಷಶಬ್ದಕ್ಕೆ ನೇತ್ರಸ್ಥಾನಭೂತವಾದ ಜ್ವಾಲೆಯು ಎಂದು ಹೇಳಬೇಕಾಗುವುದು. ಸಹಸ್ರಶಬ್ದಕ್ಕೆ—ಅಸಂಖ್ಯಾತವಾದ ಎಂದರ್ಥವು. ಆದುದರಿಂದ ಭಾಷ್ಯಕಾರರು ಹೇಳಿರುವಂತೆ **ಸಹಸ್ರಾಕ್ಷಃ ಅಸಂಖ್ಯಾತಜ್ವಾಲಃ**—ಎಂದರೆ ಅಸಂಖ್ಯಾತವಾದ ಜ್ವಾಲೆಗಳಿಂದ ಯುಕ್ತನಾದ ಅಗ್ನಿಯು ಎಂದಭಿಪ್ರಾಯವು. ಸಹಸ್ರಾಕ್ಷಃ ಎಂಬ ಶಬ್ದವು ಋಗ್ವೇದದಲ್ಲಿ

**ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।**

(ಋ. ಸಂ ೧೦-೯೦-೧)

ಎಂಬ ಋಕ್ಕಿನಲ್ಲಿ ಮಾತ್ರವಿರುವುದು ಅಲ್ಲಿ ಈ ಶಬ್ದಕ್ಕೆ ಸಹಸ್ರ ಅಥವಾ ಅಸಂಖ್ಯಾತವಾದ ನೇತ್ರಗಳುಳ್ಳವನು ಎಂದೇ ಅರ್ಥವು ಮತ್ತೂ—

**ಇಂದ್ರವಾಯೂ ಮನೋಜುವಾ ವಿಪ್ರಾ ಹವಂತ ಊತಯೇ ।**
**ಸಹಸ್ರಾಕ್ಷಾ ಧಿಯಸ್ಪತೀ ।**

(ಋ ಸಂ ೧-೨೩-೩)

ಎಂಬ ಋಕ್ಕಿನಲ್ಲಿರುವ ಸಹಸ್ರಾಕ್ಷಾ ಎಂಬ ಶಬ್ದಕ್ಕೆ ಭಾಷ್ಯಕಾರರು ಸಹಸ್ರನಯನಯುಕ್ತಾ ಇಂದ್ರವಾಯೂ—ಸಹಸ್ರನೇತ್ರಗಳುಳ್ಳ ಎಂದೇ ಅರ್ಥಮಾಡಿರುವರು. ಈ ಶಬ್ದ ಪ್ರಯೋಗವು ಋಗ್ವೇದದಲ್ಲಿ ಮತ್ತೆಲ್ಲಿಯೂ ಇಲ್ಲ.

**ವಿಚರ್ಷಣಿಃ—ಚಿಕ್ಯತ್ ಚಾಕನತ್** ಮೊದಲಾದ ಎಂಟು ಪಶ್ಯತಿಕರ್ಮವಾಚಕಶಬ್ದಗಳ ಮಧ್ಯದಲ್ಲಿ **ವಿಚರ್ಷಣಿಃ**—ಎಂಬ ಶಬ್ದವು ಪಠಿತವಾಗಿರುವುದರಿಂದ **ವಿಚರ್ಷಣಿಃ** ಎಂದರೆ ನೋಡುವವನು. **ವಿಶೇಷೇಣ ಸರ್ವಸ್ಯ ದ್ರಷ್ಟಾಯಮಗ್ನಿಃ**—ಸಮಸ್ತವನ್ನೂ ವಿಶೇಷವಾಗಿ ನೋಡುವ ಅಗ್ನಿಯು ಎಂದರ್ಥವು

**ಸೇಧತಿ—ಷಿಧು ಗತ್ಯಾಂ । ಪ್ರತಿಷೇಧತಿ । ಯಜ್ಞಾನ್ನಿರ್ಗಮಯತಿ ।** ಷಿಧುಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಗಮನಾರ್ಥವಿದ್ದರೂ ಇಲ್ಲಿ ಭಾಷ್ಯಕಾರರು ಹೇಳಿರುವಂತೆ,—**ಅತ್ರ ಕೇವಲೋಽಪಿ ಸೋಪಸರ್ಗಾರ್ಥೋ ದ್ರಷ್ಟವ್ಯಃ**—ಎಂದರೆ ಪ್ರತಿ ಎಂಬ ಉಪಸರ್ಗದಿಂದ ಕೂಡಿರುವ ಪ್ರತಿಷೇಧತಿ ಎಂಬ ಶಬ್ದಕ್ಕೆ ಆಗುವ ಪ್ರತಿಷೇದಾರ್ಥವನ್ನೇ ಹೇಳಬೇಕು ಅಗ್ನಿಯು ರಾಕ್ಷಸಾದಿಗಳನ್ನು ಯಜ್ಞಪ್ರದೇಶದಿಂದ ಓಡಿಸುವವನು ಎಂದಭಿಪ್ರಾಯವು

**ಹೋತಾ— ದೇವಾನಾಮಾಹ್ವಾತಾ ।** ಯಜ್ಞದಲ್ಲಿ ದೇವತೆಗಳನ್ನು ಆಹ್ವಾನಮಾಡುವ ಅಗ್ನಿಯು

**ಗೃಣೀತೇ—ಗೄ ಶಬ್ದೇ ।** ದೇವತೆಗಳನ್ನು ಸ್ತೋತ್ರಾದಿಗಳಿಂದ ಸ್ತುತಿಸಿ ಆಹ್ವಾನ ಮಾಡುತ್ತಾನೆ.

**ಉಕ್ಥೈಃ**--ಉಕ್ಥಃ ಎಂದರೆ ಶಸ್ತ್ರರೂಪವಾದ ಮಂತ್ರವು. ಉಕ್ಥ್ಯಃ ಎಂದರೆ ಅಂತಹ ಶಸ್ತ್ರಮಂತ್ರಗಳಿಂದ ಸ್ತುತ್ಯನಾದವನು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

**ಸಹಸ್ರಾಕ್ಷಃ**—ಸಹಸ್ರಂ ಅಸಂಖ್ಯಾತಾನಿ ಅಕ್ಷೀಣಿ ಯಸ್ಯ ಸಃ ಸಹಸ್ರಾಕ್ಷಃ **ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಂಗಾತ್ ಷಚ್** (ಪಾ ಸೂ. ೫-೪-೧೧೩) ಎಂಬುದರಿಂದ ಸಮಾಸಾಂತದಲ್ಲಿ ಷಚ್ ಪ್ರತ್ಯಯ **ಯಸ್ಯೇತಿಚ** ಸೂತ್ರದಿಂದ ಇಕಾರಲೋಪ. **ಸತಿಶಿಷ್ಟಸ್ವರಬಲೀಯಸ್ತ್ವಮ್** ಎಂಬ ವಚನದಿಂದ ಪ್ರತ್ಯಯಸ್ವರ ಉಳಿಯುತ್ತದೆ.

**ರಕ್ಷಾಂಸಿ**—ಇದೇ ಸೂಕ್ತದ ೬ನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ

**ಸೇಧತಿ**—ಷಿಧು ಗತ್ಯಾಮ್ ಧಾತು ಇದು ಕೇವಲವಾಗಿದ್ದರೂ ಉಪಸರ್ಗ ವಿಶಿಷ್ಟವಾದ ಧಾತುವಿನ ಅರ್ಥವನ್ನೇ ಹೇಳುತ್ತದೆ. **ಧಾತೂನಾಮನೇಕಾರ್ಥತ್ವಮ್** ಎಂಬ ವಚನವಿರುವುದರಿಂದ ಪ್ರತಿಷೇಧ ತೋರುತ್ತದೆ. ಲಟ್. ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಗೃಣೀತೇ**—ಗೄ ಶಬ್ದೇ ಧಾತು ಕ್ರ್ಯಾದಿ **ಪ್ವಾದೀನಾಂ ಹ್ರಸ್ವಃ** (ಪಾ ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ **ಟಿತ ಆತ್ಮನೇಪದಾನಾಂ**—ಸೂತ್ರದಿಂದ ಏತ್ವ **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಎಂಬುದರಿಂದ ಶ್ನಾ ವಿಕರಣ **ಸಾರ್ವಧಾತುಕಮಪಿತ್** ಸೂತ್ರದಿಂದ ಪ್ರತ್ಯಯಕ್ಕೆ ಙಿತ್ವವಿರುವುದರಿಂದ **ಈಹಲ್ಯಘೋಃ** (ಪಾ ಸೂ. ೬-೪-೧೧೩) ಎಂಬುದರಿಂದ ವಿಕರಣದ ಆಕಾರಕ್ಕೆ ಈತ್ವ ವಿಕರಣಕ್ಕೂ ಪೂರ್ವಸೂತ್ರದಿಂದ ಙಿತ್ವಾತಿದೇಶವಿರುವುದರಿಂದ ತನ್ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ ಬರುವುದಿಲ್ಲ. ಋಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೨ ॥

ಎಪ್ಪತ್ತೊಂಭತ್ತನೆಯ ಸೂಕ್ತವು ಸಮಾಪ್ತವು.



# ಎಂಭತ್ತನೆಯ ಸೂಕ್ತವು

**ಇತ್ಥೇತಿ ಷೋಡಶರ್ಚಂ ಸಪ್ತಮಂ ಸೂಕ್ತಂ ಗೋತಮಸ್ಯಾರ್ಷಮೈಂದ್ರಂ ಪಂಕ್ತಿಚ್ಛಂದಸ್ಕಂ । ಅನುಕ್ರಾಂತಂ ಚ । ಇತ್ಥಾ ಷೋಳಶೈಂದ್ರಂ ಪಾಂಕ್ತಂ ಹಿ । ಹಿಶಬ್ದಪ್ರಯೋಗಾತ್ತ್ವಿತ್ಯಾದಿಪರಿಭಾಷಯೇದಮುತ್ತರೇ ಚ ದ್ವೇ ಪಂಕ್ತಿಚ್ಛಂದಸ್ಕೇ ॥ ಪೃಷ್ಠ್ಯಷಡಹಸ್ಯ ಪಂಚಮೇಽಹನಿ ಮರುತ್ವತೀಯ ಇದಂ ಸೂಕ್ತಂ । ಸೂತ್ರಿತಂ ಚ । ಅವಿತಾಸೀತ್ಥಾ ಹೀಂದ್ರ ಪಿಬ ತುಭ್ಯಮಿತಿ ಮರುತ್ವತೀಯಂ । ಆ. ೭-೧೨ । ಚತುರ್ವಿಂಶೇಽಹನ್ಯಚ್ಛಾವಾಕಸ್ಯಾದ್ಯಸ್ತೃಚೋ ವೈಕಲ್ಪಿಕೋಽನುರೂಪಃ । ಹೋತ್ರಕಾಣಾಮಿತಿ ಖಂಡೇ ಸೂತ್ರಿತಂ । ಇತ್ಥಾ ಹಿ ಸೋಮ ಇನ್ಮದ ಉಭೇ ಯದಿಂದ್ರ ರೋದಸೀ । ಆ. ೭-೪ । ಇತಿ ॥ ಮಹಾವ್ರತೇ ನಿಷ್ಕೇವಲ್ಯಸ್ಯ ದಕ್ಷಿಣಪಕ್ಷ ಇತ್ಥಾ ಹೀತ್ಯೇಕಾ । ತಥೈವ ಪಂಚಮಾರಣ್ಯಕೇ ಸೂತ್ರಿತಂ । ಇತ್ಥಾ ಹಿ ಸೋಮ ಇನ್ಮದ ಇತಿ ಪಂಕ್ತಿಃ । ಐ ಆ. ೫-೨-೨ । ಇತಿ ॥**

ಅನುವಾದವು— **ಇತ್ಥಾ ಹಿ ಸೋಮೇ** ಎಂಬ ಈ ಸೂಕ್ತವು ಹದಿಮೂರನೆಯ ಅನುವಾಕದಲ್ಲಿ ಏಳನೆಯ ಸೂಕ್ತವು ಇದರಲ್ಲಿ ಹದಿನಾರು ಋಕ್ಕುಗಳಿರುವುವು ಈ ಸೂಕ್ತಕ್ಕೆ ಗೋತಮನು ಋಷಿಯು. ಇಂದ್ರನು ದೇವತೆಯು. ಪಂಕ್ತಿಶ್ಛಂದಸ್ಸು ಅನುಕ್ರಮಣಿಕೆಯಲ್ಲಿ **ಇತ್ಥಾ ಷೋಳಶೈಂದ್ರಂ ಪಾಂಕ್ತಂ ಹಿ** ಎಂದು ಹೇಳಿರುವುದು. ಹಿ ಎಂಬ ಶಬ್ದಪ್ರಯೋಗದಿಂದ ಈ ಸೂಕ್ತವೂ ಮುಂದಿನ ಎರಡು ಸೂಕ್ತಗಳೂ ಪಂಕ್ತಿಶ್ಛಂದಸ್ಕವೆಂದು ಸೂಚಿತವಾಗುವುದು ಪೃಷ್ಠ್ಯಷಡಹವೆಂಬ ಯಾಗದ ಐದನೆಯ ದಿವಸ ಮರುತ್ವತೀಯ ಸಂಬಂಧವಾದ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಅವಿತಾಸೀತ್ಥಾ ಹೀಂದ್ರ ಪಿಬ ತುಭ್ಯಮಿತಿ ಮರುತ್ವತೀಯಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೧೨) ಇಪ್ಪತ್ತನಾಲ್ಕನೆಯ ದಿನ ಅಚ್ಛಾವಾಕನೆಂಬ ಋತ್ವಿಜನು **ಇತ್ಥಾ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ವೈಕಲ್ಪಿಕವಾಗಿ ಪಠಿಸಬಹುದೆಂದು ಆಶ್ವಲಾಯನ ಶ್ರೌತಸೂತ್ರದ **ಹೋತ್ರಕಾಣಾಂ** ಎಂಬ ಖಂಡದಲ್ಲಿ— **ಇತ್ಥಾ ಹಿ ಸೋಮ ಇನ್ಮದ ಉಭೇ ಯದಿಂದ್ರ ರೋದಸೀ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ ೭-೪) ಮತ್ತು ಮಹಾವ್ರತದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ **ಇತ್ಥಾ ಹಿ** ಎಂಬ ಒಂದು ಋಕ್ಕಿನ ವಿನಿಯೋಗವಿರುವುದೆಂದು ಐತರೇಯ ಆರಣ್ಯಕದ ಪಂಚಮಾರಣ್ಯಕದಲ್ಲಿ **ಇತ್ಥಾ ಹಿ ಸೋಮ ಇನ್ಮದ ಇತಿ ಪಂಕ್ತಿಃ** ಎಂಬ ವಾಕ್ಯದಿಂದ ನಿರ್ದೇಶಿಸಲ್ಪಟ್ಟಿರುವುದು. (ಐ ಆ ೫-೨-೨).

## ಸೂಕ್ತ—೮೦

॥ ಮಂಡಲ—೧ ॥ ಅನುವಾಕ—೧೩ ॥ ಸೂಕ್ತ—೮೦ ॥
॥ ಅಷ್ಟಕ—೧ ॥ ಅಧ್ಯಾಯ ೫ ॥ ವರ್ಗ—೨೯, ೩೦, ೩೧ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೬ ॥
॥ ಋಷಿಃ—ಗೋತಮೋ ರಾಹೂಗಣಃ ॥
॥ ದೇವತಾ—ಇಂದ್ರಃ ॥
॥ ಛಂದಃ—ಪಂಕ್ತಿಃ

॥ ಸಂಹಿತಾಪಾಠಃ ॥

ಇತ್ಥಾ ಹಿ ಸೋಮ ಇನ್ಮದೇ ಬ್ರಹ್ಮಾ ಚಕಾರ ವರ್ಧನಂ ।
ಶವಿಷ್ಠ ವಜ್ರಿನ್ನೋಜಸಾ ಪೃಥಿವ್ಯಾ ನಿಃ ಶಶಾ ಅಹಿಮರ್ಚನ್ನನು
ಸ್ವರಾಜ್ಯಂ ॥ ೧ ॥

॥ ಪದಪಾಠಃ ॥

ಇತ್ಥಾ । ಹಿ । ಸೋಮೇ । ಇತ್ । ಮದೇ । ಬ್ರಹ್ಮಾ । ಚಕಾರ । ವರ್ಧನಂ ।
ಶವಿಷ್ಠ । ವಜ್ರಿನ್ । ಓಜಸಾ । ಪೃಥಿವ್ಯಾಃ । ನಿಃ । ಶಶಾಃ । ಅಹಿಂ । ಅರ್ಚನ್ ।
ಅನು । ಸ್ವಽರಾಜ್ಯಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಶವಿಷ್ಠಾತಿಶಯೇನ ಬಲವನ್ ವಜ್ರಿನ್ವಜ್ರವನ್ನಿಂದ್ರ ಇತ್ಥಾ ಹಿ ಇತ್ಥಮೇವ ಅನೇನ ಶಾಸ್ತ್ರೋಕ್ತಪ್ರಕಾರೇಣೈವ ಮದೇ ಮದಕರೇ ಹರ್ಷಕರೇ ಸೋಮೇ ತ್ವಯಾ ಪೀತೇ ಸತಿ ಬ್ರಹ್ಮಾ ಬ್ರಾಹ್ಮಣಃ ಸ್ತೋತಾ ವರ್ಧನಂ ತವ ವೃದ್ಧಿಕರಂ ಸ್ತೋತ್ರಂ ಚಕಾರ । ಅನೇನ ಸೂಕ್ತೇನ ಕೃತವಾನ್ । ಇದಿತ್ಯೇತತ್ಪಾದಪೂರಣಂ ಅತಸ್ತ್ವಮೋಜಸಾ ಬಲೇನ ಪೃಥಿವ್ಯಾಃ ಸಕಾಶಾದಹಿಮಾಗತ್ಯ ಹಂತಾರಂ

ವೃತ್ರಂ ನಿಃ ಶಶಾಃ । ನಿಃಶೇಷೇಣಾಶಾಃ। ಮಾ ಬಾಧಸ್ವೇತಿ ಶಾಸನಂ ಕೃತ್ವಾ ಪೃಥಿವ್ಯಾಃ ಸಕಾಶಾನ್ನಿರಗಮಯ ಇತ್ಯರ್ಥಃ । ಕಿಂಕುರ್ವನ್ । ಸ್ವರಾಜ್ಯಂ ಸ್ವಸ್ಯ ರಾಜ್ಯಂ ರಾಜತ್ವಮನ್ವನುಲಕ್ಷ್ಯಾರ್ಚನ್ ಪೂಜಯನ್ । ಸ್ವಸ್ಯ ಸ್ವಾಮಿತ್ವಂ ಪ್ರಕಟಯನ್ನಿತ್ಯರ್ಥಃ ॥ ಶಶಾಃ । ಶಾಸು ಅನುಶಿಷ್ಟೌ । ಲಙಿ ಲುಕಿ ಪ್ರಾಪ್ತೇ ಬಹುಲಂ ಛಂದಸೀತಿ ಶಪಃ ಶ್ಲುಃ । ಸ್ವರಾಜ್ಯಂ । ರಾಜ್ಞೋ ಭಾವಃ ಕರ್ಮ ವಾ ರಾಜ್ಯಂ । ಪತ್ಯಂತಪುರೋಹಿತಾದಿಭ್ಯೋ ಯಕ್ । ಪಾ. ೫-೧-೧೨೮ । ಇತಿ ಯಕ್ । ತತ್ರ ಹಿ ರಾಜಾಸ ಇತಿ ಪಠ್ಯತೇ । ಸ್ವಸ್ಯ ರಾಜ್ಯಂ ಸ್ವರಾಜ್ಯಂ । ಅಕರ್ಮಧಾರಯೇ ರಾಜ್ಯಂ । ಪಾ. ೬-೨-೧೩೦ । ಇತ್ಯುತ್ತರಪದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಶವಿಷ್ಠ**—ಅತ್ಯಂತ ಬಲಿಷ್ಠನಾದ । **ವಜ್ರಿನ್**—ವಜ್ರಾಯುಧಧಾರಿಯಾದ ಎಲೈ ಇಂದ್ರನೇ । **ಇತ್ಥಾ ಹಿ**-ಹೀಗೆಯೇ (ಇದೇ ಶಾಸ್ತ್ರೋಕ್ತಪ್ರಕಾರವಾಗಿಯೇ) । **ಮದೇ**—ಸಂತೋಷಕರವಾದ । **ಸೋಮೇ**—ಸೋಮರಸವು (ನಿನ್ನಿಂದ ಪಾನಮಾಡಲ್ಪಡಲು) । **ಬ್ರಹ್ಮಾ**—ಬ್ರಾಹ್ಮಣನು ಅಥವಾ ಬ್ರಹ್ಮನೆಂಬ ಋತ್ವಿಜನು (ಸ್ತೋತೃವು) । **ವರ್ಧನಂ**—ವೃದ್ಧಿಕರವಾದ (ಸ್ತೋತ್ರವನ್ನು) । **ಚಕಾರ ಇತ್**—(ಈ ಸೂಕ್ತದಿಂದ) ಮಾಡಿದನು । (**ಅತಃ ತ್ವಂ**—ಆದುದರಿಂದ ನೀನು) । **ಸ್ವರಾಜ್ಯಂ**—(ನಿನ್ನ) ರಾಜತ್ವವನ್ನು । **ಅನು**--ಲಕ್ಷ್ಯದಲ್ಲಿಟ್ಟು । **ಅರ್ಚನ್**-ಪೂಜಿಸುತ್ತಾ (ಸ್ವಾಮಿತ್ವವನ್ನೂ ಪ್ರಕಟಗೊಳಿಸಿ) । **ಓಜಸಾ**—(ನಿನ್ನ) ಬಲದಿಂದ । **ಅಹಿಂ**--ಹನನಮಾಡುವ ವೃತ್ರನನ್ನು (ಅಹಿನಾಮಕ ರಾಕ್ಷಸನನ್ನು) । **ಪೃಥಿವ್ಯಾಃ**—ಭೂಮಿಯಿಂದ । **ನಿಃ ಶಶಾಃ**—ಚೆನ್ನಾಗಿ ಶಾಸನ ಮಾಡಿದೆ (ಓಡಿಸಿದೆ) ।

ಭಾವಾರ್ಥ

ಅತ್ಯಂತ ಬಲಿಷ್ಠನೂ, ವಜ್ರಾಯುಧಧಾರಿಯೂ ಆದ ಎಲೈ ಇಂದ್ರನೇ, ಬ್ರಹ್ಮನೆಂಬ ಋತ್ವಿಜನು (ಸ್ತೋತೃವು) ವೃದ್ಧಿಕಾರಕವಾದ ಸ್ತುತಿಯಿಂದ ಸ್ತುತಿಸಿದ ಮೇಲೆ, ಮದಕಾರಕವಾದ ಸೋಮರಸವನ್ನು ಪಾನಮಾಡಿ ನಿನ್ನ ಸ್ವಾಮಿತ್ವವನ್ನು ಪ್ರಕಟಿಸುತ್ತಾ ಹಿಂಸಕನಾದ ವೃತ್ರನನ್ನು ಭೂಮಿಯಿಂದ, ಬಲಪ್ರಯೋಗಮಾಡಿ ಓಡಿಸಿದೆ

## English Translation

Mighty weilder of the thunderbolt, when the priest had thus exalted you (by praise), and the exhilarating Soma-juice (had been druuk), you expelled, by vour vigour, Ahi from the earth, manifesting your own sovereignty

॥ ವಿಶೇಷವಿಷಯಗಳು ॥

**ಶವಿಷ್ಠ—ಅತಿಶಯೇನ ಬಲವಾನ್**—ಬಹಳ ಬಲವುಳ್ಳವನೆಂದು ಅರ್ಥವು. ಶವಃ ಎಂಬ ಪದವು ಇಪ್ಪತ್ತೆಂಟು ಬಲನಾಮಗಳಲ್ಲಿಯೂ (ನಿ. ೩-೯) ಮತ್ತು ನೂರೊಂದು ಉದಕನಾಮಗಳಲ್ಲಿಯೂ (ನಿ. ೨-೨೪) ಪಠಿತವಾಗಿದ್ದರೂ ಇಲ್ಲಿ ಬಲವೆಂಬ ಅರ್ಥದಲ್ಲಿ ಉಪಯುಕ್ತವಾಗಿದೆ

**ಓಜಸಾ—ಪೃಥಿವ್ಯಾಃ ಅಹಿಂ ನಿಶ್ಶಶಾಃ—ಬಲೇನ ಪೃಥಿವ್ಯಾಸ್ಸಕಾಶಾದಾಗತ್ಯ ಹಂತಾರಂ ವೃತ್ರಂ ನಿಶ್ಶಶಾಃ ನಿಶ್ಶೇಷೇಣ ಅಶಾಃ ಮಾ ಬಾಧಸ್ವೇತಿ ಶಾಸನಂ ಕೃತ್ವಾ ಪೃಥಿವ್ಯಾಃ ಸಕಾಶಾತ್ ನಿರಗಮಯಃ** ಓಜಶ್ಶಬ್ದವು ಇಪ್ಪತ್ತೆಂಟು ಬಲನಾಮಗಳಲ್ಲಿ ( ನಿ. ೩-೯ ) ಉಕ್ತವಾಗಿರುತ್ತದೆ. ಇಂದ್ರನು ತನ್ನ ಶಕ್ತಿಯಿಂದ ಎಲ್ಲವನ್ನೂ ನಾಶಮಾಡುತ್ತಿದ್ದ ವೃತ್ರನನ್ನು । ನೀನು ಹೀಗೆ ಎಲ್ಲರನ್ನೂ ಬಾಧಿಸಬೇಡ ಎಂದು ಅಪ್ಪಣೆಮಾಡಿ ಭೂಲೋಕದಿಂದ ಹೊರಡಿಸಿದನು ಎಂದು ಅರ್ಥವು. ಅಹಿ ಶಬ್ದಕ್ಕೆ ಹಂತೃ(ಕೊಲೆಮಾಡುವ ಶತ್ರುವು) ಎಂದು ಅರ್ಥ. ಸ್ಕಂದಸ್ವಾಮಿಗಳು—ಅಹಿ ಶಬ್ದಕ್ಕೆ ನಿರುಕ್ತದಲ್ಲಿ ಉದಕ, ಮೇಘ, ಮಧ್ಯಸ್ಥಾನ ದೇವತಾ ಎಂದು ಅನೇಕಾರ್ಥಗಳನ್ನು ಹೇಳಿರುವುದರಿಂದ ಮೇಘವೆಂದು ಅರ್ಥವು. ಪೃಥಿವೀಶಬ್ದವು ಹದಿನಾರು ಅಂತರಿಕ್ಷನಾಮಗಳಲ್ಲಿ (ನಿ ೨-೨೩) ಉಕ್ತವಾಗಿರುವ ಕಾರಣ ಇಲ್ಲಿ ಅಂತರಿಕ್ಷವೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು ಆದುದರಿಂದ ಎಲೈ ಇಂದ್ರನೇ, ನೀನು ಬಹಳ ಬಲಶಾಲಿಯಾಗಿರುತ್ತೀಯೆ ಅಂತರಿಕ್ಷದಿಂದ (ಮೇಘವು) ವೃಷ್ಟಿಯು ಭೂಮಿಯಲ್ಲಿ ಬೀಳುವ ಹಾಗೆ ಮೇಘವನ್ನು ಹೊರಕ್ಕೆ ಹೊರಡಿಸು ಎಂದು ಅರ್ಥವನ್ನು ಹೇಳಿರುವರು

**ಬ್ರಹ್ಮಾ—ಬ್ರಾಹ್ಮಣಃ ಸ್ತೋತಾ** ಯಜ್ಞದಲ್ಲಿ ಹವಿರ್ಭಾಗಸ್ವೀಕಾರಕ್ಕಾಗಿ ಆಯಾಯ ದೇವತೆಗಳನ್ನು ಆಯಾಯ ಸ್ತೋತ್ರಗಳಿಂದ ಸ್ತುತಿಮಾಡುವ ಬ್ರಾಹ್ಮಣನು ಅಥವಾ ಬ್ರಹ್ಮವೆಂಬ ಋತ್ವಿಜನು ಎಂದು ಅರ್ಥವು.

**ವರ್ಧನಂ—ವೃದ್ಧಿಕರಂ ಸ್ತೋತ್ರಂ.** ವೃಧು ವೃದ್ಧೌ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಬಲವನ್ನು ಹೆಚ್ಚುಮಾಡುವ ಕಾರಣ ವೃದ್ಧಿಕರವಾದ ಸ್ತೋತ್ರವು ಎಂಬು ಅರ್ಥವು. ಮನುಷ್ಯರು ಮಾಡುವ ಸ್ತೋತ್ರಗಳಿಂದ ದೇವತೆಗಳ ಶಕ್ತಿಯು ಹೆಚ್ಚುವುದು ಎಂದು ಪ್ರತೀತಿ ಇರುವುದು

**ಸ್ವರಾಜ್ಯಂ—ರಾಜ್ಞೋ ಭಾವಃ ಕರ್ಮ ವಾ ರಾಜ್ಯಂ । ಸ್ವಸ್ಯ ರಾಜ್ಯಂ ಸ್ವರಾಜ್ಯಂ ।** ರಕ್ಷಣೆಗೆ ಅರ್ಹರಾದ ಪ್ರಜೆಗಳನ್ನು ರಕ್ಷಿಸುತ್ತಾ ಅವರವಶ ಅನುರಾಗವನ್ನು ಹೊಂದಲು ಯೋಗ್ಯವಾದ ರೀತಿಯಿಂದ ಇರುವಿಕೆಯು, ಅಥವಾ ಆ ಪ್ರಕಾರವಾದ ಕರ್ಮಗಳನ್ನು ಆಚರಿಸುವ ಸನ್ನಿವೇಶವನ್ನು ಹೊಂದಿರುವಿಕೆಯು ರಾಜ್ಯವೆನಿಸಿರುವುದು. ಹೀಗೆ ಇರುವ ಸ್ವರಾಜ್ಯಕ್ಕೆ ಮರ್ಯಾದೆಯನ್ನು ಕೊಟ್ಟು ವೃಷ್ಟ್ಯಾದಿಗಳನ್ನು ಭೂಮಿಗೆ ಉಂಟುಮಾಡಬೇಕೆಂದು ಇಂದ್ರನನ್ನು ಕುರಿತು ಪ್ರಾರ್ಥನೆಯು ಉಕ್ತವಾಗಿರುತ್ತದೆ

॥ ವ್ಯಾಕರಣಪ್ರಕ್ರಿಯಾ ॥

**ಚಕಾರ**—ಡುಕೃಞ್ ಕರಣೇ ಧಾತು. ಲಿಟ್ ಪ್ರಥಮಪುರುಷ ಏಕವಚನರೂಪ ಹಿ ಎಂಬುದರ ಯೋಗವಿರುವುದರಿಂದ **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ ಆಗ ಣಲ್ ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ. ಸೂ. ೬-೧-೧೯೩ ) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ವರ್ಧನಮ್**—ವೃಧು ವೃದ್ಧೌ ಧಾತು. ವರ್ಧಯತಿ ಇತಿ ವರ್ಧನಂ ಕರ್ತ್ರರ್ಥದಲ್ಲಿ **ಲ್ಯುಟ್** ಪ್ರತ್ಯಯ. **ಯುವೋರನಾಕೌ** ಸೂತ್ರದಿಂದ ಅನಾದೇಶ. ಪ್ರತ್ಯಯನಿಮಿತ್ತವಾಗಿ **ಪುಗಂತಲಘೂಪಧಸ್ಯಚ** ಸೂತ್ರದಿಂದ

ಧಾತುವಿನ ಲಘೂಪಧೆಗೆ ಗುಣ ಹಿಂದಿನಂತೆ ಪ್ರತ್ಯಯ ಲಿತ್ತಾದುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ

**ಶವಿಷ್ಠ**—ಶವಃ ಬಲಂ ಅಸ್ಯ ಅಸ್ತಿ ಇತಿ ಶವಸ್ವೀ **ಅಸ್ಮಾಯಾ**—ಎಂಬುದರಿಂದ ಮತ್ವರ್ಥದಲ್ಲಿ ಅಸಂತವಾದುದರಿಂದ ವಿನ್ ಪ್ರತ್ಯಯ ಅತಿಶಯೇನ ಶವಸ್ವೀ ಶವಿಷ್ಠಃ. ಅತಿಶಯಾರ್ಥ ತೋರುವಾಗ **ಅತಿಶಾಯನೇ-ತಮಬಿಷ್ಠನೌ** ಸೂತ್ರದಿಂದ ಇಷ್ಠನ್ ಪ್ರತ್ಯಯ. ಇದು ಪರವಾದಾಗ **ವಿನ್ಮತೋರ್ಲುಕ್** (ಪಾ. ಸೂ ೫-೩-೬೫) ಎಂಬುದರಿಂದ ವಿನಿಗೆ ಲುಕ್ **ಟೇಃ** ಸೂತ್ರದಿಂದ ಟಿ. ಲೋಪ ಸಂಬುದ್ಧಿಯಲ್ಲಿ ಶವಿಷ್ಠ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿರುವುದರಿಂದ ಅಷ್ಟಮಿಕನಿಘಾತಸ್ವರ ಬರುವುದಿಲ್ಲ **ಆಮಂತ್ರಿತಸ್ಯ** (ಪಾ ಸೂ ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಶಶಾಃ**—ಶಾಸು ಅನುಶಿಷ್ಟೌ ಧಾತು ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ **ಅದಿಪ್ರಭೃತಿಭ್ಯಃ ಶಪಃ** ಸೂತ್ರದಿಂದ ಶಪ್ ಲುಕ್ ಪ್ರಾಪ್ತವಾದರೆ **ಬಹುಲಂ ಛಂದಸಿ** ಎಂಬುದರಿಂದ ಅದಕ್ಕೆ ಶ್ಲು ಆದೇಶ **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ. **ಹಲ್‌ಙ್ಯಾಭ್ಯೋ—**ಸೂತ್ರದಿಂದ ಸಿಪ್ಪಿಗೆ ಲೋಪ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** (ಪಾ. ಸೂ ೬-೪-೭೫) ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಸ್ವರಾಜ್ಯಮ್**—ರಾಜ್ಞೋ ಭಾವಃ ಕರ್ಮ ವಾ ರಾಜ್ಯಮ್. **ಪತ್ಯಂತಪುರೋಹಿತಾದಿಭ್ಯೋ ಯಕ್** (ಪಾ ಸೂ ೫-೧-೧೨೮) ಎಂಬುದರಿಂದ ಯಕ್ ಪ್ರತ್ಯಯ. ಅಲ್ಲಿ **ರಾಜಾಸೇ** (ಪಾ. ಸೂ. ೫-೧-೧೨೮ ಗ) ಎಂದು ಪಠಿತವಾಗಿದೆ ರಾಜನ್ ಶಬ್ದಕ್ಕೆ ಅಸಮಾಸದಲ್ಲಿ ಯಕ್ ಎಂದು ಅದರ ತಾತ್ಪರ್ಯ **ನಸ್ತದ್ಧಿತೇ** ಎಂಬುದರಿಂದ ಭಸಂಜ್ಞಾ ಇರುವುದರಿಂದ ನಾಂತದ ಟಿಗೆ (ಅನ್) ಲೋಪ. ಸ್ವಸ್ಯ ರಾಜ್ಯಂ ಸ್ವರಾಜ್ಯಮ್. **ಅಕರ್ಮಧಾರಯೇ ರಾಜ್ಯಮ್** (ಪಾ ಸೂ. ೬-೨-೧೩೦) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ ॥ ೧ ॥



॥ ಸಂಹಿತಾಪಾಠಃ ॥

# ಸ ತ್ವಾಮದದ್ವೃಷಾ ಮದಃ ಸೋಮಃ ಶ್ಯೇನಾಭೃತಃ ಸುತಃ ।
# ಯೇನಾ ವೃತ್ರಂ ನಿರದ್ಭ್ಯೋ ಜಘಂಥ ವಜ್ರಿನ್ನೋಜಸಾರ್ಚನ್ನನು ಸ್ವರಾಜ್ಯಂ ॥ ೨ ॥

॥ ಪದಪಾಠಃ ॥

ಸಃ । ತ್ವಾ । ಅಮದತ್ । ವೃಷಾ । ಮದಃ । ಸೋಮಃ । ಶ್ಯೇನಽಆಭೃತಃ । ಸುತಃ ।
ಯೇನ । ವೃತ್ರಂ । ನಿಃ । ಅತ್ಽಭ್ಯಃ । ಜಘಂಥ । ವಜ್ರಿನ್ । ಓಜಸಾ । ಅರ್ಚನ್ ।
ಅನು । ಸ್ವಽರಾಜ್ಯಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಾ।ತ್ವಾಂ ಸ ಸೋಮೋಽಮದತ್ । ಅಮದಯತ್ । ಹರ್ಷಂ ಪ್ರಾಪಯತ್ । ಕೀದೃಶಃ ಸೋಮಃ । ವೃಷಾ ಸೇಚನಸ್ವಭಾವೋ ಮದೋ ಮದಕರೋ ಹರ್ಷಕಾರೀ ಶ್ಯೇನಾಭೃತಃ ಶ್ಯೇನರೂಪಮಾಪನ್ನಯಾ ಪಕ್ಷ್ಯಾಕಾರಯಾ ಗಾಯತ್ರ್ಯಾ ದಿವಃ ಸಕಾಶಾದಾಹೃತಃ ಸುತೋಽಭಿಷುತಃ । ಹೇ ವಜ್ರಿನ್ ವಜ್ರವನ್ನಿಂದ್ರ ಯೇನ ಪೀತೇನ ಸೋಮೇನೌಜಸಾ ಬಲಕರೇಣಾದ್ಭ್ಯೋಽಂತರಿಕ್ಷಸಕಾಶಾದ್ವೃತ್ರಂ ನಿರ್ಜಘಂಥ ಹತವಾನಸಿ । ಅನ್ಯತ್ಪೂರ್ವವತ್ ॥ ಅಮದತ್ । ಮದೀ ಹರ್ಷೇ । ಅಸ್ಮಾಣ್ಣಿಚಿ ಮದೀ ಹರ್ಷಗ್ಲಪನಯೋರಿತಿ ಘಟಾದಿಷುಪಾಠಾತ್ ಮಿತ್ತ್ವೇ ಸತಿ ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ । ಲಙಿ ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾಣ್ಣೇರನಿಟೀತಿ ಣಿಲೋಪಃ । ಅದ್ಭ್ಯಃ । ಆಪ ಇತ್ಯಂತರಿಕ್ಷನಾಮ । ಅಪೋ ಭಿ । ಪಾ. ೭-೪-೪೮ । ಇತಿ ಪಕಾರಸ್ಯ ತತ್ವಂ । ಜಘಂಥ । ಕ್ರಾದಿನಿಯಮಪ್ರಾಪ್ತಸ್ಯೇಟ ಉಪದೇಶೇಽತ್ವತ ಇತಿ ಪ್ರತಿಷೇಧಃ । ಅಭ್ಯಾಸಾಚ್ಚೇತಿ ಹಕಾರಸ್ಯ ಘತ್ವಂ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಯದ್ವೃತ್ತಯೋಗಾದನಿಘಾತಃ ॥

॥ ಪ್ರತಿಪದಾರ್ಥ ॥

**ವಜ್ರಿನ್**-- ವಜ್ರಾಯುಧಧರನಾದ ಎಲೈ ಇಂದ್ರನೇ । **ಓಜಸಾ**—ಬಲಕರವಾದ । **ಯೇನ**—ಯಾವ ಸೋಮರಸಪಾನದಿಂದ । **ಸ್ವರಾಜ್ಯಂ**—ನಿನ್ನ ಸ್ವಾಮಿತ್ವವನ್ನು । **ಅನು ಅರ್ಚನ್**—ಚೆನ್ನಾಗಿ ಪ್ರಕಟಿಸುತ್ತಾ । **ಅದ್ಭ್ಯಃ**—ಅಂತರಿಕ್ಷದಿಂದ । **ವೃತ್ರಂ**—ವೃತ್ರಾಸುರನನ್ನು । **ನಿಃ ಜಘಂಥ**--ವಧ ಮಾಡಿದೆಯೋ । **ಸಃ**—ಅಂತಹ । **ವೃಷಾ**—ಸೇಚನಸ್ವಭಾವವುಳ್ಳ । **ಮದಃ**—ಹರ್ಷಕರವಾದ । **ಶ್ಯೇನಾಭೃತಃ**—ಶ್ಯೇನ (ರೂಪವಾದ ಗಾಯತ್ರಿಯಿಂದ ಸ್ವರ್ಗದಿಂದ) ತರಲ್ಪಟ್ಟ । **ಸುತಃ**—ಸಿದ್ಧವಾದ । **ಸೋಮಃ**—ಸೋಮರಸವು । **ತ್ವಾ**—ನಿನ್ನನ್ನು । **ಅಮದತ್**—ಹೃಷ್ಟನನ್ನಾಗಿ ಮಾಡಿತು (ಸಂತೋಷಪಡಿಸಲಿ)

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಮದಕಾರಕವಾದ ಮತ್ತು ಶ್ಯೇನರೂಪದ ಗಾಯತ್ರಿಯಿಂದ ತರಲ್ಪಟ್ಟ ಸೋಮರಸವು ನಿನಗಾಗಿ ಹಿಂಡಿ ಸಿದ್ಧಮಾಡಲ್ಪಟ್ಟಿರುವುದು. ಬಲಕರವಾದ ಅದನ್ನು ಪಾನಮಾಡಿ ನೀನು, ಸಂತುಷ್ಟನಾದೆ ಮತ್ತು ನಿನ್ನ ಸ್ವಾಮಿತ್ವವನ್ನು ಪ್ರಕಟಪಡಿಸುತ್ತಾ, ವೃತ್ರನನ್ನು ಅಂತರಿಕ್ಷದಿಂದ ಓಡಿಸಿದೆ.

## English Translation

That exceedingly exhilarating Soma-juice, which was brought by the hawk (from heaven), when poured forth, has exhilarated you, so that in your vigour, thunderer, you have struck Vritra from the sky, manifesting your own sovereignty

॥ ವಿಶೇಷವಿಷಯಗಳು ॥

**ವೃಷಾ—ಸೇಚನಸ್ವಭಾವಃ** ನೀರುಗಳಿಂದ ತೋಯಿಸುವ ಸ್ವಭಾವವುಳ್ಳವನಾಗಿರುವ ಸೋಮನು ಎಂದು ಸಾಯಣರೂ, **ವರ್ಷಿತಾ ಯತ್ಪೀತ್ವಾ ಇಂದ್ರೋ ವರ್ಷತಿ ತದಿದಂ ಸೋಮ ಏವ ಉಪಚರ್ಯತೇ ।** ಸೋಮಪಾನದಿಂದ ತೃಪ್ತನಾಗಿ ಇಂದ್ರನು ಮಳೆಯು ಹುಯ್ಯುವಂತೆ ಮಾಡುವುದು ಸೋಮನಿಂದ ಆಗುವ ಕಾರಣ ಸೋಮನಿಗೆ **ವರ್ಷಿತಾ** ಎಂದು ಔಪಚಾರಿಕವಾದ ಪ್ರಯೋಗವಾಗಿರುತ್ತದೆ ಎಂದು ಸ್ಕಂದಸ್ವಾಮಿಗಳೂ ಅರ್ಥವನ್ನು ಹೇಳುವರು

**ಮದಃ—ಸುತಃ । ಮದಕರಃ ಹರ್ಷಕಾರೀ, ಅಭಿಷುತಃ । ಮದಃ** ಎಂಬ ಶಬ್ದವು ಮದವನ್ನು ಉಂಟುಮಾಡುವುದು, ಅಥವಾ ಹರ್ಷವನ್ನು ಉಂಟುಮಾಡುವುದು ಎಂಬ ಅರ್ಥದಲ್ಲಿಯೂ **ಸುತಃ** ಎಂಬ ಶಬ್ದವು ಹಿಂಡಲ್ಪಟ್ಟದ್ದು ಎಂಬ ಅರ್ಥದಲ್ಲಿಯೂ ಉಪಯೋಗಿಸಲ್ಪಟ್ಟಿರುತ್ತದೆ

**ಶ್ಯೇನಾಭೃತಃ— ಶ್ಯೇನರೂಪಮಾಪನ್ನಯಾ ಪಕ್ಷ್ಯಾಕಾರಯಾ ಗಾಯತ್ರ್ಯಾ ದಿವಸ್ಸಕಾಶಾದಾಹೃತಃ ।** ಶ್ಯೇನ ಪಕ್ಷಿಯ ಆಕಾರವನ್ನು ಧರಿಸಿರುವ ಗಾಯತ್ರಿಯು ಸೋಮನನ್ನು ಸ್ವರ್ಗದಿಂದ ತಂದಿರುವ ಕಾರಣ ಸೋಮನು ಶ್ಯೇನಭೃತವೆಂದು ಇಲ್ಲಿ ಉಕ್ತವಾಗಿರುತ್ತವೆ ಐತರೇಯ ಬ್ರಾಹ್ಮಣ (ಐ ಬ್ರಾ ೩-೨೫) ದಲ್ಲಿ ಈ ಇತಿಹಾಸವು ಪ್ರಸಿದ್ಧವಾಗಿರುವುದು. ತೈತ್ತಿರೀಯ ಬ್ರಾಹ್ಮಣದಲ್ಲಿಯೂ—**ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್ । ತಂ ಗಾಯತ್ರ್ಯಾಹರತ್** ಎಂದು ಉಕ್ತವಾಗಿರುವುದು ತೈತ್ತಿರೀಯ ಸಂಹಿತೆಯಲ್ಲಿಯೂ— **ಸಾಬ್ರವೀತ್ತೃತೀಯಸ್ಯಾಮಿತೋ ದಿವಿ ಸೋಮಸ್ತಮಾಹರ** ಎಂದು ಹೇಳಿರುವುದು. ರಾಜನಂತೆ ಶ್ರೇಷ್ಠನಾಗಿರುವ ಸೋಮನು ಸ್ವರ್ಗದಲ್ಲಿ ಇದ್ದನು ಭೂಮಿಯಲ್ಲಿ ಇರಲಿಲ್ಲ ಋಷಿಗಳೂ, ದೇವತೆಗಳೂ ಕೂಡ ಸೋಮನನ್ನು ಭೂಮಿಗೆ ಹೇಗೆ ತರುವುದು ಎಂದು ಯೋಚಿಸಿದರು. ಅನಂತರ ಅವರು— ನೀವು ಸೋಮನನ್ನು ಭೂಮಿಗೆ ಕರೆದು ತನ್ನಿರಿ ಎಂದು ಛಂದಸ್ಸುಗಳನ್ನು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯನ್ನು ನಡಿಸಿಕೊಡಲು ಒಪ್ಪಿಕೊಂಡು ಛಂದಸ್ಸುಗಳು ಪಕ್ಷಿಗಳ ಆಕಾರವನ್ನು ಹೊಂದಿ ಮೇಲಕ್ಕೆ ಹಾರಿದವು ಜಗತಿ ಛಂದಸ್ಸು ಅವುಗಳಲ್ಲಿ ಎಲ್ಲಕ್ಕಿಂತಲೂ ಮೊದಲು ಹಾರಿಹೋಗಿ ಅರ್ಧದಾರಿಯಲ್ಲಿಯೇ ಆಯಾಸದಿಂದ ಸುಮ್ಮಗಾಯಿತು. ಅದು ಯಜ್ಞದಲ್ಲಿ (ದಾನವಾಗಿ) ಕೊಡುವ ದಕ್ಷಿಣೆಯನ್ನೂ ತಪಸ್ಸನ್ನೂ ತಂದಿತು ಬಳಿಕ ತ್ರಿಷ್ಟುಪ್ ಛಂದಸ್ಸು ಮೇಲಕ್ಕೆ ಹಾರಿ ಅರ್ಧದಾರಿಯಲ್ಲಿಯೇ ಆಯಾಸವನ್ನು ಹೊಂದಿ ದಕ್ಷಿಣೆಯನ್ನು ತಂದಿತು ಸೋಮನನ್ನು ತರಲಿಲ್ಲ ಅನಂತರ ಗಾಯತ್ರಿಯು ಪಕ್ಷಿಯ ರೂಪದಿಂದ ಮೇಲಕ್ಕೆ ಹಾರಿತು ಅದು ಸೋಮನು ಇರುವ ಪ್ರದೇಶವನ್ನು ತಲುಪಿ,

ಸೋಮರಕ್ಷಕರನ್ನು ಹೆದರಿಸಿ, ಸೋಮನನ್ನು ತನ್ನ ಕಾಲುಗಳು ಮತ್ತು ಕೊಕ್ಕು ಇವುಗಳಿಂದ ಹಿಡಿದು ಭೂಮಿಗೆ ತಂದಿತು ಇದನ್ನ **ಐತರೇಯ ಬ್ರಾಹ್ಮಣದಲ್ಲಿ ಶ್ಯೇನಭೃತಃ** ಎಂಬುದಾಗಿ ಹೇಳಿರುತ್ತದೆ. ಆದ್ದರಿಂದಲೇ ಇಲ್ಲಿ ಶ್ಯೇನರೂಪಯಾ ಗಾಯತ್ರ್ಯಾ ಆಭೃತಃ ಶ್ಯೇನಾಭೃತಃ ಎಂದು ಹೇಳಿರುತ್ತದೆ

**ಅದ್ಭ್ಯಃ—ಅಂತರಿಕ್ಷಸಕಾಶಾತ್ ವೃತ್ರಂ ನಿಃ ಜಘಂಥ--ಹತವಾನಸಿ, ಯೇನ—ಪೀತ್ವಾ, ಪಾತುಂ ವಾ ಇತ್ಯರ್ಥಃ ।** ಅಪ್ ಶಬ್ದವು ಅಂತರಿಕ್ಷವಾಚಿಯಾಗಿರುವುದು (ನಿ. ೨-೧೦) ವೃತ್ರಶಬ್ದಕ್ಕೆ ವೃತ್ರಾಸುರನೆಂದು ಅರ್ಥವು ಅಂತರಿಕ್ಷದಲ್ಲಿ ವೃತ್ರಾಸುರನನ್ನು ಹೊಡೆದಿರುತ್ತೀಯೆ ಎಂದು ಸಾಯಣರೂ, ಸೋಮಪಾನವನ್ನು ಮಾಡಿರುವ ಕಾರಣ ಬಲಯುಕ್ತನಾಗಿ, ಅಥವಾ ಸೋಮಪಾನಕ್ಕಾಗಿ **ವೃತ್ರಂ—ಮೇಘಂ ಅಸಾಮರ್ಥ್ಯಾಯ ನಿಜಘಂಥ ನಿಶ್ಚಯೇನ ಹಂಸಿ ಹತವಾನ್ ವಾ ।** ಮೇಘವನ್ನು ಉದಕಕ್ಕಾಗಿ ಬಲವಾಗಿ ಹೊಡೆಯುತ್ತೀಯೆ ಅಥವಾ ಹೊಡೆದು ಇರುತ್ತೀಯೆ ಎಂದರೆ ಮೇಘಗಳಿಂದ ವೃಷ್ಟಿಯು ಆಗುವಂತೆ ಮಾಡುತ್ತೀಯೆ ಎಂದು ಸ್ಕಂದಸ್ವಾಮಿಗಳೂ ಅರ್ಥವಿವರಣೆಯನ್ನು ಮಾಡಿರುವರು

॥ ವ್ಯಾಕರಣಪ್ರಕ್ರಿಯಾ ॥

**ಅಮದತ್**--ಮದೀ ಹರ್ಷೇ ಧಾತು ಪ್ರಯೋಜಕವ್ಯಾಪಾರ ತೋರುವುದರಿಂದ **ಹೇತುಮತಿ ಚ** (ಪಾ ಸೂ ೩-೧-೨೬) ಎಂಬುದರಿಂದ ಣಿಚ್ **ಅತ ಉಪಧಾಯಾಃ** ಎಂಬುದರಿಂದ ಣಿಚ್ ನಿಮಿತ್ತವಾಗಿ ಧಾತುವಿನ ಉಪಧೆಗೆ ವೃದ್ಧಿ **ಮದೀ ಹರ್ಷಗ್ಲೇಪನಯೋಃ** ಎಂದು ಘಟಾದಿಯಲ್ಲಿ ಪಾಠಮಾಡಿರುವುದರಿಂದ ಹರ್ಷಾರ್ಥ ತೋರುವುದರಿಂದ ಇದಕ್ಕೆ ಮಿತ್ ಸಂಜ್ಞಾ ಬರುತ್ತದ. **ಮಿತಾಂ ಹ್ರಸ್ವಃ** (ಪಾ ಸೂ ೬-೪-೯೨) ಎಂಬುದರಿಂದ ಉಪಧೆಗೆ ಪುನಃ ಹ್ರಸ್ವ. ಣಿಜಂತದ ಮೇಲೆ ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚ** ಸೂತ್ರದಿಂದ ಇಕಾರಲೋಪ. ಶಪ್ ವಿಕರಣ. **ಛಂದಸ್ಯುಭಯಥಾ** ಎಂಬುದರಿಂದ ಶಪ್ಪಿಗೆ ಆರ್ಧಧಾತುಕ ಸಂಜ್ಞೆ ಬರುವುದರಿಂದ **ಣೇರನಿಟಿ** (ಪಾ. ಸೂ ೬-೪-೫೧) ಎಂಬುದರಿಂದ ಣಿಚ್ಚಿಗೆ ಲೋಪ ಅಂಗಕ್ಕೆ ಅಡಾಗಮ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಅದ್ಭ್ಯಃ—**ಅಪ್ ಎಂಬುದು ಇಲ್ಲಿ ಅಂತರಿಕ್ಷ (ಆಕಾಶ) ದ ಹೆಸರು ಇದು ಬಹುವಚನಾಂತವಾಗಿ ಸ್ತ್ರೀಲಿಂಗ ದಲ್ಲಿರುತ್ತದೆ. ಇದಕ್ಕೆ ಪಂಚಮಿಯಲ್ಲಿ ಭ್ಯಸ್ ಪರವಾದಾಗ ಭಕಾರಾದಿ ಪ್ರತ್ಯಯ ಪರವಾದುದರಿಂದ **ಅಪೋಭಿ** (ಪಾ. ಸೂ. ೭-೪-೪೮) ಎಂಬುದರಿಂದ ಪಕಾರಕ್ಕೆ ತಕಾರಾದೇಶ ಬರುತ್ತದೆ ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ **ಊಡಿದಂಪದಾದಿ—** (ಪಾ ಸೂ ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಜಘಂಥ—**ಹನ ಹಿಂಸಾಗತ್ಯೋಃ ಧಾತು ಲಿಟ್ ಮಧ್ಯಮಪುರುಷ ಏಕವಚನದಲ್ಲಿ **ಪರಸ್ಮೈಪದಾನಾಂ-** (ಪಾ ಸೂ ೩-೪-೮೨) ಎಂಬುದರಿಂದ ಥಲಾದೇಶ. **ಲಿಣ್ಣಿ**ಮಿತ್ತವಾಗಿ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ. ಚುತ್ವ. ಜಸ್ತ್ವ **ಅಭ್ಯಾಸಾಚ್ಚ** (ಪಾ. ಸೂ. ೭-೩-೫೫) ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಧಾತುವಿನ ಹಕಾರಕ್ಕೆ ಕುತ್ವ. **ಕೃಸೃಭೃ—**(ಪಾ ಸೂ ೭-೨-೧೩) ಸೂತ್ರದಲ್ಲಿ **ಲಿಟ್ಟಿ**ನಲ್ಲಿ ಇಣ್ನಿಷೇಧ ಬರುವುದಾದರೆ ಈ ಸೂತ್ರ ಪಠಿತವಾದವುಗಳಿಗೆ ಮಾತ್ರವೆಂದು ನಿಯಮಮಾಡಿರುವುದರಿಂದ ಇಲ್ಲಿ ಥಲಿಗೆ ಇಟ್ ಪ್ರಾಪ್ತವಾದರೆ **ಉಪದೇಶೇತ್ವತಃ**

(ಪಾ. ಸೂ. ೭-೨-೬೨) ಎಂಬುದರಿಂದ ಅಕಾರವುಳ್ಳ ಧಾತುವಾದುದರಿಂದ ಪುನಃ ನಿಷೇಧ ಬರುತ್ತದೆ. ನಕಾರಕ್ಕೆ ಅನುಸ್ವಾರ ಪರಸವರ್ಣ ಜಘನ್ಥ ಎಂದು ರೂಪವಾಗುತ್ತದೆ. ಹಿಂದೆ ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯ **ಲಿತ್ತಾ**ದುದರಿಂದ **ಲಿತಿ** (ಪಾ. ಸೂ ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ

**ಅರ್ಚನ್**—ಅರ್ಚ ಪೂಜಾಯಾಂ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಶಪ್ ವಿಕರಣ. **ಅತೋಗುಣೇ** ಎಂಬುದರಿಂದ ಪರರೂಪ. ಪ್ರಥಮಾ ಸುಪರವಾದಾಗ **ಉಗಿದಚಾಂ ಸ**—ಎಂಬುದರಿಂದ ನುಮಾಗಮ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಸುಲೋಪ ಸಂಯೋಗಾಂತಲೋಪದಿಂದ ತಕಾರಲೋಪ ಶಪ್, ಲಸಾರ್ವಧಾತುಕವೂ ಅನುದಾತ್ತವಾದುದರಿಂದ ಧಾತುಸ್ವರ ಉಳಿಯುತ್ತದೆ ॥ ೨ ॥



॥ ಸಂಹಿತಾಪಾಠಃ ॥

ಪ್ರೇಹ್ಯಭೀಹಿ ಧೃಷ್ಣುಹಿ ನ ತೇ ವಜ್ರೋ ನಿ ಯಂಸತೇ ।
ಇಂದ್ರ ನೃಮ್ಣಂ ಹಿ ತೇ ಶವೋ ಹನೋ ವೃತ್ರಂ ಜಯಾ
ಅಪೋಽರ್ಚನ್ನನು ಸ್ವರಾಜ್ಯಂ ॥ ೩ ॥

॥ ಪದಪಾಠಃ ॥

ಪ್ರ । ಇಹಿ । ಅಭಿ । ಇಹಿ । ಧೃಷ್ಣುಹಿ । ನ । ತೇ । ವಜ್ರಃ । ನಿ । ಯಂಸತೇ ।
ಇಂದ್ರ । ನೃಮ್ಣಂ । ಹಿ । ತೇ । ಶವಃ । ಹನಃ । ವೃತ್ರಂ । ಜಯಾಃ । ಅಪಃ ।
ಅರ್ಚನ್ । ಅನು । ಸ್ವಽರಾಜ್ಯಂ ॥ ೩ ॥

॥ ಸಾಯಣಭಾಷ್ಯಂ ॥

**ಹೇ ಇಂದ್ರ ಪ್ರೇಹಿ । ಪ್ರಕರ್ಷೇಣ ಗಚ್ಛ । ಅಭೀಹಿ । ಹಂತವ್ಯಾನ್ ಶತ್ರೂನಾಭಿಮುಖ್ಯೇನ ಪ್ರಾಪ್ನುಹಿ । ಪ್ರಾಪ್ಯ ಚ ಧೃಷ್ಣುಹಿ । ತಾನ್ ಶತ್ರೂನಭಿಭವ । ತೇ ತವ ವಜ್ರೋ ನ ನಿ ಯಂಸತೇ । ಶತ್ರುಭಿರ್ನ ನಿಯಮ್ಯತೇ । ಅಪ್ರತಿಹತಗತಿರಿತ್ಯರ್ಥಃ । ತಥಾ ತೇ ಶವಸ್ತ್ವದೀಯಂ ಬಲಂ ನೃಮ್ಣಂ ಪುರುಷಾಣಾಂ ನಾಮಕಮಭಿಭಾವಕಂ ಹಿ ಯಸ್ಮಾದೇವಂ ತಸ್ಮಾದ್ವೃತ್ರಮಸುರಂ ಮೇಘಂ ವಾ ಹನಃ । ಜಹಿ । ತತೋಽನಂತರಂ ತೇನ ನಿರುದ್ಧಾ ಅಪ ಉದಕಾನಿ ಜಯಾಃ । ವೃತ್ರಂ ಹತ್ವಾ ತೇನಾವೃತಮುದಕಂ ಲಭಸ್ವೇತ್ಯರ್ಥಃ । ಅನ್ಯತ್ಸಮಾನಂ ॥ ಯಂಸತೇ । ಯಮೇಃ ಕರ್ಮಣಿ ಲೇಟಿ ಸಿಬ್ಬಹುಲಮಿತಿ ಸಿಪ್ । ಲೇಟೋಽಡಾಟಾವಿತ್ಯಡಾಗಮಃ । ಹನಃ । ಲೋಡರ್ಥೇ ಛಾಂದಸೋ ಲಙ್ । ಬಹುಲಂ ಛಂದಸೀತಿ ಶಪೋ ಲುಗಭಾವಃ । ಶಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಪೂರ್ವಪದಸ್ಯಾಸಮಾನವಾಕ್ಯಸ್ಥತ್ವಾನ್ನಿಘಾತಾಭಾವಃ । ಜಯಾಃ । ಜಯತೇರ್ಲೇಟ್ಯಾಡಾಗಮಃ । ಪೂರ್ವವತ್ಸ್ವರಃ ॥**

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಪ್ರ ಇಹಿ**—ಶೀಘ್ರವಾಗಿ ಹೋಗು । **ಅಭಿ ಇಹಿ**—(ಶತ್ರುಗಳನ್ನು) ಎದುರಿಸು । **ಧೃಷ್ಣುಹಿ**—(ಅವರನ್ನು) ಪರಾಜಯಗೊಳಿಸು । **ಹಿ**—ಯಾವ ಕಾರಣದಿಂದ । **ತೇ**—ನಿನ್ನ । **ವಜ್ರಃ**—ವಜ್ರಾಯುಧವು । **ನ ನಿ ಯಂಸತೇ**—(ಶತ್ರುಗಳಿಂದ) ನಿಯಮಿಸಲ್ಪಡುವುದಿಲ್ಲವೋ । **ತೇ ಶವಃ**—ನಿನ್ನ ಬಲವು । **ನೃಮ್ಣಂ**—ಪುರುಷರನ್ನು ಸೋಲಿಸತಕ್ಕದ್ದೋ (ಆ ಕಾರಣದಿಂದ) । **ಸ್ವರಾಜ್ಯಂ**—ನಿನ್ನ ಸ್ವಾಮಿತ್ವವನ್ನು । **ಅನು ಅರ್ಚನ್**—ಪ್ರಕಟಗೊಳಿಸುತ್ತಾ । **ವೃತ್ರಂ**—ವೃತ್ರಾಸುರನನ್ನು (ಮೇಘವನ್ನು) । **ಹನಃ**—ಹೊಡಿ । **ಅಪಃ**—(ತಡೆಯಲ್ಪಟ್ಟ) ಉದಕವನ್ನು । **ಜಯಾಃ**—ಜಯಿಸು (ಬರುವಂತೆ ಮಾಡು)

॥ ಭಾವಾರ್ಥ ॥

ಎಲೈ ಇಂದ್ರನೇ ಶೀಘ್ರವಾಗಿ ಹೋಗಿ, ಶತ್ರುಗಳನ್ನು ಎದುರಿಸಿ, ಅವರನ್ನು ಪರಾಭವಗೊಳಿಸು, ನಿನ್ನ ವಜ್ರಾಯುಧಕ್ಕೆ ತಡೆಯಿಲ್ಲ; ನಿನ್ನ ಶಕ್ತಿಯು ಮನುಷ್ಯರನ್ನೂ (ಶತ್ರುಗಳನ್ನೂ) ನಾಶಪಡಿಸುವಂತಹುದು, ಆದುದರಿಂದ, ನಿನ್ನ ಸ್ವಾಮಿತ್ವವನ್ನು ಪ್ರಕಟಗೊಳಿಸುತ್ತಾ, ವೃತ್ರನನ್ನೂ (ಮೇಘವನ್ನೂ) ಪ್ರಹರಿಸಿ ಅವನು ತಡೆದಿರುವ ವೃಷ್ಟ್ಯುದಕವನ್ನೂ ಬೀಳುವಂತೆ ಮಾಡು.

## English Translation

Hasten, assail, subdue, your thunderbolt cannot fail; your vigour, Indra, destroys men ; slay Vritra, win the waters, manifesting your own sovereignty.

॥ ವಿಶೇಷವಿಷಯಗಳು ॥

**ಇಂದ್ರ ನೃಮ್ಣಂ ಹಿ ತೇ ಶವಃ**—**ಹೇ ಇಂದ್ರ ತ್ವದೀಯಂ ಬಲಂ ನೄಣಾಂ ಪುರುಷಾಣಾಂ ನಾಮಕಮಭಿಭಾವಕಂ** । ಎಲೈ ಇಂದ್ರನೇ ನಿನ್ನ ಬಲವು ಮನುಷ್ಯರನ್ನು ತಿರಸ್ಕರಿಸುವುದು ಎಂದು ಅರ್ಥವು ಶವಃ ಎಂಬ ಪದವು ಇಪ್ಪತ್ತೆಂಟು ಬಲನಾಮಗಳಲ್ಲಿ ಪಠಿತವಾಗಿರುವುದರಿಂದ ಬಲವೆಂದು ಅರ್ಥವನ್ನೂ ಬೋಧಿಸುತ್ತದೆ. (ನಿ ೩-೯) ನೃಮ್ಣ ಶಬ್ದವೂ ಇಪ್ಪತ್ತೆಂಟು ಬಲನಾಮಗಳಲ್ಲಿ (ನಿ ೩-೯) ಪಠಿತವಾಗಿರುವುದು ಮತ್ತು ಮಘಂ ರೇಕ್ಣಃ ಎಂಬ ಇಪ್ಪತ್ತೆಂಟು ಧನನಾಮಗಳಲ್ಲಿಯೂ (ನಿ ೩-೯) ಪಠಿತವಾಗಿರುತ್ತದೆ. ಯಾಸ್ಕರು **"ನೄನ್ ನತಮ್"** ಎಂದು ಭಾಷ್ಯದಲ್ಲಿ ಅರ್ಥವನ್ನು ವಿವರಿಸಿರುತ್ತಾರೆ. ಇದಕ್ಕೆ ಮನುಷ್ಯರನ್ನು ತಗ್ಗಿಸುವಂತೆ ಮಾಡುವುದು ಎಂದು ಅರ್ಥವು **"ನೄನ್ ಶತ್ರುಭೂತಾನ್ ಪ್ರತಿ ನಮತಿ ನಮಯತಿ ಪ್ರಹ್ವೀಕರೋತಿ" ಇತಿ ಸ್ಕಂದಸ್ವಾಮಿ.** ಶತ್ರುಗಳಾದವರನ್ನು ತಗ್ಗುವಂತೆ ಮಾಡುತ್ತದೆ ಎಂದು ಸ್ಕಂದಸ್ವಾಮಿಗಳು ಅರ್ಥಮಾಡಿರುವರು ಇಂದ್ರನ ಬಲವು ಶತ್ರುಗಳನ್ನು ತಿರಸ್ಕರಿಸುವುದು (ಸೋಲಿಸುವುದು) ಎಂದು ಅರ್ಥವು

**ಅರ್ಚನ್**—**ಪೂಜಯರ್ನ್, ಸ್ವಸ್ಯ ಸ್ವಾಮಿತ್ವಂ ಪ್ರಕಟಯನ್** । **ಅರ್ಚತಿ** ಎಂಬ ಕ್ರಿಯಾಪದವು ನಲವತ್ತನಾಲ್ಕು ಅರ್ಚತಿಕರ್ಮಬೋಧಕವಾದ ಪದಗಳಲ್ಲಿ (ನಿ ೩-೧೪) ಉಕ್ತವಾಗಿರುವುದರಿಂದಲೂ, **ಅರ್ಚ-ಪೂಜಾಯಾಂ** ಎಂಬ ಧಾತುವಿನಿಂದ ಅರ್ಚನ್ ಎಂಬ ಶಬ್ದರೂಪವು ನಿಷ್ಪನ್ನವಾಗಿರುವುದರಿಂದಲೂ ಪೂಜಿಸುವುದು ಎಂದು ಅರ್ಥವು ಇಲ್ಲಿ ಇಂದ್ರನು ತನಗೆ ಇರುವ ಸ್ವರಾಜ್ಯದ ವಿಷಯದಲ್ಲಿ ಆಚರಿಸಬೇಕಾದ ಪೂಜೆಯು ತನ್ನ ಪ್ರಭುತ್ವವು (ರಕ್ಷಣೆಯ ಕ್ರಮವು) ಎಲ್ಲರಿಗೂ ಅನುಕೂಲವಾಗಿ, ಸುಖಕರವಾಗಿರುವಂತೆ ನಡೆಯುವುದಾಗಿರುವುದರಿಂದ ತನ್ನ ಸ್ವಾಮಿತ್ವವು ಎಲ್ಲರಿಗೂ (ತೋರಿಸು) ಕಾಣುವಂತೆ ಆಚರಿಸುವುದು ಎಂದು ಅರ್ಥವು

**ವೃತ್ರಂ ಹನಃ ಅಪಃ ಜಯಾಃ**—**ಅಸುರಂ ಮೇಘಂ ವಾ ಜಹಿ । ವೃತ್ರಂ ಹತ್ವಾ ತೇನಾವೃತಮುದಕಂ ಲಭಸ್ವ** । ವೃತ್ರಶಬ್ದವು– ಅದ್ರಿಃ, ಗ್ರಾವಾ, ಎಂಬ ಮೂವತ್ತು ಮೇಘವಾಚಕ ಪದಗಳಲ್ಲಿ (ನಿ ೨-೨೧) ಉಕ್ತವಾಗಿರುವುದು ವೃಞ್ ವರಣೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು **ವೃಣೋತಿ ಆಚ್ಛಾದಯತಿ ಕೃತ್ಸ್ನಂ ನಭಃ** ಅಂತರಿಕ್ಷವೆಲ್ಲವನ್ನೂ ಆವರಿಸುವುದು ಎಂಬ ಅರ್ಥವನ್ನು ಬೋಧಿಸುವುದರಿಂದಲೂ ಅಥವಾ ವೃಧು ವೃದ್ಧೌ ಎಂಬ ಧಾತುವಿನಿಂದ ನಿಷ್ಪನ್ನವಾಗಿ **ವರ್ಧತೇ ಹಿ ವರ್ಷಾಸು** ವರ್ಷಋತುವಿನಲ್ಲಿ ವೃದ್ಧಿಯನ್ನು ಹೊಂದುವುದರಿಂದ ವೃತ್ರ ಶಬ್ದವು ಮೇಘವೆಂಬ ಅರ್ಥವನ್ನು ಬೋಧಿಸುವುದು. ಮತ್ತು ಈ ಶಬ್ದವು ಅಸು ಕ್ಷೇಪಣೇ ಎಂಬ ಧಾತುವಿನಿಂದ ನಿಷ್ಪನ್ನವಾದ ಅಸುರ ಶಬ್ದಕ್ಕೆ **ಅಸ್ಯತೇ ಕ್ಷಿಪ್ಯತೇ ಸ್ಥಾನೇ ಇಂದ್ರೇಣ ವರ್ಷಾರ್ಥಂ** ಇಂದ್ರನಿಂದ (ಉದಕವನ್ನು) ನೀರನ್ನು ಸುರಿಸುವುದಕ್ಕಾಗಿ ಪ್ರೇರಿಸಲ್ಪಡುವ ಕಾರಣ ಅಸುರಶಬ್ದವು ಮೇಘವಾಚಕವಾಗಿ ವೃತ್ರಶಬ್ದದ ಸಂಗಡ ಪಠಿತವಾಗಿರುವುದು. ಇದರಂತೆಯೇ ಅಸುರಶಬ್ದಕ್ಕೆ ಜಲವಾನ್, ಪ್ರಾಣವಾನ್ ಇವೇ ಮೊದಲಾದ ಅರ್ಥಗಳೂ ಇರುತ್ತವೆ. ಅಪ್ ಶಬ್ದವು-ನೂರೊಂದು ಉದಕನಾಮಗಳಲ್ಲಿ ಅಮೃತಶಬ್ದದ ಸಂಗಡ ನಿರುಕ್ತದಲ್ಲಿ (ನಿ. ೭-೩೪) ಉಕ್ತವಾಗಿರುತ್ತದೆ. **ಲೋಕ ರಕ್ಷಣೆಗೆ ಅತ್ಯಂತ ಉಪಯುಕ್ತವಾಗಿರುವ ಉದಕಗಳನ್ನು ತಡದಿರುವ ಮೇಘಗಳನ್ನು ನಿಗ್ರಹಿಸಿ ಅಮೃತವನ್ನು (ಅಮೃತದಂತಿರುವ ನೀರನ್ನು) ಸುರಿಸುವಂತೆ** ಮಾಡು ಎಂದು ಇಂದ್ರನನ್ನು ಕುರಿತು ಪ್ರಾರ್ಥನೆಯು

ಇತಿಹಾಸದಪಕ್ಷವಾದ ವ್ಯಾಖ್ಯಾನದಲ್ಲಿ ವೃತ್ರನೆಂಬ ಅಸುರನು ಇದ್ದನು. ಅವನು ದಿನದಿನಕ್ಕೆ ಇಷುಮಾತ್ರ ಪ್ರಮಾಣ ದಿಂದ ಬೆಳೆದು ದೇವತೆಗಳಿಗೂ ಲೋಕಕ್ಕೂ ರಕ್ಷಣೆಗೆ ಸಾಧನವಾದ ಅಮೃತವನ್ನೂ ಉದಕವನ್ನೂ ತಡೆಯುತ್ತಿದ್ದ ನಾದುದರಿಂದ ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಿ ಅವನನ್ನು ನಿಗ್ರಹಮಾಡಿ ಎಲ್ಲರಿಗೂ ಸುಖವನ್ನು ಉಂಟು ಮಾಡಿದನೆಂದು ಅರ್ಥವು

॥ ವ್ಯಾಕರಣಪ್ರಕ್ರಿಯಾ ॥

**ಇಹಿ**—ಇಣ್ ಗತೌ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. **ಅದಿ ಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪಿಗೆ ಲುಕ್. ಹಿಗೆ ಅಪಿತ್ವದನ್ನು ವಿಧಾನಮಾಡಿರುವುದರಿಂದ ಙಿತ್ವ ಬರುವುದ ರಿಂದ ಅದನ್ನು ನಿಮಿತ್ತೀಕರಿಸಿ ಧಾತುವಿಗೆ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಧೃಷ್ಣುಹಿ**--ಞಿ ಧೃಷಾ ಪ್ರಾಗಲ್ಭ್ಯೇ. ಧಾತು ಸ್ವಾದಿ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಹಿ ಆದೇಶ **ಸ್ವಾದಿಭ್ಯಃ ಶ್ನುಃ** ಎಂಬುದರಿಂದ ಶ್ನು ವಿಕರಣ. **ಸಾರ್ವಧಾತುಕಮಪಿತ್** ಎಂಬುದರಿಂದ ಇದಕ್ಕೆ ಙಿತ್ವ ಬರುವುದರಿಂದ ಲಘೂಪಧಗುಣ ಬರುವುದಿಲ್ಲ. **ರಷಾಭ್ಯಾಂ ಣೋ ನಃ ಸಮಾನಪದೇ** ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ. **ತಿಙ್ಙತಿಙಃ** ಸೂತ್ರದಲ್ಲಿ ಅತಿಙಃ ಎಂದು ಪರ್ಯುದಾಸಮಾಡಿರುವುದರಿಂದ ಇದರ ಹಿಂದೆ ಇಹಿ ಎಂಬ ತಿಙಂತವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಹಿಗೆ ಅಪಿತ್ವವಿರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತ ವಾಗುತ್ತದೆ

**ಯಂಸತೇ**—ಯಮ ಉಪರಮೇ ಧಾತು . ಇದಕ್ಕೆ ಕರ್ಮಣಿಯಲ್ಲಿ ಲೇಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಟಿತಆತ್ಮನೇಪದಾನಾಂ**--ಸೂತ್ರದಿಂದ ಏತ್ವ **ಸಿಬ್ಬಹುಲಂ ಲೇಟಿ**(ಪಾ ಸೂ ೩-೧-೩೪) ಎಂಬು ದರಿಂದ ಸಿಪ್ **ಲೇಟೋಽಡಾಟೌ** (ಪಾ. ಸೂ ೩-೪-೯೪) ಎಂಬುದರಿಂದ ಪ್ರತ್ಯಯಕ್ಕೆ ಅಡಾಗಮ ಧಾತುವಿನ ಮಕಾರಕ್ಕೆ **ನಶ್ಚಾಪದಾಂತಸ್ಯಝಲಿ** ಸೂತ್ರದಿಂದ ಅನುಸ್ವಾರ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಹನಃ**—ಹನ ಹಿಂಸಾಗತ್ಯೋಃ ಧಾತು ಅದಾದಿ. ಲೋಡರ್ಥ ತೋರುವಾಗ **ಛಂದಸಿ ಲುಙ್ಲಙ್ಲಿಟಃ** (ಪಾ. ಸೂ. ೩-೪-೬) ಎಂಬುದರಿಂದ ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ ಇಕಾರಲೋಪ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಲುಕ್ ಬರುವುದಿಲ್ಲ. **ಬಹುಲಂಛಂದಸ್ಯಮಾಙ್ಯೋಗೇಽಪಿ** ಎಂಬು ದರಿಂದ ಅಡಾಗಮ ಬರುವುದಿಲ್ಲ ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗ. ಇದರ ಪೂರ್ವಪದವು ವಾಕ್ಯಾಂತರ ಸಂಬದ್ಧ ವಾದುದರಿಂದ ಸಮಾನವಾಕ್ಯದಲ್ಲಿ ಪದದ ಪರದಲ್ಲಿ ಬಾರದಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದ ರಿಂದ **ಅನುದಾತ್ತೌ ಸುಪ್ಪಿತೌ** ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ

**ಜಯೋಃ**— ಜಿ ಜಯೇ ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚಲೋಪಃ ಪರಸ್ಮೈಪದೇಷು** (ಪಾ. ಸೂ. ೩-೪-೯೭) ಎಂಬುದರಿಂದ ಇಕಾರಲೋಪ. **ಲೇಟೋಽಡಾಟೌ** ಎಂಬುದರಿಂದ ಅದಕ್ಕೆ ಅಡಾಗಮ. ಶಪ್ ವಿಕರಣ ನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ. ಅಯಾದೇಶ ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ ಹಿಂದಿನಂತೇ ಧಾತುಸ್ವರ ಉಳಿಯುತ್ತದೆ

**ಅಪಃ**— **ಊಡಿದಂ ಪದಾದಿ**— ಸೂತ್ರದಿಂದ ವಿಭಕ್ತಿಗೆ (ಶಸ್) ಉದಾತ್ತಸ್ವರ ಬರುತ್ತದೆ ‖ ೪ ‖



‖ ಸಂಹಿತಾಪಾಠಃ ‖

ನಿರಿಂದ್ರ ಭೂಮ್ಯಾ ಅಧಿ ವೃತ್ರಂ ಜಘಂಥ ನಿರ್ದಿವಃ ।
ಸೃಜಾ ಮರುತ್ವತೀರವ ಜೀವಧನ್ಯಾ ಇಮಾ ಅಪೋಽರ್ಚನ್ನನು
ಸ್ವರಾಜ್ಯಂ ‖ ೪ ‖

‖ ಪದಪಾಠಃ

ನಿಃ । ಇಂದ್ರ । ಭೂಮ್ಯಾಃ । ಅಧಿ । ವೃತ್ರಂ । ಜಘಂಥ । ನಿಃ । ದಿವಃ ।
ಸೃಜ । ಮರುತ್ವತೀಃ । ಅವ । ಜೀವಽಧನ್ಯಾಃ । ಇಮಾಃ । ಅಪಃ । ಅರ್ಚನ್ ।
ಅನು । ಸ್ವಽರಾಜ್ಯಂ ‖ ೪ ‖

॥ ಸಾಯಣಭಾಷ್ಯಂ ॥

**ಹೇ ಇಂದ್ರ ಭೂಮ್ಯಾ ಅಧಿ ಭೂಲೋಕಸ್ಯೋಪರಿ ವೃತ್ರಂ ನಿರ್ಜಘಂಥ । ನಿಃಶೇಷೇಣ ಹತವಾನಸಿ । ತಥಾ ದಿವೋ ದ್ಯುಲೋಕಾನ್ನಿರ್ಜಘಂಥ । ಹತ್ವಾ ಚೇಮಾ ಅಪೋ ವೃಷ್ಟ್ಯುದಕಾನ್ಯವ ಸೃಜ । ಅಧಃ ಪಾತಯ । ಕೀದೃಶೀರಪಃ । ಮರುತ್ವತೀರ್ಮರುದ್ಭಿಃ ಸಂಯುಕ್ತಾ ಜೀವಧನ್ಯಾ ಜೀವಾಃ ಪ್ರಾಣಿನೋ ಧನ್ಯಾಸ್ತೃಪ್ತಾ ಯಾಭಿಸ್ತಾಃ । ಅನ್ಯತ್ಸಮಾನಂ ॥**

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಭೂಮ್ಯಾಃ ಅಧಿ**—ಭೂಲೋಕದ ಮೇಲೆ । **ವೃತ್ರಂ**—ವೃತ್ರಾಸುರನನ್ನು । **ನಿಃ ಜಘಂಥ**—ನಿಶ್ಶೇಷವಾಗಿ ವಧಿಸಿದ್ದೀಯೆ । **ದಿವಃ**—(ಹಾಗೆಯೇ) ದ್ಯುಲೋಕದಿಂದಲೂ । **ನಿಃ (ಜಘಂಥ)**—ವಧಿಸಿದ್ದೀಯೇ (ಅನಂತರ) । **ಇಮಾಃ**—ಈ । **ಮರುದ್ವತೀಃ**—ಮರುತ್ತಿನಿಂದ ಯುಕ್ತವಾದ । **ಜೀವಧನ್ಯಾಃ**—ಪ್ರಾಣಿಗಳು ಧನ್ಯರಾಗುವಂತಹ । **ಅಪಃ**—ವೃಷ್ಟ್ಯುದಕವನ್ನು । **ಸ್ವರಾಜ್ಯಂ**—ನಿನ್ನ ಸ್ವಾಮಿತ್ವವನ್ನು । **ಅನು ಅರ್ಚನ್**—ಪ್ರಕಟಗೊಳಿಸುತ್ತಾ । **ಅವ ಸೃಜ**—ಕೆಳಗೆ ಬೀಳುವಂತೆ ಮಾಡು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ವೃತ್ರನನ್ನು ಭೂಲೋಕ ಮತ್ತು ಆಕಾಶಗಳೆರಡರಿಂದಲೂ ಓಡಿಸಿದ್ದೀಯೇ, (ಈಗ) ವಾಯುವಿನಿಂದ ಯುಕ್ತವಾದ, ಜೀವಿಗಳನ್ನು ಧನ್ಯರನ್ನಾಗಿ ಮಾಡುವ ವೃಷ್ಟ್ಯುದಕವನ್ನು, ನಿನ್ನ ಸ್ವಾಮಿತ್ವವನ್ನು ಪ್ರಕಟಗೊಳಿಸುತ್ತಾ, ಕೆಳಗೆ ಬೀಳುವಂತೆ ಮಾಡು. (ಮಳೆ ಹುಯ್ಯುವಂತೆ ಮಾಡು)

## English Translation.

You have struck Vritra from off the earth and from heaven; (now) let loose the wind-bound, life-sustaining rain, manifesting your own sovereignty.

॥ ವಿಶೇಷವಿಷಯಗಳು ॥

**ಮರುತ್ವತೀಃ—ಮರುದ್ಭಿಃ ಸಂಯುಕ್ತಾಃ** । ವಾಯುವಿನಿಂದ ಪ್ರೇರಿತವಾಗಿರುವ ವೃಷ್ಟಿಯಿಂದ ಭೂಮಿಗೆ ಬೇಕಾಗಿರುವ ಉದಕಗಳನ್ನು ಎಂದು ಅರ್ಥವು. ಮಳೆ ಹುಯ್ಯುವಾಗ ಗಾಳಿಯು ರಭಸದಿಂದ ಬೀಸುವುದು ಸ್ವಾಭಾವಿಕವು. ಸ್ಕಂದಸ್ವಾಮಿಗಳು-**ದಾತೃತ್ವೇನ ಮರುತೋ ಯಾಸಾಂ ಸಂತಿ**, ಮರುದ್ದೇವತೆಗಳು ಉದಕಗಳನ್ನು ಕೊಡುವುದರಲ್ಲಿ ಸಿದ್ಧರಾಗಿರುವರು, ಅಥವಾ **ತ್ವತ್ಸಖಾಯೋ ಮರುತಃ ಯೇ ದಾತುಂ ಸಮರ್ಥಾಃ** ನಿನ್ನ ಸ್ನೇಹಿತರಾದ ಮರುದ್ದೇವತೆಗಳು ಉದಕಗಳನ್ನು ಕೊಡುವುದರಲ್ಲಿ ಸಮರ್ಥರು ಎಂದೂ ಅರ್ಥವನ್ನು ಹೇಳಿರುವರು.

**ಜೀವಧನ್ಯಾಃ—ಜೀವಾಃ ಪ್ರಾಣಿನೋ ಧನ್ಯಾಸ್ತೃಪ್ತಾ ಯಾಭಿಸ್ತಾಃ |** ಪ್ರಾಣಿಗಳು ನೀರನ್ನು ಕುಡಿದು ಅಥವಾ ಬೇಕಾದ ಕಾರ್ಯಗಳಲ್ಲಿ ಉಪಯೋಗಿಸಿ ತೃಪ್ತಿಯನ್ನು ಅಥವಾ ಸಂತೋಷವನ್ನು ಹೊಂದುವುದರಿಂದ ನೀರಿಗೆ ಈ ಹೆಸರು ಬಂದಿರುವುದು. ಸ್ಕಂದಸ್ವಾಮಿಗಳು ಧನಶಬ್ದದಿಂದ ಧನ್ಯಶಬ್ದವು ನಿಷ್ಪನ್ನವಾಗಿರುವ ಕಾರಣ ಉದಕವು ಪ್ರಾಣಿಗಳಿಗೆ ಧನವಾಗಿರುವುದೆಂದೂ, ಅಥವಾ ಸಂತೋಷಪಡಿಸು ಎಂದು ಅರ್ಥವುಳ್ಳ **ಧಿನು ಪ್ರೀಣನೇ** ಎಂಬ ಧಾತುವಿನಿಂದ ಧನ್ಯಶಬ್ದದ ರೂಪವು ನಿಷ್ಪನ್ನವಾಗಿರುವುದರಿಂದ **ಸರ್ವಜೀವಾನಾಂ ಪ್ರೀಣಯಿತ್ರೀಃ** ಎಲ್ಲಾ ಪ್ರಾಣಿಗಳನ್ನೂ ಸಂತೋಷಪಡಿಸುವವುಗಳು ಎಂದೂ ಅರ್ಥವನ್ನು ಹೇಳಿರುವರು

ವ್ಯಾಕರಣಪ್ರಕ್ರಿಯಾ ||

**ಜಘನ್ಥ**—ಹನ ಹಿಂಸಾಗತ್ಯೋಃ ಧಾತು ಇದೇ ಋಕ್ಕಿನ ಎರಡನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ

**ದಿವಃ**—ದಿವ್ ಶಬ್ದ ಪಂಚಮೀ ಏಕವಚನಾಂತರೂಪ **ಊಡಿದಂಪದಾದಿ**—(ಪಾ. ಸೂ ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಸೃಜ**—ಸೃಜ ವಿಸರ್ಗೇ. ಧಾತು. ತುದಾದಿ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ಪಿಗೆ ಹಿ ಆದೇಶ. **ತುದಾದಿಭ್ಯಃ ಶಃ** ಎಂಬುದರಿಂದ ಶವಿಕರಣ. **ಅತೋಃ ಹೇಃ** (ಪಾ. ಸೂ. ೬-೪-೧೦೫) ಎಂಬುದರಿಂದ ಹಿಗೆ ಲುಕ್. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರದಿಂದ ಅಂತೋದಾತ್ತವಾಗುತ್ತದೆ

**ಜೀವಧನ್ಯಾಃ**—ಜೀವಾಃ ಧನ್ಯಾಃ ಯಾಭಿಸ್ತಾಃ ಜೀವಧನ್ಯಾಃ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ

**ಮರುತ್ವತೀಃ**—ಮರುತಃ ಆಸು ಸಂತಿ ಇತಿ ಮರುತ್ವತ್ಯಃ **ತದಸ್ಯಾಸ್ತಿ**—(ಸೂ ಪಾ. ೫-೨-೯೪) ಎಂಬುದರಿಂದ ಮತುಪ್ ಪ್ರತ್ಯಯ **ಝಯಃ** (ಸೂ. ಪಾ. ೮-೨-೧೦) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಉಗಿತ್ತಾದುದರಿಂದ ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. ದ್ವಿತೀಯಾ ಬಹುವಚನಾಂತರೂಪ || ೪ ||



॥ ಸಂಹಿತಾಪಾಠಃ ॥

ಇಂದ್ರೋ᳚ ವೃತ್ರಸ್ಯ ದೋಧ॑ತಃ ಸಾನುಂ॒ ವಜ್ರೇ᳚ಣ ಹೀಳಿ॒ತಃ ।
ಅ॒ಭಿ॒ಕ್ರಮ್ಯಾವ॑ ಜಿಘ್ನತೇ॒ಽಪಃ ಸರ್ಮಾ᳚ಯ ಚೋ॒ದಯ॒ನ್ನರ್ಚ॒-
ನ್ನನು॑ ಸ್ವ॒ರಾಜ್ಯಂ॑ ॥ ೫ ॥

॥ ಪದಪಾಠಃ ॥

ಇಂದ್ರಃ॑ । ವೃ॒ತ್ರಸ್ಯ॑ । ದೋಧ॑ತಃ । ಸಾನುಂ॑ । ವಜ್ರೇ᳚ಣ । ಹೀ॒ಳಿ॒ತಃ ।
ಅ॒ಭಿ॒ಽಕ್ರಮ್ಯ॑ । ಅವ॑ । ಜಿ॒ಘ್ನ॒ತೇ॒ । ಅ॒ಪಃ । ಸರ್ಮಾ᳚ಯ । ಚೋ॒ದಯ॑ನ್ ।
ಅರ್ಚ॑ನ್ । ಅನು॑ । ಸ್ವ॒ಽರಾಜ್ಯಂ॑ ॥ ೫ ॥

॥ ಸಾಯಣಭಾಷ್ಯಂ ॥

ಹೀಳಿತಃ ಕ್ರುದ್ಧ ಇಂದ್ರೋಽಭಿಕ್ರಮ್ಯಾಭಿಮುಖ್ಯೇನ ಗತ್ವಾ ದೋಧತೋ ಭೃಶಂ ಕಂಪಮಾನಸ್ಯ ವೃತ್ರಸ್ಯ ಸಾನುಂ ಸಮುಚ್ಛ್ರಿತಂ ಹನುಪ್ರದೇಶಂ ವಜ್ರೇಣಾವ ಜಿಘ್ನತೇ । ಪ್ರಹರತಿ । ಕಿಂ ಕುರ್ವನ್ । ಅಪೋ ವೃಷ್ಟ್ಯುದಕಾನಿ ಸರ್ಮಾಯ ಸರಣಾಯ ನಿರ್ಗಮನಾಯ ಚೋದಯನ್ ಪ್ರೇರಯನ್ ॥ ದೋಧತಃ । ಧೂಞ್ ಕಂಪನೇ ಅಸ್ಮಾದ್ಯಙ್‌ಲುಗಂತಾಚ್ಛತರ್ಯಂತ್ಯಲೋಪಶ್ಛಾಂದಸಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಹೀಳಿತಃ । ಹೇಡೃ ಹೋಡೃ ಅನಾದರೇ । ಹೇಳತ ಇತ್ಯೇತತ್ ಕ್ರುಧ್ಯತಿಕರ್ಮಸು ಪಠಿತಂ । ಅಸ್ಮಾನ್ನಿಷ್ಠಾಯಾಂ ವರ್ಣವ್ಯಾಪತ್ತ್ಯೇಕಾರಃ । ಜಿಘ್ನತೇ । ಹಂತೇರ್ಲಟಿ ವ್ಯತ್ಯಯೇನಾತ್ಮನೇಪದಂ ಬಹುವಚನಂ ಚ । ಬಹುಲಂ ಛಂದಸೀತಿ ಶಪಃ ಶ್ಲುಃ । ಇದಿತ್ಯನುವೃತ್ತೌ ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಗಮಹನೇತ್ಯಾದಿನೋಪಧಾಲೋಪಃ । ಸರ್ಮಾಯ । ಸೃ ಗತೌ । ಅರ್ತಿಸ್ತುಸ್ವಿತ್ಯಾದಿನಾ ಭಾವೇ ಮನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಹೀಳಿತಃ—ಕ್ರುದ್ಧನಾದ । ಇಂದ್ರಃ—ಇಂದ್ರನು । ಅಭಿಕ್ರಮ್ಯ—(ವೃತ್ರನನ್ನು) ಎದುರಿಸಿ । ದೋಧತಃ—ನಡುಗುತ್ತಿದ್ದ । ವೃತ್ರಸ್ಯ—ವೃತ್ರಾಸುರನ । ಸಾನುಂ—ಗಲ್ಲದ ಮೇಲೆ । ಅಪಃ—ವೃಷ್ಟ್ಯುದಕ

ವನ್ನು । **ಸವರ್ಾಯ**— ಹರಿಯುವುದಕ್ಕೆ । **ಚೋದಯನ್**—ಪ್ರೇರಿಸುತ್ತಾ । **ಸ್ವರಾಜ್ಯಂ**—ತನ್ನ ಸ್ವಾಮಿತ್ವ ವನ್ನು । **ಅನು ಅರ್ಚನ್**—ಪ್ರಕಟಗೊಳಿಸುತ್ತಾ । **ವಜ್ರೇಣ**—ವಜ್ರಾಯುಧದಿಂದ । **ಅವ ಜಿಘ್ನತೇ**—ಪ್ರಹರಿಸುತ್ತಾನೆ

॥ ಭಾವಾರ್ಥ ॥

ಕ್ರುದ್ಧನಾದ ಇಂದ್ರನು, ಸ್ವಸ್ವಾಮಿತ್ವವನ್ನು ಪ್ರಕಟಗೊಳಿಸುತ್ತಾ, (ವೃತ್ರನನ್ನು) ಎದುರಿಸಿ (ಭಯದಿಂದ) ನಡುಗುತ್ತಿದ್ದ ಅವನ ಗಲ್ಲದ ಮೇಲೆ ವಜ್ರಾಯುಧದಿಂದ ಹೊಡೆದು, (ನಿರುದ್ಧವಾದ) ಉದಕವು ಹೊರ ಹೊರಡುವಂತೆ ಮಾಡುತ್ತಾನೆ

## English Translation

Indignant Indra, encountering him, has struck with his bolt the jaw of the trembling Vritra, setting the waters free to flow, and manifesting his own sovereignty

॥ ವಿಶೇಷವಿಷಯಗಳು ॥

**ಹೀಳಿತಃ**— **ಕ್ರುದ್ಧಃ** ಕೋಪವುಳ್ಳವನು ಎಂದು ಅರ್ಥವು **ಹೇಡೃ ಅನಾದರೆ ಕ್ರೋಧೇ ಚ** ಎಂಬ ಧಾತುವಿನಿಂದ ಹೀಳಿತಃ ಎಂಬ ಶಬ್ದರೂಪವು ನಿಷ್ಪನ್ನವಾಗಿರುತ್ತದೆ ರೇಳತೆ, ಹೇಳತೆ ಎಂಬ ಹತ್ತು ಕ್ರುಧ್ಯತಿಕರ್ಮ ವಾಚಕಗಳಾದ ಧಾತುಗಳಲ್ಲಿ (ನಿ. ೩-೯) ಈ ಧಾತುವು ಉಕ್ತವಾಗಿರುವುದು —

> **ಅಸ್ಯಾ ಊ ಷು ಣ ಉಪ ಸಾತಯೇ ಭುವೋಽಹೇಳಮಾನೋ ರರಿವಾ ಅಜಾಶ್ವ ಶ್ರವಸ್ಯತಾಮಜಾಶ್ವ ।**
>
> (ಋ. ಸಂ ೧-೧೩೮-೪)
>
> **ಅಹೇಳಮಾನೋ ವರುಣೇಹ ಬೋಧ್ಯುರುಶಂಸ ಮಾ ನ ಆಯುಃ ಪ್ರ ಮೋಷೀಃ ।**
>
> (ಋ ಸಂ. ೧-೨೪-೧೧)

ಎಂಬ ಋಕ್ಕುಗಳಲ್ಲಿ ಅನಾದರ ಮತ್ತು ಕ್ರೋಧ ಎಂಬ ಅರ್ಥದಲ್ಲಿ ಈ ಶಬ್ದದ ಪ್ರಯೋಗವಿರುವುದು

**ದೋಧತಃ**—**ಭೃಶಂ ಕಂಪಮಾನಸ್ಯ** । ಬಹಳವಾಗಿ ನಡುಗುತ್ತಿರುವ ಕಂಪನ ನಡುಗುವಿಕೆ ಎಂಬ ಅರ್ಥವುಳ್ಳ ಧೂಞ್ ಧಾತುವಿನಿಂದ ಈ ಶಬ್ದರೂಪವು ಸಿದ್ಧವಾಗಿರುವುದೆಂದು ಸಾಯಣರು ವ್ಯಾಖ್ಯಾನಮಾಡಿರುವರು ಸ್ಕಂದಸ್ವಾಮಿಗಳು **ಕ್ರುಧ್ಯತಿಕರ್ಮಾಯಂ** ಈ ಶಬ್ದರೂಪವು ಕ್ರುಧ್ಯತಿ ಮೊದಲಾದ ಹತ್ತು ಕರ್ಮವಾಚಕಗಳಲ್ಲಿ ಉಕ್ತವಾಗಿರುವ ದೋಧತೀ ಎಂಬ ಧಾತುವಿನಿಂದ ಸಿದ್ಧವಾಗಿರುವಕಾರಣ ಕೋಪವುಳ್ಳ ಎಂಬ ಅರ್ಥವನ್ನು ಹೇಳಿರುತ್ತಾರೆ. ಇದರಿಂದ ಬಹಳವಾಗಿ ನಡುಗುತ್ತಿರುವ ಎಂದು ಸಾಯಣರೂ, ಕೋಪದಿಂದ ಕೂಡಿರುವ ಎಂದು ಸ್ಕಂದಸ್ವಾಮಿಗಳೂ ವೃತ್ರಸ್ಯ ಎಂಬ ಪದಕ್ಕೆ ವಿಶೇಷಣವಾಗಿ ವ್ಯಾಖ್ಯಾನವನ್ನು ಮಾಡಿರುವರು

**ಸರ್ಮಾಯ—ಸರಣಾಯ, ಭೂಮಿಂ ಪ್ರತಿಗಮನಾಯ**—ಸೃ ಗತೌ ಎಂಬ ಗಮನಾರ್ಥದ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಗಮನವೆಂದು ಅರ್ಥವು. ನೀರುಗಳಿಗೆ ಉಂಟಾಗುವ ಗಮನವು ನಿಮ್ನಪ್ರದೇಶಕ್ಕಾಗುವುದು ಸ್ವಭಾವವಾದಕಾರಣ ಭೂಮಿಯನ್ನು ಕುರಿತು ಹರಿಯುವುದು ಎಂದು ಅರ್ಥವು.

**ಸಾನುಂ—ಸಮುಚ್ಛ್ರಿತಂ ಹನುಪ್ರದೇಶಂ** ವೃತ್ರನೆಂಬ ಅಸುರನ ಎತ್ತರವಾದ (ದವಡೆಯ) ತಾಲುಪ್ರದೇಶವನ್ನು ಎಂದು ಸಾಯಣರು ಅರ್ಥಮಾಡಿರುವರು. ಪ್ರಾಯಿಕವಾಗಿ ಸಾನು ಎಂಬ ಪದವು ಪರ್ವತದ ತಪ್ಪಲು ಎಂಬ ಅರ್ಥದಲ್ಲಿ ರೂಢವಾಗಿರುತ್ತದೆ. ಸ್ಕಂದಸ್ವಾಮಿಗಳು ಸಮುಚ್ಛ್ರಿತಂ-ಎತ್ತರವಾದ ಪ್ರದೇಶ ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಸಾಯಣರು ಭಾಷ್ಯದಲ್ಲಿ ಬರೆದಿರುವ ಕ್ರಮದಿಂದ ಐತಿಹಾಸಿಕರೂಪವಾದ ವೃತ್ರಾಸುರವಧೆಯೂ ಕ್ರೋಢೀಕೃತವಾಗಿರುತ್ತದೆ ಎಂದು ತಿಳಿದುಬರುವುದು.

**ವೃತ್ರಸ್ಯ**—ವೃತ್ರನೆಂದು ಹೆಸರುಳ್ಳ ಅಸುರನ ಎಂದು ಅರ್ಥವು. ನಿರುಕ್ತದಲ್ಲಿ **ತತ್ಕೋ ವೃತ್ರಃ** ವೃತ್ರಪದಾರ್ಥವು ಯಾವುದು ಎಂದು ಪ್ರಶ್ನೆಯನ್ನು ಮಾಡಿ **ಮೇಘ ಇತಿ ನೈರುಕ್ತಾಃ**-ಪದದ ವ್ಯುತ್ಪತ್ತಿಯನ್ನು ಹೇಳುವವರು ಮೇಘವೆಂತಲೂ **ತ್ವಾಷ್ಟ್ರೋಽಸುರ ಇತಿ ಐತಿಹಾಸಿಕಾಃ**-ತ್ವಷ್ಟೃವಿನ ಮಗನಾದ ಅಸುರನು ಎಂದು ಇತಿಹಾಸವನ್ನು ತಿಳಿದವರೂ ಹೇಳುತ್ತಾರೆ **ವೃತ್ರೋ ವೃಣೋತೇರ್ವಾ ವರ್ತತೇರ್ವಾ ವರ್ಧತೇರ್ವಾ ವೃತ್ರಃ।** ವೃತ್ರ ಎಂಬ ಶಬ್ದವು ವೃಞ್ ವರಣೇ, ವೃತು ವರ್ತನೇ, ವೃಧು ವೃದ್ಧೌ, ಎಂಬ ಧಾತುಗಳಿಂದ ತಡೆಮಾಡುವುದು, ಸ್ಥಿತಿಯನ್ನು ಹೊಂದಿ ಇರುವುದು, ಅಥವಾ ವೃದ್ಧಿಯನ್ನು ಹೊಂದುವುದು, ಎಂಬ ಅರ್ಥವನ್ನು ಬೋಧಿಸುವುದಾಗಿ ಇರುತ್ತದೆ. **ಯದವೃಣೋತ್ತದ್ವೃತ್ರಸ್ಯ ವೃತ್ರತ್ವಂ** ಎಂಬ ಶ್ರುತಿವಾಕ್ಯವು ಹೇಳುವಂತೆ, ಅಂತರಿಕ್ಷವನ್ನೂ ಉದಕವನ್ನೂ ಆವರಿಸಿಕೊಂಡಿರುವುದರಿಂದಲೂ, ಅಥವಾ ಇಂದ್ರನು ಮೇಘವನ್ನು ಹೊಡೆದು ನೀರುಗಳು ಭೂಮಿಗೆ ಸರಿಯಾಗಿ ಬರುವಂತೆ ಮಾಡಿದಕಾರಣ ಉದಕಗಳು ವೃಷ್ಟಿಯರೂಪದಿಂದ ಉಂಟಾದವು ಎಂದು ವರ್ತನರೂಪವಾದ ಅರ್ಥವನ್ನೂ ಹೇಳಿರುವರು. ಮತ್ತು ಇತಿಹಾಸಪಕ್ಷದಲ್ಲಿ ವೃತ್ರನು ಬಹಳ ಹೆಚ್ಚಾದ ಪ್ರಮಾಣದಲ್ಲಿ ಎಂದರೆ—**ಸ ಇಷುಮಾತ್ರಮಿಷುಮಾತ್ರಮವರ್ಧತ**—ಅವನು ಪ್ರತಿಕ್ಷಣದಲ್ಲಿಯೂ ಒಂದು ಬಿಲ್ಲಿನ ಪ್ರಮಾಣದಷ್ಟು ಬೆಳೆಯುತ್ತಿದ್ದನೆಂದು ವೃದ್ಧ್ಯರ್ಥವನ್ನೂ ಹೇಳಿರುವರು

॥ ವ್ಯಾಕರಣಪ್ರಕ್ರಿಯಾ ॥

**ದೋಧತಃ**—ಧೂಞ್ ಕಂಪನೇ ಧಾತು ಅತಿಶಯಾರ್ಥತೋರುವಾಗ **ಧಾತೋರೇಕಾಚಃ**—(ಪಾ. ಸೂ ೩-೧-೨೨) ಎಂಬುದರಿಂದ ಯಙ್ ಪ್ರತ್ಯಯ. **ಯಙೋಽಚಿಚ** (ಪಾ ಸೂ ೨-೪-೭೪) ಎಂಬುದರಿಂದ ಅದಕ್ಕೆ ಲುಕ್. **ಸನ್ಯಙೋಃ** ಸೂತ್ರದಿಂದ ಧಾತುವಿಗೆ ದ್ವಿತ್ವ. **ಗುಣೋಯಙ್‌ಲುಕೋಃ** (ಪಾ ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ. ಯಙ್‌ಲುಗಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಶತೃ ಪರವಾದಾಗ ಛಾಂದಸವಾಗಿ ಧಾತುವಿನ ಊಕಾರಕ್ಕೆ ಲೋಪ. ದೋಧತ್ ಶಬ್ದವಾಗುತ್ತದೆ **ಅಭ್ಯಾಸ್ತಾನಾಮಾದಿಃ** (ಪಾ ಸೂ. ೬-೧-೧೮೯.) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಷಷ್ಠೀ ಏಕವಚನಾಂತರೂಪ.

**ಹೀಳಿತಃ**—ಹೇಡೃ ಹೋಡೃ ಅನಾದರೇ. ಧಾತು. **ಹೇಳತೇ** (ನಿರು ೨-೧೨-೨) ಎಂದು ಕ್ರೋಧಕರ್ಮ ಧಾತುಗಳಲ್ಲಿ ಪಠಿತವಾಗಿದೆ. ಇದಕ್ಕೆ ಕ್ತ ಪ್ರತ್ಯಯ ಪರವಾದಾಗ **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಇಡಾಗಮ. **ವ್ಯತ್ಯಯೋ ಬಹುಲಮ್** ಎಂಬುದರಿಂದ ವರ್ಣವ್ಯತ್ಯಯದಿಂದ ಏಕಾರಕ್ಕೆ ಈಕಾರಾದೇಶ ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ

**ಜಿಘ್ನತೇ**—ಹನ ಹಿಂಸಾಗತ್ಯೋಃ ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ **ವ್ಯತ್ಯಯೋ-ಬಹುಲಮ್** (ಪಾ. ಸೂ. ೩-೧-೮೫) ಎಂಬುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ ಹಾಗೆಯೇ ಬಹುವಚನವೂ ಬರುತ್ತದೆ. ಯ ಪ್ರತ್ಯಯಕ್ಕೆ **ಆತ್ಮನೇಪದೇಷ್ವನತಃ** (ಪಾ. ಸೂ. ೭-೧-೫. ಎಂಬುದರಿಂದ ಅತಾದೇಶ. **ಟಿತ ಆತ್ಮನೇ ಪದಾನಾಂ**—ಎಂಬುದರಿಂದ ಏತ್ವ **ಬಹುಲಂ ಛಂದಸಿ** ಸೂತ್ರದಿಂದ ಶಪ್ಪಿಗೆ ಶ್ಲು ಆದೇಶ **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಚುತ್ವ, ಜಸ್ತ್ವ **ಅಭ್ಯಾಸಾಚ್ಚ** (ಪಾ. ಸೂ ೭-೩-೫೫) ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಧಾತುವಿನ ಹಕಾರಕ್ಕೆ ಕುತ್ವ ಪ್ರತ್ಯಯಕ್ಕೆ **ಸಾರ್ವಧಾತುಕಮಪಿತ್** ಸೂತ್ರದಿಂದ ಙಿತ್ವವಿರುವುದರಿಂದ **ಗಮಹನಜನ**—(ಪಾ. ಸೂ. ೬-೪-೯೮) ಎಂಬುದರಿಂದ ಉಪಧಾಲೋಪ **ಭೃಞಾಮಿತ್** ಸೂತ್ರದಿಂದ ಇತ್ ಎಂದು ಅನುವೃತ್ತವಾಗುವಾಗ **ಬಹುಲಂ ಛಂದಸಿ** ಎಂಬುದರಿಂದ ಧಾತುವಿನ ಅಭ್ಯಾಸಕ್ಕೆ ಇತ್ವ. ಜಿಘ್ನತೇ ಎಂದು ರೂಪವಾಗುತ್ತದೆ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸರ್ಮಾಯ**—ಸೃ ಗತೌ ಧಾತು. ಇದಕ್ಕೆ ಭಾವಾರ್ಥದಲ್ಲಿ **ಅರ್ತಿಸ್ತು ಸು**—(ಉ. ಸೂ. ೧-೧೩೭) ಎಂಬುದರಿಂದ ಮನ್ ಪ್ರತ್ಯಯ ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕ್ಕಿಗೆ ಗುಣ ಸರ್ಮ ಎಂದು ರೂಪವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ ಚತುರ್ಥೀ ಏಕವಚನಾಂತರೂಪ

**ಚೋದಯನ್**—ಚುದ ಪ್ರೇರಣೇ ಧಾತು. ಚುರಾದಿ **ಸತ್ಯಾಪಪಾಶ**—(ಪಾ ಸೂ ೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್. ತನ್ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. **ಸನಾದ್ಯಂತಾಧಾತವಃ** ಎಂಬುದರಿಂದ **ಚೋದಿ** ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ ಲಡರ್ಥದಲ್ಲಿ ಇದರಮೇಲೆ ಶತೃ ಪ್ರತ್ಯಯ ಶಪ್ ವಿಕರಣ ತನ್ನಿಮಿತ್ತವಾಗಿ ಣಿಚ್ಚಿಗೆ ಗುಣ, ಅಯಾದೇಶ. ಪ್ರಥಮಾ ಏಕವಚನಾಂತರೂಪ. ಣಿಚ್‌ಸ್ವರ ಉಳಿಯುತ್ತದೆ ॥ ೫ ॥



॥ ಸಂಹಿತಾಪಾಠಃ ॥

ಅಧಿ ಸಾನೌ ನಿ ಜಿಘ್ನತೇ ವಜ್ರೇಣ ಶತಪರ್ವಣಾ ।
ಮಂದಾನ ಇಂದ್ರೋ ಅಂಧಸಃ ಸಖಿಭ್ಯೋ ಗಾತುಮಿಚ್ಛತ್ಯ-
ರ್ಚನ್ನನು ಸ್ವರಾಜ್ಯಂ ॥ ೬ ॥

॥ ಪದಪಾಠಃ ॥

ಅಧಿ । ಸಾನೌ । ನಿ । ಜಿಘ್ನತೇ । ವಜ್ರೇಣ । ಶತऽಪರ್ವಣಾ ।
ಮಂದಾನಃ । ಇಂದ್ರಃ । ಅಂಧಸಃ । ಸಖಿऽಭ್ಯಃ । ಗಾತುಂ । ಇಚ್ಛತಿ । ಅರ್ಚನ್ ।
ಅನು । ಸ್ವऽರಾಜ್ಯಂ ॥ ೬ ॥

॥ ಸಾಯಣಭಾಷ್ಯಂ ॥

ಇಂದ್ರಃ ಶತಪರ್ವಣಾ ಶತಸಂಖ್ಯಾಕಧಾರಾಭಿರ್ಯುಕ್ತೇನ ವಜ್ರೇಣ ಸಾನಾವಧಿ ನಿ ಜಿಘ್ನತೇ । ಅಧಿಃ ಸಪ್ತಮ್ಯರ್ಥಾನುವಾದೀ । ಸಮುಚ್ಛ್ರಿತೇ ವೃತ್ರಸ್ಯ ಕಪೋಲಾದೌ ಸ್ಥಾನೇ ನಿತರಾಂ ಹಿನಸ್ತಿ । ಸ ಚೇಂದ್ರೋ ಮಂದಾನೋ ಮಂದಮಾನಃ ಸ್ತೂಯಮಾನಃ ಸನ್ ಸಖಿಭ್ಯಃ ಸಮಾನಖ್ಯಾನೇಭ್ಯಃ ಸ್ತೋತೃಭ್ಯೋಽಂಧಸೋಽನ್ನಸ್ಯ ಗಾತುಂ ಮಾರ್ಗಮುಪಾಯಮಿಚ್ಛತಿ । ಅನ್ಯತ್ಪೂರ್ವವತ್ ॥ ಮಂದಾನಃ । ಮದಿ ಸ್ತುತೌ । ಕರ್ಮಣಿ ಶಾನಚಿ ಯಕ್ । ಛಂದಸ್ಯುಭಯಥೇತಿ ಶಾನಚ ಆರ್ಧಧಾತುಕತ್ವಾದತೋಲೋಪಯಲೋಪೌ । ಅನುದಾತ್ತೇತಃ ಪರತ್ವಾತ್ ಶಾನಚೋ ಲಸಾರ್ವಧಾತುಕಾನುದಾತ್ತತ್ವೇ ಸತಿ ಯಕ ಏವೋದಾತ್ತತ್ವಂ । ಅನುದಾತ್ತೇ ಶಾನಚಿ ತಸ್ಯ ಯಕೋ ಲೋಪೇ ಸತ್ಯುದಾತ್ತನಿವೃತ್ತಿಸ್ವರೇಣ ಶಾನಚ ಉದಾತ್ತತ್ವಂ ಪ್ರಾಪ್ನೋತಿ । ಏವಂ ತರ್ಹಿ ಶಾನಚ ಆರ್ಧಧಾತುಕತ್ವಾದೇವ ಲಸಾರ್ವಧಾತುಕಾನುದಾತ್ತತ್ವಾಭಾವೇ ಚಿತ್ಸ್ವರ ಏವಾವಶಿಷ್ಯತೇ ॥

॥ ಪ್ರತಿಪದಾರ್ಥ ॥

(ಇಂದ್ರಃ—ಇಂದ್ರನು) । **ಶತಪರ್ವಣಾ**—ನೂರು ಅಲಗುಗಳುಳ್ಳ । **ವಜ್ರೇಣ**—ವಜ್ರಾಯುಧದಿಂದ । **ಸಾನೌ ಅಧಿ**—ಸಾನು ಪ್ರದೇಶದಲ್ಲಿ । **ನಿ ಜಿಘ್ನತೇ**—ಪ್ರಹರಿಸುತ್ತಾನೆ (ಮತ್ತು) । **ಇಂದ್ರಃ**—(ಆ) ಇಂದ್ರನು ।

**ಮಂದಾನಃ**—ಸ್ತುತನಾಗಿ । **ಸಖಿಭ್ಯಃ**—ಸ್ತೋತೃಗಳಿಗೆ । **ಸ್ವರಾಜ್ಯಂ**—ಸ್ವಸ್ವಾಮಿತ್ವವನ್ನು । **ಅನು ಅರ್ಚನ್**—ಪ್ರಕಟಿಸುತ್ತಾ । **ಅಂಧಸಃ**—ಅನ್ನದ (ಅನ್ನವನ್ನು) । **ಗಾತುಂ**—(ಪಡೆಯುವ) ಉಪಾಯವನ್ನೂ (ತೋರಿಸಲು) । **ಇಚ್ಛತಿ**—ಅಪೇಕ್ಷಿಸುತ್ತಾನೆ.

॥ ಭಾವಾರ್ಥ ॥

ಇಂದ್ರನು ನೂರು ಅಲುಗುಗಳುಳ್ಳ ವಜ್ರಾಯುಧದಿಂದ (ವೃತ್ರಾಸುರನನ್ನು) ಸಾನುಪ್ರದೇಶದಲ್ಲಿ ಹೊಡೆಯುತ್ತಾನೆ ಯಜ್ಞದಲ್ಲಿ ಯಜಮಾನರಿಂದ ಸ್ತುತನಾಗಿ, ತನ್ನ ಸ್ವಾಮಿತ್ವವನ್ನು ಪ್ರಕಟಗೊಳಿಸುತ್ತಾ, ಸ್ತೋತೃಗಳಿಗೆ ಆಹಾರವನ್ನು (ಪಡೆಯುವ) ಮಾರ್ಗವನ್ನು (ತೋರಿಸಲು) ಇಚ್ಛಿಸುತ್ತಾನೆ.

## English Translation

Indra has struck him on the temple with his hundred-edged thunder bolt, and exulting, wishes to provide means of sustenance for his friends, manifesting his own sovereignty.

॥ ವಿಶೇಷವಿಷಯಗಳು ॥

**ಅಧಿ**—ಈ ಶಬ್ದಕ್ಕೆ ಯಾಸ್ಕರು **ಅಧೀತ್ಯುಪರಿಭಾವನ್ಮೈಶ್ವರ್ಯಂ ವಾ** ಎಂದರೆ ಅಧಿ ಶಬ್ದವು ಮೇಲುಭಾಗದಲ್ಲಿ ಅಥವಾ ಐಶ್ವರ್ಯವನ್ನು ಎಂಬ ಅರ್ಥವನ್ನು ಸೂಚಿಸುವುದೆಂದು ಹೇಳಿರುವರು (ನಿ ೧-೪) ಭಾಷ್ಯಕಾರರು ಇಲ್ಲಿ ಸಪ್ತಮೀ ವಿಭಕ್ತಿಯ ಅರ್ಥವನ್ನು ಸೂಚಿಸುವುದೆಂದು ಹೇಳಿರುವರು

**ಶತಪರ್ವಣಾ—ಶತಸಂಖ್ಯಾಕಧಾರಾಭಿರ್ಯುಕ್ತೇನ ।** ಪರ್ವ ಶಬ್ದವು ಅಲುಗುಗಳೆಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿರುತ್ತದೆ ವಜ್ರಾಯುಧಕ್ಕೆ ನೂರಾರು ಅಥವಾ ಅನೇಕವಾದ ಅಲಗುಗಳು ಇರುತ್ತವೆ ಎಂದು ಅರ್ಥವು

**ಮಂದಾನಃ**—**ಮದೀ ಸ್ತುತೌ** ಎಂಬ ಸ್ತುತ್ಯರ್ಥಕವಾದ ಮದಿ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ **ಮಂದಾನ—ಸ್ತೂಯಮಾನಃ** ಸ್ತುತಿಸಲ್ಪಡುವವನೆಂದು ಸಾಯಣರೂ, **ಮೋದಮಾನಃ ತೃಪ್ಯನ್** ಸಂತೋಷಪಡುವವನೆಂದು ಸ್ಕಂದಸ್ವಾಮಿಗಳೂ ಅರ್ಥಮಾಡಿರುವರು

**ಸಖಿಭ್ಯಃ—ಸಮಾನಖ್ಯಾನೇಭ್ಯಃ ಸ್ತೋತೃಭ್ಯಃ ।** ಸ್ನೇಹಿತರು ಎಂಬ ಅರ್ಥವನ್ನು ಸ್ವೀಕರಿಸಿ **ಸಖೀನಾಮರ್ಥಾಯ** ಸ್ನೇಹಿತರ ಪ್ರಯೋಜನಕ್ಕಾಗಿ ಎಂದು ಸ್ಕಂದಸ್ವಾಮಿಗಳೂ, ಉಚಿತವಾದ ಕಾರ್ಯವೇ ಮೊದಲಾದವುಗಳನ್ನು ಪ್ರಕಟಮಾಡುವ ಹೊಗಳುವವರೂ ಎಂದೂ ಅರ್ಥಮಾಡಿರುವರು

**ಅಂಧಸಃ ಗಾತುಮಿಚ್ಛತಿ**—**ಅನ್ಧಃ**, **ವಾಜಃ** ಎಂಬ ಇಪ್ಪತ್ತೆಂಟು ಅನ್ನನಾಮಗಳಲ್ಲಿ ಅಂಧಃ ಶಬ್ದವು (ನಿ ೨-೯) ಉಕ್ತವಾಗಿರುವುದರಿಂದ **ಅಂಧಃ** ಎಂದರೆ ಅನ್ನವೆಂದು ಅರ್ಥವು. ಇಂದ್ರನು ತನ್ನನ್ನು ಸ್ತುತಿಮಾಡುವವರಿಗೆ ಅನ್ನವು (ಉಂಟಾಗುವ) ದೊರಕುವ ಉಪಾಯವನ್ನು ಅಪೇಕ್ಷಿಸುತ್ತಾನೆ ಅಂದರೆ ಅನ್ನವು ದೊರಕುವ ಉಪಾಯವನ್ನು ತೋರಿಸಿಕೊಡುತ್ತಾನೆ ಎಂದು ಸಾಯಣಭಾಷ್ಯದಲ್ಲಿ ಹೇಳಿರುವುದು

ಸ್ಕಂದಸ್ವಾಮಿಗಳು ವೃತ್ರಶಬ್ದಕ್ಕೆ ಮೇಘವೆಂದು ಅರ್ಥವನ್ನು ಸ್ವೀಕರಿಸಿ ಇಂದ್ರನು ಸೋಮಪಾನದಿಂದ ತೃಪ್ತನಾಗಿ ಎತ್ತರವಾದ ಪ್ರದೇಶದಲ್ಲಿರುವ ಮೇಘವನ್ನು ನೂರು ಅಲಗುಗಳುಳ್ಳ ವಜ್ರಾಯುಧದಿಂದ ಹೊಡದು ವೃಷ್ಟಿರೂಪದಿಂದ ಉದಕಗಳು ಭೂಮಿಗೆ ಸ್ನೇಹಿತರಿಗಾಗಿ ಬೀಳಲಿ ಎಂದು ಅಪೇಕ್ಷೆಪಡುವನು ಎಂದು ಅರ್ಥವನ್ನು ಹೇಳುವರು

॥ ವ್ಯಾಕರಣಪ್ರಕ್ರಿಯಾ ॥

**ಶತಪರ್ವಣಾ—ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ ೬-೨-೧) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ ತೃತೀಯಾ ಏಕವಚನಾಂತರೂಪ.

**ಮಂದಾನಃ**—ಮದಿ ಸ್ತುತೌ ಧಾತು. **ಇದಿತೋನುಮ್‌ಧಾತೋಃ** (ಪಾ ಸೂ. ೭-೧ ೫೮) ಎಂಬುದರಿಂದ ನುಮಾಗಮ ಇದಕ್ಕೆ ಕರ್ಮಣಿಯಲ್ಲಿ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಇದು ಪರವಾದಾಗ **ಸಾರ್ವಧಾತುಕೇ ಯಕ್** (ಪಾ ಸೂ. ೩-೧-೬೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್. **ಛಂದಸ್ಯುಭಯಥಾ** ಎಂಬುದರಿಂದ ಶಾನಚಿಗೆ ಆರ್ಧಧಾತುಕಸಂಜ್ಞೆಯೂ ಇರುವುದರಿಂದ **ಅತೋ ಲೋಪಃ** ಎಂಬುದರಿಂದ ಅಕಾರಲೋಪ **ಯಸ್ಯ ಹಲಃ** (ಪಾ. ಸೂ. ೬-೪-೪೯) ಎಂಬುದರಿಂದ ಯ ಲೋಪ ಮಂದಾನ ಎಂದು ರೂಪವಾಗುತ್ತದೆ. ಅನುದಾತ್ತೇತ್ತಿನ ಪರವಾದುದರಿಂದ ಲಸಾರ್ವಧಾತುಕವಾದ ಶಾನಚಿಗೆ **ತಾಸ್ಯನುದಾತ್ತೇತ್**--(ಪಾ. ಸೂ ೬-೧-೧೮೬) ಎಂಬುದರಿಂದ ಅನುದಾತ್ತಸ್ವರ ಬರುವುದರಿಂದ ಯಕಿಗೆ ಉದಾತ್ತಸ್ವರ ಬರುತ್ತದೆ. ಅನುದಾತ್ತಪರವಾದಾಗ ಉದಾತ್ತವಾದ ಯಕಿಗೆ ಲೋಪಬಂದುದರಿಂದ **ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ** (ಪಾ ಸೂ ೬-೧-೧೬೧) ಎಂಬುದರಿಂದ ಶಾನಚಿಗೆ ಉದಾತ್ತಸ್ವರ ಬರುತ್ತದೆ. ಹೀಗೆ ಹೇಳುವುದಕ್ಕಿಂತಲೂ ಶಾನಚಿಗೆ ಹಿಂದೆ ಹೇಳಿದಂತೆ ಆರ್ಧಧಾತುಕ ಸಂಜ್ಞೆಇರುವುದರಿಂದಲೇ ಲಸಾರ್ವಧಾತುಕಾನುದಾತ್ತಸ್ವರವು ಬಾರದಿರುವುದರಿಂದ **ಚಿತಃ** ಎಂಬುದರಿಂದ ಬಂದ ಅಂತೊದಾತ್ತ ಸ್ವರವೇ ಉಳಿಯುತ್ತದೆ.

**ಇಚ್ಛತಿ**—ಇಷು ಇಚ್ಛಾಯಾಂ ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ರತ್ಯಯ **ತುದಾದಿಭ್ಯಃ ಶಃ** ಎಂಬುದರಿಂದ ಶವಿಕರಣ. **ಇಷುಗಮಿಯಮಾಂ ಛಃ** (ಪಾ. ಸೂ. ೭-೩-೭೭) ಎಂಬುದರಿಂದ ಧಾತುವಿಗೆ ಛಕಾರಾಂತಾದೇಶ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೬ ॥

॥ ಸಂಹಿತಾಪಾಠಃ ॥

ಇಂದ್ರ ತುಭ್ಯಮಿದದ್ರಿವೋಽನುತ್ತಂ ವಜ್ರಿನ್ವೀರ್ಯಂ ।
ಯದ್ಧ ತ್ಯಂ ಮಾಯಿನಂ ಮೃಗಂ ತಮು ತ್ವಂ ಮಾಯಯಾವ-
ಧೀರರ್ಚನ್ನನು ಸ್ವರಾಜ್ಯಂ ॥ ೭ ॥

॥ ಪದಪಾಠಃ ॥

ಇಂದ್ರ । ತುಭ್ಯಂ । ಇತ್ । ಅದ್ರಿಽವಃ । ಅನುತ್ತಂ । ವಜ್ರಿನ್ । ವೀರ್ಯಂ ।
ಯತ್ । ಹ । ತ್ಯಂ । ಮಾಯಿನಂ । ಮೃಗಂ । ತಂ । ಊಂ ಇತಿ । ತ್ವಂ । ಮಾ-
ಯಯಾ । ಅವಧೀಃ । ಅರ್ಚನ್ । ಅನು । ಸ್ವಽರಾಜ್ಯಂ ॥ ೭ ॥

॥ ಸಾಯಣಭಾಷ್ಯಂ ॥

**ಅದ್ರಿರಿತಿ ಮೇಘನಾಮ । ಹೇ ಅದ್ರಿವೋ ವಾಹನರೂಪಮೇಘಯುಕ್ತ ವಜ್ರಿನ್ ವಜ್ರವನ್ನಿಂದ್ರ ತುಭ್ಯಮಿತ್ । ಷಷ್ಠ್ಯರ್ಥೇ ಚತುರ್ಥೀ । ತವೈವ ವೀರ್ಯಂ ಸಾಮರ್ಥ್ಯಮನುತ್ತಂ ಶತ್ರುಭಿರತಿರಸ್ಕೃತಂ । ಯದ್ಧ ಯಸ್ಮಾತ್ ಖಲು ಮಾಯಿನಂ ಮಾಯಾವಿನಂ ತ್ಯಂ ತಂ ಪ್ರಸಿದ್ಧಂ ವಂಚಯಿತಾರಂ । ಲೋಕೋ-ಪದ್ರವಕಾರಿಣಮಿತ್ಯರ್ಥಃ । ಮೃಗಂ ಮೃಗರೂಪಮಾಪನ್ನಂ ತಂ ವೃತ್ರಂ ತ್ವಮಪಿ ಮಾಯಯೈವಾವಧೀಃ । ಹತವಾನಸಿ ॥ ಅನುತ್ತಂ । ನಸತ್ತನಿಷತ್ತೇತಿ ನಿಪಾತನಾನ್ನಿಷ್ಠಾನತ್ವಾಭಾವಃ । ಅವಧೀಃ । ಹಂತೇರ್ಲುಙಿ ಚೇತಿ ವಧಾದೇಶಃ । ಸ ಚಾದಂತಃ । ತಸ್ಯಾತೋ ಲೋಪೇ ಸತಿ ಸ್ಥಾನಿವದ್ಭಾವಾತ್ಸಿಚಿ ವೃದ್ಧ್ಯಭಾವಃ ॥**

॥ ಪ್ರತಿಪದಾರ್ಥ ॥

**ಅದ್ರಿವಃ**—ಮೇಘವೇ ವಾಹನವಾಗಿ ಉಳ್ಳ । **ವಜ್ರಿನ್**—ವಜ್ರಾಯುಧಧಾರಿಯಾದ । **ಇಂದ್ರ**—ಎಲೈ ಇಂದ್ರನೇ । **ತುಭ್ಯಮಿತ್**—ನಿನ್ನದೇ ಆದ । **ವೀರ್ಯಂ**—ಸಾಮರ್ಥ್ಯವು । **ಅನುತ್ತಂ**—(ಶತ್ರುಗಳಿಂದ) ತಿರಸ್ಕೃತವಲ್ಲ । **ಯತ್**—ಏಕೆಂದರೆ । **ಮಾಯಿನಂ**—ಮಾಯಾವಿಯಾದ । **ತ್ಯಂ**—ಆ ಪ್ರಸಿದ್ಧನಾದ । **ಮೃಗಂ**—ಮೃಗರೂಪಿಯಾದ । **ತಂ**—ವೃತ್ರನನ್ನು । **ತ್ವಂ**—ನೀನೂ ಕೂಡ । **ಮಾಯಯಾ**—ಮಾಯೆಯಿಂದಲೇ । **ಸ್ವರಾಜ್ಯಂ ಅನು ಅರ್ಚನ್**—ಸ್ವಸ್ವಾಮಿತ್ವವನ್ನು ಪ್ರಕಟಿಸುತ್ತಾ । **ಅವಧೀಃ ಹ**—ವಧಿಸಿದೆಯಷ್ಟೆ

॥ ಭಾವಾರ್ಥ ॥

ಮೇಘವಾಹನನೂ, ವಜ್ರಾಯುಧಧಾರಿಯೂ ಆದ ಎಲೈ ಇಂದ್ರನೇ, ನಿನ್ನ ಸಾಮರ್ಥ್ಯವು ಅಪ್ರತಿಹತವಾದುದು, ಏಕೆಂದರೆ, ಮಾಯಾವಿಯಾದ, ಮೃಗರೂಪಿಯಾದ ವೃತ್ರನನ್ನು, ನೀನೂ, ಮಾಯೆಯಿಂದಲೇ ಸ್ವಸ್ವಾಮಿತ್ವವನ್ನು ಪ್ರಕಟಿಸುತ್ತಾ, ವಧಿಸಿದೆಯಷ್ಟೆ.

## English Translation

Cloud-borne, India, wieldei of the thunder-bolt, verily your prowess is undisputed, since you with (superior) craft, have slain that deceptive deer (Vritra) manifesting your own sovereigntv.

॥ ವಿಶೇಷವಿಷಯಗಳು ॥

**ಅದ್ರಿವಃ— ಅದ್ರಿರಿತಿ ಮೇಘನಾಮ ।** ಅದ್ರಿಶಬ್ದವು **ಅದ್ರಿಃ, ಗ್ರಾವಾ** ಎಂಬ ಮೂವತ್ತು ಮೇಘ ನಾಮಗಳಲ್ಲಿ (ನಿ. ೨-೨೧) ಉಕ್ತವಾಗಿರುವುದರಿಂದ ಮೇಘವೆಂದು ಅರ್ಥವು ಮೇಘವನ್ನು ವಾಹನವಾಗಿ ಹೊಂದಿರುವುದರಿಂದ ಇಂದ್ರನು ಮೇಘವಾಹನನೆಂದು ಪ್ರಸಿದ್ಧನಾಗಿರುವನು. ಸ್ಕಂದಸ್ವಾಮಿಗಳು **ಅದ್ರಯಃ—ಸೋಮಾಭಿಷವ ಗ್ರಾವಾಣಃ** ಸೋಮರಸವನ್ನು ಜಜ್ಜಿ ಹಿಂಡುವ ಕಲ್ಲುಗಳು ಎಂದು ಅರ್ಥವನ್ನು ಹೇಳಿರುವರು

**ಅನುತ್ತಂ**—ಅನುತ್ತಶಬ್ದವು ನಿಪಾತಿತವಾಗಿರುವುದು. ನಿಪಾತಿತವೆಂದರೆ ಪ್ರಕೃತಿಪ್ರತ್ಯಯಗಳ ವಿವೇಚನೆಯು ಸ್ಪಷ್ಟವಾಗಿ ತಿಳಿಯದಿರುವ ಕಾರಣ ಆ ಶಬ್ದಗಳನ್ನು ಹಾಗೆಯೇ ಪಾಠಮಾಡುವುದು ನಿಪಾತನವೆನಿಸಿರುವುದು ಇದಕ್ಕೆ ಅವ್ಯಯವೆಂದೂ ಹೇಳುವರು. ಅನುತ್ತಂ ಎಂಬ ಶಬ್ದಕ್ಕೆ ತಿರಸ್ಕಾರವನ್ನು ಹೊಂದದೆ ಇರುವ ಸಾಮರ್ಥ್ಯವು ಇಂದ್ರನಿಗೆ ಇರುವುದೆಂದು ಅರ್ಥವನ್ನು ಹೇಳುವರು ಈ ಅರ್ಥದಲ್ಲಿ ಈ ಪದವು **ವೀರ್ಯಂ** ಎಂಬ ಪದಕ್ಕೆ ವಿಶೇಷಣವಾಗಿರುವುದು

**ಮಾಯಿನಂ ಮೃಗಂ ಮಾಯಯೈವ ಅವಧೀಃ**—ಮೋಸಮಾಡತಕ್ಕವನಾಗಿ ಲೋಕಕ್ಕೆ ಹಿಂಸೆಯನ್ನು ಉಂಟುಮಾಡುತ್ತಿರುವ ಮೃಗರೂಪದಿಂದ ಇರುವ ವೃತ್ರಾಸುರನನ್ನು ಮೋಸದಿಂದಲೇ ನಾಶಪಡಿಸಿರುತ್ತೀಯೆ ಎಂದು ಸಾಯಣರು ವ್ಯಾಖ್ಯಾನಮಾಡಿರುವರು. ಮೃಗವೆಂದು ಹೆಸರುಳ್ಳ ಅಸುರನನ್ನು ಅಥವಾ ವೃಷ್ಟಿಯನ್ನು ಸುರಿಸುವುದಕ್ಕಾಗಿ ಹುಡುಕಬೇಕಾಗಿರುವ ಮೇಘವನ್ನು ಇತರರು ಹೊಡೆಯಲು ಸಾಧ್ಯವಿಲ್ಲದಿರುವ ಕಾರಣ ನೀನು ಮೋಸದಿಂದಲೇ ಹೊಡೆದು ನಿನ್ನ ಸ್ವರಾಜ್ಯರಕ್ಷಣರೂಪವಾದ ಸಾಮ್ರಾಜ್ಯಕ್ಕೆ ಮರ್ಯಾದೆಯನ್ನು ಮಾಡಿರುತ್ತೀಯೆ ಎಂದು ಸ್ಕಂದಸ್ವಾಮಿಗಳು ಅರ್ಥವನ್ನು ಮಾಡಿರುವರು

ಅಸುರರು ಮಾಯಾವಿಗಳೆಂಬುದು ಪ್ರಸಿದ್ಧವು ಮಾಯಾವಿಗಳೆಂದರೆ ತಂತ್ರ ಅಥವಾ ಮೋಸದಿಂದ ಯುದ್ಧ ಮೊದಲಾದವುಗಳನ್ನು ಮಾಡುವವರು, ವಂಚಕರು ಎಂದರ್ಥವು. ಇಂತಹ ಶತ್ರುಗಳನ್ನು ತಂತ್ರ, ಉಪಾಯ, ಮೋಸ ಮೊದಲಾದವುಗಳಿಂದಲೇ ಇಂದ್ರನು ಸಂಹಾರಮಾಡಿದನೆಂದು ಋಗ್ವೇದದಲ್ಲಿ ಅನೇಕ ಕಡೆ ವರ್ಣಿತವಾಗಿದೆ—

**ಮಾಯಾಭಿರಿಂದ್ರ ಮಾಯಿನಂ ತ್ವಂ ಶುಷ್ಣಮವಾತಿರಃ ।**

(ಋ. ಸಂ. ೧-೧೧-೭)

ಈ ಋಕ್ಕಿನಲ್ಲಿ ಮೋಸಗಾರನಾದ ಶುಷ್ಣಾಸುರನನ್ನೂ, ಉಪಾಯಗಳಿಂದಲೇ ಸಂಹಾರಮಾಡಿದನೆಂದು ಹೇಳಿದೆ ಇದರಂತೆಯೇ—

**ತ್ವಂ ಮಾಯಾಭಿರಪ ಮಾಯಿನೋಽಧಮಃ ಸ್ವಧಾಭಿರ್ಯೇ ಅಧಿ ಶುಪ್ತಾವಜುಹ್ವತ ।**

(ಋ ಸಂ. ೧-೫೧-೫)

**ವೃಜನೇನ ವೃಜಿನಾನ್ತ್ಸಂ ಪಿಪೇಷ ಮಾಯಾಭಿರ್ದಸ್ಯೂँರಭಿಭೂತ್ಯೋಜಾಃ ।**

(ಋ. ಸಂ. ೩-೩೪-೬)

**ಅಹಿಮೋಹಾನುಪ ಆಶಯಾನಂ ಪ್ರ ಮಾಯಾಭಿರ್ಮಾಯಿನಂ ಸಕ್ಷದಿಂದ್ರಃ ।**

( ಋ. ಸಂ ೫-೩೦-೬)

**ಮಾಯಾಭಿರುತ್ಸಿಸೃಪ್ಸತ ಇಂದ್ರ ದ್ಯಾಮಾರುರುಕ್ಷತಃ । ಅವ ದಸ್ಯೂँರಧೂನುಥಾಃ ॥**

(ಋ. ಸಂ. ೮-೧೪-೧೪)

**ತ್ವಂ ಮಾಯಾಭಿರನವದ್ಯ ಮಾಯಿನಂ ಶ್ರವಸ್ಯತಾ ಮನಸಾ ವೃತ್ರಮರ್ದಯಃ ।**

( ಋ ಸಂ ೧೦-೧೪೭-೨)

ಇತ್ಯಾದಿ ಸ್ಥಳಗಳಲ್ಲಿ ಇಂದ್ರನು ಮಾಯಾವಿಗಳಾದ ಅಸುರನನ್ನು ಮಾಯೆಯಿಂದಲೇ ಸಂಹಾರಮಾಡಿದನೆಂದು ವರ್ಣನೆಗಳಿವೆ

॥ ವ್ಯಾಕರಣಪ್ರಕ್ರಿಯಾ ॥

**ಅದ್ರಿವಃ**—ಅದ್ರಿ ಎಂಬುದು ಮೇಘದ ಹೆಸರು ಅದ್ರಿಃ ಅಸ್ಯ ಅಸ್ತಿ ಇತಿ ಅದ್ರಿಮಾನ್ **ತದಸ್ಯಾಸ್ತಿ**—ಸೂತ್ರದಿಂದ ಮತುಪ್‌ಪ್ರತ್ಯಯ **ಛಂದಸೀರಃ** (ಪಾ. ಸೂ ೮-೨-೧೫) ಎಂಬುದರಿಂದ ಮತುಪಿನ ಮಕಾರಕ್ಕೆ ವತ್ವ. ಅದ್ರಿವತ್ ಶಬ್ದವಾಗುತ್ತದೆ ಸಂಬುದ್ಧಿಯಲ್ಲಿ **ಮತುವಸೋರುಃ ಸಂಬುದ್ಧೌ** (ಪಾ. ೮-೩-೧) ಎಂಬುದರಿಂದ ಮತುಪಿನ ತಕಾರಕ್ಕೆ ರುತ್ವ **ಖರವಸಾನಯೋರ್ವಿಸರ್ಜನೀಯಃ** ಸೂತ್ರದಿಂದ ವಿಸರ್ಗ.

**ಅನುತ್ತಂ**— ಣುದ ಪ್ರೇರಣೇ ಧಾತು ಕರ್ಮಣಿಯಲ್ಲಿ ಕ್ತ ಪ್ರತ್ಯಯ **ರದಾಭ್ಯಾಂ**—ಸೂತ್ರದಿಂದ ನಿಷ್ಠಾನತ್ವವು ಪ್ರಾಪ್ತವಾದರೆ **ನಸತ್ತನಿಷತ್ತ**—(ಪಾ ಸೂ. ೮-೨-೬೧) ಎಂಬುದರಿಂದ ನಿಪಾತಮಾಡಿರುವುದರಿಂದ ನತ್ವ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತ. ವಿಭಕ್ತಿಯೊಡನೆ (ಅಮ್) ಏಕಾದೇಶವಾದಾಗ **ಏಕಾದೇಶ ಉದಾತ್ತೇನೋದಾತ್ತಃ** (ಪಾ. ಸೂ ೮-೨-೫) ಎಂಬುದರಿಂದ ಉದಾತ್ತವಾಗುತ್ತದೆ

**ಮಾಯಿನಂ**—ಮಾಯಾಶಬ್ದವು ವ್ರೀಹ್ಯಾದಿಯಲ್ಲಿಯೂ ಪಠಿತವಾದುದರಿಂದ **ವ್ರೀಹ್ಯಾದಿಭ್ಯಶ್ಚ** (ಪಾ. ಸೂ. ೫-೨-೧೧೬) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಇಕಾರ ಉದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅವಧೀಃ**—ಹನ ಹಿಂಸಾಗತ್ಯೋಃ ಧಾತು. ಇದಕ್ಕೆ ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚ** ಸೂತ್ರದಿಂದ ಇಕಾರ ಲೋಪ. **ಲುಙಿಚ** (ಪಾ. ಸೂ ೨-೪-೪೩) ಎಂಬುದರಿಂದ ಪ್ರಕೃತಿಗೆ ವಧಾದೇಶ. ಇದು ಅದಂತವಾಗಿದೆ ಚ್ಲಿಗೆ ಸಿಚ್ ಆದೇಶ. **ಅಸ್ತಿಸಿಚೋಽಪೃಕ್ತೇ** (ಪಾ. ಸೂ. ೭-೩-೯೬) ಎಂಬುದರಿಂದ ಅಪೃಕ್ತಕ್ಕೆ ಈಡಾಗಮ. ಸಿಚ್ಚಿಗೆ ಇಡಾಗಮ. **ಅತೋಲೋಪಃ** ಎಂಬುದರಿಂದ ವಧಪ್ರಕೃತಿಯ ಅಕಾರಕ್ಕೆ ಲೋಪ. **ಇಟಈಟಿ** (ಪಾ ಸೂ. ೮-೨-೨೮) ಎಂಬುದರಿಂದ ಸಿಚ್ಚಿಗೆ ಲೋಪ **ಅಚಃ ಪರಸ್ಮಿನ್**—ಸೂತ್ರದಿಂದ ಅಲೋಪಕ್ಕೆ ಸ್ಥಾನಿವದ್ಭಾವ ಬರುವುದರಿಂದ ಸಿಚ್ ನಿಮಿತ್ತವಾಗಿ ಧಾತುವಿಗೆ ವೃದ್ಧಿ ಬರುವುದಿಲ್ಲ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೭ ॥



॥ ಸಂಹಿತಾಪಾಠಃ ।

ವಿ ತೇ ವಜ್ರಾಸೋ ಅಸ್ಥಿರನ್ನವತಿಂ ನಾವ್ಯಾ ಅನು ।
ಮಹತ್ತ ಇಂದ್ರ ವೀರ್ಯಂ ಬಾಹ್ವೋಸ್ತೇ ಬಲಂ ಹಿತಮರ್ಚ-
ನ್ನನು ಸ್ವರಾಜ್ಯಂ ॥ ೮ ॥

॥ ಪದಪಾಠಃ ॥

**ವಿ । ತೇ । ವಜ್ರಾಸಃ । ಅಸ್ಥಿರನ್ । ನವತಿಂ । ನಾವ್ಯಾಃ । ಅನು ।**
**ಮಹತ್ । ತೇ । ಇಂದ್ರ । ವೀರ್ಯಂ । ಬಾಹ್ವೋಃ । ತೇ । ಬಲಂ । ಹಿತಂ ।**
**ಅರ್ಚನ್ । ಅನು । ಸ್ವಽರಾಜ್ಯಂ ॥ ೮ ॥**

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ವಜ್ರಾಸೋ ವಜ್ರಾಸ್ತ್ವತ್ಸಕಾಶಾನ್ನಿರ್ಗತಾನ್ಯಾಯುಧಾನಿ ನಾವ್ಯಾ ನಾವಾ ತಾರ್ಯಾ ನವತಿಂ ನವತಿಸಂಖ್ಯಾಕಾ ವೃತ್ರೇಣ ನಿರುದ್ಧಾ ನದೀರನೂಪಲಕ್ಷ್ಯ ವ್ಯಸ್ಥಿರನ್ । ವಿವಿಧಮಸ್ಥಿಷತ । ಸರ್ವತ್ರ ವ್ಯಾಪ್ಯ ವರ್ತಮಾನಂ ವೃತ್ರಂ ಹಂತುಂ ತವ ವಜ್ರ ಏಕೋಽಪ್ಯನೇಕ ಇವಾಸೀದಿತ್ಯರ್ಥಃ । ಕಿಂಚ ಇಂದ್ರ ತೇ ತವ ವೀರ್ಯಂ ಮಹತ್ ಪ್ರಭೂತಂ । ಅನ್ಯೈರಜೇಯಮಿತ್ಯರ್ಥಃ । ತಥಾ ತೇ ಬಾಹ್ವೋಸ್ತ್ವದೀಯಯೋರ್ಹಸ್ತಯೋರ್ಬಲಂ ಹಿತಂ ನಿಹಿತಂ । ತ್ವದೀಯೌ ಬಾಹೂ ಅಪ್ಯತಿಶಯೇನ ಬಲಿನಾವಿತ್ಯರ್ಥಃ । ಅನ್ಯತ್ಪೂರ್ವವತ್ ॥ ಅಸ್ಥಿರನ್ । ತಿಷ್ಠತೇರ್ಲುಙಿ ಸಮವಪ್ರವಿಭ್ಯಃ ಸ್ಥ ಇತ್ಯಾತ್ಮನೇಪದಂ । ಮಂತ್ರೇ ಘಸೇತಿ ಚ್ಲೇರ್ಲುಕ್ । ಸ್ಥಾಘ್ವೋರಿಚ್ಚ । ಪಾ. ೧-೨-೧೭ । ಇತೀತ್ವಂ । ವ್ಯತ್ಯಯೇನ ಝಸ್ಯ ರನಾದೇಶಃ । ನಾವ್ಯಾಃ । ನೌವಯೋಧರ್ಮೇತ್ಯಾದಿನಾ । ಪಾ. ೪-೪-೯೧ । ಯತ್ । ಯತೋಽನಾವ ಇತಿ ಪರ್ಯುದಾಸಾತ್ತಿತ್ಸ್ವರಿತ ಇತಿ ಸ್ವರಿತತ್ವಂ । ಬಾಹ್ವೋಃ । ಉದಾತ್ತಯಣ ಇತಿ ವಿಭಕ್ತ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಇಂದ್ರ— ಎಲೈ ಇಂದ್ರನೇ । ತೇ —ನಿನ್ನ (ನಿನ್ನಿಂದ ಪ್ರಯೋಗಿಸಲ್ಪಟ್ಟ) । ವಜ್ರಾಸಃ—ವಜ್ರಾಯುಧಗಳು । ನವತಿಂ —ತೊಂಭತ್ತು । ನಾವ್ಯಾಃ—ನಾವೆಯಿಂದ ದಾಟಲ್ಪಡುವ (ನದಿಗಳನ್ನು) । ಅನು —ಲಕ್ಷ ಮಾಡದೆ । ವಿ ಅಸ್ಥಿರನ್—ನಾನಾರೂಪವಾಗಿ ಇದ್ದುವು । ತೇ—ನಿನ್ನ । ವೀರ್ಯಂ —ವೀರ್ಯವು (ಪರಾಕ್ರಮವು) । ಮಹತ್—ಹೆಚ್ಚಾದದ್ದು । ತಥಾ—ಹಾಗೆಯೇ । ತೇ—ನಿನ್ನ । ಬಾಹ್ವೋಃ—ತೋಳುಗಳಲ್ಲಿ । ಬಲಂ ಬಲವು । ಹಿತಂ—ಸನ್ನಿಹಿತವಾಗಿದೆ । ಹೇ ಇಂದ್ರ—ಎಲೈ ಇಂದ್ರನೇ (ನಿನ್ನ) । ಸ್ವರಾಜ್ಯಂ—ಸ್ವಪ್ರಭುತ್ವವನ್ನು । ಅರ್ಚನ್ ಅನು—ಪ್ರಕಟಗೊಳಿಸುತ್ತಾ ಇರುವೆ

॥ ಭಾವಾರ್ಥ ॥

(ನಿನ್ನಿಂದ ಪ್ರಯುಕ್ತವಾದ) ವಜ್ರಾಯುಧವು ನಾನಾರೂಪವಾಗಿ ವೃತ್ರನಿಂದ ನಿರುದ್ಧವಾದ ತೊಂಭತ್ತು ನದಿಗಳನ್ನೂ ಲಕ್ಷ್ಯಮಾಡದೆ ವ್ಯಾಪಿಸಿದೆ. ನಿನ್ನ ಶೌರ್ಯವು ಮಹತ್ತರವಾದುದು ಹಾಗೆಯೇ ನಿನ್ನ ಬಾಹುಗಳೂ ಬಲಯುಕ್ತವಾಗಿವೆ. ಇಂತಹ ನೀನು ನಿನ್ನ ಸ್ವಾಮಿತ್ವವನ್ನು ಪ್ರಕಟಗೊಳಿಸುತ್ತಿರುವೆ

## English Translation.

Your thounderbolts were scattered widely over ninety-and nine rivers, great is your prowess , strength is deposited in your arms, manifesting your own sovereignty.

॥ ವಿಶೇಷವಿಷಯಗಳು ॥

**ವಜ್ರಾಸಃ—ದಿದ್ಯುತ್, ನೇಮಿಃ** ಎಂಬ ಹದಿನೆಂಟು ವಜ್ರನಾಮಗಳಲ್ಲಿ ವಜ್ರ ಶಬ್ದವು (ನಿ. ೩-೧೧) ಉಕ್ತವಾಗಿರುತ್ತದೆ. **ವರ್ಜಯತಿ ಪ್ರಾಣೈಃ ಶತ್ರೂನ್ ಇತಿ** ಶತ್ರುಗಳನ್ನು ಅವರ ಪ್ರಾಣಗಳಿಂದ ಹೊರಗೆ ಹೋಗುವ ಹಾಗೆ ಮಾಡುತ್ತದೆ. ಎಂದರೆ ಶತ್ರುಗಳ ಪ್ರಾಣಾಪಹರಣಮಾಡುತ್ತದೆ. ಅಥವಾ **ವಿನಾಶಯತಿ ಶತ್ರೂನ್** ಶತ್ರುಗಳನ್ನು ನಾಶಮಾಡುತ್ತದೆ, ಆದ್ದರಿಂದ ಇಂದ್ರನ ಆಯುಧವು ವಜ್ರವೆನಿಸಿರುವುದು. ಇಲ್ಲಿ **ವಜ್ರಾಸಃ** ಎಂದು ಬಹುವಚನವನ್ನು ಉಪಯೋಗಿಸಿ ಇರುವುದರಿಂದ ಇಂದ್ರನು ಶತ್ರುಗಳ ವಿನಾಶಕ್ಕಾಗಿ ಉಪಯೋಗಿಸುವ ಆಯುಧಗಳೆಂದು ಅರ್ಥವು. ಆದರೆ **ನಾವ್ಯಾಃ ನವತಿಂ ಅನು ವಿ ಅಸ್ಥಿರನ್** ತೊಂಭತ್ತು ಸಂಖ್ಯೆಯುಳ್ಳದ್ದಾಗಿರುವ ದೊಡ್ಡ ನದಿಗಳೂ ಕೂಡ ವೃತ್ರಾಸುರನಿಂದ ತಡೆಯಲ್ಪಟ್ಟು ಇರುವುದನ್ನು ನೋಡಿ ಅನೇಕವಾದವು ಎಂದು ವಜ್ರಾಯುಧವನ್ನು ವರ್ಣಿಸಿರುವುದರಿಂದ ವೃತ್ರಾಸುರನನ್ನು ನಾಶಮಾಡುವಾಗ ಒಂದು ವಜ್ರಾಯುಧವೇ ಅನೇಕ ಆಯುಧಗಳ ಹಾಗೆ ಇತ್ತು ಎಂದು ಅರ್ಥವನ್ನು ಹೇಳುವುದೇ ಸೂಕ್ತವಾಗಿರುವುದು. ಇದರಿಂದ ವಜ್ರಾಯುಧದ ಮಹತ್ವವು ಇತರ ಆಯುಧಗಳಿಗಿಂತ ಅತಿಶಯವಾಗಿರುವುದೆಂದು ತಿಳಿದುಬರುವುದು.

**ತೇ ಬಾಹ್ವೋರ್ಬಲಂ ಹಿತಂ**—ನಿನ್ನ ತೋಳುಗಳಲ್ಲಿ ಎಲ್ಲರ ತೋಳುಗಳ ಬಲಕ್ಕಿಂತಲೂ ಅತಿಶಯವಾದ ಬಲವು ಇಡಲ್ಪಟ್ಟಿರುವುದು ಎಂದು ಅರ್ಥವು **ಓ ಹಾಕ್ ಗತೌ, ಓ ಹಾಕ್ ತ್ಯಾಗೇ** ಎಂಬ ಧಾತುಗಳು ಗಮನ, ತ್ಯಾಗ ಎಂಬ ಅರ್ಥಗಳಲ್ಲಿ ಇರುತ್ತವೆ ಇವುಗಳ ಮೇಲೆ ಕ್ತಪ್ರತ್ಯಯವು ಬಂದಾಗಲೂ ಹಿತ ಎಂದು ಶಬ್ದವಾಗಿ ಗತ, ತ್ಯಕ್ತ ಎಂದು ಅರ್ಥವಾಗುವುದು ಆದರೆ ಇಲ್ಲಿ ಧಾಞ್ ಧಾತುವಿನ ಮೇಲೆ **ದಧಾತೇರ್ಹಿಃ** ಎಂಬ ಸೂತ್ರದಿಂದ ಕ್ತಪ್ರತ್ಯಯವು ಬಂದು **ಹಿತ** ಎಂಬ ರೂಪವಾಗಿ (ಧರಿಸಿರುವ) ಇಡಲ್ಪಟ್ಟಿರುವ ಎಂದು ಅರ್ಥವಾಗುತ್ತದೆ.

**ನವತಿಂ—ನವತಿಸಂಖ್ಯಾಕಾ ವೃತ್ರೇಣ ನಿರುದ್ಧಾ ನದೀಃ ।** ವೃತ್ರನಿಂದ ತಡೆಯಲ್ಪಟ್ಟ **ತೊಂಭತ್ತು** ನದಿಗಳೆಂದು ಭಾಷ್ಯಕಾರರು **ನವತಿಂ** ಎಂಬ ಶಬ್ದಕ್ಕೆ ಅರ್ಥವಿವರಣೆಮಾಡಿರುವರು ಇಲ್ಲಿ **ನವತಿಂ** ಎಂದರೆ **ತೊಂಭತ್ತು** ಎಂದು ನಿರ್ದಿಷ್ಟಸಂಖ್ಯೆಯ ನದಿಗಳೇ ಅಥವಾ **ಶತಂ, ಸಹಸ್ರಂ** ಮೊದಲಾದ ಸಂಖ್ಯಾವಾಚಕಶಬ್ದಗಳಿಗಿರುವಂತೆ ಅನೇಕಾರ್ಥವಿರುವುದೇ ಎಂಬುದೇ ಸಂಶಯಾಸ್ಪದವಾಗಿರುವುದು ಸಾಧಾರಣವಾಗಿ ಅನೇಕಾರ್ಥವನ್ನು ಸೂಚಿಸುವ ಕಡೆಗಳಲ್ಲಿ **ಶತ, ಸಹಸ್ರ** ಎಂಬ ಶಬ್ದಗಳ ಪ್ರಯೋಗನೇ ಬಳಕೆಯಲ್ಲಿರುವುದು. ಆದುದರಿಂದ **ನವತಿಂ** ಎಂಬ ಶಬ್ದವು ಒಂದು ನಿರ್ದಿಷ್ಟವಾದ ಸಂಖ್ಯೆಯನ್ನು ಮಾತ್ರ ಸೂಚಿಸುವುದೆಂದೂ ಅದರಲ್ಲಿಯೂ ನದಿಗಳ ವಿಷಯವಾಗಿ ಹೇಳುವಾಗ ಈ ಶಬ್ದದ ಪ್ರಯೋಗವು ವಿಶೇಷವಾಗಿ ಇರುವುದೆಂದೂ ಹೇಳಲು ಸಾಕಾದಷ್ಟು ಆಧಾರಗಳಿವೆ ಉದಾಹರಣೆಗೆ—

**ನವ ಚ ಯನ್ನವತಿಂ ಚ ಸ್ರವಂತೀಃ ಶ್ಯೇನೋ ನ ಭೀತೋ ಅತರೋ ರಜಾಂಸಿ ।**

(ಋ. ಸಂ. ೧-೩೨-೧೪)

**ಪ್ರಾಸ್ಯ ಪಾರಂ ನವತಿಂ ನಾವ್ಯಾನಾಮಪಿ ಕರ್ತಮವರ್ತಯೋऽಯಜ್ಯೂನ್ ।**

(ಋ ಸಂ ೧-೧೨೧-೧೩)

**ನವ ಯದಸ್ಯ ನವತಿಂ ಚ ಭೋಗಾನ್ತ್ಸಾಕಂ ವಜ್ರೇಣ ಮಘವಾ ವಿವೃಶ್ಚತ್ ।**

(ಋ. ಸಂ. ೫-೨೯-೬).

**ನವತಿಂ ಸ್ರೋತ್ಯಾ ನವ ಚ ಸ್ರವಂತೀರ್ದೇವೇಭ್ಯೋ ಗಾತುಂ ಮನುಷೇ ಚ ವಿಂದಃ ।**

(ಋ ಸಂ ೧೦-೧೦೪-೮).

ಎಂಬ ಋಕ್ಕುಗಳಲ್ಲಿ ನದೀಸಂಬಂಧವಾಗಿ ನವತಿ ಶಬ್ದದ ಪ್ರಯೋಗವಿರುವುದು. ಮತ್ತು ಎರಡನೆಯ ಉದಾಹರಣೆಯನ್ನು ಬಿಟ್ಟು ಉಳಿದ ಋಕ್ಕುಗಳಲ್ಲಿ **ನವ ನವತಿಂ** ಎಂದು ತೊಂಭತ್ತೊಂಭತ್ತು ಎಂಬ ಸಂಖ್ಯೆಯನ್ನೇ ಹೇಳಿರುವುದರಿಂದಲೂ ಶಂಬರಾಸುರ ಮೊದಲಾದ ಅಸುರರ ಪಟ್ಟಣಗಳನ್ನು ಇಂದ್ರನು ನಾಶಮಾಡಿದ ಸಂದರ್ಭಗಳಲ್ಲಿಯೂ **ನವ ನವತಿಂ**—ತೊಂಭತ್ತೊಂಭತ್ತು ಎಂಬ ಶಬ್ದಗಳ ಪ್ರಯೋಗವೇ ಇರುವುದರಿಂದಲೂ ಈ ಶಬ್ದಗಳು ಅನೇಕವೆಂಬ ಅರ್ಥವನ್ನು ಸೂಚಿಸಬಹುದೆಂಬ ಶಂಕೆಗೆ ಆಸ್ಪದವಿರುವುದು

ವ್ಯಾಕರಣಪ್ರಕ್ರಿಯಾ ॥

**ವಜ್ರಾಸಃ**- ವಜ್ರ ಶಬ್ದದ ಮೇಲೆ ಜಸ್ ವಿವಕ್ಷಿವಮಾಡಿದಾಗ **ಆಜ್ಜಸೇರಸುಕ್** (ಪಾ ಸೂ. ೭ ೧-೫೦) ಎಂಬುದರಿಂದ ಜಸಿಗೆ ಅಸುಕಾಗಮ. ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ

**ಅಸ್ಥಿರನ್**—ಷ್ಠಾ ಗತಿನಿವೃತ್ತೌ ಧಾತು. ಇದಕ್ಕೆ ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ ವಿ ಎಂಬ ಉಪಸರ್ಗದ ಯೋಗವಿರುವುದರಿಂದ **ಸಮವಪ್ರವಿಭ್ಯಃ ಸ್ಥಃ** (ಪಾ. ಸೂ ೧-೩-೨೨) ಎಂಬುದರಿಂದ ಆತ್ಮನೇ ಪದಿಯಾಗುತ್ತದೆ **ಚ್ಲಿ ಲುಙಿ** ಸೂತ್ರದಿಂದ ಚ್ಲಿ ಬಂದಾಗ **ಮಂತ್ರೇಘಸ**--(ಪಾ. ಸೂ ೨-೪-೮೦) ಎಂಬುದರಿಂದ ಧಾತುವಿನ ಆಕಾರಕ್ಕೆ ಇತ್ವ **ಸ್ಥಾಘ್ವೋರಿಚ್ಚ** (ಪಾ ಸೂ ೧-೨-೧೭) ಎಂಬುದರಿಂದ ಝ ಪ್ರತ್ಯಯಕ್ಕೆ ರನಾದೇಶ ಬರುತ್ತದೆ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ನಾವ್ಯಾಃ**—ನಾವಾ ತಾರ್ಯಾಃ ನಾವ್ಯಾಃ (ದೋಣಿಯಿಂದ ದಾಟಬೇಕಾದವುಗಳು) **ನೌವಯೋಧರ್ಮ**—(ಪಾ ಸೂ. ೪-೪-೯೧) ಎಂಬುದರಿಂದ ತಾರ್ಯ ಎಂಬರ್ಥತೋರುವಾಗ ನೌ ಶಬ್ದಕ್ಕೆ ಯತ್ ಪ್ರತ್ಯಯ **ವಾಂತೋಯಿಪ್ರತ್ಯಯೇ** ಎಂಬುದರಿಂದ ಆವಾದೇಶ. ನಾವ್ಯ ಎಂದು ರೂಪವಾಗುತ್ತದೆ. ಸ್ತ್ರೀತ್ವದಲ್ಲಿ **ಅಜಾದ್ಯತ**—ಸೂತ್ರದಿಂದ ಟಾಪ್. **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬ ಸೂತ್ರದಲ್ಲಿ ಅನಾವಃ ಎಂದು ಪರ್ಯುದಾಸಮಾಡಿರುವುದರಿಂದ **ತಿತ್‌ಸ್ವರಿತಂ** (ಪಾ. ಸೂ ೬-೧-೧೮೫) ಎಂಬುದರಿಂದ ಸ್ವರಿತಸ್ವರ ಬರುತ್ತದೆ

**ಬಾಹ್ವೋಃ**—ಬಾಹು ಶಬ್ದ. ಷಷ್ಠೀ ದ್ವಿವಚನಾಂತರೂಪ. ಇಲ್ಲಿ ಉದಾತ್ತಸ್ಥಾನದಲ್ಲಿ ಯಣ್ ಬಂದು ಅದರ ಪೂರ್ವದಲ್ಲಿ ಹಲ್ಲಿರುವುದರಿಂದ ಪರದಲ್ಲಿರುವ ವಿಭಕ್ತಿಗೆ **ಉದಾತ್ತಯಣೋಹಲ್‌ಪೂರ್ವಾತ್** (ಪಾ. ಸೂ ೬-೧-೧೭೪) ಎಂಬುದರಿಂದ ಉದಾತ್ತಸ್ವರ ಬರುತ್ತದೆ ॥ ೮ ॥



॥ ಸಂಹಿತಾಪಾಠಃ ॥

ಸಹಸ್ರಂ ಸಾಕಮರ್ಚತ ಪರಿ ಷ್ಟೋಭತ ವಿಂಶತಿಃ ।
ಶತೈನಮನ್ವನೋನವುರಿಂದ್ರಾಯ ಬ್ರಹ್ಮೋದ್ಯತಮರ್ಚನ್ನನು
ಸ್ವರಾಜ್ಯಂ ॥ ೯ ॥

॥ ಪದಪಾಠಃ ॥

ಸಹಸ್ರಂ । ಸಾಕಂ । ಅರ್ಚತ । ಪರಿ । ಸ್ತೋಭತ । ವಿಂಶತಿಃ ।
ಶತಾ । ಏನಂ । ಅನು । ಅನೋನವುಃ । ಇಂದ್ರಾಯ । ಬ್ರಹ್ಮ । ಉತ್ ಽ-
ಯತಂ । ಅರ್ಚನ್ । ಅನು । ಸ್ವ ಽ ರಾಜ್ಯಂ ॥ ೯ ॥

॥ ಸಾಯಣಭಾಷ್ಯಂ ॥

ಸಹಸ್ರಂ ಸಹಸ್ರಸಂಖ್ಯಾಕಾ ಮನುಷ್ಯಾಃ ಸಾಕಮರ್ಚತ । ಏನಮಿಂದ್ರಂ ಯುಗಪದೇವಾಪೂಜಯನ್ । ತಥಾ ವಿಂಶತಿಃ । ಷೋಡಶರ್ತ್ವಿಜೋ ಯಜಮಾನಃ ಪತ್ನೀ ಚ ಸದಸ್ಯಃ ಶಮಿತಾ ಚೇತಿ ವಿಂಶತಿಸಂಖ್ಯಾಕಾಃ । ತೇಷಾಂ ಯಾ ವಿಂಶತಿಸಂಖ್ಯಾ ಸಾ ಪರಿ ಷ್ಟೋಭತ । ಪರಿತಃ ಸರ್ವತೋಽಸ್ತೌತ್ । ತಥಾ ಚ ಶತಾ ಶತಸಂಖ್ಯಾಕಾ ಋಷಯ ಏನಮಿಂದ್ರಮನ್ವನೋನವುಃ । ಪುನಃಪುನರಸ್ತುವನ್ । ಅಸ್ಮಾ ಏವೇಂದ್ರಾಯ ಬ್ರಹ್ಮ ಹವಿರ್ಲಕ್ಷಣಮನ್ನಮುದ್ಯತಂ । ದಾತುಮೂರ್ಧ್ವಂ ಧೃತಂ । ಅತ ಏವಂವಿಧ ಇಂದ್ರೋ ವೃತ್ರಮಹನ್ನಿತ್ಯರ್ಥಃ । ಅನ್ಯತ್ಪೂರ್ವವತ್ ॥ ಪರಿ ಷ್ಟೋಭತ । ಸ್ತೋಭತಿಃ ಸ್ತುತಿಕರ್ಮಾ । ಉಪಸರ್ಗಾತ್ಸುನೋತೀತಿ ಷತ್ವಂ । ಅನೋನವುಃ । ಣು ಸ್ತುತೌ । ಅಸ್ಮಾದ್ಯಙ್ಲುಗಂತಾಲ್ಲುಙಿ ಸಿಜಭ್ಯಸ್ತವಿದಿಭ್ಯಶ್ಚೇತಿ ಝೇರುಸಾದೇಶಃ । ಉದ್ಯತಂ । ಯಮ ಉಪರಮೇ । ಉತ್ಪೂರ್ವಾದಸ್ಮಾತ್ಕರ್ಮಣಿ ನಿಷ್ಠಾ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಸ್ವರಾಜ್ಯಂ**- (ಇಂದ್ರನ) ಸ್ವಾಮಿತ್ವವನ್ನು । **ಅನು ಅರ್ಚನ್**—ಪ್ರಕಟಿಸುತ್ತಾ । **ಸಹಸ್ರಂ**—ಸಹಸ್ರ ಸಂಖ್ಯಾಕರಾದ ಎಂದರೆ ಅನೇಕ ಮನುಷ್ಯರು । **ಸಾಕಮರ್ಚತ**—(ಇಂದ್ರನನ್ನು) ಏಕಕಾಲದಲ್ಲಿ ಅರ್ಚಿಸಿದರು । **ವಿಂಶತಿಃ**—ಹದಿನಾರು ಮಂದಿ ಋತ್ವಿಜರು, ಯಜಮಾನ, ಅವನ ಪತ್ನಿ, ಸದಸ್ಯ ಶಮಿತಾ ಎಂಬ ಇಪ್ಪತ್ತು ಜನರು । **ಪರಿ ಸ್ತೋಭತ**—ಸುತ್ತಲೂ ನಿಂತು ಸ್ತುತಿಸಿದರು । **ಶತಾ**—ನೂರು ಜನರು (ಋಷಿಗಳು) । **ಏನಂ**—ಇವನನ್ನು (ಇಂದ್ರನನ್ನು) । **ಅನ್ವನೋನವುಃ**—ಪುನಃ ಪುನಃ ಸ್ತುತಿಸಿದರು । **ಇಂದ್ರಾಯ**—(ಇದೇ) ಇಂದ್ರನಿಗೆ । **ಬ್ರಹ್ಮ**—(ಹವಿಸ್ಸಿನ ರೂಪವಾದ) ಅನ್ನವನ್ನು (ಅರ್ಪಿಸುವುದಕ್ಕಾಗಿ) । **ಉದ್ಯತಂ**—ಮೇಲಕ್ಕೆ ಎತ್ತಿ ಹಿಡಿಯಲ್ಪಟ್ಟಿದೆ

॥ ಭಾವಾರ್ಥ ॥

ಇಂದ್ರನ ಸ್ವಾಮಿತ್ವವನ್ನು ಪ್ರಕಟಿಸುತ್ತಾ ಸಾವಿರಾರು ಜನರು ಇವನನ್ನು ಅರ್ಚಿಸಿದರು, (ಋತ್ವಿಜರಾದಿಯಾದ) ಇಪ್ಪತ್ತು ಜನರು ಸ್ತುತಿಸಿದರು, ನೂರು ಜನ ಋಷಿಗಳು ಪುನಃ ಪುನಃ ಸ್ತುತಿಸಿದರು, ಮತ್ತು ಅದೇ ಇಂದ್ರನಿಗೆ ಅರ್ಪಿಸುವುದಕ್ಕಾಗಿ ಹವಿಸ್ಸನ್ನು ಸಿದ್ಧಪಡಿಸಲಾಗಿದೆ

## English Translation.

A thousand mortals worshipped him together, twenty have hymned (his praise); a hundred (sages) repeatedly glorify him, so, Indra, is the oblation lifted up, manifesting your own sovereignty

॥ ವಿಶೇಷವಿಷಯಗಳು ॥

**ಸಹಸ್ರಂ ಸಾಕಮರ್ಚತ, ಪರಿ ಸ್ತೋಭತ ವಿಂಶತಿಃ, ಶತೈನಮನ್ವನೋನವುಃ-ಸಹಸ್ರಸಂಖ್ಯಾಕಾಃ ಮನುಷ್ಯಾಃ**—ಸಾವಿರ ಸಂಖ್ಯೆಯುಳ್ಳ ಮನುಷ್ಯರು ಎಂದರೆ ಸಾವಿರಾರು ಜನರು ಒಂದೇ ಕಾಲದಲ್ಲಿ ಈ ಇಂದ್ರನನ್ನು ಪೂಜಿಸಿದರು. ಹದಿನಾರು ಜನ ಋತ್ವಿಕ್ಕುಗಳೂ, ಯಜಮಾನ, ಇವನ ಪತ್ನೀ, ಸದಸ್ಯ, ಶಮಿತಾ ಎಂಬುವರೂ ಸೇರಿ ಯಜ್ಞಕ್ಕೆ ಸಂಬಂಧಪಟ್ಟ ಇಪ್ಪತ್ತು ಜನರೂ ಒಂದು ನೂರು ಸಂಖ್ಯೆಯುಳ್ಳ ಋಷಿಗಳೂ ಒಟ್ಟಾಗಿ ಸೇರಿ ಇಂದ್ರನನ್ನು ಸ್ತುತಿಮಾಡಿದರೆಂಬು ಸಾಯಣರು ವ್ಯಾಖ್ಯಾನ ಮಾಡಿರುವರು. ಸ್ಕಂದಸ್ವಾಮಿಗಳು—**ಅರ್ಚತ-ಸ್ತೋತ್ರ ಮಾಡಿರಿ, ಪರಿಸ್ತೋಭತ**-ಪೂಜಿಸಿರಿ, ಎಂದು ಅರ್ಥವನ್ನು ಮಾಡಿ ಎಲೈ ಪುತ್ರರೇ, ಎಲೈ ಪೌತ್ರರೇ, ಎಲೈ ಋತ್ವಿಕ್ಕುಗಳೇ ನೀವು ಸಹಸ್ರ ಸಂಖ್ಯೆಯುಳ್ಳವರಾಗುವಂತೆಯೂ, ಇಪ್ಪತ್ತು ಸಂಖ್ಯೆಯುಳ್ಳವರಾಗರುವಂತೆಯೂ ಇಂದ್ರನನ್ನು **ಸ್ತುತಿಮಾಡಿರಿ.** ಪೂಜಿಸಿರಿ ಎಂದು ಅರ್ಥವನ್ನು ಹೇಳಿರುವರು. ಇದರಿಂದ **ಸಹಸ್ರ, ಶತ, ವಿಂಶತಿ**-ಸಾವಿರ, ನೂರು, ಇಪ್ಪತ್ತು ಎಂಬ ಶಬ್ದಗಳು ಅಷ್ಟೇ ಸಂಖ್ಯೆಯನ್ನು ಬೋಧಿಸುವುವು ಎಂದು ನಿಯಮವಿರುವುದಿಲ್ಲ ಒಬ್ಬರೇ ಅಷ್ಟು

ಸಂಖ್ಯೆಯುಳ್ಳ ಜನರು ಪೂಜಿಸುವಂತೆಯೂ, ಸ್ತೋತ್ರಮಾಡುವಂತೆಯೂ ಇಂದ್ರನನ್ನು ಪೂಜೆಮಾಡಿ ಸ್ತೋತ್ರಮಾಡಿರಿ ಎಂಬ ಅರ್ಥವೂ ತೋರುತ್ತದೆ. ಮತ್ತು-ಅರ್ಚನ್ ಎಂಬುವ ಪದವು ಅರ್ಚತೀ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು. ಇದರಿಂದ ನಃ-ನಮ್ಮ. ಅಥವಾ ನಮಗಾಗಿ ಸ್ವರಾಜ್ಯಂ ಅರ್ಚ-ಸುಖಕರವಾಗಿರುವಂತೆ ನಮ್ಮೆಲ್ಲರನ್ನೂ ರಾಜ್ಯವನ್ನೂ ಕೂಡ ಮರ್ಯಾದೆಯಿಂದ ವರ್ತಿಸು ವಂತೆ ರಕ್ಷಿಸುವ ಎಂದು ಅರ್ಥವನ್ನು ಹೇಳಿರುತ್ತಾರೆ ಸಹಸ್ರ, ಶತ, ವಿಂಶತಿ ಶಬ್ದಗಳು ಅಷ್ಟು ಸಂಖ್ಯೆಗಳುಳ್ಳ ಋಷಿಗಳು ಮತ್ತು ದೇವತಾ ವಾಚಕಗಳು ಅಥವಾ ಶತ, ಸಹಸ್ರ, ಎಂಬ ಶಬ್ದಗಳಿಗೆ ಅನೇಕಾರ್ಥವನ್ನು ಹೇಳಬಹುದು ಮತ್ತು—

**ಆ ಯದಿಂದ್ರಶ್ಚ ದದ್ವಹೇ ಸಹಸ್ರಂ ವಸುರೋಚಿಷಃ ।**

(ಋ. ಸಂ, ೮-೩೪-೧೬)

ಎಂಬ ಋಕ್ಕಿನಲ್ಲಿ ಸಹಸ್ರಂ ಎಂಬ ಪದಕ್ಕೆ ಸಾವಿರ ಸಂಖ್ಯೆಯುಳ್ಳ ವಸುರೋಚಿಷರೆಂದು ಪ್ರಸಿದ್ಧರಾದ ಇಂದ್ರನನ್ನು ಸ್ತುತಿಮಾಡುವ ಋಷಿಗಳು ಎಂದು ಅರ್ಥವು **ವಿಂಶತಿಃ** ಇಪ್ಪತ್ತು ಎಂಬ ಶಬ್ದದಿಂದ ಇಪ್ಪತ್ತು ಜನರಾದ ಅಂಗಿರಸ್ಸುಗಳೆಂದು ಹೇಳಬಹುದು. ಇತಿಹಾಸಗಳಲ್ಲಿ ಅಂಗಿರಸ್ಸುಗಳು ಹತ್ತುಜನಗಳೆಂದು ಪ್ರಸಿದ್ಧವಾಗಿರ ವುದು ಆದರೆ ಬೃಹಸ್ಪತಿಯೇ ಮೊದಲಾದ ಭ್ರಾತೃಗಳನ್ನು ಎಣಿಕೆಮಾಡಿದರೆ (ಅಂಗಿರಸ್ಸುಗಳು) ಅಂಗಿರಾಋಷಿಗಳು ಇಪ್ಪತ್ತುಜನರಾಗುವರು. ಇವರೂ ಸಹ ಸಾವಿರ ವಸುರೋಚಿಷರ ಸಂಗಡ ಸೇರಿಕೊಂಡು ಇಂದ್ರನನ್ನು ಸ್ತುತಿಮಾಡುವರು. **ಪವಸ್ವೇತ್ಯೃಷಯಸ್ಸೂಕ್ತಂ ಶತಂ ವೈಖಾನಸಾ ವಿದುಃ** ಎಂಬ ವಚನಾನುಸಾರವಾಗಿ ವೈಖಾನಸರು ಒಂದು ನೂರು ಜನರೂ ಕೂಡ ಇಂದ್ರನನ್ನು ಸ್ತುತಿಮಾಡುವರು. ಇದೂ ಅಲ್ಲದೆ ಯಜ್ಞಮಾಡುವವರೂ ಕೂಡ ಇಂದ್ರನನ್ನು ಸ್ತುತಿಮಾಡುವರು ಎಂಬ ಅರ್ಥವನ್ನು ವಿವರಿಸಿರುವರು.

ಬ್ರಹ್ಮ—ಬ್ರಹ್ಮ ಶಬ್ದವು ಅಂಧಃ ವಾಜಃ (ನಿ. ೩-೯) ಎಂಬ ಇಪ್ಪತ್ತೆಂಟು ಅನ್ನನಾಮಗಳಲ್ಲಿ ಉಕ್ತವಾಗಿರುವುದರಿಂದ ಅನ್ನವೆಂಬ ಅರ್ಥವನ್ನು ಬೋಧಿಸುವುದು ಇಂದ್ರನಿಗಾಗಿ ಹವಿಸ್ಸಿನ ರೂಪದಿಂದ ಇರುವ ಅನ್ನವನ್ನು ಅರ್ಪಿಸಿರಿ ಎಂದು ಅರ್ಥವು

॥ ವ್ಯಾಕರಣಪ್ರಕ್ರಿಯಾ ॥

**ಅರ್ಚತ**— ಅರ್ಚ ಪೂಜಾಯಾಂ ಧಾತು **ವ್ಯತ್ಯಯೋ ಬಹುಲಂ** ಎಂಬುದರಿಂದ ಲಙ್‌ನಲ್ಲಿ ಝಾದೇಶ ಬರುತ್ತದೆ. **ಬಹುಲಂ ಛಂದಸಿ** ಸೂತ್ರದಿಂದ ಶಪಿಗೆ ಲುಕ್ **ಆತ್ಮನೇಪದೇಷ್ವನತಃ** ಎಂಬುದರಿಂದ ಝುಪ್ರತ್ಯಯಕ್ಕೆ ಅತಾದೇಶ. **ಬಹುಲಂ ಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಪರಿಷ್ಟೋಭತ—**ಸ್ತುಭ ಧಾತುವು ಸ್ತೋತ್ರಾರ್ಥದಲ್ಲಿ ಪ್ರಯುಕ್ತವಾಗಿದೆ. ಹಿಂದಿನಂತೆಯೇ ಲಙ್ ಪ್ರಥಮಪುರುಷ ಬಹುವಚನರೂಪ. **ಉಪಸರ್ಗಾತ್ಸುನೋತಿ—**(ಪಾ. ಸೂ. ೮-೩-೬೫) ಎಂಬುದರಿಂದ ಧಾತುವಿನ ಸಕಾರಕ್ಕೆ ಷತ್ವ ಧಾತುವಿಗೆ ನಿಘಾತಸ್ವರ ಬರುತ್ತದೆ

**ಅನೋನವುಃ**—ಣು ಸ್ತುತೌ ಧಾತು. ಅದಾದಿ. **ಣೋ ನಃ** (ಪಾ. ಸೂ. ೬-೧-೬೫) ಎಂಬುದರಿಂದ ಆದಿಗೆ ನತ್ವ. ಅತಿಶಯಾರ್ಥತೋರುವಾಗ **ಧಾತೋರೇಕಾಚಃ**—ಸೂತ್ರದಿಂದ ಯಙ್. **ಯಙೋಽಚಿಚ** ಎಂಬು ದರಿಂದ ಅನಿಮಿತ್ತವಾಗಿ ಅದಕ್ಕೆ ಲುಕ್. **ಸನ್ಯಙೋಃ** ಸೂತ್ರದಿಂದ ಧಾತುವಿಗೆ ದ್ವಿತ್ವ. **ಗುಣೋಯಙ್‌ಲುಕೋಃ** (ಪಾ.ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝಿ ಪ್ರತ್ಯಯ. **ಚ್ಲಿಲುಙಿ** ಎಂಬುದರಿಂದ ಚ್ಲಿ ಪ್ರತ್ಯಯ. **ಚ್ಲೇಃ ಸಿಚ್** ಸೂತ್ರದಿಂದ ಅದಕ್ಕೆ ಸಿಚಾದೇಶ. **ಸಿಚಭ್ಯಸ್ತವಿಧಿಭ್ಯಶ್ಚ** (ಪಾ. ಸೂ. ೩-೪-೧೦೯) ಎಂಬುದರಿಂದ ಸಿಚ್ಚಿ ನ ಪರದಲ್ಲಿರುವ ಝಿ ಗೆ ಉಸಾದೇಶ. **ಹ್ರಸ್ವಾದಂಗಾತ್**—(ಪಾ. ಸೂ. ೮-೨-೨೭) ಎಂಬುದರಿಂದ ಸಿಚ್ಚಿಗೆ ಲೋಪ. ಉಕಾರಕ್ಕೆ ಗುಣ-ಅವಾದೇಶ ಅಂಗಕ್ಕೆ ಅಡಾಗಮ. ಅನೋನವುಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಉದ್ಯತಂ**—ಉತ್ ಉಪಸರ್ಗ. ಯಮ ಉಪರಮೇ ಧಾತು. ಉತ್ ಪೂರ್ವವಾದ ಈ ಧಾತುವಿಗೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಉದ್ಯಮ್+ತ ಎಂದಿರುವಾಗ ಕಿತ್ತಾದ ಪ್ರತ್ಯಯ ಪರವಾದುದರಿಂದ **ಅನುದಾತ್ತೋ-ಪದೇಶವನತಿ**—(ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕಕ್ಕೆ ಲೋಪ. **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ (ಉತ್) ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತ ರೂಪ. ॥ ೯ ॥



॥ ಸಂಹಿತಾಪಾಠಃ ॥

ಇಂದ್ರೋ ವೃತ್ರಸ್ಯ ತವಿಷೀಂ ನಿರಹನ್ತ್ಸಹಸಾ ಸಹಃ ।
ಮಹತ್ತದಸ್ಯ ಪೌಂಸ್ಯಂ ವೃತ್ರಂ ಜಘನ್ವಾँ ಅಸೃಜದರ್ಚನ್ನನು ಸ್ವರಾಜ್ಯಂ ॥ ೧೦ ॥

॥ ಪದಪಾಠಃ ॥

ಇಂದ್ರಃ । ವೃತ್ರಸ್ಯ । ತವಿಷೀಂ । ನಿಃ । ಅಹನ್ । ಸಹಸಾ । ಸಹಃ ।
ಮಹತ್ । ತತ್ । ಅಸ್ಯ । ಪೌಂಸ್ಯಂ । ವೃತ್ರಂ । ಜಘನ್ವಾನ್ । ಅಸೃಜತ್ ।
ಅರ್ಚನ್ । ಅನು । ಸ್ವಽರಾಜ್ಯಂ ॥ ೧೦ ॥

॥ ಸಾಯಣಭಾಷ್ಯಂ ॥

ಇಂದ್ರೋ ವೃತ್ರಸ್ಯಾಸುರಸ್ಯ ತವಿಷೀಂ ಬಲಂ ಸ್ವಕೀಯೇನ ಬಲೇನ ನಿರಹನ್ । ಹತವಾನ್ । ಸಹಸಾ ಸಹನೇನಾಭಿಭವಸಾಧನೇನಾಯುಧೇನ ಸಹೋಽಭಿಭವಸಾಧನಂ ವೃತ್ರಾಯುಧಂ ನಿರಹನ್ । ಅಸ್ಯೇಂದ್ರಸ್ಯ ತತ್ಪೌಂಸ್ಯಂ ಬಲಂ ಮಹತ್ ಅತಿಪ್ರೌಢಂ । ಯಸ್ಮಾದಯಂ ವೃತ್ರಂ ಜಘನ್ವಾನ್ಹತವಾನ್ ಹತ್ವಾ ಚ ತನ್ನಿರುದ್ಧಾ ಅಪೋಽಸೃಜತ್ ತಸ್ಮಾದ್ವೃತ್ರಾನ್ನಿರಗಮಯತ್ । ಅನ್ಯತ್ಪೂರ್ವವತ್ ॥ ಪೌಂಸ್ಯಂ । ಪುಂಸ ಅಭಿವರ್ಧನೇ । ಚುರಾದಿಃ । ಅಚೋ ಯದಿತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಜಘನ್ವಾನ್ । ಹಂತೇರ್ಲಿಟಃ ಕ್ವಸುಃ । ವಿಭಾಷಾ ಗಮಹನವಿದೇತೀಟೋ ವಿಕಲ್ಪಾದಭಾವಃ । ಅಭ್ಯಾಸಾಚ್ಚೇತ್ಯಭ್ಯಾಸಾದುತ್ತರಸ್ಯ ಹಂತೇರ್ಹಕಾರಸ್ಯ ಘುತ್ವಂ ॥

। ಪ್ರತಿಪದಾರ್ಥ ॥

ಇಂದ್ರಃ—ಇಂದ್ರನು । **ವೃತ್ರಸ್ಯ**—ವೃತ್ರಾಸುರನ । **ತವಿಷೀಂ**—ಬಲವನ್ನು । **ನಿರಹನ್**—(ತನ್ನ ಬಲದಿಂದ) ನಾಶಮಾಡಿದನು । **ಸಹಸಾ**— ಅಭಿಭವಸಾಧನವಾದ (ಶತ್ರುವನ್ನು ಸೋಲಿಸುವ ಆಯುಧದಿಂದ) । **ಸಹಃ**—ಅಭಿಭವಸಾಧನವಾದ (ವೃತ್ರನ ಆಯುಧವನ್ನು) । (**ನಿರಹನ್**—ನಾಶಮಾಡಿದನು) । **ಸ್ವರಾಜ್ಯಂ**—ತನ್ನ ಸ್ವಾಮಿತ್ವವನ್ನು । **ಅನು ಅರ್ಚನ್**— ಪ್ರಕಟಿಸುತ್ತಾ । (**ಯಸ್ಮಾತ್**—ಯಾವ ಬಲದಿಂದ) । **ವೃತ್ರಂ**—ವೃತ್ರಾಸುರನನ್ನು । **ಜಘನ್ವಾನ್**—ವಧಿಸಿದನೋ (ಮತ್ತು ಅವನು ತಡೆದು ನಿಲ್ಲಿಸಿದ್ದ ನೀರನ್ನೂ) । **ಅಸೃಜತ್**—ಬಿಡುಗಡೆ ಮಾಡಿದನೋ । **ಅಸ್ಯ**—ಆ ಇಂದ್ರನ । **ತತ್ ಪೌಂಸ್ಯಂ**—ಅಂತಹ ಬಲವು । **ಮಹತ್**—ಮಹತ್ತರವಾದದ್ದು.

॥ ಭಾವಾರ್ಥ ॥

ಇಂದ್ರನು ಸ್ವಸಾಮರ್ಥ್ಯದಿಂದ ವೃತ್ರನ ಸಾಮರ್ಥ್ಯವನ್ನೂ ತನ್ನ ಆಯುಧದಿಂದ ಅವನ ಆಯುಧವನ್ನೂ ನಾಶಮಾಡಿದನು; ಸ್ವಸ್ವಾಮಿತ್ವವನ್ನು ಪ್ರಕಟಿಸುತ್ತಾ, ವೃತ್ರಾಸುರನನ್ನು ವಧಿಸಿ, (ಅವನಿಂದ ನಿರುದ್ಧವಾದ ಉದಕವನ್ನು ಪ್ರವಹಿಸುವಂತೆ ಮಾಡಿದ ಅವನ ಬಲವೂ ಮಹತ್ತರವಾದದ್ದು.

## English Translation.

Indra overcame by his strength the strength of Vritra, great, in his manhood, wherewith, having slain Vritra, he let loose the waters, manifesting his own sovereignty.

॥ ವಿಶೇಷವಿಷಯಗಳು ॥

**ತವಿಷೀಂ—ಬಲಂ।** ತವಿಷೀ ಶಬ್ದವು ಇಪ್ಪತ್ತೆಂಟು ಬಲನಾಮಗಳಲ್ಲಿ (ನಿ ೩-೯) ಉಕ್ತವಾಗಿರುವುದರಿಂದ ತವಿಷೀಂ ಎಂದರೆ ಬಲವನ್ನು ಎಂದರ್ಥವು. ಇವರಂತೆಯೇ ಪೌಂಸ್ಯಂ ಸಹಃ ಎಂಬ ಶಬ್ದಗಳೂ, ಬಲನಾಮಗಳಲ್ಲಿ ಪಠಿತವಾಗಿವೆ. ಆದರೆ ಬಲವೆಂದು ಅರ್ಥವನ್ನು ಬೋಧಿಸುವ ಈ ಮೂರು ಪದಗಳಲ್ಲಿ ತವಿಷೀ ಎಂಬ ಶಬ್ದವು ವೃತ್ರನ ಸಾಮರ್ಥ್ಯಪರವಾಗಿಯೂ. ಪೌಂಸ್ಯಂ ಎಂಬ ಪದವು ಇಂದ್ರನ ಶಕ್ತಿಪರವಾಗಿಯೂ ಇರುವುದು ಸಹಃ ಎಂಬ ಪದವು ಬಲವನ್ನು ಹೆಚ್ಚಾಗಿರುವ ಹಾಗೆ ತೋರಿಸುವ ಸಾಧನವಾದ ಆಯುಧಪರವಾಗಿ ಉಪಯುಕ್ತವಾಗಿರುವುದು ಇದರಿಂದ **ಸಹಃ–ಅಭಿಭವಸಾಧನಂ ವೃತ್ರಾಯುಧಂ** ಇಂದ್ರನನ್ನು ತಿರಸ್ಕರಿಸುವುದಕ್ಕೆ ಸಾಧನವಾದ ಆಯುಧವೆಂದೂ **ಸಹಸಾ—ಸಹನೇನ ಅಭಿಭವಸಾಧನೇನ ಆಯುಧೇನ** ವೃತ್ರನನ್ನು ಸಂಹರಿಸುವುದಕ್ಕೆ ತಕ್ಕ ಶಕ್ತಿಯುಳ್ಳ ಇಂದ್ರನ ಆಯುಧವೆಂದೂ ಸಾಯಣರು ಅರ್ಥವನ್ನು ಹೇಳಿರುವರು ಸ್ಕಂದಸ್ವಾಮಿಗಳು ತವಿಷೀಂ ಎಂಬ ಪದಕ್ಕೆ ಸೇನೆಯ ರೂಪವಾದ ಬಲವೆಂದೂ ಸಹಃ ಎಂಬ ಶಬ್ದವು ಶರೀರಬಲಬೋಧಕವೆಂದೂ ವ್ಯಾಖ್ಯಾನಮಾಡಿರುವರು

॥ ವ್ಯಾಕರಣಪ್ರಕ್ರಿಯಾ ॥

**ಅಹನ್**—ಹನ ಹಿಂಸಾಗತ್ಯೋಃ ಧಾತು ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚ** ಎಂಬುದರಿಂದ ಇಕಾರಕ್ಕೆ **ಲೋಪ. ಅದಿ ಪ್ರಭೃತಿಭ್ಯಃ ಶಪಃ** ಸೂತ್ರದಿಂದ ಶಪ್ಪಿಗೆ ಲುಕ್. ಹಲಂತವ ಪರದಲ್ಲಿ ಪ್ರತ್ಯಯ ಬಂದುದರಿಂದ **ಹಲ್‌ಙ್ಯಾಭ್ಯೋ**—ಸೂತ್ರದಿಂದ ಅದಕ್ಕೆ **ಲೋಪ** ಅಂಗಕ್ಕೆ ಅಡಾಗಮ. **ಅತಿಙಂತದ** ಪರದಲ್ಲಿ ಬಂದುದರಿಂದ ನಿಘಾತಸ್ವರ ಬರುತ್ತದೆ.

**ಪೌಂಸ್ಯಂ**—ಪುಂಸ ಅಭಿವರ್ಧನೇ ಧಾತು. ಚುರಾದಿ. ಅದಂತವಾದ ಧಾತುವಾದುದರಿಂದ **ಅಚೋಯತ್** (ಪಾ. ಸೂ ೩-೧-೯೭) ಎಂಬುದರಿಂದ ಯತ್ ಪ್ರತ್ಯಯ **ಯತೋಽನಾವಃ** (ಪಾ ಸೂ ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ

**ಜಘನ್ವಾನ್**—ಹನ ಹಿಂಸಾಗತ್ಯೋಃ ಧಾತು. ಇದಕ್ಕೆ **ಲಿಟ್** ವಿವಕ್ಷೆಮಾಡಿದಾಗ **ಕ್ವಸುಶ್ಚ** ಎಂಬುದರಿಂದ ಅದಕ್ಕೆ ಕ್ವಸುರಾದೇಶ. ಇದಕ್ಕೆ **ವಸ್ವೇಕಾ**—ಸೂತ್ರದಿಂದ ಇಡಾಗಮ ಪ್ರಾಪ್ತವಾದರೆ **ವಿಭಾಷಾಗಮಹನವಿದವಿಶಾಂ** ಎಂಬುದರಿಂದ ವಿಕಲ್ಪವಿಧಾನಮಾಡಿರುವುದರಿಂದ ಇಲ್ಲಿ ಬರುವುದಿಲ್ಲ ಪ್ರತ್ಯಯ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ .ಹಲಾದಿಶೇಷ. ಚುತ್ವ. ಜಸ್ತ್ವ. **ಅಭ್ಯಾಸಾಚ್ಚ** (ಪಾ. ಸೂ. ೭-೩-೫೫) ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಧಾತುವಿನ ಹಕಾರಕ್ಕೆ ಕುತ್ವ. ಜಘನ್ವಸ್ ಶಬ್ದವಾಗುತ್ತದೆ ಪ್ರಥಮಾ ಸು ಪರವಾದಾಗ

**ಅತ್ವಸಂತಸ್ಯ**—ಎಂಬುದರಿಂದ ಉಪಧಾದೀರ್ಘ. ಪ್ರತ್ಯಯದಲ್ಲಿ ಉಗಿತ್ತಾದುದರಿಂದ **ಉಗಿದಚಾಂ**—ಸೂತ್ರದಿಂದ ನುಮಾಗಮ. **ಹಲ್‌ಙ್ಯಾಭ್ಯೋ**—ಸೂತ್ರದಿಂದ ಸುಲೋಪ ಸಂಯೋಗಾಂತಲೋಪದಿಂದ ಪ್ರತ್ಯಯ ಸಕಾರಕ್ಕೆ ಲೋಪ. ಇದು ಅಸಿದ್ಧವಾದುದರಿಂದ ನಲೋಪ ಬರುವುದಿಲ್ಲ. ಪ್ರತ್ಯಯಸ್ವರದಿಂದ ಆಕಾರ ಉದಾತ್ತವಾಗುತ್ತದೆ.

**ಅಸೃಜತ್**—ಸೃಜ ವಿಸರ್ಗೇ ಧಾತು. ತುದಾದಿ ಲಙ್ ಪ್ರಥಮಪುರುಷ ಏಕವಚನರೂಪ. ಶ ವಿಕರಣಕ್ಕೆ **ಸಾರ್ವಧಾತುಕಮಪಿತ್** ಎಂಬುದರಿಂದ ಙಿತ್ವವಿರುವುದರಿಂದ ಧಾತುವಿನ ಲಘೂಪಧೆಗೆ ಗುಣಬರುವುದಿಲ್ಲ ತಿಙಂತ ನಿಘಾತಸ್ವರ ಬರುತ್ತದೆ ॥ ೧೦ ॥



॥ ಸಂಹಿತಾಪಾಠಃ ॥

ಇಮೇ ಚಿತ್ತವ ಮನ್ಯವೇ ವೇಪೇತೇ ಭಿಯಸಾ ಮಹೀ ।
ಯದಿಂದ್ರ ವಜ್ರಿನ್ನೋಜಸಾ ವೃತ್ರಂ ಮರುತ್ವಾँ ಅವಧೀರರ್ಚ-
ನ್ನನು ಸ್ವರಾಜ್ಯಂ ॥ ೧೧ ॥

॥ ಪದಪಾಠಃ ॥

ಇಮೇ ಇತಿ । ಚಿತ್ । ತವ । ಮನ್ಯವೇ । ವೇಪೇತೇ ಇತಿ । ಭಿಯಸಾ । ಮಹೀ ಇತಿ ।

ಯತ್ । ಇಂದ್ರ । ವಜ್ರಿನ್ । ಓಜಸಾ । ವೃತ್ರಂ । ಮರುತ್ವಾನ್ । ಅವಧೀಃ । ಅರ್ಚನ್ । ಅನು । ಸ್ವಽರಾಜ್ಯಂ ॥ ೧೧ ॥

॥ ಸಾಯಣಭಾಷ್ಯಂ ॥

**ಮಹೀ ಮಹತ್ಯಾವಿಮೇ ದ್ಯಾವಾಪೃಥಿವ್ಯಾವಪಿ ಹೇ ಇಂದ್ರ ತವ ಮನ್ಯವೇ ತ್ವದೀಯಕೋಪಾದ್ಭಿಯಸಾ ಭೀತ್ಯಾ ವೇಪೇತೇ । ಕಂಪೇತೇ । ಹೇ ವಜ್ರಿನ್ವಜ್ರವನ್ನಿಂದ್ರ ಮರುತ್ವಾನ್ಮರುದ್ಭಿರ್ಯುಕ್ತಸ್ತ್ವಮೋಜಸಾ ಬಲೇನ ಯದ್ಯದಾ ವೃತ್ರಮವಧೀಃ । ತದಾನೀಂ ದ್ಯಾವಾಪೃಥಿವ್ಯಾವಪಿ ಭಯೇನಾಕಂಪಿಷಾತಾಮಿತ್ಯರ್ಥಃ ॥ ವೇಪೇತೇ । ಟುವೇಪೃ ಕಂಪನೇ । ಭಿಯಸಾ । ಞಿಭೀ ಭಯೇ । ಔಣಾದಿಕಃ ಕಸಿಪ್ರತ್ಯಯಃ ॥**

। ಪ್ರತಿಪದಾರ್ಥ ।

**ವಜ್ರಿನ್**—ವಜ್ರಾಯುಧಧಾರಿಯಾದ । **ಇಂದ್ರ**—ಎಲೈ ಇಂದ್ರನೇ । **ಮರುತ್ವಾನ್**—ಮರುದ್ದೇವತೆಗಳಿಂದ ಯುಕ್ತನಾದ (ನೀನು) । **ಸ್ವರಾಜ್ಯಂ**—ಸ್ವಸ್ವಾಮಿತ್ವವನ್ನು । **ಅನು ಅರ್ಚನ್**—ಪ್ರಕಟಿಸುತ್ತಾ । **ಓಜಸಾ**—(ಸ್ವ) ಸಾಮರ್ಥ್ಯದಿಂದ । **ಯತ್**—ಯಾವಾಗ । **ವೃತ್ರಂ**—ವೃತ್ರಾಸುರನನ್ನು । **ಅವಧೀಃ**—ವಧಿಸಿದೆಯೋ । (**ತತ್**—ಆಗ) । **ಮಹೀ**—ದೊಡ್ಡದಾದ । **ಇಮೇ**—ಇವೆರಡು (ಭೂಮ್ಯಾಕಾಶಗಳು) । **ತವ**—ನಿನ್ನ । **ಮನ್ಯವೇ**—ಕೋಪಕ್ಕೆ (ಒಳಗಾಗಿ) । **ಭಿಯಸಾ**—ಭಯದಿಂದ । **ವೇಪೇತೇ**—ನಡುಗುತ್ತವೆ

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಸ್ವಸ್ವಾಮಿತ್ವವನ್ನು ಪ್ರಕಟಿಸುತ್ತಾ, ನೀನು ಮರುದ್ದೇವತೆಗಳಿಂದ ಯುಕ್ತನಾಗಿ ಸ್ವಸಾಮರ್ಥ್ಯದಿಂದ ವೃತ್ರನನ್ನು ವಧಿಸಿದಾಗ, ದೊಡ್ಡದಾದ ಈ ಭೂಮ್ಯಾಕಾಶಗಳೆರಡೂ, ನಿನ್ನ ಕೋಪವನ್ನು ಕಂಡು ಭಯದಿಂದ ನಡುಗಿದುವು.

## English Translation

This heaven and earth trembled, thunderer, at your wrath, when, attended by the Maruts, you slew Vritra by your prowess, manifesting your own sovereignty.

॥ ವಿಶೇಷವಿಷಯಗಳು ॥

**ಓಜಸಾ**—ಓಜಃ, ಪಾಜಃ, ಎಂಬ ಇಪ್ಪತ್ತೆಂಟು ಬಲನಾಮಗಳಲ್ಲಿ (ನಿ. ೩-೯) ಈ ಶಬ್ದವು ಉಕ್ತವಾಗಿರುವುದರಿಂದ ಬಲವೆಂದು ಅರ್ಥವು.

**ಮಹೀ**—**ಸ್ವಧೇ ಪುರಂಧ್ರೀ**, ಮೊದಲಾದ (ನಿ. ೩-೩೦) ಇಪ್ಪತ್ತುನಾಲ್ಕು ದ್ಯಾವಾಪೃಥಿವೀನಾಮಗಳಲ್ಲಿ ಉಕ್ತವಾಗಿರುವುದರಿಂದ ಇಲ್ಲಿ ಭೂಮ್ಯಂತರಿಕ್ಷಗಳೆಂದು ಅರ್ಥವು

**ಭಿಯಸಾ**—"ಞಿಭೀ ಭಯೇ" ಎಂಬ ಧಾತುವಿಗೆ ಉಣಾದಿಪಠಿತವಾದ ಕಸಿಪ್ರತ್ಯಯವು ಬಂದಿರುವುದರಿಂದ ಭಯವೆಂದು ಅರ್ಥವು

**ಮನ್ಯವೇ**—**ಹೇಳಃ, ಹರಃ,** ಮೊದಲಾದ ಹನ್ನೊಂದು ಕ್ರೋಧನಾಮಗಳಲ್ಲಿ (ನಿ ೩-೯) ಮನ್ಯು ಶಬ್ದವು ಉಕ್ತವಾಗಿರುವುದು. ಇಲ್ಲಿ ಇದು ಭಯಪ್ರಯೋಜಕವಾದ ಕಾರಣವಾಚಕವಾಗಿರುವುದರಿಂದ ಚತುರ್ಥೀ ವಿಭಕ್ತ್ಯಂತವಾಗಿದ್ದರೂ ಪಂಚಮೀ ವಿಭಕ್ತಿಯ ಅರ್ಥವನ್ನು ಬೋಧಿಸುವುದು ಕ್ರೋಧದಿಂದ ಎಂದು ಅರ್ಥವು ವೃತ್ರನನ್ನು ಸಂಹರಿಸುವ ಕಾಲದಲ್ಲಿ ಇಂದ್ರನ ಕ್ರೋಧದಿಂದ ದ್ಯಾವಾಪೃಥಿವಿಗಳೂ ಕೂಡ ನಡುಗಿದವು ಎಂದು ವ್ಯಾಖ್ಯಾನ ಮಾಡಿರುವರು

॥ ವ್ಯಾಕರಣಪ್ರಕ್ರಿಯಾ ॥

**ವೇಪೇತೇ**—ಟುವೇಪೃ ಕಂಪನೇ ಧಾತು. ಲಟ್ ಪ್ರಥಮಪುರುಷ ದ್ವಿವಚನದಲ್ಲಿ ಆತಾಮ್ ಪ್ರತ್ಯಯ. **ಟಿತಆತ್ಮನೇ**—ಎಂಬುದರಿಂದ ಟಿಗೆ (ಆಮ್) ಏತ್ವ. **ಆತೋಙಿತಃ** (ಪಾ ಸೂ. ೭-೨-೮೧) ಎಂಬುದರಿಂದ ಆಕಾರಕ್ಕೆ ಇಯಾದೇಶ. **ಲೋಪೋವ್ಯೋರ್ವಲಿ** ಎಂಬುದರಿಂದ ಯಕಾರಕ್ಕೆ ಲೋಪ. **ಕರ್ತರಿ ಶಪ್** ಸೂತ್ರದಿಂದ ಶಪ್ ವಿಕರಣ. ಇಕಾರ ಪರವಾದುದರಿಂದ ಗುಣ ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರ ಉಳಿಯುತ್ತದೆ

**ಭಿಯಸಾ**—ಞಿಭೀ ಭಯೇ ಧಾತು ಜುಹೋತ್ಯಾದಿ. ಇದಕ್ಕೆ **ಔಣಾದಿಕವಾದ** ಕಸಿ ಪ್ರತ್ಯಯ. ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. **ಅಚಿಶ್ನುಧಾತುಭ್ರುವಾಂ**—ಸೂತ್ರದಿಂದ ಇಯಙಾದೇಶ. ಭಿಯಸ್ ಶಬ್ದವಾಗುತ್ತದೆ ಪ್ರತ್ಯಯಸ್ವರದಿಂದ ಯಕಾರೋತ್ತರಾಕಾರವು ಉದಾತ್ತವಾಗುತ್ತದೆ. ತೃತೀಯಾ ಏಕವಚನಾಂತರೂಪ.

**ಅವಧೀಃ**—ಇದೇ ಸೂಕ್ತದ ಏಳನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ

**ವಜ್ರಿನ್**—ವಜ್ರಃ ಅಸ್ಯಾಸ್ತೀತಿ ವಜ್ರೀ ಮತ್ವರ್ಥತೋರುವಾಗ **ಅತಇನಿಠನೌ** ಎಂಬುದರಿಂದ ಇನಿ ಪ್ರತ್ಯಯ ಸಂಬುದ್ಧಿಯಲ್ಲಿ **ನಙಿಸಂಬುದ್ಧ್ಯೋಃ** ಎಂಬುದರಿಂದ ನಲೋಪ ಪ್ರತಿಷೇಧ ಬರುತ್ತದೆ. **ಆಮಂತ್ರಿತಸ್ಯಚ** (ಪಾ ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ. ॥ ೧೧ ॥



॥ ಸಂಹಿತಾಪಾಠಃ ॥

ನ ವೇಪಸಾ ನ ತನ್ಯತೇಂದ್ರಂ ವೃತ್ರೋ ವಿ ಬೀಭಯತ್ ।
ಅಭ್ಯೇನಂ ವಜ್ರ ಆಯಸಃ ಸಹಸ್ರಭೃಷ್ಟಿರಾಯತಾರ್ಚನ್ನನು
ಸ್ವರಾಜ್ಯಂ ॥ ೧೨ ॥

॥ ಪದಪಾಠಃ ॥

ನ । ವೇಪಸಾ । ನ । ತನ್ಯತಾ । ಇಂದ್ರಂ । ವೃತ್ರಃ । ವಿ । ಬೀಭಯತ್ ।
ಅಭಿ । ಏನಂ । ವಜ್ರಃ । ಆಯಸಃ । ಸಹಸ್ರಽಭೃಷ್ಟಿಃ । ಆಯತ । ಅರ್ಚನ್ ।
ಅನು । ಸ್ವಽರಾಜ್ಯಂ ॥ ೧೨ ॥

ಸಾಯಣಭಾಷ್ಯಂ

ವೃತ್ರ ಇಂದ್ರಂ ವೇಪಸಾ ಸ್ವಕೀಯೇನ ವೇಪನೇನ ಕಂಪನೇನ ನ ವಿ ಬೀಭಯತ್ ಭೀತಂ ನಾಕರೋತ್ । ತಥಾ ತನ್ಯತಾ ಸ್ವಕೀಯೇನ ಘೋರೇಣ ಗರ್ಜನಶಬ್ದೇನ ನ ವಿ ಬೀಭಯತ್ । ಅಪಿ ಚ ಇಂದ್ರೇಣ ವಿಸೃಷ್ಟ ಆಯಸೋಽಯೋಮಯಃ ಸಹಸ್ರಭೃಷ್ಟಿರನೇಕಾಭಿರ್ಧಾರಾಭಿರ್ಯುಕ್ತೋ ವಜ್ರ ಏನಂ ವೃತ್ರಮಭ್ಯಾಯತ । ಹಂತುಮಾಭಿಮುಖ್ಯೇನಾಗಚ್ಛತ್ । ಅನ್ಯತ್ಪೂರ್ವವತ್ ॥ ತನ್ಯತಾ । ಸ್ತನ ಶಬ್ದೇ । ಋತನ್ಯಂಜೇತ್ಯಾದಿನಾ ತನೋತೇರ್ವಿಧೀಯಮಾನೋ ಯತುಚ್ ಬಹುಲವಚನಾದಸ್ಮಾದಪಿ ಭವತಿ । ಅತ ಏವ ಸಲೋಪಶ್ಚ । ಸುಪಾಂ ಸುಲುಗಿತಿ ತೃತೀಯಾಯಾ ಡಾದೇಶಃ । ಉದಾತ್ತನಿವೃತ್ತಿಸ್ವರೇಣ ತಸ್ಯೋದಾತ್ತತ್ವಂ । ಬೀಭಯತ್ । ಞಿಭೀ ಭಯೇ । ಹೇತುಮತಿ ಣಿಚ್ । ಅತ್ರ ವೇಪಸ್ತನ್ಯತುಭ್ಯಾಂ ಭಯಂ ನ ಹೇತೋರ್ವೃತ್ರಾದಿತಿ ಹೇತುಭಯಾಭಾವಾದ್ಭಿಭೇತೇರ್ಹೇತುಭಯೇ । ಪಾ. ೬-೧-೫೬ । ಇತ್ಯಾತ್ವಾಭಾವಃ । ಣ್ಯಂತಾಲ್ಲುಙಿ ಚ್ಲೇಶ್ಚಙಾದಿ । ಆಯತ । ಅಯ ಪಯ ಗತೌ । ಭೌವಾದಿರಾತ್ಮನೇಪದೀ ॥

॥ ಪ್ರತಿಪದಾರ್ಥ ॥

**ವೃತ್ರಃ**—ವೃತ್ರಾಸುರನು । **ಇಂದ್ರಂ**—ಇಂದ್ರನನ್ನು । **ವೇಪಸಾ**—(ತನ್ನ) ಕಂಪನದಿಂದ । **ನ ವಿಬೀಭಯತ್**—ಭಯಪಡಿಸಲಾಗಲಿಲ್ಲ । **ತನ್ಯತಾ**—(ತನ್ನ) ಘೋರಗರ್ಜನೆಯಿಂದಲೂ । **ನ (ವಿ ಬೀಭಯತ್)** ಹೆದರಿಸಲಾಗಲಿಲ್ಲ (ಆದರೆ, ಇಂದ್ರನು) । **ಸ್ವರಾಜ್ಯಂ**—ಸ್ವಸ್ವಾಮಿತ್ವವನ್ನು (ಸ್ವಪ್ರಭುತ್ವವನ್ನು) । **ಅನು ಅರ್ಚನ್**—ಪ್ರಕಟಿಸುತ್ತಾ । **ಆಯಸಃ**—ಕಬ್ಬಿಣದಿಂದ ಮಾಡಿದ । **ಸಹಸ್ರಭೃಷ್ಟಿಃ**—ಸಾವಿರಾರು ಅಲುಗುಗಳುಳ್ಳ । **ವಜ್ರಃ**—ಇಂದ್ರನ ವಜ್ರಾಯುಧವು । **ಏನಂ**—ಈ ವೃತ್ರನನ್ನು । **ಅಭಿ ಆಯತ**—ಎದುರಿಸಿತು.

॥ ಭಾವಾರ್ಥ ॥

ವೃತ್ರಾಸುರನ ಕಂಪನವಾಗಲೀ ಘೋರಗರ್ಜನೆಯಾಗಲೀ ಇಂದ್ರನನ್ನು ಭೀತನನ್ನಾಗಿ ಮಾಡಲಿಲ್ಲ. (ಆದರೆ) ಸ್ವಸ್ವಾಮಿತ್ವವನ್ನು ಪ್ರಕಟಿಸುತ್ತಾ, (ಇಂದ್ರನಿಂದ ಪ್ರಯುಕ್ತವಾದ) ಕಬ್ಬಿಣದಿಂದ ಮಾಡಿದ, ಅನೇಕ ಅಲುಗುಗಳುಳ್ಳ ವಜ್ರಾಯುಧವು ವೃತ್ರಾಸುರನನ್ನು ಎದುರಿಸಿಕೊಂಡು ಬಂದಿತು.

## English Translation

Vritra deterred not Indra by his trembling or his clamour , the many-edged iron thunder-bolt fell upon him . (Indra Manifesting his own sovereigntv.

॥ ವಿಶೇಷವಿಷಯಗಳು ॥

**ತನ್ಯತಾ**—**ಸ್ತನ ಶಬ್ದೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಪದದಿಂದ ಶಬ್ದ ಅಥವಾ ಧ್ವನಿ ಎಂದು ಅರ್ಥವಾಗುತ್ತದೆ. ಇಲ್ಲಿ ವೃತ್ರ ಎಂಬ ಪದಕ್ಕೆ ವಿಶೇಷಣ ಮಾಡಿರುವುದರಿಂದ **ಘೋರೇಣ ಗರ್ಜನಶಬ್ದೇನ** ಭಯವನ್ನು ಉಂಟುಮಾಡುವ ಗರ್ಜನಧ್ವನಿಯೆಂದು ಅರ್ಥವಾಗುತ್ತದೆ.

**ಸಹಸ್ರಭೃಷ್ಟಿಃ**—ಸಹಸ್ರವೆಂಬ ಶಬ್ದವು ಸಾವಿರ ಸಂಖ್ಯೆಯೆಂಬ ಅರ್ಥವನ್ನು ಬೋಧಿಸುವುದಾದರೂ ಇಲ್ಲಿ ಅನೇಕ, ಬಹಳ ಎಂಬ ಅರ್ಥವನ್ನು ಬೋಧಿಸುವುದು. ಬಹಳ ಅಲಗುಗಳುಳ್ಳ ವಜ್ರಾಯುಧವೆಂದು ಅರ್ಥವು.

ಸ್ಕಂದಸ್ವಾಮಿಗಳು—**ಅರ್ಚನ್ ಅನು ಸ್ವರಾಜ್ಯಂ** ಎಂಬ ವಾಕ್ಯವನ್ನೂ ವಜ್ರಾಯುಧಕ್ಕೆ ವಿಶೇಷಣವನ್ನಾಗಿ ಹೇಳಿರುವರು. ಇಂದ್ರನು ತನಗೆ ಪ್ರಾಪ್ತವಾಗಿ ಬಂದಿರುವ ಸ್ವರಾಜ್ಯವನ್ನು ಬಹಳ ಮರ್ಯಾದೆಯಿಂದ ಕಾಣುವುದು ವಜ್ರಾಯುಧದ ಮಹಿಮೆಯಿಂದ ಉಂಟಾಗಿರುವ ಕಾರಣ ಸ್ವರಾಜ್ಯಾರ್ಚನವು ವಜ್ರಾಯುಧದಲ್ಲಿ ಔಪಚಾರಿಕವಾಗಿರುವುದು. ಅಥವಾ ಸ್ವರಾಜ್ಯವನ್ನು ಗೌರವದಿಂದ ಪಾಲಿಸುವ ಇಂದ್ರನಿಗೆ ವಜ್ರಾಯುಧವು ಅವನ ಸರ್ವಸ್ವವಾಗಿರುವುದು ಎಂದು ವಿವರಿಸಿರುವರು

॥ ವ್ಯಾಕರಣಪ್ರಕ್ರಿಯಾ ॥

**ವೇಪಸಾ**—ಟುವೇಪೃ ಕಂಪನೇ ಧಾತು **ಸರ್ವಧಾತುಭ್ಯ ಅಸುನ್** (ಉ. ಸೂ ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ. ವೇಪಸ್ ಶಬ್ದವಾಗುತ್ತದೆ. **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನಾಂತರೂಪ

**ತನ್ಯತಾ**—ಸ್ತನ ಶಬ್ದೇ ಧಾತು ಉಣಾದಿಯಲ್ಲಿ ಬಹುಲವಚನವಿರುವುದರಿಂದ **ಋತನ್ಯಞ್ಜಿ**—(ಉ. ಸೂ. ೩-೪೪೨) ಎಂಬುದರಿಂದ ತನುಧಾತುವಿಗೆ ವಿಧಿಸಲ್ಪಡುವ ಯತುಚ್ ಪ್ರತ್ಯಯವು ಬಹುಲಗ್ರಹಣದಿಂದ ಇದಕ್ಕೂ ಬರುತ್ತದೆ ಅದರಿಂದಲೇ ಸಲೋಪವೂ ಬರುತ್ತದೆ. ಆಗ ತನ್ಯತು ಎಂಬು ರೂಪವಾಗುತ್ತದೆ ಉಕಾರಾಂತವಾದ ಈ ಶಬ್ದಕ್ಕೆ ತೃತೀಯಾ ವಿಭಕ್ತಿ ಪರವಾದಾಗ **ಸುಪಾಂಸುಲುಕ್**—(ಪಾ ಸೂ ೭-೧-೩೯) ಎಂಬುದರಿಂದ ಅದಕ್ಕೆ ಡಾದೇಶ. ಡಿತ್ತಾದುದರಿಂದ ಟಿಲೋಪವಾಗುತ್ತದೆ. ಅನುದಾತ್ತವಾದ ವಿಭಕ್ತಿ ಪರವಾದಾಗ ಉದಾತ್ತವಾದ ಪ್ರತ್ಯಯ ಉಕಾರವು ತನ್ನಿಮಿತ್ತವಾಗಿ ಲೋಪವಾಗುವುದರಿಂದ **ಅನುದಾತ್ತಸ್ಯಚ ಯತ್ರೋದಾತ್ತಲೋಪಃ** (ಪಾ ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ

**ಬೀಭಯತ್**—ಞಿಭೀ ಭಯೇ ಧಾತು ಪ್ರಯೋಜಕವ್ಯಾಪಾರವು ತೋರುವುದರಿಂದ **ಹೇತುಮತಿ ಚ** (ಪಾ. ಸೂ ೩-೧-೨೬) ಎಂಬುದರಿಂದ ಣಿಚ್. ಇಲ್ಲಿ ಕಂಪನ ಮತ್ತು ಗರ್ಜನಗಳಿಂದ ಭಯವು ತೋರುವುದೇ ವಿನಾ ವೃತ್ರಾಸುರನಿಂದ (ಪ್ರಯೋಜಕನಿಂದ) ಭಯವು ತೋರದಿರುವುದರಿಂದ **ಬಿಭೇತೇರ್ಹೇತುಭಯೇ** (ಪಾ ಸೂ ೬-೧-೫೬) ಎಂಬುದರಿಂದ ಧಾತುವಿಗೆ ಣಿಚ್ ನಿಮಿತ್ತವಾಗಿ ಆತ್ವ ಬರುವುದಿಲ್ಲ ಣಿಜಂತದಮೇಲೆ ಲುಙ್ ಪ್ರಥಮ ಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ **ಇತಶ್ಚ** ಎಂಬುದರಿಂದ ಇಕಾರಲೋಪ. **ಣಿಶ್ರಿದ್ರುಸ್ರುಭ್ಯಃ**—(ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. **ಚಙಿ** (ಪಾ. ಸೂ. ೬-೧-೧೧) ಎಂಬುದರಿಂದ ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ ಜಸ್ತ್ವ. ಣಿಚ್ ನಿಮಿತ್ತವಾಗಿ ಧಾತುವಿನ ಈಕಾರಕ್ಕೆ ಗುಣ. ಅಯಾದೇಶ **ಣೇರನಿಟಿ** (ಪಾ. ಸೂ. ೬-೪-೫೧) ಎಂಬುದರಿಂದ ಚಙ್ ನಿಮಿತ್ತವಾಗಿ ಣಿಚ್ಚಿಗೆ ಲೋಪ. **ಸನ್ವಲ್ಲಘುನಿ**—(ಪಾ ಸೂ. ೭-೪-೯೩) ಎಂಬುದರಿಂದ ಸನ್ವದ್ಭಾವ ಬರುವುದರಿಂದ **ದೀರ್ಘೋಲಘೋಃ** (ಪಾ. ಸೂ ೭-೪-೯೪) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. **ಬಹುಲಂಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಂಗಕ್ಕೆ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

**ಆಯಸಃ**—ಅಯಸಃ. ವಿಕಾರಃ ಆಯಸಃ **ತಸ್ಯ ವಿಕಾರಃ** (ಪಾ. ಸೂ. ೪-೩-೧೩೪) ಎಂಬುದರಿಂದ ಅಣ್ ಪ್ರತ್ಯಯ. **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ

**ಅಯತ**—ಅಯ ಪಯ ಗತೌ ಧಾತು. ಭ್ವಾದಿ. ಆತ್ಮನೇಪದೀ ಲಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಕರ್ತರಿ ಶಪ್** ಸೂತ್ರದಿಂದ ಶಪ್ ವಿಕರಣ. **ಆಡಜಾದೀನಾಂ**—(ಪಾ. ಸೂ. ೬-೪-೭೨) ಸೂತ್ರದಿಂದ ಆಡಾಗಮ. ತಿಙಂತನಿಘಾತಸ್ವರ ಬರುತ್ತದೆ. ॥ ೧೨ ॥

॥ ಸಂಹಿತಾಪಾಠಃ ॥

ಯದ್ವೃತ್ರಂ ತವ ಚಾಶನಿಂ ವಜ್ರೇಣ ಸಮಯೋಧಯಃ ।
ಅಹಿಮಿಂದ್ರ ಜಿಘಾಂಸತೋ ದಿವಿ ತೇ ಬದ್ಬಧೇ ಶವೋಽರ್ಚ-
ನ್ನನು ಸ್ವರಾಜ್ಯಂ ॥ ೧೩ ॥

॥ ಪದಪಾಠಃ ॥

ಯತ್ । ವೃತ್ರಂ । ತವ । ಚ । ಅಶನಿಂ । ವಜ್ರೇಣ । ಸಂಽಅಯೋಧಯಃ ।
ಅಹಿಂ । ಇಂದ್ರ । ಜಿಘಾಂಸತಃ । ದಿವಿ । ತೇ । ಬದ್ಬಧೇ । ಶವಃ । ಅರ್ಚನ್ ।
ಅನು । ಸ್ವಽರಾಜ್ಯಂ ॥ ೧೩ ॥

ಸಾಯಣಭಾಷ್ಯಂ ॥

ಹೇ ಇಂದ್ರ ಯದ್ಯದಾ ವೃತ್ರಂ ತವ ಹನನಾರ್ಥಂ ತೇನ ಸೃಷ್ಟಾಮಶನಿಂ ಚ ತ್ವಂ ವಜ್ರೇಣ ಸಮಯೋಧಯಃ ಸಮ್ಯಕ್ ಪ್ರಾಹಾರ್ಷೀಃ ತದಾನೀಮಹಿಮಾಗತ್ಯ ಹಂತಾರಂ ವೃತ್ರಂ ಜಿಘಾಂಸತೋ ಹಂತುಮಿಚ್ಛತಸ್ತೇ ತವ ಶವೋ ಬಲಂ ದಿವಿ ಬದ್ಬಧೇ । ಬದ್ಧಮನುಸ್ಯೂತಂ ವ್ಯಾಪ್ತಮಾಸೀತ್ । ಶಿಷ್ಟಂ ಪೂರ್ವವತ್ ॥ ಜಿಘಾಂಸತಃ । ಹಂತೇರಿಚ್ಛಾರ್ಥೇ ಸನ್ಯಜ್ಝನಗಮಾಂ ಸನಿ । ಪಾ. ೬-೪-೧೬ । ಇತ್ಯುಪಧಾದೀರ್ಘತ್ವಂ । ಬದ್ಬಧೇ । ಬಧ ಬಂಧನೇ । ಕರ್ಮಣಿ ಲಿಟಿ ವ್ಯತ್ಯಯೇನ ಹಲಾದಿಶೇಷಾಭಾವಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । **ಯತ್**—ಯಾವಾಗ । **ವೃತ್ರಂ**—ವೃತ್ರಾಸುರನನ್ನು । **ತವ**—ನಿನ್ನ (ವಧೆಗಾಗಿ ಅವನಿಂದ ವಿಸೃಷ್ಟವಾದ) । **ಅಶನಿಂ ಚ**—ಆಯುಧವನ್ನು । **ವಜ್ರೇಣ** -(ನಿನ್ನ) ವಜ್ರಾಯುಧದಿಂದ । **ಸಮಯೋಧಯಃ**—ಪ್ರಹರಿಸಿದೆಯೋ । (**ತತ್**—ಆಗ) । **ಅಹಿಂ**—ಹನನಶೀಲನಾದ (ವೃತ್ರನನ್ನು) **ಜಿಘಾಂಸತಃ**—ವಧಿಸಲು ಇಚ್ಛಿಸಿದ । **ತೇ**—ನಿನ್ನ । **ಶವಃ**—ಬಲವು । **ಸ್ವರಾಜ್ಯಂ**—ಸ್ವಸ್ವಾಮಿತ್ವವನ್ನು । **ಅನು ಅರ್ಚನ್**—ಪ್ರಕಟಿಸುತ್ತಾ । **ದಿವಿ**—ಆಕಾಶದಲ್ಲಿ । **ಬದ್ಬಧೇ**—ವ್ಯಾಪ್ತವಾಗಿತ್ತು (ಬೆಳಗುತ್ತಿತ್ತು).

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ (ವಧೆಗಾಗಿ ವೃತ್ರನಿಂದ ವಿಸೃಷ್ಟವಾದ) ಆಯುಧವನ್ನೂ. ವೃತ್ರನನ್ನೂ ವಜ್ರಾಯುಧದಿಂದ ಪ್ರಹರಿಸಿ, ಸ್ವಸ್ವಾಮಿತ್ವವನ್ನು ಪ್ರಕಟಿಸುತ್ತಾ, ಹನನಶೀಲನಾದ ವೃತ್ರನನ್ನು ವಧಿಸಲು ಇಚ್ಛಿಸಿದ ನಿನ್ನ ಬಲವು ಆಕಾಶವನ್ನೆಲ್ಲಾ ವ್ಯಾಪಿಸಿತ್ತು. (ಆಕಾಶದಲ್ಲಿ ಬೆಳಗುತ್ತಿತ್ತು)

## English Translation

When you (Indra) encounterred with your bolt Vritra, and the thunderbolt (which he hurled), then, Indra, your strength determined to slay Ahi was displayed in the heavens, manifesting your own sovereignty.

॥ ವಿಶೇಷವಿಷಯಗಳು ॥

**ಬದ್ಬಧೇ**—ಬದ ಬಂಧನೇ । ಬಧ ಧಾತುವು ಬಂಧನವೆಂಬ ಅರ್ಥವನ್ನು ಬೋಧಿಸುವುದು ಕರ್ಮಾರ್ಥದಲ್ಲಿ ಪ್ರಯುಕ್ತವಾಗಿರುವುದರಿಂದ **ಬದ್ಧಂ** ಕಟ್ಟಲ್ಪಟ್ಟಿತು ಎಂದು ಅರ್ಥವಾಗುವುದು **ದಿವಿ ಬದ್ಬಧೇ** ಸ್ವರ್ಗದಲ್ಲಿ ಕಟ್ಟಲ್ಪಟ್ಟಿತು ಎಂದರೆ ಸ್ವರ್ಗದಲ್ಲಿ **ಅನು ಸ್ಯೂತಂ ಬದ್ಧಂ ವ್ಯಾಪ್ತಂ** ವ್ಯಾಪಿಸಿರುವುದು ಎಂದು ಅರ್ಥವು ಆಕಾಶದಲ್ಲೆಲ್ಲಾ ವ್ಯಾಪಿಸಿ ಬೆಳಗುತ್ತಿತ್ತು ಎಂದರ್ಥವು

**ಅಹಿಂ**—ಅಹಿ ಶಬ್ದವು ನೂರೊಂದು ಉದಕನಾಮಗಳಲ್ಲಿ (ನಿ. ೨-೨೪) ಉಕ್ತವಾಗಿರುವಂತೆ ಮೂವತ್ತು ಮೇಘನಾಮಗಳಲ್ಲಿಯೂ (೨-೨೧) ಉಕ್ತವಾಗಿರುವುದು. ಸಾಯಣರು **ಆಗತ್ಯ ಹಂತಾರಂ** ತಾನಾಗಿ ಎದುರಿಗೆ ನುಗ್ಗಿ ಬಂದು ಹೊಡೆಯುವವನು ಎಂದು ಅರ್ಥವನ್ನು ಹೇಳಿರುವರು ಅಹಿ ಶಬ್ದಕ್ಕೆ ಮೇಘ ಮತ್ತು ವೃತ್ರ ಎಂಬ ಅರ್ಥಗಳೆಂದು ಸ್ಕಂದಸ್ವಾಮಿಗಳು ವಿವರಿಸಿರುವರು.

**ವೃತ್ರಂ ತವ ಚಾಶನಿಂ ವಜ್ರೇಣ**—ಇಲ್ಲಿ ಅಶನಿಂ ಎಂದರೆ ವಜ್ರಾಯುಧವೆಂದರ್ಥವಾದರೂ ಇಲ್ಲಿ ಸಾಮಾನ್ಯವಾದ ಆಯುಧವೆಂಬ ಅರ್ಥವನ್ನು ಹೇಳಬೇಕು ಇಂದ್ರನು ತನ್ನ ವಜ್ರಾಯುಧದಿಂದ ವೃತ್ರನನ್ನೂ ಅವನ ಆಯುಧವನ್ನೂ ಚೆನ್ನಾಗಿ ಪ್ರಹರಿಸಿದನೆಂದಭಿಪ್ರಾಯವು

॥ ವ್ಯಾಕರಣಪ್ರಕ್ರಿಯಾ ॥

**ಅಯೋಧಯಃ**—ಯುಧ ಪ್ರಹಾರೇ ಧಾತು ಣಿಜಂತವಾಲೆ ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. **ಇತಶ್ಚ** ಎಂಬುದರಿಂದ ಇಕಾರಲೋಪ ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚ್ಚಿಗೆ ಗುಣ ಆಯಾದೇಶ ಣಿಚ್ ನಿಮಿತ್ತವಾಗ ಧಾತ ವಿನ ಲಘೂಪಧೆಗೆ ಗುಣ. ಅಂಗಕ್ಕೆ ಅಡಾಗಮ ಅಯೋಧಯಃ ಎಂದು ರೂಪವಾಗುತ್ತದೆ ಯದ್ಯೋಗವಿರುವುದರಿಂದ **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ ಅಡಾಗಮ ಉದಾತ್ತವಾದುದರಿಂದ ಅದ್ಯುದಾತ್ತವಾಗುತ್ತದೆ.

**ಜಿಘಾಂಸತಃ**—ಹನ ಹಿಂಸಾಗತ್ಯೋಃ ಧಾತು. ಇದಕ್ಕೆ ಇಚ್ಛಾರ್ಥತೋರುವಾಗ **ಧಾತೋಃ ಕರ್ಮಣಃ ಸಮಾ**—(ಪಾ. ಸೂ. ೩-೧-೭) ಎಂಬುದರಿಂದ ಸನ್. **ಸನ್ಯಙೋಃ** (ಪಾ. ಸೂ ೬-೧-೯) ಎಂಬುದರಿಂದ ಸನ್ನಂತದ ಪ್ರಥಮೈಕಾಚಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಚುತ್ವ. **ಸನ್ಯತಃ** (ಪಾ. ಸೂ. ೭-೪-೭೯) ಸೂತ್ರದಿಂದ ಇತ್ವ. **ಅಜ್ಝನಗಮಾಂ ಸನಿ** (ಪಾ. ಸೂ. ೬-೪-೧೬) ಎಂಬುದರಿಂದ ಧಾತುವಿನ ಉಪಧೆಗೆ ದೀರ್ಘ. **ಅಭ್ಯಾಸಾಚ್ಚ** (ಪಾ. ಸೂ. ೭-೪-೭೯) ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಧಾತುವಿನ ಹಕಾರಕ್ಕೆ ಕುತ್ವ. **ನಶ್ಚಾಪದಾಂತಸ್ಯ**—ಸೂತ್ರದಿಂದ ನಕಾರಕ್ಕೆ ಅನುಸ್ವಾರ **ಸನಾದ್ಯಂತಾ ಧಾತವಃ** (ಪಾ. ಸೂ. ೩-೧-೩೨) ಎಂಬುದರಿಂದ ಜಿಘಾಂಸ ಎಂಬ ಸನ್ನಂತಕ್ಕೆ ಧಾತುಸಂಜ್ಞಾ ಬರುತ್ತದೆ ಇದಕ್ಕೆ ಲಡರ್ಥದಲ್ಲಿ ಶಪ್ ಪ್ರತ್ಯಯ **ಅತೋಗುಣೇ** ಸೂತ್ರದಿಂದ ಪರರೂಪ. ಷಷ್ಠೀ ಏಕವಚನಾಂತರೂಪ. **ಅಭ್ಯಸ್ತಾನಾಮಾದಿಃ** (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದಿವಿ**—ದಿವ್ ಶಬ್ದ ಸಪ್ತಮೀ ಏಕವಚನಾಂತರೂಪ. **ಊಡಿದಂಪದಾದಿ**—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಬಬ್ಧೇ**—ಬಧ ಬಂಧನೇ ಧಾತು. ಕರ್ಮಣಿಯಲ್ಲಿ **ಲಿಟ್** ಪ್ರಥಮಪುರುಷ ಏಕವಚನದಲ್ಲಿ **ಲಿಟಸ್ತಝಯೋರೇಶಿರೇಚ್** (ಪಾ ಸೂ. ೩-೩-೭೧) ಎಂಬುದರಿಂದ ಏಶಾದೇಶ. ಧಾತುವಿಗೆ ದ್ವಿತ್ವ. **ವ್ಯತ್ಯಯೋ ಬಹುಲಂ** ಎಂಬುದರಿಂದ **ಹಲಾದಿಃಶೇಷಃ** ಎಂಬ ಸೂತ್ರವು ಪ್ರವರ್ತಿಸುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ॥ ೧೩ ॥



॥ ಸಂಹಿತಾಪಾಠಃ ॥

ಅ॒ಭಿ॒ಷ್ಟ॒ನೇ ತೇ॑ ಅದ್ರಿ॒ವೋ ಯತ್ಸ್ಥಾ ಜಗ॑ಚ್ಚ ರೇಜತೇ ।
ತ್ವಷ್ಟಾ॑ ಚಿ॒ತ್ತವ॑ ಮ॒ನ್ಯವ॒ ಇಂದ್ರ॑ ವೇವಿ॒ಜ್ಯತೇ॑ ಭಿ॒ಯಾರ್ಚ॒ನ್ನನು॑
ಸ್ವ॑ರಾಜ್ಯಂ ॥ ೧೪ ॥

॥ ಪದಪಾಠಃ ॥

ಅಭಿऽಸ್ತನೇ । ತೇ । ಅದ್ರಿऽವಃ । ಯತ್ । ಸ್ಥಾಃ । ಜಗತ್ । ಚ । ರೇಜತೇ ।
ತ್ವಷ್ಟಾ । ಚಿತ್ । ತವ । ಮನ್ಯವೇ । ಇಂದ್ರ । ವೇವಿಜ್ಯತೇ । ಭಿಯಾ । ಅರ್ಚನ್ ।
ಅನು । ಸ್ವऽರಾಜ್ಯಂ ॥ ೧೪ ॥

ಸಾಯಣಭಾಷ್ಯಂ ।

ಹೇ ಅದ್ರಿವೋ ವಜ್ರವನ್ನಿಂದ್ರ ತೇ ತವಾಭಿಷ್ಟನೇ ಸಿಂಹನಾದೇ ಸತಿ ಸ್ಥಾಃ ಸ್ಥಾವರಂ ಜಗಜ್ಜಂಗಮಂ ಚ ಯದಸ್ತಿ ತದುಭಯಂ ರೇಜತೇ । ಕಂಪತೇ । ತ್ವಷ್ಟಾ ಚಿತ್ ವಜ್ರನಿರ್ಮಾತಾ ತ್ವಷ್ಟಾ ಚ ತವ ಮನ್ಯವೇ ತ್ವದೀಯಾಯ ಕೋಪಾಯ ಭಿಯಾ ಭೀತ್ಯಾ ವೇವಿಜ್ಯತೇ । ಭೃಶಂ ಕಂಪತೇ । ಅನ್ಯತ್ಸಮಾನಂ ॥ ಸ್ಥಾಃ । ತಿಷ್ಠತೇಃ ಕ್ವಿಪ್ಚೇತಿ ಕ್ವಿಪ್ । ವೇವಿಜ್ಯತೇ । ಓವಿಜೀ ಭಯಚಲನಯೋಃ । ಅಸ್ಮಾತ್ಕ್ರಿಯಾಸಮಭಿಹಾರೇ ಯಙ್ । ಸನ್ಯಙೋರಿತಿ ದ್ವಿರ್ಭಾವಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಯಙ ಏವ ಸ್ವರಃ ಶಿಷ್ಯತೇ । ಇಂದ್ರೇತ್ಯಸ್ಯ ಪಾದಾದೌ ವರ್ತಮಾನಸ್ಯಾಮಂತ್ರಿತಂ ಪೂರ್ವಮವಿದ್ಯಮಾನವದಿತ್ಯವಿದ್ಯಮಾನವತ್ತ್ವೇ ಸತ್ಯಸ್ಯ ಪಾದಾದಿತ್ವಾದಪಾದಾದಾವಿತಿ ಪರ್ಯುದಾಸಾನ್ನಿಘಾತಾಭಾವಃ ॥

। ಪ್ರತಿಪದಾರ್ಥ ।

ಅದ್ರಿವಃ—ವಜ್ರಾಯುಧಧಾರಿಯಾದ । ಇಂದ್ರ—ಎಲೈ ಇಂದ್ರನೇ । ತೇ – ನಿನ್ನ । ಅಭಿಷ್ಟನೇ ಗರ್ಜನ ಶಬ್ದಕ್ಕೆ । ಸ್ಥಾಃ—ಸ್ಥಾವರವಾದ (ಮತ್ತು) । ಜಗತ್ ಚ—ಜಂಗಮವಾದ । ಯತ್—ಯಾವುವು (ಇವೆಯೋ ಅವೆಲ್ಲವೂ) । ರೇಜತೇ—ನಡುಗುತ್ತವೆ । ಸ್ವರಾಜ್ಯಂ- ಸ್ವಸ್ವಾಮಿತ್ವವನ್ನು । ಅನು ಅರ್ಚ—ಪ್ರಕಟಿಸುತ್ತಾ । ತ್ವಷ್ಟಾ ಚಿತ್—(ವಜ್ರಾಯುಧ ನಿರ್ಮಾತೃವಾದ) ತ್ವಷ್ಟೃವೂ ಕೂಡ । ತವ—ನಿನ್ನ । ಮನ್ಯವೇ—ಕೋಪಕ್ಕೆ । ಭಿಯಾ—ಭಯದಿಂದ । ವೇವಿಜ್ಯತೇ—ಅತಿಶಯವಾಗಿ ಕಂಪಿಸುತ್ತಾನೆ

। ಭಾವಾರ್ಥ ।

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ನೀನು ಸ್ವಸ್ವಾಮಿತ್ವವನ್ನು ಪ್ರಕಟಿಸುತ್ತಾ, ಸಿಂಹನಾದ ಮಾಡಲು, ಸ್ಥಾವರಜಂಗಮಾತ್ಮಕವಾದ ಪ್ರಪಂಚವೆಲ್ಲವೂ ನಡುಗಿತು ವಜ್ರಾಯುಧವನ್ನು ನಿರ್ಮಿಸಿದ ತ್ವಷ್ಟೃವೂ ಕೂಡ ನಿನ್ನ ಕೋಪಕ್ಕೆ ಹೆದರಿ ಹೆಚ್ಚಾಗಿ ನಡುಗುತ್ತಾನೆ

## English Translation.

At your shout, wielder of the thunderbolt, all things, moveable or immoveable, trembled; even Twashtri shook with fear, Indra, at your wrath, manifesting your own sovereignty.

॥ ವಿಶೇಷವಿಷಯಗಳು ॥

**ಅದ್ರಿವಃ—ಅದ್ರಿವಿಕಾರತ್ವಾತ್ ।** ಅದ್ರಿಃ ಅದ್ರಿಯ ವಿಕಾರವಾಗಿರುವುದರಿಂದ ವಜ್ರಾಯುಧವೂ ಅದ್ರಿ ಎಂಬ ಹೆಸರನ್ನು ಹೊಂದಿರುವುದು. ಅದ್ರಿಯನ್ನು ಹೊಂದಿರುವವನು ಅದ್ರಿವನ್ ವಜ್ರಾಯುಧವುಳ್ಳವನು ಇಂದ್ರನು ಎಂದು ಅರ್ಥವು.

**ಸ್ಥಾಃ—ಷ್ಠಾ ಗತಿನಿವೃತ್ತೌ** ಎಂಬ ಧಾತುವಿನಿಂದ **ಸ್ಥಾಃ** ಎಂಬ ರೂಪವಾಗುತ್ತದೆ. ಸ್ಥಿರವಾಗಿರುವ ಚಲಿಸದಿರುವ ವಸ್ತುಗಳೆಂದು ಅರ್ಥವು

**ರೇಜತೇ—ಕಂಪತೇ** ಭಯದಿಂದ ನಡುಗುತ್ತಾನೆ **ಭ್ಯಸತೇ, ರೇಜತೇ ಇತಿ ಭಯವೇಪನಯೋಃ ಧಾತುಃ ಭ್ಯಸತೇ ಇತಿ ರೇಜತೇ ಇತಿ ನೈರುಕ್ತೋ ಧಾತುಃ ಉಭಾವಪ್ಯುಭಯೋರರ್ಥಯೋಃ**—ಭ್ಯಸತೇ, ರೇಜತೇ ಎಂಬ ಎರಡು ಧಾತುಗಳೂ ಭಯ ಮತ್ತು ನಡಗುವುದು ಎಂಬ ಎರಡು ವಿಧವಾದ ಅರ್ಥಗಳಲ್ಲಿಯೂ ಉಪಯೋಗಿಸಲ್ಪಡುವವು ಎಂದು ನಿರುಕ್ತಕಾರರು ಹೇಳುವರು.

॥ ವ್ಯಾಕರಣಪ್ರಕ್ರಿಯಾ ॥

**ಅದ್ರಿವಃ—**ಇದೇ ಸೂಕ್ತದ ಏಳನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ

**ಸ್ಥಾಃ—**ಷ್ಠಾ ಗತಿನಿವೃತ್ತೌ ಧಾತು. **ಧಾತ್ವಾದೇಃ ಷಃ ಸಃ** ಎಂಬುದರಿಂದ ಆದಿಗೆ ಸತ್ವ. **ಕ್ವಿಪ್ ಚ** (ಪಾ. ಸೂ. ೩-೨-೭೬) ಎಂಬುದರಿಂದ ಇದಕ್ಕೆ ಕ್ವಿಪ್. **ಕೃತ್ತದ್ಧಿತಸಮಾಸಾಶ್ಚ** ಎಂಬುದರಿಂದ ಪ್ರಾತಿಪದಿಕಸಂಜ್ಞಾ ಪ್ರಥಮಾ ಏಕವಚನಾಂತರೂಪ ಧಾತುಸ್ವರದಿಂದ ಉದಾತ್ತವಾಗುತ್ತದೆ

**ರೇಜತೇ**—ರೇಜೃ ಕಂಪನೇ ಧಾತು. ಲಟ್ ಪ್ರಥಮಪುರುಷ ಏಕವಚನರೂಪ ತಿಙಂತನಿಘಾತಸ್ವರ ಬರುತ್ತದೆ.

**ವೇವಿಜ್ಯತೇ—**ಓವಿಜೀ ಭಯಚಲನಯೋಃ ಧಾತು. ಇದಕ್ಕೆ ಭೃಶಾರ್ಥತೋರುವಾಗ **ಧಾತೋರೇಕಾಚ**—(ಪಾ. ಸೂ. ೩-೧-೨೨) ಎಂಬುದರಿಂದ ಯಙ್. **ಸನ್ಯಙೋಃ** (ಪಾ. ಸೂ ೬-೧-೯) ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಗುಣೋಯಙ್ ಲುಕೋಃ** (ಪಾ ಸೂ ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ. **ಸನಾದ್ಯಂತಾಧಾತವಃ** ಸೂತ್ರದಿಂದ ವೇವಿಜ್ಯ ಎಂಬ ಯಙಂತಕ್ಕೆ ಧಾತುಸಂಜ್ಞಾ ಬರುತ್ತದೆ ಇದಕ್ಕೆ ವರ್ತಮಾನಾರ್ಥದಲ್ಲಿ ಲಟ್ ಪ್ರಥಮಪುರುಷ ಏಕವಚನದಲ್ಲಿ ತಪ್ರತ್ಯಯ **ಟಿತಆತ್ಮನೇಪದಾನಾಂ—**

ಸೂತ್ರದಿಂದ ಟಿಗೆ ಏತ್ವ. ವೇವಿಜ್ಯತೇ ಎಂದು ರೂಪವಾಗುತ್ತದೆ ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು (ತೇ) **ತಾಸ್ಯನುದಾತ್ತೇತ್**—(ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುವುದರಿಂದ ಯಙಿನ ಸ್ವರವೇ ಉಳಿಯುತ್ತದೆ ಇದರ ಪೂರ್ವದಲ್ಲಿ ಇಂದ್ರ ಎಂಬ ಪದವು ಪಾದಾದಿಯಲ್ಲಿದೆ. ಇದಕ್ಕೆ ಆಮಂತ್ರಿತ ಸಂಜ್ಞೆ ಇರುವುದರಿಂದ **ಆಮಂತ್ರಿತಂ ಪೂರ್ವಮವಿಧ್ಯಮಾನವತ್** (ಪಾ ಸೂ. ೮-೧-೭೨) ಎಂಬುದರಿಂದ ಅದಕ್ಕೆ ಅವಿದ್ಯಮಾನವದ್ಭಾವ (ಇಲ್ಲದಿರುವಿಕೆ) ಇರುವುದರಿಂದ ವೇವಿಜ್ಯತೇ ಎಂಬುದೇ ಪಾದಾದಿಯಲ್ಲಿ ಬಂದಂತಾದುದರಿಂದ **ಅಪಾದಾದೌ** ಎಂದು ಪರ್ಯುದಾಸಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಭಿಯೋಂ**—ಞಿಭೀ ಭಯೇ ಧಾತು ಇದಕ್ಕೆ ಕ್ವಿಪ್ ಪ್ರತ್ಯಯ ತೃತೀಯಾ ಟಾ ಪರವಾದಾಗ **ಅಚಿಶ್ನುಧಾತುಭ್ರುವಾಂ**—ಸೂತ್ರದಿಂದ ಇಯಙಾದೇಶ. **ಸಾವೇಕಾಚಸ್ತೃತೀಯಾದಿಃ**—(ಪಾ. ಸೂ. ೬-೧-೧೬೮) ಎಂಬುದರಿಂದ ಏಕಾಚ್ಚಾದುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ ‖ ೧೪ ‖

॥ ಸಂಹಿತಾಪಾಠಃ ।

ನಹಿ ನು ಯಾದಧೀಮಸೀಂದ್ರಂ ಕೋ ವೀರ್ಯಾ ಪರಃ ।
ತಸ್ಮಿನ್ನೃಮ್ಣಮುತ ಕ್ರತುಂ ದೇವಾ ಓಜಾಂಸಿ ಸಂ ದಧುರರ್ಚನ್ನನು ಸ್ವರಾಜ್ಯಂ ‖ ೧೫ ‖

॥ ಪದಪಾಠಃ ।

ನಹಿ । ನು । ಯಾತ್ । ಅಧಿಽಇಮಸಿ । ಇಂದ್ರಂ । ಕಃ । ವೀರ್ಯಾ । ಪರಃ ।
ತಸ್ಮಿನ್ । ನೃಮ್ಣಂ । ಉತ । ಕ್ರತುಂ । ದೇವಾಃ । ಓಜಾಂಸಿ । ಸಂ । ದಧುಃ ।
ಅರ್ಚನ್ । ಅನು । ಸ್ವಽರಾಜ್ಯಂ ‖ ೧೫ ‖

॥ ಸಾಯಣಭಾಷ್ಯಂ ॥

**ಯಾತ್ ಯಾಂತಂ ಸರ್ವತ್ರ ವ್ಯಾಪ್ಯ ವರ್ತಮಾನಮಿಂದ್ರಂ ನಹಿ ನ್ವಧೀಮಸಿ । ವಯಂ ನ ಹ್ಯವಗಚ್ಛಾಮಃ । ಯತೋ ವಯಮಲ್ಪಾಃ । ಪರ ಇತ್ಯೇತತ್ಸಕಾರಾಂತಮವ್ಯಯಂ ವ್ಯದೂರ್ಯಮಾಚಷ್ಟೇ । ಪರೋ ದಿವಾ ಪರ ಏನಾ । ಋಗ್ವೇ. ೧೦-೮೨-೫ । ಇತಿ ಯಥಾ । ಪರಃ ಪರಸ್ತಾದತಿದೂರೇ ಮನುಷ್ಯೈರನವಗಾಹ್ಯೇ ಸ್ಥಾನೇ ವೀರ್ಯಾ ವೀರ್ಯೇಣ ಸಾಮರ್ಥ್ಯೇನ ವರ್ತಮಾನಮಿಂದ್ರಂ ಕೋ ಮನುಷ್ಯೋ ಜಾನೀಯಾತ್ । ನ ಕೋಽಪೀತ್ಯರ್ಥಃ । ಕಸ್ಮಾದಿತಿ ಚೇತ್ ಅತ್ರಾಹ । ತಸ್ಮಿನ್ನಿತಿ । ಯಸ್ಮಾತ್ತಸ್ಮಿನ್ನಿಂದ್ರೇ ದೇವಾ ನೃಮ್ಣಂ ಧನಂ ಉತಾಪಿ ಚ ಕ್ರತುಂ ವೀರ್ಯಕರ್ಮೌಜಾಂಸಿ ಬಲಾನಿ ಚ ಸಂ ದಧುಃ ಸ್ಥಾಪಯಾಂ ಚಕ್ರುಃ । ತಸ್ಮಾದಿತ್ಯರ್ಥಃ ॥ ಯಾತ್ । ಯಾ ಪ್ರಾಪಣೇ । ಅಸ್ಮಾಲ್ಲಟಃ ಶತೃ । ಸುಪಾಂ ಸುಲುಗಿತಿ ದ್ವಿತೀಯಾಯಾ ಲುಕ್ । ಅಧೀಮಸಿ । ಇಣ್ ಗತೌ । ಇದಂತೋ ಮಸಿಃ । ವೀರ್ಯಾ । ಸುಪಾಂ ಸುಲುಗಿತಿ ತೃತೀಯಾಯಾ ಆಕಾರಃ ॥**

॥ ಪ್ರತಿಪದಾರ್ಥ ॥

**ಯಾತ್** – ಸರ್ವತ್ರವ್ಯಾಪ್ತನಾದ (ಇಂದ್ರನನ್ನು) । **ನಹಿ ನು ಅಧೀಮಸಿ**—(ನಾವು ಅಲ್ಪಜ್ಞರಾದ್ದರಿಂದ) ತಿಳಿಯಲು ಸಮರ್ಥರಲ್ಲ । **ಸ್ವರಾಜ್ಯಂ**—ಸ್ವಸ್ವಾಮಿತ್ವವನ್ನು । **ಅನು ಅರ್ಚನ್**—ಪ್ರಕಟಿಸುತ್ತಾ ಇರುವ । **ತಸ್ಮಿನ್**—ಅವನಲ್ಲಿ (ಇಂದ್ರನಲ್ಲಿ) । **ದೇವಾಃ**—(ಸಮಸ್ತ) ದೇವತೆಗಳೂ । **ನೃಮ್ಣಂ**—ಧನವನ್ನೂ । **ಉತ**—ಮತ್ತು । **ಕ್ರತುಂ**—ವೀರ್ಯಕರ್ಮವನ್ನೂ । **ಓಜಾಂಸಿ**—ಬಲವನ್ನೂ । **ಸಂ ದಧುಃ**—ಸ್ಥಾಪಿಸಿದ್ದಾರೆ । **(ತತ್**—ಆದುದರಿಂದ) । **ಪರಃ**—(ಅನವಗಾಹ್ಯವಾದ) ಅತಿ ದೂರದಲ್ಲಿರುವ । **ವೀರ್ಯಾ**—ಸಾಮರ್ಥ್ಯದಿಂದ ಯುಕ್ತನಾದ । **ಇಂದ್ರಂ**—ಇಂದ್ರನನ್ನು । **ಕಃ**—ಯಾವನು (ಮನುಷ್ಯನು) ತಾನೇ । **(ಜಾನೀಯತ್**—ತಿಳಿದಾನು?)

ಭಾವಾರ್ಥ ।

(ಸರ್ವತ್ರ) ವ್ಯಾಪ್ತನಾದ ಇಂದ್ರನನ್ನು ನಾವು ತಿಳಿಯಲಾರೆವು ಯಾವನಲ್ಲಿ (ಎಲ್ಲಾ) ದೇವತೆಗಳೂ (ತಮ್ಮ) ಧನ, ಕರ್ಮ ಮತ್ತು ಬಲಗಳನ್ನು ಸ್ಥಾಪಿಸಿದ್ದಾರೋ ಅಂತಹ, ಸ್ವಸ್ವಾಮಿತ್ವವನ್ನು ಪ್ರಕಟಿಸುತ್ತಾ, (ಮನುಷ್ಯರಿಗೆ ಅನವಗಾಹ್ಯವಾದ) ಅತಿ ದೂರ ಪ್ರದೇಶದಲ್ಲಿ ಸ್ವಸಾಮರ್ಥ್ಯದಿಂದ (ಇರುವ) ಇಂದ್ರನನ್ನು ಯಾವ ಮನುಷ್ಯನು (ತಾನೇ ತಿಳಿದಾನು?)

## English Translation

We know not of a certainty the all-pervading Indra: who (does know him, abiding) afar off in his strength? for in him have the Gods concentrated riches, and worship, and power, manifesting his own severeignty.

|| ವಿಶೇಷವಿಷಯಗಳು ||

**ಅತ್ರೇದಮುಕ್ತಂ ಭವತಿ—ಯತ್ ಕಿಮಪಿ ವಯಮಿಂದ್ರವಿಷಯೇ ಜಾನೀಮಸ್ತಸ್ಯಾತ್ಯಲ್ಪತ್ವಾತ್ ವಯಮಿಂದ್ರಂ ನೈವ ಜಾನೀಮ ಇತಿ ವಕ್ತವ್ಯಂ। ಕೋ ವಾ ಇಂದ್ರಂ ಜಾನೀಯಾತ್। ತಸ್ಯ ಹಿ ವೀರ್ಯಕರ್ಮಾಣಿ ಅಸುತ್ತಮಾನಿ, ತೇಭ್ಯಃ ಶ್ರೇಷ್ಠಾನಿ ಕೋಽಪಿ ನ ಜಾನೀತೇ। ತಸ್ಮಿಂಶ್ಚ ಸರ್ವೇ ದೇವಾ ಶೌರ್ಯಂ ಪ್ರಜ್ಞಾಂ ಬಲಾನಿ ಚ ಸಮಸ್ತಾನಿ ಸ್ಥಾಪಯಾಮಾಸುರಿತಿ ಕೃತ್ವಾ ಸ ಮಹಾಂತಿ ವೀರ್ಯಕರ್ಮಾಣಿ ಕರೋತಿ ತೇಷಾಂ ಚ ಮಹೀಯಸ್ತ್ವಾತ್ ಅಲ್ಪಮತಯೋ ವಯಂ ತಂ ನ ಜಾನೀಮ ಇತಿ ಸಂಬಂಧಃ ||**

ಎಂದರೆ ಇಂದ್ರನ ವಿಷಯದಲ್ಲಿ ನಮಗೆ ತಿಳಿದಿರುವುದು ಅತ್ಯಲ್ಪವು. ಇಂದ್ರನ ವಿಷಯವನ್ನು ಯಾವನು ತಾನೇ ಚೆನ್ನಾಗಿ ತಿಳಿದಿರುವನು? ಯಾರೂ ಇಲ್ಲ ಅವನ ಸಾಹಸಕಾರ್ಯಗಳು ಅತ್ಯುತ್ತಮವಾದುವು. ಅವುಗಳಿಗಿಂತ ಹೆಚ್ಚಿನ ಕರ್ಮಗಳಿರುವುದನ್ನು ಯಾರೂ ಕಂಡಿಲ್ಲ ಆ ಇಂದ್ರನಲ್ಲಿ ಸಮಸ್ತ ದೇವತೆಗಳೂ ಶೌರ್ಯ, ಪ್ರಜ್ಞೆ, ಬಲ ಮೊದಲಾದ ಶಕ್ತಿಸಾಮರ್ಥ್ಯಗಳನ್ನು ಸ್ಥಾಪಿಸಿರುವುದರಿಂದ ಆ ಇಂದ್ರನ ಶೌರ್ಯ ಪರಾಕ್ರಮಸಹಿತವಾದ ಕಾರ್ಯಗಳು ಅತ್ಯಂತ ಮಹತ್ತರವಾದವುಗಳಾದ್ದರಿಂದ ಅಲ್ಪಮತಿಗಳಾದ ನಮ್ಮಂತಹ ಮಾನವರು ಅದನ್ನು ತಿಳಿದುಕೊಳ್ಳಲು ಶಕ್ತರಲ್ಲ ಎಂದು ಮುಖ್ಯಾಭಿಪ್ರಾಯವು

**ನ ಯಾತ್ ಅಧೀಮಸಿ**—ಯತ ಧಾತುವಿನಿಂದ ನಿಷ್ಪನ್ನವಾದ **ಯಾತ್** ಎಂಬ ಶಬ್ದವು ವಧನೆಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು—

**ಅಹೇರ್ಯಾತಾರಂ ಕಮಪಶ್ಯ ಇಂದ್ರ ಹೃದಿ ಯತ್ತೇ ಜಘ್ನುಷೋ ಭೀರಗಚ್ಛತ್ ।**

(ಋ. ಸಂ ೧-೩೨-೪)

ಎಂಬ ಋಕ್ಕಿನಲ್ಲಿರುವ **ಯಾತಾರಂ** ಎಂಬ ಶಬ್ದವೇ ಉದಾಹರಣೆಯು– ಎಲ್ಲಾ ಶತ್ರುಗಳನ್ನೂ ಇಂದ್ರನು ಎದುರಿಸಿ ಕೊಲ್ಲುವನು ಇಂದ್ರನನ್ನು ಎದುರಿಸಿ ಯುದ್ಧಮಾಡಿ ಸೋಲಿಸುವವನು ಯಾರೂ ಇರುವುದಿಲ್ಲ. ಎಂದು ಸ್ಕಂದ ಸ್ವಾಮಿಗಳು ಅರ್ಥವನ್ನು ವಿವರಿಸಿರುವರು. **ಸರ್ವತ್ರ ವ್ಯಾಪ್ಯ ವರ್ತಮಾನಮಿಂದ್ರಂ** ಎಲ್ಲಾ (ಕಡೆಯಲ್ಲಿಯೂ) ಪ್ರದೇಶಗಳಲ್ಲಿಯೂ ವ್ಯಾಪಿಸಿಕೊಂಡು ಇರುವ ಇಂದ್ರನನ್ನು ಅಲ್ಪರಾದ ನಾವು ತಿಳಿಯಲಾರೆವು ಎಂದು ಸಾಯಣರು ಅರ್ಥಮಾಡಿರುವರು

**ಪರಃ ವೀರ್ಯಾ**—ಇಂದ್ರನು ತನ್ನ ಸಾಮರ್ಥ್ಯದಿಂದ ಮನುಷ್ಯರು ತಿಳಿಯಲು ಅಶಕ್ಯವಾಗಿರುವ ಬಹಳ ದೂರವಾದ ಪ್ರದೇಶದಲ್ಲಿ ಇರುವನು ಎಂದು ಅರ್ಥವು. ಪರಶಬ್ದವು ಸಕಾರಾಂತವಾದ ಅವ್ಯಯವು ಬಹಳದೂರ ಎಂಬ ಅರ್ಥವನ್ನು ಬೋಧಿಸುವುದು.

**ಪರೋ ದಿವಾ ಪರ ಏನಾ ಪೃಥಿವ್ಯಾ ಪರೋ ದೇವೇಭಿರಸುರೈರ್ಯದಸ್ತಿ ।**

(ಋ ಸಂ ೧೦-೮೨-೫)

ಎಂಬ ಋಕ್ಕಿನಲ್ಲಿ **ಪರಃ** ಎಂಬ ಶಬ್ದವು ಮೇಲೆ ಹೇಳಿದ ಅರ್ಥದಲ್ಲಿ ಪ್ರಯುಕ್ತವಾಗಿರುತ್ತದೆ

**ನೃಮ್ಣಂ**—ಈ ಶಬ್ದವು ಇಪ್ಪತ್ತೆಂಟು ಬಲನಾಮಗಳಲ್ಲಿ (ನಿ ೩-೯) ಉಕ್ತವಾಗಿರುತ್ತದೆ. ಮತ್ತು ಇಪ್ಪತ್ತೆಂಟು ಧನನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿರುತ್ತದೆ. ದೇವತೆಗಳು ಧನವನ್ನೂ ಬಲವನ್ನೂ ಇಂದ್ರನಲ್ಲಿ ಅತಿಶಯವಾಗಿರುವಂತೆ ಸ್ಥಾಪಿಸಿರುವರು ಎಂದು ಅರ್ಥವು. ಇಂದ್ರನು ತನ್ನ ಸ್ವರಾಜ್ಯವನ್ನು ಅತಿಶಯವಾದ ಗೌರವದಿಂದ ರಕ್ಷಿಸುವುದಕ್ಕಾಗಿ ದೇವತೆಗಳು ಅವನಿಗೆ ಧನ, ಬುದ್ಧಿ ಶಕ್ತಿ, ಮರುದ್ದೇವತೆಗಳೆಂಬ ಸೇನಾಬಲ ಇವುಗಳನ್ನು ಉಂಟುಮಾಡಿರುವರೆಂದು ಸ್ಕಂದಸ್ವಾಮಿಗಳು ವಿವರಿಸಿರುವರು.

। ವ್ಯಾಕರಣಪ್ರಕ್ರಿಯಾ ।

**ಯೂತ್**—ಯಾ ಪ್ರಾಪಣೇ ಧಾತು. ಇದಕ್ಕೆ ಲಡರ್ಥದಲ್ಲಿ ಶತೃ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಶಪ್ಪಿಗೆ ಲುಕ್. ಯಾತ್ ಎಂದು ರೂಪವಾಗುತ್ತದೆ. ದ್ವಿತೀಯಾ ಏಕವಚನಪರವಾದಾಗ **ಸುಪಾಂ ಸುಲುಕ್**—(ಪಾ. ಸೂ ೭-೧-೩೯) ಎಂಬುದರಿಂದ ಅದಕ್ಕೆ ಲುಕ್. ಧಾತುಸ್ವರ ಉಳಿಯುತ್ತದೆ.

**ಅಧೀಮಸಿ**—ಅಧಿ ಉಪಸರ್ಗ. ಇಣ್ ಗತೌ ಧಾತು ಲಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. **ಅದಿಪ್ರಭೃತಿಭ್ಯಃ ಶಪಃ** ಸೂತ್ರದಿಂದ ಶಪಿಗೆ ಲುಕ್. **ಇದಂತೋಮಸಿಃ** (ಪಾ. ಸೂ. ೭-೧-೪೬) ಎಂಬುದರಿಂದ ಮಸ್ಸಿಗೆ ಇಕಾಗಮ. **ಹಿಚ** (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಕಾರೋತ್ತರಾಕಾರ ಉದಾತ್ತವಾಗುತ್ತದೆ. **ತಿಙಿಚೋದಾತ್ತವತಿ** (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ಅಧಿ) ಅನುದಾತ್ತಸ್ವರ ಬರುತ್ತದೆ

**ವೀರ್ಯಾ**—ವೀರ್ಯ ಶಬ್ದಕ್ಕೆ ತೃತೀಯಾ ಏಕವಚನ ಪರವಾದಾಗ **ಸುಪಾಂಸುಲುಕ್**—(ಪಾ. ಸೂ. ೭-೧-೩೯) ಎಂಬುದರಿಂದ ಅದಕ್ಕೆ ಆಕಾರಾದೇಶ.

**ದಧುಃ**—ಡುಧಾಞ್ ಧಾರಣಪೋಷಣಯೋಃ ಧಾತು. **ಲಿಟ್** ಪ್ರಥಮಪುರುಷ ಬಹುವಚನರೂಪ. ತಿಙಂತನಿಘಾತಸ್ವರ ಬರುತ್ತದೆ. ॥ ೧೫ ॥



॥ ಸಂಹಿತಾಪಾಠಃ ॥

ಯಾಮಥರ್ವಾ ಮನುಷ್ಪಿತಾ ದಧ್ಯಙ್ ಧಿಯಮತ್ನತ ।
ತಸ್ಮಿನ್ಬ್ರಹ್ಮಾಣಿ ಪೂರ್ವಥೇಂದ್ರ ಉಕ್ಥಾ ಸಮಗ್ಮತಾರ್ಚನ್ನನು
ಸ್ವರಾಜ್ಯಂ ॥ ೧೬ ॥

। ಪದಪಾಠಃ

ಯಾಂ । ಅಥರ್ವಾ । ಮನುಃ । ಪಿತಾ । ದಧ್ಯಙ್ । ಧಿಯಂ । ಅತ್ನತ ।
ತಸ್ಮಿನ್ । ಬ್ರಹ್ಮಾಣಿ । ಪೂರ್ವಽಥಾ । ಇಂದ್ರೇ । ಉಕ್ಥಾ । ಸಂ । ಅಗ್ಮತ ।
ಅರ್ಚನ್ । ಅನು । ಸ್ವಽರಾಜ್ಯಂ ॥ ೧೬ ॥

॥ ಸಾಯಣಭಾಷ್ಯಂ ॥

ಅಥರ್ವೈತತ್ಸಂಜ್ಞಕ ಋಷಿಃ ಪಿತಾ ಸರ್ವಾಸಾಂ ಪ್ರಜಾನಾಂ ಪಿತೃಭೂತೋ ಮನುಶ್ಚ ದಧ್ಯಙ್ ಅಥರ್ವಣಃ ಪುತ್ರ ಏತತ್ಸಂಜ್ಞಕ ಋಷಿಶ್ಚ ಯಾಂ ಧಿಯಮತ್ನತ ಯತ್ಕರ್ಮಾತನ್ವತ ಅಕುರ್ವನ್ ತಸ್ಮಿನ್ಕರ್ಮಣಿ ಯಾನಿ ಬ್ರಹ್ಮಾಣಿ ಹವಿರ್ಲಕ್ಷಣಾನ್ಯನ್ನಾನ್ಯುಕ್ಥಾ ಶಸ್ತ್ರರೂಪಾಣಿ ಸ್ತೋತ್ರಾಣಿ ಚ ಯಾನಿ ಸಂತಿ ತಾನಿ ಸರ್ವಾಣಿ ತಸ್ಮಿನ್ನಿಂದ್ರೇ ಸಮಗ್ಮತ । ಸಮಗಚ್ಛಂತ । ತತ್ರ ದೃಷ್ಟಾಂತಃ । ಪೂರ್ವಥಾ ಪೂರ್ವೇಷಾಮನ್ಯೇಷಾಂ ವಸಿಷ್ಠಾದೀನಾಂ ಯಜ್ಞೇಷು ಯಥಾ ಹವೀಂಷಿ ಸ್ತೋತ್ರಾಣಿ ಚೇಂದ್ರೇಣ ಸಂಗಚ್ಛಂತೇ ತದ್ವತ್ । ಯ ಇಂದ್ರಃ ಸ್ವರಾಜ್ಯಂ ಸ್ವಸ್ಯ ರಾಜ್ಯತ್ವಮನ್ವರ್ಚನ್ ಅನುಪೂಜಯನ್ । ವೃತ್ರವಧಾದಿರೂಪೇಣ ಕರ್ಮಣಾ ಸ್ವಕೀಯಮಧಿಪತಿತ್ವಂ ಪ್ರಕಟಯನ್ನಿತ್ಯರ್ಥಃ ॥ ಅತ್ನತ । ತನು ವಿಸ್ತಾರೇ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ತನಿಪತ್ಯೋಶ್ಛಂದಸೀತ್ಯುಪಧಾಲೋಪಃ । ಪೂರ್ವಥಾ । ಪ್ರತ್ನಪೂರ್ವವಿಶ್ವೇಮಾತ್ಥಾಲ್ ಛಂದಸಿ । ಪಾ. ೫-೩-೧೧೧ । ಇತೀವಾರ್ಥೇ ಪೂರ್ವಶಬ್ದಾತ್ಥಾಲ್ಪ್ರತ್ಯಯಃ । ಲಿತ್ಸ್ವರೇಣ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಉಕ್ಥಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಸಮಗ್ಮತ । ಸಮೋ ಗಮ್ಯೃಚ್ಛಿಭ್ಯಾಮಿತ್ಯಾತ್ಮನೇಪದಂ । ಲುಙಿ ಮಂತ್ರೇ ಘಸೇತಿ ಚ್ಲೇರ್ಲುಕ್ । ಗಮಹನೇತ್ಯಾದಿನೋಪಧಾಯಾ ಲೋಪಃ ॥

॥ ಪ್ರತಿಪದಾರ್ಥ ॥

**ಅಥರ್ವಾ**—ಅಥರ್ವಋಷಿಯೂ । **ಪಿತಾ**—(ಎಲ್ಲಾ ಪ್ರಜೆಗಳಿಗೂ) ಪಿತೃಭೂತನಾದ । **ಮನುಃ**—ಮನುವೂ । **ದಧ್ಯಙ್**—ದಧ್ಯಂಚನೆಂಬ ಋಷಿಯೂ । **ಯಾಂ ಧಿಯಂ**—ಯಾವ ಕರ್ಮವನ್ನು । **ಅತ್ನತ**—ಮಾಡಿದರೋ । **ತಸ್ಮಿನ್**—ಆ ಕರ್ಮದಲ್ಲಿ । **ಬ್ರಹ್ಮಾಣಿ**—ಹವಿರ್ಲಕ್ಷಣವಾದ ಅನ್ನಗಳೂ । **ಉಕ್ಥಾನಿ**—ಶಸ್ತ್ರರೂಪವಾದ ಸ್ತುತಿವಾಕ್ಯಗಳೂ । **ಸ್ವರಾಜ್ಯಂ**—ಸ್ವಸ್ವಾಮಿತ್ವವನ್ನು । **ಅನು ಅರ್ಚನ್**—(ವೃತ್ರವಧಾದಿ ರೂಪದಿಂದ) ಪ್ರಕಟಿಸುವ । **ಇಂದ್ರೇ**—ಇಂದ್ರನಲ್ಲಿಯೇ । **ಪೂರ್ವಥಾ**—ಹಿಂದೆ (ವಸಿಷ್ಠಾದಿಗಳ ಯಜ್ಞಗಳಲ್ಲಿ ಹೇಗೋ ಹಾಗೆ) । **ಸಮಗ್ಮತ**—ಸೇರಿರುವವು.

॥ ಭಾವಾರ್ಥ ॥

(ವೃತ್ರವಧಾದಿಗಳಿಂದ) ಸ್ವಸ್ವಾಮಿತ್ವವನ್ನು ಪ್ರಕಟಿಸುತ್ತಿರುವ ಇಂದ್ರನಿಗೆ, ಅಥರ್ವನೆಂಬ ಋಷಿಯೂ (ಮಾನವ ವರ್ಗಕ್ಕೇ) ಪಿತೃವಾದ ಮನುವೂ ಮತ್ತು ದಧೀಚಿಋಷಿಯೂ ಇವರುಗಳು (ಅರ್ಪಿಸಿದ) ಹವಿಸ್ಸುಗಳು, ಶಸ್ತ್ರರೂಪವಾದ ಸ್ತುತಿವಾಕ್ಯಗಳೂ, ಹಿಂದೆ (ವಸಿಷ್ಠಾದಿಗಳು ಮಾಡಿದ ಯಜ್ಞದಲ್ಲಿ ಇಂದ್ರನಿಗೇ ಸೇರಿದಂತೆ) ಸೇರಿದವು.

## English Translation

In like manner as of old, so in whatever act of worship Atharvan, or father Manu, or Dadhyanch engaged, their oblations and their hymns were all congregated in that Indra, manifesting his own sovereignty

॥ ವಿಶೇಷವಿಷಯಗಳು ॥

**ಮನುಃ**—**ಅಶ್ವಿನೌ**, **ಉಷಾಃ** ಮೊದಲಾದ ಮಧ್ಯಸ್ಥಾನ ದೇವತಾ ಪದಗಳಲ್ಲಿ **ಮನುಃ**, **ದಧ್ಯಙ್**, **ಅಥರ್ವಾ** ಎಂಬ ಪದಗಳು (ನಿ ೧೨-೩೪) ಪಠಿತವಾಗಿರುತ್ತವೆ. **ಅಥರ್ವಾ** ಎಂಬ ಋಷಿಯೂ, **ಮನು** ಎಂಬುವನೂ. **ದಧ್ಯಙ್** ಅಥರ್ವನೆಂಬ ಋಷಿಯೂ ಕೂಡ ಆಚರಿಸಿ ಇರುವ ಕ್ರಮವು ಎಲ್ಲವೂ ಇಂದ್ರನಿಗೆ ಸಂಬಂಧಪಟ್ಟವುಗಳಾಗಿ ಇರುತ್ತವೆ.

**ಉಕ್ಥಾ**—ಯಜ್ಞಗಳಲ್ಲಿ ಆಯಾಯ ದೇವತೆಗಳ ಮಹಿಮೆಯನ್ನು ಪ್ರಕಟಗೊಳಿಸುವ ಸ್ತೋತ್ರಗಳು.

**ಬ್ರಹ್ಮಾಣಿ**—ಅಗ್ನಿಯಲ್ಲಿ ದೇವತೆಗಳನ್ನುದ್ದೇಶಿಸಿ ಹೋಮಮಾಡುವ ಹವಿಸ್ಸೇ ಮೊದಲಾದವುಗಳು ಎಂದು ಅರ್ಥವು

**ಪೂರ್ವಥಾ**—ಈ ಪದದಿಂದ ದೃಷ್ಟಾಂತ ದಾರ್ಷ್ಟಾಂತಿಕಭಾವವು ತೋರಿಬರುವುದು. ಪೂರ್ವಿಕರಾದ ವಸಿಷ್ಠರೇ ಮೊದಲಾದ ಋಷಿಗಳು ಯಜ್ಞಗಳನ್ನು ಮಾಡಿದ ಕಾಲದಲ್ಲಿ ಹವಿಸ್ಸುಗಳೂ, ಸ್ತೋತ್ರಗಳೂ ಇಂದ್ರನಿಗೆ

ಸಂಬಂಧಪಟ್ಟು ಇದ್ದಂತೆಯೂ, **ಮನು, ದಧ್ಯಙ್, ಅಥರ್ವ** ಎಂಬ ಋಷಿಗಳು ಆಚರಿಸಿದ ಕ್ರಮದಂತೆಯೂ, ಸ್ತೋತ್ರಾದಿಗಳು ಇಂದ್ರನಿಗೆ ಸಂಬಂಧಿಸಿರುವುವು ಎಂದು ತಾತ್ಪರ್ಯ

**ಅರ್ಚನ್ ಅನು ಸ್ವರಾಜ್ಯಂ**—ಇಂದ್ರನು ತಾನು ರಾಜನಾಗಿರುವಿಕೆಯನ್ನು ಅನುಸರಿಸಿ ಅದಕ್ಕೆ ಗೌರವಿಸಿ ವೃತ್ರವಧೆಯೇ ಮೊದಲಾದ ಕರ್ಮಗಳನ್ನು ಮಾಡುತ್ತಾ ತನ್ನ ಆಧಿಪತ್ಯವನ್ನು ಪ್ರಕಟಗೊಳಿಸುತ್ತಿರುವನೆಂದು ಅರ್ಥ ವನ್ನು ವಿವರಿಸಿರುವರು

**ದಧ್ಯಙ್—ಪ್ರತ್ಯಕ್ತೋ ಧ್ಯಾನಮಿತಿ ವಾ ।** ಧ್ಯಾನವನ್ನು ಆರಂಭಿಸುವುದರಲ್ಲಿ ತನ್ನ ಅರ್ಹತೆಯನ್ನು ಹೊಂದಿರುವವನು. ಇವನಲ್ಲಿ ಧ್ಯಾನದ ಸಕಲಕಾರ್ಯಗಳೂ ಹೊಂದಲ್ಪಡುವವು ಎಂದು ಅರ್ಥವು **ದಧ್ಯಙ್, ಅಥರ್ವಾ, ಮನುಃ** ಎಂಬ ಈ ಪದಗಳಿಂದ ಬೋಧ್ಯರಾಗಿರುವವರು ಮೂವರೂ ಒಬ್ಬನೇ ಆಗಿರುವನೆಂದು ಹೇಳುವು ದಾದರೆ ಆದಿತ್ಯನೆಂದು ಅರ್ಥವು. ಇವರು ಮೂವರೂ ಬೇರೆ ಬೇರೆಯಾಗಿರುವರೆಂದು ಹೇಳುವುದಾದರೆ ಪುನಃ ದ್ಯುಸ್ಥಾನವುಳ್ಳವರಾದ ಮೂರುಜನ ಋಷಿಗಳು ಎಂದು ತಿಳಿಯಬೇಕು ಎಂದು ನಿರುಕ್ತದಲ್ಲಿ ವ್ಯಾಖ್ಯಾನಮಾಡಿರುವರು.

**ದಧ್ಯಙ್**—ದಧ್ಯಂಚ್ ಅಥವಾ ದಧೀಚಿ ಎಂಬ ಋಷಿಯು ಪುರಾಣಾದಿಗಳಲ್ಲಿ ಪ್ರಸಿದ್ಧನಾದವನು. ಭಾಷ್ಯಕಾರರು ಇಲ್ಲಿ ಒಂದು ಉಪಾಖ್ಯಾನವನ್ನು ಹೇಳಿರುವರು—ಅಥರ್ವನೆಂಬುವನ ಪುತ್ರನಾದ ದಧ್ಯಂಚ್ ಎಂಬ ಋಷಿಯು ಜೀವಿಸಿದ್ದಾಗ ಅವನ ದರ್ಶನದಿಂದ ಅಸುರರು ಭೀತರಾಗಿ ಓಡಿಹೋಗಿದ್ದರು ಅವನು ಮೃತನಾಗಿ ಸ್ವರ್ಗಕ್ಕೆ ಹೋದ ಬಳಿಕ ಅಸುರರು ನಿರ್ಭಯವಾಗಿ ಭೂಮಿಯೆಲ್ಲವನ್ನೂ ವ್ಯಾಪಿಸಿದರು. ಬಳಿಕ ಇಂದ್ರನು ಈ ಅಸುರರೊಡನೆ ಯುದ್ಧಮಾಡಲಶಕ್ತನಾಗಿ ಆ ಋಷಿಯನ್ನು ಹುಡುಕಿದನು ಋಷಿಯು ಸ್ವರ್ಗಸ್ಥನಾದನೆಂದು ತಿಳಿಯಬಂದಿತು. ಆಗ ಇಂದ್ರನು ಸಮೀಪದಲ್ಲಿದ್ದವರನ್ನು ಕುರಿತು ಆ ಋಷಿಯ ಅಂಗಗಳಲ್ಲಿ ಯಾವುದಾದರೂ ಅವಶೇಷವಿದೆಯೇ ಎಂದು ಕೇಳಲು ಆಗ ಅವರು—ದಧೀಚಿಋಷಿಯು ಒಂದಾನೊಂದು ಕಾಲದಲ್ಲಿ ಅಶ್ವಿನೀದೇವತೆ ಗಳಿಗೆ ಮಧುವಿದ್ಯವನ್ನು ಕಲಿಸಿದ ಕುದುರೆಯ ತಲೆಬುರುಡೆಯು ಮಾತ್ರ ಇರುವುದೆಂದೂ, ಅದೂ ಸಹ ಎಲ್ಲಿರುವುದೋ ಗೊತ್ತಿಲ್ಲವೆಂದೂ ಹೇಳಿದರು ಆಗ ಇಂದ್ರನು ಅದನ್ನು ಹುಡುಕುವಂತೆ ಅವರಿಗೆ ಹೇಳಲು, ಅವರು ಅದು ಕುರುಕ್ಷೇತ್ರದ ಸಮೀಪದಲ್ಲಿರುವ ಶರ್ಯಣಾವತ್ ಎಂಬ ಸರೋವರದಲ್ಲಿ ಬಿದ್ದಿರುವುದನ್ನು ಹುಡುಕಿ ತೆಗೆದುಕೊಂಡುಬಂದರು. ಇಂದ್ರನು ಆ ತಲೆಬುರುಡೆಯ ಮೂಳೆಗಳಿಂದ ಅಸುರರನ್ನು ಜಯಿಸಿದನು ಎಂದರೆ, ಒಂಬತ್ತುಸಲ ತೊಂಬತ್ತು ಎಂದರೆ ಎಂಟನೂರು ಹತ್ತಾವರ್ತಿ ಅಸುರರ ಮಾಯಾಜಾಲವನ್ನು ವಿಫಲಗೊಳಿಸಿದನು. ಇಲ್ಲಿ ಒಂಭತ್ತುಸಲ ತೊಂಭತ್ತು ಎಂಬ ಸಂಖ್ಯೆಯನ್ನು ವಿವರಿಸುವಾಗ ಭಾಷ್ಯಕಾರರು—ಮೂರು ಲೋಕಗಳಲ್ಲಿರುವ ದೇವತೆಗಳನ್ನು ಜಯಿಸಲು ಮೊದಲು ಅಸುರರಿಗೆ ಮೂರುವಿಧವಾದ ಮಾಯಾಭೇದಗಳಿದ್ದವು. ಅವುಗಳಲ್ಲಿ ಒಂದೊಂದೂ ವರ್ತಮಾನ ಭೂತ ಭವಿಷ್ಯತ್ ಎಂದು ಮೂರುವಿಧವಾಗಿದ್ದುದರಿಂದ ಒಟ್ಟು ಒಂಭತ್ತು ವಿಧಗಳಾದವು ಮತ್ತೆ ಆ ಒಂಬತ್ತು ಮಾಯೆಗಳು ಉತ್ಸಾಹಾದಿಶಕ್ತಿತ್ರಯಗಳಿಂದ ಕೂಡಿ ೯×೩=೨೭ ಆದುವು ಮತ್ತೆ ಅವು ಸಾತ್ವಿಕಾದಿ ಗುಣತ್ರಯಗಳಿಂದ ಕೂಡಿ ೨೭×೩=೮೧ ಆದುವು ಈ ಎಂಭತ್ತೊಂದು ಮಾಯೆಗಳು ದಶದಿಕ್ಕುಗಳಲ್ಲಿ ಆಚರಿಸಲ್ಪಡುವುದರಿಂದ ಒಟ್ಟು ೮೧×೧೦=೮೧೦ ಅಥವಾ ಒಂಬತ್ತುಸಲ ತೊಂಭತ್ತು ೯×೯೦=೮೧೦ ಆದುವು ಈ ವಿಧವಾದ ವೃತ್ರರೂಪವಾದ ಅಸುರರ ಮಾಯಾಜಾಲಗಳನ್ನು ಇಂದ್ರನು ನಿರರ್ಥಕಗೊಳಿಸಿದನು ಎಂದು ವಿವರಿಸಿರುವರು

ಸ್ಕಂದಸ್ವಾಮಿಯು ಬೇರೊಂದು ಇತಿಹಾಸವನ್ನು ಹೇಳಿರುವರು–ಪೂರ್ವದಲ್ಲಿ ಕಾಲಕಂಜರೆಂಬ ಅಸುರರಿದ್ದರು. ಅವರು ಪ್ರಬಲರಾಗಿ ದೇವತೆಗಳನ್ನು ಕೊಲ್ಲುತ್ತಾ ತುಂಬಾ 'ತೊಂದರೆ ಕೊಡುತ್ತಿದ್ದರು. ಆಗ ದೇವತೆಗಳು ಬ್ರಹ್ಮನ ಸಮೀಪಕ್ಕೆ ಹೋಗಿ ಈ ಅಸುರರನ್ನು ಸಂಹಾರಮಾಡಲು ಉಪಾಯವನ್ನು ತಿಳಿಸಬೇಕೆಂದು ಪ್ರಾರ್ಥಿಸಲು, ಬ್ರಹ್ಮನು—ಎಲೈ ದೇವತೆಗಳಿರಾ, ದಧ್ಯಙ್ ಎಂಬ ಋಷಿಯು ಇರುವನು. ನೀವು ಅವನ ಸಮೀಪಕ್ಕೆ ಹೋಗಿರಿ, ಅವನು ಅಸುರರ ಸಂಹಾರ ವಿಷಯದಲ್ಲಿ ತಕ್ಕ ಉಪಾಯವನ್ನು ತಿಳಿಸುವನು ಎಂದನು. ದೇವತೆಗಳು ಬ್ರಹ್ಮನ ಮಾತಿನಂತೆ ದಧೀಚಿ ಋಷಿಯ ಸಮೀಪಕ್ಕೆ ಹೋಗಿ ಬ್ರಹ್ಮನು ತಮ್ಮನ್ನು ಕಳಹಿಸಿರುವನೆಂದು ಅರಿಕೆಮಾಡಿದರು. ಆ ಋಷಿಯು ಯೋಗದೃಷ್ಟಿಯಿಂದ ಇವರು ಬಂದ ಕಾರ್ಯವನ್ನು ತಿಳಿದು ಯೋಗಸಮಾಧಿಯಿಂದ ತನ್ನ ಪ್ರಾಣಗಳನ್ನು ವಿಸರ್ಜಿಸಿದನು. ಆಗ ಆ ಋಷಿಯ ಮೂಳೆಗಳಿಂದ ಇಂದ್ರನು ಅಸುರರನ್ನು ಸಂಹಾರಮಾಡಿದನು ಈ ವಿಷಯವೇ ಈ ಋಕ್ಕಿನಲ್ಲ ವಿವರಿಸಲ್ಪಟ್ಟಿರುವುದೆಂದು ಸ್ಕಂದಸ್ವಾಮಿಯು ಹೇಳಿರುವರು.

ದಧೀಚಿಋಷಿಯ ತಲೆಯು ಕುದುರೆಯ ತರಯುಹಾಗಿದ್ದಿತ್ತೆಂದೂ ಅದು ಅಶ್ವಿನೀದೇವತೆಗಳಿಂದ ಅವನಿಗೆ ಕೊಡಲ್ಪಟ್ಟದ್ದಿತೆಂದೂ ಪ್ರತೀತಿ ಇರುವುದು. ದಧೀಚಿಋಷಿಯು ಮೃತನಾದಮೇಲೆ ಕುದುರೆಯ ತಲೆಯಂತ್ತಿದ್ದ ಅವನ ಶಿರಸ್ಸನ್ನು ಇಂದ್ರನು ಹುಡುಕಿದನು. ಅದು ಒಂದು ಪರ್ವತದ ಮರೆಯಲ್ಲಿ ಶರ್ಯಣಾವತಿಯೆಂಬ ಒಂದು ಸರೋವರದಲ್ಲಿ ಸಿಕ್ಕಿತೆಂದು ಋ. ಸಂ ೧–೮೪–೧೩ ರಲ್ಲಿ ವಿವರಿಸಲಾಗಿರುವುದು.

ದಧೀಚಿಋಷಿಗೆ ಕುದುರೆಯ ಶಿರಸ್ಸು ಹೇಗೆಬಂದಿತೆಂಬ ವಿಚಾರದಲ್ಲಿ ಸ್ಕಂದಸ್ವಾಮಿಯು ಒಂದು ಪೂರ್ವೇತಿಹಾಸವನ್ನು ಹೇಳಿರುವರ —ಅಥರ್ವಣ ಪುತ್ರನಾದ ದಧೀಚಿಋಷಿಗೆ ಇಂದ್ರನು ಮಧುವೆಂಬ ಪರಬ್ರಹ್ಮನ ಸ್ವರೂಪವನ್ನು ಉಪದೇಶಮಾಡಿ ಇದನ್ನು ಯಾರಿಗೂ ಹೇಳಕೂಡದೆಂದೂ ಹಾಗೆ ಒಂದು ವೇಳೆ ಹೇಳಿದರೆ ನಿನ್ನ ತಲೆಯು ಬಿದ್ದುಹೋಗುವುದೆಂದೂ ಹೇಳಿದ್ದನು. ಕೆಲವು ಕಾಲದ ಮೇಲೆ ಅಶ್ವಿನೀದೇವತೆಗಳು ಆ ದಧೀಚಿಋಷಿಯ ಸಮೀಪಕ್ಕೆ ಬಂದು, ಇಂದ್ರನು ನಿನಗೆ ತಿಳಿಸಿದ ಬ್ರಹ್ಮಸ್ವರೂಪವನ್ನು ವಿವರಿಸೆನಲು, ದಧೀಚಿಯು ಅವನನ್ನು ಕುರಿತು ಈ ವಿಷಯವನ್ನು ನಾನು ನಿಮಗೆ ತಿಳಿಸಿದಲ್ಲಿ ನನ್ನ ತಲೆಯು ಬಿದ್ದುಹೋಗುವುದೆಂದು ಇಂದ್ರನು ಹೇಳಿರುವನು, ಆ ಭಯದಿಂದ ನಾನು ಹೇಳುವುದಿಲ್ಲವೆನ್ನಲು, ಅಶ್ವಿನೀದೇವತೆಗಳು ಅದಕ್ಕಾಗಿ ಚಿಂತಿಸಬೇಡ, ನಿನ್ನ ತಲೆಯು ಬಿದ್ದುಹೋದರೆ ನಮ್ಮ ತಲೆಯನ್ನು ನಿನಗೆ ಕೊಡುವುವೆಂದರು. ದಧೀಚಿಯು ಅದಕ್ಕೆ ಸಮ್ಮತಿಸಿ ಹೇಳಿದನು. ಅದರಿಂದ ದಧೀಚಿಋಷಿಯ ಶಿರಸ್ಸು ಬಿದ್ದುಹೋಗಲು ಅಶ್ವಿನೀದೇವತೆಗಳು ಒಂದು ಕುದುರೆಯ ಶಿರಸ್ಸನ್ನು ಕತ್ತರಿಸಿ ತಂದು ದಧೀಚಿಋಷಿಯ ಶರೀರಕ್ಕೆ ಸೇರಿಸಿದರು. ಅದರಿಂದ ದಧೀಚಿಋಷಿಯ ಶಿರಸ್ಸು ಕುದುರೆಯ ಶಿರಸ್ಸಿನಂತಿರುವುದು ಎಂದು ವರ್ಣಿತವಾಗಿದೆ ಈ ವಿಷಯುವನ್ನು ಕಕ್ಷೀವಾನ್ ಎಂಬ ಋಷಿಯು ಋ. ಸಂ ೧–೧೧೭–೨೨ ಋಕ್ಕಿನಲ್ಲಿ ವರ್ಣಿಸಿರುವನು.

ಈ ಋಷಿಯ ಹೆಸರು ಋಗ್ವೇದ ಸಂಹಿತೆಯಲ್ಲಿ ೧–೮೦–೧೬ , ೧–೮೪–೧೩ ; ೧–೮೪–೧೪ , ೧–೧೧೬–೧೨ , ೧–೧೧೭–೨೨ , ೧–೧೯–೯ ಮೊದಲಾದ ಋಕ್ಕುಗಳಲ್ಲಿಯೂ ತೈತ್ತಿರೀಯ, ಸಂಹಿತಾ ೫–೧–೪–೪ , ೫–೬–೬–೩ ಕಾಠಕ ಸಂಹಿತಾ ೧೯–೪ , ಶತಪಥ ಬ್ರಾಹ್ಮಣ ೪–೧–೫–೧೮ ; ೬–೪–೨–೩ , ೧೪–೧–೧–೧೮ , ೧೪–೧–೧–೨೦ , ೧೪–೧–೧–೨೫ , ೧೪–೧–೪–೧೩ ; ಬೃಹದಾರಣ್ಯಕೋಪನಿಷತ್ ೨–೫–೨೨ , ೪–೫–೨೮ ಮೊದಲಾದ ಸ್ಥಳಗಳಲ್ಲಿ ಪಠಿತವಾಗಿದೆ

**ಅಥರ್ವಾ**—ಅಥರ್ವಾ ಎಂಬ ಹೆಸರಿನ ಋಷಿಯು ಪ್ರಸಿದ್ಧವಾದ ಒಂದು ಋಷಿವಂಶಕ್ಕೆ ಮೂಲ ಪುರುಷನು. ಈ ಶಬ್ದದ ಬಹುವಚನಪ್ರಯೋಗವಿರುವ ಸ್ಥಳಗಳಲ್ಲಿ ಈ ಋಷಿಯ ವಂಶಸ್ಥರೆಂದು ಅರ್ಥವು. ಕೆಲವುಕಡೆ ಎಂದರೆ—

**ದಶ ರಥಾನ್ ಪ್ರಷ್ಟಿಮತಃ ಶತಂ ಗಾ ಅಥರ್ವಭ್ಯಃ ।**
**ಅಶ್ವಥಃ ಪಾಯವೇಽದಾತ್ ॥**

(ಋ. ಸಂ. ೬-೪೭-೨೪)

ಮೊದಲಾದ ಋಕ್ಕುಗಳಲ್ಲಿ ಅಶ್ವಥನೆಂಬ ರಾಜನು ಅಥರ್ವವಂಶದವರಿಗೆ ರಥ, ಗೋವುಗಳು ಮೊದಲಾದವುಗಳನ್ನು ಕೊಟ್ಟ ದಾನಸ್ತುತಿಯ ಪ್ರಶಂಸೆ ಇರುವುದು.

**ಅಭಿ ತೇ ಮಧುನಾ ಪಯೋಽಥರ್ವಾಣೋ ಅಶಿಶ್ರಯುಃ ।**
**ದೇವಂ ದೇವಾಯ ದೇವಯು ॥**

(ಋ. ಸಂ. ೯-೧೧-೨).

ಎಂಬ ಋಕ್ಕಿನಲ್ಲಿ ಈ ಅಥರ್ವವಂಶದವರು ಸೋಮನಿಗೆ ಹಾಲನ್ನು ಬೆರಸಿದ ಸೋಮರಸವನ್ನು ಅರ್ಪಿಸಿದ ವಿಷಯವು ಪ್ರಸ್ತಾಪಿಸಲ್ಪಟ್ಟಿರುವುದು. ಈ ಋಷಿಯ ಹೆಸರು—

**ಯಜ್ಞೈರಥರ್ವಾ ಪ್ರಥಮಃ ಪಥಸ್ತತೇ ತತಃ ಸೂರ್ಯೋ ವ್ರತಪಾ ವೇನ ಆಜನಿ ।**

(ಋ. ಸಂ ೧-೮೩-೫)

**ತ್ವಾಮಗ್ನೇ ಪುಷ್ಕರಾದಧ್ಯಥರ್ವಾ ನಿರಮಂಥತ ।**

(ಋ. ಸಂ ೬-೧೬-೧೩)

**ಏವಾ ಮಹಾನ್ಬೃಹದ್ದಿವೋ ಅಥರ್ವಾವೋಚತ್ಸ್ವಾಂ ತನ್ವ೧ ಮಿಂದ್ರಮೇವ ।**

(ಋ. ಸಂ ೧೦-೧೨೦-೯).

ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು. ಈ ಅಥರ್ವಋಷಿಯ ವಂಶಸ್ಥನಾದ ಬೃಹದ್ದಿವ ಎಂಬ ಋಷಿದೃಷ್ಟವಾದ ಇಂದ್ರದೇವತಾಕವಾದ ಒಂದು ಸೂಕ್ತವು ಋಗ್ವೇದದ ಹತ್ತನೆಯ ಮಂಡಲದಲ್ಲಿ (ಋ. ಸಂ. ೧೦-೧೨೦) ಇರುವುದು.

**ಮನುಃ**—ಋಗ್ವೇದದಲ್ಲಿ ಮನುವಿನ ಹೆಸರು ಅನೇಕಕಡೆ ಪಠಿತವಾಗಿದ್ದರೂ ಹೆಚ್ಚು ವಿವರಣೆ ಎಲ್ಲಿಯೂ ದೊರೆಕುವುದಿಲ್ಲ. ಮನುವು ಮಾನವ ಕುಲಕ್ಕೆ ಮೂಲಪುರುಷನೆಂದೂ ಯಜ್ಞಯಾಗಾದಿಗಳ ಅನುಷ್ಠಾನಕ್ರಮದಲ್ಲಿ ಮಾರ್ಗದರ್ಶಕನೆಂದೂ ತಿಳಿಯಬರುವುದು. ಇವನು ತನ್ನ ಆಸ್ತಿಯನ್ನು ತನ್ನ ಮಕ್ಕಳಿಗೆ ಹಂಚಿಕೊಡುವಾಗ ಇವನ ಕಿರಿಯಮಗನಾದ ನಾಭಾನೇದಿಷ್ಠನೆಂಬುವನು ಗುರುಕುಲದಲ್ಲಿ ಬ್ರಹ್ಮಚರ್ಯದಿಂದ ವಿದ್ಯಾಭ್ಯಾಸವನ್ನು ಮಾಡುತ್ತಿದ್ದುದ ರಿಂದ ಅವನಿಗೆ ಯಾವ ದಯಾಭಾಗವೂ ದೊರಕಲಿಲ್ಲವೆಂದೂ ಅವನು ವಿದ್ಯಾಭ್ಯಾಸ ಮುಗಿಸಿಕೊಂಡು ಬಂದು ತಂದೆ

ಯನ್ನು ತನ್ನ ದಾಯಭಾಗಕ್ಕಾಗಿ ಪ್ರಶ್ನೆ ಮಾಡಲು ಇವನನ್ನು—ಅಂಗಿರಾಋಷಿಗಳು ಯಜ್ಞಮಾಡುವ ಸ್ಥಳಕ್ಕೆ ಹೋಗಿ ಅವರಿಗೆ ಕೆಲವು ಮಂತ್ರಗಳನ್ನು ಉಪದೇಶಮಾಡಿದರೆ ಅವರು ನಿನಗೆ ಯಥೇಚ್ಛವಾಗಿ ಧನವನ್ನು ಕೊಡುವರೆಂದು ಹೇಳಿಕಳುಹಿಸಿದನು. ಈ ವೃತ್ತಾಂತವು ಐತರೇಯಬ್ರಾಹ್ಮಣದಲ್ಲಿಯೂ, ಯಜುರ್ವೇದತೈತ್ತಿರೀಯಸಂಹಿತೆಯಲ್ಲಿಯೂ ವಿವರಿಸಿರುವುದು ಮುಖ್ಯವಾಗಿ ಈ ಮನುವು ಮಾಡಿದ ಯಜ್ಞವು ಪ್ರಸಿದ್ಧಿಯಾಗಿರುವುದರಿಂದ ಋಗ್ವೇದದಲ್ಲಿ ಮನುವು ಮಾಡಿದ ಯಜ್ಞದ ವಿಷಯವು ಅಲ್ಲಲ್ಲಿ ಪ್ರಸ್ತಾಪಿಸಲ್ಪಟ್ಟಿರುವುದು. ಈ ಮನುವಿನ ವಿಷಯವು ಋಗ್ವೇದದಲ್ಲಲ್ಲದೆ ಅಥರ್ವವೇದ (೧೪-೨-೪೧) ತೈತ್ತಿರೀಯಸಂಹಿತಾ (೧-೫-೧-೩, ೭-೫-೧೫-೩, ೨-೫-೯-೧, ೨-೬-೭-೧, ೩-೩-೨-೧, ೫-೪-೧೦-೫; ೬-೬---೬-೧.) ಕಾಠಕಸಂಹಿತಾ (೮-೧೫) ಶತಪಥಬ್ರಾಹ್ಮಣ (೧-೧-೪-೧೪) ಜೈಮಿನೀಯ ಉಪನಿಷದ್ಬ್ರಾಹ್ಮಣ (೩-೧೫-೨) ಮೊದಲಾದ ಸ್ಥಳಗಳಲ್ಲಿ ಉಕ್ತವಾಗಿರುವುದು

ಮನುವಿಗೆ ವಿವಸ್ವಾನ್ (ಋ ಸಂ. ೮-೫೨-೧) ಎಂದೂ ವಿವಸ್ವಂತನ (ಒಬ್ಬ ದೇವತೆ) ಮಗನಾದುದರಿಂದ ವೈವಸತ್ವನೆಂದೂ (ಅಥ. ೮-೧೦-೨೪, ಶತ. ಬ್ರಾ. ೧೩-೪-೩-೩) ಸವರ್ಣಾ ಎಂಬ ಎಂಬುವಳ ವಂಶಸ್ಥನಾದುದರಿಂದ ಸಾವರ್ಣಿ ಎಂದೂ, ಸಂವರಣನ ವಂಶಸ್ಥನಾದುದರಿಂದ ಸಾಂವರಣಿ (ಋ ಸಂ ೮-೫೧-೧) ಎಂದೂ ಅನೇಕ ಹೆಸರುಗಳಿವೆ

॥ ವ್ಯಾಕರಣಪ್ರಕ್ರಿಯಾ

**ಅತ್ನತ**—ತನು ವಿಸ್ತಾರೇ ಧಾತು. ಇದಕ್ಕೆ ಲಙ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ- **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ ಲುಕ್. **ಆತ್ಮನೇಪದೇಷ್ವನತಃ** (ಪಾ ಸೂ. ೭-೧-೫) ಎಂಬುದರಿಂದ ಝ ಪ್ರತ್ಯಯಕ್ಕೆ ಅತಾದೇಶ **ತನಿಪತ್ಯೋಶ್ಛಂದಸಿ** (ಪಾ ಸೂ ೬-೪-೯೯) ಎಂಬುದರಿಂದ ವೇದದಲ್ಲಿ ಧಾತುವಿನ ಉಪಧೆಗೆ ಲೋಪ ಅಂಗಕ್ಕೆ ಅಡಾಗಮ. ಅತ್ನತ ಎಂದು ರೂಪವಾಗುತ್ತದೆ ಯಾಮ್ ಎಂದು ಪೂರ್ವದಲ್ಲಿ ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಎಂಬುದರಿಂದ ನಿಘಾತ ಪ್ರತಿಷೇಧ ಬರುವುದರಿಂದ ಅಡಾಗಮ ಉದಾತ್ತವೆಂಬುದರಿಂದ ಆದ್ಯುದಾತ್ತವಾಗುತ್ತದೆ

**ಪೂರ್ವಥಾ**—ಪೂರ್ವ ಇವ ಪೂರ್ವಥಾ ಪೂರ್ವ ಶಬ್ದಕ್ಕೆ **ಪ್ರತ್ನಪೂರ್ವವಿಶ್ವೇಮಾತ್ಥಾಲ್ ಛಂದಸಿ** (ಪಾ ಸೂ. ೫-೩-೧೧೧) ಎಂಬುದರಿಂದ ಇವಾರ್ಥದಲ್ಲಿ ಥಾಲ್ ಪ್ರತ್ಯಯ ಲಿತ್ತಾದುದರಿಂದ **ಲಿತಿ** (ಪಾ ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

**ಉಕ್ಥಾ**—ನಪುಂಸಕದಲ್ಲಿ ಶಿ ಆದೇಶ ಬಂದಾಗ **ಶೇಶ್ಛಂದಸಿಬಹುಲಂ** (ಪಾ. ಸೂ ೬-೧-೭೦) ಎಂಬುದರಿಂದ ಶಿಗೆ ಲೋಪ

**ಸಮಗ್ಮತ**—ಗಮ್ಲ್ಯ ಗತೌ ಧಾತು. ಸಮ್ ಉಪಸರ್ಗದ ಪರದಲ್ಲಿರುವುದರಿಂದ **ಸಮೋಗಮ್ಯೃಚ್ಛಿಭ್ಯಾಂ** (ಪಾ. ಸೂ. ೧-೩-೨೯) ಎಂಬುದರಿಂದ ಆತ್ಮನೇಪದಿಯಾಗುತ್ತದೆ ಲುಙ್ ಪ್ರಥಮಪುರುಷ ಬಹುವಚನಕ್ಕೆ **ಆತ್ಮನೇಪದೇಷ್ವನತಃ** (ಪಾ ಸೂ. ೭-೧-೫) ಎಂಬುದರಿಂದ ಝ ಪ್ರತ್ಯಯಕ್ಕೆ ಅತಾದೇಶ ಚ್ಲಿ ಬಂದಾಗ

**ಮಂತ್ರೇಘಸಹ್ವರ**—(ಪಾ. ಸೂ ೨-೪-೮೦) ಎಂಬುದರಿಂದ ಅದಕ್ಕೆ ಲುಕ್. **ಗಮಹನಜನ**—(ಪಾ. ಸೂ. ೬-೪-೯೮) ಎಂಬುದರಿಂದ ಧಾತುವಿನ ಉಪಧೆಗೆ ಲೋಪ. ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ಅಗ್ಮತ ಎಂಬ ತಿಙಂತಕ್ಕೆ ನಿಘಾತಸ್ವರ ಬರುತ್ತದೆ

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲ-**
**ಸಾಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ**
**ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ**
**ಪಂಚಮೋಽಧ್ಯಾಯಃ ಸಮಾಪ್ತಃ**

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ
ಐದನೆಯ ಅಧ್ಯಾಯವು ಸಮಾಪ್ತವಾದುದು

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥



